ಪಂಪರಾಮಾಯಣಂ

ಎಂಬ

# ರಾಮಚಂದ್ರಚರಿತಪುರಾಣಂ




ಅಭಿನವ ಪಂಪನೆಂದು ಹೆಸರುಗೊಂಡ

ನಾಗಚಂದ್ರ ಕವಿಯಿಂದ

ವಿರಚಿತವಾದುದು





ಬೆಂಗಳೂರು

ಕರ್ಣಾಟಕ ಸಾಹಿತ್ಯ ಪರಿಷತ್ತು

೧೯೨೧

# ಉಪೋದ್ಘಾತ

ಪಂಪರಾಮಾಯಣದ ಈ ಮುದ್ರಣವು ಹಿಂದಣ ಮುದ್ರಣಗಳ ಆಧಾರದ ಮೇಲೆ, ಕೈಬರೆಹದ* ಮೂರು ಪ್ರತಿಗಳ ಸಹಾಯದಿಂದ ತಿದ್ದಿದುದಾಗಿದೆ. ಹಿಂದಣ ಮುದ್ರಣಗಳಲ್ಲಿ ಹಲವು ತಪ್ಪುಗಳು ಬಿದ್ದಿದ್ದುವಲ್ಲದೆ ಮುದ್ರಣದ ರೀತಿಯೂ ಸಮರ್ಪಕವಾಗಿರಲಿಲ್ಲ. ಇದರಲ್ಲಿ ಆ ನ್ಯೂನತೆಗಳನ್ನು ಸಾಧ್ಯವಾದ ಮಟ್ಟಿಗೆ ಸರಿಪಡಿಸಲು ಪ್ರಯತ್ನಮಾಡಿದೆ. ಹಿಂದಣ ಮುದ್ರಣಗಳಲ್ಲಿ ಪದಗಳನ್ನು ಸರಿಯಾಗಿ ವಿಂಗಡಿಸದೆ ಇರುವುದರಿಂದ ಓದುವುದು ಅಷ್ಟು ಸುಲಭವಲ್ಲವಾಗಿ, ಈ ಮುದ್ರಣದಲ್ಲಿ ಪದಗಳನ್ನು ವಿಂಗಡಿಸಿರುವುದಲ್ಲದೆ ಆವಶ್ಯಕವಾದ ಸ್ಥಳಗಳಲ್ಲಿ ಸಮಸ್ತಪದಗಳನ್ನೂ ಮಧ್ಯೇ ಸ್ವಲ್ಪ ಸ್ಥಳಬಿಡಿಸಿ ಮುದ್ರಿಸಿದೆ. ಪ್ರಮಾದವಶದಿಂದ ಕೆಲವೆಡೆಗಳಲ್ಲಿ ಸ್ಥಳಬಿಡಿಸಿರುವ ಕ್ರಮವು ತಪ್ಪಾಗಿರುವುದು. ಇವುಗಳಲ್ಲಿ ಮುಖ್ಯವಾದ ಕೆಲವನ್ನು ತಿದ್ದಿ, ಕೆಲವನ್ನು ಶುದ್ಧಿಪತ್ರದಲ್ಲಿ ಕೊಟ್ಟಿದೆ. ಪ್ರೂಪುಗಳನ್ನು ಬಹಳ ಜೋಕೆಯಿಂದ ತಿದ್ದಿದರೂ ಕೆಲವು ಕಾರಣಗಳಿಂದ ತಪ್ಪುಗಳು ಬಿದ್ದಿವೆ. ಇವುಗಳಲ್ಲಿ ಕೆಲವನ್ನು ಕೈಯಿಂದ ತಿದ್ದಿ ಮಿಕ್ಕುವನ್ನು ಶುದ್ಧಿಪತ್ರದಲ್ಲಿ ಕೊಡಲಾಗಿದೆ. ಗ್ರಂಥದ ಆದಿಯಲ್ಲಿ ಕಥಾಸಾರಾಂಶವನ್ನೂ ಕೊನೆಯಲ್ಲಿ ಕ್ಲಿಷ್ಟಪದಗಳ ನಿಘಂಟುವನ್ನೂ ಹೊಸದಾಗಿ ಸೇರಿಸಿದೆ.

**ಕವಿತೆ.**—ಈ ಚಂಪೂಗ್ರಂಥಕ್ಕೆ ಕವಿಯು ರಾಮಚಂದ್ರ ಚರಿತ ಪುರಾಣವೆಂಬ ಹೆಸರನ್ನಿಟ್ಟಿದ್ದರೂ ಇದು ಸಾಮಾನ್ಯವಾಗಿ ಪಂಪರಾಮಾಯಣವೆಂದು ಪ್ರಸಿದ್ಧಿಗೊಂಡಿದೆ. ಇದರಲ್ಲಿಯ ಕಥೆಗೂ ವಾಲ್ಮೀಕಿ ರಾಮಾಯಣದ ಕಥೆಗೂ ಸಾಮಾನ್ಯ

---

* ಈ ಪ್ರತಿಗಳಿಗೆ ಕ, ಖ, ಚ ಎಂಬ ಸಂಕೇತಗಳನ್ನು ಕೊಟ್ಟಿದೆ. 'ಕ' ಎಂಬುದು ಮೈಸೂರು ಓರಿಯಂಟಲ್ ಲೈಬ್ರೆರಿಯ ಓಲೆಯ ಪ್ರತಿ; 'ಖ' ಎಂಬುದು ಮೈಸೂರಿನಲ್ಲಿರುವ ಮ॥ ರಾ॥ ಶ್ರೀ ಜಿನಚಂದ್ರಯ್ಯನವರ ಪುಸ್ತಕಭಂಡಾರದಲ್ಲಿ ದೊರೆತ ಓಲೆಯ ಪ್ರತಿ; ಇವೆರಡೂ ಸಾಮಾನ್ಯವಾಗಿ ಒಂದೇ ವಿಧವಾಗಿರುವುವು. 'ಚ' ಎಂಬುದು ಹೊಳಲ್ಕೆರೆಯ ಮ॥ ರಾ॥ ಶ್ರೀ ನಗರದ ಬ್ರಹ್ಮಯ್ಯನವರಿಂದ ದೊರೆತ ಕಾಗದದ ಪ್ರತಿ. 'ಗ, ಘ' ಎಂಬುವು ಮೊದಲನೆಯ ಮತ್ತು ಎರಡನೆಯ ಮುದ್ರಣದ ಪ್ರತಿಗಳು. ಈ ಐದು ಪ್ರತಿಗಳ ಸಹಾಯದಿಂದ, ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ನಿಯಮಿಸಿದ ಮೇರೆ, ಮೈಸೂರಿನಲ್ಲಿರುವ ಮಹಾರಾಜಾ ಕಾಲೇಜಿನ ಪಂಡಿತರಾದ ಬ್ರ॥ ಶ್ರೀ ಕಾನಕಾನಹಳ್ಳಿ, ವರದಾಚಾರ್ಯರು, ಟ್ರೈನಿಂಗು ಕಾಲೇಜಿನ ಪಂಡಿತರಾದ ಬ್ರ॥ ಶ್ರೀ ತಿರುವಳ್ಳೂರು ಶ್ರೀನಿವಾಸರಾಘವಾಚಾರ್ಯರು, ಅದೇ ಕಾಲೇಜಿನ ಪಂಡಿತರಾಗಿದ್ದ ಬ್ರ॥ ಶ್ರೀ ತಿಮ್ಮಪ್ಪಯ್ಯಶಾಸ್ತ್ರಿಗಳು, ಮಹಾರಾಜಾ ಹೈಸ್ಕೂಲು ಪಂಡಿತರಾದ ಬ್ರ॥ ಶ್ರೀ ಸೀತಾರಾಮಶಾಸ್ತ್ರಿಗಳು—ಈ ನಾಲ್ವರೂ ಕಲೆತು ಮೂಲವನ್ನು ಪರಿಶೋಧಿಸಿ ತಿದ್ದಿದರು. ಈ ಮಧ್ಯೇ ಬ್ರ॥ ಶ್ರೀ ತಿಮ್ಮಪ್ಪಯ್ಯಶಾಸ್ತ್ರಿಗಳು ದೈವಾಧೀನರಾದುದರಿಂದ ಅವರ ಸಹಾಯವು ಮೊದಲು ಹತ್ತು ಆಶ್ವಾಸಗಳಿಗೆ ಮಾತ್ರ ದೊರೆಯಿತು.

ವಾದ ಹೋಲಿಕೆಯಿದ್ದರೂ ಕೆಲವೆಡೆಗಳಲ್ಲಿ ಬಹಳ ವ್ಯತ್ಯಾಸಗಳಿರುವುವು. ಕಥಾ ಸಂದರ್ಭವು ಜೈನ ಪದ್ಧತಿಯನ್ನನುಸರಿಸಿರುವುದರಿಂದ ಜೈನ ಧರ್ಮವು ಅಲ್ಲಲ್ಲಿ ವರ್ಣಿತವಾಗಿದೆ. ಕವಿಯು ಸಂಸ್ಕೃತ ಪದಗಳನ್ನು ಹೆಚ್ಚಾಗಿ ಉಪಯೋಗಿಸಿದ್ದರೂ ಪ್ರಕೃತಕ್ಕೆ ತಕ್ಕಂತೆ ಪದಗಳನ್ನು ಜೋಡಿಸಿರುವುದರಿಂದ ಕವಿತೆಯು ಬಹಳ ಗಂಭೀರವಾಗಿಯೂ ಲಲಿತವಾಗಿಯೂ ಇರುವುದು. ವರ್ಣನಾ ಭಾಗವನ್ನು ಷಡಕ್ಷರಿ ಮೊದಲಾದ ಕವಿಗಳಂತೆ ಲಂಬಿಸದೆ ಸಂದರ್ಭಕ್ಕೆ ತಕ್ಕಂತೆ ಹ್ರಸ್ವಮಾಡಿರುವುದು ಕವಿತಾಸ್ವಾರಸ್ಯವನ್ನು ಹೆಚ್ಚಿಸಿರುವುದು. ಭಾಷೆಯು ನಿರ್ದುಷ್ಟವಾಗಿಯೂ ಕೇವಲ ಪ್ರೌಢವಾಗಿಯೂ ಅಚ್ಚ ಹಳಗನ್ನಡ ಶೈಲಿಯುಳ್ಳದ್ದಾಗಿಯೂ ಕ್ಲಿಷ್ಟವಿಲ್ಲದೆಯೂ ಇರುವುದರಿಂದ ಕವಿತೆಯು ಓದುವವರಿಗೆ ಬಹಳ ಮನೋಹರವಾಗಿರುವುದು.

ಈ ಗ್ರಂಥದಲ್ಲಿ ಮುಂದೆ ಹೇಳುವ ವೃತ್ತಗಳು ಕಾಣಬರುವುವು:—ಕಂದ (೧೪೯೧), ಚಂಪಕಮಾಲೆ (೩೮೧), ಮತ್ತೇಭವಿಕ್ರೀಡಿತ (೨೩೮), ಉತ್ಪಲಮಾಲೆ (೧೭೯), ಮಹಾಸ್ರಗ್ಧರ (೭೯), ಶಾರ್ದೂಲವಿಕ್ರೀಡಿತ (೪೦), ಸ್ರಗ್ಧರ (೮), ಪೃಥ್ವಿ (೭), ದ್ರುತವಿಲಂಬಿತ (೩), ಮಾಲಿನಿ (೩), ಮಂದಾಕ್ರಾಂತ (೨), ಸ್ವಾಗತ (೨), ಹರಿಣಿ (೨); ಅಕ್ಕರ, ಉತ್ಸಾಹ, ತರಳ, ನವನಳಿನ, ಮತ್ತಕೋಕಿಲ, ಮಲ್ಲಿಕಾಮಾಲೆ, ರಥೋದ್ಧತ, ಲಲಿತ–ಇವೆಲ್ಲವೂ ಒಂದೊಂದು ಪದ್ಯಮಾತ್ರ ದೊರೆಯುವುವು. ಒಟ್ಟು ಪದ್ಯ ಸಂಖ್ಯೆ ೨೩೪೩.

ಶಬ್ದಾಲಂಕಾರಗಳಲ್ಲಿ ಅನುಪ್ರಾಸವು ಮಾತ್ರ ಅಲ್ಲಲ್ಲಿ ತಕ್ಕಮಟ್ಟಿಗೆ ದೊರೆಯುವುದಲ್ಲದೆ ಯಮಕ ಮೊದಲಾದುವು ಕಡಿಮೆ. ಅರ್ಥಾಲಂಕಾರಗಳಲ್ಲಿ ಬಳಕೆಯಾಗಿರುವ ಉಪಮೆ, ಉತ್ಪ್ರೇಕ್ಷೆ, ರೂಪಕ, ಸ್ವಭಾವೋಕ್ತಿ, ಅರ್ಥಾಂತರನ್ಯಾಸ, ದೃಷ್ಟಾಂತ—ಇವುಗಳು ಹೆಚ್ಚಾಗಿವೆ; ಶ್ಲೇಷ ಮೊದಲಾದ ಮಿಕ್ಕುವು ಕಡಿಮೆ. ರಸಗಳಲ್ಲಿ ಶಾಂತರಸವು ಪ್ರಧಾನವಾಗಿಯೂ ಉಳಿದುವು ಅಂಗವಾಗಿಯೂ ಇವೆ. ಅಷ್ಟಾದಶ ವರ್ಣನೆಗಳೆಲ್ಲವೂ ವ್ಯಕ್ತವಾಗಿವೆ. ಈ ಕಾವ್ಯವು ಕನ್ನಡದಲ್ಲಿ ಇದುವರೆಗೆ ದೊರೆತಿರುವ ಅತ್ಯುತ್ತಮ ಕಾವ್ಯಗಳಲ್ಲೊಂದೆಂದು ನಿಸ್ಸಂಶಯವಾಗಿ ಹೇಳಬಹುದು.

**ಕವಿ.**— ಈ ಗ್ರಂಥಕಾರನ ನಿಜವಾದ ಹೆಸರು ನಾಗಚಂದ್ರನೆಂದು ಗ್ರಂಥದ ಕೊನೆಯ ಎರಡು ಪದ್ಯಗಳಿಂದ ತಿಳಿಯಬರುವುದು. ಆದರೆ ಆತನು ಅಭಿನವ ಪಂಪನೆಂಬ ಹೆಸರಿನಿಂದಲೇ ಪ್ರಸಿದ್ಧಿಗೆ ಬಂದಿರುವುದರಿಂದ, ಸಂಸ್ಕೃತ ಪುರಾತನ ಕವಿಗಳಲ್ಲಿ ಕಾಳಿದಾಸನು ಹೇಗೆ ಪ್ರಸಿದ್ಧಿ ಪಡೆದಿರುವನೋ ಹಾಗೆಯೇ ಪುರಾತನ ಕನ್ನಡ ಕವಿಗಳಲ್ಲಿ ಆದಿಪಂಪನು ಪ್ರಸಿದ್ಧಿಪಡೆದಿರಬೇಕು. * ಅಭಿನವಪಂಪನು ಈ ಗ್ರಂಥವಲ್ಲದೆ ಮಲ್ಲಿನಾಥಪುರಾಣವೆಂಬ ಕಾವ್ಯವನ್ನೂ ರಚಿಸಿರುವನು. ' ಜಿನಮುನಿ

ತನಯ.' 'ಜಿನಾಕ್ಷರಮಾಲೆ' ಮೊದಲಾದ ಇತರ ಗ್ರಂಥಗಳನ್ನೂ ರಚಿಸಿರುವಂತೆ ದೇವಚಂದ್ರನು ರಾಜಾವಳೀ ಕಥೆಯಲ್ಲಿ ಹೇಳಿರುತ್ತಾನೆ. ಅಭಿನವ ಪಂಪನ ದೇಶ, ಕಾಲ, ವಂಶ ಮೊದಲಾದುವು ಯಾವುವೂ ಇವನ ಗ್ರಂಥಗಳಿಂದ ತಿಳಿಯಬರುವುದಿಲ್ಲ. ಆದರೆ ಅವನು ವಿಜಯಪುರದಲ್ಲಿ ಮಲ್ಲಿನಾಥ ಜಿನಾಲಯವನ್ನು ಕಟ್ಟಿಸಿ ಮಲ್ಲಿನಾಥಪುರಾಣವನ್ನು ಬರೆದಂತೆ ಆ ಪುರಾಣದಲ್ಲಿ ಹೇಳಿದೆ. ಈ ವಿಜಯಪುರವು ಈಗಿನ ಬಿಜಾಪುರವಾಗಿರಬಹುದು; ಇವನ ಊರೂ ಇದೇ ಇದ್ದಿರಬಹುದು. ಇವನು ಐಶ್ವರ್ಯವಂತನಾಗಿಯೂ ಉನ್ನತಸ್ಥಿತಿಯಲ್ಲಿದ್ದಂತೆಯೂ ತಿಳಿಯಬರುತ್ತದೆ*. ಇವನ ಬಿರುದುಗಳು :—ಕವಿತಾಮನೋಹರ, ಭಾರತೀಕರ್ಣಪೂರ, ಸಾಹಿತ್ಯವಿದ್ಯಾಧರ, ಮೊದಲಾದುವು. ಇವುಗಳಲ್ಲೊಂದನ್ನು ರಾಮಚಂದ್ರಚರಿತಪುರಾಣದ ಪ್ರತಿ ಆಶ್ವಾಸದ ಕೊನೆಯ ಪದ್ಯದಲ್ಲಿ ಕವಿಯು ಕಥಾನಾಯಕನ ಪರವಾಗಿ ಉಪಯೋಗಿಸುತ್ತಾನೆ.

* **ಕವಿಯ ಕಾಲ**.–ಈ ಕವಿಯ ಕಾಲವನ್ನು ಗೊತ್ತುಮಾಡುವುದಕ್ಕೆ ಕೆಲವು ಆಧಾರಗಳಿರುವುವು :—

(೧) ಎರಡನೆಯ ನಾಗವರ್ಮನು (ಸುಮಾರು ಕ್ರಿ. ಶ. ೧೧೪೫) ತನ್ನ ಕರ್ಣಾಟಕ ಭಾಷಾಭೂಷಣದಲ್ಲಿ "ದ್ವಿತೀಯಾರ್ಥೇ ಚತುರ್ಥೀ" ಎಂಬ ಸೂತ್ರಕ್ಕುದಾಹರಣವಾಗಿ "ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕೆ" ಎಂಬ ರಾಮಚಂದ್ರಚರಿತಪುರಾಣದ ಪದ್ಯ (೭—೯೮) ಭಾಗವನ್ನು ಕೊಟ್ಟಿರುವುದರಿಂದ ಅಭಿನವಪಂಪನು ಈ ನಾಗವರ್ಮನ ಕಾಲಕ್ಕೆ ಹಿಂದೆಯೇ ಪ್ರಸಿದ್ಧಿಗೆ ಬಂದಿರಬೇಕು.

(೨) ಕರ್ಣಪಾರ್ಯನು (ಸು. ೧೧೪೦) ತನ್ನ ನೇಮಿನಾಥಪುರಾಣದಲ್ಲಿ—

ಕಂ॥ ಅದ್ಯತನನಾಗಿಯುಂ ನೆಗ ।
ಟ್ದಾದ್ಯರ ದೊರೆಯೆನಿಸಿ ಮೆಱೆದು ಸಾಹಿತ್ಯ ಕಳಾ ॥
ಹೃದ್ಯತೆಯಿನೆಸೆದನಾ ನಿರ ।
ವದ್ಯ ಗುಣಂ ಸಂದ ನಾಗಚಂದ್ರ ಕವೀಂದ್ರಂ ॥

ಎಂದು ಹೊಗಳಿರುತ್ತಾನೆ; ಆದುದರಿಂದ ಪಂಪರಾಮಾಯಣವು ೧೧೪೦ ಕ್ಕೆ ಮೊದಲೇ ಹುಟ್ಟಿರಬೇಕು.

(೩) "ಮುನಿನಾಥಂ ದಶಥವರ್ಮಧಾರಿ–"ಎಂಬ ರಾಮಚಂದ್ರಚರಿತಪುರಾಣದ ಪದ್ಯವು (೧—೨೦) ಶ್ರವಣಬೆಳ್ಗೊಳದ ೪೭ ನೆಯ ಶಾಸನದಲ್ಲಿ ದೊರೆಯುತ್ತದೆ. ಈ

---

* ಕರ್ಣಾಟಕ ಕವಿಚರಿತೆ, ೧—೮೦–೮೩.

ಶಾಸನವು ಸುಮಾರು ೧೧೧೫ರಲ್ಲಿ ಬರೆದುದು. ಇದರಲ್ಲಿ ಮೇಲಣ ಪದ್ಯದಲ್ಲಿ ಹೇಳಿರುವ ಮೇಘಚಂದ್ರನು ೧೧೧೫ರಲ್ಲಿ ಗತಿಸಿದಂತೆ ತಿಳಿಸಿದೆ. ಆದುದರಿಂದ ಈ ಗ್ರಂಥವು ೧೧೧೫ ಕ್ಕೆ ಮೊದಲೇ ಹುಟ್ಟಿರಬೇಕು.

(೪) ಮದರಾಸಿನ ಪ್ರಾಚ್ಯ ಕೋಶಾಲಯದಲ್ಲಿ ದೊರೆತ, ೧೧೦೫ ರಲ್ಲಿ ತ್ರಿಭುವನಮಲ್ಲನ ಆಳಿಕೆಯಲ್ಲಿ ಬರೆದ, ಒಂದು ಶಾಸನದಲ್ಲಿ ಒಬ್ಬ ಹಂಪಕವಿಯ ಹೆಸರು ದೊರೆಯುತ್ತದೆ. ಈ ಕವಿಯು ನಾಗಚಂದ್ರನೇ ಇರಬಹುದು.

(೫) ಕಂತೀ ಹಂಪನ ಸಮಸ್ಯೆಗಳನ್ನು ಅನೇಕರು ಕೇಳಿರಬಹುದು. ಈ ಕಂತಿಯು ದ್ವಾರಸಮುದ್ರದ ಬಳ್ಳಾಳ ವಿಷ್ಣುವರ್ಧನರಾಯನ (೧೧೦೪—೧೧೪೧) ಆಸ್ಥಾನ ಪಂಡಿತೆಯಾಗಿದ್ದ ಪ್ರಸಿದ್ಧಳಾದ ಒಬ್ಬ ಕಬ್ಬಿಗಿತಿ. ಅಭಿನವ ಪಂಪನೂ ಅದೇ ಆಸ್ಥಾನದಲ್ಲಿ ಪಂಡಿತನಾಗಿದ್ದಿರಬೇಕು.

ಮೇಲೆ ಹೇಳಿರುವ ಕಾರಣಗಳಿಂದ ಅಭಿನವಪಂಪನು ಸುಮಾರು ೧೧೦೫ ರಲ್ಲಿ ಇದ್ದಿರಬೇಕೆಂದು ತೋರುತ್ತದೆ.

**ಕಥಾವಿಷಯ.**—ವಿಪುಲಾಚಲದಲ್ಲಿ ವೀರಜಿನ ಪಾರ್ಶ್ವದಲ್ಲಿ ಗಣಾಗ್ರಣಿಯಾದ ಗೌತಮನು ಮಗಧಾಧಿಪನಿಗೆ ಹೇಳಿದ ರಾಮಕಥೆಯನ್ನು ತಾನು ವರ್ಣಿಸುವೆನೆಂದು ಕವಿಯು ಹೇಳುತ್ತಾನೆ (೧—೪೦). ಈ ಕಥೆಯು ಗುರುಪರಂಪರಾಗತವಾಗಿ ಬಂದಂತೆ ತಿಳಿಯುಬರುತ್ತದೆ. ಮೇಲೆ ಹೇಳಿದಂತೆ ಕಥೆಯು ಸಾಮಾನ್ಯವಾಗಿ ವಾಲ್ಮೀಕಿ ರಾಮಾಯಣವನ್ನು ಹೋಲುವುದಾದರೂ ಇವೆರಡಕ್ಕೂ ಅನೇಕ ವ್ಯತ್ಯಾಸಗಳಿರುವುವು. ಅಭಿನವಪಂಪನ ಕಥೆಯಲ್ಲಿ ಅನೇಕ ಮಂದಿಗೆ ಜಿನಮುನಿಗಳು ಜನ್ಮಾಂತರ ನಿರೂಪಣವನ್ನು ಮಾಡಿ ಇಹಲೋಕದಲ್ಲಿಯ ಆಶೆಗಳನ್ನು ತಪ್ಪಿಸಿ ದೀಕ್ಷೆಗೊಳ್ಳುವಂತೆ ಮಾಡುವರು. ಆದರೆ ವಾಲ್ಮೀಕಿಯು ರಾಮನನ್ನು ಯಾವಕುಂದೂ ಇಲ್ಲದವನನ್ನಾಗಿಯೂ ಕಥೆಗೆ ಮುಖ್ಯನಾಯಕನನ್ನಾಗಿಯೂ ವರ್ಣಿಸಿರುವಂತೆ ಅಭಿನವಪಂಪನು ವರ್ಣಿಸದೆ ಲಕ್ಷ್ಮಣನನ್ನೇ ಮುಖ್ಯನನ್ನಾಗಿ ವರ್ಣಿಸಿ, ಇತರ ರಾಜರು ಉಲ್ಕಾಪಾತವನ್ನೋ ತಮ್ಮ ನರೆತ ಕೂದಲನ್ನೋ ನೋಡಿದ ಮಾತ್ರದಿಂದಲೇ ಪ್ರಪಂಚದ ಸುಖಗಳು ನಶ್ವರವೆಂದು ತಿಳಿದು ತಪಕ್ಕೆ ನಿಲ್ಲುವಂತೆ ವರ್ಣಿಸಿರುವಾಗ ರಾಮನಿಗೆಮಾತ್ರ ಕಡೆಯುವರೆಗೂ ಈ ನೆನಪೇ ಇಲ್ಲದೆ ಲಕ್ಷ್ಮಣನು ಸತ್ತಾಗ ಅವನ ದೇಹವನ್ನು ಬಹುಕಾಲ ಬಿಡಲಾರದೆ ಅಪ್ಪಿಕೊಂಡಿದ್ದಂತೆ ವರ್ಣಿಸಿರುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಇಷ್ಟೇ ಅಲ್ಲದೆ, ಅಭಿನವಪಂಪನು ಲಕ್ಷ್ಮಣನಿಗೆ ಅನೇಕ ಸ್ಥಳಗಳಲ್ಲಿ ಮದುವೆಮಾಡಿಸಿ ರಾಮನಿಗೆ ಮೂರುಕಡೆ ಮಾತ್ರ ಮದುವೆಮಾಡಿಸುವುದರಿಂದ ಕಥಾಸಂದರ್ಭಕ್ಕೆ ಹೇಗೆ ಹೆಚ್ಚು ಅನುಕೂಲ್ಯವು ದೊರೆತಿರುವುದೋ

ಎರಡು ಕಥೆಗಳಿಗೂ ಇರುವ ಕೆಲವು ಮುಖ್ಯವಾದ ವ್ಯತ್ಯಾಸಗಳನ್ನು ಇಲ್ಲಿ ತೋರಿಸಿರುವೆವು :—ಪಂಪರಾಮಾಯಣದಲ್ಲಿ

(೧) ಪುತ್ರಕಾಮೇಷ್ಟಿ ಯಾಗದ ವಿಷಯವೇ ಇಲ್ಲ; ರಾಮನ ತಾಯಿ ಅಪರಾಜಿತೆ, ಲಕ್ಷ್ಮಣನೊಬ್ಬನೇ ಸುಮಿತ್ರೆಯ ಮಗ, ಶತ್ರುಘ್ನನ ತಾಯಿ ಸುಪ್ರಭೆ.

(೨) ರಾಮಲಕ್ಷ್ಮಣರು ಬಲಾಚ್ಯುತರೆಂದೂ ಕಾರಣಪುರುಷರೆಂದೂ ಹೇಳಿದೆ. ಲಕ್ಷ್ಮಣನಿಗೆ ಎಂಟನೆಯ ಕೇಶವ, ಉಪೇಂದ್ರ, ವಾಸುದೇವ, ಕೃಷ್ಣ, ನಾರಾಯಣ, ಲಕ್ಷ್ಮೀಧರ, ಪುರುಷೋತ್ತಮ, ಜನಾರ್ದನ—ಎಂಬ ಹೆಸರುಗಳೂ ಉಂಟು; ಇವನೇ ನಿಜವಾದ ಕಥಾನಾಯಕನು. ರಾಮನ ವರ್ಣವು ಬಿಳುಪು, ಲಕ್ಷ್ಮಣನದು ಕಪ್ಪು.

(೩) ವಿಶ್ವಾಮಿತ್ರನ ಪ್ರಸ್ತಾವವೇ ಇಲ್ಲ. ನಾರದನು ಸೀತಾದೇವಿಯನ್ನು ಮೋಹಿಸಿದನೆಂದು ಹೇಳಿದೆ. !

(೪) ಸೀತಾದೇವಿಗೆ ಪ್ರಭಾಮಂಡಲನೆಂಬ ಅಣ್ಣನಿದ್ದನೆಂದೂ ಅವನು ಖಚರಪತಿಯಾದ ಇಂದುಗತಿಯ ಸಾಕುಮಗನೆಂದೂ, ಅವನು ನಾರದನು ಬರೆದಿಟ್ಟಿದ್ದ ಸೀತೆಯ ಪಟವನ್ನು ನೋಡಿ, ತಿಳಿಯದೆ ಆಕೆಯನ್ನು ಮೋಹಿಸಿ, ಕಡೆಗೆ ನಿಶ್ಚಯಾಂಶವನ್ನು ತಿಳಿದು ವ್ಯಸನಪಟ್ಟನೆಂದೂ ಹೇಳಿದೆ.

(೫) ಖಚರಪತಿಯಾದ ಇಂದುಗತಿಯ ಬಳಿಯಲ್ಲಿದ್ದ ವಜ್ರಾವರ್ತ ಸಾಗರಾವರ್ತಗಳೆಂಬ ಧನುಸ್ಸುಗಳನ್ನು ಆತನು ಜನಕನೊಡನೆ ಮಿಥಿಲೆಗೆ ಕಳುಹಿಸಿದನೆಂದೂ ಅವುಗಳಲ್ಲಿ ಮೊದಲನೆಯದನ್ನು ರಾಮನು ಬಗ್ಗಿಸಿ ಸೀತೆಯನ್ನೂ, ಎರಡನೆಯದನ್ನು ಲಕ್ಷ್ಮಣನು ಬಗ್ಗಿಸಿ ಚಂದ್ರಧ್ವಜನ ಇಬ್ಬರು ಮಕ್ಕಳನ್ನೂ ಪಡೆದರೆಂದು ಹೇಳಿದೆ.

(೬) ಭರತನು ರಾಮಲಕ್ಷ್ಮಣರಿಗುಂಟಾದ ವೈಭವದಿಂದ ವಿಷಾದಪಟ್ಟು ವೈರಾಗ್ಯಪರನಾದಂತೆಯೂ, ಕೈಕೆಯ ಸಲಹೆಯ ಮೇರೆಗೆ ಅವನಿಗೆ ಜನಕನ ತಮ್ಮನಾದ ಕನಕನ ಮಗಳನ್ನು ಮದುವೆ ಮಾಡಿದಂತೆಯೂ ಹೇಳಿದೆ.

(೭) ವಿಜಯ ಯಾತ್ರೆಯಲ್ಲಿ ಲಕ್ಷ್ಮಣನಿಗೆ ಅನೇಕ ಮದುವೆಗಳಾಗುತ್ತವೆ.

(೮) ವಾಲ್ಮೀಕಿಯು ಹೇಳಿರುವಂತೆ ಏಕಪತ್ನೀವ್ರತವುಳ್ಳ ರಾಮನಿಗೆ ಪಂಪರಾಮಾಯಣದಲ್ಲಿ ಸುಗ್ರೀವನ ಮಕ್ಕಳನ್ನೂ ದಧಿಮುಖನಗರದ ದೊರೆಯ ಮಕ್ಕಳನ್ನೂ ರತ್ನಪುರದರಸನ ಮಗಳನ್ನೂ ಕೊಟ್ಟು ಮದುವೆಯಾದಂತೆ ಹೇಳಿದೆ.

(೯) ಮಾರೀಚನು ಮಾಯಾಮೃಗವಾಗಿ ರಾಮನ ದನಿಯನ್ನನುಕರಿಸಿ ಆರ್ತಧ್ವನಿಮಾಡಿದನೆಂಬುದಕ್ಕೆ ಬದಲಾಗಿ ರಾವಣನ ವಶವಾದ ಅವಲೋಕಿನೀ ವಿದ್ಯೆಯು ಲಕ್ಷ್ಮಣನ ದನಿಯಂತೆ ಸಿಂಹನಾದ ಮಾಡಿದಹಾಗೆ ಹೇಳಿದೆ.

(೧೦) ಸುಗ್ರೀವ ಮೊದಲಾದವರು ಕಪಿಧ್ವಜಕೆಂದೂ ಖೇಚರರೆಂದೂ ಹೇಳಿದೆ.

(೧೧) ಸುಗ್ರೀವನ ತಂಗಿಯಾದ ಶ್ರೀಪ್ರಭೆಯನ್ನು ರಾವಣನು ಮದುವೆಯಾಗಿದ್ದನೆಂದಿದೆ.

(೧೨) ವಾಲಿಯು ಕೈಲಾಸಪರ್ವತದಲ್ಲಿ ತಪಸ್ಸು ಮಾಡುತ್ತಿರುವಾಗ ಆ ಪರ್ವತವನ್ನು ರಾವಣನು ಎತ್ತಲು, ವಾಲಿಯು ತನ್ನ ಹೆಬ್ಬೆರಳಿನಿಂದ ತುಳಿದನೆಂದೂ ಅದರಿಂದ ರಾವಣನಿಗೆ ಬಹು ಬಾಧೆಯಾಗಿ ಅವನು ಅರಚಿಕೊಂಡನೆಂದೂ ಆ ಕಾರಣದಿಂದ ಅವನಿಗೆ ರಾವಣನೆಂಬ ಹೆಸರು ಬಂದಿತೆಂದೂ ಹೇಳಿದೆ.

(೧೩) ಕಾರ್ತವೀರ್ಯಾರ್ಜುನನಿಗೆ "ಸಹಸ್ರಬಾಹು" ಎಂಬ ಹೆಸರಿದೆ. ರಾವಣನನ್ನು ಸಹಸ್ರಬಾಹು ಸೆರೆಹಿಡಿದನೆಂಬುದಕ್ಕೆ ಬದಲಾಗಿ ರಾವಣನೇ ಅವನನ್ನು ಸೆರೆಹಿಡಿದನೆಂದಿದೆ.

(೧೪) ರಾವಣನ ತಂಗಿಯಾದ ಚಂದ್ರನಖಿಯ ಮಗಳಾದ ಅನಂಗಪುಷ್ಪೆಯನ್ನು ಹನುಮಂತನು ಮದುವೆಯಾಗಿ ರಾವಣನು ಕೊಟ್ಟ ಕರ್ಣಕುಂಡಲಪುರಕ್ಕೆ ದೊರೆಯಾಗಿ ಅವನ ಸ್ನೇಹಿತನಾಗಿದ್ದನೆಂದೂ ರಾವಣನು ಸೀತೆಯನ್ನು ಅಪಹರಿಸಿದುದಕ್ಕಾಗಿ ಅವನಿಗೆ ಹಗೆಯಾಗಿ ರಾಮನಿಗೆ ಸಹಾಯಮಾಡಿದನೆಂದೂ ಹೇಳಿದೆ.

(೧೫) ರಾವಣನನ್ನು ಸಂಹರಿಸಿದವನು ಲಕ್ಷ್ಮಣನೆಂದು ಹೇಳಿದೆ.

ಇಲ್ಲಿ ಹೇಳಿರುವುವಲ್ಲದೆ ಇತರ ವ್ಯತ್ಯಾಸಗಳೂ ಮುಂದೆ ಕೊಟ್ಟಿರುವ ಕಥಾಸಂಗ್ರಹದಿಂದ ತಿಳಿಯಬರುವುವು.

ಉತ್ತಮವಾದ ಈ ಕಾವ್ಯವನ್ನು ಕನ್ನಡಿಗರು ಆದರದಿಂದ ಓದಿ ಆನಂದಪಡುವರೆಂದು ಹಾರೈಸುತ್ತೇವೆ.

ಕರ್ಣಾಟಕ ಸಾಹಿತ್ಯ ಪರಿಷತ್ತು<br>
ಬೆಂಗಳೂರು<br>
ರೌದ್ರಿನಾಮ ಸಂ॥ ಮಾಘ ಶು॥ ೧೩<br>
ಗುರುವಾರ

ಸಂಪಾದಕರು.

# ವಿಷಯಾನುಕ್ರಮಣಿಕೆ


| | ಪುಟಗಳು |
|---|---|
| ಉಪೋದ್ಘಾತ .. .. .. .. | v—x |
| ಪಂಪರಾಮಾಯಣದ ಕಥೆ .. .. .. | 1—74 |
| ಪ್ರಥಮಾಶ್ವಾಸ—ಪೀಠಿಕಾ ಪ್ರಕರಣ .. .. | ೧ |
| ದ್ವಿತೀಯಾಶ್ವಾಸ—ದಶರಥನ ವಂಶ ವರ್ಣನೆ .. .. | ೨೬ |
| ತೃತೀಯಾಶ್ವಾಸ—ಕುಮಾರೋದಯ ವರ್ಣನೆ .. .. | ೪೩ |
| ಚತುರ್ಥಾಶ್ವಾಸ—ಜನಕ ಜಿನಭವನ ದರ್ಶನ ವರ್ಣನೆ .. | ೭೫ |
| ಪಂಚಮಾಶ್ವಾಸ—ಸೀತಾ ಸ್ವಯಂವರ ವರ್ಣನೆ .. .. | ೧೦೧ |
| ಷಷ್ಠಾಶ್ವಾಸ—ವನ ಪ್ರವೇಶ ವರ್ಣನೆ .. .. | ೧೨೮ |
| ಸಪ್ತಮಾಶ್ವಾಸ—ಶರದ್ವರ್ಣನೆ .. .. | ೧೬೫ |
| ಅಷ್ಟಮಾಶ್ವಾಸ—ಚಾರಣ ಯುಗಳ ದರ್ಶನ ವರ್ಣನೆ .. | ೨೦೦ |
| ನವಮಾಶ್ವಾಸ—ಸೀತಾಹರಣ ವರ್ಣನೆ .. .. | ೨೧೯ |
| ದಶಮಾಶ್ವಾಸ—ದಶವದನ ವಂಶ ವರ್ಣನೆ .. .. | ೨೬೧ |
| ಏಕಾದಶಾಶ್ವಾಸ—ಲಂಕಾದಹನ ವರ್ಣನೆ .. .. | ೩೧೮ |
| ದ್ವಾದಶಾಶ್ವಾಸ—ಲಂಕಾ ದಿಗ್ವಿಜಯ ಪ್ರಯಾಣ ವರ್ಣನೆ .. | ೩೫೭ |
| ತ್ರಯೋದಶಾಶ್ವಾಸ- ಬಲಾಚ್ಯುತ ಪುಣ್ಯಪ್ರಭಾವೋದಯ ವರ್ಣನೆ .. | ೩೭೬ |
| ಚತುರ್ದಶಾಶ್ವಾಸ—ರಘುವೀರ ವಿಜಯ ವರ್ಣನೆ .. .. | ೪೦೮ |
| ಪಂಚದಶಾಶ್ವಾಸ—ಸೀತಾ ಪರಿತ್ಯಾಗ ವರ್ಣನೆ .. .. | ೪೫೪ |
| ಷೋಡಶಾಶ್ವಾಸ—ಪರಿನಿರ್ವಾಣ ಕಲ್ಯಾಣೋತ್ಸವ ವರ್ಣನೆ .. | ೪೮೦ |
| ಕ್ಲಿಷ್ಟ ಪದಗಳ ನಿಘಂಟು .. .. .. | 1—25 |
| ಶುದ್ಧಿ ಪತ್ರ .. .. .. .. | 27 |

# ಅಭಿನವ ಪಂಪನ

## ರಾಮಚಂದ್ರ ಚರಿತ ಪುರಾಣದ ಕಥೆ



### ಆಶ್ವಾಸ ೧ — ಪೀಠಿಕೆ

ತ್ರಿಭುವನ ಲಕ್ಷ್ಮಿಗೆ ನಾಭಿಮಂಡಲದಂತಿರುವ ಜಂಬೂದ್ವೀಪವು ಪ್ರಪಂಚದಲ್ಲೆಲ್ಲ ಬಹಳ ಮನೋಹರವಾಗಿ ಮೆರೆಯುತ್ತಿರುವುದು. ಅದರ ನಟ್ಟನಡುವೆ ಜಿನಜನ್ಮೋತ್ಸವಾಭಿಷೇಕದ ರನ್ನಗದ್ದುಗೆಯಾದ ಪೊಂಬೆಟ್ಟವು ಹೊಳೆಯುತ್ತಿರುವುದು. ಅದರ ದಕ್ಷಿಣ ದಿಕ್ಕಿನಲ್ಲಿ ಚಂದ್ರಮಂಡಲದಂತೆ ಕಣ್ಣಳಿಗೆ ಸೊಬಗನ್ನು ಬೀರುತ್ತಿರುವ ದಕ್ಷಿಣ ಭರತ ತ್ರಿಖಂಡದ ಆರ್ಯಾಖಂಡವು ವಿರಾಜಿಸುತ್ತಿರುವುದು. ಅದರಲ್ಲಿ ಕಾಲಾನುಗತವಾಗಿ ಅನೇಕ ಕಲ್ಪಗಳು ಕಳೆದನಂತರ ಕುಲಧರಾವತಾರದಲ್ಲಿ ಪರಂಪರೆಯಾಗಿ ಹದಿನಾಲ್ಕು ಮಂದಿ ಮನುಗಳು ಹುಟ್ಟಿದರು. ಈ ಮನುಗಳ ಕಾಲದಲ್ಲಿ ಜನರ ಸ್ಥಿತಿಯು ಮೊದಲಿದ್ದ ನಿರ್ಜರಾವಸ್ಥೆಯಿಂದ ಕ್ರಮೇಣ ಮಾರ್ಪಡುತ್ತ ಬಂದಿತು. ಕಡೆಯ ಮನುವಾದ ನಾಭಿರಾಜನು ಜನರ ಜೀವನಕ್ಕಾಗಿ ಕೃಷಿ ವಿಷಯವನ್ನು ಬೋಧಿಸಿ ಕಬ್ಬನ್ನು ಬೆಳೆದು ಉಪಯೋಗಿಸುವ ಉಪಾಯವನ್ನು ಜನರಿಗೆ ಕಲಿಸಿದನು. ಈ ಕಾರಣದಿಂದ ಇವನ ವಂಶಕ್ಕೆ ಇಕ್ಷ್ವಾಕು ವಂಶವೆಂಬ ಹೆಸರಾಯಿತು; ಈತನ ವಲ್ಲಭೆ ಮರುದೇವಿ; ಇವರಿಗೆ ಪುರುದೇವನೆಂಬ ಮಗನು ಹುಟ್ಟಿ ಅಯೋಧ್ಯೆಗಧಿಪತಿಯಾದನು. ನಾಡುಗಳಲ್ಲೆಲ್ಲ ಕೌಶಲದೇಶವೂ ಪುರಗಳಲ್ಲೆಲ್ಲ ಸಾಕೇತಪುರವೂ ಹೇಗೆ ಪ್ರಸಿದ್ಧಿಪಡೆದುವೋ ಹಾಗೆಯೇ ರಾಜರುಗಳಲ್ಲೆಲ್ಲ ಪುರುದೇವನು ಪ್ರಖ್ಯಾತನಾದನು. ಆ ವಂಶದಲ್ಲಿ ಅಪ್ರತಿಮನಾದ ವಿಜಯರಥನು ಹುಟ್ಟಿದನು; ಈತನ ಮಗನು ಸುರೇಂದ್ರಮನ್ಯು; ಈತನಿಗೆ ವಜ್ರಬಾಹು ಪುರಂದರರೆಂಬಿಬ್ಬರು ಮಕ್ಕಳು ಹುಟ್ಟಿದರು.

---

### ಆಶ್ವಾಸ ೨ — ದಶರಥನ ವಂಶಾನುಕ್ರಮಣಿಕೆ

ವಿಜಯರಥನು ರಾಜ್ಯಭಾರ ಮಾಡುತ್ತಿರುವಾಗ ಒಂದು ದಿನ ನಾಗಪುರದ ದೊರೆಯಾದ ಇಭವಾಹನನ ಮಗನಾದ ಉದಯಸುಂದರನು ಆತನ ಸಭೆಗೆ ಬಂದ. ಕಾಣಿಕೆಯನ್ನೊಪ್ಪಿಸಿ ತನ್ನ ತಂಗಿಯಾದ ಅನಂಗೋನ್ಮಾದೆಯನ್ನು ವಿಜಯರಥನ ಮೊಮ್ಮಗನಾದ ವಜ್ರಬಾಹುವಿಗೆ ಕೊಟ್ಟು ಮದುವೆ ಮಾಡಬೇಕೆಂಬ ಉತ್ಸಾಹದಿಂದ

ತನ್ನ ತಂದೆಯು ತನ್ನನ್ನು ಕಳುಹಿಸಿದನೆಂದು ಹೇಳಲು, ದೊರೆಯು ಸಂತೋಷ ಪಟ್ಟು ಅದಕ್ಕೆ ಸಮ್ಮತಿಸಿದನು. ಕೂಡಲೆ ಶುಭದಿನ ಮುಹೂರ್ತದಲ್ಲಿ ವಿವಾಹ ಮಂಗಳೋಪಕರಣಗಳೊಡನೆ ವಜ್ರಬಾಹುವು ಆನೆಯನ್ನೇರಿ ಉಚಿತ ಪರಿವಾರ ದೊಡನೆ ಪ್ರಯಾಣವನ್ನು ಬೆಳೆಯಿಸಿ ವಸಂತಗಿರಿಯ ಬಳಿಗೆ ಬಂದು ಅದರ ಸೊಬಗ ನ್ನು ನೋಡುತ್ತಿರುವಲ್ಲಿ, ತಪಸ್ಸುಮಾಡುತ್ತಿರುವ ಗುಣಸಾಗರ ಭಟ್ಟಾರಕನೆಂಬ ಒಬ್ಬ ಮುನಿಯು ಆತನ ಕಣ್ಣಿಗೆ ಬಿದ್ದನು. ವಜ್ರಬಾಹುವು ಆ ಮುನಿಯನ್ನು ಕಂಡು ಅತ್ಯಂತ ಭಕ್ತಿಯಿಂದ ಕೂಡಲೆ ಆ ಮುನಿಯ ಬಳಿಯಲ್ಲಿ ದೀಕ್ಷೆಗೊಂಡನು. ಇದನ್ನು ನೋಡಿ ಉದಯಸುಂದರನೂ ಇಪ್ಪತ್ತುಮೂವರು ಅರಸುಮಕ್ಕಳೂ ತಪಕ್ಕೆ ನಿಂತರು. ಅಣ್ಣನು ದೀಕ್ಷೆಗೊಂಡ ವಾರ್ತೆಯನ್ನು ಕೇಳಿ ಅನಂಗೋನ್ಮಾದೆಯೂ ದೀಕ್ಷೆ ಗೊಂಡಳು. ಮದುವೆಗಾಗಿ ಹೊರಟ ಮೊಮ್ಮಗನು ಪ್ರಪಂಚದ ಸುಖವನ್ನು ಬಿಟ್ಟು ತಪೋರಾಜ್ಯದಲ್ಲಿ ನಿಂತದ್ದನ್ನು ಕೇಳಿ ವಿಜಯರಥನು ತನ್ನ ಮೊಮ್ಮಗನಾದ ಪುರಂದರ ನಿಗೆ ಪಟ್ಟವನ್ನು ಕಟ್ಟಿ ತಾನೂ ದೀಕ್ಷೆಗೊಂಡನು. ಪುರಂದರನು ಸಕಲ ಸಾಮ್ರಾಜ್ಯ ಸುಖ ಸುಧಾರಸದಿಂದ ತಣಿದು ಮಗನಾದ ಕೀರ್ತಿಧರನಿಗೆ ಪಟ್ಟವನ್ನು ಕಟ್ಟಿ ತಾನೂ ದೀಕ್ಷೆಗೊಂಡನು. ಕೀರ್ತಿಧರನು ಒಂದು ದಿನ ಸೂರ್ಯಗ್ರಹಣವನ್ನು ನೋಡಿ ಜಗತ್ತನ್ನು ಬೆಳಗುವ ಸೂರ್ಯನಿಗೂ ರಾಹುವಿನಿಂದ ಈ ಸ್ಥಿತಿಯು ಬಂದಿತಲ್ಲವೆ ಎಂದು, ಭೂಮಂಡಲವನ್ನು ಹುಲ್ಲುಕಡ್ಡಿಗೆ ಸಮಮಾಡಿ, ವೈರಾಗ್ಯಪರನಾದನು. ಆಗ ಮಂತ್ರಿಗಳು ರಾಜ್ಯವು ಅನಾಯಕವಾಗುವುದೆಂದು ಭಯಪಟ್ಟು ದೊರೆಯನ್ನು ತನಗೊಬ್ಬ ಮಗನು ಹುಟ್ಟುವವರೆಗೂ ರಾಜ್ಯಭಾರ ಮಾಡುವಂತೆ ಒಡಂಬಡಿಸಿ ದರು. ಮಗನು ಹುಟ್ಟಿದ ಕೂಡಲೆ, ಸುಕೌಶಲನೆಂಬ ಆ ತೊಟ್ಟಿಲ ಮಗುವಿಗೆ ಪಟ್ಟ ವನ್ನು ಕಟ್ಟಿ, ಕೀರ್ತಿಧರನು ಜಿನದೀಕ್ಷೆಗೊಂಡನು. ಸುಕೌಶಲನು ತನ್ನ ಕೀರ್ತಿಯನ್ನು ನಾಲ್ಕು ಕಡೆಗಳಲ್ಲಿಯೂ ಹಬ್ಬಿಸಿ ಅರಸುಗೆಯ್ಯುತ್ತಿರುವಲ್ಲಿ ಒಂದು ದಿನ ಆತನ ತಾಯಿ ಯಾದ ಸಹದೇವಿಯು ಸಹಚರಿಯರೊಡನೆ ಮಣಿಮಂಟಪದಲ್ಲಿಯ ಮಣಿಮಯಾ ಸನದ ಮೇಲೆ ಲೀಲೆಯಿಂದ ಕುಳ್ಳಿರಲು, ಕಾಂತಿಯುತನಾದ ಒಬ್ಬ ಯತಿಯು ಅರ ಮನೆಯನ್ನು ಹೊಕ್ಕನು. ಇದನ್ನು ನೋಡಿ ಗುಣಹೀನೆಯಾದ ಸಹದೇವಿಯು ತನ್ನ ಮಗನು ಎಲ್ಲಿ ದೀಕ್ಷೆಗೊಳ್ಳುವನೋ ಎಂಬ ಭಯದಿಂದ ಪಾಪಕ್ಕಂಜದೆ ಆ ಯತಿ ಯನ್ನು ಪಟ್ಟಣದಿಂದ ಅಟ್ಟಿಸಿಬಿಟ್ಟಳು. ಸುಕೌಶಲನ ದಾದಿಯೊಬ್ಬಳು ಈ ಯತಿ ಯು ಕೀರ್ತಿಧರನೆಂದರಿತು ನೊಂದು ಎದೆಯನ್ನು ಗುದ್ದಿಕೊಳ್ಳುತ್ತ ಅಳತೊಡಗಿ ದಳು. ಸುಕೌಶಲನು ಇದಕ್ಕೆ ಕಾರಣವನ್ನು ತಿಳಿದು ಬಹಳ ದುಃಖಪಟ್ಟು, ಇಹ ಲೋಕ ಸೌಖ್ಯವು ಮುಖ್ಯವಲ್ಲೆಂದು ತಿಳಿದು, ಕೀರ್ತಿಧರ ಮುನೀಂದ್ರರ ಪಾದಾರ ವಿಂದದಲ್ಲಿ ಮುಕ್ತಿಸುಖವನ್ನು ಪಡೆಯುವೆನೆಂದು ನಿಶ್ಚಯಿಸಿ ಅರಮನೆಯನ್ನು ಬಿಟ್ಟು ಹೊರಟು, ಉಪವನವನ್ನು ಸೇರಿ ಕೀರ್ತಿಧರ ಭಟ್ಟಾರಕರ ಮುಂದೆ ನಿಂತನು. ಅವನ ಮಾಂಡಲಿಕರೂ ಸಾಮಂತರೂ ಮಂತ್ರಿಗಳೂ ಅಂತಃಪುರ ಸ್ತ್ರೀಯರೂ ತಮಗಿನ್ನೇನು

ಗತಿಯೆಂದು ಗೋಳಿಡುತ್ತಿರುವಲ್ಲಿ, ತನ್ನರಸಿಯ ಗರ್ಭದಲ್ಲಿರುವ ಮಗುವೇ ಅವರನ್ನು ಸಲಹುವನೆಂದು ಎಲ್ಲರನ್ನೂ ಸಮಾಧಾನಪಡಿಸಿ ತಾನು ದೀಕ್ಷೆಗೊಂಡನು. ಕಾಲಾನು ಕ್ರಮದಲ್ಲಿ ಸಹದೇವಿಯು ಹೆಣ್ಣುಹುಲಿಯಾಗಿ ಹುಟ್ಟಿ ಈ ಮುನಿಗಳಿಬ್ಬರೂ ಅಡವಿ ಯಲ್ಲಿ ಹೋಗುತ್ತಿರುವಾಗ ಅವರ ಮೇಲ್ಬಿದ್ದು ಅವರನ್ನು ಕೊಂದಳು.

ಇತ್ತ, ಸುಕೌಶಲನ ಮಗನಾದ ಹಿರಣ್ಯಗರ್ಭನು ವೈಭವದಿಂದ ರಾಜ್ಯಭಾರ ಮಾಡಿ ಅಂತರಿಸಿದನಂತರ ಅವನ ಮಗನಾದ ನಹುಷನೂ ತರ್ಕುಸ್ಥಾಯ ಅವನ ವಂಶ ದವರಾದ ಸಂವಾಸ, ಸಿಂಹರಥ, ಚತುರ್ಮುಖ, ಹೇಮರಥ, ಭಾನುರಥ, ಮಯ, ಮಾಂಧಾತೃ, ವೀರಸೇನ, ಕಮಲಬಂಧು, ವಸನ್ತತಿಲಕ, ಕುಬೇರದತ್ತ, ಮೃಗಾರಿ ದಮನ, ದ್ವಿಪರಥ, ಹಿರಣ್ಯಕಶಿಪು, ಅರ್ಕರಥ, ದಿಲೀಪ, ರಘುವೀರ ಮೊದಲಾದ ಹಲವರು ದೊರೆಗಳು ಅನುಕ್ರಮವಾಗಿ ರಾಜ್ಯಭಾರಮಾಡಿದರು. ಅವರಲ್ಲಿ ಅನರಣ್ಯ ನೆಂಬರಸು ಬಹಳ ಪ್ರಖ್ಯಾತನು. ಈತನಿಗೆ ಅನಂತರಥ ದಶರಥರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಅನರಣ್ಯನು ಧರ್ಮಾರ್ಥ ವಿರುದ್ಧವಾಗದಂತೆ ವಿಷಯಸುಖ ವನ್ನನುಭವಿಸುತ್ತಿರುವಲ್ಲಿ, ಒಂದಾನೊಂದು ದಿನ ಬಹಳ ಬಲಶಾಲಿಯಾದ ಮಾಹಿ ಷ್ಮತೀ ವಲ್ಲಭನು ದಶಾನನನೊಡನೆ ಕಾದಿ ಸೋತನೆಂದು ಕೇಳಿ ತಾನು ದೀಕ್ಷೆಪಡೆ ಯುವೆನೆಂದು ನಿಶ್ಚಯಿಸಲು, ಅವನ ದೊಡ್ಡ ಮಗನಾದ ಅನಂತರಥನು ರಾಜ್ಯವನ್ನು ವಹಿಸುವುದಕ್ಕೊಡಂಬಡದೆ ತಾನೂ ದೀಕ್ಷೆಗೊಳ್ಳಲುದ್ಯುಕ್ತನಾದನು. ಇದನ್ನು ಕಂಡು ಅನರಣ್ಯನು ಒಂದು ತಿಂಗಳ ಮಗುವಾದ ದಶರಥನಿಗೆ ಪಟ್ಟವನ್ನು ಕಟ್ಟಿ ತಾನೂ ತನ್ನ ಹಿರಿಯಮಗನೂ ಅಭಯಘೋಷ ಭಟ್ಟಾರಕರ ಪಾದಗಳೆಡೆಯಲ್ಲಿ ದೀಕ್ಷೆಗೊಂಡರು.

---

## ಆಶ್ವಾಸ ೩—ದಶರಥನ ಮಕ್ಕಳು

ದಶರಥನು ಪ್ರವರ್ಧಮಾನನಾಗಿ ಧರ್ಮದಿಂದಲೂ ಶೌರ್ಯದಿಂದಲೂ ರಾಜ್ಯ ಪರಿಪಾಲನೆಮಾಡುತ್ತ ಅಪರಾಜಿತೆ, ಸುಮಿತ್ರೆ, ಸುಪ್ರಭೆ ಎಂಬ ಮೂವರು ಪಟ್ಟ ಮಹಿಷಿಯರೊಡನೆ ಸುಖದಿಂದಿದ್ದನು. ಒಂದು ದಿನ ಆತನ ಸಭೆಗೆ ನಾರದನು ಬಂದು ಆತನೊಡನೆ ಏಕಾಂತವಾಗಿ ಹೀಗೆ ಹೇಳಿದನು : "ಅಯ್ಯಾ! ನಾನು ಲಂಕೆಯಲ್ಲಿರುವ ಶಾಂತಜಿನೇಶ್ವರನನ್ನು ಪೂಜಿಸುವುದಕ್ಕಾಗಿ ಹೋಗಿದ್ದೆನು. ಅಲ್ಲಿ ರಾವಣನರಮನೆಯಲ್ಲಿ ನಡೆದ ವೃತ್ತಾಂತವನ್ನು ನಿನಗೆ ಹೇಳುವೆನು ಕೇಳು: ರಾವಣನು ಜಾನಕಿಯ ನಿಮಿತ್ತ ವಾಗಿ ಯುದ್ಧಮಾಡಿ ದಾಶರಥಿಯ ಕೈಯಲ್ಲಿ ಮರಣವನ್ನು ಹೊಂದುವನೆಂಬ ವಿಷಯ ವನ್ನು ವಿಭೀಷಣನು ತನ್ನ ಜ್ಯೋತಿಷ್ಕನ ಮೂಲಕ ತಿಳಿದು ದಾಶರಥಿಯೂ ಜಾನಕಿ ಯೂ ಹುಟ್ಟದಂತೆ ಮಾಡುವುದಕ್ಕಾಗಿ ನಿನ್ನನ್ನೂ ಜನಕನನ್ನೂ ಕೊಲ್ಲಲು ನಿಶ್ಚಯಿ ಸಿರುವನು. ಇದಕ್ಕೆ ತಕ್ಕ ಉಪಾಯವನ್ನು ಆಲೋಚಿಸು; ಇನ್ನು ನಾನು ಈ ಸುದ್ದಿ

ಯನ್ನು ಜನಕನಿಗೆ ತಿಳಿಸಲು ಹೊರಡುವೆನು" ಎಂದು ಹೇಳಿ ನಾರದನು ಮಿಥಿಲೆಗೆ ಪ್ರಯಾಣಮಾಡಿದನು.

ಬಳಿಕ ದಶರಥನು ಈ ಸಂದರ್ಭವನ್ನು ತನ್ನ ಮಂತ್ರಿಗೆ ತಿಳಿಸಲು ಆತನು ಯಾರೂ ಅರಿಯದಂತೆ ಬಹಳ ಕುಶಲನಾದ ಒಬ್ಬ ಚಿತ್ರಗಾರನನ್ನು ಕರೆಯಿಸಿ ಲೆಪ್ಪ ದಿಂದ ದಶರಥನ ಆಕಾರವನ್ನು, ಸ್ವಲ್ಪವೂ ವ್ಯತ್ಯಾಸಕಾಣದಂತೆ, ಮಾಡಿಸಿ ಅದನ್ನು ಸಭಾಮಂಟಪದಲ್ಲಿಟ್ಟು, ಆ ಬೊಂಬೆಯನ್ನೇ ಮಂತ್ರಿ ಮೊದಲಾದವರೆಲ್ಲರೂ ಓಲಗಿ ಸುತ್ತ ದಶರಥನನ್ನು ಮರೆಮಾಡಿದರು. ಮಿಥಿಲೆಯಲ್ಲಿ ಜನಕನ ಮಂತ್ರಿಯೂ ಇದೇ ರೀತಿಯಾಗಿ ನಡೆಯಿಸಿದನು. ವಿಭೀಷಣನು ನಿಯಮಿಸಿದ್ದ ಘಾತುಕರು ಮೋಸದಿಂದ ಅರಮನೆಯನ್ನು ನುಗ್ಗಿ ಲೆಪ್ಪದರಸನ ತಲೆಯನ್ನು ಕತ್ತರಿಸಿಕೊಂಡು ಹೋಗಿ ವಿಭೀಷಣನಿಗೆ ತೋರಿಸಿ ಬಹುಮಾನವನ್ನು ಪಡೆದರು.

ಇತ್ತ, ದಶರಥನೂ ಜನಕನೂ ವೇಷಾಂತರದಿಂದ ವಿನೋದಾರ್ಥವಾಗಿ ದೇಶಾಟ ನಕ್ಕೆ ಹೊರಟು ಮಾರ್ಗದಲ್ಲಿ ದೊರೆತ ಕೌತುಕಮಂಗಳಪುರವನ್ನು ಹೊಕ್ಕು, ಅಲ್ಲಿ ಅನೇಕ ಮಂದಿ ರಾಜಕುಮಾರರು ಸೇರಿರುವ ಸ್ವಯಂವರ ಮಂಟಪವೊಂದನ್ನು ಕಂಡು, ಅಲ್ಲಿಗೆ ತಾವೂ ಹೋಗಿ ಕುಳಿತುಕೊಂಡರು. ರಾಜಕನ್ಯೆಯಾದ ಕೈಕೆಯು ಹೂಮಾಲೆ ಯನ್ನು ಹಿಡಿದುಕೊಂಡು ಸ್ವಯಂವರ ಮಂಟಪಕ್ಕೆ ಬಂದು ಅಲ್ಲಿ ನೆರೆದಿರುವ ರಾಜ ಕುಮಾರರಲ್ಲಿ ದಶರಥನನ್ನು ಮೆಚ್ಚಿ ಆತನ ಕೊರಳಿಗೆ ಹೂಮಾಲೆಯನ್ನು ಹಾಕಿದಳು. ಇದನ್ನು ನೋಡಿ ಮಿಕ್ಕ ರಾಜಕುಮಾರರು ದಶರಥನಮೇಲೆ ಯುದ್ಧಕ್ಕೆ ನಿಲ್ಲಲು ಆತನು ಇವರನ್ನು ಲಕ್ಷ್ಯಮಾಡದೆ ಕೈಕೆಯೊಡನೆ ರಥವನ್ನೇರಿ ಅವರನ್ನು ಎದುರಿಸಿದನು. ಯುದ್ಧದಲ್ಲಿ ದಶರಥನ ಸಾರಥಿಯು ಮೂರ್ಛೆ ಹೋಗಲು, ಕೈಕೆಯೇ ಸಾರಥ್ಯವನ್ನು ವಹಿಸಿದಳು. ಈ ಸಹಾಯದಿಂದ ದಶರಥನು ಶತ್ರುಗಳೆಲ್ಲರನ್ನೂ ಸೋಲಿಸಿ ಓಡಿಸಿ ಬಿಟ್ಟನು. ತರುವಾಯ ದಶರಥನಿಗೂ ಕೈಕೆಗೂ ವೈಭವದಿಂದ ವಿವಾಹವು ನಡೆಯಿತು. ದಶರಥನು ಕೈಕೆಯೊಡನೆ ಅಯೋಧ್ಯೆಯನ್ನು ಸೇರಿದನು. ಜನಕನು ಮಿಥಿಳೆಗೆ ಹೊರಟುಹೋದನು. ಕೈಕೆಯು ಯುದ್ಧಕಾಲದಲ್ಲಿ ಇಂತಹ ಅಸಾಧಾರಣವಾದ ಸಹಾಯವನ್ನು ಮಾಡಿದುದಕ್ಕಾಗಿ ದಶರಥನು ಒಂದು ದಿನ ಆಕೆಯನ್ನು ಬಹಳ ವಾಗಿ ಕೊಂಡಾಡಿ ಬೇಕಾದ ವರವನ್ನು ಬೇಡೆಂದು ಹೇಳಿದನು. ಆಕೆಯು ತನಗೆ ಬೇಕಾದಾಗ ಬೇಡುವೆನೆಂದು ಉತ್ತರಕೊಟ್ಟಳು

ದಶರಥನು ತನ್ನ ಹಿರಿಯ ಹೆಂಡತಿಯಾದ ಅಪರಾಜಿತೆಯೊಡನೆ ಒಂದು ದಿನ ರಾತ್ರಿ ಶಯ್ಯಾಗೃಹದಲ್ಲಿ ಮಲಗಿರುವಾಗ ಅಪರಾಜಿತೆಗೆ ಆನೆ, ಸಿಂಹ, ಸೂರ್ಯ, ಚಂದ್ರ—ಇವನ್ನು ಕಂಡಂತೆ ಕನಸುಬಿದ್ದಿತು. ಆಕೆಯು ಈ ಕನಸನ್ನು ಗಂಡ ನಿಗೆ ತಿಳಿಸಲು ಆತನು, ಈ ಶುಭ ಸ್ವಪ್ನದಿಂದ ಚಕ್ರವರ್ತಿಯಾಗುವ ಮಗನು

ಆಕೆಯ ಹೊಟ್ಟೆಯಲ್ಲಿ ಹುಟ್ಟುವನೆಂದು ಹೇಳಿದನು. ಕಾಲಕ್ರಮದಲ್ಲಿ ಅಪರಾಜಿತೆಯು ಗರ್ಭವನ್ನು ಧರಿಸಿ ರಾಮನನ್ನು ಹೆತ್ತಳು. ಸುಮಿತ್ರೆಯು ಲಕ್ಷ್ಮಣನನ್ನೂ ಕೈಕೆಯು ಭರತನನ್ನೂ ಸುಪ್ರಭೆಯು ಶತ್ರುಘ್ನನನ್ನೂ ಹಡೆದರು. ಈ ನಾಲ್ವರೂ ಬಳೆದು ವಿದ್ಯಾಭ್ಯಾಸಮಾಡಿ ಸಕಲ ಶಸ್ತ್ರಶಾಸ್ತ್ರ ವಿಶಾರದರಾದರು.

---

## ಆಶ್ವಾಸ ೪ — ಜನಕ ಜಿನಭವನ ಸಂದರ್ಶನ

ಮಿಥಿಳಾಪುರದಲ್ಲಿ ಜನಕನ ಅರಸಿಯಾದ ವಿದೇಹಿಯು ಗರ್ಭವನ್ನು ಧರಿಸಿದಳು. ಪೂರ್ವಜನ್ಮದ ವೈರದಿಂದ ಒಬ್ಬ ನಿಶಾಚರನು ಆಕೆಯ ಗರ್ಭವನ್ನು ನಾಶಮಾಡಬೇಕೆಂದು ಕಾದಿದ್ದನು. ವಿದೇಹಿಯು ಅವಳಿ ಮಕ್ಕಳನ್ನು ಹೆತ್ತಳು; ಅವುಗಳಲ್ಲಿ ಒಂದು ಗಂಡು, ಮತ್ತೊಂದು ಹೆಣ್ಣು. ನಿಶಾಚರನು ವಿದೇಹಿಗೂ ಹೆಣ್ಣುಮಗುವಿಗೂ ಯಾವ ಬಾಧೆಯನ್ನೂ ಉಂಟುಮಾಡದೆ ಗಂಡುಕೂಸನ್ನು ಮಾತ್ರ ಅಪಹರಿಸಿಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತ ಅದನ್ನು ಕೊಲ್ಲಬೇಕೆಂಬ ಆಲೋಚನೆಯಿಂದ ಅದರ ಮುಖವನ್ನು ಕ್ರೂರದೃಷ್ಟಿಯಿಂದ ನೋಡಲು, ಆ ಮಗುವು ಪೂರ್ವಜನ್ಮದಲ್ಲಿ ಮಾಡಿದ್ದ ಅಣುವ್ರತದ ಪ್ರಭಾವದಿಂದಲೂ ಈ ನಿಶಾಚರನು ಮಾಡಿದ್ದ ಮಹಾವ್ರತದ ಸಂಸ್ಕಾರ ಬಲದಿಂದಲೂ ಅವನಿಗೆ ಉಪಶಾಂತಿಯುಂಟಾಗಿ ದ್ವೇಷವು ತೊಲಗಿತು. ಕೂಡಲೆ ನಿಶಾಚರನು ತನ್ನ ಕಿವಿಯಲ್ಲಿದ್ದ ಕುಂಡಲಗಳನ್ನು ಆ ಮಗುವಿನ ಕಿವಿಗಿಟ್ಟು ಪರ್ಣಲಘುವಿದ್ಯೆಯಿಂದ ಆ ಮಗುವಿಗೆ ಯಾವ ಬಾಧೆಯೂ ಉಂಟಾಗದಂತೆ ಅದನ್ನು ಬಿಸುಟು ಹೊರಟು ಹೋಗಲು, ಅದು ಮೆಲ್ಲನೆ ಬಂದು ರಥನೂಪುರಚಕ್ರವಾಳಪುರದ ಒಡೆಯನಾದ ಇಂದುಗತಿಯೆಂಬ ಖೇಚರೇಂದ್ರನ ಹಾಸಿಗೆಯಮೇಲೆ ಬಿದ್ದಿತು. ಕಾಂತಿಯಿಂದ ಹೊಳೆಯುತ್ತಿರುವ ಆ ಮಗುವನ್ನು ನೋಡಿ ಆತನು ಪರಮಾನಂದ ಭರಿತನಾಗಿ ತನ್ನರಸಿಯಾದ ಪುಷ್ಪವತಿಯು ಫಲವತಿಯಾದಳೆಂದು ಆಕೆಗೆ ಆ ಮಗುವನ್ನೊಪ್ಪಿಸಿ ಅದಕ್ಕೆ ಪ್ರಭಾಮಂಡಲನೆಂಬ ಹೆಸರನ್ನಿಟ್ಟನು.

ಇತ್ತ, ಮಿಥಿಲೆಯಲ್ಲಿ ವಿದೇಹಿಯು ತನ್ನ ಮಗುವನ್ನು ರಾಕ್ಷಸನು ಎತ್ತಿಕೊಂಡು ಹೋದುದಕ್ಕಾಗಿ ಬಹಳ ವ್ಯಸನಪಟ್ಟಳು. ಆಗ ಜ್ಯೋತಿಷ್ಕರು ಶುಭಮುಹೂರ್ತದಲ್ಲಿ ಹುಟ್ಟಿದ ಆ ಮಗುವಿಗೆ ಯಾವ ಅಪಾಯವೂ ಸಂಭವಿಸದೆಂದು ಆಕೆಯ ದುಃಖವನ್ನು ಕಳೆದರು. ಜನಕನು ವಿಭವದಿಂದ ಹೆಣ್ಣು ಮಗುವಿಗೆ ಜಾತಕರ್ಮೋತ್ಸವವನ್ನು ಮಾಡಿ, ಸರ್ವಲಕ್ಷಣ ಸಸ್ಯಸಂಪತ್ತಿಗೆ ಸೀತೆಯಾದುದರಿಂದ, ಸೀತೆಯೆಂಬ ಹೆಸರನ್ನಿಟ್ಟು ಬಹಳ ಪ್ರೀತಿಯಿಂದ ಸಾಕುತ್ತಿರಲು ಆಕೆಯು ದಿನಕ್ರಮವಾಗಿ ಮೋಹನಾಕಾರದಿಂದ ಬಳೆದು, ಭರತಶಾಸ್ತ್ರಾದಿ ಸಕಲ ಕಲೆಗಳಲ್ಲಿಯೂ ಪರಿಣತಿಯನ್ನು ಪಡೆದಳು.

ಹೀಗಿರುವಲ್ಲಿ, ಒಂದು ದಿನ ಚಾರನೊಬ್ಬನು ಭೀತಿಯಿಂದೋಡಿಬಂದು ದೊರೆಗೆ ನಮಸ್ಕರಿಸಿ, ಲೆಕ್ಕವಿಲ್ಲದಷ್ಟು ಬೇಡರ ಪಡೆಯು ಭೂಮಂಡಲವನ್ನೇ ಸೂರೆ ಮಾಡುತ್ತಿರುವುದೆಂದು ತಿಳಿಸಲು, ಜನಕನು ಅವರನ್ನಡಗಿಸಿ ಜನರ ಕಷ್ಟಗಳನ್ನು ಕೂಡಲೆ ನಿವಾರಣೆಮಾಡಬೇಕೆಂದು ಆಲೋಚಿಸಿ ತನಗೆ ಸಹಾಯವಾಗಿ ಬರುವಂತೆ ದಶರಥನಿಗೆ ಹೇಳಿಕಳುಹಿಸಿದನು. ದಶರಥನು ಸೇನಾಸಮೇತನಾಗಿ ಹೊರಡುವುದಕ್ಕೆ ಸನ್ನದ್ಧನಾದುದನ್ನು ಬಲಾಚ್ಯುತರಾದ ರಾಮಲಕ್ಷ್ಮಣರರಿತು ದಶರಥನ ಸಭೆಗೆ ಬಂದರು. ರಾಮನು ತಾನೂ ಎಂಟನೆಯ ಕೇಶವನಾದ ಲಕ್ಷ್ಮಣನೂ ಇರುವಾಗ ಯುದ್ಧಕ್ಕೆ ದಶರಥನು ಹೊರಡಬೇಕಾದ ಆವಶ್ಯಕವಿಲ್ಲವೆಂದೂ ತಾವು ಚಿಕ್ಕವರೆಂದು ಸಂಶಯಪಡಲವಶ್ಯಕವಿಲ್ಲವೆಂದೂ ತಿಳಿಸಿ ತಮ್ಮನ್ನು ಕಳುಹಿಸುವಂತೆ ಕೇಳಿಕೊಳ್ಳಲು, ದಶರಥನು ಅದಕ್ಕೊಪ್ಪಿದನು. ಇವರು ದೊಡ್ಡಸೇನೆಯೊಡನೆ ಹೊರಟು ಕೆಲವು ದಿನಗಳಲ್ಲಿ ಜನಕನೊಡನೆ ಕಲೆತರು. ಜನಕನೂ ಅವನ ತಮ್ಮನಾದ ಕನಕನೂ ದೊಡ್ಡ ಬಲದೊಡನೆ ತೆರಳಿ, ಎಲ್ಲರೂ ಕಿರಾತ ಸೈನ್ಯದ ಮೇಲೆ ಯುದ್ಧಮಾಡಿದರು. ರಾಮಲಕ್ಷ್ಮಣರು ಶಬರ ಸೇನಾಧಿಪತಿಯಾದ ತರಂಗತಮನನ್ನು ಸೋಲಿಸಿ ಶರಣಾಗತನನ್ನಾಗಿ ಮಾಡಿದರು. ಜನಕನು ರಾಮನ ಪರಾಕ್ರಮಕ್ಕೆ ಮೆಚ್ಚಿ ತನ್ನ ಮಗಳಾದ ಸೀತೆಯನ್ನು ಆತನಿಗೆ ಕೊಟ್ಟೆನೆಂದು ಹೇಳಿ ರಾಮಲಕ್ಷ್ಮಣರನ್ನು ಅನೇಕೋಪಚಾರಗಳೊಡನೆ ಅಯೋಧ್ಯೆಗೆ ಕಳುಹಿಸಿದನು.

ಜನಕನು ಸೀತೆಯನ್ನು ರಾಮನಿಗೆ ಕೊಟ್ಟನೆಂಬ ವಾರ್ತೆಯನ್ನು ಕೇಳಿ ನಾರದನು ಜಾನಕಿಯನ್ನು ನೋಡಬೇಕೆಂಬ ಕುತೂಹಲದೊಡನೆ ಮಿಥಿಲೆಗೆ ಬಂದು ಸೀತೆಯನ್ನು ನೋಡಿ ಮೋಹಿಸಲು, ಆಕೆಯು ಇವನ ಬೋಳತಲೆ ಮೊದಲಾದ ವಿಕೃತವೇಷವನ್ನು ನೋಡಿ ಹೆದರಿ ಓಡಿಹೋದಳು. ಆಕೆಯ ಹಿಂದೆಯೇ ನಾರದನೂ ಓಡುತ್ತಿರಲು ಅಲ್ಲಿದ್ದವರೆಲ್ಲರೂ ನಾರದನನ್ನು ಬೈದರು. ಸೈನಿಕರು ಈ ಕಳಕಳವನ್ನು ಕೇಳಿ ಕತ್ತಿಗಳನ್ನು ಝಳಪಿಸುತ್ತ ಬರಲು ನಾರದನು ಭಯಪಟ್ಟು ಆಕಾಶಕ್ಕೆ ನೆಗೆದು ಕೈಲಾಸ ಪರ್ವತವನ್ನು ಸೇರಿದನು. ಅಲ್ಲಿಯ ಉಪವನದಲ್ಲಿ ತನ್ನ ಬಳಲಿಕೆಯನ್ನು ತೀರಿಸಿಕೊಂಡು ತನಗುಂಟಾದ ಅಪಮಾನಕ್ಕೆ ಕಾರಣಳಾದ ಸೀತೆಗೆ ಕೇಡನ್ನು ಮಾಡಬೇಕೆಂದು ನಿಶ್ಚಯಿಸಿ, ವಿಚಿತ್ರ ಚಿತ್ರಕಲಾ ವಿಶಾರದನಾದ ನಾರದನು ಚಲುವೆಯಾದ ಸೀತೆಯ ಚಿತ್ರವನ್ನು, ಆಕೆಯ ಪ್ರತಿಬಿಂಬವೋ ಎಂಬಂತೆ, ಒಂದು ಪಟದಮೇಲೆ ಬರೆದು ಅದನ್ನು ವಿದ್ಯಾಧರ ರಾಜಧಾನಿಯಾದ ರಥನೂಪುರಚಕ್ರವಾಳಪುರದ ವಿನೋದವನದಲ್ಲಿಯ ಮಣಿಭವನದಲ್ಲಿ ತೂಗಹಾಕಿ ಹೊರಟುಹೋದನು. ಅಲ್ಲಿಗೆ ಪ್ರಭಾಮಂಡಲನು ಬಂದು ಆ ಪಟವನ್ನು ನೋಡಿ ಮದನ ಮೋಹಕ್ಕೊಳಗಾಗಿ ಮೋಹಮೂರ್ಛೆ ಹೊಂದಿದನು. ಇದನ್ನು ಕೇಳಿ ಆತನ ತಂದೆಯು ಅಲ್ಲಿಗೆ ಓಡಿಬಂದು ಮಗನನ್ನು ಮೂರ್ಛೆಯಿಂದೆಬ್ಬಿಸಿ, ಕಾರಣವನ್ನು ತಿಳಿದು, ಆ ಪಟವನ್ನು ಅಲ್ಲಿಗೆ ತಂದವರಾರೆಂದು ವಿಚಾರಿಸುತ್ತಿರು

ವಲ್ಲಿ ಅಲ್ಲಿಗೆ ನಾರದನು ಬಂದು ಆ ಪಟವನ್ನು ಅಲ್ಲಿಗೆ ತಂದವನು ತಾನೆಂದೂ ಆ ಲಲನಾಮಣಿಯು ಮಿಥಿಲಾಧಿಪನಾದ ಜನಕನ ಮಗಳೆಂದೂ ಆ ಕನ್ಯೆಗೆಣೆಯಾದವರು ಸುರ ವಿದ್ಯಾಧರ ಕನ್ಯಕೆಯರಲ್ಲಿ ಯಾರೂ ಇಲ್ಲವೆಂದೂ ಹೇಳಿ ಅವರನ್ನು ಹರಸಿ ಹೊರಟುಹೋದನು.

ಪ್ರಭಾಮಂಡಲನು ಸೀತೆಯ ಮೇಲಣ ಮೋಹದಿಂದ ದಿಗ್ಭ್ರಮೆಹೊಂದಿರುವುದನ್ನು ಇಂದುಗತಿಯು ಕಂಡು ಮಾನವ ಕನ್ಯೆಯನ್ನು ಬಯಸಿ ಅಷ್ಟು ಚಿಂತೆಗೊಳ್ಳಲೇಕೆಂದು ನುಡಿದು ಜಾನಕಿಯನ್ನು ಸುಲಭವಾಗಿ ಅವನಿಗೆ ಮದುವೆಮಾಡಿಸುವೆನೆಂದು ಹೇಳಿ ಪ್ರಭಾಮಂಡಲನನ್ನು ಸಮಾಧಾನಗೊಳಿಸಿದನು. ಇದಕ್ಕೆ ಉಪಾಯವೇನೆಂದು ಆಲೋಚಿಸುತ್ತಿರುವಲ್ಲಿ ವಿಯಚ್ಚರನೊಬ್ಬನು ಮಿಥಿಲೆಗೆ ಹೋಗಿ ಜನಕನನ್ನು ಬೆದರಿಸಿ ಸೀತೆಯನ್ನು ಎತ್ತಿಕೊಂಡುಬರುವುದೇ ಸರಿಯೆಂದು ಹೇಳಲು, ಅದಕ್ಕೆ ಇಂದುಗತಿಯು ಒಪ್ಪದೆ, ಅದು ಖೇಚರವಂಶಕ್ಕೆ ಶ್ರೇಯಸ್ಕರವಲ್ಲವೆಂದೂ, ಖೇಚರರಿಗೆ ಭೂಚರರೊಡನೆ ಸಂಬಂಧವನ್ನು ಬೆಳೆಯಿಸುವುದು ಸಮನಲ್ಲದಿದ್ದರೂ ಮಗನಮೇಲಣ ಮೋಹದಿಂದ ಆ ಸಂಬಂಧವನ್ನು ಸರಿಯಾದ ರೀತಿಯಲ್ಲಿ ಬೆಳೆಯಿಸಬೇಕೆಂದೂ ಹೇಳಿದನು. ಇದನ್ನು ಕೇಳಿ ಚಪಲವೇಗನೆಂಬ ವಿದ್ಯಾಧರನು ಅಪ್ಪಣೆಪಡೆದು ಉಲ್ಕಾಪಾತದಂತೆ ಕೂಡಲೆ ಮಿಥಿಲೆಗಿಳಿದು ಜನಕನು ಹಯಪ್ರಿಯನಾಗಿರುವುದನ್ನರಿತು ಕುದುರೆಯ ರೂಪನ್ನು ಹೊಂದಿ ಉಪವನವನ್ನು ತುಳಿದು ಹಾಳುಮಾಡಿ ಪಟ್ಟಣವನ್ನು ನುಗ್ಗಿ ದಾರಿಯಲ್ಲಿ ಸಿಕ್ಕಿದವರನ್ನು ಯಮಪುರಿಗಟ್ಟುತ್ತಿರುವಲ್ಲಿ ಜನಕನನ್ನು ಕಂಡು ಸೌಮ್ಯರೂಪವನ್ನು ತಾಳಿದನು. ಜನಕನು ಆ ಕುದುರೆಗೆ ಜೀನು ಹಾಕಿಸಿ ಕಡಿವಾಣ ಮುಂತಾದುವನ್ನಳವಡಿಸಿ ಸವಾರಿಮಾಡುವುದಕ್ಕಾಗಿ ಹತ್ತಲು ಆ ಕುದುರೆಯು ಥಟ್ಟನೆ ಆಕಾಶಕ್ಕೆ ನೆಗೆದು ರಥನೂಪುರಚಕ್ರವಾಳಪುರದ ಉಪವನವನ್ನು ಸೇರಿ ಅಲ್ಲಿ ಅವನನ್ನು ಇಳಿಸಿತು. ಜನಕನು ತನಗೊದವಿದ ವಿಪತ್ತಿಗೆ ವ್ಯಸನಪಟ್ಟು ಆ ಉದ್ಯಾನದ ಸೊಬಗನ್ನು ನೋಡುತ್ತ ಸಂಚರಿಸುತ್ತಿರುವಲ್ಲಿ ಅಲ್ಲಿಯೊಂದು ಜಿನಮಂದಿರವು ಕಾಣಿಸಲು ಅದನ್ನು ಪ್ರದಕ್ಷಿಣೆಮಾಡಿ ಭಕ್ತಿಯಿಂದ ಒಳಹೊಕ್ಕನು.

---

## ಆಶ್ವಾಸ ೫ --ಸೀತಾಸ್ವಯಂವರ

ಜನಕನು ಜಿನೇಶ್ವರನನ್ನು ಹಲವು ಬಗೆಯಲ್ಲಿ ಸ್ತುತಿಸಿ ತನಗೊದವಿದ ಕಷ್ಟವನ್ನೆಲ್ಲ ಮರೆತು ಹರುಷದಿಂದಿದ್ದನು. ಇತ್ತ, ಚಪಲವೇಗನು ಕುದರೆಯಾಕಾರವನ್ನುಳಿದು ಮುನ್ನಿನಾಕೃತಿಯಲ್ಲಿ ಖಚರೇಂದ್ರನನ್ನು ಕಂಡು ತಾನು ಜನಕನನ್ನು

ತಂದ ತೆರನನ್ನು ತಿಳಿಸಿದನು. ಇದನ್ನು ಕೇಳಿ ಇಂದುಗತಿಯು ಸಂತೋಷಪಟ್ಟು, ಮಂಗಳವಾದ್ಯಧ್ವನಿಯು ನಾಲ್ಕುದಿಕ್ಕನ್ನೂ ತುಂಬುತ್ತಿರಲು, ಪರಿವಾರ ಸಮೇತ ನಾಗಿ ಪೂಜಾಪರಿಕರದೊಡನೆ ಜಿನಮಂದಿರವನ್ನು ಹೊಕ್ಕು ದರ್ಶನ ಸ್ತುತಿಗೈದು ಜಿನೇಶ್ವರನನ್ನಾರಾಧಿಸಿ ಅಭ್ಯಾಗತನಾದ ಜನಕನನ್ನು ಸ್ವಾಗತ ಸಂಭಾಷಣಗಳಿಂದ ಮನ್ನಿಸಿ ತನ್ನ ಮಗನಿಗೆ ಅನುರೂಪಳಾದ ಸೀತೆಯನ್ನು ಮದುವೆಮಾಡಿಕೊಟ್ಟು ತನ್ನೊಡನೆ ಬಾಂಧವ್ಯವನ್ನು ಬೆಳೆಯಿಸಬೇಕೆಂದು ಕೇಳಿದನು. ಅದಕ್ಕೆ ಜನ ಕನು ಕನ್ಯೆಯನ್ನು ಇಂದುಗತಿಯ ಮಗನಿಗೆ ತಾನು ಸಂತೋಷದಿಂದ ಕೊಡ ಬಹುದಾದರೂ ಸೀತೆಯನ್ನು ಆಗಲೇ ಪರಾಕ್ರಮಶಾಲಿಯಾದ ರಾಮನಿಗೆ ಕೊಟ್ಟಿರುವೆನಾದುದರಿಂದ ತನ್ನ ಮಾತನ್ನು ಹಿಂದಕ್ಕೆ ತೆಗೆದುಕೊಂಡಲ್ಲಿ ಲೋಕವು ಮೆಚ್ಚದೆಂದು ಉತ್ತರಕೊಟ್ಟನು. ಇದಕ್ಕೆ ಇಂದುಗತಿಯೂ ಇತರ ಖಚರರೂ ಜನಕನನ್ನು ದೂರಿ, ಖೇಚರಾಧಿಪತಿಯು ಮಗಳನ್ನು ಕೇಳುತ್ತಿರುವಲ್ಲಿ ಸಾಮಾನ್ಯ ಭೂಚರನಿಗೆ ಕೊಡುವುದುಂಟೇ ಎಂದು ಮೂದಲಿಸಲು, ಜನಕನು ಮುನಿದು ಆತ್ಮಪ್ರಶಂಸೆಯೂ ಪರನಿಂದೆಯೂ ತಕ್ಕುದಲ್ಲವೆಂದು ಹೇಳಿ, ಅತ್ಯಂತ ಪರಾಕ್ರಮ ಶಾಲಿಗಳಾದ ರಾಮಲಕ್ಷ್ಮಣರು ಬಲಾಚ್ಯುತರಲ್ಲವೆ? ಅವರ ಸಮಾನರು ಮತ್ತಾ ರಿರುವರು? ಎಂದು ಕೇಳಲು, ಇಂದುಗತಿಯು ಕೋಪಗೊಂಡು ರಾಮನು ಅಂತಹ ಬಲಶಾಲಿಯಾಗಿದ್ದಲ್ಲಿ ವಜ್ರಾವರ್ತ ಚಾಪವನ್ನು ಏರಿಸಿದ ಪಕ್ಷಕ್ಕೆ ವೈದೇಹಿ ಯನ್ನು ಅವನಿಗೇ ಕೊಡೆಂದೂ ಇಲ್ಲದಿದ್ದರೆ ತನ್ನ ಮಗನಿಗೆ ಕೊಡೆಂದೂ ಹೇಳಲು, ರಾಮನ ಪರಾಕ್ರಮವನ್ನು ಬಲ್ಲ ಜನಕನು ಅದಕ್ಕೊಪ್ಪಿದನು.

ಅನಂತರ ಜನಕನನ್ನು ವಿಚಿತ್ರವಸ್ತ್ರಾದಿಗಳಿಂದಲಂಕರಿಸಿ ವಿದ್ಯಾಧರ ಕುಲಕ್ಕೆ ಮೊದಲಿಗರಾದ ನಮಿ ವಿನಮಿಗಳಿಗೆ ನಾಗರಾಜನಿತ್ತ ವಜ್ರಾವರ್ತ ಸಾಗ ರಾವರ್ತಗಳೆಂಬ ಬಿಲ್ಲುಗಳನ್ನು ತರಿಸಿಕೊಟ್ಟು ಅವಕ್ಕೆ ಚಂದ್ರವರ್ಧನನೆಂಬ ಮಹ ತ್ತರನನ್ನು ಕಾವಲಾಗಿ ನಿಯಮಿಸಿ ವಿಯಚ್ಚರ ಸೇನೆಯೊಡನೆ ಜನಕನನ್ನು ಮಿಥಿಲಾಪುರಕ್ಕೆ ಕಳುಹಿಸಿದನು. ಮಿಥಿಲೆಯ ಜನರು ತಮ್ಮ ದೊರೆಯು ಹಿಂದಿ ರುಗಿ ಬರುವುದನ್ನು ಕಂಡು ಅತ್ಯಂತ ಸಂತೋಷಪಟ್ಟರು. ಜನಕನು ಪಟ್ಟಣ ವನ್ನು ಸೇರಿದ ಕೂಡಲೆ ಚಂದ್ರವರ್ಧನಾದಿಗಳನ್ನು ಉಚಿತ ಮರ್ಯಾದೆಗಳಿಂದ ಸತ್ಕರಿಸಿ ಬಿಲ್ಲುಗಳನ್ನಿಡುವುದಕ್ಕೆ ತಕ್ಕ ಸ್ಥಳವನ್ನೇರ್ಪಡಿಸಿದನು.

ಜನಕನು ಆ ದಿನ ರಾತ್ರಿ ಶಯ್ಯಾಗೃಹದಲ್ಲಿ ತನ್ನರಸಿಗೆ ತಾನು ಹೋಗಿ ಬಂದ ವೃತ್ತಾಂತವನ್ನು ಸವಿಸ್ತಾರವಾಗಿ ತಿಳಿಸಲು ಆಕೆಯು ಬಹಳ ಭಯಪಟ್ಟು ಬಿಲ್ಲುಗಳ ನೆಪದಿಂದ ತನ್ನ ಮಗಳನ್ನು ಖೇಚರರು ಹೊತ್ತುಕೊಂಡು ಹೋಗುವ ರೆಂದು ಅಳತೊಡಗಿದಳು. ರಾಮಲಕ್ಷ್ಮಣರು ಕಾರಣಪುರುಷರೆಂದೂ ಆ ಬಿಲ್ಲುಗಳನ್ನು ಬಗ್ಗಿಸಲು ಅವರೇ ತಕ್ಕ ಸಮರ್ಥರೆಂದೂ ಆಕೆಗೆ ತಿಳಿಸಿ ಜನಕನು ಆಕೆಯನ್ನು

ಸಮಾಧಾನಪಡಿಸಿದನು. ತರುವಾಯ ಜನಕನು ಸ್ವಯಂವರ ಗೃಹವನ್ನು ನಿರ್ಮಾಣ ಮಾಡಿಸಿ ಸ್ವಯಂವರಕ್ಕೆ ಬರುವಂತೆ ಎಲ್ಲ ರಾಜಕುಮಾರರುಗಳಿಗೂ ಹೇಳಿಕಳುಹಿಸಲು, ಅನೇಕ ದೇಶಗಳಿಂದ ರಾಜಕುಮಾರರು ಬಂದು ಸ್ವಯಂವರ ಮಂಟಪವನ್ನಲಂಕರಿಸಿದರು. ದಶರಥನೂ ರಾಮ ಲಕ್ಷ್ಮಣ ಭರತ ಶತ್ರುಘ್ನರೊಡನೆ ಬಂದು ಸಭೆಯಲ್ಲಿ ಕುಳಿತು ರತ್ನದುಂಗುರದ ನಾಯಕ ಮಣಿಯಂತೆ ಪ್ರಕಾಶಿಸುತ್ತಿದ್ದನು.

ಆ ಹೊತ್ತಿಗೆ ಸೀತೆಯು ಸಕಲಾಲಂಕಾರ ಭೂಷಿತಳಾಗಿ ಸ್ವಯಂವರ ಮಂಟಪವನ್ನು ಹೊಕ್ಕು ಅಲ್ಲಿದ್ದವರನ್ನೆಲ್ಲ ಮೋಹಪಾಶದಲ್ಲಿ ತೊಡರಿಸಿದಳು. ವೃದ್ಧ ಕಂಚುಕಿಯೊಬ್ಬಳು ರಾಜಕುಮಾರರೆಲ್ಲರನ್ನೂ ವರ್ಣಿಸಿ ಸೀತೆಗೆ ತೋರಿಸಿದಳು. ಸೀತಾದೇವಿಯ ಮನಸ್ಸು ಮತ್ತಾರಲ್ಲಿಯೂ ನಿಲ್ಲದೆ ರಾಮನಲ್ಲಿಯೇ ನಿಂತಿತು. ಆ ಸಮಯದಲ್ಲಿ ವಿದ್ಯಾಧರ ಮಹತ್ತರನು ಧನುಸ್ಸನ್ನು ಯಥಾವಿಧಿಯಾಗಿ ಪೂಜಿಸಲು, ವಜ್ರಾವರ್ತ ಚಾಪವು ಭಯಂಕರವಾದ ಕಾಲಾಹಿಯ ರೂಪವನ್ನು ಪಡೆದು ಭಯವನ್ನುಂಟುಮಾಡಿತು. ಎರಡು ಧನುಸ್ಸುಗಳೂ ಸಿಡಿಲಂತೆ ಮೊಳಗಿ ನೆಲವನ್ನು ಜಡಿದು ರಭಸಮಾಡಿದುವು. ಇದನ್ನು ಖೇಚರರು ನೋಡಿ ಸೀತೆಯು ಪ್ರಭಾಮಂಡಲನ ವಶಳಾದಳೆಂದು ನಂಬಿದರು. "ಈ ವಜ್ರಾವರ್ತ ಚಾಪಕ್ಕೆ ಹೆದೆಯನ್ನೇರಿಸಲು ಸಾಮರ್ಥ್ಯವುಳ್ಳಾತನು ಜನಕಜೆಗೆ ವರನಾಗುವನು" ಎಂಬ ಶಬ್ದವು ಆ ಸಭೆಯಲ್ಲಿ ಕೇಳಿಸಲು, ಕೆಲವರು ರಾಜಪುತ್ರರು ಬಂದು ಬಿಲ್ಲುಗಳನ್ನು ಕಂಡು ಭಯಪಟ್ಟು ಹಿಮ್ಮೆಟ್ಟಿದರು. ಆಗ ರಾಮನು ಎದ್ದು ಬಂದು ಆ ವಿಷಮ ಕೋದಂಡವನ್ನು ಹರಳು ಕಡ್ಡಿಯಂತೆ ಬಗೆದು ಕೊಪ್ಪನ್ನು ಎಡಗೈಯಿಂದೊತ್ತಿ ಹೆದೆಯನ್ನೇರಿಸಿ ನೀವಿ ಟಂಕಾರ ಮಾಡಲು ಭೂಮಿಯು ಅದುರಿತು. ಇದನ್ನು ನೋಡಿ ಸೀತೆಗೆ ರೋಮಾಂಚವೂ ಜನಕನಿಗೆ ಸಂತೋಷವೂ ಖೇಚರರಿಗೆ ಖೇದವೂ ರಾಜಕುಮಾರರಿಗೆ ವ್ಯಥೆಯೂ ಲಲನಾ ಜನಕ್ಕೆ ಸನ್ಮೋಹವೂ ಪುರಜನಕ್ಕಾಶ್ಚರ್ಯವೂ ಹುಟ್ಟಿದುವು. ಸೀತೆಯು ರಾಮನ ಕೊರಳಿಗೆ ಹೂಮಾಲೆಯನ್ನು ಹಾಕಿದಳು.

ತರುವಾಯ, ಎಂಟನೆಯ ಕೇಶವನಾದ ಲಕ್ಷ್ಮಣನು ಸಾಗರಾವರ್ತ ಚಾಪಕ್ಕೆ ದಿವ್ಯಬಾಣವನ್ನು ಹೂಡಲು ಖೇಚರ ಬಲವು ತಲ್ಲಣಿಸಿಹೋಯಿತು. ಆಗ ಚಂದ್ರಧ್ವಜನು ರೂಪಿನಲ್ಲಿ ದೇವೇಂದ್ರ ಸ್ತ್ರೀಯರನ್ನು ಜಯಿಸಿದ ತನ್ನ ಹದಿನೆಂಟು ಮಂದಿ ಹೆಣ್ಣುಮಕ್ಕಳನ್ನು ಲಕ್ಷ್ಮಣನಿಗೆ ಕಾಣಿಕೆಯಾಗಿತ್ತನು. ದಶರಥನು ಸೀತೆಯನ್ನೂ ರಾಮಲಕ್ಷ್ಮಣರನ್ನೂ ಮುಂದಿಟ್ಟುಕೊಂಡು ಮಿಥಿಲಾಪಟ್ಟಣವನ್ನು ಪ್ರವೇಶಿಸಿದನು. ಜನಕನು ಅತಿ ವೈಭವದಿಂದ ಸೀತೆಯನ್ನು ರಾಮನಿಗೆ ಧಾರೆ ಯೆರೆದು ಕೊಟ್ಟನು.

---

## ಆಶ್ವಾಸ ೬–ವನ ಪ್ರಯಾಣ

ರಾಮ ಲಕ್ಷ್ಮಣರಿಗುಂಟಾದ ಅಗಣ್ಯ ಪುಣ್ಯಪ್ರಭಾವವನ್ನು ಕಂಡು ಭರತನು ಅವರಂತೆ ಸಿರಿಯೂ ಮಹಿಮೆಯೂ ತನಗಾಗಲಿಲ್ಲವೆಂಬ ಮನೋವ್ಯಥೆಯಿಂದ ತಪಸ್ಸಿಗೆ ಹೋಗಲು ಆಲೋಚಿಸುತ್ತಿರುವನೆಂದು ಕೈಕೆಯು ತಿಳಿದು ಆ ವೃತ್ತಾಂತ ವನ್ನು ಪತಿಯೊಡನೆ ಏಕಾಂತದಲ್ಲಿ ಹೇಳಿ, ಭರತನಿಗೆ ಕನಕನ ಮಗಳನ್ನು ಮದುವೆ ಮಾಡಿಸಿ ಅವನನ್ನು ಮೋಹಪಾಶದಲ್ಲಿ ತೊಡರಿಸುವಂತೆ ಕೇಳಿಕೊಂಡಳು. ದಶ ರಥನು ಅದಕ್ಕೆ ಒಪ್ಪಿ ಕನಕನನ್ನು ಕೇಳಲು, ಆತನೂ ಈ ಸಂಬಂಧಕ್ಕೆ ಸಂತೋಷದೊಡನೆ ಅನುಮತಿಕೊಟ್ಟನು. ಶುಭಮುಹೂರ್ತದಲ್ಲಿ ಬಹಳ ವೈಭವ ದಿಂದ ಮದುವೆಯು ನಡೆಯಿತು.

ಇತ್ತ, ಜನಕನೊಡನೆ ಮಿಥಿಲೆಗೆ ಬಂದಿದ್ದ ವಿದ್ಯಾಧರ ಮಹತ್ತರನು ರಥ ನೂಪುರಚಕ್ರವಾಳಪುರಕ್ಕೆ ಹಿಂದಿರುಗಿ ಹೋಗಿ ರಾಮಲಕ್ಷ್ಮಣರ ಪ್ರಭಾವವನ್ನು ಇಂದುಗತಿಗೆ ತಿಳಿಸಲು ಆತನು ನಿಶ್ಚಯವಾಗಿ ಅವರು ಕಾರಣಪುರುಷರೆಂದರಿತು ಭರತ ತ್ರಿಖಂಡಕ್ಕೆಲ್ಲ ಪ್ರಭುಗಳಾದಾರೆಂಬ ಭಯದಿಂದ ಕಳೆಗುಂದಿದನು. ಪ್ರಭಾ ಮಂಡಲನು ಸೀತಾ ವಿರಹದಿಂದ ವಿಷಾದಗೊಂಡು ರಾಮಲಕ್ಷ್ಮಣರ ಮಹಿಮೆ ಯನ್ನು ಸಹಿಸಲಾರದೆ ಅವರನ್ನು ಜಯಿಸಿ ಸೀತೆಯನ್ನು ತರುವೆನೆಂದು ಗರ್ಜಿಸಿ ತಕ್ಕ ಪರಿವಾರದೊಡನೆ ಹೊರಟು ಗಗನಮಾರ್ಗದಲ್ಲಿ ಹೋಗುತ್ತ ದಿಕ್ಕುಗಳನ್ನು ನೋಡಲು ಪೂರ್ವಜನ್ಮದ ಸ್ಮರಣೆ ಬಂದು ಮೂರ್ಛೆಹೋದನು. ಆಗ ಪರಿಜನರು ಆತನನ್ನು ಇಂದುಗತಿಯ ಬಳಿಗೆ ಕರೆತಂದರು. ಶೈತ್ಯೋಪಚಾರಗಳಿಂದ ಮೂರ್ಛೆ ತಿಳಿದು ಪ್ರಭಾಮಂಡಲನು ತನ್ನ ಪೂರ್ವವೃತ್ತಾಂತವನ್ನು ತಂದೆಗೆ ತಿಳಿಸಿ ಸೀತೆಯು ತನ್ನ ತಂಗಿಯೆಂದರಿಯದೆ ಆಕೆಯನ್ನು ಮೋಹಿಸಿದುದಕ್ಕಾಗಿ ವ್ಯಥೆಪಟ್ಟನು. ಇಂದುಗತಿಯು ಇದೆಲ್ಲವನ್ನೂ ನೋಡಿ ವಿಸ್ಮಯಪಟ್ಟು ಪ್ರಭಾಮಂಡಲನಿಗೆ ರಾಜ್ಯ ವನ್ನೊಪ್ಪಿಸಿ ತಾನು ಸರ್ವಭೂತಹಿತ ಭಟ್ಟಾರಕರ ಬಳಿಯಲ್ಲಿ ದೀಕ್ಷೆಗೊಂಡನು.

ಮಿಥಿಲೆಯಲ್ಲಿ ಜನಕನು ಸೀತೆಗೆ ವಸ್ತುವಾಹನಾದಿಗಳನ್ನು ಬಳಿವಳಿ ಕೊಟ್ಟು ಆಕೆಯನ್ನು ದಶರಥನೊಡನೆ ಅಯೋಧ್ಯೆಗೆ ಪ್ರಯಾಣಮಾಡಿಸಿದನು. ದಶರಥನು ಕೆಲವು ದಿನಗಳಲ್ಲಿ ವಿನೀತಾನಗರವನ್ನು ಸೇರಿರಲು, ಒಂದು ದಿನ ಚಾರ ನೊಬ್ಬನು ಬಂದು ಸರಯೂ ನದೀ ತೀರದ ಮಹೇಂದ್ರೋದ್ಯಾನ ವನದಲ್ಲಿ ಸರ್ವ ಭೂತಹಿತ ಭಟ್ಟಾರಕರು ಮಹಾಮುನಿಗಳ ಸಮುದಾಯದೊಡನೆ ಯೋಗನಿಷ್ಠೆ ಯಿಂದಿರುವರೆಂದು ತಿಳಿಸಿದನು. ದಶರಥನು ಬಹಳ ಭಕ್ತಿಯಿಂದೆದ್ದು ಆ ಕಡೆಗೆ ಕೈ ಮುಗಿದು ಕೂಡಲೆ ಹೊರಟು ಉದ್ಯಾನವನಕ್ಕೆ ಬಂದು ಮುನಿಯನ್ನರ್ಚಿಸಿ ವಂದನೆ ಮಾಡಿ ರಾಮ ಲಕ್ಷ್ಮಣ ಭರತ ಶತ್ರುಘ್ನರೊಡನೆ ಸಮುಚಿತಾಸನದಲ್ಲಿ ಕುಳಿತು, ದೀಕ್ಷಿತನಾದ ಇಂದುಗತಿಯನ್ನೂ ಬಾಡಿದ ಮುಖವುಳ್ಳ ಪ್ರಭಾಮಂಡಲನನ್ನೂ

ಆ ಮುನಿಯ ಬಳಿಯಲ್ಲಿ ಕಂಡನು. ದಶರಥನು ಇಂದುಗತಿಯು ದೀಕ್ಷೆಗೊಂಡು ದಕ್ಕೆ ಕಾರಣವನ್ನು ಮುನಿಮುಖದಿಂದ ತಿಳಿದ ತರುವಾಯ ಪ್ರಭಾಮಂಡಲನು ತನ್ನನ್ನು ಅಷ್ಟು ಅಕ್ಕರೆಯಿಂದ ಇಂದುಗತಿಯು ಸಲಹಿದುದಕ್ಕೆ ಕಾರಣವನ್ನು ತಿಳಿಸ ಬೇಕೆಂದು ಮುನಿಯನ್ನು ಭಕ್ತಿಯಿಂದ ಬೇಡಿಕೊಳ್ಳಲು, ಮುನಿಯು ಆ ವೃತ್ತಾಂತ ವನ್ನು ವಿಸ್ತಾರವಾಗಿ ತಿಳಿಸಿದನು. ಇದನ್ನು ಕೇಳಿ ಅಲ್ಲಿ ನೆರೆದಿದ್ದ ರಾಜಸಭೆಯೂ ಪ್ರಭಾಮಂಡಲನೂ ಸೀತೆಯೂ ಬೆರಗಾಗಿ ಹರ್ಷವನ್ನು ತಾಳಿದರು. ಪ್ರಭಾ ಮಂಡಲನು ದಶರಥನಿಗೆ ಸಾಷ್ಟಾಂಗ ನಮಸ್ಕಾರಮಾಡಿ ರಾಮ ಲಕ್ಷ್ಮಣ ಭರತ ಶತ್ರುಘ್ನರೊಡನೆ ವಿನಯವೃತ್ತಿಯಿಂದಿರಲು, ಸೀತೆಯು ಅಣ್ಣನಾದ ಪ್ರಭಾಮಂಡಲ ನಿಗೆ ನಮಸ್ಕಾರ ಮಾಡಿದಳು. ಆತನು ಆಕೆಯನ್ನು ಅಖಂಡಿತ ಪುಣ್ಯಭಾಗಿನಿ ಯಾಗೆಂದು ಹರಸಿ ಪರಮಾನಂದ ಭರಿತನಾಗಿದ್ದನು. ದಶರಥ ಮೊದಲಾಗಿ ಎಲ್ಲರೂ ಅಲ್ಲಿಂದ ಹೊರಟು ಸಾಕೇತಪುರವನ್ನು ಸೇರಿದರು. ತರುವಾಯ ದಶರಥನು ಈ ವೃತ್ತಾಂತವನ್ನು ಜನಕನಿಗೆ ಹೇಳಿಕಳುಹಿಸಲು ಆತನೂ ವಿದೇಹಿಯೂ ಬಹಳ ತವಕದಿಂದ ಅಯೋಧ್ಯೆಗೆ ಬಂದು ಪ್ರಭಾಮಂಡಲನನ್ನು ಕಂಡು ಮಗನನ್ನು ಆಗ ತಾನೆ ಪಡೆದಂತೆ ಸಂತೋಷ ಸಾಗರದಲ್ಲಿ ಮುಳುಗಿದರು. ದಶರಥನು ಸಾಕೇತ ಪುರಕ್ಕೆ ಬಂದಿದ್ದ ತನ್ನ ಬಂಧುವರ್ಗವನ್ನೆಲ್ಲ ಬಹಳ ಪ್ರೀತಿಯಿಂದ ನೋಡಿ ಕೊಂಡಿದ್ದನು. ಪ್ರಭಾಮಂಡಲನು ರಾಮಲಕ್ಷ್ಮಣರೊಡನೆ ಕೂಡಿ ಅನೇಕ ವಿನೋದ ಗಳಿಂದ ಒಂದು ತಿಂಗಳನ್ನು ಒಂದು ಕ್ಷಣದಂತೆ ಕಳೆದು ಮಿಥಿಲೆಗೆ ಹೋಗಿ ಜನಕನ ರಾಜ್ಯವನ್ನು ತನ್ನ ಚಿಕ್ಕಪ್ಪನಾದ ಕನಕನಿಗೆ ಕೊಟ್ಟು ತಾಯಿತಂದೆ ಗಳೊಡನೆ ರಥನೂಪುರಚಕ್ರವಾಳಪುರವನ್ನು ಸೇರಿ ಸುಖದಿಂದಿದ್ದನು.

ಒಂದು ದಿನ ದಶರಥನು ಸರ್ವಭೂತಹಿತ ಭಟ್ಟಾರಕರನ್ನು ಕಂಡು ಭಕ್ತಿ ಯಿಂದ ಪೂಜಿಸಿ ತನ್ನ ಭವಾವಳಿಯನ್ನು ತಿಳಿಸಬೇಕೆಂದು ಬೇಡಿಕೊಳ್ಳಲು ಆ ಮುನಿಪತಿಯು ಅದನ್ನು ವಿಶದವಾಗಿ ತಿಳಿಸಿದನು. ಅದನ್ನು ಕೇಳಿ ದಶರಥನು ತಾನು ಸುಕೃತ ದುಷ್ಕೃತ ಕರ್ಮವಿಪಾಕ ಸುಖ ದುಃಖಗಳನ್ನನುಭವಿಸಿ ರಾಟಳದ ಗುಂಡಿಗೆಯಂತಾದೆನೆಂದೂ ಪುಣ್ಯ ಪಾಪಗಳೆರಡಲ್ಲದೆ ಭಂಡಾರ ವಸ್ತು ವಾಹನಾದಿ ಗಳಾವುವೂ ಒಡನೆ ಬರಲಾರವೆಂದೂ ತಿಳಿದು ಮೋಕ್ಷಸುಖವನ್ನು ಬಯಸಿ ಮುನೀಂದ್ರನಪ್ಪಣೆಯನ್ನು ಪಡೆದು ಅಯೋಧ್ಯೆಗೆ ಬಂದನು. ಆ ದಿನ ದಶರಥನು ನಿತ್ಯನಿಯಮಗಳನ್ನು ನೆರವೇರಿಸಿದನಂತರ ಸಿಂಹಾಸನವನ್ನೇರಿ ಒಡ್ಡೋಲಗಂಗೊಟ್ಟು ತನ್ನ ಕುಮಾರರನ್ನು ಬರಹೇಳಿದನು. ಎಲ್ಲರೂ ಬಂದು ತಂದೆಗೆ ದಂಡಪ್ರಣಾಮ ವನ್ನು ಮಾಡಿ ಆತನ ಆಶೀರ್ವಾದವನ್ನು ಪಡೆದು ಸಿಂಹಾಸನದ ಪಕ್ಕದಲ್ಲಿದ್ದ ಮಣಿಮಯಾಸನಗಳ ಮೇಲೆ ಕುಳಿತುಕೊಂಡರು. ದಶರಥನು ರಾಮಚಂದ್ರನ ಮುಖವನ್ನು ನೋಡಿ, "ಮಗುವೇ! ಹಣೆಯಲ್ಲಿ ಕಣ್ಣನ್ನು ಪಡೆವಂತೆ ತೇಜೋ

ಮಯನಾದ ನಿನ್ನನ್ನು ಪಡೆದಿರುವೆನು. ನನ್ನ ತಂದೆಯು ಒಂದು ತಿಂಗಳ ಕೂಸಾದ ನನಗೆ ಪಟ್ಟವನ್ನು ಕಟ್ಟಿ ತಪೋರಾಜ್ಯವನ್ನು ಪಡೆದನು. ನೀನು ಪ್ರಾಪ್ತವಯಸ್ಕನಾಗಿರುವುದರಿಂದ ರಾಜ್ಯಭಾರವನ್ನು ವಹಿಸು; ತಪಃಶ್ರೀಯನ್ನು ಸೇರಬೇಕೆಂದಿರುವ ನನ್ನ ಕೋರಿಕೆಯನ್ನು ಈಡೇರಿಸು; ತಂದೆಯ ಮಾತನ್ನು ಮೀರುವುದು ನಮ್ಮ ವಂಶಕ್ಕೆ ಬಂದುದಲ್ಲ" ಎಂದು ಹೇಳಿ ಮರುಮಾತಿಗೆಡೆಗುಡದೆ ನುಡಿದು ರಾಮನನ್ನು ಒಪ್ಪಿಸಿದನು. ಆಗ ಭರತನು ತಂದೆಯೊಡನೆ ತಾನೂ ತಪಸ್ಸಿಗೆ ಹೊರಡುವೆನೆಂದು ನಿಶ್ಚಯಿಸಿ ಬಿನ್ನವಿಸಲು ಈ ವಾರ್ತೆಯನ್ನು, ಆ ಸಭೆಯಲ್ಲಿದ್ದವನೊಬ್ಬನು ಓಡಿಹೋಗಿ ಕೈಕೆಗೆ ತಿಳಿಸಿದನು. ಆಕೆಯು ಇದನ್ನು ಕೇಳಿ ವಿಕಲೆಯಾಗಿ ತನಗಿನ್ನುಮೇಲೆ ಕಿಂಕರಭಾವವು ಬರುವುದೆಂದು ಹಂಬಲಿಸುತ್ತಿರಲು ಪತಿಯು ಆಕೆಗೆ ಕೊಟ್ಟಿದ್ದ ವರವು ನೆನಪಿಗೆ ಬಂದಿತು. ಆಕೆಯು ಕೂಡಲೆ ಹೊರಟು ದಶರಥನ ಬಳಿಗೆ ಬಂದು ತನಗೆ ವಾಗ್ದಾನಮಾಡಿದ್ದ ವರವನ್ನು ಕೊಡೆಂದು ಆತನನ್ನು ಕೇಳಿದಳು. ಆಗ ದಶರಥನು ತನ್ನ ತಪೋವನ ಗಮನಕ್ಕೆ ವಿಘ್ನಕರವಲ್ಲದುದನ್ನು ಬೇಡಿಕೊಳ್ಳೆನಲು, ಆಕೆಯು ಭರತನಿಗೆ ರಾಜ್ಯವನ್ನು ಹದಿನಾಲ್ಕು ವರುಷಗಳ ಪರ್ಯಂತ ಕೊಡೆಂದು ಕೇಳಿದಳು. ಈ ಮಾತು ಕಿವಿಗೆ ಬೀಳುತ್ತಲೆ ದಶರಥನು ಮನನೊಂದು ಚಿಂತಾಕ್ರಾಂತನಾದನು. ಭರತನು ತನ್ನ ತಾಯಿಯು ಇಂತಹ ತಪ್ಪುಕೆಲಸವನ್ನು ಮಾಡಿದಳಲ್ಲಾ ಎಂದು ನೊಂದನು; ಸಭೆಯಲ್ಲಿದ್ದವರೆಲ್ಲರೂ ಕೈಕೆಯನ್ನು ದೂಷಿಸಿದರು.

ಇದೆಲ್ಲವನ್ನೂ ನೋಡಿ ಹಲಾಯುಧನಾದ ರಾಮನು ತಂದೆಯ ಭಾಷೆ ತಪ್ಪದಂತೆಯೂ ಚಿಕ್ಕತಾಯಿಯಾದ ಕೈಕೆಯ ಮನೋರಥವು ಈಡೇರುವಂತೆಯೂ ರಾಜ್ಯವನ್ನು ಸಂತೋಷದಿಂದ ಭರತನಿಗೆ ಕೊಟ್ಟು ಕೃತಾರ್ಥನಾಗುವೆನೆಂದು ಹರ್ಷವನ್ನು ತಾಳಿ ಕೈಕೆಗೆ ಅದನ್ನು ತಿಳಿಸಿದನು. ತರುವಾಯ ಆತನು ತಂದೆಯನ್ನು ನೋಡಿ ರಾಜ್ಯವು ತನಗಾದರೇನು ಭರತನಿಗಾದರೇನು? ಅಣ್ಣ ತಮ್ಮಂದಿರಲ್ಲಿ ಭೇದಭಾವವಿಲ್ಲವೆಂದು ನುಡಿದು, ಭಾಷೆಗೆ ತಪ್ಪುವುದು ಸರ್ವಥಾ ಸರಿಯಲ್ಲವೆಂದು ತಿಳಿಸಿ, ತಾನು ಆ ಹದಿನಾಲ್ಕು ವರ್ಷಗಳು ದಿಗ್ಜಯ ಯಾತ್ರೆಗೆ ಹೋಗಿ ಬರುವೆನೆಂದೂ ಭರತನಿಗೆ ಕೂಡಲೆ ಪಟ್ಟವನ್ನು ಕಟ್ಟಬೇಕೆಂದೂ ಹೇಳಿದನು. ಆಗ ಭರತನು ಕಿರಿಯನಾದ ತಾನು ಹಿರಿಯನ ರಾಜ್ಯವನ್ನು ಬಯಸುವುದು ತಕ್ಕದ್ದಲ್ಲವೆಂದೂ ತಪೋರಾಜ್ಯವೇ ತನ್ನ ಮನಸ್ಸಿಗೊಪ್ಪಿದುದೆಂದೂ ತಂದೆಗೆ ತಿಳಿಸಿದನು. ಅದಕ್ಕೆ ದಶರಥನು ಅಣ್ಣನ ಮಾತಿಗವಿಧೇಯವಾಗಿ ನುಡಿವುದು ಸರಿಯಲ್ಲವೆಂದು ಭರತನಿಗೆ ಹೇಳಲು, ಆತನು ಮರುಮಾತಾಡಲಾರದೆ ನಿಂತಿರುವಲ್ಲಿ ರಾಮನು "ಭರತನೇ, ಭಾಷೆಗೆ ತಪ್ಪಿದರೆ ತಂದೆಯ ಯಶಸ್ಸು ಹೋಗುವುದು; ನಿನ್ನ ಅಗಲಿಕೆಯಿಂದ ನಿನ್ನ ತಾಯಿಗೆ ಪ್ರಾಣ ಹಾನಿಯಾಗುವುದು; ಆದುದ

ರಿಂದ ಪಿತೃವಾಕ್ಯ ಪರಿಪಾಲನವೇ ನಿನ್ನ ಕರ್ತವ್ಯವು. ತಂದೆಯು ಕ್ರಮದಿಂದ ನನಗಿತ್ತ ರಾಜ್ಯವನ್ನು ನಾನು ನಿನಗೆ ಕೊಡುವೆನು; ಆದುದರಿಂದ ರಾಜ್ಯಭಾರ ವನ್ನು ವಹಿಸುವುದು ನಿನಗೆ ಸ್ವಲ್ಪವೂ ಅಕ್ರಮುವಲ್ಲ" ಎಂದು ಹೇಳಿ ಭರತನ ನ್ನೊಡಂಬಡಿಸಿದನು. ಇದನ್ನು ನೋಡಿ ಸಭಾಜನರು ರಾಮನ ಸತ್ಯಸಂಧತೆ ಯನ್ನೂ ಔದಾರ್ಯವನ್ನೂ ಕೊಂಡಾಡುತ್ತಿರಲು ಲಕ್ಷ್ಮಣನು ರಕ್ತೇಕ್ಷಣ ನಾಗಿ ಭರತನ ಮೇಲೆ ಕೋಪಗೊಂಡನು. ರಾಮನು ತನ್ನ ಕಣ್ನೋಟದಿಂದ ಲಕ್ಷ್ಮಣನ ಕೋಪವನ್ನು ಶಾಂತಮಾಡಿ ತಂದೆಯ ಪಾದಗಳಿಗೆರಗಿ ಶತ್ರುಗಳನ್ನು ಜಯಿಸಿಕೊಂಡು ಬರುವೆನೆಂದು ಆತನೊಡನೆ ಹೇಳಿ ಸಭೆಯಿಂದೆದ್ದು ಹೊರಡಲು ದಶರಥನು ಮೂರ್ಛೆಹೋದನು. ಇದನ್ನು ನೋಡಿ ಕೈಕೆಯು ಇದೆಲ್ಲವೂ ತನ್ನಿಂ ದಾಯಿತಲ್ಲಾ ಎಂದು ವ್ಯಥೆಪಟ್ಟು ಅಳುತ್ತ ಹೊರಟುಹೋದಳು. ಲಕ್ಷ್ಮಣನು ರಾಮನ ಸಹಾಯಕ್ಕಾಗಿ ಅವನೊಡನೆ ತಾನೂ ಹೋಗುವ ಆಲೋಚನೆಯಿಂದ ರಾಮನನ್ನು ಸೇರಿದನು. ಈ ವೃತ್ತಾಂತವೆಲ್ಲವನ್ನೂ ಸುಮಿತ್ರೆಯೂ ಅಪರಾಜಿತೆಯೂ ಕೇಳಿ ಭಯಭ್ರಾಂತರಾಗಿ ವ್ಯಸನಪಡುತ್ತಿರುವಲ್ಲಿ ರಾಮಲಕ್ಷ್ಮಣರು ಬಂದು ಅವರನ್ನು ನಮಸ್ಕರಿಸಿ ಕುಳಿತುಕೊಂಡರು. ಅಪರಾಜಿತೆಯು ರಾಮನ ವನವಾಸವನ್ನು ನೆನೆ ನೆನೆದು ಗಟ್ಟಿಯಾಗಿ ಅಳತೊಡಗಿದಳು. ಲಕ್ಷ್ಮಣನು ತಕ್ಕ ಮಾತುಗಳಿಂದ ಆಕೆ ಯನ್ನು ಸಮಾಧಾನ ಗೊಳಿಸಲು, "ಸೀತೆಯೂ ನಿಮ್ಮೊಡನೆ ಬರುವಳು, ಇಲ್ಲಿರು ವವಳಲ್ಲ" ಎಂದು ಆಕೆಯು ಹೇಳಿದಳು. ಸುಮಿತ್ರೆಯು ಲಕ್ಷ್ಮಣನನ್ನು ಕುರಿತು, ತಾನು ತನ್ನ ಕಷ್ಟವನ್ನೂ ಲಕ್ಷಿಸದೆ ಅಣ್ಣನನ್ನೂ ಅತ್ತಿಗೆಯನ್ನೂ ಭಕ್ತಿಯಿಂದ ಸೇವಿ ಸುತ್ತಿರೆಂದು ಬುದ್ಧಿವಾದವನ್ನು ಹೇಳಿದಳು.

ರಾಮಲಕ್ಷ್ಮಣರು ತಾಯಿಯರ ಅಪ್ಪಣೆಯನ್ನು ಪಡೆದು ಸೀತೆಯೊಡನೆ ಅಯೋಧ್ಯೆಯ ಅಂಗಡಿಯ ಬೀದಿಯಲ್ಲಿ ಪಾದಚಾರಿಗಳಾಗಿ ಬರುತ್ತಿರುವಲ್ಲಿ ಪುರ ಜನರು ತಂಡತಂಡವಾಗಿ ನೆರೆದು ಕೌತುಕಗೊಂಡು ನೋಡುತ್ತ ಅರಸುಮಕ್ಕಳು ಈ ತೆರನಾಗಿ ಹೋಗುವುದಕ್ಕೆ ಕಾರಣವನ್ನು ತಿಳಿಯದೆ ನಾನಾ ವಿಧವಾಗಿ ಮಾತ ನಾಡಿಕೊಳ್ಳುತ್ತಿದ್ದರು. ಈ ಮಾತುಗಳನ್ನು ಕೇಳುತ್ತ ಅವರು ಸಾಯಂಕಾಲದ ಹೊತ್ತಿಗೆ ಪಟ್ಟಣದ ಹೊರಗಣ ಅರಭಟ್ಟಾರಕರ ಬಸದಿಯನ್ನು ಹೊಕ್ಕು ಪ್ರದಕ್ಷಿಣ ನಮಸ್ಕಾರವನ್ನು ಮಾಡಿದರು.

---

## ಆಶ್ವಾಸ ೭—ಶರದ್ವರ್ಣನೆ

ಶ್ರೀರಾಮನು ಅಖಿಲಾರಾಧ್ಯನ ರತ್ನಭವನವನ್ನು ಬಲಗೊಂಡು ಒಳಹೊಕ್ಕು ಕೈಮುಗಿದು ದರ್ಶನಸ್ತುತಿಗೈದು ಕುಳಿತಿರಲು ಸೂರ್ಯನಸ್ತಮಿಸಿದನು. ಆಗ ರಾಮನು, ವ್ಯಸನದಿಂದ ಅಲ್ಲಿಗೆ ಬಂದ ತಾಯಿಯರೊಡನೆ ವಿನಯ ವಚನಗಳನ್ನು ನುಡಿದು ಸಮಾ

ಧಾನಪಡಿಸಿ ಅವರನ್ನು ಹಿಂದಕ್ಕೆ ಕಳುಹಿಸಿದನು. ತರುವಾಯ ತಾವೆಲ್ಲರೂ ಮಲಗಿ ನಿದ್ರೆಮಾಡಿ ಮಧ್ಯರಾತ್ರಿಯಲ್ಲೆದ್ದು ಜಿನಪತಿಯನ್ನು ಬೀಳ್ಕೊಂಡು ಬಿಲ್ಲನ್ನೂ ಅಂಬುಗಳನ್ನೂ ಹಿಡಿದು ಸೀತೆಯನ್ನು ನಡಿಸಿಕೊಂಡು ಪಟ್ಟಣದ ದಿಡ್ಡಿಯ ಬಾಗಿಲಿಂದ ಹೊರಟು ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿದರು. ಅವರ ಹಿಂದೆಯೇ ಬರುತ್ತಿರುವ ಅನೇಕ ಸಾಮಂತರೊಡನೆ ಮಾತನಾಡುತ್ತ ಅವರನ್ನು ನಿಲ್ಲುವಂತೆ ಹೇಳುತ್ತ ರಾಮನು, ಸೀತೆ ನಡೆಯಲಾರಳೆಂದು ಮೆಲ್ಲಗೆ ನಡೆಯುತ್ತಿರುವೆವೆಂದು ತಿಳಿಸಿ, ಗಂಭೀರ ತರಂಗಿಣಿಯು ಅಡ್ಡವಾಗಿ ಬರಲು, ಸಾಮಂತಾದಿಗಳನ್ನು ಅಲ್ಲಿ ನಿಲ್ಲುವಂತೊಡಂಬಡಿಸಿ ಹರಿಗೋಲಿನಲ್ಲಿ ತೊರೆಯನ್ನು ದಾಟಿ ಸೀತಾಲಕ್ಷ್ಮಣರೊಡನೆ ಹೊರಟುಹೋದನು. ಹಿಂದೆ ಬರುತ್ತಿದ್ದ ಕೆಲವರು, ಈ ಕಾರಣದಿಂದ ವೈರಾಗ್ಯಪರರಾಗಿ, ಅಲ್ಲಿಯ ಜಿನಃಗಾರದಲ್ಲಿದ್ದ ಶತಕೇತು ಗಣಧರರ ಬಳಿಯಲ್ಲಿ ದೀಕ್ಷೆಗೊಂಡರು; ಉಳಿದವರು ಸಾಕೇತಪುರವನ್ನು ಸೇರಿದರು.

ಇದನ್ನು ಕೇಳಿ ದಶರಥನು ದೀಕ್ಷೆಗೊಂಡನು; ಭರತನು ರಾಜ್ಯಸುಖ ನಿರತನಾದನು. ಅಪರಾಜಿತೆಯು ಉದಾತ್ತ ರಾಘವನ ವನಪ್ರವೇಶ ಕ್ಲೇಶಾಯಾಸವನ್ನು ನೆನೆ ನೆನೆದು ಕಣ್ಣೀರು ಸುರಿಸುತ್ತ ಗದ್ಗದ ಕಂಠೆಯಾಗಿ ಸುಕುಮಾರಿಯಾದ ಸೀತೆಯು ಆ ಕಷ್ಟವನ್ನು ಹೇಗೆ ಸೈರಿಸುವಳೆಂದು ಹಂಬಲಿಸತೊಡಗಿದಳು. ಇದನ್ನು ನೋಡಿ ಸುಮಿತ್ರೆಯೂ ಶೋಕಿಸುತ್ತಿರಲು, ಕೈಕೆಯು ಕೇಳಿ "ನನ್ನಿಂದ ಇಷ್ಟು ದುಃಸ್ಥಿತಿ ಬಂದಿತಲ್ಲವೆ! ಪತಿಯು ದೀಕ್ಷೆಗೊಂಡನು, ಅಪರಾಜಿತೆಗೆ ದುಃಖವು ಸಹಿಸದಂತಾಯಿತು, ಮಗನು ರಾಜ್ಯಸುಖವನ್ನು ಲೆಕ್ಕಿಸದೆ ಹೋದನು, ಇವೆಲ್ಲವನ್ನೂ ಸ್ತ್ರೀತ ದ ಜಡತ್ವದಿಂದ ಮಾಡಿದೆನಲ್ಲವೆ?" ಎಂದು ಹೆಚ್ಚಾಗಿ ಶೋಕಗೊಂಡು ತನ್ನನ್ನು ತಾನೇ ನಿಂದಿಸಿಕೊಂಡಳು; ಆಗ ಭರತನನ್ನು ಕರೆಯಿಸಿ ರಾಮಲಕ್ಷ್ಮಣರಿಲ್ಲದೆ ರಾಜ್ಯವು ಶೋಭಿಸದೆಂದೂ ಅವರ ತಾಯಿಯರು ಅವರ ವಿಯೋಗದಿಂದ ಪ್ರಾಣತ್ಯಾಗಮಾಡುವರೆಂದೂ ಹಾಗಾಗದಂತೆ ತಾನು ಬೇಗ ಹೋಗಿ ರಾಮಲಕ್ಷ್ಮಣರು ಮುಂದಕ್ಕೆ ಹೋಗದಂತೆ ತಡೆಯಬೇಕೆಂದೂ ತಾನೂ ಜೊತೆಯಲ್ಲಿ ಬರುವೆನೆಂದೂ ಹೇಳಿದಳು. ಅದಕ್ಕೆ ಭರತನು ಒಪ್ಪಿ ತಾಯಿಯೊಡಗೂಡಿ ಸಾಮಂತರೊಡನೆ ತೊರೆಯನ್ನು ದಾಟಿ ಅಡವಿಯಲ್ಲಿ ಜಾನಕಿಯ ಮಾರ್ಗಾಯಾಸವನ್ನು ಆರಿಸುತ್ತಿದ್ದ ರಾಮನನ್ನು ಕಂಡು ಅವನ ಕಾಲ ಮೇಲೆ ಬಿದ್ದು ಮೂರ್ಛೆಹೋಗಿ ಕೂಡಲೆ ಎಚ್ಚತ್ತು ಸೀತೆಗೂ ರಾಮನಿಗೂ ನಮಸ್ಕಾರಮಾಡಿ, ಅಕ್ರಮದಿಂದ ಬಂದ ರಾಜ್ಯವನ್ನು ತಾನೊಲ್ಲೆನೆಂದು ಹೇಳುತ್ತಿರುವಲ್ಲಿ, ಕೈಕೆಯು ಬರುತ್ತಿರುವುದನ್ನು ರಾಮನು ಕಂಡನು. ಕೂಡಲೆ ಎದ್ದು ಹೋಗಿ ರಾಮನು ಭಕ್ತಿಯಿಂದ ಕೈಕೆಯ ಪಾದಗಳಿಗೆರಗಲು ಕೈಕೆಯು ತಾನು ಮಾಡಿದ ಅನ್ಯಾಯಕ್ಕಾಗಿ ಬಹಳ ನೊಂದು ಮಗನನ್ನು ಎತ್ತಿ ಪ್ರೀತಿಸಿ ಬಹಳವಾಗಿ ಪ್ರಲಾಪಿಸಿ, ತಾನು ಮಾಡಿದ

ಅನ್ಯಾಯವನ್ನು ಸ್ಥಿರಿಸಿ ರಾಜ್ಯವನ್ನು ಕೈಕೊಳ್ಳಬೇಕೆಂದು ಕೇಳಿಕೊಂಡಳು. ಇದಕ್ಕೆ ರಾಮನು ಕೈಮುಗಿದುಕೊಂಡು "ತಾಯೇ! ಅಕಳಂಕ ಚರಿತ್ರನಾದ ಅಯ್ಯನ ನನ್ನಿಗೆ ಕುಂದನ್ನುಂಟುಮಾಡಿ ರಾಜ್ಯವನ್ನು ನಾನು ಪಡೆದರೆ ನನ್ನ ಮಾತು ಹುಸಿಯಾಗುವುದು; ಸುಳ್ಳಿಗಿಂತಲೂ ಹೆಚ್ಚಾದ ಪಾತಕವಿಲ್ಲ; ಆದುದರಿಂದ ತಾವು ಮರುಮಾತಾಡದಿರಿ" ಎಂದು ಹೇಳಿ, ಭರತನು ತನ್ನ ಮಾತಿಗೆ ಪ್ರತಿಯಾಡಿದರೆ ತನ್ನ ಆಜ್ಞೆಗೆ ಮೀರಿದವನಾಗುವನೆಂದು ನಿಲಿನುಡಿದನು. ಇದಕ್ಕೆ ಭರತನು ರಾಮನ ಆಜ್ಞೆಗೆ ಕಟ್ಟುಬಿದ್ದು, ಆತನು ಹಿಂದಿರುಗಿ ಬರುವವರೆಗೂ ತಾನು ರಾಜ್ಯವನ್ನು ಪರಿಪಾಲಿಸುವೆನೆಂದೂ ತನ್ನ ಮನಸ್ಸಾಕ್ಷಿಯಾಗಿಯೂ ರಾಜ್ಯವನ್ನಪೇಕ್ಷಿಸುವವನಲ್ಲವೆಂದೂ ಹೇಳಿದನು. ರಾಮನು ಭರತನನ್ನೂ ತಾಯಿಯನ್ನೂ ತಕ್ಕಂತೆ ಮನ್ನಿಸಿ ಅಯೋಧ್ಯೆಗೆ ಕಳುಹಿಸಿ ಸೀತೆಯೊಡನೆ ತಾನೂ ಲಕ್ಷ್ಮಣನೂ ಮುಂದಕ್ಕೆ ತೆರಳಿದರು.

ಸೀತೆಯು ದಾರಿಯಲ್ಲಿ ಕಲ್ಲುಮುಳ್ಳುಗಳನ್ನು ತುಳಿದರೂ ಬಿಸಲಿನ ಬೇಗೆಯಲ್ಲಿ ಬಳಲಿದರೂ ಪತಿಯು ತನ್ನೊಡನೆ ಇರುವನಲ್ಲಾ ಎಂಬ ಸಂತೋಷದಿಂದ ಆ ಬಾಧೆಗಳನ್ನು ಲಕ್ಷ್ಯಮಾಡದೆ ನಡೆದಳು. ಅವರು ಅನೇಕ ದೇಶಗಳನ್ನೂ ಗ್ರಾಮಗಳನ್ನೂ ದಾಟಿ ಚಿತ್ರಕೂಟ ಪರ್ವತವನ್ನು ಬಲಕ್ಕೆ ಬಿಟ್ಟು ಅವಂತೀದೇಶದಲ್ಲಿ ಬರುತ್ತ ಒಂದು ಆಲದ ಮರದ ಕೆಳಗೆ ವಿಶ್ರಮಿಸಿಕೊಂಡು ಸುತ್ತಲೂ ನೋಡುವಲ್ಲಿ, ಹಣ್ಣುಗಳ ಭಾರದಿಂದ ಜಗ್ಗುತ್ತಿರುವ ಫಲವೃಕ್ಷಗಳುಳ್ಳ ತೋಟಗಳು ಕಾಯುವವರಾರೂ ಇಲ್ಲದೆ ಆ ಪ್ರಾಂತವೆಲ್ಲ ನಿರ್ಜನಪ್ರದೇಶವಾಗಿರುವಂತೆ ಕಂಡುಬಂದಿತು. ದಾರಿಹೋಕನೊಬ್ಬನು ಬಂದು ರಾಮಲಕ್ಷ್ಮಣರಿಗೆರಗಿ ಭಯಪಟ್ಟು ನಿಂತಿರಲು, ಲಕ್ಷ್ಮಣನು ಅಂಜದಿರೆಂದು ಹೇಳಿ ಆ ನಾಡು ಏಕೆ ಪಾಳಾಯಿತೆಂದು ಅವನನ್ನು ಕೇಳಿದನು. ಅದಕ್ಕವನು ಕೈಮುಗಿದುಕೊಂಡು "ಮಹಾಸ್ವಾಮಿ! ಇದು ಅವಂತೀದೇಶವು; ಇದರಲ್ಲಿಯ ಉಜ್ಜಯಿನಿಯೆಂಬ ಪಟ್ಟಣವನ್ನಾಳುವ ಸಿಂಹೋದರನೆಂಬ ಪರಾಕ್ರಮಶಾಲಿಯು, ತನ್ನ ಸಾಮಂತನಾದ ವಜ್ರಕರ್ಣನು ಸಕಲಜ್ಞನಿಗಲ್ಲದೆ ಮತ್ತಾರಿಗೂ ಕೈಮುಗಿಯೆನೆಂಬ ಪ್ರತಿಜ್ಞೆಯಿಂದ ತನಗೆ ಸುಳ್ಳುಮರ್ಯಾದೆಯನ್ನು ಮಾಡುತ್ತಿರುವುದನ್ನು ಕರ್ಣಪರಂಪರೆಯಾಗಿ ಕೇಳಿ ಮುನಿದು, ಅವನಿದ್ದ ಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಅವನ ಭಯಕ್ಕಾಗಿ ಈ ದೇಶವೆಲ್ಲವೂ ಹಾಳಾಗಿಹೋಯಿತು. ವಜ್ರಕರ್ಣನಿರುವ ದಶಪುರವು ಇಲ್ಲಿಗೆ ಸಮೀಪದಲ್ಲಿಯೇ ಇರುವುದು" ಎಂದು ಹೇಳಿ ಅಪ್ಪಣೆಪಡೆದು ಹೊರಟುಹೋದನು. ರಾಮಲಕ್ಷ್ಮಣರು ವಜ್ರಕರ್ಣನ ಭಕ್ತಿಗೆ ಮೆಚ್ಚಿ ದುರ್ಮತಿಯಾದ ಸಿಂಹೋದರನನ್ನು ದಂಡಿಸುವುದು ತಮ್ಮ ಕರ್ತವ್ಯವೆಂದಾಲೋಚಿಸಿ ದಶಪುರವನ್ನು ಸೇರಿದರು. ವಜ್ರಕರ್ಣನು ಇವರನ್ನು ತನ್ನ ಅರಮನೆಯಿಂದ ನೋಡಿ ಇವರು ಕಾರಣಪುರುಷರೆಂದರಿತು ಬಲನಾರಾಯಣರೇ ಇರಬೇಕೆಂದು

ನಿಶ್ಚಯಿಸುತ್ತಿರುವಲ್ಲಿ ಅವರು ಜಿನೇಂದ್ರಮಂದಿರವನ್ನು ಹೊಕ್ಕು ಪ್ರದಕ್ಷಿಣಪೂರ್ವಕ ವಾಗಿ ನಮಸ್ಕಾರವನ್ನು ಮಾಡಿ ಜಿನೇಶ್ವರನ ದರ್ಶನಸ್ತುತಿ ಮಾಡಿದರು. ಅಷ್ಟರಲ್ಲಿ ವಜ್ರಕರ್ಣನು ಕಳುಹಿಸಿದ ಚಾರರು ಆಹಾರವಸ್ತುಗಳೊಡನೆ ಬಂದು, ಶತ್ರು ಸೈನ್ಯವು ಪಟ್ಟಣವನ್ನು ಮುತ್ತಿರುವುದರಿಂದ ತಾನು ಇಲ್ಲಿಗೆ ಬರುವುದಕ್ಕೂ ತಮ್ಮನ್ನು ಕರೆಯಿಸಿಕೊಳ್ಳುವುದಕ್ಕೂ ತಿಳಿಯದವನಾಗಿ ದೊರೆಯು ನಮ್ಮನ್ನು ಕಳುಹಿಸಿರುವ ನೆಂದು ತಿಳಿಸಿ, ಅರ್ಘ್ಯಪಾದ್ಯಗಳನ್ನು ಕೊಟ್ಟು ಸತ್ಕರಿಸಲು, ರಾಮಲಕ್ಷ್ಮಣರು ಊಟಮಾಡಿ ಗಂಧ ತಾಂಬೂಲಗಳನ್ನು ಸ್ವೀಕರಿಸಿ, ಬಂದಿದ್ದವರನ್ನು ಹಿಂದಕ್ಕೆ ಕಳುಹಿಸಿದರು.

ದಾಶರಥಿಯು ಲಕ್ಷ್ಮಣನನ್ನು ನೋಡಿ, ಅನಿಮಿತ್ತವಾಗಿ ವಜ್ರಕರ್ಣನು ತಮಗೆ ಮರ್ಯಾದೆಮಾಡಿದುದರಿಂದ ಅವನು ಮಾನ್ಯನೆಂದೂ, ಅವನ ಹಗೆ ಯಾದ ಸಿಂಹೋದರನನ್ನು ದಂಡಿಸಬೇಕೆಂದೂ ತಿಳಿಸಲು, ಕೂಡಲೆ ಲಕ್ಷ್ಮಣನು ಹೊರಟು ಸಿಂಹೋದರನ ಅರಮನೆಯ ಬಾಗಿಲಿಗೆ ಬಂದು "ನೀನು ಜಿನೇಶ್ವರ ನಲ್ಲಿರುವ ಮಾತ್ಸರ್ಯವನ್ನು ತೊರೆದು ಜಿನಭಕ್ತನಾದ ವಜ್ರಕರ್ಣನನ್ನು ಮನ್ನಿಸ ತಕ್ಕದ್ದು" ಎಂಬ ಈ ನಾಡಿಗೊಡೆಯನಾದ ಭರತನ ಆಜ್ಞೆಯನ್ನು ದೊರೆಗೆ ತಿಳಿ ಸೆಂದು ಬಾಗಿಲ ಕಾಯುವವನಿಗೆ ಹೇಳಿದನು. ಅವನು ಹಾಗೆ ತಿಳಿಸಲು, ಸಿಂಹೋ ದರನು ಸಿಂಹದಂತೆ ಮುನಿದು ಭರತನನ್ನು ಹಿಯ್ಯಾಳಿಸಿ ಕತ್ತಿಯನ್ನು ಹಿರಿದನು. ಅದಕ್ಕೆ ಲಕ್ಷ್ಮಣನು ಕೋಪಗೊಂಡು ದೊರೆಯ ಪರಿವಾರವನ್ನು ನಾಶಮಾಡಲು, ಸಿಂಹೋದರನು ಸಿಂಹದಂತೆ ಲಕ್ಷ್ಮಣನ ಮೇಲಕ್ಕೆ ಹಾರಿದನು. ಆಗ ಲಕ್ಷ್ಮಣನು ಬಾಲಕನನ್ನು ಹಿಡಿಯುವಂತೆ ಅವನನ್ನು ಹಿಡಿದು ಎಳೆದುಕೊಂಡು ಹೋಗಲು ಮಾರ್ಬಲವು ಅವನ ಮೇಲೆ ಬಿದ್ದಿತು. ಅದನ್ನೆಲ್ಲ ನಾಶಮಾಡಿ ಸಿಂಹೋದರನನ್ನು ಸೆರೆಹಿಡಿದುಕೊಂಡು ಆತನು ರಾಮನ ಬಳಿಗೆ ಬಂದನು. ಲಕ್ಷ್ಮಣನು ಬರಿಗೈಯಲ್ಲಿ ಮಾಡಿದ ಸಾಹಸವನ್ನು ವಜ್ರಕರ್ಣನೂ ಪುರಜನರೂ ನೋಡಿ ಆಶ್ಚರ್ಯಪಟ್ಟರು. ಸಿಂಹೋದರನು ಇವರು ಬಲಾಚ್ಯುತರೆಂದರಿತು ರಾಮಲಕ್ಷ್ಮಣರಿಗೆ ಭಕ್ತಿಯಿಂ ದೆರಗಲು, ರಾಮನು ಅವನ ಭಯವನ್ನು ಕಳೆದು, ವಜ್ರಕರ್ಣನಲ್ಲಿ ಪುನಃ ಸ್ನೇಹ ವನ್ನು ಮಾಡಿ ಬಾಳುವಂತೆ ಅವನಿಗೆ ಹೇಳಿದನು. ಅದಕ್ಕೆ ಅವನು ಈ ಪ್ರಪಂಚದ ಸೌಖ್ಯವನ್ನೊಲ್ಲೆನೆಂದೂ ತಪಕ್ಕೆ ನಿಲ್ಲುವೆನೆಂದೂ ತಿಳಿಸಿದನು.

ಇತ್ತ ಕಡೆ, ವಜ್ರಕರ್ಣನು ಮಿತಪರಿವಾರದೊಡನೆ ಬಸದಿಯನ್ನು ಹೊಕ್ಕು ಬಲಗೊಂಡು ದರ್ಶನಸ್ತುತಿಮಾಡಿ ರಾಮಲಕ್ಷ್ಮಣರಿಗೆರಗಿ ಉಚಿತಸ್ಥಾನದಲ್ಲಿ ಕುಳಿತು ಕೊಂಡನು. ರಾಮದೇವನು ವಜ್ರಕರ್ಣನ ನಿಜವ್ರತ ಪರಿಪಾಲನೆಗೆ ಮೆಚ್ಚಿ ತನಗೆ ಬೇಕಾದುದನ್ನು ಬೇಡಿಕೊಳ್ಳೆಂದು ಹೇಳಲು, ಸಿಂಹೋದರನಿಗೆ ಕರುಣೆಯನ್ನು ತೋರಬೇಕೆಂದು ಅವನು ಕೇಳಿಕೊಂಡನು. ಇದನ್ನು ನೋಡಿ ರಾಮನು ಅವನ

ಸುಗುಣಕ್ಕೆ ಮೆಚ್ಚಿ ಸಿಂಹೋದರನಿಗೂ ವಜ್ರಕರ್ಣನಿಗೂ ಪರಸ್ಪರ ಸ್ನೇಹವನ್ನುಂಟು ಮಾಡಿ ರಾಜ್ಯವನ್ನು ಭಾಗಮಾಡಿ ಕೊಟ್ಟನು. ವಜ್ರಕರ್ಣನು ರಾಮಲಕ್ಷ್ಮಣರನ್ನು ಬಹಳವಾಗಿ ಸತ್ಕರಿಸಿ ತನ್ನ ಎಂಟುಮಂದಿ ಹೆಣ್ಣುಮಕ್ಕಳನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆಮಾಡಿದನು. ಉಳಿದ ರಾಜರು ತಮ್ಮ ಮುನ್ನೂರುಮಂದಿ ಕನ್ನಿಕೆಯರನ್ನು ಲಕ್ಷ್ಮಣನಿಗೆ ಮದುವೆಮಾಡಿ ಕೊಟ್ಟರು. ರಾಮಲಕ್ಷ್ಮಣರು ಸಿಂಹೋದರನನ್ನು ಉಜ್ಜಯಿನಿಗೆ ಕಳುಹಿ ದಶಪುರದಲ್ಲಿ ಕೆಲವು ದಿನವಿರುವಲ್ಲಿ ಬೇಸಗೆ ಬಂದಿತು.

ಆಗ ರಾಮಲಕ್ಷ್ಮಣರು ಸೀತಾಸಮೇತರಾಗಿ ದಕ್ಷಿಣ ದಿಕ್ಕನ್ನು ಹಿಡಿದು ಒಂದು ದೊಡ್ಡ ಕಾಡುದಾರಿಯಲ್ಲಿ ಹೊರಟರು. ಬಿಸಿಲಿನ ಬೇಗೆಯು ಹೆಚ್ಚಿ ಸೀತೆಯು ಬಳಲಿ ಬಾಯಾರಿ ಒಂದು ಆಲದ ಮರದ ಕೆಳಗೆ ನಿಂತಿರಲು ಲಕ್ಷ್ಮಣನು ನೀರನ್ನು ತರುವ ನಿಮಿತ್ತವಾಗಿ ಮುಂದಿದ್ದ ಒಂದು ವನಕ್ಕೆ ಹೋಗಿ ಅಲ್ಲಿದ್ದ ಕೊಳ ದಲ್ಲಿ ನೀರನ್ನು ಮೊಗೆದುಕೊಂಡು ಬರುತ್ತಿರುವಲ್ಲಿ, ಅವನೆದುರಿಗೆ ಕಾಮನ ಪ್ರತಿ ರೂಪೆಂಬಂತೆ ಬರುತ್ತ ಅವನನ್ನು ನೋಡಿ ಮೋಹಗೊಂಡ ಗಂಡುವೇಷ ಹಾಕಿ ಕೊಂಡಿರುವ ಒಬ್ಬ ಬಾಲೆಯನ್ನು ಕಂಡನು. ಅವಳ ವೃತ್ತಾಂತವನ್ನು ವಿಚಾರಿ ಸಲು, ಆ ಪುರವನ್ನಾಳುತ್ತಿದ್ದ ಆಕೆಯ ತಂದೆಯಾದ ವಾಲಖಿಲ್ಯನನ್ನು ಮ್ಲೇಚ್ಛ ರಾಜನೊಬ್ಬನು ಸೆರೆ ಹಿಡಿದುಕೊಂಡು ಹೋಗಿರುವನೆಂತಲೂ ಅದನ್ನು ಅವಂತೀ ಪುರದೊಡೆಯನಾದ ಸಿಂಹೋದರನು ಕೇಳಿ, ವಾಲಖಿಲ್ಯನಿಗೆ ಗಂಡುಮಕ್ಕಳಿಲ್ಲದುದ ರಿಂದ, ಗರ್ಭಿಣಿಯಾಗಿರುವ ವಾಲಖಿಲ್ಯನ ರಾಣಿಯು ಗಂಡುಮಗುವನ್ನು ಹೆತ್ತರೆ ಅವನೇ ನೆಲಕ್ಕೊಡೆಯನಾಗಬಹುದೆಂದೂ ಇಲ್ಲವಿದ್ದರೆ ತಾನು ರಾಜ್ಯವನ್ನು ಆಕ್ರ ಮಿಸಿಕೊಳ್ಳುವೆನೆಂದೂ ಹೇಳಿ ಹೋಗಲು, ರಾಣಿಯು ಹೆಣ್ಣುಮಗುವನ್ನು ಹೆತ್ತದ್ದರಿಂದ ವಾಲಖಿಲ್ಯನ ಮಂತ್ರಿಯು ಉಪಾಯಮಾಡಿ ಆ ಮಗುವನ್ನು ಗಂಡೆಂದು ಪ್ರಸಿದ್ಧಿಪಡಿಸಿ ನಡೆಯಿಸುತ್ತಿರುವನೆಂದೂ, ಆಕೆಯನ್ನು ಹೆಣ್ಣೆಂದು ತಿಳಿದು ಕೈಹಿಡಿದವನೇ ವಾಲ ಖಿಲ್ಯನನ್ನು ಬಂಧನದಿಂದ ಬಿಡಿಸುವನೆಂದು ಒಬ್ಬ ದಿವ್ಯಜ್ಞಾನಿಯು ಹೇಳಿರುವ ನೆಂದೂ ತಿಳಿಯಬಂದಿತು. ಲಕ್ಷ್ಮಣನು ಇದನ್ನು ಕೇಳಿ ಆ ಹುಡುಗಿಯನ್ನೂ ಆಕೆಯ ತಾಯಿಯನ್ನೂ ಸಮಾಧಾನಗೊಳಿಸಿ, ವಾಲಖಿಲ್ಯನನ್ನು ಸೆರೆಯಿಂದ ಬಿಡಿಸಿಕೊಂಡು ಬಂದು ಆ ಕನ್ಯೆಯನ್ನು ಮದುವೆಮಾಡಿಕೊಳ್ಳುವೆನೆಂದು ಸೀತಾದೇವಿಗೆ ತಿಳಿಸಿ ಹೊರಟು, ಆ ಪ್ರಬಲರಾದ ಬೇಡರ ಸೈನ್ಯವನ್ನು ನಿರ್ಮೂಲಮಾಡಲು, ಅವರೊಡೆಯ ನಾದ ರೌದ್ರಭೂತಿಯು ಭಯಗೊಂಡು ಲಕ್ಷ್ಮಣನಿಗೆ ಶರಣಾಗತನಾದನು. ಆಗ ವಾಲಖಿಲ್ಯನನ್ನು ಸೆರೆಯಿಂದ ಬಿಡಿಸಿ ಕರೆತರುವಂತೆ ಅವನಿಗೆ ಹೇಳಲು ಅವನು ಮಹಾ ಪ್ರಸಾದವೆಂದು ಹೇಳಿ ಕೂಡಲೆ ವಾಲಖಿಲ್ಯನನ್ನು ಕರೆತಂದನು. ವಾಲಖಿಲ್ಯನು ರಾಮಲಕ್ಷ್ಮಣರಿಗೆ ಭಕ್ತಿಯಿಂದೆರಗಿ ಅವರನ್ನು ಸಹಸ್ರಮುಖದಿಂದ ಸ್ತುತಿಸಿ ಅವರೊಡನೆ ತನ್ನ ರಾಜ್ಯವನ್ನು ಸೇರಿ ಶುಭಮುಹೂರ್ತದಲ್ಲಿ ತನ್ನ ಮಗಳನ್ನು ಲಕ್ಷ್ಮಣನಿಗೆ ಬಹಳ ವೈಭವದಿಂದ ಮದುವೆಮಾಡಿಕೊಟ್ಟು ಸುಖವಾಗಿ ರಾಜ್ಯಭಾರಮಾಡುತ್ತಿದ್ದನು.

ಅಲ್ಲಿಂದ ರಾಮಲಕ್ಷ್ಮಣರು ಸೀತೆಯೊಡನೆ ದಕ್ಷಿಣಾಭಿಮುಖವಾಗಿ ಹೊರಟು ವಿಂಧ್ಯಾಚಲದ ಬಳಿಗೆ ಬಂದರು. ಆ ವಿಂಧ್ಯಾಟವಿಯಲ್ಲಿದ್ದ ಕ್ರೀಡಾಪೂತನೆಂಬ ಯಕ್ಷರಾಜನು ಇವರ ಪ್ರಭಾವವನ್ನರಿತು ಇವರಿಗಾಗಿ ಆ ಪ್ರದೇಶದಲ್ಲಿ ಅಳಕಾ ಪುರಕ್ಕೆ ಸಮನಾದ ಪಟ್ಟಣವೊಂದನ್ನು ಕೂಡಲೆ ನಿರ್ಮಾಣಮಾಡಿ ತನ್ನ ಪರಿವಾರದೊಡನೆ ರಾಮಲಕ್ಷ್ಮಣರನ್ನು ಕಂಡು ಪೂಜಿಸಿ, ಮಳೆಗಾಲವು ಸಮೀಪಿಸಿದುದರಿಂದ ತಾನು ನಿರ್ಮಾಣಮಾಡಿರುವ ಪಟ್ಟಣದಲ್ಲಿ ಮಳೆಗಾಲ ಕಳೆಯುವವರೆಗೂ ವಾಸವಾಗಿರಬೇಕೆಂದು ಪ್ರಾರ್ಥಿಸಿ ರಾಮನಿಗೆ ಆ ರಾಜ್ಯಾಭಿಷೇಕವನ್ನು ಮಾಡಿದನು. ಸೀತಾ ರಾಮ ಲಕ್ಷ್ಮಣರು ಆ ಪಟ್ಟಣದಲ್ಲಿದ್ದು ಮಳೆಗಾಲವನ್ನು ಕಳೆಯಲು, ಶರತ್ಕಾಲವು ಬಂದೊದಗಿತು.

---

## ಆಶ್ವಾಸ ೮—ಚಾರಣಯುಗಳ ದರ್ಶನ

ರಾಮ ಲಕ್ಷ್ಮಣ ಸೀತಾದೇವಿಯರು ಯಕ್ಷನಿರ್ಮಿತವಾದ ಪುರದಿಂದ ಹೊರಡುವಾಗ ಯಕ್ಷನು ಅವರಿಗೆ ಅಮೂಲ್ಯವಾದ ಆಭರಣಗಳನ್ನು ಕೊಟ್ಟು ಓಲಗಿಸಿ, ಎಡರೊದವಿದಾಗ ತನ್ನನ್ನು ನೆನೆಯುವಂತೆ ಹೇಳಿ, ಆ ಪುರವನ್ನದೃಶ್ಯಮಾಡಿ ತನ್ನರಮನೆಗೆ ಹೋದನು. ರಾಮಲಕ್ಷ್ಮಣರು ನಿತ್ಯ ಪ್ರಯಾಣಗಳಿಂದ ವಿಜಯಪುರವೆಂಬ ಸ್ಥಳಕ್ಕೆ ಬಂದು ಅಲ್ಲಿಯ ಉದ್ಯಾನವನದಲ್ಲಿ ಸೀತೆಯೊಡನೆ ವಿಶ್ರಮಿಸಿಕೊಂಡರು. ಆ ಪುರದರಸನ ಮಗಳಾದ ವನಮಾಲೆಯು ಹಿಂದೆ ಲಕ್ಷ್ಮಣನ ವರ್ಣನೆಯನ್ನು ಕೇಳಿ ಆತನನ್ನಲ್ಲದೆ ಮತ್ತಾರನ್ನೂ ವರಿಸೆನೆಂದು ಶಪಥಮಾಡಿ ಆತನು ದೊರೆಯದುದರಿಂದ ಆ ದಿನ ರಾತ್ರಿ ಅಕಸ್ಮಾತ್ತಾಗಿ ಅದೇ ವನಕ್ಕೆ ಬಂದು ಒಂದು ಬಳ್ಳಿಯನ್ನು ಕೊರಳಿಗೆ ಸುತ್ತಿಕೊಂಡು ಪ್ರಾಣವನ್ನು ಬಿಡಬೇಕೆಂದಿದ್ದಳು. ಆ ಹೊತ್ತಿಗೆ ಸರಿಯಾಗಿ ಲಕ್ಷ್ಮಣನು ಅದೇ ಸ್ಥಳಕ್ಕೆ ಬಂದು ಅದನ್ನು ನೋಡಿ ಆ ಬಾಲೆಯನ್ನು ಬಿಡಿಸಿ ಅವಳನ್ನು ಸೀತಾರಾಮರಿದ್ದೆಡೆಗೆ ಕರೆತಂದನು. ಈ ವಾರ್ತೆಯು ಆ ಪುರದ ದೊರೆಯಾದ ಪೃಥ್ವೀಧರನಿಗೆ ತಿಳಿದಕೂಡಲೆ ಆತನು ಬಹಳ ಸಂಭ್ರಮದಿಂದ ಅಲ್ಲಿಗೆ ಬಂದು ಅವರನ್ನು ಬಹಳ ಮರ್ಯಾದೆಯಿಂದ ತನ್ನರಮನೆಗೆ ಕರೆದುಕೊಂಡು ಹೋಗಿ ಸತ್ಕರಿಸಿ ಶುಭ ಮುಹೂರ್ತದಲ್ಲಿ ತನ್ನ ಮಗಳನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆಮಾಡಿದನು.

ಈ ಸಮಯದಲ್ಲಿ ಸಂದ್ಯಾವರ್ತಪುರದೊಡೆಯನಾದ ಅತಿವೀರ್ಯನ ದೂತನೊಬ್ಬನು ಪೃಥ್ವೀಧರನ ಬಳಿಗೆ ಬಂದು, ತನ್ನೊಡೆಯನು ಅನೇಕ ಮಂದಿ ರಾಜರೊಡನೆ ಅನೇಕಾಕ್ಷೌಹಿಣೀ ಬಲ ಸಮೇತನಾಗಿ ಭರತನ ಮೇಲೆ ದಂಡೆತ್ತಿ ಹೋಗಬೇಕೆಂದಿರುವನೆಂದೂ ಪೃಥ್ವೀಧರನೂ ತನ್ನ ಸೈನ್ಯದೊಡನೆ ಆತನನ್ನು ಸೇರ

ಬೇಕೆಂಬ ರಾಜಾಜ್ಞೆಯನ್ನು ತಂದಿರುವೆನೆಂದೂ ತಿಳಿಸಿದನು. ಇದನ್ನು ಕೇಳಿ ಲಕ್ಷ್ಮಣನು ಬಹಳ ಕೋಪಗೊಂಡು ಭರತನ ವೃತ್ತಾಂತವೇನೆಂದು ಕೇಳಲು, ಆತನು ಚತುರಂಗಬಲ ಸಮೇತನಾಗಿ ನಂದ್ಯಾವರ್ತಪುರಕ್ಕೆ ಹೊರಟಿರುವನೆಂದೂ ಕನಕನೂ ಸಿಂಹೋದರನೂ ಸೇನಾಸಮೇತರಾಗಿ ಅವನನ್ನು ಸೇರಿರುವರೆಂದೂ ಹೇಳಿದನು. ಇದನ್ನು ಕೇಳಿ ಪೃಥ್ವೀಧರನು ಅತಿವೀರ್ಯನ ದೂತನನ್ನು ಮರ್ಯಾದೆ ಮಾಡಿ ಕಳುಹಿಸಿ ತಾನೂ ರಾಮಲಕ್ಷ್ಮಣರೂ ರಥವನ್ನೇರಿ ನಂದ್ಯಾವರ್ತ ನಗರ ವನ್ನು ಸೇರಿದರು. ಲಕ್ಷ್ಮಣನು ಅತಿವೀರ್ಯನ ಅರಮನೆಯ ಬಾಗಿಲಿಗೆ ಹೋಗಿ ದೊರೆಗೆ ಹೇಳಿಕಳುಹಿಸಿ ಅವನ ಅನುಮತಿಯ ಮೇರೆಗೆ ಒಳಹೊಕ್ಕು ಅವನಿಗೆ ನಮಸ್ಕರಿಸದೆ ನಿಂತಿರಲು, ದೊರೆಯು ಕೋಪಗೊಂಡು ಭರತನನ್ನು ಹಿಯ್ಯಾಳಿಸಿ ಮಾತನಾಡಿದನು. ಅದಕ್ಕೆ ಲಕ್ಷ್ಮಣನು ಕಿಡಿಕಿಡಿಯಾಗಿ ದೊರೆಯಮೇಲೆ ಬಿದ್ದು ಅವನನ್ನು ಚೆನ್ನಾಗಿ ಹೊಡೆದನು. ಅವನಿಗೆ ಸಹಾಯವಾಗಿ ಬಂದಿದ್ದ ಇತರ ರಾಜರು ಲಕ್ಷ್ಮಣನ ಪರಾಕ್ರಮವನ್ನು ನೋಡಿ ಭೀತರಾದರು. ಲಕ್ಷ್ಮಣನು ಅತಿವೀರ್ಯನ ನ್ನೆಳೆದುಕೊಂಡು ಬಂದು ಭರತನಿಗೊಪ್ಪಿಸಿದನು. ಅತಿವೀರ್ಯನು ತನ್ನ ರಾಜ್ಯವನ್ನು ರಾಮ ಲಕ್ಷ್ಮಣರಿಗೊಪ್ಪಿಸಿ ಜಿನದೀಕ್ಷೆಗೊಂಡನು. ರಾಮನು ಅತಿವೀರ್ಯನ ಮಗ ನಾದ ವಿಜಯರಥನಿಗೆ ಆ ರಾಜ್ಯದ ಪಟ್ಟವನ್ನು ಕಟ್ಟಲು ಆತನು ತನ್ನ ತಂಗಿ ಯನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡಿದನು.

ಅನಂತರ ಅವರು ಅಲ್ಲಿಂದ ಹೊರಟು ಕ್ಷೇಮಾಂಜಲಿಪುರಕ್ಕೆ ಬಂದು ಊರ ಹೊರಗಣ ಉದ್ಯಾನವನದಲ್ಲಿ ರಾಮನೂ ಸೀತೆಯೂ ವಿಶ್ರಮಿಸಿಕೊಂಡಿರುವಲ್ಲಿ ಲಕ್ಷ್ಮ ಣನು ಪಟ್ಟಣವನ್ನು ನೋಡುವುದಕ್ಕಾಗಿ ರಾಜಬೀದಿಯಲ್ಲಿ ಹೊರಟನು. ಒಂದೆಡೆಯಲ್ಲಿ ಜನರು ಗುಂಪುಕೂಡಿ, ಜಿತಪದ್ಮೆಯ ವಿಷಯವಾಗಿ ಮಾತನಾಡುತ್ತಿದ್ದರು. ಆಕೆಯು ಯಾರೆಂದು ಲಕ್ಷ್ಮಣನು ಅವರನ್ನು ಕೇಳಲು, ಆಕೆಯು ಅಲ್ಲಿಯ ದೊರೆ ಯಾದ ಶತ್ರುಂದಮನ ಮಗಳೆಂದೂ ಆಕೆಯು ಹುಟ್ಟಿದಾಗ ಶಸ್ತ್ರಶಾಲೆಯಲ್ಲಿ ಒಂದು ಶಕ್ತಿ ಹುಟ್ಟಿತೆಂದೂ, ಆಗ ಆಕಾಶವಾಣಿಯು "ಶತ್ರುಂದಮನು ಈ ಶಕ್ತಿ ಯಿಂದಿಟ್ಟರೆ ಸಂಚಲಿಸದೆ ಅದನ್ನು ನಿರ್ಭಯದಿಂದ ಹಿಡಿದ ಮಹಾಸತ್ವನು ಈ ಕನ್ಯೆಗೂ ದಕ್ಷಿಣ ಭರತ ದೇಶಕ್ಕೂ ರಮಣನಾಗುವನು" ಎಂದು ನುಡಿಯಿತೆಂದೂ, ದೊರೆಯು ಈರೀತಿಯಿಂದಲ್ಲದೆ ಮಗಳಿಗೆ ಮದುವೆಮಾಡೆನೆಂದು ನಿಶ್ಚಯಿಸಲು ಅನೇಕ ರಾಜಕುಮಾರರು ಬಂದು ಶಕ್ತಿಪ್ರಹಾರದಿಂದ ಯಮಪುರವನ್ನು ಸೇರಿದ ರೆಂದೂ ಒಬ್ಬ ಮುದುಕನು ಹೇಳಿದನು. ಲಕ್ಷ್ಮಣನು ಇದನ್ನು ಕೇಳಿ ಅರಮನೆಯ ಬಳಿಗೆ ಬಂದು ಕನ್ಯಾರ್ಥಿಯಾಗಿ ರಾಜಕುಮಾರನೊಬ್ಬನು ಬಂದಿರುವನೆಂದು ಹೇಳಿಕಳುಹಿಸಿ ಅಪ್ಪಣೆಪಡೆದು ರಾಜಸಭೆಯನ್ನು ಹೊಕ್ಕು, ಕನ್ಯಾಮಣಿಗೆ ಮನಸೋತು ರಾಜನಿಗೆರಗದೆ ಮಣಿಪೀಠದಮೇಲೆ ಕುಳಿತುಕೊಂಡನು. ದೊರೆಯು

ಈತನ ಸುಂದರಾಕಾರವನ್ನು ನೋಡಿ, ಶಕ್ತಿಯಿಂದಿಡುವುದಕ್ಕೆ ಇಷ್ಟವಿಲ್ಲದಿರಲು, ಲಕ್ಷ್ಮಣನು ಆ ಶಕ್ತಿಯ ಬಲವನ್ನು ನೋಡುವೆನೆಂದು ಹೇಳಿ ಅದನ್ನು ತರಿಸಿದನು. ಆಗ ಅದನ್ನು ಲಕ್ಷ್ಮಣನಮೇಲೆ ಪ್ರಯೋಗಿಸಲು, ಕಡೆಗಾಲದ ಸಿಡಿಲಂತೆ ಕಿಡಿಯನ್ನು ಕಾರುತ್ತ ಬರುವ ಆ ಶಕ್ತಿಯನ್ನು ಲಕ್ಷ್ಮಣನು ತನ್ನ ಎಡಗೈಯಿಂದ ಬಲಗುಂದಿಸಿದನು. ಅದನ್ನು ನೋಡಿ ಶತ್ರುಂದಮನು ಭಯಪಟ್ಟು ಲಕ್ಷ್ಮಣನಿಗೆ ನಮಸ್ಕಾರ ಮಾಡಿ, ಕ್ಷಮಿಸಬೇಕೆಂದು ಬೇಡಿಕೊಂಡು, ಸೀತಾರಾಮರಿದ್ದಲ್ಲಿಗೆ ತನ್ನ ಪರಿವಾರದೊಡನೆ ಹೋಗಿ ಅವರನ್ನು ಪೂಜಿಸಿ ತನ್ನರಮನೆಗೆ ಕರೆದುಕೊಂಡು ಬಂದು ಶುಭ ಮುಹೂರ್ತದಲ್ಲಿ ಲಕ್ಷ್ಮಣನಿಗೆ ಜಿತಪದ್ಮೆಯನ್ನು ಕೊಟ್ಟು ವೈಭವದಿಂದ ಮದುವೆ ಮಾಡಿದನು.

ಅಲ್ಲಿ ಕೆಲವು ದಿನಗಳಿದ್ದು ಮೂವರೂ ಪೂರ್ವಾಭಿಮುಖವಾಗಿ ಪ್ರಯಾಣ ಹೊರಟು ವಂಶಸ್ಥಲವೆಂಬ ಪಟ್ಟಣವನ್ನು ಸೇರಿದರು. ಆ ಸಮೀಪದಲ್ಲಿದ್ದ ಬೆಟ್ಟದ ಕಡೆಯಿಂದ ಸಂಜೆಯ ಹೊತ್ತಿನಲ್ಲಿ ದೆಸೆಗೆಟ್ಟೋಡುವ ಪುರಜನರನ್ನು ನೋಡಿ ರಘು ವೀರನು ಇದೇನು ಕಾರಣವೆಂದು ಕೇಳಲು, ಮೂರು ದಿನಗಳಿಂದ ರಾತ್ರಿಯ ವೇಳೆ ಆ ಬೆಟ್ಟದ ಶಿಖರದಲ್ಲಿ ಅತಿ ಭಯಂಕರವಾದ ಸಿಡಿಲ ದನಿಯಾಗುತ್ತಿರುವುದೆಂದೂ ಇದಕ್ಕಂಜಿ ಪಟ್ಟಣದಲ್ಲಿರುವವರೆಲ್ಲರೂ ಓಡಿಹೋಗುತ್ತಿರುವರೆಂದೂ ಹೇಳಿದರು. ಈ ಶಬ್ದವನ್ನು ಮಾಡುವರು ಯಾರಿರಬಹುದೆಂದು ತಿಳಿಯುವುದಕ್ಕಾಗಿ ಇವರು ಬೆಟ್ಟವನ್ನು ಹತ್ತಿದರು. ಅಲ್ಲಿ ನಿಶ್ಚಲನಾಗಿ ತಪಸ್ಸುಮಾಡುತ್ತಿದ್ದ ಋಷಿಯೊಬ್ಬನನ್ನು ಕಂಡು ಅವನ ಬಳಿಗೆ ಬರಲು, ಅವನನ್ನು ಸುತ್ತಿ ಮುತ್ತಿದ್ದ ಹಾವುಗಳೂ ಚೇಳು ಗಳೂ ರಾಮಲಕ್ಷ್ಮಣರ ಪುಣ್ಯಪ್ರಭಾವದಿಂದ ಮಾಯವಾದುವು. ರಾತ್ರಿಯಾಗುತ್ತಲೆ ಬಹಳ ಭಯಂಕರವಾದ ಭೂತ ಭೇತಾಳಗಳೂ ಸಿಂಹ ಶರಭ ಶಾರ್ದೂಲ ಗಳೂ ಮಿಂಚು ಗುಡುಗಿನೊಡನೆ ಸುರಿಯುವ ಬಿಸುನೆತ್ತರ ಮಳೆಯೂ ಕಾಣಿಸಿ ಕೊಂಡುವು. ಆಗ ರಾಮಲಕ್ಷ್ಮಣರು ಆ ಮುನಿಗೆ ಈ ರೀತಿಯಾಗಿ ತೊಂದರೆ ಕೊಡುತ್ತಿರುವವನ ಬಲವನ್ನು ಮುರಿಯಬೇಕೆಂದು ತಮ್ಮ ಧನುಸ್ಸುಗಳನ್ನೇರಿಸಿ ಟಂಕಾರವನ್ನು ಮಾಡಲು-ಅಗ್ನಿಪ್ರಭನೆಂಬ ಆ ದೇವನು ಭಯಪಟ್ಟು, ಭಗ್ನಾಶನಾಗಿ ಇವರು ಎಂಟನೆಯ ಬಲದೇವ ವಾಸುದೇವರೆಂದು ಜ್ಞಾನದೃಷ್ಟಿಯಿಂದ ತಿಳಿದು ತನ್ನ ಜ್ಯೋತಿರ್ಲೋಕಕ್ಕೆ ಓಡಿಹೋದನು. ಈ ತೊಂದರೆಗಳಾವುವನ್ನೂ ಲಕ್ಷ್ಯ ಮಾಡದೆ ಬೆಟ್ಟದಂತೆ ನಿಶ್ಚಲನಾಗಿದ್ದ ದೇಶಭೂಷಣ ಮುನಿಯನ್ನು ಕಂಡು ರಾಘವನು ಕೈಮುಗಿದುಕೊಂಡು ಈ ತೊಂದರೆಗಳಿಗೆ ಕಾರಣವೇನೆಂದು ಕೇಳಲು, ಆ ಮುನಿ ಯು ಜನ್ಮಾಂತರದ ಕಾರಣಗಳನ್ನು ವಿಶದವಾಗಿ ತಿಳಿಸಿ ತನ್ನ ಪೂರ್ವಜನ್ಮದ ಶತ್ರುವಾದ ಅಗ್ನಿಪ್ರಭದೇವನು ತನ್ನ ತಪವನ್ನು ಕೆಡಿಸುವ ಪ್ರಯತ್ನದಲ್ಲಿದ್ದನೆಂದೂ ಪುಣ್ಯಪುರುಷನಾದ ರಾಮನು ಬಂದುದರಿಂದ ಆತನಿಗೆ ಹೆದರಿ ಓಡಿಹೋದನೆಂದೂ ಹೇಳಲು ರಾಮನು ಸಂತೋಷಪಟ್ಟನು. ಮುನಿಯು ರಾಮನ ಪ್ರತಿಜ್ಞಾಪರಿ

ಪಾಲನೆಗೂ ಶಕ್ತಿಸಂಪತ್ತಿಗೂ ಮೆಚ್ಚಿ, ಆತನು ನೆನೆದಾಗ ಬರುವೆನೆಂದು ವರವನ್ನು ಕೊಟ್ಟು, ತನ್ನ ಲೋಕಕ್ಕೆ ತೆರಳಿದನು. ಇದನ್ನೆಲ್ಲ ತಿಳಿದು ಆ ದೇಶದ ರಾಜನಾದ ಸುಪ್ರಭನು ಅಲ್ಲಿಗೆ ಬಂದು ರಾಮಲಕ್ಷ್ಮಣರನ್ನು ಪೂಜಿಸಿ ಆ ಬೆಟ್ಟದಮೇಲೆ ಅವರಿಗಾಗಿ ಒಂದು ಪಟ್ಟಣವನ್ನು ಕಟ್ಟಿಸಿ ಅಲ್ಲಿ ಅವರನ್ನು ಸೇವಿಸುತ್ತಿದ್ದನು. ಈ ಕಾರಣದಿಂದ ಆ ಬೆಟ್ಟಕ್ಕೆ ರಾಮಗಿರಿಯೆಂಬ ಹೆಸರಾಯ್ತು.

ಅಲ್ಲಿಂದ ಅವರು ದಕ್ಷಿಣಮಾರ್ಗವಾಗಿ ಹೊರಟು ದೊಡ್ಡ ಕಾಡನ್ನು ಹೊಕ್ಕು ಕರ್ಣರವೆಯೆಂಬ ತೊರೆಯ ದಡದಲ್ಲಿ ವಿಶ್ರಮಿಸಿಕೊಂಡಿರಲು ಅಲ್ಲಿಗೆ ಸುಗುಪ್ತಿ ಗುಪ್ತರೆಂಬ ಗಗನಚಾರಣರಿಬ್ಬರು ಆಕಾಶದಿಂದಿಳಿದು ಬಂದರು; ರಾಮನು ಅವರನ್ನು ಕಂಡು ನಮಸ್ಕರಿಸಿ ಭಕ್ತಿಯಿಂದ ಪೂಜಿಸಿದನು.

---

## ಆಶ್ವಾಸ ೯—ಸೀತಾಪಹರಣ

ರಾಮಲಕ್ಷ್ಮಣರು ಚಾರಣರಿಗೆ ಅತಿಥಿಸತ್ಕಾರವನ್ನು ಮಾಡಲು ಅವರು "ಅಕ್ಷಯದಾನಮಸ್ತು" ಎಂದು ಹರಸಿದರು. ಆಗ ಹೂಮಳೆ ಕರೆಯಿತು, ಸುರ ಭೇರೀಧ್ವನಿಯಾಯಿತು, ದೇವತೆಗಳ ಜಯಘೋಷವು ಮೊಳಗಿತು. ರಾಮಾದಿಗಳು ಚಾರಣರ ತಪಸ್ಸಾಮರ್ಥ್ಯಕ್ಕೆ ಮೆಚ್ಚಿ ಪುಲಕಾಂಕಿತರಾಗಿ ಧರ್ಮಕಥಾ ಪ್ರಸಂಗದೊಳಿದ್ದರು. ಆಗ ಅಲ್ಲಿ ಸಾಲವೃಕ್ಷದ ಮೇಲಿದ್ದ ಒಂದು ಹದ್ದು ಮುನಿದರ್ಶನಮಾತ್ರದಿಂದ ತನ್ನ ಹಿಂದಣ ಜನ್ಮದ ಅರಿವನ್ನು ಪಡೆದು ತನ್ನ ಪಾಪಸಂಚಯವನ್ನು ಕಳೆದುಕೊಳ್ಳುವೆನೆಂದಾಲೋಚಿಸಿ ಮುನಿಗಳ ಪಾದೋದಕದಲ್ಲಿ ಹೊರಳಿ ಶಾಂತಚಿತ್ತತೆಯಿಂದಿದ್ದುದನ್ನು ಕಂಡು, ರಾಮನು ಸೀತೆಗೂ ಲಕ್ಷ್ಮಣನಿಗೂ ಮುನಿಗಳ ತಪಸ್ಸಮೃದ್ಧಿಯನ್ನು ವರ್ಣಿಸಿ ಹೇಳಿ, ಮುನಿಗಳಿಗೆ ಕೈಮುಗಿದುಕೊಂಡು ಹಿತಾಹಿತ ವಿವೇಕವಿಲ್ಲದ ಪಕ್ಷಿಯು ಈ ರೀತಿಯಾಗಿ ಉಪಶಮ ಹೊಂದಿದುದಕ್ಕೆ ಕಾರಣವೇನೆನ್ನಲು, ಚಾರಣ ಋಷಿಯರು ಅದರ ಜನ್ಮಾಂತರ ವೃತ್ತಾಂತವನ್ನು ತಿಳಿಸಿದರು. ಅದನ್ನು ಕೇಳಿ ಆ ಹದ್ದು ಬಹಳ ಖೇದಗೊಳ್ಳಲು, ತಮ್ಮ ದರುಶನವಾದುದರಿಂದ ಅದಕ್ಕೆ ಕರ್ಮಬಂಧವು ಶಿಥಿಲವಾದುದೆಂದರಿಪಿ ಅದಕ್ಕೆ ಅಣುವ್ರತವನ್ನು ಕೊಟ್ಟು ರಾಮಲಕ್ಷ್ಮಣರನ್ನೂ ಸೀತೆಯನ್ನೂ ಹರಸಿ ಗಗನಚಾರಣರು ಹೊರಟುಹೋದರು. ಆಗ ಸೀತೆಯು ಆ ಹದ್ದನ್ನು ತನ್ನ ಕಂದನೆಂದು ಹೇಳಿ ಅದಕ್ಕೆ ತನ್ನ ಒಡವೆಗಳನ್ನಿಡಲು ಅವುಗಳ ಕಾಂತಿಲೇಖೆಯು ಜಡೆಗೊಂಡು ಹರಿದು, ಕವಲಾಗಿ ಕಣ್ಣುಗಳನ್ನರಳಿಸಿತು. ಈ ಕಾರಣದಿಂದ ರಘುರಾಮನು ಅದಕ್ಕೆ ಜಟಾಯುವೆಂಬ ಹೆಸರನ್ನಿತ್ತನು.

ಮರುದಿವಸ ಅವರು ದಂಡಕಾರಣ್ಯದಲ್ಲಿ ದಕ್ಷಿಣಾಭಿಮುಖವಾಗಿ ನಡೆಯುತ್ತ ಕ್ರೌಂಚನದಿಯನ್ನು ದಾಟಿ ದಡದಲ್ಲಿಯ ಒಂದು ಲತಾಗೃಹದಲ್ಲಿ ವಿಶ್ರಮಿಸಿ ಕೊಂಡರು. ಆ ನದಿಯ ಸಮೀಪದಲ್ಲಿರುವ ದಂಡಕ ಗಿರಿಯ ಗುಹೆಯಲ್ಲಿ ಒಂದು ಯೋಜನದೆಂಟನೆಯ ಭಾಗವು ಖಾತವಾಗಿರುವುದು. ಅಲ್ಲಿ ಪಾತಾಳಲಂಕೆಯೆಂಬ ಪುರ ವಿರುವುದು. ಅದನ್ನು ಖರನೆಂಬುವನು ಆಳುತ್ತಿರುವನು. ಅವನ ಹೆಂಡತಿಯೂ ರಾವಣನ ತಂಗಿಯೂ ಆದ ಚಂದ್ರನಖಿಯೆಂಬವಳಿಗೆ ಶಂಭೂಕ ಸುಂದರರೆಂಬ ಇಬ್ಬರು ಮಕ್ಕಳಿರುವರು. ಅವರಲ್ಲಿ ಹಿರಿಯವನಾದ ಶಂಭೂಕನು ಹನ್ನೆರಡು ವರುಷ ಗಳಿಂದ ಸೂರ್ಯಹಾಸಾಸಿಯನ್ನು ಪಡೆಯುವುದಕ್ಕಾಗಿ ತಪಸ್ಸುಮಾಡುತ್ತಿರಲು ಅವನಿಗೆ ಆ ಕತ್ತಿಯನ್ನು ಕೊಟ್ಟು ಅನುಗ್ರಹಿಸುವುದಕ್ಕೆ ಬಂದ ಯಕ್ಷಾಮರ ಸಹಸ್ರವು ಅವನು ತಪಸ್ಸುಮಾಡುತ್ತಿದ್ದ ಬಿದಿರ ಮೆಳೆಯಲ್ಲಿ ಆ ಕತ್ತಿಯನ್ನಿಟ್ಟು ಸುರಮಂದಾರ ಪುಷ್ಪ ಗಳಿಂದ ಅರ್ಚಿಸುತ್ತಿದ್ದಿತು. ಆಗ ಲಕ್ಷ್ಮಣನು ವನವಿಲಾಸವನ್ನು ನೋಡುವ ಕುತೂಹಲವುಳ್ಳವನಾಗಿ ಅಲ್ಲಿಗೆ ಬಂದು ಬಿದಿರಿನ ಮೆಳೆಯಲ್ಲಿದ್ದ ಅಮೋಘವಾದ ಕತ್ತಿಯನ್ನು ನೋಡಿ ಕೈಗೆ ತೆಗೆದುಕೊಂಡು ಅದರ ತೀಕ್ಷ್ಣತೆಯನ್ನು ಪರೀಕ್ಷಿಸುವ ಉದ್ದೇಶದಿಂದ ಅದನ್ನು ಬೀಸಿದನು. ಆ ಹೊಡೆತಕ್ಕೆ ಬಿದಿರಿನ ವನವು ನೆಯ್ದಿಲ ದಂಟಿನ ಪೊದೆಯನ್ನು ಕಡಿದಂತೆ ಕತ್ತರಿಸಿಹೋಯಿತು. ಅದರೊಡನೆ ಒಂದು ತಲೆಯೂ ಮುಂಡದಿಂದ ಬೇರೆಯಾಗಿ ಹಾರಿತು. ಇದನ್ನು ಕಂಡು ಲಕ್ಷ್ಮಣನು ತಪಸ್ಸುಮಾಡುತ್ತಿದ್ದ ನಿರಪರಾಧಿಯನ್ನು ಕೊಂದೆನೆಂದು ವ್ಯಸನಪಡುತ್ತಿರುವಲ್ಲಿ ಆ ಕತ್ತಿಯ ಕಾವಲುಗಾರರಾದ ಯಕ್ಷಾಮರರು ತಮಗಿನ್ನು ಲಕ್ಷ್ಮಣನೇ ಪತಿ ಯೆಂದು ಹೇಳಿ ನಮಸ್ಕರಿಸಿ ಅವನನ್ನು ಪೂಜಿಸಿ ಹೊರಟುಹೋದರು. ಲಕ್ಷ್ಮಣನು ಅಣ್ಣನ ಬಳಿಗೆ ಬಂದು ಖಡ್ಗದ ವೃತ್ತಾಂತವನ್ನು ಹೇಳಿದನು.

ಇತ್ತ, ಚಂದ್ರನಖಿಯು ತನ್ನ ಮಗನು ಆ ದಿನ ಸೂರ್ಯಹಾಸಾಸಿಯನ್ನು ಪಡೆಯುವನೆಂಬ ಉತ್ಸಾಹದೊಡನೆ ಆಕಾಶದಿಂದ ಭೂಮಿಗಿಳಿದಳು. ಆಗ ತಲೆ ಯೊಂದೆಡೆಯಲ್ಲಿಯೂ ಮುಂಡವು ಮತ್ತೊಂದೆಡೆಯಲ್ಲಿಯೂ ಬಿದ್ದಿರುವ ತನ್ನ ಮಗನ ದೇಹವನ್ನು ನೋಡಿ ಬಹಳ ವ್ಯಸನದಿಂದ ಎದೆಯನ್ನು ಗುದ್ದಿಕೊಂಡು ಅಳತೊಡಗಿ ಮೂರ್ಛೆಹೋದಳು. ಸ್ವಲ್ಪ ಹೊತ್ತಿಗೆ ಎಚ್ಚತ್ತು ತನ್ನ ಮಗನನ್ನು ಕೊಂದವನನ್ನು ನಾಶಮಾಡುವೆನೆಂದು ಶೋಕದೊಡನೆ ಕೂಡಿದ ಕೋಪವನ್ನು ತಾಳಿ ಅಲ್ಲಿಂದ ಹೊರಟು ಅವಳು ರಾಮಲಕ್ಷ್ಮಣರಿರುವ ಸ್ಥಳಕ್ಕೆ ಬಂದು ಲಕ್ಷ್ಮಣನ ಸೊಬಗನ್ನು ನೋಡಿ, ತನ್ನ ಶೋಕವನ್ನು ಮರೆತು, ಅವನನ್ನು ಮೋಹಿಸಿದಳು. ಕೂಡಲೆ ರೂಪ ಪರಾವರ್ತನ ವಿದ್ಯೆಯಿಂದ ಅತಿ ಸುಂದರವಾದ ದೇವಕನ್ಯೆಕೆಯ ರೂಪವನ್ನು ಧರಿಸಿ ಕಣ್ಣೀರು ಸುರಿಸುತ್ತ ಅವಳು ಸೀತೆಯ ಬಳಿಗೆ ಬರಲು ಆಕೆಯು ಅವಳನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಅವಳ ಕಣ್ಣೀರನ್ನೊರಸಿದಳು.

ಆಗ ರಾಘವನು ಅವಳನ್ನು ಕಾರುಣ್ಯದೊಡನೆ ನೋಡಿ ಅಂತಹ ಭಯಂಕರ ವಾದ ದಟ್ಟಡವಿಗೆ ನಿರ್ಭಯವಾಗಿ ಒಬ್ಬಳೇ ಹೇಗೆ ಬಂದೆ ಎಂದು ಕೇಳಲು ಆ ಮೋಸ ಗಾರ್ತಿಯು "ನನ್ನ ತಾಯಿತಂದೆಗಳು ಮೊದಲೇ ಸತ್ತುಹೋದುದರಿಂದಲೂ ನನಗೆ ಯಾರೂ ಸಹಾಯವಿಲ್ಲದೆ ಬದುಕುವುದು ಕಷ್ಟವಾದುದರಿಂದಲೂ ಅಡವಿಯನ್ನಾ ದರೂ ಹೊಕ್ಕು ಪ್ರಾಣವನ್ನು ಬಿಡಬೇಕೆಂದು ಬರುತ್ತಿರುವಲ್ಲಿ ನನ್ನ ಪುಣ್ಯೋ ದಯದಿಂದ ನಿಮ್ಮನ್ನು ಕಂಡೆನು; ನಿಮ್ಮಲ್ಲೊಬ್ಬರು ನನ್ನನ್ನು ಗಂಧರ್ವವಿವಾಹ ವಿಧಿಯಿಂದ ಮದುವೆಮಾಡಿಕೊಳ್ಳಬೇಕು" ಎಂದು ಕೇಳಿಕೊಳ್ಳಲು, ಸೀತೆಯು ರಾಮಲಕ್ಷ್ಮಣರ ಮುಖವನ್ನು ನೋಡಿ ಮುಗುಳ್ನಗೆ ನಕ್ಕಳು.

ಇದನ್ನು ನೋಡಿ ಚಂದ್ರನಖಿಯು ನಾಚಿಕೆಗೊಂಡು ಮಗನ ಸಾವಿನಿಂದುಂ ಟಾದ ವ್ಯಥೆಯನ್ನೂ ಬಗೆಯದೆ ಪರಪುರುಷನೊಡನೆ ಸೇರುವ ಅಭಿಲಾಷೆಪಟ್ಟುದು ನಿಷ್ಫಲವಾದುದರಿಂದ ಉದ್ವೇಗವು ಇಮ್ಮಡಿಸಿ, ಅವರಿಗೆ ತಕ್ಕದ್ದನ್ನು ಮಾಡುವೆನೆಂಬ ಆಗ್ರಹದಿಂದ ನಡೆದು ಅವರು ಕಣ್ಮರೆಯಾದೊಡನೆಯೇ ಆಕಾಶಕ್ಕೆ ನೆಗೆದು ತನ್ನರಮನೆ ಯನ್ನು ಹೊಕ್ಕು, ತಲೆಯನ್ನು ಬಿರಿಯಹಾಕಿಕೊಂಡು ಎದೆಯನ್ನು ಹೊಡೆದುಕೊಳ್ಳುತ್ತ ಗಟ್ಟಿಯಾಗಿ ಅಳುತ್ತಿರಲು, ಖರನು ಇದೇಕೆಂದು ಕೇಳಿದನು. ಮಗನಿಗುಂಟಾದ ವಿಪ ತ್ತನ್ನು ಅವನೊಡನೆ ಹೇಳಿ, ಕವಚವನ್ನು ತೊಟ್ಟಿರುವ ಇಬ್ಬರು ಮನುಷ್ಯರು ಅಂಬು ಗಳನ್ನೂ ಬಿಲ್ಲುಗಳನ್ನೂ ಹಿಡಿದು ಬಲಶಾಲಿಗಳೆಂಬ ಗರ್ವದಿಂದ ಮಗನನ್ನು ಕೊಂದು ತನ್ನನ್ನು ಅವಮಾನ ಮಾಡಿದರೆಂದೂ ಖರನಿಗೆ ಸತಿಯಾಗಿಯೂ ತ್ರಿಭುವನ ವಿಜಯಿಯಾದ ರಾವಣನೊಡನೆ ಹುಟ್ಟಿಯೂ ತನಗೆ ಇಂತಹ ದುಃಸ್ಥಿತಿಯು ಬಂದಿತಲ್ಲಾ ಎಂದೂ ರೋದನ ಮಾಡಿದಳು. ಅದನ್ನು ಕೇಳಿ ದೈತ್ಯನು ರೋಷಾ ವೇಶವುಳ್ಳವನಾಗಿ ಅವರನ್ನು ಕೂಡಲೆ ಕೊಂದುಬರುವೆನೆಂದು ಹೇಳಲು ಅವನ ಮಂತ್ರಿಗಳು ಅವನನ್ನು ಸಮಾಧಾನಮಾಡಿ ರಾಮಲಕ್ಷ್ಮಣರು ಸಾಮಾನ್ಯ ಪುರುಷ ರಲ್ಲವೆಂದು ತಿಳಿಸಿದರು. ಈ ವಿಷಯವನ್ನು ದಶಕಂಧರನಿಗೆ ಬಿನ್ನವಿಸುವಂತೆ ದೂತ ರನ್ನಟ್ಟಿ ಅಸಂಖ್ಯಾತ ಖಚರಸೇನೆಯೊಡನೆ ಖರದೂಷಣರು ರಾಮಲಕ್ಷ್ಮಣರ ಬಳಿಗೆ ಬಂದರು. ಅದನ್ನು ನೋಡಿ ರಾಮನು ತನ್ನ ದಿವ್ಯಚಾಪಕ್ಕೆ ಕೈ ಹಾಕಲು ಲಕ್ಷ್ಮಣನು ಅಂತಹ ಸೈನ್ಯಕ್ಕೆ ತಾನೇ ಸಾಕೆಂದೂ ಆ ಸೈನ್ಯವನ್ನು ನಿಮಿಷದಲ್ಲಿ ಧ್ವಂಸ ಮಾಡಿಬರುವೆನೆಂದೂ ನುಡಿದು, ಸೀತಾದೇವಿಯನ್ನು ಅಂತಹ ಅಪಾಯದೆಡೆಯಲ್ಲಿ ಅಗಲದೆ ಇರಬೇಕೆಂದು ಬಿನ್ನವಿಸಿ, ಯುದ್ಧವು ಸಹಿಸಲಸಾಧ್ಯವಾದಲ್ಲಿ ತಾನು ಸಿಂಹನಾದ ಮಾಡುವೆನೆಂದೂ ಆಗ ತನ್ನ ಸಹಾಯಕ್ಕೆ ಬರಬೇಕೆಂದೂ ಹೇಳಿ ಅಪ್ಪಣೆಪಡೆದು ಹೊರಟನು. ಹೀಗೆ ಯುದ್ಧಸನ್ನದ್ಧನಾಗಿ ಹೊರಟ ಕೃಷ್ಣನು ಖರನ ಸೈನ್ಯವನ್ನು ಸೂರ್ಯಹಾಸಾಸಿಯಿಂದ ತರಿದೊಟ್ಟಿ ರೌದ್ರಾಕಾರವನ್ನು ತಾಳಿರಲು ಮಿಕ್ಕ ಬಲವು ದೆಸೆಗೆಟ್ಟು ಓಡಿಹೋಯಿತು.

ಇತ್ತ, ರಾವಣನು ಖರದೂಷಣರು ಹೇಳಿಕಳುಹಿಸಿದ ಸುದ್ದಿಯನ್ನು ಕೇಳಿ, ಶಂಭುಕನ ಸಾವಿಗೆ ವ್ಯಸನಪಟ್ಟು ಕಿಡಿಕಿಡಿಯಾಗಿ, ಶಂಭುಕನನ್ನು ಕೊಂದವನನ್ನು ಕೂಡಲೆ ಸಂಹರಿಸುವೆನೆಂದು ವಿಮಾನಾರೂಢನಾಗಿ ದಂಡಕಾರಣ್ಯಕ್ಕೆ ಬಂದು ಬಲಭದ್ರನ ಪಕ್ಕದಲ್ಲಿದ್ದ ಸೀತಾದೇವಿಯನ್ನು ಕಂಡು ಮೋಹಪರವಶನಾಗಿ, ತನ್ನ ಯಶಸ್ಸು ಮಲಿನವಾಗುವುದೆಂಬ ಲಕ್ಷ್ಯವೂ ಇಲ್ಲದೆ, ಸೀತೆಯನ್ನು ಮೋಸದಿಂದ ಕೊಂಡುಹೋಗಬೇಕೆಂದಾಲೋಚಿಸಿ ತನ್ನ ಅವಲೋಕಿನೀ ವಿದ್ಯೆಯನ್ನು ಸ್ಮರಿಸಲು. ದೇವತೆಯು ಕೂಡಲೆ ಪ್ರತ್ಯಕ್ಷವಾಗಿ ಅಪ್ಪಣೆಯೇನೆಂದು ಕೇಳಿದಳು. ಅದಕ್ಕೆ ಅವರಾರೆಂದು ಕೇಳಿ ಆವರ ವಿಷಯವನ್ನರಿತು ಸೀತೆಯನ್ನು ರಾಮನಿಂದ ಅಗಲಿಸುವ ಉಪಾಯವೇನೆಂದು ಕೇಳಲು, ದೇವತೆಯು ಭಯಪಟ್ಟು ಕಾರಣಪುರುಷರಾದ ಈ ಮಹಾತ್ಮರಲ್ಲಿ ವಿರೋಧಮಾಡುವುದು ಸರಿಯಲ್ಲವೆಂದೂ ಸಕಲ ಲೋಕದ ಅಧರ್ಮನಿರತರನ್ನು ದಂಡಿಸುವ ತಾನು ಇಂತಹ ಕೆಲಸಕ್ಕೆ ನುಗ್ಗುವುದು ತಕ್ಕುದ್ದಲ್ಲವೆಂದೂ ಹದಿನಾಲ್ಕು ಸಾವಿರ ಮುಖ್ಯ ನಾಯಕರೊಡನೆಯೂ ಅಸಂಖ್ಯಾತ ಬಲದಿಂದಲೂ ಬಂದಿರುವ ಖರದೂಷಣರನ್ನು ಲಕ್ಷ್ಯಮಾಡದೆ ಲಕ್ಷ್ಮಣನು ಕಾದುತ್ತಿರುವಲ್ಲಿ ರಾಮನು ವಿನೋದದಿಂದಿರುವನೆಂದೂ ಅಂಥವರಲ್ಲಿ ದ್ವೇಷಮಾಡುವುದು ತಪ್ಪೆಂದೂ ನುಡಿಯಲು ರಾವಣನು ಬಹಳ ಕೋಪಗೊಂಡು "ನಾನೊಂದನ್ನು ಕೇಳಿದರೆ ನೀನೊಂದನ್ನು ಏಕೆ ಹೇಳುವೆ? ಹುಚ್ಚಳೆ! ಮನುಷ್ಯಮಾತ್ರದವರು ಲಂಕಾಪತಿಯ ಎದುರಿಗೆ ನಿಲ್ಲುವರೆ?" ಎಂದು ಗರ್ಜಿಸಿ ಹೇಳಿದನು. ಅದಕ್ಕೆ ದೇವತೆಯು ಸಿಟ್ಟಾಗಿ, ಸೀತೆಯನ್ನು ಕದ್ದುಕೊಂಡುಹೋದರೆ ದಶರಥನ ಮಕ್ಕಳಿಂದ ಇವನಿಗೆ ಸಾವು ಉಂಟಾಗಬೇಕೆಂದು ಪುರಾಕೃತ ಕರ್ಮವಿರುವುದನ್ನು ತಪ್ಪಿಸುವುದು ಸಾಧ್ಯವಲ್ಲವೆಂದು ತಿಳಿದು, ಶತ್ರುಬಲವನ್ನು ಗೆಲ್ಲಲು ಕಷ್ಟವಾದರೆ ಸಿಂಹನಾದವನ್ನು ಮಾಡುವೆನೆಂದೂ, ಆಗ ತನಗೆ ಬೆಂಬಲವಾಗಿ ಬರುವುದೆಂದೂ ವಾಸುದೇವನು ಬಲದೇವನಿಗೆ ಹೇಳಿಬಂದಿರುವ ವಿಷಯವನ್ನು ದೇವತೆಯು ರಾವಣನಿಗೆ ತಿಳಿಸಿದಳು. ಆಗ, ರಣಭೂಮಿಗೆ ಹೋಗಿ ಲಕ್ಷ್ಮಣನಿಗೆ ತಿಳಿಯದಂತೆ ಸಿಂಹನಾದವನ್ನು ಮಾಡೆಂದು ರಾವಣನು ದೇವತೆಗೆ ನಿಯಮಿಸಲು, ದೇವತೆಯು ಹಾಗೆಯೇ ಮಾಡಿದಳು. ರಾಮನು ಅದನ್ನು ಕೇಳಿ ಲಕ್ಷ್ಮಣನಿಗೆ ಯುದ್ಧವು ವಿಷಮವಾಗಿರಬಹುದೇ ಎಂಬ ವಿಸ್ಮಯದಿಂದ ಜಾನಕಿಗೆ ಜಟಾಯುವನ್ನು ಕಾವಲಿಟ್ಟು ರಣರಂಗಕ್ಕೆ ತೆರಳಿದನು.

ಇತ್ತ, ರಾವಣನು ಕೂಡಲೆ ಅಂತರಿಕ್ಷದಿಂದ ಸೀತೆಯಿರುವ ಸ್ಥಳಕ್ಕಿಳಿದು ಆಕೆಯನ್ನು ಹಿಡಿದು ತನ್ನ ವಿಮಾನದಲ್ಲಿಟ್ಟುಕೊಂಡು ಹೊರಡುತ್ತಿರುವಲ್ಲಿ ಕಾವಲಿದ್ದ ಜಟಾಯುವು ರೌದ್ರಾಕಾರನಾಗಿ ರಾವಣನಮೇಲೆ ಯುದ್ಧಕ್ಕೆ ಬರಲು, ರಾವಣನು ನಸುನಕ್ಕು ಅವನನ್ನು ಕೈಯಿಂದ ಹೊಡೆಯಲು ಜಟಾಯುವಿನ ರೆಕ್ಕೆಗಳೆರಡೂ ಮುರಿದು ಅವನು ಕೆಳಕ್ಕೆ ಬಿದ್ದು ಸೀತಾಪಹರಣಕ್ಕಾಗಿ ಬಹಳ

ವ್ಯಥೆಪಟ್ಟನು. ಸೀತೆಯು ಸಿಂಹದ ಕೈಗೆ ಸಿಕ್ಕಿದ ಜಿಂಕೆಯಂತೆ ಎದೆಗೆಟ್ಟು ಅಳುತ್ತ ಮೂರ್ಛೆಹೋಗಿ ಮರಳಿ ಎಚ್ಚತ್ತು ಹಂಬಲಿಸಿದಳು. ರಾವಣನು ಅನಂತವೀರ್ಯ ಕೇವಲಿಗಳ ಬಳಿಯಲ್ಲಿ ಕೈಕೊಂಡಿದ್ದ ಪರಾಂಗನಾವಿರತಿ ವ್ರತದ ಭಂಗವನ್ನು ಲಕ್ಷ್ಯ ಮಾಡದೆ ಸೀತೆಯನ್ನು ಅಪಹರಿಸಿಕೊಂಡು ಹೋದನು.

ಇತ್ತ, ರಾಮನು ರಣಭೂಮಿಗೆ ಬರಲು ಲಕ್ಷ್ಮಣನು ಸೀತಾದೇವಿಯನ್ನಗಲಿ ಏಕೆ ಬಂದಿರೆಂದು ಕೇಳಿದನು. ರಾಮನು ಅವನ ಸಿಂಹನಾದವನ್ನು ಕೇಳಿ ಬಂದೆ ನೆಂದೆನಲು ಲಕ್ಷ್ಮಣನು ಯಾವನೋ ಮಾಯಾವಿಯು ಆ ತೆರನಾಗಿ ಮಾಡಿರ ಬಹುದೆಂದು ಹೇಳಿ ತಾನು ಯುದ್ಧವನ್ನು ಮುಗಿಸಿಕೊಂಡು ಕೂಡಲೆ ಬರುವೆ ನೆಂದೂ ರಾಮನು ಕೂಡಲೆ ಹಿಂದಕ್ಕೆ ಹೊರಡಬೇಕೆಂದೂ ಬಿನ್ನವಿಸಿದನು. ರಾಮನು ಸೀತೆಯ ವಿಷಯವಾಗಿ ಭಯಪಟ್ಟು, ತಾನಿದ್ದ ಸ್ಥಳಕ್ಕೆ ಬಂದು ನೋಡುವಲ್ಲಿ ಸೀತೆಯು ಅಲ್ಲಿಲ್ಲದಿರಲು ಧೈರ್ಯಗೆಟ್ಟು, ಹಾ ಹಾ! ಸೀತೇ! ಜನಕಜೇ! ವೈದೇಹೀ! ಎಂದು ಪ್ರಲಾಪಿಸುತ್ತ ಮೂರ್ಛೆಹೋಗಿ ಸ್ವಲ್ಪಹೊತ್ತಿಗೆ ಎಚ್ಚತ್ತು ಕಾಡಿನಲ್ಲಿ ಅಲೆ ಯುತ್ತ, ಪ್ರಾಣಬಿಡುತ್ತಿರುವ ಜಟಾಯುವನ್ನು ಕಂಡು ಸೀತೆಯ ನಿಮಿತ್ತದಿಂದ ಅದಕ್ಕೆ ಸಾವು ದೊರೆತಿತೆಂದು ವ್ಯಸನಪಟ್ಟು ಅದಕ್ಕೆ ಅಮರಗತಿಯನ್ನೈದಿಸಿ ಕಾಡಿ ನಲ್ಲಿ ಹುಚ್ಚನಂತೆ ಸುತ್ತುತ್ತಿದ್ದನು.

ಲಕ್ಷ್ಮಣನ ಪೆಟ್ಟನ್ನು ತಾಳಲಾರದೆ ವಿರಾಧಿತನು ಶರಣಹೊಕ್ಕು ಖರನನ್ನು ಎದುರಿಸಿದನು. ವಿರಾಧಿತನೊಡನೆ ಯುದ್ಧಕ್ಕೆ ನಿಲ್ಲದೆ ಖರನು ತನ್ನ ಮಗನನ್ನು ಕೊಂದದ್ದಕ್ಕೂ ಹೆಂಡತಿಯನ್ನು ಅಪಮಾನ ಮಾಡಿದುದಕ್ಕೂ ಲಕ್ಷ್ಮಣನ ಮೇಲೆ ಘೋರಯುದ್ಧಮಾಡಲು ಲಕ್ಷ್ಮಣನು ಅವನನ್ನು ಸಂಹರಿಸಿ, ತರುವಾಯ ಮೇಲೆಬಿದ್ದ ಅವನ ತಮ್ಮನಾದ ದೂಷಣನನ್ನೂ ಕೊಂದನು. ಇದನ್ನು ನೋಡಿ ಶರಣಾಗತರಾದ ವಿರೋಧಿ ಸೈನಿಕರನ್ನು ಲಕ್ಷ್ಮಣನು ವಿರಾಧಿತಂಗೊಪ್ಪಿಸಿ ರಾಮನ ಬಳಿಗೆ ಬಂದು ಸೀತೆಯಿಲ್ಲದುದನ್ನು ನೋಡಿ ವ್ಯಥೆಗೊಂಡು ರೌದ್ರಾಕಾರವನ್ನು ತಾಳಿ ಆಕೆಯನ್ನಪಹರಿಸಿದ ಮಾಯಾವಿಯನ್ನು ಹುಡುಕಿ ಕೊಲ್ಲುವೆನೆಂದು ಹೇಳುತ್ತಿ ರಲು, ಆ ಹೊತ್ತಿಗೆ ವಿರಾಧಿತನು ಸೇನೆಯೊಡನೆ ಅಲ್ಲಿಗೆ ಬಂದು ರಾಮನ ಪಾದ ಗಳಿಗೆರಗಿ, ಪಾತಾಳಲಂಕೆಯ ದೊರೆಯಾದ ತನ್ನ ತಂದೆಯನ್ನು ಖರನು ಕೊಂದು ರಾಜ್ಯವನ್ನಾಕ್ರಮಿಸಿಕೊಂಡದ್ದರಿಂದ ತಾನು ಅಂದಿನಿಂದಲೂ ವನಪ್ರದೇಶದಲ್ಲಿಯೇ ಇರುವೆನೆಂದೂ, ಅತಿ ಬಲರ ಸಹಾಯದಿಂದ ತನ್ನ ರಾಜ್ಯವು ಮರಳಿ ತನಗೆ ದೊರೆ ಯುವಂತೆ ದಿವ್ಯಜ್ಞಾನಿಗಳು ಹೇಳಿರುವರೆಂದೂ ತಿಳಿಸಿದನು. ಲಕ್ಷ್ಮಣನು ಅವನಿಗೆ ಸೀತಾಪಹರಣದ ವಿಷಯವನ್ನು ತಿಳಿಸಲು, ವಿರಾಧಿತನು ಸಿಟ್ಟುಗೊಂಡು ಸೀತೆ ಯನ್ನು ಹುಡುಕುವುದಕ್ಕಾಗಿ ಕಾರ್ಯಧುರಂಧರರಾದ ವಿದ್ಯಾಧರರನ್ನು ಅಟ್ಟಿದನು.

ವಿರಾಧಿತನು ರಾಮಲಕ್ಷ್ಮಣರನ್ನು ಪಾತಾಳಲಂಕೆಗೆ ಕರೆದುಕೊಂಡು ಹೋಗಿ, ಸೀತೆಯ ಅಣ್ಣನಾದ ಪ್ರಭಾಮಂಡಲನನ್ನು ಕರೆಯಿಸುವೆನೆಂದೂ ತರುವಾಯ ಮುಂದಣ ಕಾರ್ಯವನ್ನು ನೆರವೇರಿಸುವೆನೆಂದೂ ಹೇಳಿದನು.

ರಾವಣನು ಸೀತೆಯನ್ನೆತ್ತಿಕೊಂಡು ಸಮುದ್ರದ ಮೇಲೆ ಹೋಗುತ್ತಿರುವಲ್ಲಿ, ತನ್ನ ವಿಷಯವನ್ನು ಹೇಳಿಕೊಳ್ಳುತ್ತ ಪ್ರಲಾಪಿಸುತ್ತಿರುವ ಸೀತೆಯ ದನಿಯನ್ನು ಅರ್ಕಜಟಿಯ ಮಗನಾದ ರತ್ನಜಟಿಯು ಕೇಳಿ ರಾವಣನ ವಿಮಾನವನ್ನಡ್ಡ ಗಟ್ಟಿ ಅವನ ಪಾಪ ಕೃತ್ಯಕ್ಕಾಗಿ ಅವನ ಮರ್ಮೋದ್ಘಾಟನ ಮಾಡಲು, ರಾವ ಣನು ಅವನೊಡನೆ ಕಾದದೆ ಕರುಣಿಸಿ ವಿದ್ಯಾಚ್ಛೇದ ಮಾಡಿದುದರಿಂದ ರತ್ನಜಟಿಯು ಕಂಬುದ್ವೀಪದಲ್ಲಿ ಬಿದ್ದು ಮೂರ್ಛೆಹೋದನು. ತರುವಾಯ ರಾವಣನು ಲಂಕೆ ಗಭಿಮುಖವಾಗಿ ಹೋಗುತ್ತ ಮೋಹಚೇಷ್ಟೆಗಳನ್ನು ತೋರಿಸಲು, ಸೀತೆಯು ತನ್ನನ್ನು ಮುಟ್ಟಿದರೆ ನಾಲಗೆಯನ್ನು ಕಿತ್ತುಕೊಂಡು ಸಾಯುವೆನೆಂದು ನುಡಿ ದಳು. ಹಸ್ತಪ್ರಹಸ್ತರು ಯುದ್ಧದಲ್ಲಿ ಸೋತು ಓಡಿಬಂದು ರಾವಣನನ್ನು ಆಕಾಶದಲ್ಲಿ ಕಂಡು ಜಯಧ್ವನಿ ಮಾಡಲು ಸೀತೆಯು ತನ್ನನ್ನೆತ್ತಿಕೊಂಡು ಬಂದವನು ರಾವಣ ನೆಂದರಿತು ತಾನು ರಾಮನ ಕುಶಲವಾರ್ತೆಯನ್ನು ಕೇಳುವವರೆಗೂ ಊಟ ಮಾಡುವುದಿಲ್ಲವೆಂದು ಶಪಥಮಾಡಿದಳು. ರಾವಣನು ಲಂಕೆಯ ಬಳಿಗೆ ಬಂದು ಗೀರ್ವಾಣರಮಣವೆಂಬ ತನ್ನ ವಿನೋದ ವನದಲ್ಲಿಯ ರತ್ನಗೃಹದಲ್ಲಿ ಸೀತೆಯನ್ನಿಟ್ಟು ತಾನು ತನ್ನರಮನೆಗೆ ಹೋದನು. ಆಗ ಖರದೂಷಣರ ಮರಣವಾರ್ತೆಯನ್ನು ಕೇಳಿದ ಚಂದ್ರನಖಿಯು ಅಣ್ಣನ ಬಳಿಗೆ ಮಂಡೋದರಿ ಮೊದಲಾದವರೊಡನೆ ಬಂದು ಬಹಳವಾಗಿ ಅಳಲು, ರಾವಣನು ಖರದೂಷಣರನ್ನು ಕೊಂದವನನ್ನು ತಾನು ಕೊಲ್ಲುವೆನೆಂದು ಹೇಳಿ ಜಿನಾಲಯಗಳಲ್ಲಿ ಮಹಾ ಪೂಜೆಗಳನ್ನು ಮಾಡಿಸಿ, ಮಲಗುವ ಮನೆಯನ್ನು ಹೊಕ್ಕು ಸೀತೆಯ ಮೇಲಣ ಮೋಹದಿಂದ ಮರ ವಾನಸನಂತಿದ್ದನು. ಇದನ್ನು ನೋಡಿ ಮಂಡೋದರಿಯು ಕಾರಣವೇನೆಂದು ಕೇಳಲು, ರಾವಣನು ನಾಚಿಕೆಗೊಂಡು, ಸೀತೆಯನ್ನು ತಂದ ವಿಷಯವನ್ನು ತಿಳಿಸಿ, ಅವಳು ತನ್ನ ವಶವಾಗದಿದ್ದರೆ ತಾನು ಸಾಯುವೆನೆಂದು ಹೇಳಲು ಮಂಡೋದರಿಯು ಭಯ ಗೊಂಡು ರಾವಣನಿಗೆ ಧೈರ್ಯವನ್ನು ಹೇಳಿ ಅಂತಃಪುರ ಸ್ತ್ರೀಯರೊಡನೆ ಸೀತೆಯ ಬಳಿಗೆ ಬಂದು ಆಕೆಯ ರೂಪ ಲಾವಣ್ಯಗಳನ್ನು ಹೊಗಳಿ ಆಕೆಗೆ ರಾವಣನೇ ತಕ್ಕ ವರನೆಂದೂ ಅವನೊಡನೆ ಕೂಡಿ ಲಂಕೆಯನ್ನಾಳೆಂದೂ ಅನೇಕ ವಿಧವಾಗಿ ಬೋಧಿಸಿದಳು. ಇದನ್ನು ಕೇಳಿ ಜಾನಕಿಯು ಕೋಪಗೊಂಡು ಆ ಮಾತುಗಳು ಕುಲಸ್ತ್ರೀಯರಾಡತಕ್ಕವಲ್ಲವೆಂದೂ, ಮಂಡೋದರಿಯಂಥವರು ತಮ್ಮ ವಂಶದ ಕೇಡನ್ನೂ ನೋಡದೆ ಸೂರ್ಯವಂಶದ ವನಿತೆಯರಲ್ಲಿ ಈ ರೀತಿಯಾಗಿ ಮಾತನಾಡು ವುದು ಅನುಚಿತವೆಂದೂ ಹೇಳಿದಳು.

ಆ ಹೊತ್ತಿಗೆ ರಾವಣನು ಅಲ್ಲಿಗೆ ಬಂದು ತನ್ನ ಸ್ತ್ರೀಯರನ್ನು ಕಣ್ಸನ್ನೆಯಿಂದ ಹೋಗುವಂತೆ ಮಾಡಲು, ಜಾನಕಿಯು ಹೆದರಿದಳು. ರಾವಣನು ಆಕೆಯ ಎದುರಿಗೆ ಆತ್ಮಸ್ತುತಿಯನ್ನೂ ಪರನಿಂದೆಯನ್ನೂ ಮಾಡಿ ತನ್ನ ಕೋರಿಕೆಯನ್ನೀಡೇರಿಸೆಂದು ಕೇಳಿಕೊಂಡನು. ಆ ದುರಾತ್ಮನ ದುರುಕ್ತಿಗೆ ಸೀತೆ ಮನಸ್ಸಿನಲ್ಲಿ ಮುಳಿದು ಹೊರಕ್ಕೆ ತೋರಿಸದೆ ಅಂಥ ಪಾಪದ ಮಾತುಗಳನ್ನಾಡುವುದು ತಕ್ಕದ್ದಲ್ಲವೆಂದೂ ಪರಸ್ತ್ರೀಯನ್ನಪೇಕ್ಷಿಸುವುದರಿಂದ ಅಧೋಗತಿಯು ಬರುವುದೆಂದೂ ಹೇಳಿ ರಾಮಲಕ್ಷ್ಮಣರಿಲ್ಲದ ವೇಳೆ ತನ್ನನ್ನು ಕದ್ದು ತಂದುದಕ್ಕೆ ಅನಂತ ವೀರ್ಯರಾದ ಅವರು ರಾವಣನನ್ನು ಕೊಲ್ಲದೆ ಬಿಡರೆಂದೂ ನುಡಿದಳು. ಆಗ ರಾವಣನು ಸೀತೆಯನ್ನು ಭಯಗೊಳಿಸಿ ಸ್ವಾಧೀನ ಮಾಡಿಕೊಳ್ಳಲು ಯತ್ನಿಸಿದನು. ಅದುವರೆಗೆ ಹೊತ್ತು ಮುಳುಗಿತು. ರಾವಣನನ್ನು ನೋಡುವುದಕ್ಕಾಗಿ ಅಲ್ಲಿಗೆ ಬಂದ ವಿಭೀಷಣನು, ಸೀತೆಯು ತನ್ನ ವಿಷಯವನ್ನು ಹೇಳಿಕೊಂಡು ಹಲುಬಿ ಅಳುತ್ತಿರುವುದನ್ನು ಕೇಳಿ ಭಯಪಟ್ಟು, ಪರಸ್ತ್ರೀಯನ್ನು ಈ ರೀತಿಯಾಗಿ ತೊಂದರೆಪಡಿಸುವುದು ಧರ್ಮವಲ್ಲವೆಂದೂ ಅದರಿಂದ ದುರ್ಗತಿಯೊದಗುವುದೆಂದೂ ತಾನೂ ಮಾರಿಚನೂ ರಾವಣನೊಡನೆ ಹೇಳಿದರು. ಅದಕ್ಕೆ ರಾವಣನು ಅವರನ್ನು ಹಿಯ್ಯಾಳಿಸಿ ಜಾನಕಿಯನ್ನು ಪುಷ್ಪಕ ವಿಮಾನವನ್ನೇರಿಸಿ ತಾನು ಪಟ್ಟದಾನೆಯನ್ನೇರಿ ಸಾಮಂತ ಸೇನೆಯೊಡನೆ ಪಟ್ಟಣದಲ್ಲಿ ಮೆರೆವಣಿಗೆ ಮಾಡಿಸಿದನು. ದುಃಖದಿಂದ ಬೇಯುತ್ತಿರುವ ಸೀತೆಯು ಇವು ಯಾವುವನ್ನೂ ನೋಡದಿರಲು ಆಕೆಯನ್ನು ರಾವಣನು ಪ್ರಮದವನದಲ್ಲಿ ಸೆರೆಯಿಟ್ಟನು.

ಸಂಭಿನ್ನನೆಂಬ ಮಂತ್ರಿಮುಖ್ಯನು ರಾವಣನಿಗೆ ಖರದೂಷಣರ ವಿಷಯವನ್ನೂ ರಾಮಲಕ್ಷ್ಮಣರು ವಿರಾಧಿತನನ್ನು ಪಾತಾಳಲಂಕೆಯಲ್ಲಿ ನಿಲ್ಲಿಸಿರುವುದನ್ನೂ ಅವರು ಸೀತೆಯನ್ನು ಹುಡುಕುತ್ತಿರುವುದನ್ನೂ ಅದುವರೆಗೂ ರಾವಣನಿಗೆ ಮಿತ್ರರಾಗಿದ್ದ ಸುಗ್ರೀವನೂ ಹನುಮನೂ ತಮ್ಮಿಂದ ಬೇರೆಯಾಗಿರುವುದನ್ನೂ ತಿಳಿಸಿದನು. ಅದಕ್ಕೆ ರಾವಣನು ಪರಿಹಾಸದ ನಗೆಯನ್ನು ನಕ್ಕು "ಸಮುದ್ರದಲ್ಲಿ ಒಂದೆರಡು ಜಲಕಣಗಳು ನಷ್ಟವಾದರೇನು?" ಎಂದು ಹೇಳಲು ಸಹಸ್ರಮತಿಯೆಂಬ ಮಂತ್ರಿಯು ಹಾಗೆ ಅವರನ್ನು ಏಳಿಸುವುದು ಸರಿಯಲ್ಲವೆಂದೂ ಸುಗ್ರೀವಾದಿಗಳನ್ನು ದಾನ ಸನ್ಮಾನಗಳಿಂದ ತಮ್ಮ ಪಕ್ಷವನ್ನೇ ವಹಿಸುವಂತೆ ಮಾಡಬೇಕೆಂದೂ ಲಂಕೆಯು ಅಭೇದ್ಯವಾಗುವಂತೆ ವಿದ್ಯಾಪ್ರಾಕಾರವನ್ನು ಕಟ್ಟಬೇಕೆಂದೂ ಹಾಗೆ ಮಾಡಿದಲ್ಲಿ ರಾಮಲಕ್ಷ್ಮಣರು ಸೀತಾವಿರಹದಿಂದ ಪ್ರಾಣವನ್ನು ಕಳೆದುಕೊಳ್ಳುವರೆಂದೂ ತಿಳಿಸಿದನು. ವಿಭೀಷಣನು ಅದೇ ರೀತಿಯಾಗಿ ಮಾಡಲು ಪ್ರಯತ್ನಪರನಾದನು.

ಇತ್ತ, ಸುಗ್ರೀವನು ಸತಿ ವಿಯೋಗದಿಂದ ವ್ಯಥೆಪಡುತ್ತ ಖರದೂಷಣರ ಬಳಿಗೆ ಹೋಗಬೇಕೆಂದು ಬರುತ್ತಿರುವಲ್ಲಿ ಅಡವಿಯಲ್ಲೊಂದು ಯುದ್ಧರಂಗವನ್ನು ಕಂಡು ಇದೇನೆಂದು ಕೇಳಲು ಅದನ್ನರಿತ ಒಬ್ಬನು ಖರದೂಷಣರು, ವಿರಾಧಿತ,

ರಾಮಲಕ್ಷ್ಮಣರು—ಇವರ ವಿಷಯಗಳನ್ನು ತಿಳಿಸಿ ಕಾರಣಪುರುಷರು ಪಾತಾಳ ಲಂಕೆಯಲ್ಲಿರುವರೆಂದು ಹೇಳಿದನು.

---

## ಆಶ್ವಾಸ ೧೦—ದಶವದನ ವಂಶ ವರ್ಣನೆ

ಸುಗ್ರೀವನು ಮಹಾನುಭಾವರಾದ ರಾಮಲಕ್ಷ್ಮಣರಿಂದ ತನ್ನ ಹಗೆಯನ್ನೂ ಬಗೆಯನ್ನೂ ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿ ವಿರಾಧಿತನ ಬಳಿಗೆ ದೂತನನ್ನು ಕಳುಹಿಸಿ ತರುವಾಯ ತಾನೂ ಬರಲು ಆತನಾರೆಂದು ಲಕ್ಷ್ಮಣನು ವಿರಾಧಿತನನ್ನು ಕೇಳಿದನು. ಆತನು ಕಿಷ್ಕಿಂಧನಗರಕ್ಕೊಡೆಯನೂ ಕಪಿಧ್ವಜ ಕುಲಧ್ವಜನೂ ಸೂರ್ಯಂಜಯ ತನೂಜನೂ ವಾಲಿಭಟ್ಟಾರಕರ ತಮ್ಮನೂ ಅಂಗದನ ತಂದೆಯೂ ಆದ ಸುಗ್ರೀವನೆಂದೂ ಅವರನ್ನೋಲಗಿಸುವುದಕ್ಕೆ ಬಂದಿರುವನೆಂದೂ ತಿಳಿಸಿದನು. ಸುಗ್ರೀವನು ರಾಮಲಕ್ಷ್ಮಣರ ಪಾದಗಳಿಗೆರಗಿ ನಿಯಮಿತಾಸನದಲ್ಲಿ ಕುಳಿತುಕೊಂಡನು. ಕುಶಲಪ್ರಶ್ನೆಗಳಾದ ತರುವಾಯ ಲಕ್ಷ್ಮೀಧರನು ಇವರೇನು ನಿಮಿತ್ತವಾಗಿ ಬಂದಿರುವರೆಂದು ಕೇಳಲು ಜಾಂಬವನು ಕೈಮುಗಿದು ನಿಂತು, ಸುಗ್ರೀವನ ಹೆಂಡತಿಯಾದ ಸುತಾರೆಯ ಮೇಲಣ ಆಗ್ರಹದಿಂದ ಸುಗ್ರೀವನ ರೂಪನ್ನು ಧರಿಸಿ ಒಬ್ಬ ಖಳನು ಸುಗ್ರೀವನ ಅರಮನೆಯನ್ನು ಹೊಕ್ಕನೆಂದೂ, ಎಲ್ಲರೂ ಮೋಸಹೋದರೂ ಸುತಾರೆಯು ಕೆಲವು ಗುರುತುಗಳಿಂದ ತಾನು ಮೋಸಹೋಗದೆ ಒಳಗೆ ಅಡಗಿಕೊಂಡಳೆಂದೂ, ಆಗ ನಿಜವಾದ ಸುಗ್ರೀವನು ಬರಲು ಇಬ್ಬರಿಗೂ ಯುದ್ಧವು ನಡೆಯಿತೆಂದೂ, ಅಂಗದಕುಮಾರನು ಮಾಯಾ ಸುಗ್ರೀವನನ್ನು ತಂದೆಯೆಂದು ಸ್ವೀಕರಿಸಿ ನಿಜವಾದ ಸುಗ್ರೀವನನ್ನು ಸೆರೆಯಲ್ಲಿಡುವಂತೆ ಹೇಳಲು ಈತನು ಹನುಮನಲ್ಲಿಗೆ ಹೋಗಿ ತನ್ನ ವೃತ್ತಾಂತವನ್ನು ಹೇಳಿಕೊಂಡನೆಂದೂ, ಅವನು ಬಂದು ನಿಜವಾದ ಸುಗ್ರೀವನು ಯಾರೆಂದು ತಿಳಿಯದೆ ಕೋಪಗೊಂಡು ಹಿಂದಕ್ಕೆ ಹೋದನೆಂದೂ, ಆದುದರಿಂದ ತಮ್ಮಗಳ ಪರಾಕ್ರಮವನ್ನು ಕೇಳಿ ಸಹಾಯಕ್ಕಾಗಿ ತಮ್ಮಲ್ಲಿಗೆ ಬಂದಿರುವನೆಂದೂ ತಿಳಿಸಿದನು. ರಾಮನು ತಮ್ಮಂತೆಯೇ ವ್ಯಥೆಗೆ ಸಿಕ್ಕಿರುವ ಸುಗ್ರೀವನ ವ್ಯಸನವನ್ನು ಕಳೆಯುವಂತೆ ಲಕ್ಷ್ಮಣನೊಡನೆ ಹೇಳಲು, ಸುಗ್ರೀವನು ಸಮಾಹಿತ ಚಿತ್ತನಾಗಿ ವಿರಾಧಿತನ ಮುಖವನ್ನು ನೋಡಿ ರಾಮಲಕ್ಷ್ಮಣರು ವ್ಯಾಕುಲಚಿತ್ತರಾಗಿರಲು ಕಾರಣವೇನೆಂದು ಕೇಳಿದನು. ಅದಕ್ಕೆ ವಿರಾಧಿತನು ವನದಲ್ಲಿ ಮೋಸದಿಂದ ಸೀತಾಹರಣವಾದ ವಿಷಯವನ್ನೂ ಯುದ್ಧದಲ್ಲಿ ಖರದೂಷಣರು ಜನಾರ್ದನನ ಕೈಯಿಂದ ಸತ್ತ ವಿಷಯವನ್ನೂ ತಿಳಿಸಿದನು. ಇದನ್ನು ಕೇಳಿ ವಾನರಚಿಹ್ನನಾದ ಸುಗ್ರೀವನು ಏಳು ದಿವಸಗಳೊಳಗಾಗಿ ಸೀತಾದೇವಿಯ ಸುದ್ದಿಯನ್ನು ತರಿಸುವೆನೆಂದು ಪ್ರತಿಜ್ಞೆಮಾಡಿ ಬಿನ್ನವಿಸಲು, ಬಲಾಚ್ಯುತರೂ ವಿರಾಧಿತನೂ ಸುಗ್ರೀವನೊಡನೆ ಕಿಷ್ಕಿಂಧಪುರಕ್ಕೆ

ಹೊರಟರು. ಅಲ್ಲಿಗೆ ಬಂದಮೇಲೆ ಸುಗ್ರೀವನಿಗೂ ಮಾಯಾಸುಗ್ರೀವನಿಗೂ ಯುದ್ಧವಾಗಿ ಸುಗ್ರೀವನು ಮೂರ್ಛೆಹೋದನು. ಅವನು ಮೂರ್ಛೆ ತಿಳಿದ ಬಳಿಕ. ರಾಮನು ಸುಗ್ರೀವನ ಹಗೆಯನ್ನು ತಾನು ಮರುದಿನ ತೀರಿಸಿಕೊಳ್ಳುವೆ ನೆಂದು ಸುಗ್ರೀವನೊಡನೆ ಹೇಳಿ ಸಾಹಸಗತಿಯೆಂಬ ಮಾಯಾಸುಗ್ರೀವನನ್ನು ಕೊಂದನು. ಕಪಿಧ್ವಜನಾದ ಸುಗ್ರೀವನು ರಾಮಲಕ್ಷ್ಮಣರನ್ನು ಮರ್ಯಾದೆ ಯೊಡನೆ ಕಿಷ್ಕಿಂಧಪುರಕ್ಕೆ ಕರೆದುಕೊಂಡುಹೋಗಿ ಸತ್ಕರಿಸಿ ತನ್ನ ಹೆಣ್ಣುಮಕ್ಕಳು ರಾಮನನ್ನಲ್ಲದೆ ಮತ್ತಾರನ್ನೂ ಮದುವೆಯಾಗೆವೆಂದಿರುವುದರಿಂದ ಅವರನ್ನು ಪರಿ ಗ್ರಹಿಸಬೇಕೆಂದು ಬೇಡಿಕೊಂಡು ಶುಭಮುಹೂರ್ತದಲ್ಲಿ ತನ್ನ ಹನ್ನೆರಡು ಮಂದಿ ಕನ್ನೆಯರನ್ನು ರಾಮನಿಗೆ ಮದುವೆಮಾಡಿಕೊಟ್ಟನು. ಆದರೆ ರಾಮನಿಗೆ ಸೀತೆಯ ನೆನೆಪಿನಿಂದ ಅವರಲ್ಲಿ ಅನುರಾಗ ಹುಟ್ಟಲಿಲ್ಲ.

ಸುಗ್ರೀವನು ಸೀತೆಯನ್ನು ಕಂಡುಹಿಡಿಯುವ ಪ್ರಯತ್ನವನ್ನು ಕೈಕೊಂಡು, ಮೊದಲು ಪ್ರಭಾಮಂಡಲನಲ್ಲಿಗೆ ದೂತರನ್ನಟ್ಟಿ, ತಾನು ಕೆಲವರು ಅನುಚರರೊಡನೆ ಪೂರ್ವದಿಕ್ಕಿಗೆ ಹೊರಟು ವಾಯುವೇಗದಿಂದ ಹೋಗುತ್ತ ಒಂದು ಬೆಟ್ಟದ ಶಿಖರದ ಮೇಲೆ ಒಂದು ಧ್ವಜವನ್ನು ಕಂಡು ಯಾರಿರುವರೋ ನೋಡೋಣವೆಂದು ಅಲ್ಲಿಗೆ ಹೋಗಲು ಅಲ್ಲಿದ್ದ ರತ್ನಜಟಿಯು ಇವನು ರಾವಣನ ದೂತನಿರಬಹುದೆಂದು ಹೆದರಿದನು. ಸುಗ್ರೀವನು ಅವನ ಭಯವನ್ನು ಹೋಗಲಾಡಿಸಿ ಅವನ ವೃತ್ತಾಂತ ವನ್ನೆಲ್ಲ ತಿಳಿದು ಸೀತೆಯನ್ನು ರಾವಣನು ಲಂಕೆಗೆ ಹೊತ್ತುಕೊಂಡು ಹೋದ ಸಂಗತಿ ಯನ್ನರಿತವನಾಗಿ ಸಂತೋಷಪಟ್ಟು ರತ್ನಜಟಿಯನ್ನು ರಾಮಲಕ್ಷ್ಮಣರ ಬಳಿಗೆ ಕರೆ ತರಲು ಸೀತೆಯನ್ನು ರಾವಣನೆತ್ತಿಕೊಂಡು ಹೋದ ವಿಷಯವನ್ನು ಜನಾರ್ದ ನನು ರತ್ನಜಟಿಯಿಂದ ವಿಶದವಾಗಿ ತಿಳಿದನು. ಸೀತೆಯ ಸುದ್ದಿಯನ್ನು ತಿಳಿಸಿ ದುದಕ್ಕಾಗಿ ರಾಮಲಕ್ಷ್ಮಣರು ರತ್ನಜಟಿಯ ಶತ್ರುಗಳನ್ನೋಡಿಸಿ ಅವನನ್ನು ಮರಳಿ ಅವನ ರಾಜ್ಯಕ್ಕರಸುಮಾಡಿ ಕಿಷ್ಕಿಂಧಪುರಕ್ಕೆ ಬಂದರು. ಒಂದು ದಿನ ಸುಗ್ರೀವನು ನಳ ನೀಲ ಅಂಗದ ಜಾಂಬವ ಮುಂತಾದ ಸೇನಾನಾಯಕರೊಡನೆಯೂ ಮಂತ್ರಿ ಮಂಡಲ ಬಂಧುಜನಗಳೊಡನೆಯೂ ತನ್ನ ಆಸ್ಥಾನದಲ್ಲಿ ರಾಮಲಕ್ಷ್ಮಣರನ್ನು ಸೇವಿಸುತ್ತಿರುವಲ್ಲಿ ಲಕ್ಷ್ಮಣನು ಸುಗ್ರೀವನನ್ನು ನೋಡಿ, ಲಂಕೆಗೆ ಹೋಗಿ ರಾವಣ ನನ್ನು ಜಯಿಸುವ ಪ್ರಯತ್ನವನ್ನು ಮಾಡಬೇಕೆಂದು ಹೇಳಿದನು. ರಾಮನು ಜೈನಾಗಮ ಕೋವಿದನಾದ ಜಾಂಬೂನದನನ್ನು ನೋಡಿ ರಾವಣನ ವಂಶವನ್ನೂ ಲಂಕಾನಗರದ ತೆರನನ್ನೂ ತಿಳಿಸುವಂತೆ ಕೇಳಲು ಅವನು ಕೈಮುಗಿದುಕೊಂಡು ಆ ವಿಷಯವನ್ನು ವಿಶದವಾಗಿ ಹೇಳುವುದಕ್ಕೆ ಪ್ರಾರಂಭಿಸಿದನು :—

ತ್ರಿಲೋಕಾಧಿಪತಿಯಾದ ಪುರುಪರಮೇಶ್ವರನ ಅನಂತರದಲ್ಲಿ ಕೆಲವು ಕಾಲದ ಮೇಲೆ ಅದೇ ಕುಲದ ತ್ರಿದಶಂಜಯನು ಭೂಮಂಡಲಕ್ಕಧಿಪತಿಯಾದನು. ಅವ

ನಿಗೆ ಜಿತಶತ್ರು ವಿಜಯಸಾಗರರೆಂಬಿಬ್ಬರು ಮಕ್ಕಳು. ತ್ರಿದಶಂಜಯನು ಹಲವು ಕಾಲ ರಾಜ್ಯಭಾರವಮಾಡಿ ಜಿತಶತ್ರುವಿಗೆ ಪಟ್ಟವನ್ನು ಕಟ್ಟಿ ತಪೋರಾಜ್ಯದಲ್ಲಿ ನಿಂತನು. ಜಿತಶತ್ರುವಿನ ಮಗ ಅಜಿತಭಟ್ಟಾರಕನು; ವಿಜಯಸಾಗರನ ಮಗ ಸಗರ ಚಕ್ರೇಶ್ವರನು. ಹೀಗೆ ಜಿನಪತಿಯನ್ನೊಬ್ಬನೂ ಜನಪತಿಯನ್ನೊಬ್ಬನೂ ಪಡೆದರು. ಆ ಕಾಲದಲ್ಲಿ ವಿಜಯಾರ್ಧದ ರಥನೂಪುರಚಕ್ರವಾಳಪುರದ ವಿಯಚ್ಚರ ರಾಜನಾದ ಪೂರ್ಣಘನನಿಗೆ ತೋಯದವಾಹನನೆಂಬ ಮಗನು ಹುಟ್ಟಿದನು. ಉತ್ತರ ಪ್ರಾಂತ ದಲ್ಲಿಯ ಅಂಬರತಿಲಕವೆಂಬ ಪುರದ ಸುಲೋಚನನಿಗೆ ಸಹಸ್ರಲೋಚನನೆಂಬ ಮಗನೂ ಉತ್ಪಲನೇತ್ರೆಯೆಂಬ ಮಗಳೂ ಹುಟ್ಟಿದರು. ಈ ಹುಡುಗಿಯನ್ನು ಪೂರ್ಣ ಘನನು ತೋಯದವಾಹನನಿಗೆ ಕೊಡೆಂದು ಸುಲೋಚನನಿಗೆ ಹೇಳಿಕಳುಹಿಸಲು, ಆತನು ಚಕ್ರವರ್ತಿಯಾಗುವ ಸಗರನಿಗೆ ಈಕೆಯು ಪಟ್ಟಮಹಿಷಿಯಾಗುವಳೆಂದು ನೈಮಿತ್ತಿಕರು ಹೇಳಿರುವ ಕಾರಣ ತೋಯದವಾಹನನಿಗೆ ಕೊಡಲಾಗುವುದಿಲ್ಲವೆಂದು ಹೇಳಿದುದರಿಂದ, ಪೂರ್ಣಘನನು ಬಹಳ ಸಿಟ್ಟುಗೊಂಡು ದಂಡೆತ್ತಿಬಂದು ಅಂಬರ ತಿಲಕವನ್ನು ಮುತ್ತಲು, ಸುಲೋಚನನು ಮಗನನ್ನೂ ಮಗಳನ್ನೂ ತನ್ನ ವಿದ್ಯೆಯಿಂದ ಪಕ್ಷಿಗಳನ್ನಾಗಿ ಮಾಡಿ ಹೊರಡಿಸಿ ತಾನು ಪೂರ್ಣಘನನೊಡನೆ ಕಾದಿ ಸತ್ತನು. ಪೂರ್ಣಘನನು ಪಟ್ಟಣವನ್ನು ಹೊಕ್ಕು ಕನ್ನೆಯನ್ನು ಹುಡುಕಿ ಕಾಣದೆ ತನ್ನ ಪಟ್ಟಣಕ್ಕೆ ಹಿಂದಿರುಗಿ ಹೋದನು.

ಇತ್ತ, ಸಹಸ್ರಲೋಚನನೂ ಉತ್ಪಲನೇತ್ರೆಯೂ ಶರಭಾಟವಿಯನ್ನು ಹೊಕ್ಕು ವೇತ್ರಾವತೀ ತೀರದೊಳಿರುವಲ್ಲಿ ಆ ಸಮಯಕ್ಕೆ ಸಗರನನ್ನು ಅವನ ದುಷ್ಟಾಶ್ವವು ಎಳೆದು ತಂದು ಆ ಕಾಡಿನಲ್ಲಿಳಿಸಿ ಹೋಯಿತು. ಸಗರನು ಅಲ್ಲಿದ್ದ ಅಣ್ಣ ತಂಗಿಯರನ್ನು ನೋಡಿ ಅವರ ರೂಪ ಲಾವಣ್ಯಗಳಿಗೆ ಬೆರಗಾಗಿ ಅಂತಹ ಭಯಂಕರವಾದ ಅಡವಿಗೆ ಅವರು ಬರಲು ಕಾರಣವೇನೆಂದು ಕೇಳಲು ಸಹಸ್ರ ಲೋಚನನು ತಮ್ಮ ವೃತ್ತಾಂತವನ್ನು ತಿಳಿಸಿ ಭೂನಾಥನಾಗಿ ತೋರುವ ಅವನು ಅಲ್ಲಿಗೆ ಬಂದ ಕಾರಣವೇನೆಂದು ಕೇಳಿದನು. ಅದಕ್ಕೆ ತಾನು ಅಯೋಧ್ಯಾ ಪತಿಯಾದ ಸಗರನೆಂದು ಹೇಳಿ ತಾನು ಬಂದ ತೆರನನ್ನು ತಿಳಿಸಲು ಸಹಸ್ರ ಲೋಚನನು ಆಶ್ಚರ್ಯಪಟ್ಟು, "ಸಗರನನ್ನಾಶ್ರಯಿಸಿದಲ್ಲಿ ಹಗೆಗಳು ನಾಶವಾಗುವರು, ಇಷ್ಟಾರ್ಥವು ಈಡೇರುವುದು" ಎಂದು ತಮ್ಮ ತಂದೆಯು ಅಪ್ಪಣೆ ಕೊಡಿಸಿದ್ದ ನೆಂದು ಹೇಳಿದನು. ಇದನ್ನು ಕೇಳಿ ಸಗರನು ಅವರ ತಂದೆಯು ಹೇಳಿದಂತೆಯೇ ಮಾಡುವೆನೆಂದೂ ದುಃಖವನ್ನುಳಿದು ಸಂತೋಷವಾಗಿರೆಂದೂ ಹೇಳಿ, ತನ್ನ ದುಷ್ಟಾಶ್ವದ ಹಜ್ಜೆ ಹಿಡಿದು ಹೋಗುತ್ತಿರುವಲ್ಲಿ ಹಸ್ತ್ಯಶ್ವ ರಥಪದಾತಿಗಳ ಕಳಕಳವು ಕೇಳಿಸಿತು. ಹೀಗೆ ತನ್ನ ಸೈನ್ಯವು ಬಂದು ಸೇರಲು ಸಗರನು ಸಹಸ್ರ ಲೋಚನನನ್ನೂ ಉತ್ಪಲನೇತ್ರೆಯನ್ನೂ ತನ್ನ ಪಟ್ಟದಾನೆಯ ಮೇಲೆ ಕೂಡಿಸಿಕೊಂಡು

ಹೊರಟು ಅಯೋಧ್ಯೆಯನ್ನು ಸೇರಿ ಉತ್ಪಲನೇತ್ರೆಯನ್ನು ಮದುವೆಮಾಡಿಕೊಂಡು ವಿದ್ಯಾಧರಲೋಕವನ್ನು ಸಹಸ್ರಲೋಚನನಿಗೆ ಕೊಟ್ಟನು. ಸಹಸ್ರಲೋಚನನು ತನ್ನ ತಂದೆಯನ್ನು ಕೊಂದವನನ್ನು ಕೊಂದಲ್ಲದೆ ಬಿಡೆನೆಂದು ದೊಡ್ಡ ಸೈನ್ಯದೊಡನೆ ಬಂದು ರಥನೂಪುರಚಕ್ರವಾಳಪುರವನ್ನು ಮುತ್ತಲು ಪೂರ್ಣಘನನು ಹೆದರಿ ಮಗನಾದ ತೋಯದವಾಹನನನ್ನು ತನ್ನ ವಿದ್ಯೆಯಿಂದ ಹಂಸವನ್ನಾಗಿ ಮಾಡಿ ಕಳುಹಿಸಿ ತಾನು ಮಹಾಯುದ್ಧವನ್ನು ಮಾಡಿ ಸತ್ತನು. ಸಹಸ್ರಲೋಚನನು ತೋಯದವಾಹನನನ್ನು, ತೆಕ್ಕೆ ಹಾಕಿಕೊಂಡಿದ್ದ ಹಾವಿನಂತೆ, ಅಟ್ಟಿಕೊಂಡು ಬಂದು, ಇಬ್ಬರೂ ಅಜಿತಭಟ್ಟಾರಕರ ಸಮವಸರಣ ಭೂಮಿಯನ್ನು ಸೇರಲು, ಅವರಿಗಿದ್ದ ವೈರವು ನಾಶಹೊಂದಿತು. ಆಗ ಸಹಸ್ರಲೋಚನನು ಗಣಧರರನ್ನು ಕುರಿತು ತನ್ನ ತಂದೆಗೂ ತೋಯದವಾಹನನ ತಂದೆಗೂ ಹುಟ್ಟಿದ ವೈರವು ಈಜನ್ಮದ್ದೋ ಹಿಂದಣ ಜನ್ಮದ್ದೋ ತಿಳಿಸಬೇಕೆಂದು ಬೇಡಿಕೊಳ್ಳಲು ಅಜಿತ ಭಟ್ಟಾರಕರು ಹಿಂದಣ ಜನ್ಮಗಳ ಕಥೆಯನ್ನು ಸವಿಸ್ತಾರವಾಗಿ ಹೇಳಿದರು. ತರುವಾಯ ಅಲ್ಲಿಯೇ ಇದ್ದ ಸಗರನು ತನಗೆ ಸಹಸ್ರಲೋಚನನಲ್ಲುಂಟಾದ ಒಲವಿಗೆ ಕಾರಣವನ್ನು ಕೇಳಿ ತಿಳಿದುಕೊಂಡನು.

ಈ ಕಥೆಯನ್ನು ಜಿನಮುಖದಿಂದ ಕೇಳುತ್ತಿದ್ದ ಭೀಮನೆಂಬ ರಾಕ್ಷಸನು ತಾನು ತೋಯದವಾಹನನ ಪೂರ್ವಜನ್ಮದ ತಂದೆಯೆಂದರಿತು ಪ್ರೇಮಹುಟ್ಟಲು, ವಿಜಯಾರ್ಧನಗದಲ್ಲಿ ಹಗೆಗಳ ಮಧ್ಯದಲ್ಲಿದ್ದರೆ ಅವನಿಗೆ ಕೇಡುಂಟಾಗುವುದೆಂದು ಅವನೊಡನೆ ಹೇಳಿ ದಕ್ಷಿಣ ಸಮುದ್ರದಲ್ಲಿ ಏಳುನೂರು ಯೋಜನ ವಿಸ್ತೀರ್ಣವುಳ್ಳ ಅತಿರಮಣೀಯವಾದ ರಾಕ್ಷಸದ್ವೀಪದ ನಡುವೆ ಏಳು ಕನಕ ಪ್ರಾಕಾರಗಳುಳ್ಳ ತ್ರಿಕೂಟಾಚಲದ ಶಿಖರದಲ್ಲಿ ಮುನ್ನೂರು ಯೋಜನ ವಿಸ್ತೀರ್ಣವುಳ್ಳ ನಿರಾತಂಕವಾದ ಲಂಕೆಯಲ್ಲಿ ಸುಖವಾಗಿ ರಾಜ್ಯಭಾರ ಮಾಡೆಂದು ಪೂರ್ವಜನ್ಮದ ಸ್ನೇಹದಿಂದ ತೋಯದವಾಹನನನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ ರಾಜ್ಯಾಭಿಷೇಕ ಮಾಡಿ ಪಟ್ಟವನ್ನು ಕಟ್ಟಿ ರಾಕ್ಷಸವಿದ್ಯೆ ಮೊದಲಾದ ಹಲವು ವಿದ್ಯೆಗಳನ್ನೂ ನವಮುಖಾಭರಣ ಮೊದಲಾದ ಅನೇಕ ದಿವ್ಯಾಭರಣಗಳನ್ನೂ ನವನಿಧಿವೆರಸು ಪಾತಾಳಲಂಕೆಯನ್ನೂ ಕೊಟ್ಟು ಅವನಿಗೆ ರಾಕ್ಷಸಕುಲವೇ ಕುಲವಾಗುವುದೆಂದು ನಿಯಮಿಸಿ ತನ್ನ ಪರಿವಾರದೊಡನೆ ದ್ವೀಪಾಂತರಕ್ಕೆ ಹೋದನು.

ತೋಯದವಾಹನನು ವಿಜಯಾರ್ಧದ ಕಿನ್ನರಪುರವನ್ನಾಳುವ ರತಿಮಯೂಖನ ಮಗಳನ್ನು ಮದುವೆಮಾಡಿಕೊಂಡು ರಾಜ್ಯಭಾರ ಮಾಡುತ್ತ ಕೆಲವು ಕಾಲದ ಮೇಲೆ ವೈರಾಗ್ಯಪರನಾಗಿ ತನ್ನ ಹಿರಿಯ ಮಗನಾದ ಮಹಾರಾಕ್ಷಸನಿಗೆ ರಾಜ್ಯವನ್ನೊಪ್ಪಿಸಿ ದೀಕ್ಷೆಗೊಂಡು ಮೋಕ್ಷಕ್ಕೆ ಹೋದನು. ಮಹಾರಾಕ್ಷಸನು ವಿಭವದಲ್ಲಿ

ಸಹಸ್ರಾಕ್ಷನಿಗೆ ಸಮರ್ಪಿಸಿ ರಾಜ್ಯಭಾರ ಮಾಡುತ್ತ ಅಮರರಾಕ್ಷಸ ಭಾನು ರಾಕ್ಷಸರೆಂಬಿಬ್ಬರು ಮಕ್ಕಳನ್ನು ಪಡೆದು ಒಂದು ದಿನ ಕ್ರೀಡಾವನಕ್ಕೆ ಬಂದು ಮಕ ರಂದದ ಆಸೆಗಾಗಿ ಬಂದು ರಾತ್ರಿಯಲ್ಲಿ ಮುಚ್ಚಿಕೊಂಡ ಕಮಲದಿಂದ ಹೊರಕ್ಕೆ ಹೊರಡಲರಿಯದೆ ಅಲ್ಲಿಯೇ ಸತ್ತ ಭೃಂಗವೊಂದನ್ನು ನೋಡಿ ಸಂಸಾರ ವೈರಾಗ್ಯ ಪರನಾಗಿ ಶ್ರುತಸಾಗರ ಚಾರಣರನ್ನು ಕಂಡು ತನ್ನ ವಿಭವಕಾರಣವನ್ನು ಕೇಳಲು ಅವರು ಅದನ್ನು ವಿಶದವಾಗಿ ತಿಳಿಸಿದರು. ಇದನ್ನು ಕೇಳಿ ಮಹಾರಾಕ್ಷಸನು ತನ್ನ ಮಗನಾದ ಅಮರರಾಕ್ಷಸನಿಗೆ ಲಂಕೆಯನ್ನು ಕೊಟ್ಟು ತಪಸ್ಸುಮಾಡಿ ಮುಕ್ತಿ ಯನ್ನು ಪಡೆದನು. ಅಮರರಾಕ್ಷಸನಿಗೂ ಅವನ ತಮ್ಮನಾದ ಭಾನುರಾಕ್ಷಸನಿಗೂ ಹತ್ತು ಹತ್ತು ಮಂದಿ ಗಂಡುಮಕ್ಕಳು ಹುಟ್ಟಿದರು. ಅವರಲ್ಲೊಬ್ಬೊಬ್ಬರನ್ನು ಒಂದೊಂದು ಪಟ್ಟಣಕ್ಕೆ ಅರಸುಮಾಡಿ ಅಣ್ಣತಮ್ಮಂದಿರಿಬ್ಬರೂ ವೈರಾಗ್ಯಪರ ರಾಗಿ ನಿರ್ವಾಣಕ್ಕೆ ಸಂದರು. ಆ ಸಂತತಿಯಲ್ಲಿ ಅನೇಕ ಮಂದಿ ಅರಸುಗಳ ರಾಜ್ಯ ಭಾರವು ಕಳೆದಮೇಲೆ ಬಹಳ ತೇಜಸ್ವಿಯಾದ ಘನಪ್ರಭನೆಂಬುವನು ಲಂಕಾ ಪುರಕ್ಕರಸಾದನು. ಅವನ ಮಗನಾದ ಧವಳಕೀರ್ತಿಯು ಬಹಳ ಯಶಸ್ವಿಯಾಗಿ ರಾಜ್ಯವನ್ನಾಳುತ್ತಿರುವಲ್ಲಿ ರತ್ನಪುರದ ಪೂರ್ಪ್ಪೋತ್ತರನು ತನ್ನ ಮಗನಾದ ಪುಷ್ಪೋತ್ತರನಿಗೆ ಮೇಘಪುರದರಸನಾದ ಅತೀಂದ್ರನೆಂಬ ವಿಯಚ್ಚರನ ಮಗಳಾದ ದೇವಿಲೆಯನ್ನು ಬೇಡಲು, ಅತೀಂದ್ರನು ಅವನಿಗೆ ಮಗಳನ್ನು ಕೊಡದೆ ಧವಳ ಕೀರ್ತಿಗೆ ಕೊಟ್ಟು ಮದುವೆಮಾಡಿದನು.

ಅತೀಂದ್ರನ ಮಗನಾದ ಶ್ರೀಕಂಠಕುಮಾರನು ಒಂದು ದಿನ ಜಿನವಂದನಾ ನಿಮಿತ್ತವಾಗಿ ಮಂದರಕಂದರಕ್ಕೆ ಹೋಗಿ ರತ್ನಪುರದಮೇಲೆ ಮೇಘಪುರಕ್ಕೆ ಬರುತ್ತಿರುವ ಸಮಯದಲ್ಲಿ ಪುಷ್ಪೋತ್ತರನ ತಂಗಿಯಾದ ಪದ್ಮೋತ್ತರೆಯು ರಾಣಿ ವಾಸದಲ್ಲಿ ಸುಸ್ವರದಿಂದ ಹಾಡುತ್ತಿರುವುದನ್ನು ಕೇಳಿ ಮೋಹಪರವಶನಾಗಿ, ಗಾನಕ್ಕೆ ಸೋತುಬರುವ ಜಿಂಕೆಯಂತೆ, ಅಲ್ಲಿಗೆ ಬರಲು ಕನ್ನೆಯು ಅವನನ್ನು ನೋಡಿ ಮೋಹಿಸಿದಳು. ಹೀಗೆ ತನ್ನ ವಶವಾದ ಕನ್ನೆಯನ್ನು ಶ್ರೀಕಂಠಕುಮಾರನು ಲಂಕೆಗೆತ್ತಿಕೊಂಡು ಹೋಗಿ ಧವಳಕೀರ್ತಿಯ ಬಳಿಯಲ್ಲಿರಲು ಪುಷ್ಪೋತ್ತರನು ಅದನ್ನು ತಿಳಿದು ತನಗೆ ಮಗಳನ್ನು ಕೊಡದೆ ಹೋದುದಕ್ಕೂ ಕುಲಾಚಾರ ವನ್ನು ಬಗೆಯದೆ ಈ ರೀತಿಯಾಗಿ ತನ್ನ ತಂಗಿಯನ್ನು ಅಪಹರಿಸಿದುದಕ್ಕೂ ರೋಷಾವಿಷ್ಟನಾಗಿ ಲಂಕೆಯಮೇಲೆ ದಂಡೆತ್ತಿಬಂದನು. ಧವಳಕೀರ್ತಿಯು ಸಾಮೋ ಪಾಯವನ್ನು ಮಾಡಲೆಳಸಿ ತನ್ನ ಮಂತ್ರಿಗಳನ್ನು ಆತನ ಬಳಿಗೆ ಕಳುಹಿಸಿ ಆತನ ತಂಗಿಯನ್ನು ತನ್ನ ಮಗನಿಗೆ ಕೊಟ್ಟು ಮದುವೆ ಮಾಡಬೇಕೆಂದು ಕೇಳಿಕೊಂಡನು. ಪುಷ್ಪೋತ್ತರನು ಅದಕ್ಕೊಪ್ಪಿ ಶುಭ ಮುಹೂರ್ತದಲ್ಲಿ ಪದ್ಮೋತ್ತರೆಯನ್ನು ಶ್ರೀಕಂಠ ನಿಗೆ ಮದುವೆಮಾಡಿಕೊಟ್ಟು ತನಗೆ ಸಮೀಪವಾಗಿರುವ ಅನೇಕ ದ್ವೀಪ ಮುಖ್ಯ

ನಾದ ವಾನರದ್ವೀಪದೊಳಿರುವಂತೆ ಆತನನ್ನೊಡಂಬಡಿಸಲು, ಆತನು ಒಂದು ದಿನ ಆ ದ್ವೀಪವನ್ನು ನೋಡುವ ನಿಮಿತ್ತವಾಗಿ ಬರುತ್ತ ಒಂದೆಡೆಯಲ್ಲಿ ವಾನರಗಳನ್ನು ಕಂಡು ಅವನ್ನು ತನ್ನ ಬಳಿಗೆ ಬರಮಾಡಿಕೊಂಡು ಕಿಷ್ಕಿಂಧಗಿರಿಯಮೇಲೆ ಹದಿನಾಲ್ಕು ಯೋಜನ ವಿಸ್ತಾರದ ಪಟ್ಟಣವನ್ನು ಕಟ್ಟಿಸಿ ಅದಕ್ಕೆ ಕಿಷ್ಕಿಂಧಪುರವೆಂಬ ಹೆಸರನ್ನಿಟ್ಟು ಅಲ್ಲಿ ಹಲವು ಕಾಲ ರಾಜ್ಯಭಾರ ಮಾಡುತ್ತಿದ್ದನು. ಹೀಗಿರಲು, ಶ್ರೀಕಂಠನು ಒಂದು ದಿನ ನಂದೀಶ್ವರ ಪೂಜೆಗೆ ಅಚ್ಯುತೇಂದ್ರನೊಡನೆ ಹೋಗುತ್ತ, ಮಾನುಷೋತ್ತರ ದ್ವೀಪದಿಂದತ್ತಕಡೆಗೆ ಮನುಷ್ಯರಿಗೆ ಪ್ರವೇಶವಿಲ್ಲದುದರಿಂದ ತನ್ನ ವಿಮಾನವು ಹೋಗದಿರಲು ಹಿಂದಿರುಗಿ ಬಂದು ಅದೇ ನಿರ್ವೇಗ ಕಾರಣವಾಗಿ ತನ್ನ ಮಗನಾದ ವಜ್ರಕಂಠನಿಗೆ ರಾಜ್ಯವನ್ನು ಕೊಟ್ಟು ತಪಸ್ಸಿಗೆ ಹೋದನು. ಈತನೂ ಕೆಲವು ಕಾಲ ರಾಜ್ಯಭಾರಮಾಡಿ ತನ್ನ ಮಗನಾದ ಇಂದ್ರಾಯುಧನಿಗೆ ಪಟ್ಟಕಟ್ಟಿ ದೀಕ್ಷೆಗೊಂಡನು.

ಆ ಕಪಿಕುಲದ ಕಿಷ್ಕಿಂಧಾಧಿಪರಲ್ಲಿ ಅಪ್ರತಿಹತನಾದ ಅಮರಪ್ರಭನು ಹುಟ್ಟಿದನು. ಅತ್ತ, ಲಂಕಾಧಿಪನಾದ ಧವಳಕೀರ್ತಿಯ ಕುಲದಲ್ಲಿ ಅನೇಕರು ಹುಟ್ಟಿ ರಾಜ್ಯಭಾರ ಮಾಡಿದಮೇಲೆ ತ್ರಿಕೂಟನೆಂಬುವನು ದೊರೆಯಾದನು. ಆತನ ಮಗಳಾದ ಗುಣವತಿಯನ್ನು ಅಮರಪ್ರಭನಿಗೆ ಮದುವೆಮಾಡಲೆಂದು ಕಿಷ್ಕಿಂಧಪುರಕ್ಕೆ ಕರೆದುಕೊಂಡು ಹೋದರು. ಅಲ್ಲಿ ಆಕೆಯು ವಿವಾಹವೇದಿಕೆಯಲ್ಲಿ ಪಂಚರತ್ನವರ್ಣ ಚೂರ್ಣದಿಂದ ಬರೆದ ಲತೆಗಳಲ್ಲಿ ವಾನರಗಳನ್ನು ನೋಡಿ ಹೆದರಿಕೊಳ್ಳಲು ಇದನ್ನು ಬರೆದವರು ಯಾರೆಂದು ದೊರೆಯು ಕೇಳಿದ್ದಕ್ಕೆ ಗೃಹಮಹತ್ತರನು ದೊರೆಯ ಪೂರ್ವಜನಾದ ಶ್ರೀಕಂಠನು ಕಪಿಗಳನ್ನು ಕೊಂಡಾಡಿದನಾದುದರಿಂದ ಆ ಕುಲದಲ್ಲಿ ಉತ್ಸವಗಳಲ್ಲಿ ಹಾಗೆ ಬರೆಯುವರೆಂದು ತಿಳಿಸಿದನು. ಅದನ್ನು ಕೇಳಿ ದೊರೆಯು ಸಮಾಹಿತ ಚಿತ್ತನಾಗಿ, ಮೆಟ್ಟುವ ಸ್ಥಳದಲ್ಲಿ ಏಕೆ ಬರೆದಿರೆಂದಾಕ್ಷೇಪಿಸಿ, ಪತಾಕೆಗಳಲ್ಲಿಯೂ ಕಿರೀಟಗಳಲ್ಲಿಯೂ ಚಿನ್ನದಿಂದಲೂ ರತ್ನಗಳಿಂದಲೂ ವಾನರಗಳನ್ನು ವಿರಚಿಸಿ ಕೊಂಡಾಡಿ, ತನ್ನ ಕುಲದವರನ್ನು ವಾನರಧ್ವಜರೆಂದೂ ವಾನರ ಕುಲದವರೆಂದೂ ರೂಢಿಮಾಡಿ ತನ್ನ ಮಗನಾದ ಕಪಿಕೇತುವಿಗೆ ರಾಜ್ಯವನ್ನು ಕೊಟ್ಟು ಸಂನ್ಯಾಸವನ್ನು ವಹಿಸಿದನು. ಈ ಕುಲದಲ್ಲಿ ಹುಟ್ಟಿದ ಕಿಷ್ಕಿಂಧ ಅಂಧ್ರಕರೆಂಬಿಬ್ಬರು ಅಣ್ಣತಮ್ಮಂದಿರು ದೊರೆಗಳಾದರು. ವಿದ್ಯುತ್ಕೇಶನ ತರುವಾಯ ಆತನ ಮಗನಾದ ಸುಕೇಶನು ಲಂಕೆಗೆ ದೊರೆಯಾದನು. ಆ ಕಾಲದಲ್ಲಿ ವಿಜಯಾರ್ಧ ನಗೋಪತ್ಯಕದ ಆದಿತ್ಯನಗರವನ್ನಾಳುವ ಮಂದರಮಾಲಿಯ ಮಗಳಾದ ಶ್ರೀಮಾಲೆಯು ಸೌಂದರ್ಯದಲ್ಲಿ ರತಿಯನ್ನು ಮೀರಿಸಿ ಪ್ರಾಪ್ತವಯಸ್ಕಳಾಗಲು ಆ ಕನ್ನೆಯ ಸ್ವಯಂವರಕ್ಕೆ ನಾನಾ ದಿಕ್ಕುಗಳ ಖಚರ ಕುಮಾರರೂ ವಿದ್ಯಾಧರ ಚಕ್ರವರ್ತಿಯಾದ ಅಶನಿವೇಗನ ಮಗನಾದ ವಿಜಯಸಿಂಹನೂ ಕಪಿಕೇತುಗಳಾದ ಕಿಷ್ಕಿಂಧಾಂಧ್ರಕರೂ ಲಂಕಾಧಿಪನಾದ ಸುಕೇಶನೂ ಮೊದಲಾದ ಹಲವರು ವಿಯಚ್ಚರಾಧಿರಾಜರು

ಬಂದು ಮಣಿಮಯಾಸನಗಳಲ್ಲಿ ಕುಳಿತುಕೊಂಡರು. ಶ್ರೀಮಾಲೆಯು ಮನ್ಮಥ ರೂಪನಾದ ಕಿಷ್ಕಿಂಧನಿಗೆ ಮಾಲೆಯನ್ನು ಹಾಕಲು ಆಹವ ಸಿಂಹನಾದ ವಿಜಯ ಸಿಂಹನು ಕಾಳೆಗಕ್ಕುದ್ಯುಕ್ತನಾದನು. ಆಗ ಅಂಧ್ರಕ ಸುಕೇಶರು ಕಿಷ್ಕಿಂಧ ನನ್ನೂ ಶ್ರೀಮಾಲೆಯನ್ನೂ ಕಿಷ್ಕಿಂಧಪುರಕ್ಕೆ ಕಳುಹಿಸಿ ವಿಜಯಸಿಂಹನೊಡನೆ ಕಾದಿ ಅವನನ್ನು ಕೊಂದರು. ಅಶನಿವೇಗನು ತನ್ನ ಮಗನ ಸಾವನ್ನು ಕೇಳಿ ವ್ಯಸನದಿಂದಲೂ ಕೋಪದಿಂದಲೂ ಗಗನಮಾರ್ಗದಲ್ಲಿ ಬಂದು ಕಿಷ್ಕಿಂಧಪುರವನ್ನು ಮುತ್ತಿ ಅಂಧ್ರಕನನ್ನು ಕೊಲ್ಲಲು ಕಿಷ್ಕಿಂಧ ಸುಕೇಶರು ಬಹಳ ಭಯಪಟ್ಟು ಪಾತಾಳ ಲಂಕೆಯನ್ನು ಸೇರಿದರು. ಅಶನಿವೇಗನು ಸುಕೇಶನ ರಾಜಧಾನಿಯಾದ ಲಂಕೆ ಯನ್ನು ನಿರ್ಘಾತನೆಂಬುವನಿಗೆ ಕೊಟ್ಟು ತನ್ನ ರಾಜಧಾನಿಗೆ ಹೋಗಿ, ಸಾಮ್ರಾಜ್ಯ ತೃಷ್ಣೆಯು ಕರಗಿಹೋಗಲು, ತನ್ನ ಮಗನಾದ ಸಹಸ್ರಾರನಿಗೆ ಪಟ್ಟವನ್ನು ಕಟ್ಟಿ ಜಿನೇಂದ್ರಮುನಿ ರೂಪವನ್ನು ತಾಳಿದನು.

ಇತ್ತ, ಕಿಷ್ಕಿಂಧನು ಮಧುಪರ್ವತದ ಮೇಲೆ ಪುರವನ್ನು ಕಟ್ಟಿ ಶ್ರೀಮಾಲೆ ಯೊಡನೆ ಸುಖದಿಂದಿರುತ್ತ ಋಕ್ಷಜ ಸೂರ್ಯಜರೆಂಬ ಗಂಡುಮಕ್ಕಳನ್ನೂ ಸೂರ್ಯ ಮಾಲೆಯೆಂಬ ಮಗಳನ್ನೂ ಪಡೆದನು. ಆಕೆಯನ್ನು ಮೇಘಪುರದೊಡೆಯನಾದ ಮೇರುವಿನ ಮಗನಾದ ಸಿಂಹಮರ್ದನನು ಮದುವೆಮಾಡಿಕೊಂಡು ಕರ್ಣಪರ್ವತ ದಲ್ಲಿ ಕರ್ಣಕುಂಡಲಪೆಂಬ ಪುರವನ್ನು ಕಟ್ಟಿಕೊಂಡು ಸುಖವಾಗಿದ್ದನು. ಸುಕೇಶನಿಗೆ ಮಾಲಿಸುಮಾಲಿ ಮಾಲ್ಯವಂತರೆಂಬ ಮಕ್ಕಳು ಹುಟ್ಟಿ ಪ್ರಾಪ್ತವಯಸ್ಕರಾಗಿ ಸಕಲ ವಿದ್ಯೆಗಳನ್ನೂ ಸಾಧಿಸಿ ಅವಾರ್ಯವೀರ್ಯರಾದುದರಿಂದ ಮೆಚ್ಚಿದ ದೆಸೆಯಲ್ಲಿ ಮೆಚ್ಚಿದಂತೆ ಕ್ರೀಡಿಸುತ್ತಿರಲು ಸುಕೇಶನು ಅವರನ್ನು ಕರೆದು ದಕ್ಷಿಣಸಮುದ್ರಕ್ಕೆ ಹೊಗಬೇಡಿ ರೆನ್ನಲು ಅವರು ಅದಕ್ಕೆ ಕಾರಣವೇನೆಂದು ಕೇಳಿದರು. ಅದಕ್ಕೆ ಸುಕೇಶನು ತೋಯದವಾಹನನಿಂದ ಅನ್ವಯಾಗತವಾಗಿ ತಮಗೆ ಬಂದ ಲಂಕಾಪುರವನ್ನು ಅಶನಿವೇಗನು ಕಿತ್ತುಕೊಂಡು ನಿರ್ಘಾತನಿಗೆ ಕೊಟ್ಟನೆಂದೂ ಅವನು ಅನೇಕ ವಿದ್ಯೆಗಳಿಂದ ಅದನ್ನು ಪುಗಲು ಯಾರಿಗೂ ಸಾಧ್ಯವಾಗದಂತೆ ಕಾಪುಮಾಡಿ ಬಲಿಷ್ಠನಾಗಿರುವನೆಂದೂ ಅವನು ಅವರನ್ನು ಕಂಡರೆ ಕೊಲ್ಲುವನೆಂದೂ ಎಚ್ಚರಿಕೆ ಹೇಳಿದೆನೆಂದು ತಿಳಿಸಿದನು. ಅದಕ್ಕೆ ಅವರು ಕೋಪಗೊಂಡು ಅಸಂಖ್ಯಾತ ಬಲ ಸಮೇತರಾಗಿ ಹೊರಟು ಆಕಾಶಮಾರ್ಗದಿಂದ ಬಂದು ಲಂಕೆಯನ್ನು ಮುತ್ತಿ ನಿರ್ಘಾತನನ್ನು ಕೊಂದು ಲಂಕಾಪುರವನ್ನು ಸ್ವಾಧೀನಪಡಿಸಿಕೊಂಡು ತಾಯಿತಂದೆ ಗಳನ್ನು ಅಲ್ಲಿಗೆ ಕರೆತರಿಸಿ ಸುಖದಿಂದಿದ್ದರು. ಹೀಗೆ ಕೆಲವು ಕಾಲವು ಕಳೆಯಲು ಸುಕೇಶನು ಮಕ್ಕಳಿಗೆ ರಾಜ್ಯವನ್ನಿತ್ತು ಕಿಷ್ಕಿಂಧನೊಡಗೂಡಿ ತಪಸ್ಥನಾದನು.

ಅತ್ತ, ರಥನೂಪುರಚಕ್ರವಾಳಪುರವನ್ನಾಳುವ ಸಹಸ್ರಾರನ ಪಟ್ಟದರಸಿಗೆ ಎಳವಸಿರಿನಲ್ಲಿ ಇಂದ್ರನ ವಿಭೂತಿಯನ್ನು ನೋಡುವ ಬಯಕೆ ಹುಟ್ಟಲು ಸಹಸ್ರಾರ

ನು ವಿದ್ಯೆಯಿಂದ ಆ ವಿಭೂತಿಯನ್ನು ತೋರಿಸಿ ಬಯಕೆಯನ್ನು ತೀರಿಸಲು ನವ ಮಾಸ ಪೂರ್ತಿಯಾದ ಮೇಲೆ ಆಕೆಯು ಗಂಡು ಮಗನನ್ನು ಹೆತ್ತಳು. ಆ ಕೂಸಿಗೆ ಸಹಸ್ರಾರನು ತಾಯಿಯ ಬಯಕೆಯ ಕಾರಣದಿಂದ ಇಂದ್ರನೆಂದು ನಾಮಕರಣ ಮಾಡಿದನು. ಆ ಹುಡುಗನು ಕಾಲಕ್ರಮವಾಗಿ ಬೆಳೆದು ಸಕಲ ವಿದ್ಯೆಗಳನ್ನೂ ಕಲಿತು ಬಹಳ ಪರಾಕ್ರಮಿಯಾಗಿ ಸಕಲಚಕ್ರವರ್ತಿ ಪದವನ್ನು ಪಡೆದು ತನ್ನ ಪಟ್ಟಣವನ್ನು ಸ್ವರ್ಗವೆಂದೂ, ತನ್ನ ಖಚರ ಕಾಂತೆಯರನ್ನು ರಂಭೆ ಊರ್ವಶಿ ಮೊದಲಾದ ದೇವಕಾಂತೆಯರೆಂದೂ, ತನ್ನ ವಾರಣವನ್ನು ಐರಾವಣವೆಂದೂ, ತನ್ನ ಮಂತ್ರಿಮುಖ್ಯನನ್ನು ಬೃಹಸ್ಪತಿಯೆಂದೂ ಮೊದಲಾಗಿ ಕರೆದು ತಾನೇ ಇಂದ್ರನೆಂದು ಭಾವಿಸಿ ಸುಖವನ್ನನುಭವಿಸುತ್ತಿದ್ದನು.

ಇತ್ತ, ಮಾಲಿಗೆ ಕಪ್ಪವನ್ನು ಕೊಡುತ್ತಿದ್ದ ಖಚರರು ಇಂದ್ರನನ್ನು ಹೊಂದಿ ಮಾಲಿಯನ್ನು ತಿರಸ್ಕರಿಸಲು ಆತನು ಬಹಳ ಕೋಪಗೊಂಡು ಇಂದ್ರನನ್ನು ನಿರ್ಮೂಲಮಾಡುವುದಕ್ಕಾಗಿ ಸುಮಾಲಿ ಮಾಲ್ಯವಂತ ಋಕ್ಷಜ ಸೂರ್ಯಜ ರೊಡಗೂಡಿ ಅಸಂಖ್ಯಾತ ಸೇನಾಸಮೇತನಾಗಿ ಬರುವುದನ್ನು ಕೇಳಿ ಇಂದ್ರನು ಅವರನ್ನಡ್ಡಗಟ್ಟಿ ಮಹಾಯುದ್ಧವನ್ನು ಮಾಡಿ ಮಾಲಿಯನ್ನು ಕೊಂದನು; ಮಿಕ್ಕವರು ಓಡಿಹೋಗಿ ಪಾತಾಳಲಂಕೆಯನ್ನು ಸೇರಿದರು. ಇಂದ್ರನು ತನ್ನ ಪಟ್ಟಣಕ್ಕೆ ಬಂದು ಲಂಕೆಯನ್ನು ವೈಶ್ರವಣನಿಗೂ ಕಿಷ್ಕಿಂಧಪುರವನ್ನು ಯಮಧರನಿಗೂ ಕೊಟ್ಟು ತಾನು ಇಂದ್ರನಂತೆ ಸುಖವಾಗಿದ್ದನು.

ಪಾತಾಳಲಂಕೆಯಲ್ಲಿ ಸುಮಾಲಿಗೆ ಜಗದ್ವಿಖ್ಯಾತನಾಗುವ ರತ್ನಶ್ರವನೆಂಬ ಮಗನು ಹುಟ್ಟಿದನು. ಆತನು ಅತಿ ಪ್ರಖ್ಯಾತನಾಗಿ ವಿದ್ಯೆಗಳನ್ನು ಸಾಧಿಸಿ ಸಿದ್ಧ ಪರಮೇಷ್ಠಿಗಳನ್ನು ಸ್ತುತಿಸುತ್ತಿದ್ದಕಾಲದಲ್ಲಿ ವ್ಯೋಮಭಾನುವೆಂಬ ವಿಯಚ್ಚರ ನು ತನ್ನ ಮಗಳಾದ ಕೈಕಸಿಯೆಂಬ ಕನ್ಯಾರತ್ನವನ್ನು ದಿವ್ಯಮುನಿಮುಖ್ಯರ ಆದೇಶದಿಂದ ಆತನಿಗೆ ಕೊಡಲು, ಅಲ್ಲಿಯೇ ವಿದ್ಯೆಯಿಂದ ಪುಷ್ಪೋತ್ತರವೆಂಬ ಪುರ ವನ್ನು ಮಾಡಿಸಿ ತಾಯಿ ತಂದೆಗಳನ್ನು ಅಲ್ಲಿಗೆ ಬರಿಸಿ ಶುಭ ಮುಹೂರ್ತ ದಲ್ಲಿ ಕೈಕಸಿಯನ್ನು ಮದುವೆನಿಂದು ನಿರಂತರೋತ್ಸವದಲ್ಲಿದ್ದನು. ಕೈಕಸಿಯು ಕಾಲಕ್ರಮದಲ್ಲಿ ಗರ್ಭವನ್ನು ಧರಿಸಿ ಬಹು ಪರಾಕ್ರಮಿಯಾಗುವ ಮಗನನ್ನು ಹೆತ್ತಳು. ಹತ್ತನೆಯ ದಿನ ಭೀಮನೆಂಬ ರಾಕ್ಷಸನು ಕೊಟ್ಟ ನವಮುಖ ರತ್ನ ಭೂಷಣದ ಮಾಣಿಕಗಳಲ್ಲಿ ಕೂಸಿನ ಮುಖವು ಪ್ರತಿಬಿಂಬಿಸಲು ಆ ಮಗುವಿಗೆ ದಶ ಮುಖನೆಂಬ ಹೆಸರನ್ನಿಟ್ಟರು. ಕೈಕಸಿಯು ಅನುಕ್ರಮವಾಗಿ ಭಾನುಕರ್ಣ ಚಂದ್ರನಖಿ ವಿಭೀಷಣರೆಂಬ ಮೂವರು ಮಕ್ಕಳನ್ನು ಹೆತ್ತಳು. ಮೂವರು ಗಂಡುಮಕ್ಕಳೂ ಬಾಲ್ಯವನ್ನತಿಕ್ರಮಿಸಿ ಪ್ರಭುಮಂತ್ರೋತ್ಸಾಹ ಶಕ್ತಿತ್ರಯವೇ ಮೂರ್ತಿಗೊಂಡಂತೆ ಅಖಿಲ ಶಾಸ್ತ್ರ ಪಾರಂಗತರಾದರು.

ಒಂದು ದಿನ ಈ ಮೂವರೂ ಆಸ್ಥಾನದಲ್ಲಿ ನಾಯಕ ರತ್ನಗಳಂತಿರುವಾಗ, ವೈಶ್ರವಣನು ಒಹಳ ವೈಭವದಿಂದ ತೃಣೀಕೃತ ತ್ರಿಭುವನನಾಗಿ ಆಕಾಶದಲ್ಲಿ ಹೋಗುತ್ತಿರಲು, ಇಷ್ಟು ವೈಭವದಿಂದ ಹೋಗುತ್ತಿರುವನಾರೆಂದು ದಶಗ್ರೀವನು ಕೇಳಿದುದಕ್ಕೆ ಕೈಕಸಿಯು, "ಈತನು ನಮ್ಮ ಅಕ್ಕನ ಮಗನಾದ ವೈಶ್ರವಣನು, ಉಭಯ ಶ್ರೇಣಿಗರಸನಪ್ಪ ಇಂದ್ರನೆಂಬ ವಿದ್ಯಾಧರ ಚಕ್ರವರ್ತಿಯು ನಿಮ್ಮ ಹಿರಿಯ ಮುತ್ತಪ್ಪನಾದ ಮಾಲಿಯನ್ನು ಕೊಂದು ನಮ್ಮ ವಂಶಕ್ಕೆ ಬಂದ ಲಂಕೆಯನ್ನು ವೈಶ್ರವಣನಿಗೆ ಕೊಡಲು, ಇವನು ಅದನ್ನಾಳುತ್ತಿರುವನು. ನಾವು ಇವನಿಗೆ ಭೀತರಾಗಿರುವೆವು" ಎಂದು ಹೇಳಿ ವ್ಯಸನಪಡಲು, "ದಶವದನನು ನಿಮ್ಮ ಹಗೆಯನ್ನು ತೀರಿಸಿ ನಿಮಗೆ ಸಂತೋಷಮಾಡುವನು" ಎಂದು ಹೇಳಿ ವಿಭೀಷಣನು, ಅದುವರೆಗೂ ತಮ್ಮ ಕುಲಕ್ಕೆ ತಕ್ಕ ವಿದ್ಯೆಗಳನ್ನು ಸಾಧಿಸುವೆವೆಂದು ತಾಯಿಗೆ ಬಿನ್ನವಿಸಿ, ಶುಭ ದಿನ ಮುಹೂರ್ತದಲ್ಲಿ ತಾಯಿತಂದೆಗಳಿಗೆರಗಿ ಅಪ್ಪಣೆಪಡೆದು ಮೂವರೂ ಅತ್ಯದ್ಭುತವಾದ ಅರಣ್ಯವನ್ನು ಹೊಕ್ಕು ದಶಕೋಟಿ ಮಂತ್ರದಲ್ಲಿ ಕೂಡಿದ ಷೋಡಶಾಕ್ಷರ ಮಹಾವಿದ್ಯೆಯನ್ನು ಸಾಧಿಸುವುದಕ್ಕಾಗಿ ತಪಸ್ಸಿಗೆ ನಿಂತರು. ಇದನ್ನು ಕಂಡು ಜಂಬೂದ್ವೀಪಾಧಿಪತಿಯಾದ ಅನಾದೃತನೆಂಬ ದೇವನು ಅವರ ವಿದ್ಯಾಸಾಧನೆಗೆ ವಿಘ್ನಹೇತುಗಳಾದ ಅನೇಕ ತೊಂದರೆಗಳನ್ನು ಮಾಡಿದರೂ ಅವರು ಮಂದರಪರ್ವತದಂತೆ ಅಚಲಿತ ಧೈರ್ಯರಾಗಿದ್ದು ವಿದ್ಯೆಗಳನ್ನು ಸಾಧಿಸಿ ಪಂಚಪರಮೇಷ್ಠಿಗಳನ್ನು ಪೂಜಿಸಿದರು. ರಾವಣನು ಚಂದ್ರಹಾಸವನ್ನು ಸಾಧಿಸಿ ವಿದ್ಯೆಯಿಂದ ಸ್ವಯಂಪ್ರಭವೆಂಬ ಪಟ್ಟಣವನ್ನು ಮಾಡಿ ತನ್ನ ಬಂಧುಜನರನ್ನೂ ಪರಿಜನರನ್ನೂ ಬರಿಸಿ ಸುಖದಿಂದಿದ್ದನು.

ಹೀಗಿರುವಲ್ಲಿ, ಸುರಸಂಗೀತಕ ಪುರದರಸನಾದ ಮಯನು ತನ್ನ ಮಗಳಾದ ಮಂಡೋದರಿಯನ್ನು ನೈಮಿತ್ತಕರ ಅನುಜ್ಞೆಯಿಂದ ಸ್ವಯಂಪ್ರಭನಗರಕ್ಕೆ ಕರೆತಂದು ರಾವಣನಿಗೆ ಮದುವೆಮಾಡಿಕೊಟ್ಟನು. ರಾವಣನು ವಿಹಾರಾರ್ಥವಾಗಿ ಹೋಗುತ್ತ ಸುರಸುಂದರನೆಂಬ ದೊರೆಯ ಮಕ್ಕಳಾದ ಐನೂರು ಮಂದಿ ಬಾಲೆಯರು ಒಂದು ಕಮಲ ಸರೋವರದಲ್ಲಿ ನೀರಾಟವಾಡುತ್ತಿರುವುದನ್ನು ಕಂಡು ಅವರನ್ನು ಮೋಹಿಸಲು, ಮೇಲೆತ್ತಿಬಂದ ಅವರ ತಂದೆಯನ್ನು ಸೋಲಿಸಿ ಆ ದೊರೆಯ ಅನುಮತಿಯಿಂದ ಅವರನ್ನು ಮದುವೆಯಾಗಿ ತನ್ನ ಪಟ್ಟಣಕ್ಕೆ ಬಂದನು. ತರುವಾಯ ಭಾನುಕರ್ಣನಿಗೆ ಕುಂಭಪುರದ ಮಹೋದರನ ಮಗಳಾದ ವಿದ್ಯುದ್ವೇಗೆಯನ್ನು ಮದುವೆಮಾಡಿದನು. ಆತನು ಆಕೆಯೊಡನೆ ಬಹಳ ಪ್ರೀತಿಯಿಂದಿರುತ್ತ ಕುಂಭಪುರದ ಮಾತುಗಳನ್ನು ಯಾವಾಗಲೂ ಮೆಚ್ಚಿ ಕೇಳುತಿದ್ದುದರಿಂದ ಆತನಿಗೆ ಕುಂಭಕರ್ಣನೆಂಬ ಹೆಸರಾಯಿತು. ವಿಭೀಷಣನಿಗೆ ಜ್ಯೋತಿಃಪ್ರಭ ಪುರವನ್ನಾಳುವ ಶುದ್ಧಕಮಲನ ಮಗಳಾದ ರಾಜೀವಸರಸೆಯನ್ನು ಕೊಟ್ಟು ಮದುವೆಯಾಯಿತು. ಮಂಡೋ

ದರಿಯು ಮೊದಲು ಇಂದಗಿಯನ್ನೂ ಬಳಿಕ ಮೇಘವಾಹನನನ್ನೂ ಶತ್ರುಂದಮನನ್ನೂ ಹೆತ್ತಳು.

ತನ್ನ ಪಿತಾಮಹನಾದ ಮಾಲಿಯನ್ನು ಕೊಂದು ತಮಗೆ ಅನ್ವಯಾಗತವಾಗಿ ಬಂದ ಲಂಕೆಯನ್ನು ಕಿತ್ತುಕೊಂಡವನನ್ನಿಕ್ಕಿದ ಹೊರತು ತನ್ನ ಬಾಹುವೀರ್ಯಕ್ಕೆ ಸಾರ್ಥಕ್ಯ ಉಂಟಾಗಲಾರದೆಂದೆಣಿಸಿ ದಶಾನನನು ಮುಳಿದು ಲಂಕೆಯನ್ನು ಮುತ್ತಿ ಕಾದಿ ವೈಶ್ರವಣನನ್ನು ಮೂರ್ಛೆಹೊಂದುವಂತೆ ಹೊಡೆದು ತನ್ನ ಪಟ್ಟಣಕ್ಕೆ ಹಿಂದಿರುಗಿದನು. ವೈಶ್ರವಣನು ಮೂರ್ಛೆತಿಳಿದು, ಸೋತುಹೋದುದರಿಂದ ವೈರಾಗ್ಯಪರನಾಗಿ, ಜೈನದೀಕ್ಷೆಯನ್ನು ಕೈಕೊಂಡನು. ರಾವಣನು ಸಕಲ ರಾಜರನ್ನೂ ಸೋಲಿಸಿ ಕಪ್ಪವನ್ನು ಪಡೆದು ಕೈಲಾಸ ನಗದ ಸಮ್ಮೇದ ಗಿರಿಯ ನಡುವಣ ಸುರದಾರು ವನೋಪಕಂಠದಲ್ಲಿ ಬೀಡನ್ನು ಬಿಟ್ಟಿರಲು ಅಲ್ಲಿಗೆ ವಾನರಧ್ವಜಾನುಚರನೊಬ್ಬನು ಬಂದು "ದೇವ! ಸೂರ್ಯಜನೂ ಋಕ್ಷಜನೂ ನಿನ್ನಾಜ್ಞೆಯನ್ನು ಪಡೆದು ಪಾತಾಳಲಂಕೆಯಿಂದ ಹೊರಟು ನಿಜಾನ್ವಯಾಗತವಾದ ಕಿಷ್ಕಿಂಧಪುರವನ್ನು ಕೊಳ್ಳಲೆಂದು ಮುತ್ತಿ ಕಾದುತ್ತಿರುವಲ್ಲಿ ಯಮರಾಜನು ಋಕ್ಷಜನನ್ನು ಸೆರೆಹಿಡಿದು ಸೂರ್ಯಜನನ್ನು ಗಾಯಪಡಿಸಿದನು" ಎಂದು ಹೇಳಲು ದಶವದನನು ಅದನ್ನು ಕೇಳಿ ಸೈರಿಸದೆ ಕಿಷ್ಕಿಂಧಪುರಕ್ಕೆ ಹೋಗಿ ಅದನ್ನು ಮುತ್ತಿ ಯಮನನ್ನು ಸೋಲಿಸಲು ಅವನು ಅಂಜಿ ತನ್ನ ಪತಿಯಾದ ಇಂದ್ರನನ್ನು ಕಂಡು ದಶಮುಖನ ಪರಾಕ್ರಮವನ್ನು ತಿಳಿಸಿದನು. ಅದಕ್ಕೆ ಅವನು ದಶವದನನ ಮೇಲೆ ದಂಡೆತ್ತಿ ಬರಬೇಕೆಂದಿರುವಲ್ಲಿ ಅವನ ಮಂತ್ರಿಮುಖ್ಯರು ಬೇಡವೆಂದು ಅವನನ್ನೊಡಂಬಡಿಸಲು ಯಮನಿಗೆ ಸುರಸಂಗೀತಕಪುರವನ್ನು ಕೊಟ್ಟು ವಿಷಯಾಸಕ್ತನಾಗಿ ನೈಮರೆದಿದ್ದನು. ದಶಮುಖನು ಋಕ್ಷಜ ಸೂರ್ಯಜರಿಗೆ ಕಿಷ್ಕಿಂಧಪುರವನ್ನು ಕೊಟ್ಟು ತಾಯಿ ತಂದೆ ಅಜ್ಜಂದಿರೊಡನೆ ಪುಷ್ಪಕ ವಿಮಾನಾರೂಢನಾಗಿ ನಿಜಾನ್ವಯಾಗತವಾದ ಲಂಕೆಯನ್ನು ಮಹಾವೈಭವದಿಂದ ಹೊಕ್ಕು ಸುಖದಿಂದಿದ್ದನು.

ಹೀಗಿರುವಲ್ಲಿ, ಸೂರ್ಯಜನ ಅರಸಿಯು ಲೋಕೋತ್ತರರೆನಿಸುವ ವಾಲಿ ಸುಗ್ರೀವರನ್ನೂ ಶ್ರೀಪ್ರಭೆಯನ್ನೂ ಋಕ್ಷಜನ ಅರಸಿಯು ನಳ ನೀಲರನ್ನೂ ಯಥಾಕ್ರಮವಾಗಿ ಪಡೆದರು. ಕೆಲವು ಕಾಲ ಕಳೆದಮೇಲೆ ವಾಲಿ ಸುಗ್ರೀವರನು ಅಧಿರಾಜ ಯುವರಾಜ ಪದವಿಯಲ್ಲಿ ನಿಲ್ಲಿಸಿ ಸೂರ್ಯಜನು ದೀಕ್ಷೆಗೊಂಡನು. ಇತ್ತ, ದಶಶಿರನು ಲಂಕೆಯಲ್ಲಿಲ್ಲದ ಸಮಯದಲ್ಲಿ ಖರನು ಲಂಕಾಪುರವನ್ನು ಹೊಕ್ಕು ಚಂದ್ರನಖಿಯನ್ನು ಕದ್ದುಕೊಂಡು ಹೋಗಿ, ರಾವಣನಿಗವಿಧೇಯನಾಗಿದ್ದ ಚಂದ್ರೋದರನನ್ನು ಕೊಂದು ಪಾತಾಳಲಂಕೆಯನ್ನು ಸ್ವಾಧೀನ ಮಾಡಿಕೊಂಡು ಸುಖದಿಂದಿದ್ದನು. ರಾವಣನು ಲಂಕೆಗೆ ಬಂದು, ತನ್ನ ಭಯವು ಸ್ವಲ್ಪವೂ ಇಲ್ಲದೆ ತನ್ನ ತಂಗಿಯನ್ನು ಕದ್ದುಕೊಂಡು ಹೋದುದಕ್ಕಾಗಿ ಬಹಳ ಕೋಪಗೊಂಡು,

ಖರನಿಗೆ ತಕ್ಕದ್ದನ್ನು ಮಾಡುವೆನೆಂದು ಗರ್ಜಿಸಲು ಮಂಡೋದರಿಯು ಅವನನ್ನು ಸಮಾಧಾನಮಾಡಿ ಖರನು ರಾವಣನಿಗವಿಧೇಯನಾಗಿದ್ದ ಚಂದ್ರೋದರನನ್ನು ಕೊಂದಿರುವನೆಂದೂ ಅಂಥವನನ್ನು ಕೊಂದು ತಂಗಿಯನ್ನು ವಿಧವೆಯನ್ನಾಗಿ ಮಾಡುವುದು ಸರಿಯಲ್ಲವೆಂದೂ ಹೇಳಲು ರಾವಣನು ಅದಕ್ಕೊಪ್ಪಿ ಸುಮ್ಮನಾದನು. ಗರ್ಭಿಣಿಯಾಗಿದ್ದ ಚಂದ್ರೋದರನ ಪತ್ನಿಯಾದ ಅನುರಾಧೆಯು ಗಂಡು ಮಗುವನ್ನು ಹೆತ್ತು, ಇವನು ಗರ್ಭದೊಳಿರುವಾಗ ಹಗೆಗಳಿಂದ ತೊಂದರೆ ಪಟ್ಟದ್ದಕ್ಕಾಗಿ ಅವನಿಗೆ ವಿರಾಧಿತನೆಂದು ಹೆಸರಿಟ್ಟಳು. ಅವನು ಅನುಕ್ರಮವಾಗಿ ಬಳೆದು ಹಗೆಯನ್ನು ಸಾಧಿಸುವ ಉಪಾಯುವನ್ನು ಮಾಡುತ್ತಿದ್ದನು.

ಜಿನಾಗಮ ಕೋವಿದನಾದ ವಾಲಿಯು ಜೈನಮುನಿಗಲ್ಲದೆ ಮತ್ತೊಬ್ಬರಿಗೆ ಕೈಮುಗಿಯೆನೆಂದು ನಿಯಮಸ್ಥನಾಗಿ ಸುಖದಿಂದಿರುವಲ್ಲಿ, ಒಂದು ದಿನ ಆತನ ತಂಗಿಯಾದ ಶ್ರೀಪ್ರಭೆಯನ್ನು ತನಗೆ ಮದುವೆ ಮಾಡಿಕೊಡುವಂತೆ ರಾವಣನು ಓಲೆಯನ್ನು ಬರೆದು ಕಳುಹಿಸಿದನು. ಇದನ್ನು ನೋಡಿ ವಾಲಿಯು ಸುಗ್ರೀವನೊಡಗೂಡಿ ಮಂತ್ರಶಾಲೆಯನ್ನು ಹೊಕ್ಕು ಮಂತ್ರಿಮಂಡಲವನ್ನೂ ಆಪ್ತಜನರನ್ನೂ ಬರಿಸಿ ದುರ್ಮಾರ್ಗಿಯೂ ಮದಾಂಧನೂ ಆದ ರಾವಣನಿಗೆ ತಂಗಿಯನ್ನು ಕೊಟ್ಟರೆ ಇಹದಲ್ಲಿ ಕೇಡೂ ಪರದಲ್ಲಿ ಪಾತಕವೂ ಉಂಟಾಗುವುದೆಂದು ಹೇಳಿ ಅವನಿಗೆ ಕೂಸನ್ನು ಕೊಟ್ಟಲ್ಲಿ ಅವನಿಗೆ ನಮಸ್ಕಾರ ಮಾಡಬೇಕಾಗುವುದೆಂದೂ, ಹಾಗೆ ಮಾಡಿದಲ್ಲಿ ತನ್ನ ವ್ರತವು ಕೆಡುವುದೆಂದೂ, ಕೊಡದೆ ಯುದ್ಧಕ್ಕೆ ನಿಂತಲ್ಲಿ ಬಹು ಕಾಲದಿಂದ ಬಂದ ರಾಕ್ಷಸ ವಾನರ ವಂಶಗಳ ಸ್ನೇಹವು ತನ್ನಿಂದ ನಾಶವಾಗುವುದೆಂದೂ ನಾನಾ ವಿಧವಾಗಿ ಆಲೋಚನೆ ಮಾಡಿ ಪಾಪಕ್ಕೂ ನಿಂದೆಗೂ ಎಡೆಗೊಡದ ತಪಸ್ಸನ್ನು ಮಾಡುವುದಕ್ಕೆ ನಿಂತಲ್ಲಿ ತನ್ನ ಕುಲವೂ ಛಲವೂ ವ್ರತವೂ ಕೆಡದೆ ನಡೆಯುವುವೆಂದು ನಿಶ್ಚಯಿಸಿ ಸುಗ್ರೀವನಿಗೆ ರಾಜ್ಯವನ್ನು ಕೊಟ್ಟು ತಪಸ್ಸಿಗೆ ಹೋದನು. ಸುಗ್ರೀವನು ತಂಗಿಯನ್ನು ರಾವಣನಿಗೆ ಪಾಣಿಗ್ರಹಣ ಮಾಡಿಕೊಟ್ಟು ಸುಖದಿಂದಿದ್ದನು.

ರಾವಣನು ನಿತ್ಯಾಲೋಕನೆಂಬ ವಿದ್ಯಾಧರನ ಮಗಳಾದ ರತ್ನಾವಳಿಯನ್ನು ಮದುವೆ ಮಾಡಿಕೊಂಡು ಹಿಂದಕ್ಕೆ ಬರುತ್ತಿದ್ದ ಸಮಯದಲ್ಲಿ ಕೈಲಾಸದ ಮೇಲಣ ತಪ್ಪಲಲ್ಲಿದ್ದ ಮಹಾಮುನಿಯ ಮೇಲೆ ತನ್ನ ವಿಮಾನವು ನಡೆಯದೆ ನಿಲ್ಲಲು ವಿಸ್ಮಯಪಟ್ಟು, ಅವಲೋಕಿನೀ ವಿದ್ಯೆಯಿಂದ ವಾಲಿದೇವನೆಂದರಿತು, ತನ್ನಮೇಲಣ ಮುನಿಸಿನಿಂದ ತನ್ನ ವಿಮಾನವನ್ನು ಹಾಗೆ ನಿಲ್ಲಿಸಿದನೆಂದು ತಿಳಿದು, ಆ ಪರ್ವತವನ್ನು ಕಿತ್ತು ತೆಗೆದುಕೊಂಡು ಹೋಗಿ ಸಮುದ್ರದಲ್ಲಿ ಹಾಕುವೆನೆಂದಾಲೋಚಿಸಿ ವಿಮಾನದಿಂದ ಭೂಮಿಗೆ ಬಂದು ರಸಾತಳಕ್ಕಿಳಿದು ಆ ನಗದ ಬುಡವನ್ನು ಸೇರಿ ಸಾವಿರ ವಿದ್ಯೆಗಳಿಂದಲೂ ವಿಕುರ್ವಿಸಿದ ಅನೇಕ ಭುಜಗಳಿಂದಲೂ ಕೈಲಾಸವನ್ನೆತ್ತಲು

ವಾಲಿಮುನಿಯು ತನ್ನ ಅಂಗುಷ್ಠದಿಂದ ಅದನ್ನೊತ್ತಿದನು. ರಾವಣನು ಬೆಟ್ಟದ ಕೆಳಗೆ ಸಿಕ್ಕಿ ಅಳುವುದಕ್ಕೆ ಮೊದಲುಮಾಡಲು ಮಂಡೋದರಿಯು ಪರಿಜನ ರೊಡನೆ ಅಲ್ಲಿಗೆ ಬಂದು ರಕ್ಷಿಸೆಂದು ಮುನಿಯನ್ನು ಬೇಡಿಕೊಂಡಳು. ದಶಮುಖನು ಅಳುವ ಈ ದನಿಯೇ ರಾವಣನೆಂಬ ಹೆಸರಿಗೆ ಕಾರಣವಾಯಿತು. ಮಂಡೋ ದರಿಯ ಅಭೀಷ್ಟವನ್ನು ಸಲ್ಲಿಸಿ ವಾಲಿಯು ತನ್ನ ಅಂಗುಷ್ಠವನ್ನು ಮೇಲಕ್ಕೆತ್ತಲು ರಾವಣನು ರಸಾತಲದಿಂದ ಹೊರಟು ಬಂದು ವಾಲಿಭಟ್ಟಾರಕರನ್ನು ಪೂಜಿಸಿ ನಮಸ್ಕರಿಸಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡಿಕೊಂಡು ಅಲ್ಲಿಯ ಜಿನಾ ಲಯವನ್ನು ಹೊಕ್ಕು ನಿರ್ಭರ ಭಕ್ತಿಯಿಂದ ದೇವನನ್ನು ಅರ್ಚಿಸುತ್ತಿರುವಲ್ಲಿ ಆದಿ ಶೇಷನಿಗೆ ಆಸನಕಂಪವಾಗಲು ಅವನು ಕೈಲಾಸ ನಗಕ್ಕೆ ಬಂದು ರಾವಣನ ದೈವಭಕ್ತಿಗೆ ಮೆಚ್ಚಿ ಸಮಸ್ತ ದೇವಾಸುರ ಮುಖ್ಯನಾಯಕರಿಗೆ ಜೀವ ವಿಮುಕ್ತಿ ಯನ್ನೀವ ಶಕ್ತಿಯನ್ನಿತ್ತು ಹೊರಟುಹೋದನು. ವಾಲಿಮುನಿಯು ಶುಕ್ಲಧ್ಯಾನಾ ಯತ್ತನಾಗಿ ಮುಕ್ತಿಯನ್ನು ಪಡೆದನು.

ಇತ್ತ, ರಾವಣನು ನಂದ್ಯಕಾ ಸುವೇಲಾದಿ ದ್ವೀಪಗಳನ್ನಾಳುವ ಮಹಾಬಲ ವಿಜ್ಞಾನಧರರನ್ನು ಬಾಯ್ಕೋಳಿಸಿ ಆಪ್ತಜನ ಪರಿಜನರಿಂದೊಡಗೂಡಿ ಉತ್ತರಾಭಿ ಮುಖವಾಗಿ ಇಂದ್ರನ ಮೇಲೆ ದಂಡೆತ್ತಿ ಹೊರಟು ರೈವತ ನದೀತೀರದಲ್ಲಿ ಬೀಡನ್ನು ಬಿಟ್ಟು ಆ ತೊರೆಯ ಮಳಲಿನ ಪ್ರದೇಶದಲ್ಲಿ ರತ್ನಮಂಟಪವನ್ನೆತ್ತಿಸಿ ಸಿಂಹಾಸನದ ಮೇಲೆ ಮಣಿಮಯ ಜಿನಪ್ರತಿಮೆಯನ್ನು ಪ್ರತಿಷ್ಠೆಮಾಡಿ ಪೂಜಿಸು ತ್ತಿದ್ದನು. ಆಗ ಹೊಳೆಯು ತುಂಬಿ ಭೋಂಕನೆ ಪ್ರವಾಹ ಬರಲು ರಾವಣನು ಸಂಭ್ರಮಾಕುಲನಾಗಿ ಆಕಾಶಕ್ಕೆ ನೆಗೆದು ಕಾಲವಲ್ಲದ ಕಾಲದಲ್ಲಿ ಪ್ರವಾಹ ಬಂದ ಕಾರಣವೇನೆಂದರಿಯುವುದಕ್ಕಾಗಿ ದೂತನನ್ನಟ್ಟಿದನು. ಅವನು ತಿಳಿದುಕೊಂಡು ಬಂದು ಮಾಹಿಷ್ಮತೀಪುರದೊಡೆಯನಾದ ಸಹಸ್ರಬಾಹುವು ಆ ತೊರೆಯನ್ನು ಜಂತ್ರಗಳಿಂದ ಕಟ್ಟಿ ತನ್ನ ಅಂತಃಪುರ ಸ್ತ್ರೀಯರೊಡನೆ ನೀರಾಟವಾಡಿ ಜಂತ್ರ ಗಳನ್ನು ಕಳೆಯಲು ಹೊಳೆಯು ಆ ತೆರನಾಗಿ ಬಂದಿತೆಂದು ತಿಳಿಸಿದನು. ಅದಕ್ಕೆ ರಾವಣನು ಮುನಿದು ತನ್ನ ಪಟ್ಟದಾನೆಯನ್ನೇರಿ ಹೊರಟು ಸಹಸ್ರಬಾಹುವನ್ನು ಸೆರೆಹಿಡಿದು ತಂದನು. ಇದನ್ನು ಕೇಳಿ ಆತನ ತಂದೆಯಾದ ಶತಬಾಹುವೆಂಬ ಜಂಘಚಾರಣನು ಧರ್ಮವಾತ್ಸಲ್ಯದಿಂದ ಬರಲು ದಶಮುಖನು ಆತನಿಗೆ ಭಕ್ತಿ ಯಿಂದೆರಗಿ ವಂದಿಸಿ ಮಣಿಪೀಠದಲ್ಲಿ ಕುಳ್ಳಿರಿಸಿ ಕೈಮುಗಿದುಕೊಂಡು ಅಪ್ಪಣೆ ಏನೆಂದು ಕೇಳಲು ತಾನು ಸೆರೆಗೆಯ್ದ ಸಹಸ್ರಬಾಹುವನ್ನು ಬಿಟ್ಟುಬಿಡೆಂದು ಹೇಳಿ ದನು. ರಾವಣನು ಮಹಾಪ್ರಸಾದವೆಂದು ಹೇಳಿ ಸಹಸ್ರಬಾಹುವನ್ನು ಕರೆಕಳುಹಿಸಲು ಆತನು ಬಂದು ದಿವ್ಯಮುನಿಗೆರಗಿ ಅಪ್ಪಣೆಪಡೆದು ಕುಳಿತುಕೊಂಡನು. ರಾವಣನು ಆತನ ಕೈಹಿಡಿದು ವಿನಯ ವಚನಗಳನ್ನಾಡಿ ತನ್ನ ರಾಜ್ಯದಲ್ಲಿ ತಾನು

ನಿಲ್ಲುವುದೆನ್ನಲು ಆತನು ತಪೋರಾಜ್ಯವನ್ನಲ್ಲದೆ ಇಹರಾಜ್ಯವನ್ನೊಲ್ಲೆನೆಂದು ಹೇಳಿ ಮಗನಾದ ಸುಬಾಹುವಿಗೆ ರಾಜ್ಯವನ್ನಿತ್ತು ತನ್ನ ತಂದೆಯ ಬಳಿ ದೀಕ್ಷೆಗೊಂಡನು.

ತರುವಾಯ, ರಾವಣನು ವಿಜಯ ಯಾತ್ರೆ ಹೊರಟು ಸಮಸ್ತ ಭೂಪಾಲಕರನ್ನೂ ಜಯಿಸಿ ಕಪ್ಪವನ್ನು ಕೊಳ್ಳುತ್ತ ಧರ್ಮವನ್ನು ಪ್ರತಿಪಾಲಿಸುತ್ತ ಬರುತ್ತಿರಲು, ಮರುತ್ತನೆಂಬರಸನು ಜೀವವಧೆ ಮಾಡುವ ಯಜ್ಞವನ್ನು ಮಾಡಿ, ಇತರರಾರನ್ನೂ ನಮಸ್ಕರಿಸದೆ, ಹಲವು ಪ್ರಾಣಿಗಳನ್ನು ಕೊಲ್ಲುತ್ತಿರುವನೆಂದು ಕೇಳಿ ಅಲ್ಲಿಗೆ ಬಂದು ಯಾಗ ನಿಮಿತ್ತವಾಗಿ ಆವನು ಪಶುಗಳನ್ನು ಯೂಪಸ್ತಂಭಗಳಲ್ಲಿ ಕಟ್ಟಿಗೋಳಿಡುತ್ತಿರುವುದನ್ನು ಕಂಡು ಯೂಪಸ್ತಂಭಗಳನ್ನು ಕಡಿದು ಕುಂಡಗಳನ್ನೊಡೆದು ಶಾಲೆಗಳನ್ನು ಕೆಡವಿ ಸಂವರ್ತನೇ ಮೊದಲಾದ ಋತ್ವಿಜರನ್ನು ಬಡಿದು ಕೊಲ್ಲಲೆಂದಿರುವ ಸಮಯದಲ್ಲಿ ಮರುತ್ತನು ಅತಿ ಸಂಭ್ರಮದಿಂದ ಬಂದು ರಾವಣನ ಕಾಲಮೇಲೆ ಬಿದ್ದು ಕ್ಷಮೆಯನ್ನು ಬೇಡಿ ತನ್ನ ಮಗಳಾದ ಕನಕಪ್ರಭೆಯನ್ನು ಆತನಿಗೆ ಕೊಟ್ಟು ಮದುವೆಮಾಡಿದನು. ರಾವಣನು ಹದಿನೆಂಟು ವರ್ಷಕ್ಕೆ ವಿನೀತಾ ಖಂಡವನ್ನು ಬಾಯ್ಕೇಳಿಸಿ ಕೈಲಾಸ ಪರ್ವತವನ್ನು ಸೇರಿ ವಾಲಿದೇವರ ಸಾಮರ್ಥ್ಯವನ್ನು ನೆನೆದು ಹೊಗಳುತ್ತ ಆ ಬೆಟ್ಟದ ತಪ್ಪಲಲ್ಲಿ ಬೀಡನ್ನು ಬಿಟ್ಟಿದ್ದನು.

ರಾವಣನು ಇಂದ್ರನ ಮೇಲೆ ದಂಡೆತ್ತಿ ಬರುವ ವಿಷಯವನ್ನು ನಳಕೂಬರ ದಿಕ್ಪತಿಯು ಇಂದ್ರನಿಗೆ ಹೇಳಿಕಳುಹಿಸಲು ಆತನು ತನ್ನ ಭುಜಬಲ ಗರ್ವದಿಂದ ದಶಗ್ರೀವನನ್ನು ಲಕ್ಷ್ಯಮಾಡದೆ ರಾವಣನು ಏನು ಮಾಡಿಯಾನೆಂದೂ ಆತನೊಡನೆ ವಿದ್ಯಾವಷ್ಟಂಭದಿಂದ ಕಾದುವುದೆಂದೂ ನಳಕೂಬರನಿಗೆ ಹೇಳಿಕಳುಹಿಸಿದನು ಇದನ್ನು ಕೇಳಿ ನಳಕೂಬರನು ಒಂದು ಯೋಜನಾಂತರದಲ್ಲಿರುವವರನ್ನು ನುಂಗುವ ಬೇತಾಳ ಯಂತ್ರಗಳಿಂದಲೂ, ಎಬ್ಬಿಸಿ ತಿನ್ನುವ ಮಹೋರಗಗಳಿಂದಲೂ, ಅತಿ ದೂರದಲ್ಲಿ ಅಟ್ಟಿ ಸುಡುವ ಕೇಸುರಿಯ ಪ್ರಾಕಾರಗಳಿಂದಲೂ, ನಾನಾ ತೆರದ ಉಪದ್ರವಗಳನ್ನು ಮಾಡುವ ರೌದ್ರ ಮೃಗಗಳಿಂದಲೂ ತುಂಬಿಸಿ ಶತಯೋಜನ ಪರಿಮಿತಿಯುಳ್ಳ ವಜ್ರಸಾಲವೆಂಬ ಕೋಟೆಯನ್ನು ಕಟ್ಟಿಸಿ ಆ ಪಟ್ಟಣಕ್ಕೆ ದುರ್ಲಂಘ್ಯಪುರವೆಂಬ ಹೆಸರನ್ನು ಅನ್ವರ್ಥವಾಗಿ ಮಾಡಿದನು. ದಶವದನನ ಸೇನಾನಾಯಕನಾದ ಪ್ರಹಸ್ತನು ಇದನ್ನು ತಿಳಿದು ಬಂದು, ಆ ಯಂತ್ರಗಳಿಂದ ತಮ್ಮ ಸೇನೆಗೆ ಉಪದ್ರವವಾಗದಂತೆ ದೂರದಲ್ಲಿರಬೇಕೆಂದೂ ಬಳಿಕ ಅವನ್ನು ತೆಗೆದುಕೊಳ್ಳುವ ಉಪಾಯವನ್ನು ಆಲೋಚನೆ ಮಾಡತಕ್ಕದ್ದೆಂದೂ ರಾವಣನಿಗೆ ಅರಿಕೆ ಮಾಡಲು ರಾವಣನು ಉಪಾಯವೇನೆಂದು ಆಲೋಚಿಸುತ್ತಿದ್ದನು.

ಹೀಗಿರುವಲ್ಲಿ ನಳಕೂಬರನ ಹೆಂಡತಿಯಾದ ಉಪರಂಭೆಯು ಬಹುಕಾಲದಿಂದ ರಾವಣನಲ್ಲಿ ಕಾಮಾತುರೆಯಾಗಿ ತನ್ನ ದೂತಿಯನ್ನು ರಾವಣನ ಬಳಿಗೆ

ಅಟ್ಟಿದಳು. ರಾವಣನು ಅವಳ ಮಾತುಗಳನ್ನು ಕೇಳಿ ಪಾಪಕ್ಕೂ ನಿಂದೆಗೂ ಮನಸ್ಸೊಪ್ಪದೆ ವಿಭೀಷಣನನ್ನು ಬರಿಸಿ ರಹಸ್ಯದಲ್ಲಿ ಇದನ್ನು ತಿಳಿಸಲು, ಆತನು ವಿದ್ಯಾ ಪ್ರಾಕಾರವನ್ನು ಕೆಡಿಸುವ ಪ್ರತಿವಿದ್ಯೆಯನ್ನು ಕಲಿತುಕೊಳ್ಳುವುದಕ್ಕಾಗಿ ಆಕೆಯನ್ನು ಕರೆಯಿಸಿ ಹುಸಿಮಾತಿನೊಡನೆ ನಂಬಿಸಿ ವಿದ್ಯೆಯನ್ನು ಕಲಿತುಕೊಳ್ಳುವುದು ಸರಿಯೆಂದು ಹೇಳಿದನು. ಆಗ ರಾವಣನು ದೂತಿಯ ಮಾತಿಗೆ ಒಡಂಬಟ್ಟೆನೆಂದು ಹೇಳಿ ಉಪರಂಭೆಯನ್ನು ಕರೆತರುವಂತೆ ತಿಳಿಸಲು ಕೂಡಲೆ ಅವಳು ಹೋಗಿ ಕರೆತಂದಳು. ರಾವಣನು ಉಪರಂಭೆಗೆ ಹುಸಿಯಾದ ಪ್ರೀತಿಯನ್ನು ತೋರಿಸಿ ತನಗೂ ಅವಳಿಗೂ ದುರ್ಲಂಘ್ಯಪುರದಲ್ಲಿ ಕೂಟವಾಗುವಂತೆ ಮಾಡೆಂದು ಹೇಳಲು, ಅವಳು ಕುಲಹಾನಿಯನ್ನೂ ಪತಿಗಾಗುವ ಕೇಡನ್ನೂ ಬಗೆಯದೆ ಹಾಗೆಯೇ ಮಾಡುವೆನೆಂದು ಹೇಳಿ ಸಾಲವಿದ್ಯಾ ಭೇದಿನಿಯಾದ ಪ್ರತಿವಿದ್ಯೆಯನ್ನು ರಾವಣನಿಗೆ ಕೊಟ್ಟಳು. ಮರು ದಿವಸ ರಾವಣನು ಈ ಪ್ರತಿವಿದ್ಯೆಯ ಸಹಾಯದಿಂದ ದುರ್ಲಂಘ್ಯಪುರವನ್ನು ಮುತ್ತಲು ನಳಕೂಬರನು ಯುದ್ಧಸನ್ನದ್ಧನಾಗಿ ಬಂದು ಲಕ್ಷ್ಯಮಾಡದೆ ಯುದ್ಧಮಾಡುತ್ತಿರುವಲ್ಲಿ ವಿಭೀಷಣನು ಅವನನ್ನು ಸೆರೆಹಿಡಿದನು. ಆ ಸಮಯದಲ್ಲಿ ರಾವಣನ ಆಯುಧಾಗಾರದಲ್ಲಿ ಮಹತ್ತರವಾದ ಸುದರ್ಶನ ಚಕ್ರವು ಹುಟ್ಟಿತು. ರಾವಣನು ಅದನ್ನು ಮಹೋತ್ಸವದಿಂದರ್ಚಿಸಿ ಉಪರಂಭೆಯನ್ನು ರಹಸ್ಯವಾಗಿ ಕರೆಯಿಸಿ ಅವಳು ವಿಶುದ್ಧವಾದ ಕುಲದಲ್ಲಿ ಹುಟ್ಟಿದವಳಾದುದರಿಂದ ಶೀಲ ಪರಿಪಾಲನೆಯನ್ನು ಮಾಡುವುದು ತಕ್ಕದ್ದೆಂದೂ ತನಗೆ ವಿದ್ಯೋಪದೇಶವನ್ನು ಮಾಡಿದುದರಿಂದ ಆಕೆಯು ಗುರುವಾದಳೆಂದೂ ತಿಳಿಸಿ ಮತ್ತೇನನ್ನೂ ಬಗೆಯದೆ ನಳಕೂಬರನಲ್ಲಿ ಕೂಡಿ ಸುಖದಿಂದಿರೆಂದು ಹೇಳಿ ಅವಳ ದುಷ್ಪರಿಣಾಮವನ್ನು ತಪ್ಪಿಸಿದನು. ಕೂಡಲೆ ನಳಕೂಬರನನ್ನು ಬರಿಸಿ ತನ್ನ ಹಿರಿಯ ಮಗನಾದ ಇಂದ್ರಜಿತುವಿಗಿಂತಲೂ ಹೆಚ್ಚಾಗಿ ಮನ್ನಿಸಿ ಅವನ ಭಯವನ್ನು ಕಳೆದು ಅವನನ್ನು ತನ್ನ ಸಾಮಂತನನ್ನಾಗಿ ಮಾಡಿ ಅವನೊಡನೆ ಇಂದ್ರನಮೇಲೆ ದಂಡೆತ್ತಿಹೋದನು.

ಇಂದ್ರನಿಗೂ ರಾವಣನಿಗೂ ಘೋರ ಯುದ್ಧವು ನಡೆದು ರಾವಣನು ಇಂದ್ರನನ್ನು ಸೆರೆಹಿಡಿದುಕೊಂಡು ಹೋದನು. ಆಗ ಇಂದ್ರಜಿತ್ಕುಮಾರನು ಇಂದ್ರನ ಮಗನಾದ ಜಯಂತನನ್ನು ಸೆರೆಹಿಡಿದು ತಂದು ರಾವಣನಿಗೊಪ್ಪಿಸಲು ಎಲ್ಲರೂ ಸೇರಿ ಹೊರಟು ಮಹಾ ವಿಭವದಿಂದ ಲಂಕೆಯನ್ನು ಹೊಕ್ಕು ಸುಖದಿಂದಿದ್ದರು. ಸಹಸ್ರಾರನು ಮಗನ ಮೇಲಣ ಮೋಹದಿಂದ ಲಂಕೆಗೆ ಬರಲು ಆತನನ್ನು ರಾವಣನು ತಕ್ಕ ಮರ್ಯಾದೆಯೊಡನೆ ಕಂಡು ತನ್ನ ತಂದೆಗಿಂತಲೂ ಹೆಚ್ಚಾಗಿ ಮರ್ಯಾದೆ ಮಾಡಿ ಕುಳ್ಳಿರಿಸಿ ಅಪ್ಪಣೆಯೇನೆಂದು ಕೇಳಲು ಇಂದ್ರನನ್ನು ಬಿಟ್ಟುಬಿಡೆಂದು ಹೇಳಿದನು. ಅದಕ್ಕೆ ರಾವಣನು ಮಹಾಪ್ರಸಾದವೆಂದು ಹೇಳಿ ಇಂದ್ರನನ್ನು ಬರಿಸಿ ತನ್ನ ರಾಜ್ಯದಲ್ಲಿ ತಾನು ಸುಖವಾಗಿರುವಂತೆ ಹೇಳಿ ಕಳುಹಿಸಿದನು. ಇಂದ್ರನು

ತನ್ನ ಪಟ್ಟಣಕ್ಕೆ ಬಂದು ಇಂದುವೆಂಬ ತನ್ನ ಹಿರಿಯ ಮಗನಿಗೆ ರಾಜ್ಯವನ್ನಿತ್ತು ಜಯಂತನೊಡನೆಯೂ ತನ್ನ ಲೋಕಪಾಲರೊಡನೆಯೂ ದೀಕ್ಷೆಗೊಂಡನು.

ಇತ್ತ, ರಾವಣನು ವರುಣನಮೇಲೆ ನಡೆಯಬೇಕೆಂದು ಸಮಸ್ತ ಸಾಮಂತರನ್ನೂ ಬರಿಸಿ ಹನುಮರದ್ವೀಪಕ್ಕೆ ದೂತನನ್ನಟ್ಟಲು ಅವನು ಬಂದು ಪ್ರತಿಸೂರ್ಯನನ್ನೂ ಪವನಂಜಯನನ್ನೂ ಕಂಡು ತಾನು ಬಂದ ವಿಷಯವನ್ನು ತಿಳಿಸಿದನು. ಪವನಂಜಯನು ಮಗನಾದ ಆಂಜನೇಯನನ್ನು ಕರೆಯಿಸಲು ಅವನು ತಂದೆಯ ಅಪ್ಪಣೆಯನ್ನು ಪಡೆದು ಅಸಂಖ್ಯಾತ ಬಲ ಸಮೇತನಾಗಿ ಆಕಾಶ ಮಾರ್ಗದಲ್ಲಿ ಹೊರಟನು. ರಾವಣನು ಹನುಮನ ಬರವನ್ನು ಕಂಡು ಅವನನ್ನು ಎದುರುಗೊಳ್ಳುವುದಕ್ಕೆ ಬರಲು ಹನುಮನು ರಾವಣನ ಪಾದಕ್ಕೆರಗಿದನು. ರಾವಣನು ಹನುಮನನ್ನು ಎತ್ತಿ ಆಲಿಂಗಿಸಿ ಇನ್ನು ಶತ್ರುಗಳನ್ನು ಜಯಿಸುವುದು ಸುಲಭಸಾಧ್ಯವಾಯಿತೆಂದು ಹರುಷಪಟ್ಟು ದೊಡ್ಡ ಸೇನೆಯೊಡನೆ ಹೊರಟು ಪಾತಾಳಪುಂಡರೀಕ ಪುರವನ್ನು ಮೂರು ಸುತ್ತಾಗಿ ಬಳಸಿದನು. ಇದನ್ನು ಕಂಡು ವರುಣನ ಮಕ್ಕಳಾದ ನೂರು ಮಂದಿ ಅಸಹಾಯ ಶೂರರು ಬಂದು ಭಯಂಕರವಾಗಿ ಯುದ್ಧ ಮಾಡುತ್ತಿರುವಲ್ಲಿ ಹನುಮನು ಹೊಕ್ಕು ವಾನರ ವಿದ್ಯೆಯನ್ನು ತಳೆದು ವಾನರ ರೂಪನ್ನು ತಾಳಿ ಹಗೆಯ ಬಲವನ್ನು ದೊಡ್ಡ ಕಲ್ಲು ಗುಂಡುಗಳಿಂದಲೂ ದೊಡ್ಡ ಮರಗಳ ಸಮೂಹದಿಂದಲೂ ನಾಶಮಾಡಿ ವರುಣನ ನೂರುಮಂದಿ ಮಕ್ಕಳನ್ನೂ ಸೆರೆ ಹಿಡಿದನು. ಇದನ್ನು ನೋಡಿ ವರುಣನು ಯುದ್ಧಕ್ಕೆ ಬರಲು ಅವನನ್ನು ರಾವಣನು ಹಿಡಿದು ಕುಂಭಕರ್ಣನಿಗೊಪ್ಪಿಸಿ ತರುವಾಯ ಅವನನ್ನು ಬರಿಸಿ ಮನ್ನಿಸಿ ಮೊದಲಿನಂತೆಯೇ ರಾಜ್ಯಭಾರ ಮಾಡಿಕೊಂಡಿರೆಂದು ನಿಯಮಿಸಲು ವರುಣನು ಹನುಮನ ಪರಾಕ್ರಮವನ್ನು ಮೆಚ್ಚಿ ರಾವಣನಿಗೆ ಸತ್ಯವತಿಯೆಂಬ ತನ್ನ ಮಗಳನ್ನು ಕೊಟ್ಟು ಮದುವೆಮಾಡಿದನು. ರಾವಣನು ಲಂಕೆಗೆ ಬಂದು ಚಂದ್ರನಖಿಯ ಮಗಳಾದ ಅನಂಗಪುಷ್ಪೆಯನ್ನು ಶ್ರೀಶೈಲನೆಂದೂ ಹೆಸರುಳ್ಳ ಹನುಮನಿಗೆ ಕೊಟ್ಟು ಮದುವೆ ಮಾಡಿ ಕರ್ಣಕುಂಡಲಪುರವನ್ನು ಆತನಿಗೆ ರಾಜ್ಯಾಭಿಷೇಕ ಮಾಡಿಕೊಡಲು ಆತನು ಅಲ್ಲಿ ಸಹಸ್ರ ಮಂದಿ ಅಂತಃಪುರ ಸ್ತ್ರೀಯರಿಗೊಡೆಯನಾಗಿ ಸುಗ್ರೀವನಿಗೂ ಸುತಾರೆಗೂ ಹುಟ್ಟಿದ ಪದ್ಮರಾಗೆಯನ್ನು ಮದುವೆಯಾಗಿ ಸುಖದಿಂದಿದ್ದನು.

ಜಾಂಬವಂತನು ರಾಮಚಂದ್ರನ ಅಪ್ಪಣೆಯ ಮೇರೆಗೆ ಈ ವೃತ್ತಾಂತವನ್ನು ಹೇಳಿ, " ಈಗ ರಾವಣನು ಭರತ ತ್ರಿಖಂಡಕ್ಕೊಡೆಯನಾಗಿ ತ್ರಿಜಗದ್ಭೂಷಣ ಗಜವನ್ನು ಹೊಂದಿ ಚಕ್ರಾಯುಧವನ್ನೂ ಚಂದ್ರಹಾಸಾಸಿಯನ್ನೂ ಪಡೆದು ಸಮಸ್ತ ವಿದ್ಯಾಧರ ರಾಜರನ್ನೂ ಆಜ್ಞಾನುವರ್ತಿಗಳನ್ನಾಗಿ ಮಾಡಿ ಅತ್ಯಂತ ಪರಾಕ್ರಮಶಾಲಿಯಾಗಿರುವನು. ಭೀಷಣ ಬಲರಾದ ಕುಂಭಕರ್ಣ ವಿಭೀಷಣರು ಅವನೊಡಹುಟ್ಟಿ

ದವರು. ಸುರಾಸುರ ವಿಯಚ್ಚರ ಸೇನೆಯಲ್ಲಿ ಯಾರಿಗೂ ಯುದ್ಧದಲ್ಲಿ ಸೋಲದ ಮೇಘವಾಹನನೂ ಇಂದ್ರಗಿಯೂ ರಾವಣನ ಕುಮಾರರು. ಅವನ ವಿಯಚ್ಚರ ಸೇನೆಯು ಅಸಾಧಾರಣವಾದುದು. ಭುಜಬಲದಲ್ಲಿಯೂ ವಿದ್ಯಾಬಲದಲ್ಲಿಯೂ ಮನೋಬಲದಲ್ಲಿಯೂ ಯಾವ ರಾಜನೂ ರಾವಣನನ್ನು ಜಯಿಸಲಾರನು. ದೇವೇಂದ್ರನಿಗೂ ಇವನನ್ನು ಗೆಲ್ಲಲು ಸಾಧ್ಯವಲ್ಲ" ಎಂದು ನುಡಿಯಲು, ಲಕ್ಷ್ಮಣನು ಕೋಪದಿಂದ ಕೂಡಿದ ಮುಗುಳ್ನಗೆಯನ್ನು ನಕ್ಕು ಪರಿಹಾಸದ ಮಾತಿನಿಂದಿಂತೆಂದನು :—

"ಅಯ್ಯಾ! ರಾವಣನ ಪರಾಕ್ರಮವನ್ನು ಇಷ್ಟು ವರ್ಣಿಸಲೇಕೆ? ಅವನು ಸೀತಾದೇವಿಯನ್ನು ಕದ್ದುಕೊಂಡು ಹೋದುದೇ ಅವನ ಭೀತಿಯನ್ನು ತೋರಿಸುವುದಿಲ್ಲವೆ? ಇಕ್ಷ್ವಾಕು ವಂಶದವರನ್ನು ಗೆಲ್ಲಲು ರಾವಣನಿಗೆ ಸಾಧ್ಯವೆ? ರಾಮ ರಾವಣರ ಬಲ್ಮೆಯನ್ನು ನಾಳೆ ಯುದ್ಧರಂಗದಲ್ಲಿ ನೋಡುವಿರಿ. ಸಿಂಹವು ಆನೆಗಳನ್ನು ಗೆದ್ದಮಾತ್ರಕ್ಕೆ ಶರಭವನ್ನು ಗೆಲ್ಲಲಾಪುವುದೆ! ಕತ್ತಲೆಯು ದಟ್ಟವಾಗಿದ್ದ ಮಾತ್ರಕ್ಕೇ ಅದು ಸೂರ್ಯನಿಗೆ ತಕ್ಕ ಹಗೆಯಾದೀತೆ? ಅಜೇಯನಾದ ಬಲದೇವನಿಗೆ ರಾವಣನು ಎಷ್ಟು ಮಾತ್ರದವನು?"

---

## ಆಶ್ವಾಸ ೧೧— ಲಂಕಾ ದಹನ

ಲಕ್ಷ್ಮಣನು ರಾವಣನನ್ನು ಹಿಯ್ಯಾಳಿಸಿ ಮಾತನಾಡಿದುದನ್ನು ಕೇಳಿ ಜಾಂಬವನೇ ಮೊದಲಾದ ಸುಗ್ರೀವನ ಪ್ರಧಾನರು ತಮಗಧಿರಾಜನಾಗಿಯೂ ಖಚರೋರ್ವಿಗೆ ವಲ್ಲಭನಾಗಿಯೂ ಇರುವ ರಾವಣನ ಮುಂದೆ ಇತರರ ಪರಾಕ್ರಮವು ಉಪಯೋಗವಾಗಲಾರದೆಂದೂ ಇತರ ರಾಜರು ಅವನಿಗೆ ಭಯಪಟ್ಟು ಅವನನ್ನು ಎದುರಿಸಲಾರರೆಂದೂ ಆದಕಾರಣ ದೇವಿಯನ್ನು ಭೇದೋಪಾಯದಿಂದಲೇ ತರತಕ್ಕದ್ದೆಂದೂ ಹೇಳಿದರು. ಇದಕ್ಕೆ ರಘುವೀರನು ಅಂತಹ ಭೀತರ ಸಹಾಯವು ತನಗೆ ಆವಶ್ಯಕವಿಲ್ಲವೆಂದೂ ಲಕ್ಷ್ಮಣನು ರಾವಣನನ್ನು ದಂಡಿಸಲು ಶಕ್ತನೆಂದೂ ಅನ್ಯಸ್ತ್ರೀಯನ್ನು ಬಯಸಿದ ದುರಾತ್ಮನನ್ನು ದೆಸೆಬಲಿ ಕೊಡುವ್ನೆನೆಂದೂ, ಆದರೆ ಭಯಪಟ್ಟು ಜಾನಕಿಯನ್ನು ತಂದೊಪ್ಪಿಸಿದರೆ ರಾವಣನನು ಕಾಯುವೆನೆಂದೂ ಉತ್ತರಕೊಟ್ಟನು. ಇದನ್ನು ಕೇಳಿ ಜಾಂಬೂನದನು, ಹಿಂದೆ ದಶಗ್ರೀವನು ತನಗೆ ಯಾರ ಕೈಯಿಂದ ಮರಣವಾಗುವುದೆಂದು ಅನಂತವೀರ್ಯ ಕೇವಲಿಗಳನ್ನು ಕೇಳಿದಾಗ ಅವರು ಸಿದ್ಧಶೈಲವನ್ನೆತ್ತಿದವನ ಕೈಯಲ್ಲಿ ಮರಣವಾಗುವುದೆನ್ನಲು ಅಂತಹ ಮಹಾ ಸತ್ವನು ಯಾವನೂ ಇಲ್ಲದುದರಿಂದ ತನಗೆ ಮರಣವಿಲ್ಲವೆಂದು ರಾವಣನು ಹರುಷಚಿತ್ತನಾದ ವೃತ್ತಾಂತವನ್ನು ತಿಳಿಸಿದನು.

ಇದನ್ನು ಕೇಳಿ ಲಕ್ಷ್ಮಣನು ನಿರ್ವಾಣ ಶೈಲವನ್ನೆತ್ತುವುದು ತನಗೆ ಕಷ್ಟವಲ್ಲೆಂದು ಹೇಳಲು ಜಾಂಬೂನದ ಸುಗ್ರೀವ ಮೊದಲಾದವರು ರಾಮಲಕ್ಷ್ಮಣರನ್ನು ವಿಮಾನ ವನ್ನೇರಿಸಿಕೊಂಡು ಗಗನ ಮಾರ್ಗದಲ್ಲಿ ಹೋಗಿ ನಿರ್ವಾಣ ನಗವನ್ನು ಸೇರಿದರು. ಲಕ್ಷ್ಮಣನು ಸಿದ್ಧಗುಣ ಸ್ತವನವನ್ನು ಮಾಡಿ ಸಿದ್ಧಶೈಲವನ್ನು ಕಿತ್ತು ಬಲ ಭುಜದ ಮೇಲೆ ಹೊತ್ತು ಎತ್ತಿದನು. ಆಗ ದೇವದುಂದುಭಿ ಮೊಳಗಿತು, ಹೂಮಳೆ ಕರೆಯಿತು. ಇದನ್ನು ನೋಡಿ ವಾನರಚಿಹ್ನರು ಆಶ್ಚರ್ಯಪಟ್ಟು ರಾಮಲಕ್ಷ್ಮಣರನ್ನು ಪೂಜಿಸಿ ಎಲ್ಲರೂ ಹೊರಟು ಕಿಷ್ಕಿಂಧಪುರವನ್ನು ಸೇರಿದರು.

ಮರು ದಿನ ರಾಮದೇವನು ಸುಗ್ರೀವ ಮೊದಲಾದವರೊಡನೆ, ಲಂಕೆಗೆ ದಂಡೆತ್ತಿ ಕೂಡಲೆ ಹೊರಡಬೇಕೆಂದು ತಿಳಿಸಲು, ಶುದ್ಧಾಚಾರನಾಗಿಯೂ ವಿಚಾರ ಪರನಾಗಿಯೂ ಇರುವ ವಿಭೀಷಣನು ರಾವಣನಿಗೆ ಬುದ್ಧಿವಾದವನ್ನು ಹೇಳಿ ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಮಾಡಲು ಸಮರ್ಥನಾದುದರಿಂದ ಆತನ ಬಳಿಗೆ ದೂತರನ್ನು ಬೇಗನೆ ಕಳುಹಿಸುವುದುಚಿತವೆಂದು ಜಾಂಬವನು ಹೇಳಿದನು. ಇದಕ್ಕೆ ಮಹೋದಧಿಯು "ಅಯ್ಯಾ! ಲಂಕಾಪುರಕ್ಕೆ ವಿದ್ಯಾಪ್ರಾಕಾರವನ್ನು ಕಟ್ಟಿರುವುದರಿಂದ ಅದನ್ನು ಹೊಗಲು ಇಲ್ಲಿಯ ವಿದ್ಯಾಧರರಾರೂ ಸಮರ್ಥರಲ್ಲ; ಆದರೆ ಅಜೇಯ ಬಲನಾದ ಆಂಜನೇಯನೊಬ್ಬನು ಮಾತ್ರ ಸಮರ್ಥನಿರುವನು; ಆತನು ಲಂಕೆಗೆ ಹೋಗಿ ದೇವಿಯನ್ನು ಬಿಡಿಸಿಕೊಂಡು ತರಲು ಶಕ್ತನು, ಇತರರಾರಿಗೂ ಈ ಕೆಲಸವು ಸಾಧ್ಯವಲ್ಲ" ಎಂದು ಹೇಳಲು ಸುಗ್ರೀವನು ಹನುಮನಲ್ಲಿಗೆ ದೂತನನ್ನಟ್ಟಿ ಅವನನ್ನು ಕರೆಯಿಸಿದನು. ಅಂಜನಾಸುತನು ದೂತರಿಂದ ರಾಮಲಕ್ಷ್ಮಣರ ಪರಾಕ್ರಮವನ್ನರಿತು ತನ್ನಿಂದಲೂ ಸಾಧ್ಯವಾಗದ ಮಾಯಾ ಸುಗ್ರೀವನನ್ನು ಅವರು ಕೊಂದು ಉಪಕಾರಮಾಡಿದುದಕ್ಕಾಗಿ ತಾನು ರಾಮಲಕ್ಷ್ಮಣರ ಸೇವಕನಾಗಿರುವೆನೆಂದು ನಿಶ್ಚಯಿಸಿ ಅವರನ್ನು ಭಕ್ತಿಯಿಂದ ನಮಸ್ಕರಿಸಲು ರಾಮನು ಅವನ ಧೀರಪ್ರಕೃತಿಗೂ ನಯವಿನಯಗಳಿಗೂ ಮೆಚ್ಚಿ ಅವನಿಗೆ ರತ್ನ ಕರ್ಣಕುಂಡಲಗಳನ್ನು ಮೆಚ್ಚುಗೊಟ್ಟನು.

ಮರುತ್ತನಯನು ತಾನು ನಯದಿಂದಾಗಲಿ ಭಯದಿಂದಾಗಲಿ ಸೀತಾದೇವಿ ಯನ್ನು ತರುವೆನೆಂದೂ, ಅಲ್ಲದೆ ನೋಡಿಬರುವುದೆಂದು ಮಾತ್ರ ಹೇಳಿದರೆ ಮಾಯಾರೂಪದಿಂದ ಹೋಗಿ ಆಕೆಯ ಸುದ್ದಿಯನ್ನು ಕೊಂಡುಬರುವೆನೆಂದೂ, ರಾವಣನನ್ನು ಕೊಂದು ದೇವಿಯನ್ನು ತರುವುದು ತನಗಸಾಧ್ಯವಲ್ಲೆಂದೂ ತಿಳಿಸಲು ರಾಮನು ಜನಕಜೆಯ ಸುದ್ದಿಯನ್ನು ತರುವ ಕೆಲಸವು ಆಂಜನೇಯನ ದೆಂದೂ ದಶಮುಖನನ್ನು ಕೊಂದು ಸೀತಾದೇವಿಯನ್ನು ತರುವ ಕೆಲಸವು ಲಕ್ಷ್ಮಣನದೆಂದೂ ನಿಯಮಿಸಿ ಜಾನಕಿಗೆ ತಿಳಿಸುವುದಕ್ಕಾಗಿ ಕೆಲವು ಗುರುತು ಗಳನ್ನು ಅಣುವನಿಗೆ ಹೇಳಿ ಆಕೆಯ ವಿರಹ ಖೇದವನ್ನು ಕಳೆಯುವುದಕ್ಕೋಸ್ಕರ

ತನ್ನ ರವಿಮಂಡಲವನ್ನು ಅವನ ಕೈಯಲ್ಲಿ ಕೊಟ್ಟು ಆಕೆಯ ಚೂಡಾಮಣಿಯನ್ನು ತನಗೆ ತಂದುಕೊಡುವಂತೆ ಅಪ್ಪಣೆಮಾಡಿದನು. ವಾಯುಪುತ್ರನು ಮಹಾಪ್ರಸಾದವೆಂದು ಹೇಳಿ ಬಲಾಚ್ಯುತರ ಅಪ್ಪಣೆಯನ್ನು ಪಡೆದು ವಿಮಾನವನ್ನೇರಿ ಆಕಾಶಮಾರ್ಗದಲ್ಲಿ ಹೋಗುತ್ತ ಮಹೇಂದ್ರಾಚಲದ ಮಧ್ಯದಲ್ಲಿರುವ ಮಹೇಂದ್ರಪುರವನ್ನು ಕಂಡನು. ಅದು ತನ್ನ ಜನ್ಮಭೂಮಿಯೆಂದೂ, ತಾನು ತಾಯಿಯ ಗರ್ಭದಲ್ಲಿರುವಾಗ ಆಕೆಯ ಮೇಲೆ ಅತ್ತೆಮಾವಂದಿರು ಇಲ್ಲದ ದೋಷವನ್ನಿಟ್ಟು ಆಕೆಯನ್ನು ಹೊರಡಿಸಲು, ಆ ಪುರವನ್ನಾಳುತ್ತಿದ್ದ ತನ್ನ ಮುತ್ತಾತನ ಬಳಿಗೆ ಆಕೆಯು ರಕ್ಷಣೆಗಾಗಿ ಹೋದಳೆಂದೂ, ಆತನೂ ನಿರ್ದಯನಾಗಿ ಆಕೆಯನ್ನು ಕಳೆದನೆಂದೂ, ಈ ವಿಷಯಗಳನ್ನು ತನ್ನ ತಾಯಿಯು ತನ್ನೊಡನೆ ಹೇಳಿದ್ದುದು ಆಂಜನೇಯನ ನೆನಪಿಗೆ ಬಂದು ಬಹಳ ಸಿಟ್ಟನ್ನುಂಟುಮಾಡಿತು. ಕೂಡಲೆ ಅವನು ತನ್ನ ಸೇನೆಯೊಡನೆ ಆ ಪುರವನ್ನು ಸುತ್ತಿ ಮುತ್ತಲು ಮಹೇಂದ್ರನು ರೋಷಾವೇಶದಿಂದ ಬಂದು ಹನುಮನೊಡನೆ ಕಾದುತ್ತಿರುವಲ್ಲಿ ಹನುಮನು ಅವನ ಸೈನ್ಯವನ್ನು ನಾಶಮಾಡಿದನು. ಇದನ್ನು ಕಂಡು ಪ್ರಸನ್ನಕೀರ್ತಿಯು ಸಿಟ್ಟುಗೊಂಡು ಯುದ್ಧಕ್ಕೆ ಬರಲು ಶ್ರೀಶೈಲನು ಅವನನ್ನು ಸೆರೆಹಿಡಿದನು. ಇದನ್ನು ನೋಡಿ ಮಹೇಂದ್ರನು ಹನುಮನೊಡನೆ ಅಚಿಂತ್ಯ ಯುದ್ಧವನ್ನು ಮಾಡಲು ಹನುಮನು ಅವನನ್ನೂ ಹಿಡಿದು ತನ್ನ ಶಿಬಿರಕ್ಕೆ ಕರೆದುಕೊಂಡು ಹೋಗಿ ಸಿಂಹಾಸನದ ಮೇಲೆ ಕುಳ್ಳಿರಿಸಿ ಬಹಳ ವಿನಯದಿಂದ ನಮಸ್ಕರಿಸಿ ತಾನು ಮಹೇಂದ್ರನ ಮೊಮ್ಮಗನೆಂದೂ ಅಂಜನಾದೇವಿಗೂ ಪ್ರಭಂಜನನಿಗೂ ಹುಟ್ಟಿದ ಹನುಮನೆಂದೂ ತಿಳಿಸಲು ಆತನು ತನಗೆ ಇಂದ್ರಪದವಿ ದೊರೆತಷ್ಟು ಸಂತೋಷಚಿತ್ತನಾಗಿ ಹನುಮಂತನ ಶೌರ್ಯವನ್ನೂ ಪರಾಕ್ರಮವನ್ನೂ ಮನೋಹರಾಕಾರವನ್ನೂ ಹೊಗಳಿ ಹಲವು ಬಗೆಯಾಗಿ ಅವನನ್ನು ಹರಸಿದನು. ಮಾರುತಿಯು ಆತನಿಗೆ ಕೈಮುಗಿದು ಬಾಲಕನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡು ತಮ್ಮ ಕಪಿಧ್ವಜ ಕುಲಕ್ಕೆ ಪರಮೋಪಕಾರವನ್ನು ಮಾಡಿದ ರಘುವೀರನ ಆಜ್ಞೆಯ ಮೇರೆಗೆ ತಾನು ಲಂಕೆಗೆ ಹೋಗುತ್ತಿರುವೆನೆಂದೂ ತಾನು ಬರುವವರೆಗೂ ಮಹೇಂದ್ರಾದಿಗಳು ಕಿಷ್ಕಿಂಧಪುರಕ್ಕೆ ಹೋಗಿ ರಾಮಲಕ್ಷ್ಮಣರ ಸೇವೆಯನ್ನು ಮಾಡುತ್ತಿರುವುದೆಂದೂ ನಿಯಮಿಸಿ ತಾನು ವಾಯುವೇಗದಿಂದ ದಕ್ಷಿಣಾಭಿಮುಖವಾಗಿ ಹೊರಟನು. ಮಹೇಂದ್ರನು ಪ್ರಸನ್ನಕೀರ್ತಿ ಮೊದಲಾದವರೊಡನೆ ಹನುಮರ ದ್ವೀಪಕ್ಕೆ ಹೋಗಿ ಹನುಮನರಮನೆಯನ್ನು ಹೊಕ್ಕು ಅಂಜನಾದೇವಿಯನ್ನು ಕಂಡು ಬಹಳ ಹರುಷಗೊಂಡನು. ತಾಯಿ ತಂದೆಗಳನ್ನೂ ಬಂಧುವರ್ಗವನ್ನೂ ನೋಡಿ ಅಂಜನಾದೇವಿಯೂ ಸಂತೋಷಚಿತ್ತಳಾದಳು. ತರುವಾಯ ಮಹೇಂದ್ರನೂ ಪ್ರಸನ್ನಕೀರ್ತಿಯೂ ಕಿಷ್ಕಿಂಧಪುರಕ್ಕೆ ಹೋಗಿ ಬಲನಾರಾಯಣರನ್ನು ಕಂಡು ಆಳ್ತನವನ್ನು ಕೈಕೊಂಡು ಕಪಿಧ್ವಜರೊಡನೆ ಕೂಡಿ ಸುಖದಿಂದಿದ್ದರು.

ಇತ್ತ, ಆಂಜನೇಯನು ಹಾದಿಯಲ್ಲಿ ದಧಿಮುಖ ಪರ್ವತವನ್ನೂ ಆ ಪರ್ವತದ ಮೇಲೆ ಅಪ್ರತಿಮರಾದ ಚಾರಣರನ್ನೂ ಅವರ ಬಳಿಯಲ್ಲಿ ದಿವ್ಯಮಂತ್ರಗಳನ್ನು ಜಪಿಸುತ್ತಿದ್ದ ಬಹಳ ಚೆಲುವೆಯರಾದ ಮೂವರು ಕನ್ನೆಯರನ್ನೂ ಕಂಡನು. ಆಗ ಇವರನ್ನು ದಾರುಣವಾದ ದಾವಾನಲನು ಸುಡಲು ಯತ್ನಿಸಿದುದನ್ನು ಕಂಡು ಹನುಮಂತನು ಜಲವರ್ಷ ವಿದ್ಯೆಯಿಂದ ಅದನ್ನು ನಾಶಪಡಿಸಿ ಮುನಿಗಳ ಪಾದಾರವಿಂದವನ್ನು ಭಕ್ತಿಯಿಂದ ಪೂಜಿಸಿದನು. ಆ ಕನ್ನೆಯರು ಹನುಮಂತನ ಮಹೋಪಕಾರಕ್ಕಾಗಿ ಅವನನ್ನು ಸ್ತೋತ್ರಮಾಡಿ ಕೈಮುಗಿದುಕೊಂಡು ನಿಂತಿರುವಲ್ಲಿ ಅವರು ಆ ಮಹಾಟವಿಯಲ್ಲಿರಲು ಕಾರಣವೇನೆಂದು ಆತನು ಕೇಳಿದನು. ಅದಕ್ಕೆ ತಾವು ದಧಿಮುಖ ನಗರದರಸಾದ ಗಂಧರ್ವನೆಂಬ ಖಚರಪತಿಯ ಮಕ್ಕಳೆಂದೂ, ಅನೇಕ ಮಂದಿ ವಿದ್ಯಾಧರರು ತಮ್ಮನ್ನು ಮದುವೆ ಮಾಡಿಕೊಡೆಂದು ಕೇಳಿದರೂ ತಮ್ಮ ತಂದೆಯು ತಮ್ಮನ್ನು ಯಾರಿಗೂ ಕೊಡದೆ ಇರುವಲ್ಲಿ ಅಂಗಾರವೇಗನೆಂಬ ವಿದ್ಯಾಧರನು ಕೇಳಲು ಅವನನ್ನೂ ಉದಾಸೀನ ಮಾಡಿ ಜಿನಭವನಕ್ಕೆ ಹೋಗಿ ತನ್ನ ಮಕ್ಕಳಿಗೆ ಅನುರೂಪನಾದ ವರನಾವನೆಂದು ಅಲ್ಲಿದ್ದ ಮಹಾಮುನಿಯನ್ನು ಕೇಳಿ ಉತ್ತರಶ್ರೇಣಿಗೆ ಪ್ರಧಾನನಾದ ಸಾಹಸಗತಿಯನ್ನು ಕೊಂದವನೇ ತನ್ನ ಮಕ್ಕಳಿಗೆ ಪತಿಯಾಗುವನೆಂದು ತಿಳಿದು ಸಂತೋಷಪಟ್ಟನೆಂದೂ, ತಾವು ಈ ಕಾಡಿನಲ್ಲಿ ಹನ್ನೆರಡು ವರುಷಗಳಿದ್ದು ಮನೋವೇಗವೆಂಬ ವಿದ್ಯೆಯನ್ನು ಸಾಧಿಸಿದೆವೆಂದೂ ಕಾಡುಕಿಚ್ಚಿನ ಕೇಡನ್ನು ತಮಗೆ ಆಗ ಒದವಿಸಿದವನು ತಮ್ಮನ್ನು ಪಡೆಯದೆ ಹೋದ ಅಂಗಾರವರ್ಮನೆಂದೂ ತಿಳಿಸಿದರು. ಹನುಮಂತನು ಸಾಹಸಗತಿಯನ್ನು ಕೊಂದ ರಾಘವನು ಕಿಷ್ಕಿಂಧಪುರದಲ್ಲಿರುವನೆಂದು ಹೇಳಿ ಮುಂದಕ್ಕೆ ಹೊರಟನು. ಗಂಧರ್ವನು ಸಿದ್ಧವಿದ್ಯೆಯರಾದ ತನ್ನ ಮಕ್ಕಳನ್ನು ಕಂಡು ಸಂತೋಷಪಟ್ಟು ಹನುಮಂತನು ಹೇಳಿದ ವೃತ್ತಾಂತವನ್ನು ಅವರಿಂದ ತಿಳಿದು ಅವರನ್ನೊಡಗೊಂಡು ಉಚಿತ ಪರಿವಾರದೊಡನೆ ಕಿಷ್ಕಿಂಧಕ್ಕೆ ಹೋಗಿ ಪ್ರಶಸ್ತ ದಿನದಲ್ಲಿ ಅವರನ್ನು ರಾಮನಿಗೆ ಮದುವೆ ಮಾಡಿಕೊಟ್ಟು ಬಲು ಹರುಷದಿಂದಿದ್ದನು.

ಇತ್ತ, ಹನುಮಂತನು ಲಂಕೆಯನ್ನು ಸೇರಿ ಪಟ್ಟಣದ ಹೊರಗಡೆ ಬೀಡನ್ನು ಬಿಟ್ಟು ಮರುದಿನ ಪುರವನ್ನು ಹೊಗಬೇಕೆಂದಿರುವಲ್ಲಿ ವಿದ್ಯಾತ್ಮಕವಾದ ಕೋಟೆಯು ಅಡ್ಡಿಯಾಗಲು ಕೋಪಾವಿಷ್ಟನಾಗಿ ದಿವ್ಯ ವಜ್ರಕವಚವನ್ನು ತೊಟ್ಟು ದೈವಿಕವಾದ ತನ್ನ ಗದಾಯುಧದಿಂದ ವಿದ್ಯಾಪ್ರಕಾರವನ್ನೊಡೆದು ದ್ವಾರಪಾಲಕನಾದ ವಜ್ರಮುಖನೆಂಬ ದನುಜನನ್ನು ಕೊಂದನು. ಇದನ್ನು ಕಂಡು ಆ ದನುಜನ ಮಗಳಾದ ಲಂಕಾಸುಂದರಿಯು ಕಡು ಮುಳಿದು ತನ್ನ ತಂದೆಯನ್ನು ಕೊಂದವನನ್ನು ಸಂಹರಿಸುವೆನೆಂದು ಬಂದು ಹನುಮಂತನನ್ನು ನೋಡಿ ಮೋಹಗೊಂಡು

ಶೋಕವನ್ನೂ ಮುಳಿಸನ್ನೂ ತೊರೆದು ತನ್ನನ್ನೂ ತನ್ನ ವಿದ್ಯೆಗಳೆಲ್ಲವನ್ನೂ ಹನು ಮಂತನಿಗೆ ಕೊಡುವೆನೆಂದು ತಿಳಿಸಲು ಹನುಮನು ಅವಳನ್ನು ಮದುವೆಯಾದನು. ಅವಳ ಸಹಾಯದಿಂದ ಆತನು ಲಂಕೆಯನ್ನು ಸುಲಭವಾಗಿ ಹೊಕ್ಕು ಅವಳು ಹೇಳಿದಂತೆ ವಿಭೀಷಣನನ್ನು ಕಂಡು, ರಾವಣನಿಗೆ ಬುದ್ಧಿ ಹೇಳಿ ಸೀತಾದೇವಿಯನ್ನು ರಾಮನಿಗೆ ಒಪ್ಪಿಸುವಂತೆ ಮಾಡಿ ರಾವಣನ ದುರ್ಯಶಸ್ಸನ್ನು ಕಳೆಯುವುದು ವಿಭೀ ಷಣನ ಕರ್ತವ್ಯವೆಂದು ತಿಳಿಸಿದನು. ಅದಕ್ಕೆ ವಿಭೀಷಣನು ತಾನು ಉದಾಸೀನ ನಾಗಿಲ್ಲವೆಂದೂ ಪರಸ್ತ್ರೀ ಪ್ರೇಮವು ಕೇಡನ್ನುಂಟುಮಾಡುವುದೆಂದು ತನ್ನ ಅಣ್ಣ ನಿಗೆ ಆಗಲೇ ತಿಳಿಸಿರುವೆನೆಂದೂ ಆತನು ತನ್ನ ಮಾತನ್ನು ಲಕ್ಷ್ಯಮಾಡದೆ ಇರುವನೆಂದೂ ಸೀತಾದೇವಿಯು ಹನ್ನೊಂದು ದಿನಗಳಿಂದಲೂ ನಿರಶನ ವ್ರತವನ್ನು ಆಚರಿಸುತ್ತಿರುವಳೆಂದೂ ಆದರೂ ರಾವಣನಿಗೆ ವೈರಾಗ್ಯ ಹುಟ್ಟಲಿಲ್ಲವೆಂದೂ ಹೇಳಿದನು. ಇದನ್ನು ಕೇಳಿ ಆಂಜನೇಯನು ಅಲ್ಲಿಂದ ಹೊರಟು ಅದೃಶ್ಯನಾಗಿ ಸೀತಾದೇವಿಯಿದ್ದ ವನವನ್ನು ಹೊಕ್ಕು ಮಂಡೋದರಿ ಮೊದಲಾದ ಹಲವರು ಖಚರ ಸ್ತ್ರೀಯರು ಬಳಸಿ ಕಾಂತಿಗೆಟ್ಟಿದ್ದ ಸೀತೆಯನ್ನು ಕಂಡು, ಮತ್ತಾರೂ ಕಾಣದಂತೆ ಆಕೆಯ ಬಳಿಗೆ ಬಂದು ರಾಮನ ಮುದ್ರೆಯುಂಗುರವನ್ನು ಆಕೆಗೆ ಕೊಟ್ಟು ಭಕ್ತಿಯಿಂದ ನಮಸ್ಕಾರಮಾಡಿದನು. ಸೀತೆಯು ಇದನ್ನು ನೋಡಿ ಪರಮಾನಂದ ಹೊಂದಲು, ಸುತ್ತಲಿದ್ದ ಮಂಡೋದರಿ ಮೊದಲಾದವರು ಆಕೆಯು ರಾವಣನನ್ನು ಮೆಚ್ಚಿದಳೆಂದು ಹೇಳಿಕೊಂಡರು. ಇದನ್ನು ಕೇಳಿ ಸೀತಾದೇವಿಯು ಸಿಟ್ಟುಗೊಂಡು ಅವರಂಥ ಕುಲಸ್ತ್ರೀಯರು ಅಂತಹ ಮಾತುಗಳನ್ನಾಡಬಾರದೆಂದೂ ರಾಮಚಂದ್ರನಟ್ಟಿದ ದೂತನು ಬಂದುದರಿಂದ ತನಗೆ ಸಂತೋಷವುಂಟಾಯಿ ತೆಂದೂ ತಿಳಿಸಿದಳು. ಅದಕ್ಕೆ ಮಂಡೋದರಿಯು ಲಂಕೆಯನ್ನು ಹೊಗಲು ಯಾರಿಗೂ ಅಸಾಧ್ಯವಾದುದೆಂದೂ ಸೀತೆಗೆ ಸುದ್ದಿಯನ್ನು ಹೇಳಿದುದು ಕರ್ಣ ಪಿಶಾಚವಿರಬಹುದೆಂದೂ ಮಾತನಾಡುತ್ತಿರುವಲ್ಲಿ, ಹನುಮಂತನು ತನ್ನ ನಿಜ ಸ್ವರೂಪವನ್ನು ತೋರಲು ಖಚರ ಸ್ತ್ರೀಯರೆಲ್ಲರೂ ಭಯಪಟ್ಟು ಸೀತೆಯ ಮರೆ ಯನ್ನು ಹೊಕ್ಕರು. ಆಗ ವಾಯುಪುತ್ರನು ತನ್ನ ವೃತ್ತಾಂತವೆಲ್ಲವನ್ನೂ ವಿಶದ ವಾಗಿ ತಿಳಿಸಿ, ರಾಮನು ಸೀತಾದೇವಿಯ ಅಗಲಿಕೆಗೆ ಬಹಳ ವ್ಯಥೆಪಡುತ್ತಿರುವ ನೆಂದು ಬಿನ್ನವಿಸಿ, ತನ್ನಲ್ಲಿ ಸೀತೆಗೆ ನಂಬಿಕೆ ಹುಟ್ಟುವುದಕ್ಕಾಗಿ ಅವರ ವನವಾಸ ದಲ್ಲಿ ನಡೆದ ಅನೇಕ ವಿಷಯಗಳನ್ನು ಗುರುತಿಗಾಗಿ ಹೇಳಿ ಸೀತಾಪಹರಣವಾದ ಮೇಲೆ ನಡೆದ ವೃತ್ತಾಂತವನ್ನೆಲ್ಲ ಅರಿಕೆಮಾಡಿದನು. ಅದನ್ನು ಕೇಳಿ ಜಾನಕಿಯು ಬಹಳವಾಗಿ ಸಂತೋಷಪಟ್ಟು ಹನುಮಂತನ ಪರಾಕ್ರಮವನ್ನು ಹೊಗಳಿದಳು. ಇದಕ್ಕೆ ಮಂಡೋದರಿಯು ಆಂಜನೇಯನಿಗೆ ಸಮಾನರಾದವರು ಹಿಂದಿನವ ರಲ್ಲಿಯೂ ಈಗಿನವರಲ್ಲಿಯೂ ಯಾವ ಲೋಕದಲ್ಲಿಯೂ ಯಾರೂ ಇಲ್ಲವೆಂದು ಹೇಳಿ ಅವನ ಪರಾಕ್ರಮವನ್ನು ಉಗ್ಗಡಿಸಿ, ರಾವಣನಿಗೆ ಅವನಲ್ಲಿರುವ ಪ್ರೀತಿ

ಯನ್ನೂ ಅವನು ಮಾಡಿರುವ ಉಪಕಾರವನ್ನೂ ಅವನಲ್ಲಿರುವ ದೇಹಸಂಬಂಧ ವನ್ನೂ ಲಕ್ಷ್ಯಮಾಡದೆ ಆಂಜನೇಯನು ಅಸೇವ್ಯರಾದ ಭೂಚರರಲ್ಲಿ ಈ ರೀತಿ ಯಾಗಿ ಸೇವಾವೃತ್ತಿಗೆ ನಿಂತಿರುವುದು ಅನ್ಯಾಯವೆಂದು ಹೇಳಿದಳು. ಅದಕ್ಕೆ ಹನುಮಂತನು ಕಪಿಧ್ವಜಕುಲಕ್ಕೆ ರಾಘವನು ಮಾಡಿದ ಉಪಕಾರಕ್ಕಾಗಿ ಪ್ರತ್ಯುಪ ಕಾರವನ್ನು ಮಾಡಬೇಕೆಂಬ ಉದ್ದೇಶದಿಂದ ಬಂದೆನೆಂದೂ ರಾವಣನು ಪರಸ್ತ್ರೀಗೆ ಆಸೆಪಟ್ಟು ಲೋಕನಿಂದೆಯನ್ನೂ ಲಕ್ಷ್ಯಮಾಡದೆ ಈ ತೆರನಾಗಿ ನಡೆದಿರುವುದು ಕುಲ ನಾಶಕರವೆಂದೂ ಹೇಳಲು ಮಂಡೋದರಿಯು ಲಯಕಾಲದ ಚಂಡಿಕೆಯಂತೆ ಕೋಪಾವಿಷ್ಟಳಾಗಿ ರಾವಣನ ಬಳಿಗೆ ಹೋದಳು.

ಇತ್ತ, ಸೀತಾದೇವಿಯು ಪಂಚ ಪರಮೇಷ್ಠಿಗಳನ್ನು ಸ್ತುತಿಸಿ ಭಕ್ತಿಯಿಂದ ರಾಮನ ಪಾದಗಳನ್ನು ನೆನೆದು ಯತಿವರರಿಗೆ ಮನಸ್ಸಿನಲ್ಲಿ ಆಹಾರದಾನವನ್ನಿತ್ತು ಪಾರಣೆಯನ್ನು ಮಾಡಿದಳು. ಆಂಜನೇಯನು ಸೀತಾದೇವಿಯನ್ನು ರಾಮನಲ್ಲಿಗೆ ಕರೆದುಕೊಂಡು ಹೋಗುವೆನೆಂದು ಬಿನ್ನವಿಸಲು ಆಕೆಯು ರಾಮನಪ್ಪಣೆಯಿಲ್ಲದೆ ಹೊರಡುವುದು ಉಚಿತವಲ್ಲವೆಂದೂ ಹನುಮಂತನು ಕೂಡಲೆ ಹೊರಟು ಹೋಗಿ ತನ್ನ ವೃತ್ತಾಂತವನ್ನು ರಾಮಚಂದ್ರನಿಗೆ ತಿಳಿಸಬೇಕೆಂದೂ ಹೇಳಿ ಅವನಿಗೆ ತನ್ನ ಚೂಡಾರತ್ನವನ್ನು ಕೊಟ್ಟಳು. ಆಗ ಆಂಜನೇಯನು ತಾನು ಅಲ್ಲಿಗೆ ಬಂದದ್ದೂ ಹೋದದ್ದೂ ಯಾರಿಗೂ ತಿಳಿಯದೆ ಹೋದಲ್ಲಿ ತನ್ನ ಪರಾಕ್ರಮಕ್ಕೆ ಕೀಳನ್ನುಂಟು ಮಾಡುವುದೆಂದು ತಿಳಿದು, ಅಲ್ಲಿಯ ಖಳರನ್ನು ಕೊಂದು ಉದ್ಯಾನವನ್ನು ಕಿತ್ತು ಪುರವನ್ನು ಸುಟ್ಟು ರಾವಣನಿಗೆ ತಾನು ಬಂದಿರುವುದನ್ನು ಈ ರೀತಿಯಾಗಿ ತಿಳಿ ಯಿಸುವೆನೆಂದು ಆಲೋಚನೆಮಾಡಿದನು.

ಅತ್ತ, ಮಂಡೋದರಿಯು ಹನುಮಂತನ ವಿಷಯವನ್ನು ರಾವಣನಿಗೆ ತಿಳಿಸಲು ಅವನು ರೋಷಾವೇಶವುಳ್ಳವನಾಗಿ ಕದನಸಮರ್ಥರಾದ ರಾಕ್ಷಸರನ್ನು ಕರೆದು ಹನುಮಂತನನ್ನು ಕೊಂದುಬನ್ನಿರೆಂದು ನಿಯಮಿಸಿದನು. ಅವರು ತಂಡೋಪತಂಡವಾಗಿ ವನಕ್ಕೆ ಬಂದು ಆಂಜನೇಯನ ಮೇಲೆ ಬೀಳಲು, ಆತನು ಅಲ್ಲಿಯ ಮರಗಳನ್ನು ಕಿತ್ತು ಅವುಗಳಿಂದ ಎಲ್ಲರನ್ನೂ ಕೊಂದನು. ಈ ವಾರ್ತೆ ಯನ್ನು ಒಬ್ಬ ನಿಶಾಚರನು ರಾವಣನಿಗೆ ತಿಳಿಸಲು ಅವನು ಕಿಡಿಕಿಡಿಗೊಂಡು ಸಿಂಹಾಸನದಿಂದೆದ್ದು ತಾನೇ ಯುದ್ಧಕ್ಕೆ ಹೊರಡಬೇಕೆಂದಿರುವಲ್ಲಿ ಮಗನಾದ ಇಂದಗಿಯು ಬಂದು ಏಕಾಕಿಯಮೇಲೆ ಯುದ್ಧಮಾಡಲು ಲೋಕಾಧಿಪತಿಯಾದ ರಾವಣನು ಹೊರಡುವುದು ಲೋಕಾಪವಾದಕ್ಕೆ ಗುರಿಮಾಡುವುದೆಂದು ತಿಳಿಸಿ, ತಾನು ಹೋಗಿ ಹನುಮಂತನನ್ನು ಸೆರೆಹಿಡಿದು ತಂದೊಪ್ಪಿಸುವೆನೆಂದು ಹೇಳಿ ಅಪ್ಪಣೆಪಡೆದು ಹೊರಟನು. ಇದನ್ನು ತಿಳಿದು ಹನುಮಂತನು ತಾನು ಹೊರಗೆ ನಿಲ್ಲಿಸಿ ಬಂದಿದ್ದ ಸೈನ್ಯವನ್ನು ಬರಿಸಿ ವಿಜಯರಥಾರೂಢನಾಗಿ ಲಂಕಾಪುರವೆಲ್ಲವೂ

ತಲ್ಲಳಿಸುವಂತೆ ಕಾದಿ ಹೆಸರಾದ ನಾಯಕರನೇಕರನ್ನು ಕೊಲ್ಲಲು ಇಂದಗಿಯು ಮುಳಿದು ಹನುಮಂತನ ಮೇಲೆ ಬಿದ್ದನು. ಆಗ ಹನುಮಂತನು ತನಗೆ ರಾಘವನು ತನ್ನ ಪರಾಕ್ರಮವನ್ನು ತೋರಿಸುವ ಅಪ್ಪಣೆಯನ್ನು ಕೊಡಲಿಲ್ಲವೆಂದೂ ಆದುದರಿಂದ ತಾನು ಇಂದಗಿಗೆ ಸಿಕ್ಕಿ ರಾವಣನ ಬಳಿಗೆ ಹೋಗಿ ಲಂಕಾದಹನ ಮಾಡುವೆನೆಂದೂ ಆಲೋಚಿಸಿ ತನ್ನ ಸೈನ್ಯವನ್ನು ಬೀಡಿಗೆ ಕಳುಹಿಸಿ ತಾನು ಯುದ್ಧಕ್ಕೆ ಭಯಪಟ್ಟವನಂತೆ ಸೆರೆಸಿಕ್ಕಿದನು. ಅವನನ್ನು ಇಂದಗಿಯು ರಾವಣನ ಬಳಿಗೆ ತೆಗೆದುಕೊಂಡುಹೋಗಿ ಅವನ ವೃತ್ತಾಂತವೆಲ್ಲವನ್ನೂ ತಿಳಿಸಿ ಅವನಿಗೆ ತಕ್ಕ ಶಿಕ್ಷೆಯನ್ನು ಮಾಡಬೇಕೆಂದು ಬಿನ್ನವಿಸಲು ರಾವಣನು ಬಹಳ ಕೋಪದಿಂದ, "ಎಲೈ ಹನುಮಂತನೇ! ನೀನು ನಿನ್ನ ವಂಶದ ಉನ್ನತಿಯನ್ನೂ ಪದ್ಧತಿಯನ್ನೂ, ನಾನು ನಿನ್ನನ್ನು ಇಂದಗಿಗೆ ಸಮಾನವಾಗಿ ಭಾವಿಸಿ ಮಾಡಿರುವ ಮನ್ನಣೆಯನ್ನೂ ಲಕ್ಷ್ಯಮಾಡದೆ ಲಜ್ಜೆಯನ್ನು ತೊರೆದು ಮನುಷ್ಯಮಾತ್ರದವನಿಗೆ ಚರನಾಗಿ ಬರುವುದು ನ್ಯಾಯವೇ? ಹಗೆಗಳೊಡನೆ ಕೂಡಿದ ದುರಾತ್ಮನಾದ ನಿನ್ನನ್ನು ದಂಡಿಸಲೇ ಬೇಕು" ಎನ್ನಲು, ಸುತ್ತಲಿದ್ದ ಕೆಲವರು, ಆಂಜನೇಯನನ್ನು ಸ್ವಾಮಿದ್ರೋಹಿಯೆಂದು ಮೂದಲಿಸಿದರು. ಇದಕ್ಕೆ ಮಾರುತಿಯು ಮುಳಿದು, "ಅಯ್ಯಾ! ಪರಸ್ತ್ರೀಯನ್ನು ಹಿಡಿತಂದು ತೋಯದವಾಹನನ ವಂಶಕ್ಕೆ ಕೆಟ್ಟ ಹೆಸರನ್ನು ತಂದ ರಾವಣನ ಅನ್ಯಾಯವನ್ನು ಆಲೋಚಿಸದೆ ದೋಷಕ್ಕೆಡೆಗೊಟ್ಟ ನೀವು ಪಾಪಿಗಳಲ್ಲವೇ? ನಿಮಗೂ ರಾವಣನಿಗೂ ವಿಧಿಯು ಸೌಮಿತ್ರಿಯ ಕೈಯಿಂದ ರಣರಂಗದಲ್ಲಿ ಸಾವನ್ನು ಬರೆದಿರುವಾಗ ಅದನ್ನು ತೊಡೆಯುವುದು ಯಾರಿಂದಾಗುವುದು?" ಎಂದು ಪಲತೆರನಾಗಿ ಮೂದಲಿಸಲು ದಶಮುಖನು ಬಹಳ ಸಿಟ್ಟಾಗಿ, ಅವನ ಹರಟೆಗೆ ಎಡೆಗುಡದೆ ಅವನನ್ನು ರಾಮದೂತನೆಂದು ಡಂಗುರ ಹೊಡೆಯಿಸಿ ಅವಮಾನ ಪಡಿಸಿ ಅಟ್ಟಿಬಿಡಿರೆಂದು ತನ್ನವರಿಗೆ ಹೇಳಿದನು. ಅದನ್ನು ಕೇಳಿ ಹನುಮಂತನು ಕಣ್ಣಿನಿಂದ ಕಿಡಿಗಳನ್ನು ಸುರಿಸುತ್ತ ಕೋಪದಿಂದ ಉರಿದುಬಿದ್ದು ಅಲ್ಲಿದ್ದ ಕೆಲವರನ್ನು ತುಳಿದು, ಕೆಲವರನ್ನು ಹೊಡೆದು, ಕೆಲವರನ್ನು ಎಲುಬು ಮುರಿದು, ಮತ್ತೆ ಕೆಲವರನ್ನು ಕಾಲುಹಿಡಿದೆತ್ತಿ ಅಪ್ಪಳಿಸಿ ಕೊಂದು, ಸಿಂಹಲಂಘನದಿಂದ ಆಕಾಶಕ್ಕೆ ನೆಗೆದು ತನ್ನ ದಹನವಿದ್ಯೆಯಿಂದ ಲಂಕಾಪಟ್ಟಣದಲ್ಲಿಯ ಎಲ್ಲ ಮನೆಗಳನ್ನೂ ರಾವಣನ ಅರಮನೆಯನ್ನೂ ಸುಟ್ಟನು. ತರುವಾಯ ಆತನು ತನ್ನ ಸೇನೆಯೊಡಗೂಡಿ ಹೊರಟು ಕಿಷ್ಕಿಂಧಪುರವನ್ನು ಸೇರಿ ರಾಮಚಂದ್ರನ ಬಳಿಗೆ ಬರುತ್ತಿರುವಲ್ಲಿ ಅವನ ಮುಖಚಿಹ್ನೆಗಳಿಂದ ಕಾರ್ಯಸಿದ್ಧಿಯಾಯಿತೆಂದು ಎಲ್ಲರೂ ತಿಳಿದರು. ಹನುಮಂತನು ರಾಮಚಂದ್ರನಿಗೆ ಪೊಡಮಟ್ಟು ಚೂಡಾರತ್ನವನ್ನು ಕೊಡಲು ರಾಮನ ಕಣ್ಣುಗಳಿಂದ ಆನಂದಬಾಷ್ಪಗಳು ಸುರಿದುವು; ಸೀತೆಯ ವೃತ್ತಾಂತವನ್ನು ಕೇಳಬೇಕೆಂಬ ಕುತೂಹಲವು ಹಿಡಿಯದಂತಾಯಿತು. ಆಂಜನೇಯನು ಸೀತಾರಾಮರಿಗೆ ತಿಳಿದಿದ್ದ ಕೆಲವು ಗುರುತುಗಳನ್ನು ಸೀತೆಯಿಂದ

ತಿಳಿದವನಾಗಿ ಅವನ್ನು ರಾಮನಿಗೆ ಹೇಳಿದನು. ಆಂಜನೇಯನ ಪ್ರಧಾನ ಮಂತ್ರಿಯಾದ ಪೃಥುಮತಿಯು ಆಂಜನೇಯನು ಲಂಕೆಯಲ್ಲಿ ತೋರಿಸಿದ ಪರಾಕ್ರಮವನ್ನು ವಿಸ್ತರಿಸಿ ಹೇಳಲು ಎಲ್ಲರೂ ಆಂಜನೇಯನನ್ನು ಹೊಗಳಿದರು. ಲಕ್ಷ್ಮಣನು ಇನ್ನು ತಡವೇತಕ್ಕೆಂದು ಸುಗ್ರೀವನೊಡನೆ ಹೇಳಲು ಆತನು ತನ್ನ ಸೈನ್ಯವು ನಭೋಗಮನ ವಿದ್ಯೆಯಿಂದ ಸಮುದ್ರವನ್ನು ದಾಟುವುದಕ್ಕೆ ಸಾಮರ್ಥ್ಯವುಳ್ಳದ್ದೆಂದು ಹೇಳಿ ಅಜೇಯರಾದ ತನ್ನ ಯೋಧರೊಡನೆ ವಿಜಯ ಪ್ರಯಾಣಕ್ಕೆ ಸಿದ್ಧನಾದನು.

---

## ಆಶ್ವಾಸ ೧೨—ಲಂಕಾ ದಿಗ್ವಿಜಯ ಪ್ರಯಾಣ

ಶ್ರೀರಾಮನು ಪ್ರಾತಃಕಾಲದಲ್ಲಿ ಜಿನಪೂಜೆಯನ್ನು ಮಾಡಿ ಓಲಗ ಸಾಲೆಗೆ ಬಂದು ಸಿಂಹಾಸನವನ್ನಲಂಕರಿಸಿ ಕುಳಿತಿರಲು, ಪಕ್ಕದ ಮಣಿಮಯಾಸನದಲ್ಲಿ ಲಕ್ಷ್ಮಣನೂ, ಸುತ್ತಲೂ ಸುಗ್ರೀವ ಅಂಗದ ನಳ ನೀಲ ಜಾಂಬವ ಹನುಮ ಮೊದಲಾದ ಖಚರ ಪರಿವೃಢರೂ ಸೇನಾನಾಯಕರೂ ಸಮುಚಿತಾಸನಗಳಲ್ಲಿ ಕುಳಿತುಕೊಂಡರು. ಆಗ ಪುರೋಹಿತನು ಸ್ವಸ್ತಿಯನ್ನು ಹೇಳಿ ದಿಗ್ವಿಜಯ ಪ್ರಯಾಣ ಲಗ್ನವು ಸಮೀಪಿಸಿತೆಂದು ಬಿನ್ನವಿಸಲು ಸೇನಾಧಿಪತಿಯಾದ ನಳನು ವಿಜಯ ದುಂದುಭಿಯನ್ನು ಹೊಡೆಯಿಸಿದನು. ಆಗ ಕುಲವೃದ್ಧರೂ ಕುಲಾಂಗನೆಯರೂ ಆಶೀರ್ವಾದಮಾಡಲು ರಾಮಚಂದ್ರನು ಸಿಂಹಾಸನದಿಂದೆದ್ದು ಲಕ್ಷ್ಮಣನೊಡನೆ ಪರಿವಾರ ಸಮೇತನಾಗಿ ಹೊರಟು ಜಯಃಘೋಷವು ದಿಕ್ಕುಗಳನ್ನು ತುಂಬುತ್ತಿರುವಲ್ಲಿ ರಥವನ್ನೇರಿ ದಕ್ಷಿಣಾಭಿಮುಖವಾಗಿ ನಡೆದನು. ಆಗ ಲಕ್ಷ್ಮಣನು ಸೇನಾನಾಯಕರನ್ನು ತಂತಮ್ಮ ಸೈನ್ಯದೊಡನೆ ತಕ್ಕ ಸ್ಥಳಗಳಲ್ಲಿರುವಂತೆ ನಿಯಮಿಸಿ ತಾನೂ ಹನುಮನೂ ರಥಾರೂಢರಾಗಿ ಸಕಲ ವಿದ್ಯಾಧರ ನಾಯಕರೊಡನೆ ದಾಶರಥಿಯ ಎರಡು ಪಕ್ಕಗಳಲ್ಲಿಯೂ ಮೆಯ್ಗಾವಲಾಗಿ ನಡೆದರು. ಹೀಗೆ ನಡೆಯುತ್ತ ಸೇನೆಯು ವೇಲಾಂಧಪುರದ ಸಮೀಪಕ್ಕೆ ಬರಲು, ಆ ಪುರಾಧಿಪತಿಯಾದ ಸಮುದ್ರನೆಂಬ ಹೆಸರುಳ್ಳ ವಿದ್ಯಾಧರನು ಮುಂದೆ ನಡೆಯುತ್ತಿದ್ದ ನಳನ ಸೈನ್ಯವನ್ನಡ್ಡಗಟ್ಟಿ ಯುದ್ಧಕ್ಕೆ ನಿಲ್ಲಲು ಅವನನ್ನು ನಳನು ಸೋಲಿಸಿ ರಾಮಚಂದ್ರನಿಗೆ ತಂದೊಪ್ಪಿಸಿದನು. ಆತನು ಸಮುದ್ರನಿಗೆ ಅಭಯವನ್ನು ಕೊಟ್ಟು ಮನ್ನಿಸಲು, ಸಮುದ್ರನು ತನ್ನ ನಾಲ್ವರು ಮಕ್ಕಳನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆಮಾಡಿ ಭೃತ್ಯ ಪದವಿಯಲ್ಲಿ ನಿಂತು ತನ್ನ ಪೂರ್ವ ಪದವಿಯನ್ನು ಪಡೆದನು. ತರುವಾಯ ಸುವೇಲಾಚಲದೊಡೆಯನಾದ ಸುವೇಲನು ರಾಮನಿಗೆ ಶರಣಾಗತನಾದನು. ರಾಮನು ಸೇನಾಸಮೇತನಾಗಿ ಆ ದಿನ ಸುವೇಲಾಚಲದಲ್ಲಿದ್ದು ಮರುದಿನ ಲಂಕಾದ್ವೀಪದ ಸಮೀಪದಲ್ಲಿರುವ ಹಂಸದ್ವೀಪದ ಬಳಿಗೆ ಬರುತ್ತಿರುವಲ್ಲಿ ಆ ದ್ವೀಪಾಧಿಪತಿಯಾದ ನಭಶ್ಚರನು ಅಸಂಖ್ಯಾತ ಬಲ ಸಮೇತನಾಗಿ ಮೇಲೆ ಬೀಳಲು ನಳನು ಅವನನ್ನು

ಜಯಿಸಿ ಶರಣಾಗತನನ್ನಾಗಿ ಮಾಡಿದನು. ಲಕ್ಷ್ಮಣನು ಆ ದ್ವೀಪದಲ್ಲಿ ಬೀಡನ್ನು ಬಿಟ್ಟು ಪ್ರಭಾಮಂಡಲನನ್ನು ಬರುವಂತೆ ಹೇಳಿಕಳುಹಿಸಿ, ಸುತ್ತುಮುತ್ತಲಿರುವ ದ್ವೀಪಾಂತರಗಳ ವಿದ್ಯಾಧರಾಧಿರಾಜರನ್ನು ಆಜ್ಞಾವಿಧೇಯರನ್ನಾಗಿ ಮಾಡಿದನು.

ಇತ್ತ, ರಾವಣನು ಸಿಂಹಾಸನವನ್ನೇರಿ ಒಡ್ಡೋಲಗಂಗೊಟ್ಟಿರುವಲ್ಲಿ ಚಾರನೊಬ್ಬನು ಬಂದು ಕೈಮುಗಿದು ನಿಂತು, ಮನುಷ್ಯಮಾತ್ರದವರಾದ ರಾಮ ಲಕ್ಷ್ಮಣರು ಅನೇಕ ಮಂದಿ ಖೇಚರರಿಂದಲೂ ರಾವಣನನ್ನು ಬಿಟ್ಟುಳಿದ ಸಾಮಂತ ರಿಂದಲೂ ಕೂಡಿ ಯುದ್ಧಕ್ಕೆ ಬರುತ್ತಿರುವರೆಂದು ಬಿನ್ನವಿಸಲು, ರಾವಣನು ಮುಗುಳ್ನಗೆ ನಕ್ಕು ತನ್ನ ಸಾಮಂತರು ಕಪ್ಪಕೊಡುವುದನ್ನು ತಪ್ಪಿಸಿಕೊಳ್ಳುವು ದಕ್ಕಾಗಿ ಏಕಾಕಿಗಳಾದ ರಾಮಲಕ್ಷ್ಮಣರನ್ನು ಮುಂದಿಟ್ಟುಕೊಂಡು ಸಂಧಾನ ಮಾಡಿ ಬರುತ್ತಿರುವಂತಿದೆಯೆಂದು ಹೇಳಲು ಮೇಘವಾಹನ ಮೊದಲಾದ ಸಭಾ ಸದರೆಲ್ಲರೂ ಮಾರ್ದನಿಗೊಟ್ಟರು. ಆದರೆ ವಿಭೀಷಣನು ಮಾತ್ರ ಅದಕ್ಕೊಪ್ಪಿ ಸುಮ್ಮನಿರದೆ ಅಣ್ಣನಿಗೆ ಬುದ್ಧಿವಾದವನ್ನು ಹೇಳಿ ಪರಸ್ತ್ರೀಯ ಬೆಸೆಯಿಂದ ನಾನಾ ವಿಧವಾದ ಕ್ಲೇಶಗಳುಂಟಾಗುವುವೆಂದೂ ಕುಲನಾಶವಾಗುವುದೆಂದೂ ಸೀತೆಯನ್ನು ರಾಮನಿಗೊಪ್ಪಿಸಿದರೆ ತಾವೆಲ್ಲರೂ ಒಂದೇ ಕಡೆ ಸುಖದಿಂದಿರಬಹುದೆಂದೂ ತಿಳಿಸಿ ದನು. ಇದಕ್ಕೆ ಇಂದಗಿಯು ಕೋಪಾವಿಷ್ಟನಾಗಿ ವಿಭೀಷಣನನ್ನು ದೂಷಿಸಿ, ತಾರಾದ್ರಿಯನ್ನು ತೋಳಬಲದಿಂದೆತ್ತಿದ ರಾವಣನನ್ನು ಮನುಷ್ಯಮಾತ್ರದವರು ಗೆಲ್ಲುವುದು ಸಾಧ್ಯವಲ್ಲೆಂದೂ ಸುಮ್ಮನೆ ಭಯಪಡುವುದು ಅನುಚಿತವೆಂದೂ ನುಡಿದನು. ಇದನ್ನು ಕೇಳಿ ವಿಭೀಷಣನು ಸಿಟ್ಟಾಗಿ ತಂದೆಯ ರಾಜ್ಯಕ್ಕಾಸೆಪಟ್ಟು ದುರ್ಯಶಸ್ಸಿಗಂಜದೆ ಬಲ್ಲಿದರಲ್ಲಿ ಕಲಹವನ್ನು ಬಯಸುವುದು ತಪ್ಪೆಂದೂ ಖರ ದೂಷಣರನ್ನು ಸುಲಭವಾಗಿ ಸಂಹರಿಸಿ ಪ್ರಸಿದ್ಧರಾದ ಖೇಚರರನ್ನು ಸಾಮರ್ಥ್ಯ ದಲ್ಲಿ ಮೀರಿಸಿದ ಸೌಮಿತ್ರಿಗೆ ಎಣೆ ಯಾರೂ ಇಲ್ಲವೆಂದೂ ರಣಭೂಮಿಯಲ್ಲಿ ರಾಮ ಬಾಣವು ಯಾರನ್ನೂ ಉಳಿಯಲೀಯದೆಂದೂ ಆದುದರಿಂದ ಸೀತೆಯನ್ನೊಪ್ಪಿಸಿ ರಾಮಲಕ್ಷ್ಮಣರೊಡನೆ ಸಂಧಿಮಾಡಿಕೊಳ್ಳುವುದೇ ಸರಿಯೆಂದೂ ಹಾಗೆ ಮಾಡದೆ ಕಾದಿದಲ್ಲಿ ಅಪವಾದವು ಶಾಶ್ವತವಾಗಿ ನಿಲ್ಲುವುದೆಂದೂ ತಿಳಿಸಿದನು.

ಈ ಮಾತನ್ನು ಕೇಳಿ ರಾವಣನು ರೌದ್ರಾಕಾರನಾಗಿ ಚಂದ್ರಹಾಸಾಸಿ ಯನ್ನು ಒರೆಯಿಂದ ಸೆಳೆಯಲು ವಿಭೀಷಣನು ಗದಾದಂಡವನ್ನು ಹಿಡಿದು ರಾವಣ ನೆದುರಿಗೆ ಅದಿರದೆ ನಿಂತನು. ಇದನ್ನು ನೋಡಿ ಕುಲವೃದ್ಧರು ಅಡ್ಡವಾಗಿ ಬಂದು ರಾವಣನನ್ನು ಸಮಾಧಾನಪಡಿಸಲು ಅವನು ಮುಗುಳ್ನಗೆ ನಕ್ಕು, "ಅಯ್ಯೊ! ಮನುಷ್ಯ ಮಾತ್ರದವನು ನನಗಿಂತಲೂ ಬಲಿಷ್ಠನೇ? ಅಂಥವನ ಮಾತನ್ನು ಕೇಳಿ ಅವನಲ್ಲಿ ಆಳ್ತನಕ್ಕೆ ನಿಂತು ನನ್ನಲ್ಲಿ ದಾಯಾದಿತ್ವವನ್ನು ತೋರಿಸುತ್ತಿರುವ ಈ ವಿಭೀಷಣನ ಪುಂಡನ್ನಡಗಿಸುವೆನು; ಮುಕ್ಕಣ್ಣನಾದರೂ ನನ್ನ

ಮಾತಿಗಡ್ಡವಾಗಿ ಬಂದು ಬದುಕುವನೇ ? ಆದರೆ ಗೋತ್ರವಧೆಯು ಸರಿಯಲ್ಲ ವಾದುದರಿಂದ ವಿಭೀಷಣನನ್ನು ಲಂಕೆಯಿಂದ ಅಟ್ಟಿಬಿಡಿರಿ ; ಇವನು ಇಲ್ಲಿದ್ದರೆ ಯುದ್ಧೋತ್ಸಾಹಿಗಳಿಗೆ ಭಯವನ್ನುಪದೇಶಮಾಡುವನು" ಎಂದು ಹೇಳಿದನು. ಇದನ್ನು ಕೇಳಿ ವಿಭೀಷಣನು ತನ್ನ ಸಾಮಂತರಿಂದೊಡಗೂಡಿ ದೊಡ್ಡ ಸೈನ್ಯ ದೊಡನೆ ಲಂಕೆಯಿಂದ ಹೊರಟು ಹಂಸದ್ವೀಪದ ಸಮೀಪಕ್ಕೆ ಬಂದು ತನ್ನ ಮಹ ತ್ತರನನ್ನು ರಾಮನ ಬಳಿಗಟ್ಟಲು ಅವನು ಬಂದು, ರಾವಣನು ಬುದ್ಧಿ ವಾದವನ್ನು ಕೇಳದೆ ಹೋದುದರಿಂದ ವಿಭೀಷಣನು ರಾಮನ ಶರಣಹೊಗಲು ಬಂದಿರುವನೆಂದು ತಿಳಿಸಿದನು. ಆಗ ಮತಿಕ್ರಾಂತ ಮೊದಲಾದ ಮಂತ್ರಿಮುಖ್ಯರು ಇದು ಅಣ್ಣತಮ್ಮಂದಿರಿಗೆ ಹುಸಿ ಜಗಳವಿರಬಹುದೆಂದೂ ತಮಗೆ ಅಪಾಯವನ್ನುಂಟು ಮಾಡುವುದಕ್ಕಾಗಿ ಈರೀತಿ ಬಂದಿರಬಹುದೆಂದೂ ಹೇಳಲು, "ಅಯ್ಯಾ! ನನ್ನೆದುರಿಗೆ ಬರಲು ಅಳುಕಿ ಮೋಸದಿಂದ ಸೀತೆಯನ್ನು ಹೊತ್ತುಕೊಂಡು ಹೋದ ದಶಕಂಠನಿಗೆ ಹೆದರುವುದೇ? ಬೇಡಿದವರಿಗೆ ಕೊಡದೆ, ಎದುರುಬಿದ್ದವರನ್ನಿಕ್ಕದೆ, ಮರೆಹೊಕ್ಕವರನ್ನು ಕಾಯದೆ ಬಾಳುವ ಅರಸುಮಗನ ಭುಜಬಲವು ನಿರರ್ಥಕವು, ಅವನ ಪಾರ್ಥಿವ ಜನ್ಮವು ವ್ಯರ್ಥವು" ಎಂದು ರಾಮನು ಉತ್ತರಕೊಟ್ಟನು. ಆಗ ಅಂಜನಾಸುತನು ವಿಭೀಷಣನ ಗುಣಸ್ತವನಮಾಡಿ, ಅಣ್ಣತಮ್ಮಂದಿರಿಗಿರುವ ದ್ವೇಷ ವನ್ನು ಜನಪ್ರವಾದದಿಂದ ತಾನರಿತಿರುವೆನೆಂದೂ ವಿಭೀಷಣನು ತನಗೆ ಲಂಕೆ ಯಲ್ಲಿ ಸಹಾಯಮಾಡಿ ಮರ್ಯಾದೆಯೊಡನೆ ತನ್ನನ್ನು ಕಳುಹಿಸಿದನೆಂದೂ ಹೇಳಲು ರಾಮನು ಚಾರನನ್ನು ಕರೆಯಿಸಿ ವಿಭೀಷಣನನ್ನು ಬರುವಂತೆ ಹೇಳಿ ಕಳುಹಿಸಿ ದಿವ್ಯವಸ್ತ್ರಾಭರಣಗಳೊಡನೆ ಸುಗ್ರೀವಾಂಗದ ಮೊದಲಾದವರನ್ನು ಎದುರುಗೊಳ್ಳುವುದಕ್ಕಾಗಿ ಮುಂದೆ ಕಳುಹಿಸಿದನು. ವಿಭೀಷಣನು ರಾಜಸಭೆ ಯನ್ನು ಹೊಕ್ಕು ರಾಮನಿಗಡ್ಡಬೀಳಲು ಆತನನ್ನು ರಾಮನು ತಕ್ಕ ಮರ್ಯಾದೆ ಯೊಡನೆ ಕಂಡು ಉಚಿತಸಂಭಾಷಣದಿಂದ ತೃಪ್ತಿಪಡಿಸಿ ಬಿಡಾರಕ್ಕೆ ಕಳುಹಿಸಿ ದನು. ಆ ಹೊತ್ತಿಗೆ ಪ್ರಭಾಮಂಡಲನು ಸಹಸ್ರಾಕ್ಷೌಹಿಣೀ ಬಲದೊಡನೆ ಬಂದು ಸೇರಲು ಮರುದಿನ ಎಲ್ಲರೂ ಹೊರಟು ಸಮುದ್ರತೀರಕ್ಕೆ ಬಂದರು.

ಆಗ ನಳನು ನಭೋಗಮನ ವಿದ್ಯೆಯೇ ಸೇತುವಾದುದೆಂಬಂತೆ ಚತು ರಂಗ ಬಲವನ್ನು ಆಕಾಶದಲ್ಲಿ ನಡೆಯಿಸಿದನು. ಜಾಂಬವ ಸುಷೇಣ ವಿಭೀಷಣ ಚಂದ್ರರಶ್ಮಿ ಸುಗ್ರೀವ ಹನುಮ ಮೊದಲಾದವರ ರತ್ನವಿಮಾನಗಳು ರಾಮ ಲಕ್ಷ್ಮಣರ ವಿಮಾನಗಳನ್ನು ಸುತ್ತಿ ಬರಲು ಎಲ್ಲ ಸೈನ್ಯವೂ ಕ್ಷಣಮಾತ್ರದಲ್ಲಿ ಸಮುದ್ರವನ್ನು ದಾಟಿ ದಡದಲ್ಲಿದ್ದ ಒಂದು ವನದಲ್ಲಿಳಿದು ತರುವಾಯ ಲಂಕಾಭಿ ಮುಖವಾಗಿ ಹೊರಟು ರಣಭೂಮಿಯನ್ನು ಸೇರಿತು. ಆಗ ಅವರವರಿಗೆ ತಕ್ಕಂತೆ ಬಿಡಾರಗಳು ಸಿದ್ಧವಾದುವು.

## ಆಶ್ವಾಸ ೧೩—ಬಲಾಚ್ಯುತ ಪುಣ್ಯಪ್ರಭಾವ ವರ್ಣನೆ

ರಾಮಚಂದ್ರನ ಸೇನೆಯ ಕೋಲಾಹಲವು ಕಿವಿಗೆ ಬೀಳಲು ರಾವಣನು ಮುನಿದು ಸನ್ನಾಹ ಭೇರಿಯನ್ನು ಹೊಯಿಸಿ ಮನುಷ್ಯಮಾತ್ರದವನು ತನ್ನ ಮೇಲೆ ಎತ್ತಿಬಂದನಲ್ಲವೇ ಎಂದು ಕಿಡಿಕಿಡಿಯಾದನು. ರಾವಣನ ಸಾಮಂತರೆಲ್ಲರೂ ತಂತಮ್ಮ ಸೇನೆಗಳೊಡನೆ ಬಂದು ಸೇರಲು ಅವನು ಮೂವತ್ತುನಾಲ್ಕು ಸಾವಿರ ದಕ್ಷೌಹಿಣೀ ಬಲದೊಡನೆ ಯುದ್ಧಕ್ಕೆ ಸಿದ್ಧನಾದನು. ರಾತ್ರಿ ಕಳೆದು ಬೆಳಗಾಗಲು ಇಂದಗಿ ಮಾರೀಚ ಜಿತಶತ್ರು ಮೇಘವಾಹನ ಕುಂಭಕರ್ಣ ಮೊದಲಾದ ಮಹಾ ರಥರೊಡನೆ ಕೂಡಿ ರಾವಣನು ರಣಭೂಮಿಗೆ ಬರುತ್ತಿರುವಲ್ಲಿ ಉತ್ಪಾತಗಳೂ ಅಪಶಕುನಗಳೂ ತೋರಿದರೂ ಅವನ್ನು ರಾವಣನು ಲಕ್ಷ್ಯಮಾಡದೆ ಬಂದು ಒಡ್ಡಿ ನಿಂತನು. ಆಗ ನಳ ನೀಲ ಅಂಗದಕುಮಾರ ಸುಷೇಣ ಜಾಂಬವ ಮೊದ ಲಾದ ವಾನರ ಪ್ರಮುಖರೂ ಪ್ರಭಾಮಂಡಲ ಹನುಮ ಮೊದಲಾದ ಖೇಚರ ನಾಯಕರೂ ವಿಭೀಷಣನೂ ಸುಗ್ರೀವನೂ ತಂತಮ್ಮ ಸೈನ್ಯಗಳೊಡನೆ ರಾಮ ಲಕ್ಷ್ಮಣರ ಸುತ್ತಲೂ ತಕ್ಕ ರೀತಿಯಲ್ಲಿ ನಿಂತರು. ಆಗ ರಾಮನ ಸೈನ್ಯದಿಂದ ನಳ ನೀಲರೂ ರಾವಣನ ಸೈನ್ಯದಿಂದ ಹಸ್ತ ಪ್ರಹಸ್ತರೂ ಇದಿರಾಗಿ ಕಾದಿ ನಳನು ಹಸ್ತನನ್ನು ಕೊಲ್ಲಲು ಪ್ರಹಸ್ತನು ಕೋಪಾವೇಶದಿಂದ ನಳನಮೇಲೆ ಬಿದ್ದನು. ಅದನ್ನು ಕಂಡು ನೀಲನು ನಳನನ್ನು ಹಿಂದಕ್ಕೆ ಬಿಟ್ಟು ತಾನು ಮುಂದಕ್ಕೆ ನುಗ್ಗಿ ಪ್ರಹಸ್ತನನ್ನು ಕೊಂದನು. ಆ ಹೊತ್ತಿಗೆ ಸೂರ್ಯನಸ್ತಮಿಸಲು ಉಭಯ ಬಲದ ವರೂ ಅಪಹಾರ ತೂರ್ಯವನ್ನು ಹೊಯಿಸಿ ತಂತಮ್ಮ ಬೀಡಿಗೆ ಹೋಗಿ ಸಮರ ಪರಿಶ್ರಮವನ್ನಾರಿಸಿಕೊಳ್ಳುತ್ತಿದ್ದರು.

ಬೆಳಗಾದ ಕೂಡಲೆ ಉಭಯ ಸೈನಿಕರೂ ಯುದ್ಧಸನ್ನದ್ಧರಾಗಿ ಬಂದು ಕಾದುತ್ತಿರುವಲ್ಲಿ ಮಾರೀಚನು ಸಂತಾಪನನ್ನೂ ಮಕರನು ಮಹೋದಧಿಯನ್ನೂ ಗಂಭೀರನು ಉದ್ದಾಮನನ್ನೂ ಸಿಂಹಕಟಿಯು ಪ್ರಥಿತನನ್ನೂ ಕೊಲ್ಲಲು ರಾವಣನ ಸೇನೆಯು ಜಯಘೋಷವನ್ನು ಮಾಡಿತು. ರಾಮನ ಸೇನೆಯು ಭಯಗೊಂಡಿತು. ಕೂಡಲೆ ರಾಮನ ಸೈನ್ಯದಲ್ಲಿಯ ಇತರ ಸಾಮಂತರು ಪ್ರಳಯಕಾಲದ ಭೈರವನ ಭೀಕರಾಕಾರವನ್ನು ತಾಳಿ ರಾವಣನ ಸಾಮಂತರನೇಕರನ್ನು ಕೊಂದರು. ಅದು ವರೆಗೆ ಹೊತ್ತು ಮುಳುಗಲು ಯುದ್ಧವನ್ನು ನಿಲ್ಲಿಸಿ ಅವರವರು ಅವರವರ ಬಿಡಾ ರಕ್ಕೆ ಹೋದರು. ಮರುದಿನ ಹೊತ್ತು ಮೂಡಿದೊಡನೆಯೇ ಯುದ್ಧವಾರಂಭ ವಾಗಿ ಉಭಯ ಪಾರ್ಶ್ವಗಳ ನಾಯಕರೂ ಅದ್ಭುತವಾಗಿ ಕಾದಿದರು. ಹೀಗೆ ಕೆಲವು ದಿನಗಳು ನಡೆದಮೇಲೆ ಹನುಮನು ಯುದ್ಧಕ್ಕೆ ನಿಂತು ಅನೇಕ ಮಂದಿ ಶೂರರನ್ನು ಕೊಂದು ತನ್ನ ರಥವನ್ನು ರಾವಣನಿದ್ದೆಡೆಗೆ ಓಡಿಸಲು ರಾವಣನು ಬಹಳ ಸಿಟ್ಟುಗೊಂಡು ಅವನೊಡನೆ ಕಾದಲು ಸಿದ್ಧನಾಗುತ್ತಿರುವಲ್ಲಿ, ಮಯನ

ಮಕ್ಕಳಾದ ಮಹೋದರವಜ್ರೋದರರು ಅಡ್ಡವಾಗಿ ಬಂದು, ಮಹೋದರನನ್ನು ಅಂಗದನೊಡನೆಯೂ ವಜ್ರೋದರನು ಹನುಮನೊಡನೆಯೂ ಕಾದಿ ಸತ್ತರು. ಹನುಮನು ಕುಂಭಕರ್ಣನ ಮಕ್ಕಳಾದ ಮಾಲಿ ಜಂಬುಮಾಲಿಯೆಂಬವರನ್ನು ಕೊಲ್ಲಲು ಕುಂಭಕರ್ಣನು ಹನುಮನಮೇಲೆ ಬಿದ್ದನು. ಇದನ್ನು ಕಂಡು ರಾಘವನ ಸಾಮಂತರು ಕೆಲವರು ಬಂದು ಹನುಮನನ್ನು ಹಿಂದಿಟ್ಟು ತಾವು ಕಾದಿದರು. ಆಗ ಕುಂಭಕರ್ಣನು ಬಹಳ ಸಿಟ್ಟಾಗಿ ಪ್ರಕ್ಷೋಭಣ ವಿದ್ಯಾ ಶರದಿಂದ ಕಪಿಧ್ವಜರ ಸೈನ್ಯವು ಮೈಮರೆತು ನೆಲಕ್ಕೆ ಬೀಳುವಂತೆ ಮಾಡಲು ಸುಗ್ರೀವನು ನಿದ್ರಾ ಪ್ರಬೋಧಿನಿಯೆಂಬ ದಿವ್ಯಬಾಣದಿಂದ ಹನುಮ ಮೊದಲಾದವರ ನಿದ್ರೆಯನ್ನು ಕಳೆದನು. ಆಗ ರಾವಣನು ಕೋಪಾವಿಷ್ಟನಾಗಿ ಸುಗ್ಗಿಬರಲು ಇಂದಗಿಯು ತಂದೆ ಯನ್ನು ತಡೆದು ಆತನಪ್ಪಣೆಯನ್ನು ಪಡೆದು ಯುದ್ಧಕ್ಕೆ ನಿಂತು ಸುಗ್ರೀವನನ್ನು ಮೂದಲಿಸಿ ಕಾದುತ್ತಿರುವಲ್ಲಿ ಮೇಘವಾಹನನು ಜನಕಾತ್ಮಜನಮೇಲೆ ಬಿದ್ದನು. ಇಂದಗಿಯು ಸುಗ್ರೀವನನ್ನು ವಿರಥನನ್ನಾಗಿಮಾಡಿ ಪನ್ನಗಾಸ್ತ್ರದಿಂದ ಬಿಗಿದನು; ಮೇಘವಾಹನನು ಪ್ರಭಾಮಂಡಲನನ್ನು ಮೂರ್ಛಿತನನ್ನಾಗಿ ಮಾಡಿದನು. ಮತ್ತೊಂದು ಕಡೆಯಲ್ಲಿ ಕುಂಭಕರ್ಣನಿಗೂ ಹನುಮಂತನಿಗೂ ಭಯಂಕರವಾದ ಯುದ್ಧವು ನಡೆದು ಕುಂಭಕರ್ಣನು ಹನುಮಂತನನ್ನು ಹಿಡಿದು ನಾಗಪಾಶವಿದ್ಯೆ ಯಿಂದ ಕಟ್ಟಿಹಾಕಿದನು. ಆಗ ಅಂಗದನು ಬಂದು ಘೋರಯುದ್ಧವನ್ನು ಮಾಡಿ ಕುಂಭಕರ್ಣನನ್ನು ಗೆದ್ದು ಹನುಮಂತನನ್ನೆತ್ತಿಕೊಂಡು ಬಂದು ರಾಘವನಿಗೊಪ್ಪಿಸಿ ದನು. ವಿಭೀಷಣನು ಇಂದಗಿ ಮೇಘವಾಹನರೊಡನೆ ಯುದ್ಧಕ್ಕೆ ನಿಲ್ಲಲು ಅವರು ತಮ್ಮ ಚಿಕ್ಕಪ್ಪನೊಡನೆ ಕಾದುವುದು ತಕ್ಕದ್ದಲ್ಲವೆಂದು ಹಿಂಜರಿದರು. ಆಗ ವಿಭೀಷಣನು ಪನ್ನಗಶರವೇಷ್ಟಿತರಾಗಿದ್ದ ಸುಗ್ರೀವ ಪ್ರಭಾಮಂಡಲರನ್ನು ಕಂಡು ಏನುಮಾಡಲೂ ತೋರದೆ ವ್ಯಥೆಪಡುತ್ತಿರುವಲ್ಲಿ ಸೂರ್ಯನಸ್ತಮಿಸಲು ರಾವಣನು ಯುದ್ಧವನ್ನು ಸಾಕುಮಾಡಿದನು. ಆಗ ಲಕ್ಷ್ಮಣನು ಪನ್ನಗಶರ ಮೂರ್ಛಾಗತರಾಗಿದ್ದ ಹನುಮಂತ ಸುಗ್ರೀವ ಪ್ರಭಾಮಂಡಲರನ್ನು ಪ್ರಜ್ಞೆಗೆ ತರುವ ಉಪಾಯವನ್ನು ಅಪ್ಪಣೆಕೊಡಿಸಬೇಕೆಂದು ರಾಮನನ್ನು ಕೇಳಲು, ಆತನು ಹಿಂದೆ ಪರವಿತ್ತ ದಿವಿಜನನ್ನು ನೆನೆದಲ್ಲಿ ಅವರ ಉಪದ್ರವವು ಕ್ಷಣ ಮಾತ್ರದಲ್ಲಿ ಪರಿಹಾರವಾಗುವುದೆಂದು ತಿಳಿಸಿದನು. ಲಕ್ಷ್ಮಣನು ರಾಮನಪ್ಪಣೆ ಯಂತೆ ಮಾಡಲು ಗರುಡಾಧಿಪನಾದ ಮಹಾಲೋಚನನೆಂಬ ದೇವನಿಗೆ ಆಸನ ಕಂಪವಾಗಿ ರಣಪ್ರಪಂಚದಲ್ಲಿರುವ ರಘುವೀರನು ತನ್ನನ್ನು ನೆನೆದನೆಂದು ಅವಧಿಜ್ಞಾನದಿಂದ ಆತನು ತಿಳಿದು, ಸಿಂಹವಾಹಿನಿ ಗರುಡವಾಹಿನಿಯೆಂಬೆರಡು ವಿದ್ಯೆಗಳನ್ನೂ ದಿವ್ಯಾಸ್ತ್ರಗಳನ್ನೂ ಕೊಟ್ಟುಬರುವಂತೆ ತನ್ನನುಚರನಾದ ಚಿಂತಾ ವೇಗನೆಂಬ ದೇವನಿಗೆ ಅಪ್ಪಣೆಮಾಡಲು ಆತನು ಬಂದು ಸಿಂಹವಾಹಿನಿಯನ್ನು ಶ್ರೀರಾಮನಿಗೂ ಗರುಡವಾಹಿನಿಯನ್ನು ಲಕ್ಷ್ಮೀಧರನಿಗೂ ಸದ್ಭಾವದಿಂದಿತ್ತನು.

ಬಲಾಚ್ಯುತರು ಆ ದೇವನನ್ನು ಮನ್ನಿಸಿ ಜೈನಪೂಜೆ ಮಾಡಿ ಧ್ಯಾನಿಸಿ ತಮ್ಮ ಮನೋರಥ ಸಿದ್ಧಿಯಾದುದಕ್ಕಾಗಿ ಪುಲಕಾಂಕಿತರಾದರು.

---

## ಆಶ್ವಾಸ ೧೪---ರಘುವೀರ ವಿಜಯ ವರ್ಣನೆ

ರಾಮಲಕ್ಷ್ಮಣರು ಚಿಂತಾವೇಗ ದೇವನನ್ನು ನಿರ್ಭರ ಭಕ್ತಿಯಿಂದ ಸ್ತುತಿಸಲು ಆತನು ಸಂತೋಷ ಚಿತ್ತನಾಗಿ ಅವರಿಗೆ ಅನೇಕ ದಿವ್ಯಬಾಣಗಳನ್ನೂ ಧವಳ ಛತ್ರ ಚಾಮರಗಳನ್ನೂ ಸಿಂಹ ಗರುಡ ಧ್ವಜಗಳನ್ನೂ ಅಭೇದ್ಯ ಕವಚಗಳನ್ನೂ ಅನರ್ಘ ರತ್ನಭೂಷಣಗಳನ್ನೂ ಕೊಟ್ಟು ತನ್ನ ಸ್ಥಾನಕ್ಕೆ ತೆರಳಿದನು. ಅನಂತರ ಗರುಡವಾಹಿನಿಯ ಪ್ರಭಾವದಿಂದ ನಾಗಪಾಶವಿದ್ಯೆಯು ಸಡಿಲಿಹೋಗಲು ಹನುಮ ಸುಗ್ರೀವ ಪ್ರಭಾಮಂಡಲರು ಮೂರ್ಛೆಯಿಂದೆಚ್ಚತ್ತು ಸಿಂಹ ಗರುಡ ವಾಹನಾರೂಢರಾಗಿದ್ದ ರಾಮಲಕ್ಷ್ಮಣರಲ್ಲಿಗೆ ಬಂದು ಅವರ ಪುಣ್ಯಪ್ರಭಾವಕ್ಕೆ ಸಂತೋಷಪಟ್ಟು ಆ ವೃತ್ತಾಂತವನ್ನವರಿಂದ ತಿಳಿದು ಎಲ್ಲರೂ ಬೀಡಿಗೆ ಹೋಗಿ ಆ ರಾತ್ರಿ ಸುಖದಿಂದಿದ್ದರು. ಬೆಳಗಾಗುತ್ತಲೆ ಎಂದಿನಂತೆ ರಾವಣನು ರಣಭೂಮಿಗೆ ಬಂದು ಒಡ್ಡಿ ನಿಲ್ಲಲು ರಾಮಲಕ್ಷ್ಮಣರು ನಿತ್ಯ ನಿಯಮಗಳನ್ನು ತೀರಿಸಿ ದೇವನಿತ್ತ ಕವಚಗಳನ್ನು ತೊಟ್ಟು ದಿವ್ಯಾಭರಣ ಭೂಷಿತರಾಗಿ ಸಿಂಹ ಗರುಡ ವಾಹನಗಳನ್ನೇರಿ ಸಿಂಹ ಗರುಡ ಧ್ವಜಗಳನ್ನೆತ್ತಿಸಿ ಧವಳ ಛತ್ರ ಚಾಮರಗಳನ್ನು ಹಿಡಿಯಿಸಿ ಸುಗ್ರೀವ ಪ್ರಭಾಮಂಡಲ ಮರುತ್ಸುತ ವಿಭೀಷಣ ಮೊದಲಾದ ವಿದ್ಯಾಧರರು ಸುತ್ತಿಬರಲು ರಣಭೂಮಿಗೆ ಬಂದು ಒಡ್ಡಿನಿಂತರು.

ಆಗ ಎರಡು ಸೇನೆಗಳೂ ಭಯಂಕರವಾಗುವಂತೆ ಕಾದಿದುವು. ರಾವಣನು ಬಹಳ ರೋಷದಿಂದ ವಾನರ ಸೇನೆಯನ್ನು ಎದುರಿಸಲು ಅದು ಬೆಚ್ಚಿ ಓಡಿಹೋಯಿತು. ಇದನ್ನು ನೋಡಿ ವಿಭೀಷಣನು ರಾವಣನಮೇಲೆ ಯುದ್ಧಕ್ಕೆ ನಿಲ್ಲಲು, ಆತನು ತಮ್ಮನನ್ನು ನೀಚನೆಂದು ಬೈದು ದೊರೆಗೆಟ್ಟ ಮನುಷ್ಯನಿಗೆ ಆಳಾದುದಕ್ಕಾಗಿ ನಾನಾವಿಧವಾಗಿ ಮೂದಲಿಸಿ ಒಡಹುಟ್ಟಿದವನ ಮೇಲೆ ಯುದ್ಧ ಮಾಡಿ ಗೋತ್ರವಧ ಮಹಾಪಾತಕವನ್ನು ಹೇಗೆ ಕಟ್ಟಿಕೊಳ್ಳಲಿ ಎಂದು ಹೇಳಿ ತನ್ನ ಮುಂದೆ ನಿಲ್ಲದೆ ತೊಲಗಿಹೋಗೆಂದನು. ದಶವದನನ ಈ ದುರುಕ್ತಿಗೆ ವಿಭೀಷಣನು ಕೋಪಾವಿಷ್ಟನಾಗಿ ತಾನು ಹೇಳಿದ ಹಿತವನ್ನು ಕೇಳದೆ, ಮೂರು ಲೋಕದಲ್ಲಿಯೂ ಪ್ರಖ್ಯಾತಿಹೊಂದಿದ ತೋಯದವಾಹನನ ವಂಶಕ್ಕೆ ಕುಂದು ಉಂಟಾಗುವಂತೆ ಪರಸ್ತ್ರೀಯನ್ನು ಬಯಸಿದ ದುರ್ಬುದ್ಧಿಯನ್ನುಳಿದು ಜಗನ್ಮಾತೆಯಾದ ಸೀತಾದೇವಿಯನ್ನು ರಾಮಸ್ವಾಮಿಗೊಪ್ಪಿಸಿ ಸಾಮ್ರಾಜ್ಯ ಪದವಿಯಲ್ಲಿ ಸುಖದಿಂದ ನಿಲ್ಲೆಂದು ಬುದ್ಧಿಯನ್ನು ಹೇಳಲು ರಾವಣನು ಬಹಳ ಸಿಟ್ಟಾಗಿ

ವಿಭೀಷಣನೊಡನೆ ಯುದ್ಧಕ್ಕೆ ನಿಂತನು. ಇಬ್ಬರೂ ಕಾದಾಡುತ್ತಿರುವಲ್ಲಿ ಇಂದ್ರ ಜಿತ್ಕುಮಾರನು ಪ್ರವೇಶಿಸಿ ವಿಭೀಷಣನೊಡನೆ ಕಾದಲುದ್ಯುಕ್ತನಾಗಲು ಲಕ್ಷ್ಮ ಣನು ಅವನನ್ನೆದುರಿಸಿದನು. ರಾಘವನು ಕುಂಭಕರ್ಣನ ಮೇಲೆಯೂ ಹನು ಮಂತ ಸುಗ್ರೀವ ಪ್ರಭಾಮಂಡಲ ಮೊದಲಾದ ನಾಯಕರು ತಮ್ಮ ಸಮಾನ ರಾದ ರಾಕ್ಷಸ ಬಲದ ನಾಯಕರ ಮೇಲೆಯೂ ಮಹಾ ಯುದ್ಧವನ್ನು ಹೂಡಿದರು. ಲಕ್ಷ್ಮಣನು ಇಂದಗಿಯನ್ನು ವಿರಥನನ್ನಾಗಿ ಮಾಡಿ ನಾಗಪಾಶದಲ್ಲಿ ಕಟ್ಟಿ ವಿರಾ ಧಿತನ ಕೈಯಲ್ಲಿ ತನ್ನ ಬೀಡಿಗೆ ಕಳುಹಿಸಿದನು. ರಾಮನು ಕುಂಭಕರ್ಣನನ್ನು ಗೆದ್ದು ಪ್ರಭಾಮಂಡಲನಿಗೊಪ್ಪಿಸಲು ಆತನು ಮೇಘವಾಹನನನ್ನು ನಾಗಪಾಶದಲ್ಲಿ ಕಟ್ಟಿ ಅವನನ್ನೂ ಕುಂಭಕರ್ಣನನ್ನೂ ಬೀಡಿಗೆ ಕೊಂಡುಹೋದನು.

ಇತ್ತ, ರಾವಣನು ವಿಭೀಷಣನೊಡನೆ ಮಹಾಯುದ್ಧವನ್ನು ಮಾಡಿ ಅವನನ್ನು ಕೊಲ್ಲಬೇಕೆಂದಿರಲು ಲಕ್ಷ್ಮಣನು ಕಂಡು ವಿಭೀಷಣನನ್ನು ಮರೆಮಾಡಿ ತಾನು ರಾವಣನೊಡನೆ ಯುದ್ಧಕ್ಕೆ ನಿಂತನು. ಆಗ ರಾವಣನು ಲಕ್ಷ್ಮಣನನ್ನು ದಿವ್ಯಶಕ್ತಿಯಿಂದಿಡಲು ಆ ಶಕ್ತಿಯು ಲಕ್ಷ್ಮಣನನ್ನು ನಿಶ್ಶಕ್ತನನ್ನಾಗಿ ಮಾಡಿ ಮೂರ್ಛೆ ಗೊಳಿಸಿತು. ಇದನ್ನು ಕೇಳಿ ರಾಮನಿಗೆ ವ್ಯಸನವೂ ಕೋಪಾಟೋಪವೂ ಉಂಟಾ ಗಲು ಆತನು ರಾವಣನಮೇಲೆ ಬಿದ್ದು ಅವನನ್ನು ಏಳು ಸಾರಿ ವಿರಥನನ್ನಾಗಿ ಮಾಡಿ ಅವನ ಕವಚವನ್ನು ಕತ್ತರಿಸಿ ವ್ರಣಕಾಯನನ್ನಾಗಿ ಮಾಡಿದರೂ ಅವನು ಲಕ್ಷ್ಯೆ ಮಾಡದಿರಲು ರಾಮನು, ಕುಲಾದ್ರಿಯನ್ನೇ ಭೇದಿಸುವ ತನ್ನ ದಿವ್ಯ ಬಾಣಗಳು ರಾವಣನ ದೇಹವನ್ನು ಸ್ವಲ್ಪವೂ ಭೇದಿಸದೆ ಹೋದುದಕ್ಕೆ ಆಶ್ಚರ್ಯಪಟ್ಟು ದನು ಜನು ಅಲ್ಪಾಯುವಲ್ಲವೆಂದು ಬಗೆದನು. ಆ ಹೊತ್ತಿಗೆ ಸೂರ್ಯಾಸ್ತಮಯವಾಗಲು ಎರಡು ಸೇನೆಗಳೂ ತಂತಮ್ಮ ಬೀಡಿಗೆ ಹೋದುವು. ರಾವಣನಿಗೆ ಲಕ್ಷ್ಮಣನನ್ನು ಮೂರ್ಛೆಗೊಳಿಸಿದೆನೆಂಬ ಸಂತೋಷವೂ ತನ್ನ ಮಕ್ಕಳಾದ ಇಂದಗಿ ಮೇಘ ವಾಹನರೂ ತಮ್ಮನಾದ ಕುಂಭಕರ್ಣನೂ ಸೆರೆಸಿಕ್ಕಿದುದಕ್ಕೆ ವ್ಯಸನವೂ ಉಂಟಾ ಯಿತು. ಲಕ್ಷ್ಮಣನು ಮೂರ್ಛೆಬಿದ್ದಿರುವುದಕ್ಕಾಗಿ ರಾಮನು ವ್ಯಸನಾಕ್ರಾಂತನಾ ಗಿರಲು ಜಾಂಬವ ಸುಷೇಣ ಮೊದಲಾದ ಮಂತ್ರಿಗಳು ರಾಮನಿಗೆ ಧೈರ್ಯಹೇಳಿ ಎಂಟನೆಯ ಕೇಶವನಾದ ಲಕ್ಷ್ಮಣನಿಗೆ ಯಾವ ಅಪಾಯವೂ ಉಂಟಾಗದೆಂದೂ ಆತನಿಂದಲೇ ರಾವಣನಿಗೆ ಅಪಾಯವಾಗುವುದೆಂದೂ ಹೇಳಿದರು. ಸುಗ್ರೀವನು ಲಕ್ಷ್ಮಣನ ಸುತ್ತಲೂ ವಿದ್ಯಾಮಯವಾದ ಏಳು ಪ್ರಾಕಾರಗಳನ್ನು ನಿರ್ಮಿಸಿ ಒಂದೊಂದು ಬಾಗಿಲಲ್ಲಿ ಒಬ್ಬೊಬ್ಬ ನಾಯಕನನ್ನು ಸೇನಾಸಮೇತನಾಗಿ ಕಾವಲು ನಿಲ್ಲಿಸಿ ತಾನೂ ಒಂದು ಬಾಗಿಲಲ್ಲಿ ಕಾಯುತ್ತಿದ್ದನು.

ಇತ್ತ, ರಾವಣನು ಆ ರಾತ್ರಿ ಲಕ್ಷ್ಮಣನು ಸಾಯದೆ ಬದುಕನೆಂದೂ ಸತ್ತಲ್ಲಿ, ಸೆರೆಯಾಗಿರುವ ತನ್ನ ಮಕ್ಕಳನ್ನೂ ತಮ್ಮನನ್ನೂ ಹಗೆಗಳು ಉಳಿಸರೆಂದೂ

ವ್ಯಥೆಪಡುತ್ತಿದ್ದನು. ಲಕ್ಷ್ಮೀಧರನು ಮೂರ್ಛೆಹೋದುದನ್ನು ಸೀತಾದೇವಿಯು ಕೇಳಿ ಹಲವು ತೆರನಾಗಿ ಪ್ರಲಾಪಿಸುತ್ತಿರಲು ಖಚರಕಾಂತೆಯಾದ ವಿನೀತೆ ಎಂಬವಳು ಆಕೆಯನ್ನು ಸಮಾಧಾನಪಡಿಸಿ ಲಕ್ಷ್ಮಣನು ವಾಸುದೇವನಾದುದರಿಂದ ಸಾಯುವನಲ್ಲವೆಂದು ಹೇಳಿದಳು. ಆ ಸಮಯಕ್ಕೆ ಜನಕನು ಕಳುಹಿಸಿದ ಗಗನಚರನೊಬ್ಬನು ಕಾಳೆಗದ ಸುದ್ದಿಯನ್ನು ತಿಳಿಯುವುದಕ್ಕಾಗಿ ಬಂದು ಲಕ್ಷ್ಮಣನ ಮೂರ್ಛಾವೃತ್ತಾಂತವನ್ನರಿತು ಆ ಮೂರ್ಛೆಯನ್ನು ಪರಿಹರಿಸುವ ಉಪಾಯ ವನ್ನು ತಾನು ಬಲ್ಲೆನೆಂದು ಹೇಳಲು ಪ್ರಭಾಮಂಡಲನು ಅತ್ಯಂತ ಸಂತೋಷ ದಿಂದ ಅವನನ್ನು ರಾಮಸ್ವಾಮಿಯ ಬಳಿಗೆ ಕರೆದುಕೊಂಡು ಹೋದನು. ಆ ಗಗನ ಚರನು ರಾಮಸ್ವಾಮಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಲಕ್ಷ್ಮೀಧರನಿಗೆ ಸರ್ವ ಕ್ಷೇಮವಾಗುವುದೆಂದು ಹೇಳಿ ತನ್ನ ಬಿನ್ನಪವನ್ನು ಕೇಳಬೇಕೆಂದು ಈ ರೀತಿಯಾಗಿ ಹೇಳತೊಡಗಿದನು:—

"ನಾನು ದೇವನೀತಪುರದೊಡೆಯನಾದ ಶಶಿಮಂಡಲನ ಮಗನು, ಅತಿ ಚಂದ್ರನೆಂಬ ಖೇಚರನು. ಒಂದಾನೊಂದು ದಿನ ವಾಯುಪಥದಲ್ಲಿ ನಾನು ವಿಹರಿಸು ತ್ತಿರುವಾಗ ಸಹಸ್ರವಿಜಯನೆಂಬ ನನ್ನ ಹಗೆಯೊಬ್ಬನು ನನ್ನಮೇಲೆ ಬಿದ್ದು ಶಕ್ತಿ ಯಿಂದಿಡಲು ಸತ್ವವುಡುಗಿ ಆಕಾಶಮಾರ್ಗದಿಂದ ಬಿದ್ದು ಸಾಕೇತದ ಮಹೇಂದ್ರೋ ದ್ಯಾನವನವನ್ನು ಸೇರಿದೆನು. ಅಲ್ಲಿಗೆ ಆಗ ಭರತನು ನನ್ನ ಪುಣ್ಯವಶದಿಂದ ಬಂದು ನನ್ನನ್ನು ಕರುಣದಿಂದ ಕಂಡು ದಿವ್ಯ ಸುಗಂಧ ತೋಯವನ್ನು ತರಿಸಿ ನನ್ನ ಮೈಗೆ ಹಚ್ಚಲು ಶಕ್ತಿಯು ಶಕ್ತಿಗುಂದಿ ನಾನು ಮೂರ್ಛೆಯಿಂದೆಚ್ಚತ್ತೆನು. ಆ ಗಂಧ ಸಲಿಲಕ್ಕೆ ಅಷ್ಟು ಸಾಮರ್ಥ್ಯವಿರುವುದರ ಕಾರಣವೇನೆಂದು ನಾನು ಭರತ ನನ್ನು ಕೇಳಲು ಆತನು ತನ್ನ ಮಾವನಾದ ದ್ರೋಣಮೇಘನ ಹೆಂಡತಿಯು ಅನೇಕ ವ್ಯಾಧಿಗಳಿಂದ ಪೀಡಿತಳಾಗಿರುವಾಗ ಗರ್ಭವನ್ನು ಧರಿಸಿ ಒಂದು ಹೆಣ್ಣು ಮಗುವನ್ನು ಹೆರಲು ವ್ಯಾಧಿಯು ನಾಶವಾಯಿತೆಂದೂ ಆ ಕೂಸಿಗೆ ಆ ಕಾರಣ ದಿಂದ ವಿಶಲ್ಯಸೌಂದರಿಯೆಂಬ ಹೆಸರಾಯಿತೆಂದೂ ಆ ಮಗುವಿನ ಮಜ್ಜನ ಜಲದಿಂದ ತನ್ನ ದೇಶವೆಲ್ಲವೂ ವ್ಯಾಧಿರಹಿತವಾಯಿತೆಂದೂ ದ್ರೋಣಮೇಘನು ತನಗೆ ತಿಳಿಸಿದ ನೆಂದು ಹೇಳಿದನು. ಇಷ್ಟೇ ಅಲ್ಲದೆ ವಿಶಲ್ಯಸೌಂದರಿಗೂ ಲಕ್ಷ್ಮಣನಿಗೂ ಪೂರ್ವ ಜನ್ಮದ ಸಂಬಂಧವಿರುವುದೆಂದು ಸರ್ವಭೂತಹಿತ ಭಟ್ಟಾರಕರು ಭರತನಿಗೆ ತಿಳಿಸಿದು ದನ್ನೂ ಆತನು ನನಗೆ ತಿಳಿಸಿದನು."

ಹೀಗೆಂದು ಅತಿಚಂದ್ರವಿಯಚ್ಚರನು ಬಿನ್ನವಿಸಲು ರಾಮಚಂದ್ರನು ಮೆಚ್ಚಿ ಆತನಿಗೆ ಮೆಚ್ಚುಗೊಟ್ಟು ಹನುಮ ಅಂಗದ ಪ್ರಭಾಮಂಡಲ—ಇವರನ್ನು ಗಂಧೋ ದಕವನ್ನು ತರುವುದಕ್ಕಾಗಿ ಭರತನ ಬಳಿಗೆ ಅಟ್ಟಿದನು. ಅವರು ವಿಮಾನಗಳ

ನ್ನೇರಿ ಮನೋವೇಗದಿಂದ ಸಾಕೇತಪುರವನ್ನು ಹೊಕ್ಕು ಭರತನನ್ನು ಕಂಡು ರಣವಾರ್ತೆಯನ್ನು ಸಂಕ್ಷೇಪವಾಗಿ ತಿಳಿಸಿ ತಾವು ಬಂದ ಕಾರ್ಯವನ್ನು ಹೇಳಿ ಆ ರಾತ್ರಿಯೇ ವಿಶಲ್ಯಸೌಂದರಿಯು ಮಿಂದ ಗಂಧೋದಕವನ್ನು ತಂದು ಕೊಡಬೇಕೆಂದೂ ಇಲ್ಲದಿದ್ದರೆ ಹೊತ್ತು ಹುಟ್ಟಿದೊಡನೆಯೇ ಲಕ್ಷ್ಮಣನ ಪ್ರಾಣವು ಹೋಗುವುದೆಂದೂ ಹೇಳಲು ಭರತ ಶತ್ರುಘ್ನರು ರಾವಣನಮೇಲೆ ಯುದ್ಧಕ್ಕೆ ಹೊರಡಲು ಸನ್ನದ್ಧರಾದರು. ಅದಕ್ಕೆ ಪ್ರಭಾಮಂಡಲನು ರಾಮನಪ್ಪಣೆಯಿಲ್ಲದೆ ಅವರನ್ನು ಕರೆದುಕೊಂಡು ಹೋಗುವುದು ಅನುಚಿತವೆಂದು ತಿಳಿಸಿ ಗಂಧೋದಕವನ್ನು ತರಿಸಿ ಕೊಡೆಂದು ಕೇಳಲು ಭರತನು ವಿಶಲ್ಯಸೌಂದರಿಗೆ ಲಕ್ಷ್ಮೀಧರನೇ ವರನೆಂಬುದನ್ನು ಮುನಿಮುಖದಿಂದ ತಿಳಿದಿರುವೆನಾದುದರಿಂದ ಗಂಧೋದಕದೊಡನೆ ಆಕೆಯನ್ನೂ ಕರೆದುಕೊಂಡು ಹೋಗಿರೆಂದು ಹೇಳಿ ದ್ರೋಣಮೇಘನ ಬಳಿಗೆ ತನ್ನ ಪ್ರಧಾನರನ್ನಟ್ಟಿದನು. ದ್ರೋಣಮೇಘನು ಭರತನ ಮಾತಿಗನುಸಾರವಾಗಿ ವಿಶಲ್ಯಸೌಂದರಿಯನ್ನೂ ನೂರುಮಂದಿ ಕನ್ಯೆಯರನ್ನೂ ಕೊಟ್ಟು ಕಳುಹಿಸಲು ಅವರೆಲ್ಲರನ್ನೂ ಪ್ರಭಾಮಂಡಲನು ವಿಮಾನವನ್ನೇರಿಸಿಕೊಂಡು ಹೊರಟು ನಕ್ಷತ್ರಮಾರ್ಗವಾಗಿ ಕ್ಷಣಮಾತ್ರದಲ್ಲಿ ರಣಭೂಮಿಯನ್ನು ಸೇರಿದನು. ವಿಶಲ್ಯಸೌಂದರಿಯು ಲಕ್ಷ್ಮಣನನ್ನು ನೋಡುತ್ತ ನೋಡುತ್ತ ಶಕ್ತಿಯ ಶಕ್ತಿಯು ಕುಂದುತ್ತ ಬಂದು ಕಡೆಗೆ ಶಕ್ತಿಯು ಕಿಡಿಗಳನ್ನುಗುಳುತ್ತ ಜನಾರ್ದನನ ವಕ್ಷಸ್ಥಳವನ್ನು ಬಿಟ್ಟು ಮೇಲಕ್ಕೆ ಹೋಗುತ್ತಿರುವಾಗ ಪವನಜನು ಶಕ್ತಿಯನ್ನು ಹಿಡಿದನು. ಆಗ ಶಕ್ತಿಯು ದಿವ್ಯಸ್ತ್ರೀ ರೂಪವನ್ನು ಧರಿಸಿ ತಾನು ವಿಶಲ್ಯಸೌಂದರಿಯಿಂದಲ್ಲದೆ ಹೋಗತಕ್ಕವಳಲ್ಲೆಂದೂ ತನ್ನನ್ನು ಬಿಟ್ಟುಬಿಡಿರೆಂದೂ ಕೇಳಿಕೊಳ್ಳಲು ಹನುಮನು ಬಿಟ್ಟು ಬಿಟ್ಟನು. ಆಗ ವಿಶಲ್ಯಸೌಂದರಿಯ ಕರಸ್ಪರ್ಶನದಿಂದಲೂ ಸುರಭಿಸಲಿಲ ಸೇಚನದಿಂದಲೂ ಲಕ್ಷ್ಮಣನು ಮೂರ್ಛೆಯಿಂದೆಚ್ಚತ್ತು ಎದ್ದು ಕುಳಿತುಕೊಂಡು ವಿಶಲ್ಯಸೌಂದರಿಯನ್ನು ನೋಡಿ ಮನ್ಮಥ ಬಾಧೆಯನ್ನು ಪಡೆದನು. ಹನುಮದಾದಿಗಳು ಆಕೆಯನ್ನೂ ಆಕೆಯೊಡನೆ ಬಂದ ನೂರ್ವರು ಕನ್ಯೆಯರನ್ನೂ ಮದುವೆಯಾಗುವಂತೆ ಲಕ್ಷ್ಮಣನನ್ನೊಡಂಬಡಿಸಿ ಶುಭಮುಹೂರ್ತದಲ್ಲಿ ಪಾಣಿಗ್ರಹಣ ಮಾಡಿಸಿದರು.

ಅತ್ತ, ದಶಶಿರನು ಲಕ್ಷ್ಮಣನ ಪುಣ್ಯಪ್ರಭಾವವನ್ನು ಕೇಳಿ, ಸೀತೆಯನ್ನೊಪ್ಪಿಸಿ ಸಂಧಿಗೊಡಂಬಡುವಂತೆ ಸಲಹೆಯನ್ನು ಕೊಟ್ಟ ತನ್ನ ಮಂತ್ರಿಗಳ ಮೇಲೆ ಬಹಳ ಸಿಟ್ಟಾಗಿ ತನ್ನ ಯಶಶ್ಚಂದ್ರಿಕೆಗೆ ಕಳಂಕವಾಗದಂತೆ ಮಾಡುವೆನೆಂದು ನುಡಿದು, ರಾಮಲಕ್ಷ್ಮಣರು ಅಸಾಧಾರಣರಾದುದರಿಂದ ಬಹುರೂಪಿಣೀ ವಿದ್ಯೆಯನ್ನು ಸಾಧಿಸಿ ಹಗೆಯನ್ನು ಗೆಲ್ಲುವೆನೆಂದು ಬಗೆದು ಲಂಕಾಪಟ್ಟಣದಲ್ಲಿಯೂ ದೇಶದ ಎಲ್ಲಕಡೆಗಳಲ್ಲಿಯೂ ಹಿಂಸೆ ಬೇಡೆಂದು ಡಂಗುರ ಹೊಯಿಸಿ ಜಿನ ಪೂಜೆಯನ್ನು ಪ್ರತಿದಿನವೂ ಮಾಡುವಂತೆ ನಿಯಮಿಸಿ, ಪಟ್ಟಣಕ್ಕೆ ಯಾರು ಎಷ್ಟು

ತೊಂದರೆಯನ್ನು ಕೊಟ್ಟರೂ ತಮ್ಮ ಸೈನ್ಯವು ಪ್ರತಿಮಾಡದಂತೆ ಕಟ್ಟು ಮಾಡುವು ದೆಂದು ಮಂಡೋದರಿಗೆ ಹೇಳಿ ತನ್ನರಮನೆಯೊಳಗಣ ಜಿನಮಂದಿರಕ್ಕೆ ಬಂದು ಶಾಂತೀಶ್ವರನನ್ನು ದಿವ್ಯಾರ್ಚನೆಯಿಂದರ್ಚಿಸಿ ಪದ್ಮಾಸನಸ್ಥಿತನಾಗಿ ಸ್ಫಟಿಕಾಕ್ಷ ಮಾಲೆಯನ್ನು ಹಿಡಿದು ದಿವ್ಯ ಮಂತ್ರಗಳನ್ನು ಜಪಿಸುತ್ತಿದ್ದನು. ಆಗ ಉಭಯ ಬಲವೂ ಅಭಯ ಘೋಷಣೆಯನ್ನು ಮಾಡಿ ಯುದ್ಧವನ್ನು ನಿಲ್ಲಿಸಿತು.

ವಿಭೀಷಣನು ರಾವಣನ ವೃತ್ತಾಂತವನ್ನರಿತು ರಾಮನ ಬಳಿಗೆ ಬಂದು ರಾವಣನು ಬಹುರೂಪಿಣೀ ವಿದ್ಯೆಯನ್ನು ಸಾಧಿಸುತ್ತಿರುವನೆಂದೂ ಒಬ್ಬ ರಾವಣ ನನ್ನು ಗೆಲ್ಲುವುದೇ ಅಷ್ಟು ಕಷ್ಟವಾಗಿರುವಲ್ಲಿ ರಾವಣಕೋಟಿಯನ್ನು ಎದುರಿಸಲು ಸಾಧ್ಯವಾಗದೆಂದೂ ಆದಕಾರಣ ಅವನು ವಿದ್ಯೆಯನ್ನು ಸಾಧಿಸುವುದಕ್ಕೆ ಮೊದ ಲೇ ಅವನಿಗೆ ಕೇಡನ್ನುಂಟುಮಾಡಿ ಲಂಕಾಪುರವನ್ನು ಕೈಕೊಳ್ಳುವುದು ಯುಕ್ತ ವೆಂದೂ ಹೇಳಿದನು. ಅದಕ್ಕೆ ರಾಘವನು "ಅಯ್ಯಾ ವಿಭೀಷಣನೇ! ವನಿತೆಯ ಮೇಲೆಯೂ, ಆಯುಧವನ್ನು ಬಿಸುಟವನ ಮೇಲೆಯೂ, ಎದುರಾಗದವನ ಮೇಲೆ ಯೂ ಪರಾಕ್ರಮವನ್ನು ತೋರಿಸುವುದು ಭೂಪಾಲರಿಗೆ ತಕ್ಕುದಲ್ಲ; ದಶಾನನನು ನಿಯಮಸ್ಥನಾಗಿ ಜಿನೇಂದ್ರನ ಮರೆಹೊಕ್ಕು ವಿದ್ಯೆಯನ್ನು ಸಾಧಿಸುತ್ತಿರುವಾಗ ಆತನಿಗೆ ಬಾಧೆಯನ್ನುಂಟುಮಾಡುವುದು ನ್ಯಾಯವೇ? ಇಂತಹ ಅನ್ಯಾಯದ ಮಾತುಗಳನ್ನಾಡಬಹುದೇ?" ಎಂದು ಹೇಳಲು, ವಿಭೀಷಣಾಂಗದಾದಿಗಳು "ಮಹಾಸತ್ವನಾದ ರಾಘವನು ಅನಾಚಾರವನ್ನು ಮಾಡುವನೇ? ಆತನರಿಯ ದಂತೆ ರಾವಣನ ವಿದ್ಯಾಸಾಧನೆಗೆ ವಿಘ್ನವನ್ನುಂಟುಮಾಡಬೇಕು" ಎಂದು ನಂದೀ ಶ್ವರವನ್ನು ಕಳಿಪಿ ವಿಭೀಷಣನೊಡನೆ ಬಲಾಧಿಕರಾದ ಕಪಿಧ್ವಜ ಸೈನಿಕರು ಲಂಕೆ ಯನ್ನು ಪೊಕ್ಕು ಮಾಡಗಳನ್ನೊಡೆದು ವನಗಳನ್ನು ಕಿತ್ತು ಹಾಳುಮಾಡುತ್ತಿರು ವಲ್ಲಿ ಮಯನು ಕೋಪಗೊಂಡು ಕಾಳೆಗಕ್ಕೆ ನಿಲ್ಲಲು ಮಂಡೋದರಿಯು ತಂದೆ ಯನ್ನು ಸುಮ್ಮನಿರುವಂತೆ ಮಾಡಿದಳು. ವಾನರಸೇನೆಯು ಅರಮನೆಯನ್ನು ಹೊಕ್ಕು ರಾವಣನ ಕುಲವನಿತೆಯರನ್ನು ಎಳೆದು ತಂದು ಹೊಡೆದು ಹಾಹಾಕಾರ ವನ್ನು ಹುಟ್ಟಿಸಿದರೂ ಕಿವಿಗೊಡದೆ ರಾವಣನು ಏಕಾಗ್ರಚಿತ್ತದಿಂದ ಜಪಿಸುತ್ತಿ ದ್ದನು. ಆಗ ಅಂಗದನು ರಾವಣನ ಅರಮನೆಯ ಜಿನಭವನವನ್ನು ಹೊಕ್ಕು ದರ್ಶನ ಸ್ತುತಿಗೈದು ಬಿಟ್ಟದಂತೆ ನಿಶ್ಚಲನಾಗಿದ್ದ ರಾವಣನನ್ನು ನೋಡಿ ಹಲವು ತೆರನಾಗಿ ಅವನನ್ನು ಮೂದಲಿಸಿ ಹೊಡೆದು ಕೈಯಲ್ಲಿಯ ಸ್ಫಟಿಕದ ಅಕ್ಷಮಾಲೆ ಯನ್ನೀಡಾಡಿ ಆತನ ಹೆಂಡಂದಿರ ಆಭರಣಗಳನ್ನು ಕಳೆದು ಬೀಸಾಡಿ ಅಲ್ಲದುದನ್ನು ನುಡಿಯುತ್ತ ಯುವತಿಯರನ್ನು ತೊಂದರೆಮಾಡುತ್ತ ಮಂಡೋದರಿಯನ್ನು ಎಳೆದು ಕೊಂಡು ಹೋಗಿ ತನ್ನ ತಂದೆಗೆ ಚಾಮರಹಾಕಲು ನಿಯಮಿಸುವೆನೆಂದು ಹೇಳುತ್ತ ಅವರನ್ನು ಅಪಮಾನ ಪಡಿಸುತ್ತಿದ್ದನು.

ಆಗ ಮಂಡೋದರಿ ಮೊದಲಾದ ಅಂತಃಪುರ ಸ್ತ್ರೀಯರು, ಜಪವನ್ನು ನಿಲ್ಲಿಸಿ ತಮ್ಮನ್ನು ಸಲಹೆಂದು ಅಳುತ್ತ ಕೇಳಿಕೊಂಡರೂ ರಾವಣನು ಚಲಿಸದೆ ಚಿತ್ತ ನಿರೋಧದಿಂದ ವಿದ್ಯೆಯನ್ನು ಸಾಧಿಸಿದನು. ಆ ವಿದ್ಯಾದೇವತೆಯು ಪ್ರತ್ಯಕ್ಷವಾಗಿ ಅಪ್ಪಣೆಯೇನೆಂದು ರಾವಣನನ್ನು ಬೇಡಿ ರಾಮಲಕ್ಷ್ಮಣರನ್ನುಳಿದು ಮಿಕ್ಕವರು ಯಾರನ್ನೂ ಉಳಿಯಲೀಯೆನೆಂದು ಹೇಳಲು ರಾವಣನು ಅದರಿಂದ ತನಗೇನೂ ಫಲವಿಲ್ಲವೆಂದು ಹೇಳಿ ವಿದ್ಯಾದೇವತೆಗೆ ನಮಸ್ಕರಿಸಿ ಹೊರಡುವಷ್ಟರಲ್ಲಿ ಅಂಗದಾದಿಗಳು ತಮ್ಮ ಬಿಡಾರವನ್ನು ಸೇರಿದರು. ರಾವಣನು ಅಂಗದ ಮೊದಲಾದವರು ತನ್ನ ಅಂತಃಪುರ ಸ್ತ್ರೀಯರಿಗೆ ಮಾಡಿದ ಅಪಮಾನವನ್ನೂ ತೊಂದರೆಯನ್ನೂ ತಿಳಿದು ಅವರನ್ನು ಕ್ಷಣಮಾತ್ರದಲ್ಲಿ ಸೆರೆಗೊಂಡು ತಂದು ಪರಿಭವಿಸುವೆನೆಂದು ತನ್ನ ಸ್ತ್ರೀಯರನ್ನು ಸಮಾಧಾನಗೊಳಿಸಿ ಜಿನಭವನದಲ್ಲಿ ಮಹಾಪೂಜೆಯನ್ನು ಮಾಡಿಸಿದನು.

ತರುವಾಯ ರಾವಣನು ತಾನು ಸಾಧಿಸಿದ ವಿದ್ಯೆಗಾಗಿ ಬಹಳ ಸಂತೋಷಪಟ್ಟು ಸೀತೆಯ ಮೇಲಣ ಮೋಹದಿಂದ ಪ್ರಮದವನಕ್ಕೆ ಬಂದು ತನ್ನನ್ನು ಇನ್ನುಮೇಲೆ ಯಾರೂ ಜಯಿಸಲಾರರೆಂದೂ ಆದುದರಿಂದ ರಾಮನ ಹಂಬಲನ್ನು ಬಿಟ್ಟು ತನ್ನನ್ನು ಸೇರಿ ಸಾಮ್ರಾಜ್ಯ ಸುಖವನ್ನನುಭವಿಸೆಂದೂ ಸೀತೆಗೆ ಹೇಳಲು ಆಕೆಯು ಬಹಳ ವ್ಯಸನದಿಂದ ರಾಮನ ಪ್ರಾಣವಿರುವವರೆಗೂ ತನ್ನ ಬಳಿಗೆ ಬರಬೇಡೆಂದು ಹೇಳಿ ಮೂರ್ಛೆಹೊಂದಿದಳು. ಅದನ್ನು ನೋಡಿ ರಾವಣನಿಗೆ ಕರುಣೆ ಹುಟ್ಟಿ ಸೀತೆಯ ವಿಷಯದಲ್ಲಿ ವೈರಾಗ್ಯಪರನಾಗಿ ಆಕೆಯ ಗುಣಸ್ತವನ ಮಾಡಿ ತಾನು ಮಾಡಿದ ಪಾಪಕೃತ್ಯಗಳಿಗಾಗಿ ತನ್ನನ್ನು ತಾನೇ ದೂಷಿಸಿಕೊಂಡು ರಾಮಲಕ್ಷ್ಮಣರನ್ನು ಯುದ್ಧದಲ್ಲಿ ಸೋಲಿಸಿ ಸೆರೆಹಿಡಿದು ತಂದು ಅವರಿಗೆ ಸೀತೆಯನ್ನು ಕೊಡುವೆನೆಂದು ನಿಶ್ಚಯಿಸಿ ತನ್ನರಮನೆಗೆ ಬಂದನು. ಆಗ ಅಂಗದ ಪ್ರಭಾಮಂಡಲ ಸುಗ್ರೀವ ಹನುಮದಾದಿಗಳು ಮಾಡಿದ ದುರಾಚಾರವು ನೆನಪಿಗೆ ಬಂದು ರಾವಣನು ಅವರನ್ನು ಕೂಡಲೆ ಕೊಲ್ಲುವೆನೆಂದು ಶಪಥಮಾಡಿದನು. ಆ ಸಮಯದಲ್ಲಿ ಭೂಮಿಯು ಗುಡುಗುವುದು, ಕರುಮಾಡದ ಕಲಶಗಳು ಬೀಳುವುದು, ಹಗಲಿನಲ್ಲಿ ಉಲ್ಕಾಪಾತವಾಗುವುದು—ಇವೇ ಮೊದಲಾದ ಅನೇಕ ಉತ್ಪಾತಗಳು ಸಂಭವಿಸಲು ನೈಮಿತ್ತಿಕರು ನಾಳಿನ ಕದನದಲ್ಲಿ ರಾವಣನಿಗಪಾಯವಾಗುವುದೆಂದು ನಿಶ್ಚಯಿಸಿ ನುಡಿಯುತ್ತಿರುವಲ್ಲಿ ರಾವಣನು ಸಿಂಹಾಸನಾರೂಢನಾಗಿದ್ದು ಸೆರೆಯಲ್ಲಿದ್ದ ತನ್ನ ಮಕ್ಕಳನ್ನೂ ತಮ್ಮನನ್ನೂ ನೆನೆದು ಮುಳಿದು ಕಾಳಿಗಕ್ಕೆ ಹೊರಡಲು ಸನ್ನದ್ಧನಾದನು. ಆಗ ಮಂಡೋದರಿಯು ಬಂದು ಪತಿಯನ್ನು ನಮಸ್ಕರಿಸಿ ತಾನು ಸೀತೆಯನ್ನು ರಾಮನಿಗೆ ಕೊಟ್ಟು ಇಂದಗಿ ಮೇಘನಾದ ಕುಂಭಕರ್ಣರನ್ನು ತರುವೆನೆಂದೂ ಯುದ್ಧಕ್ಕೆ ನಿಂತರೆ ಅವರಿಗೆ ಸಾವು

ಒದಗುವುದೆಂದೂ ಬಂಧು ಸಂತಾನಕ್ಕೆ ಈ ರೀತಿಯಾಗಿ ಸಾವನ್ನು ತರುವುದು ಸರಿಯಲ್ಲವೆಂದೂ ಹೇಳಿಕೊಳ್ಳಲು ರಾವಣನು ರೋಷಾವೇಶದಿಂದ ಮಂಡೋದರಿಯನ್ನು ತೊಲಗಿಹೋಗೆಂದು ಗರ್ಜಿಸಿದರೂ ಆಕೆಯು ಹೊರಡದೆ ಮರಳಿ ಕೇಳಿಕೊಳ್ಳಲು ರಾವಣನು ಕಾಳೆಗದಲ್ಲಿ ತನ್ನೆದುರಿಗೆ ನಿಲ್ಲುವ ಗಂಡರು ಯಾರೂ ಇಲ್ಲವೆಂದೂ ಆ ವಿಷಯವಾಗಿ ತಾನು ಅಂಜಬೇಡವೆಂದೂ ನುಡಿದು ಸನ್ನಾಹಭೇರಿಯನ್ನು ಹೊಯಿಸಿ ರಣಭೂಮಿಗೆ ಬಂದು ಒಡ್ಡಿನಿಂತನು.

ರಣಭೂಮಿಯಲ್ಲಿ ಭೀಕರಾಕಾರವಾಗಿ ನಿಂತಿದ್ದ ರಾವಣನ ರಥವನ್ನು ಕಂಡು ಸೀತಾರಮಣನು ಎದುರಿಗೆ ಕಾಣುವುದು ಪರ್ವತವೋ ಜೀಮೂತವೋ ಎಂದು ಜಾಂಬವನನ್ನು ಕೌತುಕದಿಂದ ಕೇಳಲು ಅದು ರಾವಣನ ಬಹುರೂಪಿಣೀ ವಿದ್ಯಾವಿನಿರ್ಮಿತವಾದ ವರೂಥವೆಂದು ಆತನು ಹೇಳಿದನು. ಅದನ್ನು ಕೇಳಿ ರಾಮಲಕ್ಷ್ಮಣರು ಸಿಂಹ ಗರುಡ ವಾಹಿನೀ ರಥಗಳನ್ನೇರಿ ಚತುರಂಗ ಬಲದೊಡನೆ ಶುಭಶಕುನಗಳನ್ನಿದಿರ್ಗೊಂಡು ರಣಭೂಮಿಗೆ ಬಂದು ನಿಲ್ಲಲು ಯುದ್ಧವು ಪ್ರಾರಂಭವಾಯಿತು. ಮಯನು ಭಯಂಕರವಾಗಿ ಯುದ್ಧಮಾಡಿ ಹನುಮಂತನನ್ನೂ ಪ್ರಭಾಮಂಡಲನನ್ನೂ ಸುಗ್ರೀವನನ್ನೂ ಸೋಲಿಸಲು ದಾಶರಥಿಯು ಮುಳಿದು ಮಯನನ್ನು ಗೆದ್ದು ಸೆರೆಹಿಡಿದನು. ಇದನ್ನು ಕಂಡು ರಾವಣನು ರಾಮನಮೇಲೆ ಎತ್ತಿಬರಲು ಲಕ್ಷ್ಮಣನು ರಾಘವನ ರಥವನ್ನು ಹಿಂದಿಕ್ಕಿ ತಾನು ಯುದ್ಧಕ್ಕೆ ನಿಂತನು. ರಾವಣ ಲಕ್ಷ್ಮಣರಿಗೆ ಘೋರಯುದ್ಧವು ನಡೆದು ಲಕ್ಷ್ಮಣನನ್ನು ಹೇಗೆಯೂ ಗೆಲ್ಲಲಾರದೆ ರಾವಣನು ಬಹುರೂಪಿಣೀ ವಿದ್ಯೆಯಿಂದ ಅಪಾರವಾದ ದೇಹಗಳನ್ನು ಪಡೆಯಲು ಭೂಮಿಯೂ ಆಕಾಶವೂ ದಿಕ್ಕುಗಳೂ ರಾವಣಮಯವಾದುವು. ಇವರೆಲ್ಲರೂ ಲಕ್ಷ್ಮಣನನ್ನು ಮುತ್ತಿ ಭಯಂಕರವಾಗಿ ಕಾದುತ್ತಿರುವಲ್ಲಿ ಲಕ್ಷ್ಮಣನು ರಾವಣಕೋಟಿಯನ್ನು ನಿರ್ಮೂಲವಮಾಡಲು ರಾವಣನು ಬಹುರೂಪಿಣೀ ವಿದ್ಯೆಯನ್ನುಳಿದು ಚಂದ್ರಹಾಸದಿಂದಿರಿಯಲು ಲಕ್ಷ್ಮಣನು ಸೂರ್ಯಹಾಸದಿಂದ ಅದನ್ನು ಭಂಗಪಡಿಸಿದನು. ಆಗ ರಾವಣನು ಸುದರ್ಶನ ದಿವ್ಯಚಕ್ರದಿಂದ ಲಕ್ಷ್ಮಣನ್ನಿಡಲು ಅದು ಲಕ್ಷ್ಮಣನನ್ನು ಮೂರುಸಾರಿ ಬಲಗೊಂಡು ಆತನ ಬಲಭುಜದ ಬಳಿ ನಿಂತಿತು. ಆಗ ರಾಮಚಂದ್ರನು ಲಕ್ಷ್ಮಣನಿಗೆ ದೊರೆತ ಚಕ್ರದಿಂದ ರಾವಣನನ್ನು ಇಡೆಂದು ಹೇಳಲು ಲಕ್ಷ್ಮಣನು ರಾವಣನಿಗೆ ಮರಳಿ ಬುದ್ಧಿವಾದವನ್ನು ಹೇಳಿ ಸೀತೆಯನ್ನೊಪ್ಪಿಸಿ ಬದುಕೆನ್ನಲು ರಾವಣನು ನಂದುವ ಸೊಡರಿನಂತೆ ಕೋಪದಿಂದ ಪ್ರಜ್ವಲಿಸಿ ರಥದಿಂದಿಳಿದು ಚಂದ್ರಹಾಸಾಸಿಯನ್ನು ಜಡಿಯುತ್ತ ಬರಲು ಲಕ್ಷ್ಮಣನು ಕೋಪದಿಂದ ಅವನಮೇಲೆ ಚಕ್ರವನ್ನೆಸೆದನು. ಆ ಚಕ್ರವು ರಾವಣನ ಎದೆಯನ್ನು ಸೀಳಿ ಬೆನ್ನಿನಲ್ಲಿ ಹೊರಡಲು ದಾನವೇಂದ್ರನು ಪ್ರಾಣವನ್ನುಳಿದು ನೆಲಕ್ಕೆ ಬಿದ್ದನು. ಆಗ ಪುಷ್ಪವೃಷ್ಟಿ ಸುರಿಯಿತು, ಸುರದುಂದುಭಿ

ವೊಳಗಿತು, ಸುರಗಣವು ಉಪೇಂದ್ರನನ್ನು ಹರಸಿತು, ಜಯಧ್ವಜವೇರಿತು, ನಿಶಾಚರ ಬಲವೋಡಿತು, ವಾನರ ಸೈನ್ಯದಲ್ಲಿ ವಿಜಯಾನಕ ಧ್ವನಿಯುಣ್ಮಿತು.

ಆಗ ವಿಭೀಷಣನು ಭೂಮಿಯ ಮೇಲೆ ಬಿದ್ದಿದ್ದ ತನ್ನ ಅಣ್ಣನ ದೇಹ ವನ್ನು ನೋಡಿ ಸಹೋದರ ಪ್ರೇಮದಿಂದ ಮೂರ್ಛೆಹೋಗಿ, ಶೀತಲ ಕ್ರಿಯೆಯಿಂ ದೆಚ್ಚತ್ತು ಬಹಳವಾಗಿ ಅಳುತ್ತಿರಲು ಮಂಡೋದರಿ ಮೊದಲಾದ ನಾಲ್ವತ್ತೆಂಟು ಸಾವಿರ ಮಂದಿ ಅಂತಃಪುರ ಸ್ತ್ರೀಯರು ರಾವಣನ ಮರಣವಾರ್ತೆಯನ್ನು ಕೇಳಿ ರಣ ಭೂಮಿಗೆ ಬಂದು ಅವನ ದೇಹವನ್ನು ಕಂಡು ಹಲವು ತೆರನಾಗಿ ಹಂಬಲಿಸುತ್ತ ಅಳತೊಡಗಿದರು. ಅದನ್ನು ನೋಡಿ ರಾಮಸ್ವಾಮಿಯು ಅವರನ್ನು ಕರುಣಿಸಿ ರಾವಣನಿಗೆ ಮರಣವು ಆತನ ದುರ್ವ್ಯಸನದಿಂದಾದುದಲ್ಲದೆ ತಮ್ಮಿಂದಾದುದಲ್ಲ ವೆಂದು ಹೇಳಿ ಯಾರಿಗಾದರೂ ಸಂಸಾರ ಸ್ವರೂಪವು ಅದೇ ರೀತಿಯೆಂದರಿಪಿ ಅವ ರನ್ನೂ ವಿಭೀಷಣನನ್ನೂ ಸಮಾಧಾನಪಡಿಸಿದನು. ತರುವಾಯ ರಾವಣನ ದೇಹ ವನ್ನು ಕರ್ಪೂರಾಗರು ಗೋಶೀರ್ಷ ಚಂದನಾದಿಗಳಿಂದ ಯಥಾವಿಧಿಯಾಗಿ ಸಂಸ್ಕ ರಿಸಿ ಇಂದಗಿ ಮೇಘವಾಹನ ಕುಂಭಕರ್ಣ ಮಯ ಮಾರೀಚಾದಿಗಳನ್ನು ಬರಿಸಿ ಸೆರೆಯನ್ನು ಬಿಡಿಸಿ ಅವರ ಶೋಕವನ್ನುಪಶಮಿಯಿಸಿ ವಿಭೀಷಣನಲ್ಲಿ ಸದ್ಭಾವದಿಂದಿರಿ ರೆಂದು ಬೋಧಿಸಿದನು. ಅದನ್ನು ಕೇಳಿ ಕುಂಭಕರ್ಣಾದಿಗಳು ರಾಮಲಕ್ಷ್ಮಣರ ಯೋಗ್ಯತೆಗೂ ಧೈರ್ಯಕ್ಕೂ ಪರಾಕ್ರಮಕ್ಕೂ ಮೆಚ್ಚಿ ಹೊಗಳಿ ತಮಗೆ ಸಂಸಾರಸುಖವು ಸಾಕೆಂದು ಭೋಗ ನಿರ್ವೇಗಪರರಾಗಿ ನುಡಿದು ರಾಮಲಕ್ಷ್ಮಣರೊಡನೆ ಪದ್ಮ ಸರೋವರದಲ್ಲಿ ಜಲದಾನ ಕ್ರಿಯೆಯನ್ನು ತೀರಿಸಿದರು; ಅಷ್ಟರಲ್ಲಿ ಸಂಜೆಯಾಯಿತು. ಆ ಸಮಯಕ್ಕೆ ಐನೂರು ಮಂದಿ ಮುನಿಗಳೊಡನೆ ಅಪ್ರಮೇಯ ಭಟ್ಟಾರಕರು ಸೂರ್ಯಪಥದಿಂದ ಬಂದು ಲಂಕೆಯ ನಂದನವನದ ಮಧ್ಯದಲ್ಲಿಳಿದರು. ಅವರ ದರುಶನಕ್ಕಾಗಿ ರಾಮಲಕ್ಷ್ಮಣರು ಇಂದ್ರಜಿನ್ಮೇಘವಾಹನ ಕುಂಭಕರ್ಣಾದಿಗಳೊಡನೆ ಕೂಡಿ ಹೊರಟು ವನಕ್ಕೆ ಬಂದು ಅಪ್ರಮೇಯ ಭಟ್ಟಾರಕರನ್ನು ಭಕ್ತಿಯಿಂ ದರ್ಚಿಸಿದರು.

---

## ಆಶ್ವಾಸ ೧೫—ಸೀತಾ ಪರಿತ್ಯಾಗ

ರಾಮಚಂದ್ರನು ಅಪ್ರಮೇಯ ಭಟ್ಟಾರಕರನ್ನು ಭಕ್ತಿಯಿಂದ ವಂದಿಸಿ ಸಂಸಾರ ಕ್ಷಯ ಕಾರಣವಾದ ಧರ್ಮವನ್ನೂ ಆಪ್ತಗುಣಗಳನ್ನೂ ಜೀವಾದಿ ತತ್ವ ಭೇದಗಳನ್ನೂ ಅವರಿಂದ ತಿಳಿದು ಸಂತೋಷಚಿತ್ತನಾದನು. ಇಂದ್ರಜಿತು ಮೇಘ ವಾಹನ ಕುಂಭಕರ್ಣ ಮಯ ಮಾರೀಚಾದಿಗಳು ತಂತಮ್ಮ ಭವಾಂತರವನ್ನು ಕೇಳಿ ತಿಳಿದುಕೊಂಡು ಅಲ್ಲಿಯೇ ದೀಕ್ಷೆಗೊಂಡರು. ಮಂಡೋದರಿಯು ನಲವ

ತ್ತೆಂಟು ಸಾವಿರ ವಿದ್ಯಾಧರಿಯರೊಡನೆ ಶಶಿಕಾಂತಾರ್ಯಿಕಾ ಸಮಕ್ಷದಲ್ಲಿ ದೀಕ್ಷೆ ಗೊಂಡಳು. ರಾಮಲಕ್ಷ್ಮಣರು ಭಟ್ಟಾರಕರಿಗೆ ಪುನರ್ನಮಸ್ಕಾರಮಾಡಿ ಸುಗ್ರೀ ವಾಂಗದ ಪ್ರಭಾಮಂಡಲ ಮರುತ್ಸುತ ವಿರಾಧಿತ ಪ್ರಮುಖ ವಿದ್ಯಾಧರರೊಡನೆ ಕೂಡಿ ತ್ರಿಜಗದ್ಭೂಷಣ ಗಜಾರೂಢರಾಗಿ ಸಮಸ್ತ ಮರ್ಯಾದೆಗಳೊಡನೆ ಲಂಕಾ ಪುರವನ್ನು ಸೇರಿ ನಂದನವನದಲ್ಲಿದ್ದ ಸೀತಾದೇವಿಯನ್ನು ನೋಡುವ ಕುತೂ ಹಲದಿಂದ ಅಲ್ಲಿಗೆ ಬಂದರು. ರಾಮಸ್ವಾಮಿಯು ಬಾಡಿದ ಕಮಲ ಲತೆಯಂತಿದ್ದ ಸೀತಾದೇವಿಯನ್ನು ಕಂಡು ಪಟ್ಟದಾನೆಯಿಂದಿಳಿದು ಬರುತ್ತಿರುವಲ್ಲಿ ಆಕೆಯು ವಲ್ಲಭನನ್ನು ನೋಡುವ ಸಂಭ್ರಮದಿಂದುಂಟಾದ ಆಕಂಪನದಿಂದ ಪತಿಯನ್ನು ಎದುರುಗೊಂಡು ಕೈಗಳನ್ನು ಮುಗಿದು ಆತನ ಪಾದಗಳಿಗೆರಗಿದಳು. ಆ ಸಮಯ ದಲ್ಲಿ ಆಕೆಯ ಪತಿವ್ರತಾಗುಣ ಸಮೃದ್ಧಿಗೆ ದೇವತೆಗಳು ಆಕೆಯನ್ನು ಸ್ತುತಿಸಿ ಪೂಮಳೆಗರೆದು ದಿವ್ಯಭೂಷಣಗಳಿಂದರ್ಚಿಸಿದುದನ್ನು ಖಚರಾಧಿನಾಯಕರು ನೋಡಿ ಬೆರಗಾಗಿ ಜಾನಕಿಗೆ ಕೈಗಳನ್ನು ಮುಗಿದರು; ರಾಮಚಂದ್ರನಿಗೆ ಆನಂದ ಪುಲಕವುಂಟಾಯಿತು. ಅನಂತರ ಲಕ್ಷ್ಮೀಧರನು ನಮಸ್ಕರಿಸಲು, ಸೀತಾದೇವಿಯು ಆತನನ್ನು ಹರಸಿ ತನ್ನ ನಿಮಿತ್ತವಾಗಿ ಅಷ್ಟು ತೊಂದರೆ ಪಟ್ಟದ್ದಕ್ಕೆ ಶೋಕಿಸು ತ್ತಿರುವಲ್ಲಿ ರಾಮಲಕ್ಷ್ಮಣರು ಆಕೆಯನ್ನು ಸಂತಯಿಸಿದರು. ತರುವಾಯ ಸೀತೆಯು ಪ್ರಭಾಮಂಡಲನನ್ನು ಕಂಡು ನಮಸ್ಕರಿಸಲು ಆತನು ಅತಿ ಪ್ರೀತಿಯಿಂದ ಆಕೆಯನ್ನು ಹರಸಿ ಸುಗ್ರೀವ ನಲ ನೀಲಾಂಗದ ಮರುತ್ಸುತ ಜಾಂಬವಾದಿಗಳನ್ನು ಒಬ್ಬೊಬ್ಬ ರನ್ನಾಗಿ ಹೆಸರು ಹೇಳಿ ಆಕೆಗೆ ತೋರಿಸಿ ಆಕೆಯನ್ನು ಸಂತೋಷಪಡಿಸಿದನು.

ತದನಂತರ, ರಾಘವನು ಜಾನಕಿಯನ್ನು ಪಟ್ಟದಾನೆಯ ಮೇಲೆ ಕುಳ್ಳಿ ರಿಸಿಕೊಂಡು ಲಕ್ಷ್ಮಣನೊಡನೆ ಸಕಲ ಪರಿವಾರವೂ ಸುತ್ತಿ ಬರಲು ರಾವಣನ ಅರಮನೆಯನ್ನು ಹೊಕ್ಕು ಅಲ್ಲಿಯ ಶಾಂತಿಜಿನಭವನವನ್ನು ಬಲಗೊಂಡು ಜಿನ ಪತಿಯನ್ನು ಸ್ತುತಿಸಿ ದಿವ್ಯಾರ್ಚನೆಗಳಿಂದರ್ಚಿಸಿದನು. ಆಗ ಸಹಸ್ರಾಂತಃಪುರ ಪ್ರಧಾನೆಯಾದ ವಿದಗ್ಧೆಯೆಂಬ ವಿಭೀಷಣನ ಮಹಾದೇವಿಯು ಆತನಪ್ಪಣೆಯ ಮೇರೆಗೆ ಬಂದು ರಾಮಲಕ್ಷ್ಮಣರಿಗೂ ಸೀತಾದೇವಿಗೂ ನಮಸ್ಕರಿಸಿ ತಮ್ಮರಮನೆಗೆ ದಯೆಮಾಡಿ ಬರಬೇಕೆಂದು ಕೇಳಿಕೊಳ್ಳುತ್ತಿರುವಲ್ಲಿ ವಿಭೀಷಣನು ಬಂದು ರಾಮಚಂದ್ರನನ್ನು ಲಕ್ಷ್ಮಣ ಸೀತಾದೇವಿಯರೊಡನೆ ಮಹಾ ವೈಭವದಿಂದ ತನ್ನ ಅರಮನೆಗೆ ಬಿಜಯಮಾಡಿಸಿ ಸಿಂಹಾಸನದ ಮೇಲೆ ಕುಳ್ಳಿರಿಸಿ ಅರ್ಘ್ಯ ಪಾದ್ಯವನ್ನು ಕೊಟ್ಟು ಅತ್ಯುತ್ಸವದಿಂದ ಔತಣಮಾಡಿ ದಿವ್ಯ ಮಣಿಭೂಷಣ ದಿವ್ಯಾನುಲೇಪನ ದಿವ್ಯಾಂಬರಗಳಿಂದೋಲಗಿಸಿ ತನ್ನ ವಿನಯವನ್ನು ಪ್ರಕಟಿಸಿದನು. ಹೀಗೆ ನಿರಂ ತರೋತ್ಸವದಿಂದ ಕೆಲವು ದಿನಗಳು ಕಳೆದಮೇಲೆ ವಿಭೀಷಣ ಸುಗ್ರೀವಾದಿಗಳು ರಾಮಲಕ್ಷ್ಮಣರಿಗೆ ಶುಭಮುಹೂರ್ತದಲ್ಲಿ ರಾಜ್ಯಾಭಿಷೇಕ ಮಾಡಿದರು. ಆಗ

ರಾಮಲಕ್ಷ್ಮಣರು ತಮ್ಮ ಪ್ರಯಾಣಮಾರ್ಗದಲ್ಲಿ ಮದುವೆಯಾಗಿದ್ದ ಅನೇಕ ಮಂದಿ ಅರಸಿಯರನ್ನು ಕರೆಯಿಸಿ ಲಂಕೆಯಲ್ಲಿ ಕೆಲವು ಕಾಲ ಸುಖದಿಂದಿದ್ದರು.

ಇತ್ತ, ಅಪರಾಜಿತೆಯು ರಾಮನನ್ನು ನೆನೆದು ಅತಿ ಶೋಕದಿಂದಿರುವಲ್ಲಿ ನಾರದನು ಆಕಾಶಮಾರ್ಗದಿಂದಿಳಿದು ಅರಮನೆಗೆ ಬರಲು ಅಪರಾಜಿತೆಯು ಆತನನ್ನೆದುರುಗೊಂಡು ನಮಸ್ಕರಿಸಿ ಮರ್ಯಾದೆ ಮಾಡಿದಳು. ನಾರದನು ಅಪರಾಜಿತೆಯ ಶೋಕ ಕಾರಣವನ್ನು ತಿಳಿದು ರಾಮಲಕ್ಷ್ಮಣರ ಕ್ಷೇಮವಾರ್ತೆ ಯನ್ನು ಆ ದಿನವೇ ತರುವೆನೆಂದು ಹೇಳಿ ಆಕಾಶಕ್ಕೆ ನೆಗೆದು ಲಂಕೆಯನ್ನು ಹೊಕ್ಕು ಬಲ ನಾರಾಯಣರ ಸಭೆಯನ್ನು ಪ್ರವೇಶಿಸಲು ರಾಮಸ್ವಾಮಿಯು ಮುನಿಯ ನ್ನೆದುರುಗೊಂಡು ಮಣಿಪೀಠದಲ್ಲಿ ಕುಳ್ಳಿರಿಸಿ ಅರ್ಘ್ಯ ಪಾದ್ಯಗಳನ್ನು ಕೊಟ್ಟನು. ಕುಶಲಪ್ರಶ್ನೆಗಳಾದ ತರುವಾಯ ನಾರದನು. ಅಪರಾಜಿತಾದೇವಿ ಸುಮಿತ್ರಾದೇವಿ ಯರನ್ನು ಕಂಡಿದ್ದೆನೆಂದೂ ಅವರು ರಾಮಲಕ್ಷ್ಮಣರನ್ನು ಬೇಗನೆ ಕಾಣದಿದ್ದರೆ ಶರೀರತ್ಯಾಗ ಮಾಡುವರೆಂದೂ ತಿಳಿಸಿದನು. ಅದನ್ನು ಕೇಳಿ ರಾಮಲಕ್ಷ್ಮಣರು ವ್ಯಥೆಪಟ್ಟು ತಾವು ಕೃಪಾಶೂನ್ಯರೆಂದು ತಮ್ಮನ್ನು ತಾವೇ ನಿಂದಿಸಿಕೊಂಡು ವಿಭೀ ಷಣನನ್ನು ಕರೆಯಿಸಿ ತಮ್ಮ ಅವಧಿಯ ವರ್ಷಗಳು ತೀರಿದುವೆಂದೂ ತಾವು ಅಯೋಧ್ಯೆಗೆ ಹೋಗದಿದ್ದರೆ ತಮ್ಮ ತಾಯಂದಿರೂ ಬಾಂಧವರೂ ಖೇದಗೊಳ್ಳುವ ರೆಂದೂ ಹೇಳಿ ಲಂಕೆಯಲ್ಲಿಯ ಅಸಂಖ್ಯಾತವಾದ ಜಿನಭವನಗಳಲ್ಲೆಲ್ಲ ವಿಶೇಷೋ ತ್ಸವವನ್ನು ಮಾಡಿಸಿ ಸೀತೆಯೊಡನೆ ಪುಷ್ಪಕ ವಿಮಾನವನ್ನೇರಿ ಖಚರ ಪರಿವೃಢ ಪರಿವೃತರಾಗಿ ಪ್ರಯಾಣ ಹೊರಟು ಸಮುದ್ರವನ್ನು ದಾಟಿ ದಂಡಕಾರಣ್ಯಕ್ಕೆ ಬಂದು ಅಲ್ಲಿ ತಾವಿದ್ದ ಸ್ಥಳಗಳನ್ನು ಸೀತಾದೇವಿಗೆ ತೋರಿಸಿ ಅಯೋಧ್ಯೆಯ ಬಳಿಗೆ ಬರಲು ಭರತ ಶತ್ರುಘ್ನರು ಆನೆಗಳನ್ನೇರಿ ರಾಮನನ್ನೆದುರುಗೊಳ್ಳುವುದಕ್ಕಾಗಿ ಊರಹೊರಕ್ಕೆ ಬಂದರು. ಆಗ ರಾಮಸ್ವಾಮಿಯು ವಿಮಾನದಿಂದಿಳಿದು ತನಗೆ ಸಾಷ್ಟಾಂಗ ನಮಸ್ಕಾರವಮಾಡಿದ ಭರತ ಶತ್ರುಘ್ನರನ್ನು ತೆಗೆದಪ್ಪಿಕೊಂಡು ಹರಸಿದನು. ತರು ವಾಯ ಅವರು ಸೀತಾದೇವಿಗೂ ಲಕ್ಷ್ಮಣನಿಗೂ ಅನುಕ್ರಮವಾಗಿ ನಮಸ್ಕರಿಸಿ ಆಶೀರ್ವಾದವನ್ನು ಪಡೆದು ಕುಶಲವಾರ್ತೆಗಳಿಂದ ಸಂತೋಷಚಿತ್ತರಾದರು. ಬಳಿಕ ರಾಮಲಕ್ಷ್ಮಣರು ಎಲ್ಲರೊಡನೆಯೂ ಕೂಡಿ ತೋರಣ ಪತಾಕಾದಿಗಳಿಂದಲಂಕೃತ ವಾದ ಅಯೋಧ್ಯೆಯನ್ನು ಪ್ರವೇಶಿಸಿ ಅವರೂ ಸೀತಾದೇವಿಯೂ, ಅಪರಾಜಿತೆ ಸುಮಿತ್ರೆ ಕೈಕೆ ಸುಪ್ರಭೆಯರನ್ನು ಕಂಡು ಎರಗಿ ನಮಸ್ಕರಿಸಿ ಅವರ ಆಶೀ ರ್ವಾದವನ್ನು ಪಡೆದರು.

ಹೀಗೆ ಸುಖಾತಿಶಯದಿಂದ ಕೆಲವು ದಿನಗಳು ಕಳೆದಮೇಲೆ ಶುಭ ಮುಹೂರ್ತದಲ್ಲಿ ರಾಮಸ್ವಾಮಿಯು ರಾಕ್ಷಸ ದ್ವೀಪಸಹಿತವಾಗಿ ಲಂಕೆಯನ್ನು ವಿಭೀ ಷಣನಿಗೂ ದೇವಾಸೀಕಪುರವನ್ನು ರತ್ನಜಟಿಗೂ ಕಿಷ್ಕಿಂಧನಗರವನ್ನು ಸುಗ್ರೀವನಿಗೂ

ಶ್ರೀಪರ್ವತ ನಗರವನ್ನು ಹನುಮಂತನಿಗೂ ಪಾತಾಳಲಂಕೆಯನ್ನು ವಿರಾಧಿತನಿಗೂ ರಥನೂಪುರಚಕ್ರವಾಳಪುರವನ್ನು ಪ್ರಭಾಮಂಡಲನಿಗೂ ರಾಜ್ಯಾಭಿಷೇಕ ಮಾಡಿ ಕೊಟ್ಟು ತಮಗೆ ಉಪಕಾರಮಾಡಿದ ಅನೇಕರಿಗೆ ನಾಡು ಬೀಡುಗಳನ್ನು ಕೊಟ್ಟು ಲಕ್ಷ್ಮಣನನ್ನು ತ್ರಿಖಂಡಮಂಡಲಕ್ಕಧಿರಾಜನನ್ನಾಗಿ ಮಾಡಿ ಭರತನನ್ನು ಮುನ್ನಿನಂತೆ ಅಯೋಧ್ಯೆಯನ್ನಾಳುವುದೆಂದು ಅಪ್ಪಣೆಯಿತ್ತನು. ಅದಕ್ಕೆ ಭರತನು ಅದು ವರೆಗೂ ರಾಮನ ಆಜ್ಞೆಯಮೇರೆಗೆ ಭೂಮಿಯನ್ನು ಕಾದುಕೊಂಡಿದ್ದೆನೆಂದೂ ಇನ್ನುಮುಂದೆ ವಿಷಯಸುಖವನ್ನು ತಾನೊಲ್ಲೆನೆಂದೂ ಮೋಕ್ಷಲಕ್ಷ್ಮಿಯನ್ನು ಪಡೆಯು ವುದಕ್ಕೆ ಅಪ್ಪಣೆಕೊಡಬೇಕೆಂದೂ ಕೈಮುಗಿದು ಬೇಡಿಕೊಳ್ಳಲು, ರಾಮನು ಭೂಚರ ರಲ್ಲದೆ ಖೇಚರರೂ ತಮ್ಮ ಆಜ್ಞಾನುವರ್ತಿಗಳಾಗಿರುವುದರಿಂದ ಮತ್ತೆ ಕೆಲವು ಕಾಲ ರಾಜ್ಯಭಾರಮಾಡಿದರೆ ತರುವಾಯ ತಾವೆಲ್ಲರೂ ಕೂಡಿ ತಪಕ್ಕೆ ಹೋಗೋಣ ವೆಂದು ಎಷ್ಟು ವಿಧವಾಗಿ ಹೇಳಿದರೂ ಭರತನು ಕೇಳದೆಹೋದನು.

ಆಗ ಋಷಿನಿವೇದಕನು ಬಂದು ನಮಸ್ಕರಿಸಿ ಮಹೇಂದ್ರೋದ್ಯಾನವನಕ್ಕೆ ದೇಶಭೂಷಣ ಭಟ್ಟಾರಕರು ಬಿಜಯಮಾಡಿರುವರೆಂದು ತಿಳಿಸಲು ರಾಮನು ಸಿಂಹಾ ಸನದಿಂದೆದ್ದು ಆ ಕಡೆಗೆ ಕೈಮುಗಿದು ಕೂಡಲೆ ಸಕಲ ಬಂಧು ಪರಿವಾರದೊಡನೆ ಹೊರಟು ಉದ್ಯಾನವನವನ್ನು ಸೇರಿ ರಾಜಚಿಹ್ನೆಗಳನ್ನು ದೂರದಲ್ಲಿರಿಸಿ ಭಟ್ಟಾರಕ ರನ್ನು ಬಲಗೊಂಡು ಸಾಷ್ಟಾಂಗ ನಮಸ್ಕಾರಮಾಡಿ ನಿಯಮಿತಾಸನದಲ್ಲಿ ಕುಳಿತು ಕೊಂಡನು. ಆಗ ರಾಮನು ತನ್ನ ತ್ರಿಜಗದ್ಭೂಷಣ ಗಜವು ನಾಲ್ಕು ದಿನಗಳಿಂದಲೂ ಆಹಾರವನ್ನು ತೆಗೆದುಕೊಳ್ಳದೆ ಇರಲು ಕಾರಣವೇನೆಂದು ಕೇಳಲು ಭಟ್ಟಾರಕರು ಅದು ತನ್ನ ಪೂರ್ವಜನ್ಮವನ್ನು ತಿಳಿದು ಉಪಶಮವನ್ನು ತಾಳಿತೆಂದು ಹೇಳಿ ಹಿಂದಣ ಜನ್ಮಗಳ ವೃತ್ತಾಂತವನ್ನು ವಿಶದವಾಗಿ ತಿಳಿಸಿದರು. ಇದನ್ನು ಕೇಳಿ ಭರತನೂ ಕೈಕೆಯೂ ತಪಸ್ಥರಾದರು; ತ್ರಿಜಗದ್ಭೂಷಣ ಗಜವೂ ಅಲ್ಲಿಯೇ ಅಣುವ್ರತವನ್ನು ಕೈಕೊಂಡು ಹಲವು ನೋಂಪಿಗಳನ್ನು ನೋಂತು ಬ್ರಹ್ಮೋತ್ತರಕಲ್ಪಗತವಾಯ್ತು.

ರಾಮಲಕ್ಷ್ಮಣರು ಸಂಸಾರಸುಖವನ್ನನುಭವಿಸುತ್ತಿರಲು ಲಕ್ಷ್ಮಣನಿಗೆ ಎಂಟು ಮಂದಿ ಮಕ್ಕಳು ಹುಟ್ಟಿ ಅನುದಿನ ಪ್ರವರ್ಧಮಾನರಾಗಿ ಮನೋಹರಾಕಾರದಿಂದ ಬಳೆಯುತ್ತಿದ್ದರು. ಹೀಗಿರಲು, ಸೀತಾದೇವಿಯು ಒಂದು ದಿನ ಋತುಸ್ನಾನಮಾಡಿ ಶಯ್ಯಾಗೃಹವನ್ನು ಸೇರಿ ಸುಖನಿದ್ರೆಗೈದು ಬೆಳಗಿನ ಜಾವದಲ್ಲಿ ಶರಭ ದ್ವಿತಯವು ತನ್ನ ಮುಖವನ್ನು ಪೊಗುವಂತೆಯೂ ತಾನು ಪುಷ್ಪಕದಿಂದ ಭೂಮಿಗೆ ಬೀಳು ವಂತೆಯೂ ಎರಡು ಕನಸನ್ನು ಕಂಡು ಅದನ್ನು ರಾಮಸ್ವಾಮಿಗೆ ತಿಳಿಸಲು ಆತನು ಶರಭ ದರ್ಶನದಿಂದ ಸೀತೆಗೆ ಅಮಿತ ಪರಾಕ್ರಮಿಗಳಾದ ಇಬ್ಬರು ಮಕ್ಕಳು ಹುಟ್ಟುವ ರೆಂದೂ ಎರಡನೆಯ ಕನಸು ಖೇದವನ್ನು ಹುಟ್ಟಿಸುವುದೆಂದೂ ತಿಳಿಸಿದನು.

ಕಾಲಕ್ರಮವಾಗಿ ಸೀತೆಗೆ ಗರ್ಭಚಿಹ್ನೆಗಳು ತೋರಿಬಂದು ಜಿನಪೂಜೋತ್ಸವ ವನ್ನು ಮಾಡುವ ಬಯಕೆಯು ಹುಟ್ಟಿ ಪ್ರತಿದಿನವೂ ಪೂಜೆಗೈಯುತ್ತಿರುವಲ್ಲಿ ಒಂದು ದಿನ ಆ ಸತಿಗೆ ಬಲಗಣ್ಣದುರಿತು. ಈ ದುಶ್ಶಕುನಕ್ಕೆ ಆಕೆ ಭಯಪಟ್ಟು ಗೃಹಮ ಹತ್ತರನನ್ನು ಕರೆಯಿಸಿ ಯಾರು ಏನು ಬೇಡಿದರೂ ಅವರಿಗೆ ಅದನ್ನು ಕೊಡುವು ದೆಂದು ಅಪ್ಪಣೆಕೊಟ್ಟು ತಾನು ಪ್ರತಿದಿನವೂ ಜಿನಪೂಜೆಯನ್ನು ಮಾಡುತ್ತಿದ್ದಳು.

ಹೀಗಿರುವಲ್ಲಿ, ಒಂದು ದಿನ ಹಳ್ಳಿಯ ಜನರು ಬಂದು ಭಯದಿಂದ, ಮಾತ ನಾಡದೆ ಸುಮ್ಮನಿರಲು ರಾಮಸ್ವಾಮಿಯು ಅಂಜಬೇಡಿರೆಂದು ಅವರಿಗೆ ಹೇಳಿ, ಬಂದ ಕಾರ್ಯವೇನೆಂದು ಕೇಳಿದನು. ಅದಕ್ಕೆ ಪ್ರಜೆಗಳನುಮತಿಯಿಂದ ವಿಜಯ ನೆಂಬ ಮಹತ್ತರನು "ಮಹಾಸ್ವಾಮಿ! ದುರಾತ್ಮನಾದ ರಾವಣನು ಬಲು ಚೆಲುವೆಯಾದ ಸೀತಾದೇವಿಯನ್ನು ಮೋಹಿಸಿ ಹಿಡಿದುಕೊಂಡು ಹೋಗಲು ಆಕೆಯು ಇದುವರೆಗೂ ಖಳನ ಮನೆಯಲ್ಲಿದ್ದಳು; ತಾವು ವಿಚಾರಮಾಡದೆ ಆಕೆಯನ್ನೊಡ ಗೂಡಿ ಮುನ್ನಿನಂತಿರುವುದು ಧರ್ಮವೇ? ಭೂಮಿಗಧಿಪರಾದ ತಾವು ಈ ರೀತಿ ಯಾಗಿ ಮಾಡಿದರೆ ಧರ್ಮವನ್ನು ಪರಿಪಾಲಿಸುವರಾರು?" ಎಂದು ಹೇಳಲು ರಾಮನು ಜನವಾರ್ತೆಯಂತೆ ತಾನು ಆಲೋಚನೆಮಾಡದೆ ಅನ್ಯಾಯವನ್ನು ಮಾಡಿದೆನೆಂದು ಪಶ್ಚಾತ್ತಾಪಪಟ್ಟು ಸೀತೆಯನ್ನು ಪರಿತ್ಯಾಗಮಾಡಲು ನಿಶ್ಚಯಿಸಿ ದನು. ಆಗ ಲಕ್ಷ್ಮಣನನ್ನು ಬರಿಸಿ ಕಟ್ಟೇಕಾಂತದಲ್ಲಿ ಈ ವೃತ್ತಾಂತವನ್ನು ಆತನಿಗೆ ತಿಳಿಸಲು ಆತನು ಕಡು ಮುಳಿದು ತಾವು ಅವಿವೇಕಿಗಳಂತೆ ಈರೀತಿ ಯಾಗಿ ನುಡಿವುದು ಅನುಚಿತವೆಂದೂ ಪತಿವ್ರತಾ ಶಿರೋಮಣಿಯಾದ ಸೀತಾದೇವಿ ಯಲ್ಲಿ ಅವಗುಣವನ್ನು ತಮ್ಮಂತಹ ಯೋಗ್ಯರು ಕಲ್ಪಿಸಬಾರದೆಂದೂ ಹೇಳಲು ರಾಮಸ್ವಾಮಿಯು, ಪುರುದೇವ ಮೊದಲಾದ ಇಕ್ಷ್ವಾಕುವಂಶದ ರಾಜರಲ್ಲಿ ಇದುವರೆಗೂ ದುಶ್ಚರಿತ್ರವಿಲ್ಲವೆಂದೂ ಅದು ಈಗ ಸಂಭವಿಸಿದರೆ ತನ್ನ ಪೌರುಷಕ್ಕೆ ಕುಂದು ಬರುವುದೆಂದೂ ಉತ್ತರವಿತ್ತು ತನಗಡ್ಡಿಯಾಗಿ ಬರಬೇಡವೆಂದು ಲಕ್ಷ್ಮಣನಿಗೆ ಹೇಳಿದನು. ಇದಕ್ಕೆ ಲಕ್ಷ್ಮಣನು ಸೀತಾದೇವಿಯು ದುಶ್ಚರಿತ್ರಳಾದಲ್ಲಿ ಭೂತಲವೆಲ್ಲವೂ ಕೂಡಲೆ ನಾಶವಾಗುವುದೆಂದೂ ಆಕೆಯನ್ನು ದೇವತೆಗಳು ಅರ್ಚಿಸಿ ಹೂಮಳೆಗರೆದುದೇ ಆಕೆಯ ಸುಶೀಲತೆಯನ್ನು ಪ್ರಕಟಗೊಳಿಸುವುದೆಂದೂ ಅಂತಹ ಪತಿವ್ರತಾ ಶಿರೋಮಣಿಯ ವಿಷಯವಾಗಿ ಕೆಟ್ಟಮಾತನ್ನು ಹರಡಿದ ಒಕ್ಕಲಿಗರ ನಾಲಗೆಯನ್ನು ಕಿತ್ತಿಕ್ಕುವೆನೆಂದೂ ರೋಷಾವಿಷ್ಟನಾಗಿ ನುಡಿಯಲು ರಾಮ ಸ್ವಾಮಿಯು ಆತನ ಕೈಯನ್ನು ಹಿಡಿದು ತನ್ನಮೇಲೆ ಆಣೆಯನ್ನಿಟ್ಟುಕೊಂಡು ಲಕ್ಷ್ಮಣನನ್ನು ಮರುಮಾತಾಡದಂತೆ ಮಾಡಿದನು.

ಆಗ ರಾಮಸ್ವಾಮಿಯು ಕೃತಾಂತವಕ್ತ್ರನನ್ನು ಕರೆದು ಅಯೋಧ್ಯಾ ನಗರದ ಸಮ್ಮೇದ ಪರ್ವತದ ಸಮೀಪದಲ್ಲಿರುವ ಜಿನಾಲಯಗಳನ್ನು ವಂದಿಸಬೇಕೆಂಬ

ಆಕೆಯ ಬಯಕೆಯನ್ನು ತೀರಿಸಿಬರುವ ನೆಪದಿಂದ ಸೀತಾದೇವಿಯನ್ನು ಕರೆದು ಕೊಂಡು ಹೋಗಿ ಭೀಮಾಟವಿಯಲ್ಲಿ ನಿರ್ಜಂತುಕ ಪ್ರದೇಶದಲ್ಲಿ ಬಿಟ್ಟುಬರು ವಂತೆ ಆಜ್ಞೆಮಾಡಿದನು. ಕೃತಾಂತವಕ್ತ್ರನು ಸೇವಾವೃತ್ತಿಯು ಬಹು ಕಷ್ಟ ವೆಂದೆಂದುಕೊಂಡು ಅಂತಹ ಕ್ರೂರಕೃತ್ಯವನ್ನು ಮಾಡಲು ಇಷ್ಟವಿಲ್ಲದಿದ್ದರೂ ಯತ್ನವಿಲ್ಲದೆ ಸೀತೆಯ ಬಳಿಗೆ ಬಂದು ರಾಮಚಂದ್ರನು ಹೇಳಿಕೊಟ್ಟಂತೆ ಹುಸಿ ನುಡಿದು ಸೀತಾದೇವಿಯನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಭಯಂಕರವಾದ ಅಡವಿಯನ್ನು ಹೊಕ್ಕು ಒಂದು ಬೆಟ್ಟದ ತಪ್ಪಲಲ್ಲಿ ಆಕೆಯನ್ನಿಳಿಸಿ ಗದ್ಗದ ಕಂಠನಾಗಿ ಕಣ್ಣೀರನ್ನು ಸುರಿಸುತ್ತ ಸೀತಾದೇವಿಗೆ ವೃತ್ತಾಂತವೆಲ್ಲವನ್ನೂ ತಿಳಿ ಸಲು ಆಕೆಯು ಮೂರ್ಛೆಹೋಗಿ ಮರಳಿ ಎಚ್ಚತ್ತು ಕೃತಾಂತವಕ್ತ್ರನೊಡನೆ "ಅಯ್ಯಾ! ರಾಮದೇವರು ನನ್ನ ಮೇಲೆ ದಯೆಯಿಡುವವರಾದರೆ ಭೂತಲವ ನ್ನೆಲ್ಲ ನ್ಯಾಯದಿಂದ ಪರಿಪಾಲಿಸುವಂತೆಯೂ ದೇವ ಗುರು ಪೂಜೆಯನ್ನು ಮರೆಯ ದಿರುವಂತೆಯೂ ಜನಾಪವಾದದಿಂದ ನನ್ನನ್ನು ಬಿಸುಟಂತೆ ಮಿಥ್ಯಾದೃಷ್ಟಿ ಗಳ ಮಾತನ್ನು ಕೇಳಿ ಧರ್ಮಿಷ್ಠರನ್ನು ತೊರೆಯದಿರುವಂತೆಯೂ ನಾನು ಬೇಡಿ ಕೊಂಡೆನೆಂದು ತಿಳಿಸು" ಎಂದು ಕಣ್ಣೀರು ಸುರಿಸುತ್ತ ಹೇಳಿದಳು. ಅದನ್ನು ಕೇಳಿ ಕೃತಾಂತವಕ್ತ್ರನು, "ಗರ್ಭಿಣಿಯಾದ ಅರಸಿಯನ್ನು ಅರಣ್ಯದಲ್ಲಿ ಬಿಟ್ಟು ಬರುವಂತೆ ದೊರೆಯು ಆಜ್ಞೆಕೊಟ್ಟಲ್ಲಿ ಅಂತಹ ಆಜ್ಞೆಯನ್ನು ನಡೆಯಿಸುವ ನಾನು ಎಂತಹ ಅಯೋಗ್ಯನು? ಸೇವಾವೃತ್ತಿಗಿಂತಲೂ ಅಯೋಗ್ಯವಾದುದುಂಟೇ?" ಎಂದು ತನ್ನನ್ನು ತಾನೇ ನಿಂದಿಸಿಕೊಂಡು ಕಣ್ಣೀರು ಸುರಿಸುತ್ತ ಸೀತಾದೇವಿಗೆ ಅಡ್ಡಬಿದ್ದು ಅಪ್ಪಣೆಪಡೆದು ಅಯೋಧ್ಯೆಗೆ ಹೋದನು.

ಇತ್ತ, ಸೀತಾದೇವಿಯು ರಾಮಲಕ್ಷ್ಮಣರನ್ನು ನೆನೆ ನೆನೆದು ಶೋಕ ದಿಂದ ತಪಿಸುತ್ತ ಕಣ್ಣೀರು ಸುರಿಸುತ್ತ ದೆಸೆಗೆಟ್ಟು ಯಾವ ದಿಕ್ಕಿನಲ್ಲಿಯೂ ಯಾರನ್ನೂ ಕಾಣದೆ ಈ ಅವಸ್ಥೆಯು ತನ್ನ ಪೂರ್ವಜನ್ಮದ ಫಲವೆಂದು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ, ಜಿನಾಗಮ ಕೋವಿದಳಾದುದರಿಂದ ಕೊನೆಗೆ ಧೈರ್ಯವನ್ನು ತಾಳಿ ಮಹಾಮುನಿಗಳು ಮಹಾಟವಿಗಳಲ್ಲಿ ತಪಸ್ಸುಮಾಡಿ ಮೋಕ್ಷ ವನ್ನು ಸಾಧಿಸುವಂತೆ ತಾನೂ ಆ ಅಡವಿಯಲ್ಲಿ ನಿರಶನ ವ್ರತವನ್ನು ಕೈಕೊಂಡು ಸಂನ್ಯಸನದಿಂದ ಪರಲೋಕವನ್ನು ಸಾಧಿಸುವೆನೆಂದು ನಿಶ್ಚಯಿಸಿದಳು. ಆಗ ಜನಕಜೆಯ ಸುಕೃತವೇ ಮನುಷ್ಯರೂಪಿನಿಂದ ಬಂದಂತೆ ವಜ್ರಜಂಘನೆಂಬ ಅರಸುಮಗನೊಬ್ಬನು ಬಲಸಹಿತವಾಗಿ ಆನೆಯ ಬೇಟೆಗೆ ಬಂದು ದೂರದಲ್ಲಿ ವನಲಕ್ಷ್ಮಿಯಂತೆ ಮೆರೆಯುತ್ತಿದ್ದ ಸೀತಾದೇವಿಯನ್ನು ಕಂಡು ಆಶ್ಚರ್ಯಪಟ್ಟು ಹತ್ತಿರಕ್ಕೆ ಬಂದು "ತಾಯೇ! ತಾವು ಯಾರು? ಈ ಅಡವಿಗೆ ಏನು ಕಾರಣ ದಿಂದ ಬಂದಿರಿ?" ಎಂದು ಕೇಳಲು, ತಾನು ಜನಕನ ಮಗಳೆಂದೂ ಪ್ರಭಾ

ಮಂಡಲನ ತಂಗಿಯೆಂದೂ ರಾಮಚಂದ್ರನ ಭಾರ್ಯೆಯಾದ ಸೀತಾದೇವಿಯೆಂದೂ, ಲೋಕಾಪವಾದಕ್ಕಾಗಿ ರಾಮಸ್ವಾಮಿಯು ನಿರಾಪರಾಧಿನಿಯಾದ ತನ್ನನ್ನು ಈ ರೀತಿ ಯಾಗಿ ಅಡವಿಗೆ ಕಳುಹಿಸಿದನೆಂದೂ ಹೇಳಿ ಕಣ್ಣೀರನ್ನು ಸುರಿಸಲು ವಜ್ರ ಜಂಘನು ಆಕೆಯ ಶೋಕವನ್ನು ತನ್ನ ವಿನಯೋಕ್ತಿಗಳಿಂದ ಆರಿಸಿ, ತಾನು ಪುಂಡರೀಕಿಣೀಪುರವನ್ನಾಳುವ ವಜ್ರಜಂಘನೆಂದೂ ಜಿನಧರ್ಮದ ದೆಸೆಯಿಂದ ಆಕೆಯು ತನಗೆ ತಂಗಿಯೆಂದೂ ತನ್ನೊಡನೆ ಬಿಜಯಮಾಡಿರೆಂದೂ ಹೇಳಿ ಅಂದಳದಲ್ಲಿ ಕುಳ್ಳಿರಿಸಿಕೊಂಡು ಪುಂಡರೀಕಿಣೀಪುರವನ್ನು ಸೇರಿ ತನ್ನ ದೊಡ್ಡ ಮಗಳಾದ ಶೀಲವತಿಯ ಮಾಡಕ್ಕೆ ಕರೆದುಕೊಂಡು ಹೋಗಿ ಆಕೆಗೆ ಒಪ್ಪಿಸಿ ತಾನು ಪ್ರಭಾಮಂಡಲನಿಗಿಂತಲೂ ಅಧಿಕವಾದ ಗೌರವದಿಂದ ಸೀತಾದೇವಿ ಯನ್ನು ನೋಡಿಕೊಂಡಿರುವೆನೆಂದು ಹೇಳಿ ತನ್ನ ಅರಮನೆಗೆ ಹೋದನು. ಸೀತಾ ದೇವಿಯು ಶೀಲವತಿಯೊಡನೆ ಪ್ರತಿದಿನವೂ ಜಿನಮುನಿಗಾಹಾರವನ್ನಿತ್ತು ಜಿನ ಪೂಜೆಯನ್ನು ಮಾಡುತ್ತ ಕಾಲವನ್ನು ಕಳೆದಳು.

ಇತ್ತ, ಕೃತಾಂತವಕ್ತ್ರನು ಹಿಂದಕ್ಕೆ ಹೋಗಿ ರಾಘವನನ್ನು ಕಂಡು ಸೀತಾದೇವಿಯು ಹೇಳಿದ ಮಾತುಗಳೆಲ್ಲವನ್ನೂ ಹೇಳಲು ರಾಮಸ್ವಾಮಿಯು ಮೂರ್ಛೆ ಹೋಗಿ ಬೇಗನೆಯೆಚ್ಚತ್ತು ಬಹಳವಾಗಿ ಪ್ರಲಾಪಿಸಿದನು. ಇದನ್ನು ನೋಡಿ ಲಕ್ಷ್ಮಣನೂ ಶೋಕವಶಗತನಾಗಲು ಕೃತಾಂತವಕ್ತ್ರನು ಇಬ್ಬರನ್ನೂ ಸಮಾಧಾನ ಪಡಿಸಿದನು. ಆಗ ರಾಮಚಂದ್ರನು ಚಂದ್ರಕಲಶನೆಂಬ ಸೀತಾ ಮಹತ್ತರನನ್ನು ಕರೆಯಿಸಿ ಸೀತಾದೇವಿಯು ಹೇಳಿದ ತೆರನಾಗಿ ಜಿನಪತಿ ಪೂಜೆಯನ್ನೂ ಮುನಿ ಜನಕ್ಕೆ ಚತುರ್ವಿಧ ದಾನವನ್ನೂ ಮಾಡಿಸೆಂದು ಅಪ್ಪಣೆಕೊಟ್ಟನು.

---

## ಆಶ್ವಾಸ ೧೬—ಪರಿನಿರ್ವಾಣ ಕಲ್ಯಾಣೋತ್ಸವ

ಸೀತಾದೇವಿಯು ವಜ್ರಜಂಘನ ಪೋಷಣೆಯಲ್ಲಿದ್ದು ನವಮಾಸಗಳು ತುಂಬಲು ಶ್ರಾವಣಮಾಸದ ಹುಣ್ಣಿಮೆಯ ಹಗಲಿನಲ್ಲಿ ಚಂದ್ರ ದೇವೇಂದ್ರರಿಗೆಣೆಯಾದ ಅವಳಿ ಮಕ್ಕಳನ್ನು ಹೆತ್ತಳು. ಅವರಿಗೆ ಮಹಾ ವೈಭವದಿಂದ ಜಾತಕರ್ಮ ನಾಮಕರಣಗಳನ್ನು ಮಾಡಿಸಿ ಲವ ಕುಶರೆಂಬ ಹೆಸರನ್ನಿಟ್ಟರು. ಅವರು ಶುಕ್ಲ ಪಕ್ಷದ ಚಂದ್ರನಂತೆ ದಿನದಿನಕ್ಕೆ ಪ್ರವರ್ಧಮಾನರಾಗಿ ಶೈಶವವನ್ನು ಕಳೆಯಲು ಸಿದ್ಧಾರ್ಥನಿಂದ ಅರುವತ್ತುನಾಲ್ಕು ಕಲೆಗಳನ್ನೂ ಶಸ್ತ್ರಾಸ್ತ್ರವಿದ್ಯೆಗಳೆಲ್ಲವನ್ನೂಕಲಿತು ಅಸಮಾನರಾದರು. ಆಗ ವಜ್ರಜಂಘನು ಶಶಿಮಾಲೆಯೆಂಬ ತನ್ನ ಮಗಳೊಡನೆ ಮೂವತ್ತೆರಡುಮಂದಿ ಕನ್ನಿಕೆಯರನ್ನು ಲವನಿಗೆ ಮದುವೆಮಾಡಿ ಪೃಥ್ವೀಪುರ ವನ್ನಾಳುವ ಪೃಥುವಿನ ಮಗಳಾದ ಕನಕಮಾಲೆಯನ್ನು ಕುಶನಿಗೆ ಕೊಡುವಂತೆ

ಪೃಥುವಿಗೆ ಹೇಳಿಕಳುಹಿಸಲು, ಆತನು ಅವಜ್ಞಾತ ಕುಲದವನಿಗೆ ಕೂಸನ್ನು ಕೊಡೆನೆಂದು ಗರ್ಜಿಸಿ ಹೇಳಿದನು. ಅದನ್ನು ಕೇಳಿ ವಜ್ರಜಂಘನು ಕಡುಮುಳಿದು ಪೃಥುವಿನಮೇಲೆ ದಂಡೆತ್ತಿ ಹೋದುದನ್ನು ತಿಳಿದು ಲವಾಂಕುಶರೂ ಹೊರಟು ವಜ್ರಜಂಘನನ್ನು ಸೇರಿ ಪೃಥುವಿನಮೇಲೆ ಯುದ್ಧಮಾಡಿ ಅವನನ್ನು ಸೋಲಿಸಲು ಅವನು ಓಡಿಹೋದನು. ಆಗ ಲವಾಂಕುಶರು ಹಿಂದಟ್ಟಿಕೊಂಡು ಹೋಗಿ ಅರಿಯದ ಕುಲದವರಿಗೆ ಬೆಂಗೊಟ್ಟೋಡುವುದು ಯುಕ್ತವಲ್ಲವೆಂದು ಮೂದಲಿಸಲು ಪೃಥುವು ಎಡೆಗೆಟ್ಟು ಕೈಮುಗಿದು ತನ್ನ ದೋಷಕ್ಕೆ ಕ್ಷಮಿಸಬೇಕೆಂದು ಬೇಡಿಕೊಂಡು ಅವರನ್ನು ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ ಕನಕಮಾಲೆಯನ್ನು ಕುಶನಿಗೆ ಮದುವೆಮಾಡಿ ಕೊಟ್ಟನು.

ತರುವಾಯ, ಲವಾಂಕುಶರು ವಜ್ರಜಂಘನನ್ನು ಪುಂಡರೀಕಿಣೀಪುರಕ್ಕೆ ಕಳುಹಿಸಿ ದಿಗ್ವಿಜಯ ಪ್ರಯಾಣ ಭೇರಿಯನ್ನು ಹೊಯ್ಸಿ ವಂಗ ಮಗಧ ಮೊದಲಾದ ಸಕಲ ದೇಶಗಳನ್ನೂ ಬಾಯ್ಕೇಳಿಸಿ ಗಂಗಾನದಿಯನ್ನು ದಾಟಿ ಕೈಲಾಸ ನಗರದ ಉತ್ತರ ಭಾಗವನ್ನು ಸೇರಿ ಸಿಂಧುವಿನ ಬಳಿಗೆ ಬಂದು ಪಶ್ಚಿಮ ಸಮುದ್ರ ತೀರವನ್ನು ಹಿಡಿದು ನಡೆದು ಅಲ್ಲಿಯ ರಾಜರುಗಳಿಂದ ಕಪ್ಪವನ್ನು ಕೊಂಡು ಸಿದ್ಧ ದಿಗ್ವಿಜಯರಾಗಿ ಬಂದು ಪುಂಡರೀಕಿಣೀಪುರವನ್ನು ಸೇರಿ ಸುಖದಿಂದಿದ್ದರು. ಆ ಸಮಯದಲ್ಲಿ ಹಿಂಸಾನಂದನಾದ ನಾರದನು ಸೀತೆಯಿದ್ದ ತಾವನ್ನರಿತು ಪುಂಡರೀಕಪುರವನ್ನು ಹೊಗಲು ಲವಾಂಕುಶರು ಆತನನ್ನು ಕಂಡು ಭಕ್ತಿಯಿಂದೆರಗಿ ಮಣಿಮಯಾಸನದಲ್ಲಿ ಕುಳ್ಳಿರಿಸಿದರು. ಅದಕ್ಕೆ ಸಂತೋಷಪಟ್ಟು ನಾರದನು ರಾಮಲಕ್ಷ್ಮಣರಂತೆ ಮಹಾನುಭಾವರಾಗಿರೆಂದು ಅವರನ್ನು ಹರಸಲು ಲವಾಂಕುಶರು ಆ ರಾಮಲಕ್ಷ್ಮಣರು ಯಾರೆಂದು ಕೇಳಿ, ಅವರ ವೃತ್ತಾಂತವನ್ನು ವಿಶದವಾಗಿ ತಿಳಿಸಬೇಕೆಂದು ಆ ಮಾಯ ಜೋಗಿಯನ್ನು ಬೇಡಿದರು. ಅದಕ್ಕೆ ನಾರದನು ರಾಮಲಕ್ಷ್ಮಣರ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಲು, ಅದನ್ನು ಕೇಳಿ ನಿರಂಕುಶನಾದ ಅಂಕುಶನು “ಮುನಿವರ್ಯರೇ! ಅಯೋಗ್ಯರ ಮಾತನ್ನು ಕೇಳಿ ತನ್ನ ಘನತೆಯನ್ನುಳಿದು ಪಾಪಕ್ಕಂಜದೆ ಗುಣವತಿಯಾದ ಸತಿಯನ್ನು ತೊರೆದ ನಿರ್ಗುಣನಾದ ಜಡಮತಿಯನ್ನು ತಮ್ಮಂಥವರು ಹೊಗಳಬಹುದೇ?” ಎಂದು ಹೇಳಿ ಆ ಅಯೋಧ್ಯೆಯು ಎಷ್ಟು ದೂರವಿರುವುದೆಂದು ಕೇಳಿದನು. ನಾರದನು ನೂರೈವತ್ತು ಯೋಜನವೆನ್ನಲು ಕೂಡಲೆ ಲವಾಂಕುಶರು ಸಮಸ್ತ ಬಲವೊಡನೆ ಅಲ್ಲಿಗೆ ಹೊರಟು ಕೆಲವು ದಿನಗಳಿಗೆ ಅಯೋಧ್ಯೆಯನ್ನು ಸೇರಿ ಊರಹೊರಗೆ ಬೀಡನ್ನು ಬಿಟ್ಟರು. ಕ್ಷುಲ್ಲಕನಾದ ನಾರದನು ಪ್ರಭಾಮಂಡಲನ ಬಳಿಗೆ ಹೋಗಿ ಲವಾಂಕುಶರ ತೆರನೆಲ್ಲವನ್ನೂ ತಿಳಿಸಲು ಅದಕ್ಕೆ ಆತನು ಮನನೊಂದು ಜನಕ ವಿದೇಹಿಗಳೊಡನೆ ಪುಂಡರೀಕಿಣೀಪುರಕ್ಕೆ ಬಂದು ಸೀತಾದೇವಿಯನ್ನು ಕಂಡನು. ಆಕೆಯು ತಾಯಿ ತಂದೆ ಅಣ್ಣಂದಿರಿಗೆ

ನಮಸ್ಕರಿಸಿ ದುಃಖಪಡಲು, ಪ್ರಭಾಮಂಡಲನು ರಾಮಲಕ್ಷ್ಮಣರ ದೆಸೆಯಿಂದ ಮಕ್ಕಳಿಗೆ ಪ್ರಮಾದವಾಗಬಹುದೆಂದು ಹೇಳಿ ಸೀತಾದೇವಿಯನ್ನೂ ಲವಾಂಕುಶರ ಅರಸಿಯರನ್ನೂ ತನ್ನ ವಿಮಾನವನ್ನೇರಿಸಿಕೊಂಡು ಆಕಾಶಮಾರ್ಗದಿಂದ ಬಂದು ಲವಾಂಕುಶರನ್ನು ಸೇರಿದನು.

ಇತ್ತ, ಬಲಾಚ್ಯುತರು ತಮ್ಮ ಪರಾಕ್ರಮವನ್ನು ಲೆಕ್ಕಿಸದೆ ಪರಸೈನ್ಯವು ಬಂದಿತೆಂದು ಕುಪಿತರಾಗಿ ತಮ್ಮ ಸೇನೆಯೊಡನೆ ಹೊರಟು ಲವಾಂಕುಶರನ್ನು ಎದುರಿಸಿ ಕಾದಿ ಗೆಲ್ಲಲಾರದೆ ಹೋದರು. ಲವನು ರಾಘವನ ಧ್ವಜವನ್ನೂ ಧನುಸ್ಸನ್ನೂ ರಥವನ್ನೂ ಮುರಿದುಹೋಗುವಂತೆ ಹೊಡೆದು ರಾಮನನ್ನು ವಿರಥನನ್ನಾಗಿ ಮಾಡಿದನು. ಆಗ ರಾಮನು ಮತ್ತೊಂದು ರಥವನ್ನೇರಿ ಮಹಾಯುದ್ಧವನ್ನು ಮಾಡಿ ದಿವ್ಯಾಸ್ತ್ರಗಳಿಂದಲೂ ಲವನನ್ನು ಸೋಲಿಸಲಾರದೆ ವಿಸ್ಮಿತಚಿತ್ತನಾಗಿರುವಲ್ಲಿ, ಲಕ್ಷ್ಮಣನು ಕುಶನೊಡನೆ ಹೋರಾಡಿ ಗೆಲ್ಲಲಾರದೆ ಕಡೆಗೆ ಚಕ್ರದಿಂದಿಡಲು ಆ ಚಕ್ರವು ಕುಶನನ್ನು ನೆಡಲೊಲ್ಲದೆ ಅಲ್ಲಿಯೇ ಸುತ್ತಾಡುತ್ತಿತ್ತು. ಲಕ್ಷ್ಮಣನು ಕುಶನಿಂದ ಸೋತವನಾಗಿ ತಮ್ಮ ಪುಣ್ಯಪ್ರಭಾವವು ತೊಲಗಿತೆಂದೆಣಿಸಿ ಅವರು ಬಲದೇವ ವಾಸುದೇವರಾದರೆಂದೂ ತಮಗಜೇಯರೆಂದೂ ನಿಶ್ಚಯಿಸಿ ಯುದ್ಧವನ್ನು ನಿಲ್ಲಿಸಿರಲು, ಆ ಸಮಯದಲ್ಲಿ ನಾರದನು ನಭದಲ್ಲಿದ್ದು ನಗುತ್ತ, "ಅಯ್ಯಾ! ಬಲದೇವ ವಾಸುದೇವರೆಂಬ ಮಹಿಮೆ ನಿಮಗಲ್ಲದೆ ಇತರರಿಗೆ ಸಲ್ಲುವುದುಂಟೆ? ಇವರು ಸೀತಾದೇವಿಯ ಕುಮಾರರು, ಲವಾಂಕುಶರೆಂಬವರು; ತಮ್ಮ ತಾಯಿಯನ್ನು ಅವಿಚಾರದಿಂದ ಹೊರಡಿಸಿ ಕಳೆದುದಕ್ಕಾಗಿ ಮುಸಿದು ನಿಮ್ಮನ್ನು ಈ ತೆರದಿಂದ ಕಾಣುವುದಕ್ಕೆ ಬಂದಿರುವರು" ಎಂದು ಹೇಳಲು, ಲಕ್ಷ್ಮಣನು ಸಂತೋಷಾತಿಶಯದಿಂದ ರಾಮನ ಬಳಿಗೆ ಬಂದು ಈ ವೃತ್ತಾಂತವನ್ನು ತಿಳಿಸಿದನು. ಇದನ್ನು ಕೇಳಿ ರಾಮಸ್ವಾಮಿಯು ಅತ್ಯಾಶ್ಚರ್ಯದಿಂದಲೂ ಸಂತೋಷದಿಂದಲೂ ವ್ಯಾಮುಗ್ಧನಾಗಿ ಮಕ್ಕಳನ್ನು ಆಗ ತಾನೆ ಪಡೆದವನಂತೆ ಅನುರಾಗ ಹೊಂದಿ ರಥದಿಂದಿಳಿದು ಲಕ್ಷ್ಮಣನೊಡನೆ ಲವಾಂಕುಶರಿರುವ ಸ್ಥಳಕ್ಕೆ ಬರುತ್ತಿರಲು ಅವರು ಆನೆಗಳಿಂದಿಳಿದು ಸಂಭ್ರಮದಿಂದ ಎದುರಾಗಿ ಬಂದು ರಾಮನ ಪಾದಗಳ ಮೇಲೆ ಬಿದ್ದರು. ರಾಮಚಂದ್ರನು ಅವರನ್ನೆತ್ತಿ ಬಿಗಿದಪ್ಪಿಕೊಂಡು ಸಂತೋಷ ಸಾಗರದಲ್ಲಿ ಮುಳುಗಿದನು. ಲವಾಂಕುಶರು ತರುವಾಯ ಲಕ್ಷ್ಮಣನನ್ನು ನಮಸ್ಕರಿಸಿ ಆಶೀರ್ವಾದವನ್ನು ಪಡೆದರು. ಹೀಗೆ ರಾಮಲಕ್ಷ್ಮಣರು ಸುಖಾನುಭವದಿಂದ ತಣಿದು ಆನಂದ ಬಾಷ್ಪಗಳನ್ನು ಸುರಿಸುತ್ತ ಪುಳಕಾಂಕಿತರಾಗಿರುವಲ್ಲಿ ವಿಮಾನಾರೂಢೆಯಾದ ಸೀತಾದೇವಿಯು ಮಕ್ಕಳ ಪರಾಕ್ರಮವನ್ನೂ ಅವರು ತಂದೆಯೊಡನೆ ಸೇರಿದುದನ್ನೂ ಕಂಡು ಸಂತೋಷಪಟ್ಟು ಪುಂಡರೀಕಿಣೀ ಪುರಕ್ಕೆ ಹಿಂದಿರುಗಿ ಹೋದಳು. ರಾಮಲಕ್ಷ್ಮಣರು ಲವಾಂಕುಶರೊಡನೆ ಮಹಾ ವೈಭವದಿಂದ ಸಾಕೇತಪುರವನ್ನು ಹೊಕ್ಕು ಸುಖದಿಂದಿದ್ದರು.

ಆಗ ಸುಗ್ರೀವ ಮೊದಲಾದವರು ರಾಮನ ಬಳಿಗೆ ಬಂದು ಸಚ್ಚರಿತೆಯಾದ ಜಾನಕಿಯನ್ನು ಪರದೇಶದಲ್ಲಿ ಬಿಟ್ಟಿರುವುದು ಸರಿಯಲ್ಲವೆಂದೂ ಕೂಡಲೆ ಅಲ್ಲಿಗೆ ಕರೆಯಿಸುವುದೆಂದೂ ಬೇಡಿಕೊಳ್ಳಲು ರಾಮನು ತಾನು ಲೋಕಾಪವಾದ ಭಯ ದಿಂದ ಆಕೆಯನ್ನು ಕಳೆದೆನಲ್ಲದೆ ಅವಗುಣಾರೋಪಣದಿಂದಲ್ಲವೆಂದೂ ಸಚ್ಚರಿತ ದಲ್ಲಿ ಆಕೆಗೆ ಸಮನಾದವರು ಮತ್ತಾರೂ ಇಲ್ಲವೆಂಬ ವಿಷಯವನ್ನು ತಾನು ಅರಿತಿರುವೆನೆಂದೂ ಹೇಳಿ ಆಕೆಯ ಅಪವಾದವನ್ನು ಕಳೆಯುವುದಕ್ಕಾಗಿ, ಎಲ್ಲರೂ ನೋಡುವಂತೆ, ಅಗ್ನಿಪ್ರವೇಶ ಪರೀಕ್ಷೆಯನ್ನು ಮಾಡುವುದೆಂದು ತಿಳಿಸಿದನು. ಅದಕ್ಕೆ ಸುಗ್ರೀವಾದಿಗಳು ಒಪ್ಪಿ ಅಪ್ಪಣೆಪಡೆದು ಪುಂಡರೀಕಿಣೀಪುರಕ್ಕೆ ಹೋಗಿ ಸೀತಾದೇವಿಯೊಡನೆ ಈ ವಿಷಯವನ್ನು ತಿಳಿಸಲು, ವಿಷಯ ವಿರಕ್ತೆಯಾದ ಸೀತಾ ದೇವಿಯು ತಾನು ಅಗ್ನಿಪ್ರವೇಶ ಮಾಡಿ ಶುದ್ಧೆಯಾಗಿ ತಪಸ್ಥೆಯಾಗುವೆನೆಂದು ಮನಸ್ಸಿನಲ್ಲಿ ನಿಶ್ಚಯಿಸಿ ವಿಮಾನವನ್ನೇರಿ ಅಯೋಧ್ಯೆಗೆ ಬಂದಳು. ಆ ದಿನ ಮಹೇಂದ್ರೋದ್ಯಾನದಲ್ಲಿ ರಾತ್ರಿಯನ್ನು ಕಳೆದು ಮರು ದಿನ ರಾಘವನನ್ನು ಕಂಡು ಅವಿಚಾರದಿಂದ ತನ್ನನ್ನು ಬಿಸುಟು ತನಗೆ ಬಹಳ ನೋವನ್ನುಂಟುಮಾಡಿದಿರೆಂದು ಹೇಳಲು, ರಾಮಚಂದ್ರನು ತಾನು ಲೋಕಾಪವಾದಕ್ಕಾಗಿ ಭಯಪಟ್ಟು ಆ ರೀತಿಯಾಗಿ ಮಾಡಿದೆನಲ್ಲದೆ ಆಕೆಯ ಸುಚರಿತೆಯ ವಿಷಯವಾಗಿ ಯಾರಿಗೂ ಸಂಶಯವಿಲ್ಲೆಂದು ತಿಳಿಸಿ ಲೋಕಪ್ರಖ್ಯಾತವಾಗುವಂತೆ ಅಗ್ನಿಪ್ರವೇಶಮಾಡಬಾರೆಂದು ಹೇಳಲು ಆಕೆಯು ಮಹಾಪ್ರಸಾದವೆಂದು ಒಪ್ಪಿದಳು. ಆಗ ಚಂದನಾಗರು ಸುಗಂಧ ದ್ರವ್ಯಗಳಿಂದ ದೊಡ್ಡ ಅಗ್ನಿಕುಂಡವನ್ನು ರಚಿಯಿಸಿದುದನ್ನು ದೇವೇಂದ್ರನು ತಿಳಿದು ಮಹಾ ಸತಿಯಾದ ಸೀತಾದೇವಿಗೆ ಕೇಡುಂಟಾಗದಂತೆ ಮಾಡಿ ಬರಲು ಮೇಘಕೇತನನೆಂಬ ದೇವನನ್ನು ನಿಯಮಿಸಿದನು.

ಸೀತಾದೇವಿಯು ಅಲ್ಲಿ ನೆರೆದಿದ್ದ ವಿಯಚ್ಚರಾಮರ ನರ ಪ್ರಮುಖರು ಕೇಳು ವಂತೆ ಸುಸ್ವರದಿಂದ "ನಾನು ವಸುಂಧರಾ ವಲ್ಲಭನಾದ ರಾಘವನಲ್ಲಲ್ಲದೆ ರಾವ ಣಾದಿಯಾದ ಮಿಕ್ಕವರಲ್ಲಿ ಪ್ರೀತಿಯನ್ನು ಮನಸ್ಸಿಗೆ ತಂದಿದ್ದರೆ ಈ ಯಜ್ಞೇಶ್ವರನಿಂದ ನನಗೆ ಮರಣವುಂಟಾಗಲಿ" ಎಂದು ಪ್ರತಿಜ್ಞೆಗೈದು ಪಂಚಪರಮೇಷ್ಠಿಗಳಿಗೆ ನಮ ಸ್ಕಾರಮಾಡಿ ಧಗಧಗಿಸುತ್ತಿರುವ ಉರಿಯಲ್ಲಿ ಬಿದ್ದಳು. ಆಗ ಸುತ್ತಲಿರುವವರೆಲ್ಲರೂ ಬೆಚ್ಚುಬಿದ್ದಿರಲು, ಸೀತಾದೇವಿಯು ತಿಳಿಗೊಳದಲ್ಲಿರುವಂತೆ ನಿಶ್ಚಲೆಯಾಗಿ ಜಿನ ಪತಿಯ ಚರಣವನ್ನು ಧ್ಯಾನಿಸುತ್ತಿದ್ದಳು. ಪತಿವ್ರತಾ ಮಹಿಮೆಯಿಂದುಂಟಾದ ಈ ಆಶ್ಚರ್ಯವನ್ನು ಕಂಡು ಎಲ್ಲರೂ ಬೆರಗಾದರು. ಆಗ ದೇವೇಂದ್ರನಾಜ್ಞೆಯ ಮೇರೆಗೆ ನಿಯಮಿತನಾಗಿದ್ದ ದೇವನು ಆ ಕುಂಡವನ್ನು ಪದ್ಮಸರೋವರವನ್ನಾಗಿ ಮಾಡಿ ತನ್ನ ದೇವಿಯರಿಂದ ಆ ಕೊಳದಲ್ಲಿದ್ದ ಸೀತಾದೇವಿಯನ್ನೆತ್ತಿ ತರಿಸಿ ಸಿಂಹಾಸನದಲ್ಲಿ ಕುಳ್ಳಿರಿಸಿ ತಾನು ಆಕಾಶದಲ್ಲಿದ್ದು ಲೋಕಕ್ಕೆಲ್ಲ ಆಶ್ಚರ್ಯವಾಗುವಂತೆ ಹೂಮಳೆಗರೆಯಿಸಿ

ದನು. ಅದನ್ನು ಕಂಡು ಜನರೆಲ್ಲರೂ ಒಂದೇ ಕೊರಳಿನಲ್ಲಿ ಸೀತಾದೇವಿಯ ಪಾತಿವ್ರತ್ಯವನ್ನು ಕೊಂಡಾಡಿದರು, ಲವಾಂಕುಶರು ಪುಲಕಾಂಕಿತರಾದರು, ರಾಮಲಕ್ಷ್ಮಣರು ಸಂತೋಷ ಸಾಗರದಲ್ಲಿ ಮುಳುಗಿದರು. ಬಂಧುವರ್ಗವೂ ಪರಿಜನವೂ ಹರ್ಷವನ್ನು ತಾಳಿತು, ದೇವದುಂದುಭಿ ಮೊಳಗಿತು, ಗಂಧವಾಹನು ದಿವ್ಯಾಮೋದದೊಡನೆ ಸುಳಿದನು, ರಾಜಲೋಕವು ಪ್ರೀತಿಯಿಂದ ಹರಸಿತು.

ಆಗ ರಾಮಸ್ವಾಮಿಯು ಸೀತಾದೇವಿಯ ಬಳಿಗೆ ಬಂದು, ತನ್ನನ್ನು ಕ್ಷಮಿಸಿ ಮೊದಲಿದ್ದ ತೆರನಾಗಿಯೇ ತನ್ನ ವಲ್ಲಭೆಯಾಗಿದ್ದು ಸಾಮ್ರಾಜ್ಯ ಸುಖವನ್ನನುಭವಿಸಬೇಕೆಂದು ಹೇಳಲು ಸೀತಾದೇವಿಯು, ಕೇಡುಳ್ಳ ಸಂಸಾರದಲ್ಲಿನ್ನು ಉಪಯೋಗವಿಲ್ಲೆಂದೂ ಕೇಡಿಲ್ಲದ ಮೋಕ್ಷಸುಖಕ್ಕೆ ಕಾರಣವಾಗಿರುವ ತಪಸ್ಸನ್ನು ಕೈಕೊಳ್ವೆನೆಂದೂ ಹೇಳಿ ತನ್ನ ತಲೆಗೂದಲನ್ನು ಕಿತ್ತು ಆತನ ಮುಂದಿಟ್ಟಳು. ಈ ತೆರನಾದ ಸತಿಯ ವೈರಾಗ್ಯವನ್ನು ಕಂಡು ರಾಘವನು ಮೂರ್ಛಿತನಾಗಿ ಸ್ವಲ್ಪ ಹೊತ್ತಿನಮೇಲೆ ಎಚ್ಚತ್ತನು. ಅಷ್ಟರಲ್ಲಿ ಸೀತಾದೇವಿಯು ಪೃಥುಮತಿ ಕಂತಿಯರ ಪಕ್ಕದಲ್ಲಿ ತಪಸ್ಸಿಗೆ ನಿಂತು ಮಹೇಂದ್ರೋದ್ಯಾನ ವನಕ್ಕೆ ಹೋಗಿ ಸಕಲಭೂಷಣ ಕೇವಲಿ ಭಟ್ಟಾರಕರ ಸಭೆಯನ್ನು ಸೇರಿದಳು. ರಾಮನು ಅತಿ ವ್ಯಾಮೋಹದಿಂದ ಹೊರಟು ಸಕಲ ಲೋಕಾಧಿಪರಿಂದ ಕೂಡಿದ್ದ ಸಕಲಭೂಷಣ ಕೇವಲಿಗಳ ಸಭೆಯನ್ನು ಹೊಕ್ಕು ಕೇವಲಿಗಳಿಗೆ ನಮಸ್ಕರಿಸಿ ಕುಳಿತುಕೊಂಡನು; ಲಕ್ಷ್ಮಣಾದಿಗಳು ಸೀತಾದೇವಿಯನ್ನು ಬಗೆಬಗೆಯಾಗಿ ಸ್ತೋತ್ರಮಾಡಿ ಭಕ್ತಿಯಿಂದೆರಗಿ ನಮಸ್ಕಾರ ಮಾಡಿದರು. ಆಗ ವಿಭೀಷಣನು ಎದ್ದು ನಿಂತು ಕೈಮುಗಿದುಕೊಂಡು ಭಟ್ಟಾರಕರನ್ನು ಕುರಿತು ರಾಮಲಕ್ಷ್ಮಣರ ಪೂರ್ವಜನ್ಮದ ಪುಣ್ಯಪ್ರಭಾವವನ್ನೂ ಶೌಚಾಚಾರ ಪರಾಯಣನಾದ ರಾವಣನು ಸೀತಾದೇವಿಗೆ ಮರುಳುಗೊಳ್ಳುವುದಕ್ಕೆ ಪೂರ್ವಜನ್ಮದ ಪಾಪಕಾರಣವನ್ನೂ ವಿವರಿಸಿ ಹೇಳಬೇಕೆಂದು ಬೇಡಿಕೊಳ್ಳಲು ಕೇವಲಿಗಳು ಅವನ್ನೂ ಇತರರ ಭವಾವಳಿಯನ್ನೂ ವಿಶದವಾಗಿ ತಿಳಿಸಿದರು. ತರುವಾಯ ರಾಮಲಕ್ಷ್ಮಣರು ಲವಾಂಕುಶರೊಡನೆ ಅಯೋಧ್ಯೆಯನ್ನು ಹೊಕ್ಕು ರಾಜ್ಯಸುಖಾಯತ್ತ ಮನರಾಗಿ ಅನೇಕ ವರ್ಷ ಸಂತೋಷದಿಂದಿದ್ದರು.

ಹೀಗಿರುವಾಗ ಸುರ ಪರಿಷತ್ತಿನಲ್ಲಿ ಮಧ್ಯವರ್ತಿಯಾದ ಸೌಧರ್ಮೇಂದ್ರನು ಧರ್ಮನಿರೂಪಣಮಾಡುವಲ್ಲಿ, ಗತಿಗಳೆಲ್ಲದರಲ್ಲಿ ಮನುಜ ಗತಿಯೇ ಪಾವನವಾದುದೆಂದೂ ಮಿಕ್ಕ ಗತಿಗಳು ಮುಕ್ತಿ ಸುಖವನ್ನು ಕೊಡಲಾರವೆಂದೂ ಹೇಳಲು, ಆ ಸಭೆಯಲ್ಲಿದ್ದ ಗೀರ್ವಾಣನೊಬ್ಬನು "ರಾಮನು ಮನುಜ ಗತಿಯನ್ನು ಪಡೆದು ಉತ್ತಮನೆನಿಸಿಕೊಂಡಿದ್ದರೂ ದೀಕ್ಷೆಗೊಳ್ಳಲಿಲ್ಲವಲ್ಲಾ! ಆದುದರಿಂದ ಮನುಷ್ಯ ಭವವೇ ದೀಕ್ಷೆಗೆ ಕಾರಣವೆಂದು ಹೇಗೆ ಹೇಳುವಿರಿ?" ಎಂದು ಕೇಳಿದನು. ಅದಕ್ಕೆ ವಿಭಾವಸುವೆಂಬ ದೇವನು ರಾಮನಿಗೆ ಲಕ್ಷ್ಮಣನಲ್ಲಿರುವ ಸ್ನೇಹ ಕಾರಣದಿಂದ ತಪವ

ನ್ನಪೇಕ್ಷಿಸಿರುವನೆಂದೂ ಆತನಿಗೆ ಲಕ್ಷ್ಮಣನ ವಿಯೋಗವಾದರೂ ಲಕ್ಷ್ಮಣನಿಗೆ ರಾಮನ ವಿಯೋಗವಾದರೂ ಪರಸ್ಪರವಾಗಿ ಅತಿ ವಿಷಾದಪಡುವರೆಂದೂ ಹೇಳಲು ರತ್ನಚೂಲ ಅಮೃತಚೂಲರೆಂಬ ಇಬ್ಬರು ದೇವರುಗಳು ರಾಮಲಕ್ಷ್ಮಣರ ಸ್ನೇಹ ವನ್ನು ನೋಡುವ ಕುತೂಹಲವುಳ್ಳವರಾಗಿ ಅಯೋಧ್ಯೆಗೆ ಬಂದು ಅರಮನೆ ಯನ್ನು ಹೊಕ್ಕು ರಾಮನು ಪರಲೋಕ ಪ್ರಾಪ್ತನಾದಂತೆಯೂ, ರಾಜಾಲಯ ವೆಲ್ಲವೂ ಶೋಕ ಸಮುದ್ರದಲ್ಲಿ ಮುಳುಗಿದಂತೆಯೂ, ರಾಮನಾಕೃತಿಯನ್ನು ಪ್ರಾಣವಳಿದಂತೆಯೂ ತಮ್ಮ ವಿದ್ಯಾಬಲದಿಂದ ನಿರ್ಮಿಸಿದರು. ಇದನ್ನು ಕಂಡು ಲಕ್ಷ್ಮಣನು ಅತ್ಯಂತ ಶೋಕದಿಂದ ಕ್ಷಣಮಾತ್ರದಲ್ಲಿ ಪ್ರಾಣವನ್ನು ಬಿಟ್ಟನು; ಅರಮನೆಯೆಲ್ಲವೂ ದುಃಖಮಯವಾಯಿತು. ರಾಮನು ಈ ವಾರ್ತೆಯನ್ನು ಕೇಳಿ ಲಕ್ಷ್ಮಣನ ಬಳಿಗೆ ಬಂದು ಮೂರ್ಛೆಹೋಗಿ ಎಚ್ಚತ್ತು ಮರಳಿ ಮೂರ್ಛೆಗೊಂಡು ಬಹು ವಿಧವಾಗಿ ಪ್ರಲಾಪಿಸಿದನು. ಇದನ್ನು ಕಂಡ ಲವಾಂಕುಶರು ಅದೇ ತಮಗೆ ನಿರ್ವೇಗ ಕಾರಣವಾಗಲು ರಾಮಸ್ವಾಮಿಗೆ ನಮಸ್ಕರಿಸಿ ಅಪ್ಪಣೆಪಡೆದು ಅಮೃತೇ ಶ್ವರ ಭಟ್ಟಾರಕರ ಬಳಿಯಲ್ಲಿ ದೀಕ್ಷೆಗೊಂಡರು. ವಿಭೀಷಣನು ಈ ಸುದ್ದಿಯನ್ನು ಕೇಳಿ ರಾಮಚಂದ್ರನ ಶೋಕವನ್ನು ಉಪಶಮಿಸಲೆಂದು ಬಂದು ಆತನೂ ಸುಗ್ರೀವಾದಿ ಗಳೂ ಲಕ್ಷ್ಮಣನ ಶವಕ್ಕೆ ದಹನ ಸಂಸ್ಕಾರವನ್ನು ಮಾಡಿಸಲುದ್ಯುಕ್ತರಾದರು. ಇದನ್ನು ಕಂಡು ರಾಮನು ಅವರನ್ನು ಬಲು ತೆರನಾಗಿ ಬಯ್ದು ಹೊಯ್ದು ಕೂಡಲೆ ಲಕ್ಷ್ಮಣನ ಶವವನ್ನೆತ್ತಿಕೊಂಡು ಹೋಗಿ ಅದಕ್ಕೆ ವಸ್ತ್ರಾಭರಣಗಳನ್ನು ತೊಡಿಸಿ ಚಂದನವನ್ನು ಹಚ್ಚಿ ಅದನ್ನು ಆರು ತಿಂಗಳ ಕಾಲ ಹಾಗೆಯೇ ಹೊತ್ತುಕೊಂಡಿದ್ದನು.

ಈ ರೀತಿಯಾಗಿ ರಾಮಸ್ವಾಮಿಯು ಲಕ್ಷ್ಮಣನ ವಿಯೋಗದಿಂದ ರಾಜ್ಯ ರಕ್ಷಣೆಯನ್ನು ಮರೆತು ವಿಕಲನಾಗಿರಲು ಇಂದಗಿಯ ಮಗನಾದ ವಜ್ರ ಮಾಲಿ ಮೊದಲಾದವರು ಅಯೋಧ್ಯೆಗೆ ಮುತ್ತಿಗೆ ಹಾಕಿದರು. ರಾಮನು ಈ ವಾರ್ತೆಯನ್ನು ಕೇಳಿ ಲಕ್ಷ್ಮಣನ ದೇಹವನ್ನು ಬಿಡಲಾರದೆ ತನ್ನ ವಜ್ರಾವರ್ತ ಚಾಪ ವನ್ನೂ ಅಗ್ನಿಮುಖ ಶಿಲೀಮುಖವನ್ನೂ ನೋಡುತ್ತಿರುವಲ್ಲಿ ದೇವಗತಿವಡೆದ ಜಟಾಯುವಿಗೂ ಕೃತಾಂತವಕ್ತ್ರನಿಗೂ ಆಸನಕಂಪವಾಯಿತು. ಅವರು ಅವಧಿ ಬೋಧೆಯಿಂದ ಅಯೋಧ್ಯೆಯ ವೃತ್ತಾಂತವನ್ನರಿತು ಅಲ್ಲಿಗೆ ಬಂದು ಶತ್ರು ಸೈನ್ಯವನ್ನೋಡಿಸಿ ರಾಮನ ಬಳಿಗೆ ಬಂದು ರಾಮನಿಗೆ ಹೇಗಾದರೂ ಧರ್ಮ ಬೋಧೆಯನ್ನು ಮಾಡಿ ಆತನ ವಿಕಲತೆಯನ್ನು ಕಳೆಯಬೇಕೆಂದು ಪ್ರಯತ್ನಿಸಿ ಹಲವು ದೃಷ್ಟಾಂತಗಳನ್ನು ಕೊಟ್ಟು ಕಡೆಗೆ ರಾಮನ ಮೋಹಾಂಧಕಾರವನ್ನು ಹೋಗಲಾಡಿಸಿ ತಮ್ಮ ದಿವ್ಯ ಸ್ವರೂಪವನ್ನು ತೋರಿಸಿ, ನಡೆದ ವೃತ್ತಾಂತವನ್ನು ತಿಳಿಸಲು ರಾಮನು ತನ್ನನ್ನು ತಾನರಿಯದೆ ಈ ತೆರನಾಗಿ ಮರುಳಾದೆನೆಂದು

ಚಿಂತಿಸಿ ವೈರಾಗ್ಯ ಪರನಾಗಿ ವಿಭೀಷಣ ಸುಗ್ರೀವ ನಳ ನೀಲ ಜಾಂಬವ ಮೊದಲಾದವರನ್ನೂ ಹಲವರು ಪ್ರಧಾನ ಪುರುಷರನ್ನೂ ಕರೆಯಿಸಲು ಅವರು ಲಕ್ಷ್ಮಣನ ಶವವನ್ನು ಸರಯೂನದೀ ತೀರದಲ್ಲಿ ಯಥಾವಿಧಿಯಾಗಿ ಸಂಸ್ಕರಿಸಿ ಬಂದರು. ರಾಮನು ಲವನ ಹಿರಿಯ ಮಗನಿಗೆ ರಾಜ್ಯ ಪಟ್ಟವನ್ನು ಕಟ್ಟಿ ಹಲವರು ಅರಸುಮಕ್ಕಳೊಡನೆ ಸುವ್ರತರೆಂಬ ಚಾರಣರ ಪಕ್ಕದಲ್ಲಿ ತಪಸ್ಥನಾದನು. ವಿಭೀಷಣ ಸುಗ್ರೀವ ಶತ್ರುಘ್ನ ನಳ ನೀಲ ವಿರಾಧಿತ ಮೊದಲಾದವರೂ ಅವರ ಅಂತಃಪುರ ಸ್ತ್ರೀಯರೂ ದೀಕ್ಷೆಗೊಂಡರು.

ರಾಮ ಯತಿಯು ಪರಮಾಗಮ ಪ್ರಣೀತ ಮಾರ್ಗದಲ್ಲಿ ನಡೆದು ಉಗ್ರೋಗ್ರ ತಪಶ್ಚರಣ ನಿರತನಾಗಿ ಕಾನನಕ್ಕೆ ಹೊರಟು ಲಕ್ಷ್ಮಣನೆತ್ತಿದ ಸಿದ್ಧಶಿಲೆಯನ್ನೇರಿ ಪ್ರತಿಮಾ ಯೋಗದಿಂದ ಕರ್ಮಕ್ಷಯಂಗೈಯುವುದನ್ನು ಸೀತೇಂದ್ರನು ಅವಧಿ ಬೋಧದಿಂದರಿತು ಆತನ ತಪಸ್ಸಿಗೆ ವಿಘ್ನ ಮಾಡುವುದಕ್ಕಾಗಿ ಆತನಿದ್ದೆಡೆಗೆ ಬಂದು ತಾನು ಸೀತೆಯ ರೂಪನ್ನು ಧರಿಸಿ, ವಿದ್ಯಾಧರ ಕನ್ಯೆಯರು ಸುತ್ತಿ ಬರಲು, ರಾಮ ಯತಿಯ ಸಮೀಪಕ್ಕೆ ಬಂದು, “ನೀವು ಇನ್ನೂ ವಯಸ್ಸು ಕಳೆದವರಲ್ಲ, ನಿಮ್ಮ ಮನೋಹರಾಕಾರವನ್ನು ಕೆಡಿಸದೆ ನನ್ನಲ್ಲಿಯೂ ಈ ವಿದ್ಯಾಧರ ಕನ್ಯೆಯರಲ್ಲಿಯೂ ಕೂಡಿ ಸುಖದಿಂದಿರಿ; ತರುವಾಯ ಎಲ್ಲರೂ ತಪಸ್ಸಿಗೆ ನಿಲ್ಲೋಣ” ಎಂದು ತಪೋವಿಘ್ನ ಕಾರಣಗಳನ್ನು ತೋರಿಸಿ ನುಡಿದರೂ ರಾಮಭಟ್ಟಾರಕನು ನಿಶ್ಚಲ ಚಿತ್ತದಿಂದ ಶುಕ್ಲಧ್ಯಾನ ಪ್ರವಿಷ್ಟನಾಗಿ ಮಾಘ ಶುದ್ಧ ದ್ವಾದಶಿಯ ಬೆಳಗಿನ ಜಾವದಲ್ಲಿ ಕೇವಲಬೋಧೆಯನ್ನು ಪಡೆದನು. ಆಗ ದೇವಸಂಕುಲಕ್ಕೆ ಆಸನಕಂಪವಾಗಲು ಅವರು ಅವಧಿಬೋಧದಿಂದರಿತು ರಾಮ ಕೇವಲಿಯ ಪೂಜೆಗೆ ಬಂದರು. ಅವರಲ್ಲೊಬ್ಬನಾದ ಸೀತೇಂದ್ರನು ದಶರಥಾದಿಗಳ ಗತಿಯನ್ನು ಕೇಳಲು ರಾಮ ಕೇವಲಿಯು ಅದನ್ನು ವಿಶದವಾಗಿ ತಿಳಿಸಿದನು. ರಾಮಭಟ್ಟಾರಕನು ಇಪ್ಪತ್ತೈದು ಸಂವತ್ಸರಗಳು ದೇವ ಮರ್ತ್ಯ ಖಚರ ಕ್ಷ್ಮಾಪಾಲಕರಿಂದ ಪೂಜೆಯನ್ನು ಹೊಂದಿ ತರುವಾಯ ಶಾಶ್ವತವಾದ ಮುಕ್ತಿಶ್ರೀಯನ್ನು ಪಡೆದನು.

---

ಶ್ರೀ

# ರಾಮಚಂದ್ರ ಚರಿತ ಪುರಾಣಂ



## ಪ್ರಥಮಾಶ್ವಾಸಂ

ಶಾ ॥ ಶ್ರೀಕೇಳೀ ನಿಲಯಂ ನಿಜಾಂಘ್ರಿಕಮಲಂ ವಿದ್ಯಾನಟೀ ನಾಟ್ಯ ವೇ ।
ದೀಕಲ್ಪಂ ಮುಖ ಚಂದ್ರಬಿಂಬಮಖಿಳೇಂದ್ರೋತ್ತಂಸ ಮಾಣಿಕ್ಯ ದೀ ॥
ಪಾಕೀರ್ಣಂ ಹರಿಪೀಠ ಪಾರ್ಶ್ವವಿನಿಪಂ ಪೂಜಾರ್ಹನಾರ್ಹಂತ್ಯ ಲ ।
ಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾಳ್ಕಿಷ್ಟಾರ್ಥ ಸಂಸಿದ್ಧಿಯಂ ॥ ೧ ॥

ಸ್ರ ಏನಸ್ಸಂತಾನಮೆಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ[1] ಮೆಯ್ಯಿಂ।
ದೇನಾನುಂ ಕುಂದೆ ಲೋಕಾಗ್ರದೊಳಿರೆ ಸಹಜಾನಂದ ಚೈತನ್ಯ ರೂಪಂ ॥
[2] ಜ್ಞಾನಂ ಜ್ಞೇಯ ಪ್ರಮಾಣಂ ಪಸರಿಸೆ ಗಣನಾತೀತರಾಗಿರ್ದ ಮುಕ್ತಿ ।
ಶ್ರೀನಾಥರ್ ಸಿದ್ಧರಾತ್ಯಂತಿಕಸುಖ ಪದವೀಸಿದ್ಧಿಯಂ ಮಾಳ್ಕೆ ನಮ್ಮೊಳ್ ॥ ೨ ॥

ಮ ॥ ಮನಮಂ ಕಟ್ಟಿ ಗುಣಂಗಳಿಂ ತುಱಿದು ಪಂಚಾಚಾರದಿಂ ಪಂಚಬಾ ।
ಣನ ಬಾಹಾಬಲಮಂ ಸಮುಗ್ರತರ ಶಿಷ್ಯಾನುಗ್ರಹ ಪ್ರೌಢಿವೆ ॥
ತ್ತನವದ್ಯರ್ ದಯೆಗೆಯ್ವರಕ್ಕೆ ದಯೆಯಿಂ ಭವ್ಯಾಳಿಗುದ್ಯತ್ತಪೋ ।
ಧನ ವಿದ್ಯಾಧನದಿಂ ಮಹಾಮಹಿಮೆವೆತ್ತಾಚಾರ್ಯರಾಚಾರಮಂ ॥ ೩ ॥

ಶಾ ॥ ಪಾತ್ರೀಭೂತ ವಿನೇಯ ಸಂತತಿಗೆ ಸಮ್ಯಗ್ದರ್ಶನ ಜ್ಞಾನ ಚಾ ।
ರಿತ್ರಂಗಳ್ ನಿಜಮಪ್ಪನಂತ ಸುಖಮಂ, ರಾಗಾದಿಗಳ್ ಜನ್ಮವ್ಯ ॥
ತ್ಯ ತ್ರಾಸಂಗಳನೀವುವೆಂದು ಸದಸದ್ಭೇದಂಗಳಂ ಪೇೞ್ವವರ್ ।
ಸೂತ್ರಪ್ರಾಯರಜೇಯರೀಗೆಮಗುಪಾಧ್ಯಾಯರ್ ಸುಖೋಪಾಯಮಂ ॥ ೪ ॥

ಮ ॥ ತಪಮಂ ಶೀಲಮನಪ್ಪುಕೆಯ್ದು ಕರಣಗ್ರಾಮಂಗಳಂ ಗೆಲ್ದು ಚಿ ।
ತ್ತಪದೈಕಾತಿಥಿಮಾಡಿ ಶಾಂತರಸಮಂ ಕಾರುಣ್ಯಮಂ ತಾಳ್ದಿ ತ ॥
ತ್ತ್ವಪರಿಜ್ಞಾನಮನಪ್ರಮತ್ತಚರಿತ ಪ್ರಸ್ಥಾನಮಂ ಸಾರ್ದ ಸಾ ।
ಧುಪದಂಗಳ್ ನಮಗೀಗೆ ಸಾಧುಪದಮಪ್ಪ ಕೈವಲ್ಯ ಮಾಂಗಲ್ಯಮಂ ॥ ೫ ॥

---

1. ಮೆಯ್ಯಿಂ ದೇನಾನುಂಗುಂದೆ. ಘ.
2. ಜ್ಞಾನ ಜ್ಞೇಯ. ಕ. ಖ. ಗ. ಘ.

ಶರಮಬ್ರಹ್ಮಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯಬೋ ।
ಧ ರಮಾ ಮೌಕ್ತಿಕಹಾರಯಷ್ಟಿ। ಕವಿತಾವಲ್ಲೀ ಸುಧಾವೃಷ್ಟಿ।ಸ ॥
ರ್ವ ರಸೋತ್ಪಾದ ನವೀನಸೃಷ್ಟಿ।ಬುಧಹರ್ಷಾಕೃಷ್ಟಿ।ಸರ್ವಾಂಗ[1]ಸುಂ ।
ದರಿ ವಿದ್ಯಾನಟ ನಾಟಕಂನಲಿಗೆ ಮತ್ಕಾವ್ಯಸ್ಥಲೀ ರಂಗದೊಳ್

ಕಂ ॥ ಅನಘರಸುಬದ್ಧ ಕೇವಲ
ರೆನಿಸಿದ ಗೌತಮ ಸುಧರ್ಮ ಜಂಬೂಗಣಭೃ ॥
ದ್ವಿನುತರೆಮಗೀಗೆ ಶಾಶ್ವತ
ಧನಮೆನಿಸಿದ ವಿಶ್ರುತ ಶ್ರುತಾರಾಧನಮಂ ॥ ೭ ॥

ಶ್ರುತಕೇವಲಿ ವಿಷ್ಣುವ್ರತಿ
ಪತಿ ಚರಣಂ ನಂದಿ ಪರಮಮುನಿ ಪದಮಪರಾ ॥
ಜಿತ ಪಾದಂ। ಗೋವರ್ಧನ
ಯತಿ ಕ್ರಮಂ। ಭದ್ರಬಾಹು ಚರಣಂ ಶರಣಂ ॥ ೮ ॥

ದಶಪೂರ್ವಧರರುಮೇಕಾ
ದಶಾಂಗಧಾರಿಗಳುಮೆನಿಪ ಮುನಿಪದ ನಖ ದೀ ॥
ಪ್ತಿ ಶರಚ್ಚಂದ್ರಿಕೆ ದರ್ಶನ
ವಿಶುದ್ಧಿಯಂ ಮಾಡುಗಘತಮೋ ವಿಘಟನಮಂ ॥ ೯ ॥

ಭೂತಬಲಿ ಪುಷ್ಪದಂತ
ಖ್ಯಾತರ ಜಿನಸೇನ ವೀರಸೇನ ಮುನೀಂದ್ರ ॥
ಖ್ಯಾತರ ಸಮಂತಭದ್ರ
ಖ್ಯಾತರ ಪದಪಾಂಸು ಕಿಡಿಸುಗಘಪಾಂಸುಗಳಂ ॥ ೧೦ ॥

ಕವಿ ಪರಮೇಷ್ಠಿಗಳ ಗುಣ
ಸ್ತವನಂಗಳ್ ಪೂಜ್ಯಪಾದ ಯತಿಪತಿಯ ಗುಣ ॥
ಸ್ತವನಂಗಳೊರ್ಮೆ ನಾಲಗೆ
ಗೆ ವಂದ ಮಾನವನ ವಾಙ್ಮಲಂ ನಿಂದಪುದೇ ॥ ೧೧ ॥

ಚತುರಂಗುಲ ಚಾರಣ ಋ
ದ್ಧಿ ತಮಗೆ ಸಮನಿಸಿದುದೆನಿಪ ತಪದುನ್ನತಿಯಿಂ ॥
ಶ್ರುತದಿಂ ಭೂಮಂಡಲ ವಿ
ಶ್ರುತರೆನಿಸಿದರಲ್ತೆ ಕುಂಡಕುಂದಾಚಾರ್ಯರ್ ॥ ೧೨ ॥

1. ಸೌಂದರಿ. ೧೨ ನೆಯ ಪದ್ಯವು ಕ. ಖ. ಪ್ರತಿಗಳಲ್ಲಿಲ್ಲ.

ಕಂ ॥ ಅಕಳಂಕಚಂದ್ರ ವಾಕ್ಚಂ
ದ್ರಿಕೆಯಿಂ ಧವಳಿಸೆ ದಿಗಂಬರಶ್ರೀ ಭವ್ಯ ॥
ಪ್ರಕರ ಚಕೋರಂ ನಲಿದುದು
ಮುಕುಳಿತವಾಯ್ತನ್ಯವಾದಿ ವದನಾಂಭೋಜಂ ॥

ಉ ॥ ಚಾರು ಚರಿತ್ರ ತೀರ್ಥಜಲದಿಂದಘಕರ್ದಮಮಂ ಕಟಿಲ್ಚಿ|ಸಂ ।
ಸಾರ ಸಮುದ್ರಮಂ ತೃಣಪಯ್ಯುಱಣದಿಂದಿಟಿಕೆಯ್ದು|ದಿವ್ಯಭಾ ॥
ಷಾರಸ ಪೂರ್ಣಮಂ ಶ್ರುತಪಯೋಧಿಯನೀಸಿದ ವರ್ಧಮಾನ ಭ ।
ಟ್ಟಾರಕರಂ ವಚಸ್ಸುರಭಿ ಚಂದನ ಚರ್ಚೆಗಳಿಂದಮರ್ಚಿಪೆಂ

ಕಂ ॥ ವಿಮಲ[1] ಶ್ರೌತಂ ಕೈವ
ಲ್ಯಮೆಂಬ ಸಂಕಲ್ಪಮಿನಿತೆ|ನೇರ್ಗಿಱಿಯಂ ವಿ ॥
ಶ್ವಮನಱಿವ ಮಹಿಮೆಯಿಂ ವ
ರ್ಧಮಾನ ಜಿನಪತಿಗೆ ವರ್ಧಮಾನ ಮುನೀಂದ್ರಂ ॥ ೧೫ ॥

ಮ ॥ ಪುರಿದಂತಾದುವು ಪೂವಿನಂಬು [2]ನಿನಿವಿಲ್ ನಿಸ್ಸಾರಮಾದತ್ತು|ಸೀ ।
ಕರಿವೋದತ್ತು ಮೃಣಾಳತಂತು ರಚಿತ ಜ್ಯಾಲೇಖೆ|ಮೀನಧ್ವಜಂ ॥
ಕೊರಗಿತ್ತಗ್ಗದ ಕಂತು [3]ಸೀದ ಕರಿಯಂತಾದಂ|ತಪೋರಾಜ್ಯ ತ ।
ತ್ಪರ ಯೋಗೀಶ್ವರ ಬಾಲಚಂದ್ರ ಮುನಿನಾಥ ಜ್ಞಾನನೇತ್ರಾಗ್ನಿಯಿಂ ॥ ೧೬ ॥

ಮ॥ಸ್ರ॥ ಅರವಿಂದ ಸ್ಮೇರವಕ್ತ್ರಸ್ಯಂ ತಿಳಿಪೆ ಹೃದಯ ಸಂಶುದ್ಧಿಯಂ|ಮಾನಸಂ ಶಾಂ ।
ತ ರಸಾಧೀನಂ ಸಮಾಧಾನಮನಱಿಪೆ|ತಪಸ್ತಪ್ತಮುತ್ತಪ್ತ ಕಾರ್ತ ॥
ಸ್ವರ [4]ಶಾಖಾ ಲೀಲೆಯಂ ಪಾಲಿಸೆ ತನು|ನಯನಂ ಕಾಟ್ಟಿರಂಮಾಡೆ ಕಾರು ।
ಣ್ಯ ರಸ ಸ್ರೋತಂಗಳಿಂ|ಲೋಕಮನೆಱಗಿಸಿದಂ ಬಾಲಚಂದ್ರ ವ್ರತೀಂದ್ರಂ॥೧೭॥

ಕಂ ॥ ಪ್ರಚುರ ಕಲಾನ್ವಿತರೆಕುಟಿಲ
ರಚಂಚಲರ್| ಶುದ್ಧಪಕ್ಷ ವೃತ್ತರ್|ದೋಷಾ ॥
ಪಚಯ ಪ್ರಕಾಶರೆನೆ ಬಾ
ಲಚಂದ್ರದೇವ ಪ್ರಭಾವಮೇನಚ್ಚರಿಯೋ ॥ ೧೮ ॥

1. ಶ್ರುತಂ ಬಹು. ಗ. ಘ.
2. ನನೆವಿಲ್ ಎಂದು ಮಲ್ಲಿನಾಥ ಪುರಾಣದ ಮೊದಲನೆಯಾಶ್ವಾಸದ ೧೯ನೆಯ ಪದ್ಯದಲ್ಲಿದೆ.
3. ಸೀದ ಗಜಂ. ಗ. ಘ. ೧೬ ನೆಯ ಪದ್ಯವು ಕ. ಘ. ಚ. ಗಳಲ್ಲಿಲ್ಲ.
4. ಶೋಭಾ. ಗ. ಘ

ಕಂ ॥ ಮೂವತ್ತಾಱುಂ ಗುಣದಿಂ
ಭಾವಜನಂಕಟ್ಟಿ [1]ಪಟ್ಟವೆಟ್ಟಿದರ್ ವೃಷ್ಟದಿಂ
ಭಾವಿಪೊಡೆ ಮೇಘಚಂದ್ರ
ತ್ರೈವಿದ್ಯರದೆಂತೊ ಶಾಂತರಸಮಂ ತಳೆದರ್

ಮ ॥ ಮುನಿನಾಥಂ ದಶಧರ್ಮಧಾರಿ।ದೃಢ ಷಟ್ತ್ರಿಂಶದ್ಗುಣಂ। ದಿವ್ಯ ಬಾ ।
ಣ ನಿಧಾನಂ।ನಿನಗಿಕ್ಷುಚಾಪಮುಳಿನೀ ಜ್ಯಾಸೂತ್ರಮೋರೊಂದೆ। ಪೂ
ವಿನ ಬಾಣಂಗ[2]ಳವಯ್ದೆ।ಹೀನನಧಿಕಂಗಾಕ್ಷೇಪಮಂ ಮಾಡ್ಬುದಾ
ವ ನಯಂ। ದರ್ಪಕ, ಮೇಘಚಂದ್ರ ಮುನಿಯೊಳ್ ಮಾಣ್ ನಿನ್ನ ದೋರ್ದ
ರ್ಪಮಂ॥

ಕಂ ॥ ಅಭಿನವ ಗಣಧರರೆನೆ ದಿ
ವ್ಯ ಭಾಷೆಯಂ ತಾಳ್ದಿ ಕುಮತಮಂ ತೂಳ್ದಿದರಂ ॥
[3]ಶುಭಕೀರ್ತಿ ದೇವರಂ ಸಕ
ಲ ಭುವನಜನ ಪೂಜ್ಯಪಾದರೆನ್ನದರೊಳರೇ ॥ ೨೧ ॥

ಚ ॥ ಮದನನ ದರ್ಪಮಂ ಕಿಡಿಸಿ ಮಾಣ್ದರೆ,ತಮ್ಮ ತಪಃಪ್ರಭಾವದಿಂ,
ಮದಯುತರಪ್ಪ ವಾದಿಗಳ ದರ್ಪಮನೋವದದ್ದಿರ್ಪ ತತ್ಸಭಾ ॥
ಸದರಭಿವರ್ಣಿಪಂತು ತಪದಿಂ ಶ್ರುತದಿಂ ಭುವನಪ್ರಸಿದ್ಧಿಗಾ ।
ಸ್ಪದರೆನಿಸಿರ್ದರೆಂಬೆನೆಱಿಯೆಂ ಪೊಗಳಲ್ ಶುಭಕೀರ್ತಿದೇವರಂ ॥ ೨೨ ॥

ಉ ॥ ಕೋಡಿಡೆ ವಾಸುಪೂಜ್ಯಮುನಿಯೊಳ್ ಮರುಳಾದಪೆ ಚಿತ್ತಜನ್ಮ ,ನೀಂ ।
ನೋಡ ನಿಜಾಪ್ತ ವರ್ಗದೆಳವಂ।ಮಲಯಾನಿಲನಸ್ಥಿರಂ ರಣ ॥
ಕ್ರೀಡೆಗೆ ನಿಲ್ವನೇ। ಪರಭೃತಂ ನಿನಗಪ್ಪನೆ। ಯುದ್ಧದೊಳ್ ಬಿಗು ।
ರ್ಕೋಡದೆ ಮಾಣ್ಬನೇ ಮೃಗಧರಂ।ಮಧುಪಂ ಪ್ರಥನಕ್ಕೆ ಯೋಗ್ಯನೇ॥೨೩॥

ಶಾ ॥ ಆವೊಂ ವಾದಿ ಕಥಾತ್ರಯ ಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿ ।
ದ್ಯಾವಷ್ಟಂಭಮನಪ್ಪುಕೆಯ್ದು ।ಪರವಾದಿ ಕ್ಷೋಣಿಭೃತ್ಪಕ್ಷಮಂ ॥
ದೇವೇಂದ್ರಂ ಕಡಿದಂದದಿಂದೆ ಕಡಿದಂ ಸ್ಯಾದ್ವಾದ ವಿದ್ಯಾಸ್ತ್ರದಿಂ ।
ತ್ರೈವಿದ್ಯಶ್ರುತಕೀರ್ತಿ ದಿವ್ಯಮುನಿವೋಲ್ ವಿಖ್ಯಾತಿಯಂ ತಾಳ್ದಿದಂ ॥ ೨೪ ॥

---

1. ಪಟ್ಟವೆಳದರ್. ಕ. ಖ.; ಪಟ್ಟವೇಳದ. ಗ. ಘ. ಚ. ೧೯ ನೆಯ ಪದ್ಯವು ಮಲ್ಲಿನಾಥ ಪುರಾಣದಲ್ಲಿ ಮೊದಲನೆಯಾಶ್ವಾಸದ ೨೧ ನೆಯ ಪದ್ಯವಾಗಿದೆ; ಮತ್ತು ಶ್ರವಣಬೆಳ್ಗೊಳದ ಶಾಸನದ ೪೨ ನೆಯ ಪುಟದಲ್ಲಿದೆ.
2. ಳುವೆಯ್ದೆ ). ಗ. ಘ. ೨೦ ನೆಯ ಪದ್ಯವು ಶ್ರ॥ ಬೆ॥ ಶಾ॥ ೩೪ ನೆಯ ಪುಟದಲ್ಲಿದೆ.
3. ಶುಭಚಂದ್ರ. ಕ. ಖ.
೨೪ ನೆಯ ಪದ್ಯವು ಶ್ರ॥ ಬೆ॥ ಶಾ॥ ೧೪ ನೆಯ ಪುಟದಲ್ಲಿದೆ.

ಕಂ ॥ ಶ್ರುತಕೀರ್ತಿ ತ್ರೈವಿದ್ಯ
ವ್ರತಿ ರಾಘವಪಾಂಡವೀಯಮುಮಂ ವಿಬುಧ ಚಮ ॥
ತ್ಕೃತಿಯೆನಿಸಿ ಗತಪ್ರತ್ಯಾ
ಗತದಿಂ ಪೇಳ್ದಿ[1]ಮಲಕೀರ್ತಿಯಂ ಪ್ರಕಟಿಸಿದಂ ॥ ೨೫ ॥

ಗಣಧರರಂ ಶ್ರುತದೊಳ್ ಚಾ
ರಣ ಋಷಿಯರನಮಲ ಚರಿತದೊಳ್ ಯೋಗಿಜನಾ ॥
ಗ್ರಣಿಗೆಣೆಯೆನ್ನದೆ ಮಿಕ್ಕರ
ನೆಣೆಯೆಂಬುದೆ ವೀರಣಂದಿ ಸೈದ್ಧಾಂತಿಕರೊಳ್ ॥ ೨೬ ॥

ಹರಿ ಹರ ಹಿರಣ್ಯಗರ್ಭರ
ನುರವಣೆಯಿಂ ಗೆಲ್ದ ಕಾಮನಂ ದೀಪ್ತ ತಪೋ ॥
ಭರದಿಂದುರಿಪಿದರೆನೆ ಬಿ
ತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ ॥ ೨೭ ।

ಮ॥ಸ್ರ॥ ಉಪದೇಶಂಗೆಯ್ದು ಕಾವ್ಯಚ್ಛಲದಿನಖಿಲ ಧರ್ಮಂಗಳಂ, ಲೋಕಮಂ ಧ ।
ರ್ಮಪಥ ಪ್ರಸ್ಥಾನದೊಳ್ ಯೋಜಿಸಿ, ಪರಮ ಪುರಾಣಂಗಳಂ ಪೇಳ್ದು ಕಲ್ಪಾಂ॥
ತ [2]ಪರೀತಖ್ಯಾತಿಯಂ, ತಾಳ್ದಿದ ಪರಮ ಕವಿಜ್ಯೇಷ್ಠರಾದರ್ ತದೀಯಾಂ ।
ಘ್ರಿಪ್ರಯೋಜಂಗಳ್ ಮದೀಯಾಶಯ ಮಣಿಭವನಕ್ಕಕ್ಕೆ ಪುಷ್ಪೋಪಹಾರಂ
॥ ೨೮ ॥

ಚ ॥ ಮೃದುಪದ [3]ಬಂಧಮಂ, ಬಗೆಯ ಭಾವದ ಮೆಯ್ಸಿರಿಯಂ, ರಸಪ್ರವಾ ।
ಹದ ನೆಲೆವೆರ್ಚಸೈರಬಿಱಿದು ಭಾವಿಸಿ ಭಾವಿಸಿ, ಮೆಚ್ಚಿ ಮೆಚ್ಚಿ, ಪೊ ॥
ಣ್ಮಿದ ಪುಲಕಂಗಳಿಂ, ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವ
ರ್ಷದಿನನುರಾಗಮಂ ಪಡೆವ ಸಜ್ಜನ ಸಂಸ್ತವಮೊಂದೆ ಸಾಲದೇ ॥ ೨೯ ॥

ಕಂ ॥ ವಾರಾಶಿಯ ಮಣಿಗಣಮಂ
ಕ್ರೂರ ಕುಳೀರಕ್ಕೆ ಸುಗಿದು ಸಾಂಯಾತ್ರಿಕನೇಂ ॥
ತಾರನೆ ಕೃತಿವೇಟಿಲ್ ಬಗೆ
ದಾರನೆ ಸತ್ಕವಿ ನಿಸರ್ಗ ದುರ್ಜನ ಭಯದಿಂ ೩೦

---

1. ಮಲಕೀರ್ತಿ. ಚ. ೨೫ನೆಯ ಪದ್ಯವು ಶ್ರಾ॥ಬೆ॥ ಶಾ॥ ೧೪ ನೆಯ ಪುಟದಲ್ಲಿದೆ.
2. ಪವಿತ್ರ. ಕ. ಖ. ಗ. ಘ. ೨೬, ೨೭ ನೆಯ ಪದ್ಯಗಳು ಶ್ರಾ॥ಬೆ॥ ಶಾ॥ ೧೪ ನೆಯ
3. ಪಾಕಮಂ. ಕ. ಖ. ಚ. [ಪುಟದಲ್ಲಿವೆ.

ಚ ॥ ವಿಕಸಿತಚಂಪಕ[1]ಕ್ಕೆಱಗಿ ಬಂಡುಣಲೊಲ್ಲದ ಚಂಚರೀಕ ನಾ
ಸಿಕಮನಶೇಷಮುಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌ ॥
ಶಿಕನಯನಂಗಳಂ ಸುಕವಿ ಕಾವ್ಯಮನಾಲಿಸಿ ಕಾಯ್ವ ದುರ್ಜನ
ಪ್ರಕರದ ಕರ್ಣ ಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ

ಪಡೆದಂ ರಜೋಧಿಕಂ ವಿಧಿ
ಪೆಡೆವಣಿಯುಂ ಫಣಿಯುಮಮೃತರಸಮುಂ ವಿಷಮುಂ ॥
ಕಡಲಂ ಸುೞಿಯುಂ ಮುೞಿಯುಂ
ಸಿಡಿಲಂ ಪಡೆದಂತೆ ಸುಜನರಂ ದುರ್ಜನರಂ

ಮ ॥ ರಸಮುಂ ಭಾವಮುನರ್ಥಮುಂ ರಚನೆಯುಂ ಕಾವ್ಯಜ್ಞರಾರಯ್ವುದು ಭಾ ।
ಸಿ ನಾಂದೀಪದ ನಾಯಕಾಭ್ಯುದಯ ಪರ್ಯಂತಂಬರಂ ಕೂಡೆ ಶೋ ॥
ಸಿ ನೋೞ್ಪೊಡೆ ರಘುವಂಶರಾಮ ಕೃತಿಯೊಳ್ ಪತ್ತೆಂಟು ಪದ್ಯಂಗಳಂ ।
ಪೊಸವೆಂ[2] ಯತ್ನದಿನಾದ್ಯರದ್ಯತನರೇಕಾರಾದೊಡಂ[3] ಪೇೞಿರೇ ॥ ೩೩ ॥

ಶಾ ॥ ರಾಗ ದ್ವೇಷ ನಿಬಂಧಮಪ್ಪ ಕೃತಿಯಂ ನಿರ್ಬಂಧದಿಂ ಬಂಧವಿಂ ।
ಬಾಗರ್ಥಂ ಪೊಸತಾಗೆ ಪೇೞ್ದಖಿಲಮುಂ ರಾಗಾವಿಲಂಮಾೞ್ಪ ವಿ ॥
ದ್ಯಾಗರ್ವಗ್ರಹ ಪೀಡಿತರ್ ಸ್ವಪರಬಾಧಾಹೇತುವಂ ದುಸ್ತರೋ ।
ದ್ಯೋಗ ಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮುಂ ॥ ೩೪ ॥

ಚ ॥ ಪೊಗೞ್ದು ಮಹಾತ್ಮರುಜ್ಜ್ವಲಮೆನಿಪ್ಪ ಗುಣಂಗಳನುಜ್ಜ್ವಲ ಪ್ರಸಿ ।
ದ್ಧಿಗೆ ಪೊಲನಾಗದುಜ್ಜ್ವಲಿಸಿದಪ್ರತಿಮ ಪ್ರತಿಭಾ ಪ್ರಭಾವದಿಂ ॥
ಪೊಗೞ್ದು ದುರಾತ್ಮರಂ ಮೊಗದೊಳಿರ್ದುಗುಳಂ ಪೊಱಗಿಕ್ಕಲಾದ ನಾ ।
ೞಿಗೆಯುಮಶೆತ್ತು ನಾಲಗೆಯೊಳೋದಿದವಂ ಕೃತಿಯೇ ಕೃತಾರ್ಥನೇ ॥ ೩೫ ॥

ಭೇದಿಸ ಭಾನು ಭಾಸು ತಮಮುಂ ತಱಸಂದು ಪದಾರ್ಥಮುಂ ಪಂ ।
ಛೇದಿಸಿ ಕಾಣ್ಬವೋಲ್ ಜನವಿಲೋಚನಮಪ್ರತಿಮ ಪ್ರಭಾವರ ॥
ಪ್ಪಾದಿ ಕವೀಶ್ವರರ್ ನಡೆದ ಪದ್ಧತಿಯಿಂ ತನಗರ್ಥಶುದ್ಧಿವೆ ।
ತ್ತಾದೊರೆಯಂಗಮೇಂ ನಡೆವುದಚ್ಚರಿಯೇ ಕವಿರಾಜ ವೀಥಿಯೊಳ್ ॥ ೩೬

1. ಕ್ಕೆಳಸಿಬಂದುಣ. ಕ. ಘ. ಗ. ಘ.
2. ಪೊಸವಂ. ಚ.
3. ರಾರೇನೆಂದೊಡಂ. ಗ. ಘ: ರಾರೇಕಾದೊಡಂ. ಚ. ೩೩ ನೆಯ ಪದ್ಯವು ಕ. ಖ. [ಗಳಲ್ಲಿಲ್ಲ.

ಉ॥ ನಾಯಕನನ್ಯನಾಗೆ ಕೃತಿ ವಿಶ್ರುತಮಾಗದುದಾತ್ತ ರಾಘವಂ ।
ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು ಕಾ॥
ಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತುಪಾ ।
ದೇಯಮೆನಿಕ್ಕುಮೇ ವಿಷಯಮೊಪ್ಪದೊಡಾವುದುಮೊಪ್ಪಲಾರ್ಕುಮೇ ॥ ೩೭ ॥

ಮ॥ ವಿಗತಾಷ್ಟಾದಶದೋಷರಪ್ಪ ಜಿನರುಂ ಜ್ಞಾನರ್ಧಿ ಸಂಪನ್ನರ ।
ಪ್ಪ ಗಣಾಧೀಶ್ವರರುಂ ಕ್ರಮಂಬಿಡದೆ ಮುನ್ನಂ ಪೇೞ್ದುದಂ ಶ್ರಾವ್ಯ ಕಾ ॥
ವ್ಯಗುಣ ಖ್ಯಾತಿ ನಿಮಿತ್ತಮಲ್ಲದೆ ಶುಭ[1]ಧ್ಯಾನಾರ್ಥಿಯೆಂ ಪೇೞಲಾಂ ।
ಬಗೆದಂದೆಂ ರಘುವಂಶ ರಾಮಕಥೆ ಪೇೞ್ವಂತನ್ನ ಸಾಮಾನ್ಯಮೇ ॥ ೩೮ ॥

ರವಿ ಮಾಱಿಟ್ಟೞ್ದಿರ್ದಂ ವಿಯತ್ತಳಮನಾಶಾಸೀಮೆಯಂ ದಾಂಟುವ ।
ನ್ನೆವರಂ ತನ್ನ ಕರಂಗಳಿಂದೆನೆ ಪೆಱಂಗೇಂ ವ್ಯೊಗ್ಗಮುನ್ನಂ ಗಣ ॥
ಪ್ರವರರ್ ಗೌತಮರಾದಿಯಾಗೆ ಮುನಿಮುಖ್ಯರ್ ಪೇೞ್ದಿರೆಂದಂದು ಮಾ ।
ನವ[2]ರೆಮ್ಮಂದಿಗರಾರ್ಪ್ಪರೇ ರಚಿಯಿಸಲ್ ರಾಮಾನ್ವಯ ಖ್ಯಾತಿಯಂ ॥೩೯॥

ಕಂ॥ ವಿಪುಲಾಚಲದೊಳ್ ವೀರ ಜಿ
ನ ಪಾರ್ಶ್ವದೊಳ್ ಗೌತಮಂ ಗಣಾಗ್ರಣಿ ಮಗಧಾ ॥
ಧಿಪನಱಿಯೆ ನೆಱೆಯೆ ಪೇೞ್ದುದ
ನಪೂರ್ವಮೆನೆ ರಾಮಕಥೆಯನಭಿವರ್ಣಿಸುವೆಂ ॥ ೪೦ ॥

ಜಗಮುಂ ಯುಗಮುಂ ಮನ್ವಾ
ದಿಗಳಂ ಕಾಲ ಸ್ವರೂಪಮುಂ ಜಿನರಂ ಚ ॥
ಕ್ರಿಗಳಂ ಹಲಧರ ಕೃಷ್ಣಾ
ದಿಗಳಂ ಶ್ರೀರಾಮ ಚರಿತದೊಳ್ ವರ್ಣಿಸುವೆಂ ॥ ೪೧ ॥

ಅದೆಂತೆನೆ—

ಮ॥ ಸ್ರ॥ ಕಡೆದೋಱೆತ್ತಿಲ್ಲೆನಿಪ್ಪಾಗಸದ ನಡುವೆ ವಾಯುತ್ರಯಂ ಸುತ್ತೆ ಪೇೞಾರ್ಗ್
ಪಡೆವನ್ನರ್ ತನ್ನನೆಂಬಗ್ಗಳಿಕೆವಡೆದಧಸ್ತಿರ್ಯಗೂರ್ಧ್ವ ತ್ರಿಭೇದಂ ॥
ಬಡೆದಾಱುಂ ದ್ರವ್ಯದಿಂ ಮೆಯ್ವಡೆದಖಿಲ ಜಗಂ ರಜ್ಜುವೀರೇೞುದ್ದಂ ।
ಬಡೆದತ್ತಾಪ್ಪಂ ಜಿನಂ ಕೇವಲ ವಿಪುಲ ತುಲಾಕೋಟಿಯಿಂ ತೂಗೆ ತನ್ನಂ ॥೪೨॥

---

1. ಧ್ಯಾನಾರ್ಥಿಯಿಂ. ಕ. ಖ. ಗ. ಘ.
2. ರೆಮ್ಮಂದಿಗ. ಕ. ಖ. ಘ. ಚ.; ರೇಂ ಮಂದಿಗ.

ಕಂ॥ ಅನತಿಶಯಮಾದುದಾ ತ್ರಿಭು
ವನ ಲಕ್ಷ್ಮಿಗೆ ಮಧ್ಯಮೆನಿಸೆ ಮಧ್ಯಮ ಲೋಕಂ ॥
ಜನಹೃದಯ ಹಾರಿ ಗಂಭೀ
ರ ನಾಭಿಮಂಡಲಮಿದೆನಿಸಿ ಜಂಬೂದ್ವೀಪಂ ॥ ೪೩ ॥

ಆ ಜಂಬೂದ್ವೀಪದ ನಟ್ಟನಡುವೆ—

ಕಂ॥ ಮುಟ್ಟಿದುದು ಮೊದಲ ದಿವಮಂ,
ಮೆಟ್ಟಿದುದೆರಡನೆಯ ವಜ್ರೆಯಂ, ಮೇಖಲೆಯಿಂ ॥
ದಿಟ್ಟಿಗೆ ಪೊಲ್ಲನಾದುದು ಪೊಂ
ಬೆಟ್ಟಂ, ಜಿನ ಜನ್ಮಸವನ ಮಣಿಮಯ[1]ಪಟ್ಟಂ ॥ ೪೪ ॥

ಆ ಕ್ಷೋಣೀಧರ ವಲ್ಲಭ
ದಕ್ಷಿಣ ದಿಙ್ಮುಖದೊಳೆಸೆದು ಶಶಿಖಂಡದವೋ ॥
ಲೀಕ್ಷಣ ಸುಖಮಯಮಿರ್ಪುದು
ದಕ್ಷಿಣ ಭರತ ತ್ರಿಖಂಡಧಾರ್ಯಾಖಂಡಂ ॥ ೪೫ ॥

ಅಲ್ಲಿ ವರ್ತಿಸುವುತ್ಸರ್ಪಣಾವಸರ್ಪಣ ಯುಗಸ್ವರೂಪ ನಿರೂಪಣ ವಿವಕ್ಷೆಯಿಂ ನಿಶ್ಚಯ ವ್ಯವಹಾರ ನಯದೊಳುಭಯಾತ್ಮಕಮೆನಿಪ್ಪ ಕಾಲಸ್ವರೂಪಮೆಂತೆನೆ—

ಕಂ॥ ಜೀವಾಜೀವ ದ್ರವ್ಯ ಪ
ರಾವರ್ತನ ಹೇತುವೃವರ್ತನಾ ಲಕ್ಷಣ ಸ ॥
ದ್ಭಾವಂ ನಿತ್ಯಮಮೂರ್ತಂ
ಕೇವಲ ಗಮ್ಯಂ, ಸದಾನುಮೇಯಂ, ಕಾಲಂ ॥ ೪೬ ॥

ಧಾರಾ ಹತಿಯಿಂ ಖಂಡಿಸ
ದಾರಂ ಜಿನನಾಥನುಪಮೆಯುಲುಪಿದರನೇಕಾ
ಕಾರಂ ಲೋಕಾಕಾರದೊ
ಳೋರಗಲವೆನಿಪ್ಪ ಕಾಲಚಕ್ರಮಮೋಘಂ ॥ ೪೭ ॥

ವ್ಯವಹಾರ ಕಾಲ ಭೇದಮ
ನ್ನವರಿವರೆತ್ತಱಿವರಾಪ್ತರಲ್ಲರ್ ಜಿನಪಂ ॥
ಗವರಲ್ಲದಣುವನಣು ದಾಂ
ಟುವ ಪೊಲ್ತಿಂ ಸಮಯಮೆಂದು ಪೇಳ್ದವನಾವಂ ॥ ೪೮ ॥

---

1. ಪೀಠಂ

ಕಂ ॥ ಸಮಯ ಸಮೂಹಮಸಂಖ್ಯಾ
ತಮಾದೊಡಾವಳಿಯೆನಿಕ್ಕುಮಥಾವಳಿ ಸಂಖ್ಯಾ ॥
ತಮೆನಿಪ್ಪುದಾದೊಡುಚ್ಛ್ವಾ
ಸಮೆನಿಕ್ಕುಂ! ಸ್ತೋಕಮಕ್ಕುಮೇೞುಚ್ಛ್ವಾಸಂ

ಸ್ತೋಕಂ ನೆಱೆದೇೞಾಗೆ [1]ಲ
ವಾಕಾಲಂ! ಮೂವತೆಂಟುವರೆಯೆನಿಪ [2]ಲವಾ ॥
ನೀಕಂ ನಾಳಿಕೆ।ತನ್ನಾ
ಳೀಕಾಲ ಯುಗಂ ಮುಹೂರ್ತಮೆನೆ ವರ್ತಿಸುಗುಂ ॥ ೫೦ ॥

ಸಮಯಂ ಕುಂದೆ ಮುಹೂರ್ತದೊ
ಳವೋಘಮಂತರ್ಮುಹೂರ್ತಮಕ್ಕುಂ। ಮೂವ ॥
ತ್ತು ಮುಹೂರ್ತಮಾಗೆ ದಿವಸಂ।
ಕ್ರಮದಿಂ ಪದಿನೈದು ದಿವಸಮಾದೊಡೆ ಪಕ್ಷಂ। ॥ ೫೧ ॥

ಮಾಸಂ ಪಕ್ಷದ್ವಿತಯಂ।
ಮಾಸದ್ವಯಮೊಂದೆ ಋತು।ಋತುತ್ರಯಮಯನ ॥
ನ್ಯಾಸಮಯನ ದ್ವಯಂ ಜಿನ
ಶಾಸನದೊಳ್ ವರ್ಷಮಯ್ದು ವರ್ಷದೊಳೆ ಯುಗಂ ॥ ೫೨ ॥

ಎರಡು ಯುಗಂ ದಶವರ್ಷಂ।
ತರತರದಿಂದಿಂತು ದಶಗುಣಂ ಪೆರ್ಚುತ್ತುಂ ॥
ಬರೆ ಪೆರ್ಚುವ ಕಾಲಕಲಾ
ಪರಿಸಂಖ್ಯೆಯನಾವನಱಿವನಾತನೆ ದೇವಂ ॥ ೫೩ ॥

[3]ತವುತಾರವು ನಿನ್ನೆಗಳುಂ।
ಸವೆಯುವು ನಾಳೆಗಳುಮಂದಱ[4]ನಿಳ್ಕೆ ನೆಱೆಯದು ಲೆ ॥
ಕ್ಕವಿಡಲ್। ಶಬ್ದಂ ನೆಱೆಯವು
ಪವಣಿಸಲೆನೆ ಕಂಡರಾರೊ ಕಾಲದ [5]ಪವಣಂ ॥ ೫೪ ॥

1. ಲತಾಕಾಲಂ. ಚ. 2. ಲತಾನೀಕಂ. ಚ.
3. ತವೆ ಸಾರವು. ಕ. ಖ. ಗ. ಘ.; ತವೆತಾರವು. ಚ.
4. ನೆಲೆ. ಕ. ಖ. ಗ. ಘ.
5. ಕಡೆಯಂ. ಗ. ಘ.

ಕಂ || ಅವಸರ್ಪಣದೊಳ್ ಕಾಲ
ವ್ಯವಸ್ಥೆ ಷಡ್ವಿಧಮೆನಿಕ್ಕುಮುತ್ಸರ್ಪಣದಂ ||
ತೆವೊಳ್ಳಲ್ಲಿ ಮೊದಲ ಕಾಲಂ
ಪ್ರವರ್ತಿಕುಂ ಸುಷಮಸುಷಮಮೆಂಬೀ ಪೆಸರಿಂ || ೫೫ ||

ಎರಡನೆಯ ಸುಷಮ ಕಾಲದ
ಪೊರೆಯೊಳ್ ಮೂಱನೆಯ ಸುಷಮದುಷ್ಷಮ ಕಾಲಂ ||
ಚರಿಯಿಸುಗುಂ ನಾಲ್ಕನೆಯದು
ಪರಿವಿಡಿಯಿಂದಪ್ಪುದಲ್ತೆ ದುಷ್ಷಮಸುಷಮಂ

ಅನುಸಂಧಾನಂಗಿಡದೈ
ದನೆಯದು ದುಷ್ಷಮಮೆನಿಪ್ಪ ಕಾಲಂ ಬಟಿಕಾ ||
ಱನೆಯದತಿದುಷ್ಷಮಂ ವ
ರ್ತನಮಿಂತೀ ತೆಱನೆ ರಹಟಘಟಿಕಾ ನ್ಯಾಯಂ ೫೭ ||

ತನು,ಭೋಗಾಯುಷ್ಯಂಗಳ್
ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ ||
ತನು,ಭೋಗಾಯುಷ್ಯಂಗಳ್
ಮನುಷ್ಯರೊಳ್ ಕುಂದುವಡೆಗುಮವಸರ್ಪಣದೊಳ್ || ೫೮ ||

ಎರಡು ಯುಗಮೊಂದೆ ಕಲ್ಪಂ,
ನಿರಂತರಂ [1]ಶುಕ್ಲ ಕೃಷ್ಣ ಪಕ್ಷಂಗಳವೋಲ್ ||
ಪರಿವರ್ತಿಸುಗುಂ, ತತ್ಕ
ಲ್ಪ[2]ರಾಜಿಗಾರಯ್ವೊಡಿಲ್ಲ ಮೊದಲುಂ ತುದಿಯುಂ || ೫೯ ||

[3]ಇಂತನಂತಾನಂತ ಕಲ್ಪ ಪರಿವರ್ತನಮಪ್ಪುಕೆಯ್ದ ಆರ್ಯಾಖಂಡದವಸರ್ಪಣದ ದಲ ಕಾಲದೊಳ್

ಸ್ರ|| ಸುರಭೂಜಂ ಜ್ಯೋತಿರಂಗಂ, ಬೆಳಗೆ ತಮದ ಮಾತಿಲ್ಲ, ಚಂದ್ರಾರ್ಕರುಂ,
ವೈಗರೆದಿರ್ಪರ್, ತೋಱುವ್ವಾಱುಂ ಮತು, ಪಗಲಿರ್ುಳೆಂಬೀ ವಿಭೇದಂಗಳಿಲ್ಲಾ ||
ಳರಸೆಂಬೀ ಪಂಬಲಿಲ್ಲ, ರ್ಜವರ ಮನುಜರೆಲ್ಲಂ, ಜರಾತಂಕಮಿಲ್ಲಾ,
ತುರಮಿಲ್ಲಾಶ್ಚರ್ಯಭೂತಂ ಸುಷಮಸುಷಮ ಕಾಲಸ್ವಭಾವ ಪ್ರಭಾವಂ || ೬೦ ||

1. ಕೃಷ್ಣ ಶುಕ್ಲ. ಚ.
2. ರಾಶಿ. ಕ. ಖ. ಗ. ಘ.
3. ಅಂತನಂತ. ಕ. ಖ.

ಕಂ ॥ ದಂಪತಿಗಳೆ ಪುಟ್ಟುವರಾ
ಗರ್ಗಂ ಪೊಲ್ಲಮೆ ಪುಟ್ಟದನತಿಶಯ ರೂಪ ಕಲಾ ॥
ಸಂಪನ್ನರೆನಿಸಿ ಸುರಗತಿ
ಯಂ ಪಡೆವರ್ ಕಡೆಯೊಳುಚಿತ ಭಾಷಾವೇಷರ್ ॥

ಅಪಮೃತ್ಯು ವಿರಹಿತಂ ಮೂ
ಜಿ ಪಳಿತಮಾಯುಷ್ಯಮುದ್ದಮಱುಸಾಸಿರ ಬಿ ॥
ಲ್ಲಪಸಾರಿತ ಮಲ ಮೂತ್ರಾ
ದಿ ಪರೀಷಹ ದೋಷಮುಪಘನ್ನಂ ದಂಪತಿಯಾ ॥ ೬೨ ॥

ಮಾಲಿನಿ ॥ ತ್ರಿದಿನದನಿತು ಕಾಲಕ್ಕೊರ್ಮೆ ಸಂಸಾರ ಸೌಖ್ಯ ।
ಪ್ರದಮಿದೆನಿಪ ದಿವ್ಯಾಹಾರಮಂ ಭೋಜನಾಂಗಂ ॥
ಬದರಫಲ ಸಮಾನಾಕಾರಮಂ ಕೊಟ್ಟುದಂ ಕೊಂ ।
[1]ಡುದಱ ಬಲ ವಿಲಾಸಂಬೆತ್ತು ಯುಗ್ಮಂಗಳಿರ್ಕುಂ ॥ ೬೩ ॥

ಕಂ ॥ ಸಿರಿಯ [2]ಮೊಗರಸದ ಪೊಸ ಮೈ
ಸಿರಿಯೆನಿಕುಂ ಪೂಗೊಳಂಗಳಾ ನೆಲನನಿತುಂ ॥
ಸುರಚಾಪದ ಬೆಳಸಿನ ಹರ
ವರಿಯೆನಿಕುಂ ಪಂಚರತ್ನರುಚಿ ವಲ್ಲರಿಯಿಂ ॥ ೬೪ ॥

ಚತುರಂಗುಲಮೆನಿಸಿದ ತರು
ಣ ತೃಣ ಗ್ರಾಸದೊಳೆ ತಣಿದು ತಿಳಿನೀರಂ ಪೀ ॥
ದರ್ತನುಕ್ರೀಡಾ ರತ ಮೃಗ
ತತಿಗಳ್ ದಂಪತಿಗಳಲ್ಲಿ ನಲಿಯುತ್ತಿರ್ಕುಂ ॥ ೬೫ ॥

ಮ ॥ ಕುಸುಮ ಸ್ರಗ್ವಸನಾನ್ನ ಪಾನ್ನವಿವಿಧಾತೋದ್ಯ ಪ್ರಕಾಶ ಪ್ರದೀ ।
ಪ ಸುಧಾಸದ್ಮ ವಿಚಿತ್ರ ಭಾಜನ ವಿಭೂಷಾನೀಕಮಂ ಕೊಟ್ಟು ಸಂ ॥
ತಸಮಂ ಮಾಡೆ ದಶಾಂಗ ಕಲ್ಪತರುಗಳ್ ಸ್ವರ್ಗಕ್ಕೆ ಸಂಸಾರ ಸಾ ।
ರ ಸುಖಕ್ಕಗ್ಗಳಮೆನ್ನದಾ ಪ್ರಥಮಕಾಲ ಶ್ರೀಯನೇವಣ್ಣಿಪೆಂ ॥ ೬೬ ॥

ಅಂತಾ ಕಾಲಮುತ್ತಮಭೋಗ ಭೂಮಿಸ್ಥಿತಿಯಿಂ ನಾಲ್ಕು ಕೋಟಿ ಕೋಟಿ ಸಾಗರೋಪಮಮುಮನುಕ್ರಮದಿಂ ಕುಂದುತ್ತುಂ ಬಂದನಂತರಂ ಸುಷಮಮೆಂಬೆರಡನೆಯ ಕಾಲದ ಮಧ್ಯಮಭೋಗ ಭೂಮಿಸ್ಥಿತಿಯೊಳ್—

---

1. ಡುದರ ಬಲ ನಿವಾಸಂಬೆತ್ತು. ಗ ; ಡದರ ಬಲದೆ ವಾಸಂಬೆತ್ತು. ಘ.
2. ಪೊಸಮೊಗದ ಮೈಸಿರಿ । ಸಿರಿ. ಕ. ಖ. ಗ. ಘ.

ಕಂ॥ ತನು ನಾಲ್ಸಾಸಿರ ವಿಲ್ಲಿಡಿ
ದೆನಿಕ್ಕುವಘಾಯುಷ್ಯಮೆರಡು ಪಳಿತೋಪಮಘಂ॥
ದಿನ ಮನುಜರಕ್ಷ ಫಲದನಿ
ತೆನಿಪ ರಸಾಯನಮನೆರಡು ದಿವಸಕ್ಕುಣ್ಬರ್ । ॥ ೬೭ ॥

ಮತ್ತಮಾಕಾಲಂ ಮೂಱು ಕೋಟಿ ಕೋಟಿ ಸಾಗರೋಪಮಂ ಕೞಿದಿಂಬೞಿಯಂ ಸುಷಮದುಷ್ಷಮಮೆಂಬ ಮೂಱನೆಯ ಕನಿಷ್ಠಭೋಗ ಭೂಮಿಸ್ಥಿತಿಯಾದುದಂದಿನ ಮಿಥುನಂಗಳ್—

ಕಂ॥ ಆಳವಿಯ ಲೆಕ್ಕಂ ತವೊಲ್
ಪಳಿತೋಪಮಮಾಗೆ।ದೇಹಮಿರ್ಛಾಸಿರ ವಿಲ್॥
ಬಳಿಯೆ। ಸುಧಾ[1]ಸಾರಮನಾ
ಮಳಕಫಲ ಪ್ರತಿಮಮಂ ದಿನಾಂತರಮುಣ್ಬರ್। ॥ ೬೮ ॥

ಮತ್ತಮಾ ಜಘನ್ಯ ಭೋಗ ಭೂಮಿಪ್ರವರ್ತನಮೆರಡು ಕೋಟಿ ಕೋಟಿ ಸಾಗರೋಪಮದ ಕಡೆಯ ಪಳಿತೋಪಮದೆಂಟನೆಯ ಭಾಗಮುಳಿಯೆ ಬೞಿಯಂ ಕುಲಧರಾವತಾರಮಕ್ಕುಮದೆಂತೆನೆ—

ಕಂ॥1ಅಜ್ಞಾನತ್ರಯ ರಹಿತರ್।
2ತ್ರಿಜ್ಞಾನ ಧರರ್ ವಿದೇಹದಿಂ ಬಂದಧಿಕ
ಪ್ರಜ್ಞರ್ ಪುಟ್ಟುವರೀ ನೆಲ
ನಾಜ್ಞಾಮುದ್ರಿತಮೆನಲ್ ಚತುರ್ದಶ ಮನುಗಳ್

ಅಲ್ಲಿ ಮೊದಲ ಕುಲಧರಂ ಪ್ರತಿಶ್ರುತಿಯೆಂಬಂ—

ಕಂ॥ ಬಲವರ್ಪ ಕಾಲಪುರುಷನ
ಕಲಧೌತ ವಿಶಾಲ ಕರ್ಣಕುಂಡಲ ಯುಗಮಂ॥
ಗೆಲೆವಂದು ಸೂರ್ಯ ಶಶಿ ಮಂ
ಡಲಮಾಸುರಮಾಗೆ ಗಗನದೆರಡುಂಕೆಲದೊಳ್ ॥ ೭೦ ॥

ಅವಂ ಕಾಣಲೊಡಮುಂದಿನ ಯುಗಳಮುತ್ಪಾತ ಯುಗಳಮೊಗೆದುದೆಂದು ಭೀತ್ರಮಪ್ಪುದುಂ।ಜ್ಯೋತಿರಂಗ ತರು ತೇಜೋಭಂಗದಿಂ ಕಾಣಲಾದುವಿವು ಚಂದ್ರಾದಿತ್ಯ ವಿಮಾನಂಗಳೆಂದುಮೊಳವಿಲ್ಲಿಂದಿತ್ತಲಿಂತೆ ತೋರ್ಕುಮಿವರ್ಕೆ ಬೆರ್ಚದಿರಿಮೆಂದವರ ಮನದ ಸಂಕೆಯುಂ ಕಳೆದನಾತನಿಂ ಬೞಿಯಮೆರಡನೆಯ ಕುಲಧರಂ ಸನ್ಮತಿಯೆಂಬಂ

ಕಂ ॥ ಕಿಸುಸಂಜೆ [1]ಪರ್ವೆ, ಮುರ್ವಿ
ರ್ವಿಸೆ, ತಾರಾನಿಕರಮೊಗೆಯೆ, ಬೆಚ್ಚುತ್ತಿರ್ದ ಬೆ ॥
ಕ್ಕಸಮುತ್ತರ್, ಭಯರಸದಿಂ
ದೆಸೆಗೆಟ್ಟರ್, ಕಂಡದೃಷ್ಟಪೂರ್ವಮನಾರ್ಯರ್ ॥ ೭೧ ॥

ಅಂತು ಭಯಸ್ಥರಾದಾರ್ಯರಂ ಕಂಡು ಸೂರ್ಯ ಕಿರಣಮಸ್ತಮಯ ಸಮಯದೊಳ್, ತಪ್ತ ತಪನೀಯಮಯಮೆನಿಪ್ಪ ನಿಷಧ ನಗದ ನೆಗೆದ ಕೆಂಬೊಳಪಿನೊಳ್ ಪಳಂಚೆ, ರಂಜಿಸಿದ ಸಂಜೆ, ಪರೆಯೆ, ಕವಿದ ಕತ್ತಲೆಯೊಡನೆ ತಾರಾ ಗ್ರಹ ನಕ್ಷತ್ರಂ ತಲೆದೋಱುಗುಮಿಲ್ಲಿಂದಿತ್ತಲಹೋರಾತ್ರ ಭೇದಮಕ್ಕುಮೆಂದವರ ಮನೋವಿಷಾದಮಂ ಕಳೆದಪ್ರಾತನಿಂ ಬೞಿಯಂ ಮೂಱನೆಯ ಕುಲಧರಂ ಕ್ಷೇಮಂಕರನೆಂಬಂ ಸಿಂಹ ಶರಭ ಶಾರ್ದೂಲ ವ್ಯಾಳ ಮೃಗ ಮಿಥುನಂಗಳ್ ಕಾಲಸ್ವಭಾವದಿಂ ಋಜುಸ್ವಭಾವಮಂ ಪತ್ತುವಿಟ್ಟು ವಿಷಮ ಸ್ವಭಾವಮನಪ್ಪುಕೆಯ್ವುದುಂ—

ಕಂ ॥ ವಿಪರೀತಮಾದ ಮೃಗಕುಲ
ದುಪದ್ರವಂ ನಿಮಗೆ ದಂಡ ಪಾಶಾದಿಗಳಿಂ ॥
ದಪಹರಿಸುಗುಮೆಂದಾರ್ಯ
ರ್ಗುಪದೇಶಂಗೆಯ್ದು ಕಳೆದನವರೆರ್ದೆವಟ್ಟಲಂ ॥ ೭೨ ॥

ಆತನಿಂ ಬೞಿಯಂ ನಾಲ್ಕನೆಯ ಕುಲಧರಂ ಕ್ಷೇಮಂಧರನೆಂಬನಂಧಕಾರಮಪ್ಪುದಂ ಪ್ರಜೆಗುಪದ್ರವಮಂ ಕ್ಷುದ್ರ ಪಶುಮೃಗ ಯುಗಂಗಳೊಡರಿಸೆ—

ಕಂ ॥ ರವಿರಶ್ಮಿಗಳಿಂ ಪುಟ್ಟಿಸಿ
ರವಿಕಾಂತೋಪಲ ಕೃಶಾನುವಂ, ಕೋೞ್ಮಿಗಮಂ ॥
ದಿವಸದವಸಾನ ಸಮಯದೊ
ಳವನಂಜಿ[2]ಸುವೊಂದುಪಾಯಮಂ ಪ್ರಜೆಗಿತ್ತಂ ॥ ೭೩ ॥

ಆತನಿಂ ಬೞಿಯಮಯ್ದನೆಯ ಕುಲಧರಂ ಸೀಮಂಕರನೆಂಬಂ ಕಲ್ಪತರುಗಳಲ್ಪಫಲದಂಗಳಾಗೆ ಭೋಗಭೂಮಿಜರ್ ತಮತಮಗೆ ನೆಱೆಯುವೆಂಬ ಸಂಕಲ್ಪದಿಂ—

ಕಂ ॥ ಓರೊರ್ವರ ಸುರ ತರುಗಳ
ನೋರೊರ್ವರಿವೆಮ್ಮವೆಂಬುದುಂ, ಪೂರ್ವ ಸ್ಥಿ ॥
ಕಾರ ವ್ಯವಸ್ಥೆ ನಿಲೆ, ಸಾ
ಧಾರಣ ಸೀಮಾವಿವಾದಮಂ ಬಾರಿಸಿದಂ ॥ ೭೪ ॥

---

1. ಪೆರ್ಚಿಮುರ್ವಿಸೆ. ಕ. ಖ. ; ಪೆರ್ಚಿನುರ್ವಿಸೆ। ನಿಸಿ. ಘ. ಙ.
2. ಸಿವೊಂ. ಕ. ಖ. ಗ. ಘ.

ಆತನಿಂ ಬೞಿಯಮೂಱನೆಯ ಕುಲಧರಂ ಸೀಮಂಧರನೆಂಬಂ—

ಕಂ ॥ ಕಲುಷಾಂಧರ್ ಸುರತರು ಸಂ
ಕುಲಮೆಮ್ಮವು ತಮ್ಮವೆಂದು ತಮ್ಮೊಳಗಾರ್ಯರ್ ॥
ತಲೆ[1]ಯೊತ್ತಿಕುಟ್ಟಿ ಪೊಯ್ವವ
ರಲವರಿಕೆಯೊಳಾದ ತೋಟಿಯಂ ತೊಲಗಿಸಿದಂ ॥ ೭೫ ॥

ಆತನಿಂ ಬೞಿಯಮೇೞನೆಯ ಕುಲಧರಂ ವಿಮಲವಾಹನನೆಂಬಂ—

ಕಂ ॥ ಅಡಿದಳಿರ್ಗೆ ಧರಾವಲಯಂ
ಕಡ್ಡುವೆಟ್ಟಿತ್ತಾಗೆ ನಡೆಯಲಱಿಯದೆ ಮನುಜರ್ ॥
ಸೆಡೆಯೆ ಹಯಾದಿಗಳಿಂದಂ
ನಡೆಯಿಸಿದಂ ಕಲಿಸಿ ವಾಹನಾರೋಹಣಮಂ ॥ ೭೬ ॥

ಆತನಿಂ ಬೞಿಯಮೆಂಟನೆಯ ಕುಲಧರಂ ಚಕ್ಷುಷ್ಮನೆಂಬನಂದಿನ ಮಿಥುನಂ ಸುತಮುಖ ವಿಲೋಕನದಿನತಿ ಕುತೂಹಲಮನಪ್ಪುಕೆಯ್ವುದುಂ—

ಮ॥ಸ್ರ॥ಯುಗಳಂಗಳ್ಪುಟ್ಟಿ ಸೀಂತಾಗುಳಿಸಿ ಪಿತೃಯುಗಂ ಸತ್ತು ಸಗ್ಗಂಗಳೊಳ್ ಪು
ಟ್ಟುಗುಮಿಲ್ಲಿಂ ಮುನ್ನಮೀತ್ತಲ್ ಕತಿಪಯ ದಿನದಿಂ ಮಕ್ಕಳಂ ನೋಡಿ ಸಾವೆ ॥
ಯ್ದುಗುಮಿಂತಾಗಳ್ ಕರ್ಮಭೂಮಿ ಸ್ಥಿತಿ ನೆಗಸಿದುದೆಂ ಬಾಲಕಾಲೋಕದಿಂ[2]ದು
ಬ್ಬೆಗಮಿಲ್ಲೆಂದಿಂತು ಕಾಲಸ್ಥಿತಿಯನವರ್ಗತಿ ವ್ಯಕ್ತಮಪ್ಪಂತು ಪೇೞ್ದಂ ॥ ೭೭ ॥

ಆತನಿಂ ಬೞಿಯಮೊಂಬತ್ತನೆಯ ಕುಲಧರಂ ಯಶಸ್ವಿಯೆಂಬಂ—

ಕಂ ॥ ಅವರಿವರೆನ್ನದೆ ಮುನ್ನಾ
ರ್ಯವೆಸರ್ ಪೆಸರಾಗೆ ಬೇಱೆವೇಱಂದಿನ ಮಾ ॥
ನವರ್ಗೆ ಪೆಸರಿಟ್ಟು ನಾಮ
ವ್ಯವಸ್ಥೆಯಂ ಪಡೆದು ಮನ್ನುಗಳೊಳ್ ಪೆಸರ್ವಡೆದಂ ॥ ೭೮ ॥

ಆತನಿಂ ಬೞಿಯಂ ಪತ್ತನೆಯ ಕುಲಧರನಭಿಚಂದ್ರನೆಂಬನಾ ಕಾಲದೊಳ್—

ಕಂ ॥ ಉಡುಪತಿಯುಮನುಡು ಗಣಮುಮ
ನೆಡೆಯುಡುಗದೆ ತೋಱಿ ತೋಱಿ ಕಿಱುಗೂಸುಗಳಂ ॥
ನುಡಿಗಲಿಸಿದಂ ತೊದಲ್ನುಡಿ
ಪಡೆವಿನೆಗಂ ಪಿತೃಯುಗಕ್ಕೆ ಕರ್ಣಾಮೃತಮಂ ॥ ೭೯ ॥

ಆತನಿಂ ಬೞಿಯಂ ಪನ್ನೊಂದನೆಯ ಕುಲಧರಂ ಚಂದ್ರಾಭನೆಂಬಂ—

---

1. ಪೊತ್ತಿಗುಟ್ಟಿಪೊಯ್ವಪ. ಗ. ಘ.
2. ದಟ್ಟಿಗ. ಚ.

ವ॥ಸ್ರ॥ ಇನನಂ ಶೀತಾಂಶುವಂ ಮಂಜಿನ ಮುಗಿಲ ಪೊಡರ್ಪಿಂ,ಜನಂ ಕಾಣದಾಕಂ।
ಪನಮಂ ಕೈಕೊಳ್ವುದುಂ,[1]ಬೆಳ್ಳನೆ ಬೆಳಗಲೊಡಂ ತೋಱುಗುಂ ಕರ್ಮಭೂ ವ ॥
ರ್ತನಮತ್ಯಾಸನ್ನಮೆಂದಾ ಸ್ಥಿತಿಯನಱಿಪಿ ಸಂತೈಸಿ ಸಂತಾಪ ವಿಚ್ಛೇ।
ದನಮಂ ತಂದಂ ಯಶಶ್ಚಂದ್ರಿಕೆಗೆ ನೆಱೆಯದೆಂಬನ್ನಮಾಶಾಂತರಾಳಂ ॥೮೦॥

ಆತನಿಂ ಬಱಿಯಂ ಪನ್ನೆರಡನೆಯ ಕುಲಧರಂ ಮರುದ್ದೇವನೆಂಬಂ—

ಕಂ ॥ ಸರಿ ಸುರಿಯೆ, ಮಿಂಚು ಮಿಳ್ಳಿಸೆ,
ಸುರಚಾಪಂ ನೆಗೆಯೆ, ಬೆಗಡುಗೊಂಡವರಂ ಸಂ ॥
ವರಿಸಿ ಘನಾಘನ ಸಮಯ -
ಸ್ವರೂಪಮಂ ತಿಳಿಪಿ ಕಳೆದನವರುಮ್ಮಳಮಂ. ॥ ೮೧ ॥

ಆತನಿಂ ಬಱಿಯಂ ಪದಿಮೂರನೆಯ ಕುಲಧರಂ ಪ್ರಸೇನಜಿತ್ತೆಂಬನಾ ಕಾಲದೊಳ್ ದಱಿಯುಮಳ್ದರಿಯುಂ ಕುಱಿಯುಂ ಕುತ್ತುಱುಂ ಬೆಟ್ಟಮುಂ ಘಟ್ಟಮುಮುಪನದಿಯುಮುಪಸಮುದ್ರಮುಂ ಪುಟ್ಟಿ ಸಲಿಲ[2]ಸಂಘಾತದಿನಪಮೃತ್ಯು ಪುಟ್ಟಿ ಮಾನಸರಸಹ್ಯ ಶೋಕಾನಲ ದಂದಹ್ಯಮಾನ ಮಾನಸರಾಗೆ—

ಕಂ ॥ ತ್ರವೆ ತೈಲಂ ದೀಪಂ ನಂ
ದುವಂತೆ, ಗಳಿಯಿಸೆ ನಿಷೇಕಮಱಿವರ್ ಮುನ್ನಂ.
ಪವನ ಪ್ರಹಾರದಿಂ ತೈ
ಲವುಳ್ಳೊಡಂ ನಂದುವಂತೆ ಪೊಂದುವರೀಗಳ್

ಬಡಿಕೊಳೆ ಕಾಯ್ಗುಂ ಪಣ್ಣುಂ
ತೊಡಂಬೆ ಪಱಿದುದಿರ್ವ ಮಾಟಿಸ್ಕೆಯಿಂ, ಕಿಱಿವಿರಿಯರ್ ॥
ಮಡಿವರನುಕ್ರಮದಿಂ। ಸಾ
ವೊಡರಿಸದೊಡರಿಸುವುದಲ್ತೆ ಕದಳೀಘಾತಂ ॥ ೮೩ ॥

ಉದಯಿಸಿ, ನಡುವಗಲಪ್ಪುದು
ಮುದಿತೋದಿತನಾಗಿ, ಸೂರ್ಯನಸ್ತಮಿಸುವವೋಲ್ ॥
ಉದಯಿಸಿ, ಜೌವನಮಂ ತಳೆ
ದೊದವಿದ ಮುಪ್ಪಿನೊಳೆ ಕಱಿವರಿಲ್ಲಿಂ ಬಱಿಯಂ ॥ ೮೪ ॥

---

1. ಬೆಳ್ಳನೆ. ಕ. ಖ. ಗ. ಘ.
2. ಸಂಪಾತದಿನಪಮೃತ್ಯು ಮರಣಮಾಗೆ: ಚ.

ಎಂದು ಕಾಲಸ್ವರೂಪ ನಿರೂಪಣಂಗೆಯ್ವವರ ಶೋಕ ಪ್ರತ್ಯನೀಕಮನದಿರ್ಪಿದಂ ಈ ಪೇಳ್ದ ಕುಲಧರ ಸಂಕ್ರುಳಕ್ಕೆ—

ಕಂ ॥ ಒಂದು ಪಳಿತದ ದಶಾಂಶದೊ
ಳೊಂದಂಶಂ ಮೊದಲ ಮನುಗೆ ಪದಿಮೂವರೊಳಂ ॥
ಪಿಂದಣವರ್ಗಳ ದಶಾಂಶದೊ
ಳೊಂದಂಶಂ ಮುಂದಣವರ್ಗೆ ಪರಮಾಯುಷ್ಯಂ ॥ ೮೫ ॥

ಸಾಸಿರಮುಮೆಂಟುನೂಱು ಶ
ರಾಸನಮೊರ್ವಂಗೆ ಪಂಚಶತ ಹೀನಂ ಬಾ॥
ಣಾಸನಮಿರ್ವರ್ಗರ್ೞಿಱಿದ
ಗೋರ್ೞಸರಿಕುಂ ಕ್ರಮದಿನುದ್ದಮಿರ್ಪತ್ತೈವಿಲ್ ॥ ೮೬ ॥

ಮನು ಚಂದ್ರಾಭಂ ಪಾಂಡುರ
ತನುವೆ ಯಶಸ್ವಿ ಪ್ರಸೇನಜಿಚ್ಚಕ್ಷುಷ್ಮರ್
ವನಜ ದಳಚ್ಛವಿಗಳ್ ಕಾಂ
ಚನ ರೋಚಿಷ್ಣುಗಳೆ ಮಿಕ್ಕ ಕುಲಧರರೆಲ್ಲಂ ॥ ೮೭ ॥

ಮಂತಣಮೇನಾದಿಯ ಮ
ನ್ವಂತರದೊಳಶೀತಿ[1]ಭಾಗಿ ಪಲ್ಯದೊಳ್ಳಾವ:
ನ್ವಂತರ [2]ದಶಮಾಂಶಂ ಮ
ನ್ವಂತರಮಕ್ಕುಂ ಪ್ರಸೇನಜಿತ್ಪರ್ಯಂತಂ ॥ ೮೮ ॥

ಕ್ರಮದಯ್ವರಿಂದೆ ಹಾ ದಂ
ಡಮುಯ್ವರುಂ ಮನುಗಳಿಂದೆ ಹಾಮಾದಂಡಂ
ಸಮನಿಸೆ ಹಾಮಾ ಧಿಗ್ದಂ
ಡಮುಯ್ವರಿಂದಾಯ್ತು ಭರತನಿಂ ತನ್ನುದಂಡ ॥ ೮೯ ॥

ತದನಂತರಂ ಪದಿನಾಲ್ಕನೆಯ ಕುಲಧರಂ ನಾಭಿರಾಜನೆಂಬಂ ಪಂಚವಿಂಶತ್ಯುತ್ತರ ಪಂಚಶತ ಶರಾಸನೋತ್ಸೇಧನುಂ ಪೂರ್ವಕೋಟಿ ಪರಮಾಯುಷ್ಯನುಮೆನಿಸಿ

ಕಂ ॥ ಮುನ್ನಿನ ಜನ್ಮದ ಸುಕೃತಮೆ
ಸನ್ನಿದಮಾಯ್ತೆನೆ ಮತಿ ಶ್ರುತಾವದಿಬೋಧಂ ॥
ತನ್ನೊಡನೆ ಪುಟ್ಟೆ ಪುಟ್ಟಿದ
ನೇನ್ನಾಭಿ ಯಶಸ್ಸನಾಭಿಯೋ ಕುಲಧರರೊಳ್ ॥ ೯೦ ॥

---

1. ಭಾಗ. ಚ. 2. ದಶಮಾಸಂ. ಕ. ಖ.

ಶಾ ॥ ಓರೊಂಥಂ ಕುಡುಗುಂ ದಶಾಂಗ ಸುರಭೂಜಂ ಬೇಟ್ಪುದಂ ಭೂತಲ।
ಕ್ಕಾರೇನಂ ಪಡೆದೆಂತು ಜೀವಿಸುವರೆಂಬೀ ಕರ್ಮಭೂ ವರ್ತನ ॥
ಪ್ರಾರಂಭೋಚಿತ ಜೀವನೋಪಕರಣೋಪಾಯಂಗಳಂ ತೋಱಿ ಕೊ।
ಟ್ಟಾರಾತೀಯ ಮನುಪ್ರಧಾನರನುದಾತ್ತಂ ನಾಭಿ ಕೇಳ್ಮಾಡಿದಂ

ಕಂ ॥ ಮೊದಲಿಗನವನೀಶ್ವರರೊಳ್
ಪದಿನಾಲ್ಕನೆಯಂ ಮನುಪ್ರಧಾನರೊಳೆಂಬೊ ॥
ಳ್ಪುದಿತೋದಿತಮೆನೆ ಮಹಿಮಾ
ಸ್ಪದನಾದಂ ನಾಭಿ ನಾಭಿಖಂಡನ ಕುಶಲಂ ॥

ಭುವನ ಜನ ಜೀವನೋಪಾ
ಯ ವೃತ್ತಿಯಂ ತೋಱಿಕೊಟ್ಟು ಕೃತ ಕೃಷಿಕರ್ಮ ॥
ವ್ಯವಹೃತಿಯಿಂ ಕೃತಯುಗಮೆಂ
ಬ ವಿಕಲ್ಪಮನಾದಿಕಾಲದೊಳ್ ಪುಟ್ಟಿಸಿದಂ ॥

ಪಿಂಡಿ ಪಿಱಿದಿಕ್ಷುರಸಮಂ
ಕೊಂಡುಪಯೋಗಿಸುವುಪಾಯಮಂ ತೋರ್ಪುದುಮಾ ॥
ದಂಡಧರ ವಂಶಮವನೀ
ಮಂಡನಮಿಕ್ಷ್ವಾಕುವಂಶಮೆನಿಸಿತ್ತಿಳೆಯೊಳ್ ॥

ಉ ॥ ನಯನಂ ನೀಲಸರೋಜಮಂ ಸೆಣಸುಗುಂ ವಕ್ಷಃಸ್ಥಳಂ ವಜ್ರವೇ
ದಿಯ[2] ನಾಳೆರ್ಪಿಸುಗುಂ ಮುಖಂ ಕಮಲಮಂ ಕೇಳ್ಮಾಡುಗುಂ ಕೈಗಳಾ।
ನೆಯ ಕೈಯಂ[3] ನಖಮಿಂದುವಂ ನಗುಗುವಾನನಮ್ಮಾಡುಗುಂ ಜಾನು ಬಾ
ಳೆಯ ಕಂಭಂಗಳನೆಂದೊಡೇವೊಗಳ್ವೆನೋ ಭಾನಾಭಿಯಂ ನಾಭಿಯಂ ॥೯೫॥

ಕಂ ॥ ಮರುದೇವಿಯೆ ತಕ್ಕಳ್ ನಾ
ಭಿರಾಜವಲ್ಲಭೆ [illegible] ನಿಸಲ್ ॥
ಮರುದೇವಿಗೆ—
ಭಿರಾಜ [illegible]

---

1. ವ್ಯ
2. ನಾ
3. ಸ

ಕಂ॥ ಪರಿಚಾರಿಕೆಯರ್ ಸುರಸುಂ
ದರಿಯರ್ ಪೊಡೆವಟ್ಟು ಪೂಜಿಪಂ ಪುರುಹೂತಂ ॥
ಪುರುದೇವನೆ ಪೆರ್ಮಗನೆನೆ
ಮರುದೇವಿಯ ಮಹಿಮೆ ಬಣ್ಣಿಸಲ್ಬಂದಪುದೇ ॥

ಅವತಂಸಂ ತನ್ನಗುಣ
ಸ್ತವನಂ ಧರೆಗೆನಿಸಿ ನಾಭಿರಾಜಂ, ಧರಣೀ ॥
ಯುವತಿಗೆ ಮರುದೇವಿಯೆ ದಲ್
ಸವತಿಯೆನಲ್ ಸುಖದಿನರಸುಗೆಯ್ಯುತ್ತಿರ್ದಂ ॥ ॥ ೯೮ ।

ಅಂತಿರ್ಪುದುಂ—

ಕಂ॥ ಮರುದೇವಿಗೆ ಪುಟ್ಟಿದಪಂ
ಪುರುದೇವಂ ಬಂದು ದಿವದಿನೆಂಬವಧಿಯಿನಾ ॥
ಪುರುಹೂತನಜಿಾದಯೋಧ್ಯಾ
ಪುರಮಂ ನಾಡಾಡಿಯಲ್ಲದಂತಿರೆ ಪಡೆದಂ ॥ ೯೯ ॥

ನಾಡೊಳ್ ಕೌಶಲದೇಶಮೊಂದೆ ಪುರದೊಳ್ ಸಾಕೇತಮೊಂದೀಕ್ಷಣ ।
ಕ್ರೀಡಾವಾಸಮೆನಲ್ ಪುರಂದರನಲಂಪಿಂ ನಾಭಿರಾಜಂಗವಂ ॥
ಮಾಡಿಟ್ಟಂ ಕರುವಿಟ್ಟು ಮನ್ಮಥನೆ ಬಣ್ಣಂಗೆಯ್ದನಂದೆಂದೊಡಾ।
ನಾಡಂ ಬೀಡುಮನೊಂದೆ ನಾಲಗೆಯೊಳಿನ್ನೇವಣ್ಣಿಪಂ ಬಣ್ಣಿಪಂ ॥ ೧೦೦ ॥

ಕಂ॥ ಬೀಡು ಸುಕೃತಕ್ಕೆ ಚೆಲ್ವಿ
ಗಾಡುಂಬೊಲನಾಶ್ರಯಂ ಸ ಖಕ್ಕನೆ ಪೆಜತೇಂ ॥
ನಾಡಾಡಿಯ ನಾಡಲ್ಲದು
ನಾಡೊಳಗುತ್ಕೃಷ್ಟಮಲ್ತೆ ಕೌಶಲದೇಶಂ ॥ ೧೦೧ ॥

ಪರ್ವತಸಾನು ಸರ್ವಮಣಿಯಿಂ ... ಮಂಗಳಿಂ ।
ದುರ್ವರೆ ಸರ್ವಸಸ್ಯದೊದವಿ ... ಲಂ ॥
ಸರ್ವಋತು ಪ್ರವೇಶದಿ ... ।
ಸರ್ವಗುಣಂಗಳಿಂದೆಸೆ ॥ ೧೦೨ ॥

ಅಮರ್ದಂ ಮ ... ಬೀಜ ತೋ ।
ಳ ಮೊದಲ್ಗೆ ... ತೊ

ಯಮುನಾಲೋಕನಮಾತ್ರದಿಂ ಮಱೆದು ಪಾಂಥಶ್ರೇಣಿ ನೀರಟ್ಟೆಯಂ,
ಶ್ರಮಮಂ[1] ತೀರದ ಮೆಯ್ಯಂ ಪ್ರಪಾಂಗನೆಯರಂ ಕಣ್ಗಾವುದಾದೇಶದೊಳ್ ॥೧೦೩॥

ಕಂ॥ ತೀವಿದ ತಿಳಿಗೊಳದಿಂ, ಪೊ
ನ್ಗಾವರಿಗೊಳದಿಂದರಲ್ವ ನೆಯ್ದಿಲ್ಗೊಳದಿಂ,
ದ್ಗಾವಲ್ಗೊಳದಿಂ, ಚೆಲ್ವಿಂ
ಗಾವಾಸಮೆನಿಪ್ಪುವೊಪ್ಪುವಾ ನಾಡೂರ್ಗಳ್ ॥ ೧೦೪ ॥

ಕಲಕಂಠಕೃತನುಗ್ರಚಾ
ಪಲತಾರೋಹಣ ವಿಕಾರವಳ್ಗಾಪ್ರ ಕುಜಾ
ವಲಿಗೆ ಮಧುವಿಕೃತಿ ಮಾನವ
ಕುಲಕ್ಕೆ ಕನಸಿನೊಳಮಿಂತಿವಿಲ್ಲಾ ನಾಡೊಳ್

ಸಮರತ ಸಂಜನಿತ ಪರಿ
ಶ್ರಮಮಂ ದಂಪತಿಗೆ ಕಳೆದು ಮಗುಳ್ದುಂ ರತಿರಾ
ಗಮ[2]ನಿರದೊದವಿಪುದು ನವೋ
ದ್ಗಮ ಪರಿಮಳವಿಷಯಮೆನಿಪ ವಿಷಯಸಮೀರಂ

ಆ ವಿಷಯವಿಲಾಸಿನಿಗೆ ಮಣಿಮಯ ಮುಕುರಮೆನಿಸಿ-

[3]ಕಣ್ಣೆಮೆಯಿಕ್ಕದಾಱು ಋತುವುಂ ಬನಮಂ ಸಿರಿ ಕೆಯ್ವೊಲಂಗಳಂ
ಕಣ್ಣೆಮೆಯಿಕ್ಕದಲ್ಲಿ ಪಥಿಕರ್ಗಿಳಿಸೋವಬಲಾಜನಂಗಳಂ ।
ಕಣ್ಣೆಮೆಯಿಕ್ಕದೀಕ್ಷಿಸೆ ಪುರಂ, ಸುರಲೋಕಮನೇಕೆ ಱಿಕ್ಕಟಂ ।
ಕಣ್ಣೆಮೆಯಿಕ್ಕದೆಂದು ನಗುಗುಂ ನಿಜರತ್ನಗೃಹಾಂಶು ಜಾಲದಿಂ ॥ ೧೦೭ ॥

ಆ ಪುರದುಪವನದೊಳಸಮಶರ ಕಿಶೋರಕೇಸರಿ ಗಜಱಿ ಗರ್ಜಿಸದ ಕೃತಕಗಿರಿಗಳಿಲ್ಲ, ಮನೋಜರಾಜ ವಿಜಯಕೇತನ ಶಫರ ಸಂಚಾರಮಿಲ್ಲದ ಸರೋವರಂಗಳಿಲ್ಲ, ರತಿಪತಿಯ ಪೂಗಣೆಯ ದೊಣೆಗೆದಱದ ಪೂದೋಂಟಮಿಲ್ಲ, ಕುಸುಮಶರ ಕೋಪ ಶಿಖಿಯನುದ್ದಮುರಿಪದ ತಣ್ಗಾಳಿಯಿಲ್ಲ, ರತಿಯ ಲಾವಣ್ಯರಸಪ್ರವಾಹದಿಂ ಪಲ್ಲವಿಸದ

---

1. ಮೆಯ್ಯಿಂ ಗ. ಘ.
2. ನೋಲಗಿಸುವುದು. ಚ.
3. ಕಣ್ಣೆಮೆಯಿಕ್ಕವಾಱು ಋತುವುಂ ಬನದಿಂ ಸಿರಿಕೆಯ್ವೊಲಂಗಳಿಂ
ಕಣ್ಣೆಮೆಯಿಕ್ಕಳಲ್ಲಿ ಪಥಿಕರ್ಗಿಳಿಸೋವಬಲಾಜನಂಗಳಿಂ।
ಕಣ್ಣೆಮೆಯಿಕ್ಕಲೀಕ್ಷಿಸೆ. ಕ. ಖ. ಗ. ಘ.

ಚೂತವನಮಿಲ್ಲ, ಕಾಮರಾಗ ರಸಮಂ ಕಾಬ್ಸಿರಂ ಮಾಡದಶೋಕವನಮಿಲ್ಲ, ಕಂದ
ರ್ಪ ದಂದಶೂಕಮಾವರಿಸದ ಚಂದನ ನಂದನಂಗಳಿಲ್ಲ, ಮನೋಜರಾಜ ನೀರಾ
ದೀಪಕಲಿಕೆಯಿಂ ಬೆಳಗದ ಚಂಪಕವನಮಿಲ್ಲ, ಪಂಚಬಾಣ[1] ಕೃಪಾಣ ಪಟ್ಟದೊ
ಕೊನೆಯ ಬಿಣ್ಪಿಂ ತೊನೆದು ತೂಗದ ಪೂಗವನಮಿಲ್ಲ, ಮದನಮೋಹಾಂಧಕಾ
ಕೆದಱದ ತಮಾಲವನಮಿಲ್ಲ, ರತಿಯ ಮಧುಪಾನಗೋಷ್ಠಿಯ ಸುವರ್ಣಚಷಕವ
ಕರ್ಣಿಸದ ಕರ್ಣಿಕಾರಮಿಲ್ಲ, ಮಕರಧ್ವಜ ವಿಜಯಲಕ್ಷ್ಮಿ ನಲಿದು ನರ್ತಿಸದ
ಸದ[2] ಮಂದವನದ ವೇದಿಕೆಗಳಿಲ್ಲ, ಮಧುಮಹಾದೇವಿ ಪಟ್ಟಂಗಟ್ಟಿದ ಪೂಭಾಗ
ಳಿಲ್ಲ, ಕಂತು ದಂತಿ ವಿಸಟಂಬರಿಯದೇಲಾವನ ವೀಧಿಗಳಿಲ್ಲ, ಮದನ ಜಗದ್ವಶೀಕರಣ
ತಿಲಕಮೆನಿಸದ ತಿಲಕವನಮಿಲ್ಲ, ಮನೋಭವ ವಿಜಯಮಂ ನಿರಾಕುಳಂಮಾಡದ
ವಕುಳವನಮಿಲ್ಲ, ಚಿತ್ತಜನ ಕೀರ್ತಿಲತೆಯ ಬಿತ್ತು ಮೊದಲೆನಿಸದ ವಿಕಚ ವಿಚಕಿಲ
ವಲ್ಲರಿಗಳಿಲ್ಲ, ಪುಷ್ಪಶರ ವಶೀಕರಣಮಂತ್ರಮಂ ಪದಂಗುಟ್ಟದ ಕೋಗಿಲೆಗಳಿಲ್ಲ, ಸ್ಮರನ
ಬಿರುದಿನಂಕಮಾಲೆಯನೋದದರಗಿಳಿಗಳಿಲ್ಲ, ಅಂತಃಕರಣ ಸಮುದ್ಭವಚಾಪ ಟಂಕೃತ
ಮನಲಂಕರಿಸದ ಮಧುಕರಂಗಳಿಲ್ಲ, ಜಲದೇವತೆಗೆ ಕಲಕೂಜನಮನುಪದೇಶಂಗೆ
ಯ್ಯದ ಸಾರಸಂಗಳಿಲ್ಲ, ಮನ್ಮಥಂಗೆ ಪಥಿಕರಂ ಪಿಸುಣ್ಬೇಱದ ಪಾರಾವತಂಗಳಿಲ್ಲ,
ದರ್ಪಕನ ದರ್ಪಾವಲೇಪಮನುದ್ದೀಪನಂಮಾಡದ ರಥಾಂಗಮಿಥುನಂಗಳಿಲ್ಲ, ವನದೇ
ವತೆಗೆ ಪೀಲಿದಟ್ಟಿಯನೆತ್ತದ ಸೋಗೆನವಿಲ್ಗಳಿಲ್ಲ. ಅದಲ್ಲದೆಯುಂ

ಉ॥ ಪೌರವನಂಗಳೊಳ್ ಕುಸುಮ ಸೌರಭ ಸಾರ ಸಮೀರ ಮಂದ ಸಂ।
ಚಾರಮೆ ಪಾಂಥರಳ್ಕೆದೆಯನಾರ್ದಿಸುವಂಗಜ ಬಾಣಮೋಕ್ಷ ಹುಂ॥
ಕಾರಮೆ ಬಂಡನುಂಡು ನನೆಗೊಂಬುಗಳಿಂ ಮೊರೆದೇಳ್ವ ಭೃಂಗರುಂ।
ಕಾರಮೆ ಮಾಳ್ಪುದಾರ ಬಗೆಗಂ ಮದನೋತ್ಸವ ಹರ್ಷಭಾರಮಂ ॥ ೧೦೮ ॥

ಮ॥ ಸ್ರ॥ ಸಹಕಾರಾಶೋಕ ರಂಭಾ ತಿಲಕ ವಕುಳ ಪುನ್ನಾಗ ಕರ್ಪೂರವಲ್ಲೀ।
ಗೃಹದೊಳ್, ಬಾಲಪ್ರವಾಳಾಸ್ತರಣ ದರದಳನ್ಮಲ್ಲಿಕಾತಲ್ಪ ಶೋಭಾ॥
ವಹದೊಳ್, ಮೆಯ್ವೆರ್ಚೆ ನಾನಾ ವನವಿಹಗ ರವಂ ತಮ್ಮ ಸಂಭೋಗಕೇಳೀ।
ಕುಹರವ್ಯಾಪಾರದಿಂದಿರ್ಪುದು ಪುರವನದೊಳ್ ವಾರನಾರೀಕದಂಬಂ ॥ ೧೦೯ ॥

ಉ॥ ಪದೆಪಂ ಬೀಱುಗುಮಾಪುರೋಪವನದೊಳ್ ಪೆಣ್ದುಂಬಿವಿಂಡಿಂ ಕಱಂ।
ಗಿದ ನೆಯ್ದಿಲ್ಗೊಳನಂಚೆವಿಂಡನೊಳಕೊಂಡಂಭೋಜಷಂಡಂ ತಳ॥
ರ್ಪುದಿದೇಲಾವನಮೊಡ್ಡುಗೊಂಡ ಕದಳೀಕಾಂಡಂ ತರಂಗೊಂಡ ಚೂ
ತದ ಸಾಲ್ ಚಂದನವೀಧಿ ಸಂಪಗೆಯ ಜೊಂಪಂ ಮಾಧವೀಮಂಟಪಂ॥ ೧೧೦ ॥

1. ನಿಷಾಣ. ಕ. ಖ.
2. ಮಂಡಪ. ಕ. ಖ.

ಕಂ॥ ವನಜ ವನರಾಜಿ ಕೂಜ
ದ್ವನವಿಹಗವಿರಾಜಿ ಪುರ ಬಹಿಃಪುರ
ವನದೊದವು ರತಿಯ ಪೊಸಜಾ
ವನದೊದವೆನೆ ನೆಱೆಯೆ ಪೊಗೞಲಾವಂ ನೆಱೆವಂ ॥ ೧೧೧ ॥

ಬೇರ್ವಿಡಿದು ಕಾಯ್ತು ಪಲಸೆಳ
ನೀರ್ವೊನಲಂ ಕಱೆವ ತೆಂಗು [1]ಪೊಂಬಾಳೆಗಳಿಂ ॥
ಸೋರ್ವ್ವಡಕೆಯ ಸಸಿ ಬೆಳಗಂ
ಪೇರ್ವೆಲೆವಳ್ಳಿಗಳೆ ಸೊಗಯಿಕುಂ ಪುರವನದೊಳ್ ॥ ೧೧೨ ॥

ಅಂತು ಕಂತುಗಜ ವಿಹಾರವೀಥಿಯುಂ ಸುಕೃತ ಸುರಭಿ ಸಂಚಾರಕ್ಷೇತ್ರಮುಂ ನೇತ್ರಪುತ್ರಿಕಾ ಪ್ರಸಾಧನ ಸದನಮುಂ ಲಕ್ಷ್ಮೀಲೀಲಾಲಾಸ್ಯ ಮಾಂಗಲ್ಯರಂಗಮುಮೆನಿಪ ಪುರ ಬಹಿಃಪುರದಿಂದೊಳಗೆ–

ಕಂ॥ ಬಡಬಾನಲಂಗೆ ಸೆಡೆದಿಂ
ಗಡಲೆ ಸರಣ್ಬೊಕ್ಕುದಮರಶೈಲಮನೆಂಬೀ ॥
ಪಡೆಮಾತಂ ನೀರ್ಗಾದಿಗೆ
ಪಡೆಯುತ್ತುಂ ಪೊನ್ನ ಕೋಂಟೆಯುಂ ಬಳಸಿರ್ಕುಂ ॥ ೧೧೩ ॥

ಚೆಂಬೊನ್ನ ಕೋಂಟೆ ಪರಿವೇ
ಷಂಬೆತ್ತೆಳನೇಸಱಂತೆ ನೀರ್ಗಾದಿಗೆಯುಂ ॥
ತುಂಬಿದ ನೀರ್ವೂಗಳ ಪಲ
ವುಂ ಬಣ್ಣದಿನಾರ ಕಣ್ಣುಮಂ ಸೆಱೆಗೆಯ್ಗುಂ ॥ ೧೧೪ ॥

ಮಂದರ ಕಂದರಮೆಂಬೀ
ಸಂದೆಗದಿಂ ಮೀಱಿ ಸೂತನಂ ಕೀಱಿ ನಿಜ ॥
ಸ್ಯಂದನಮಂ ಕೋಂಟೆಗೆ ಭರ
ದಿಂದೆೞೆಗುಂ ಕರ್ಚಿ ಕೀೞಿನಿನನ ಹಯಂಗ ॥ ೧೧೫ ॥

ಮುಗಿಲಟ್ಟಳೆಗಳ ಕೆಲದಂ
ಬುಗಂಡಿಯಿಂ ನುಸುಳ್ದು ನಡೆವ ದಿನಕರನ ಹಯಂ ॥
ಗಗನಾಧ್ವ ಖೇದಮಂ ಪಟ್ಟಿ
ಯಿಗೆಗಳ ತಣ್ಣೆಲರ ತೀಟದಿಂ [2]ತೊಲಗಿಸುಗುಂ ॥ ॥ ೧೧೬ ॥

---

1. ಪೊಂಬಳೆಯುಮದಂ, ಕ. ಖ. ಚ.
2. ದಾಱಿ ಚ.

ಅಂತಲಂಘ್ಯಮುಮಭ್ರಂಕಷ - ವಿವಿಧಾಟ್ಟಾಲಕಮುಮನಿಪ ಕನಕ ಪ್ರಾಕಾರ ದಿಂದೊಳಗೆ—

ಚ ॥ ಭರೆದ ವಿಚಿತ್ರಪತ್ರನಿಚಯಂ ನಿಜಲೋಚನ ಚಂದ್ರಿಕಾಪರಂ ।
ಪರೆ[1]ನಡೆನಟ್ಟು ಸೋರ್ವ ಶಶಿಕಾಂತದ ಕೇರ್ಗಳ ನೀರ್ಪೊನಲ್ಗಳಿಂ ॥
ಪರೆಯೆ ಕನಲ್ದು ಕಣ್ಗೆ ಕಿಸುಗಣ್ಚಿ ಹರಿನ್ಮಣಿಭಿತ್ತಿಭಾಗದೊಳ್ ।
ಪುರವನಿತಾಜನಂ ಬರೆಯುತಿರ್ಪುದಭಂಗುರ ಪತ್ರಭಂಗಮಂ ॥ ೧೧೭ ॥

ಒದವಿದ ತಮ್ಮ ಕಂದಳದ ಕೆಂಪುಗಳಿಂ ಗಿಳಿ ಪದ್ಮರಾಗ ರ ।
ತ್ನದ ಗಿಳಿಯಂತೆ ತಮ್ಮ ನಯನಾಂಚಲ ಚಂದ್ರಿಕೆಯಿಂ ನವೇಂದುಕಾ ॥
ನ್ತದ ಗಿಳಿಯಂತೆ ಕೌತುಕಮನಾಕ್ಷಣದೊಳ್ ಕುಡೆ ನೋಡಿ ನೋಡಿ ಮಾ
ಯದ ಗಿಳಿಯೆಂದೆ ಪಂಜರದೊಳಿಕ್ಕುವರೋದಿಸಲಂಜಿ ಮುಗ್ಧೆಯರ್ ॥ ೧೧೮ ॥

ಲಲಿತವೃತ್ತಂ ॥ ತುಂಗ ಕುಚಕುಂಭಯುಗಮಂಗಜಗಜಂ ಮೊಗವಡಂಗಳೆದುದೆನಿಸೆ ವಿಗತಾಂಚಲಮಪಾಂಗಂ ।
ವಿಾಂಗೆಳಸುವಿಂದುಕಿರಣಂಗಳೆನೆ ಕರ್ಣಯುಗಳಂಗಳವತಂಸ ಮಣಿಯಂ ಬಳಸೆ ಪೆರ್ಮೋರ್ ॥
ದಂಗಳಿರೆ ನೊಸಲೊಳೆಳದಿಂಗಳಮರ್ದಿನ ಪನಿಯ ಪಾಂಗನೊಳಕೊಂಡು ನಳಿ ತೋಳ್ ನಲಿದು ನೀಳ್ದು
ತ್ತುಂಗಭವ ಪಾಶಮೆನೆ ಸಿಂಗದರೆವುದು ಘಟಿಯಂ ಗಡಣದಿಂ ಘಟ್ಟವಳ್ತಿಯರ ತಂಡಂ ॥ ೧೧೯ ॥

ಮ॥ ಸ್ರ॥ ನಱುಸುಯ್ಗಂ ಮಾಲೆಗಂ ಸೂಱೆಱೆದೆಱಗುವಿನಂ ತುಂಬಿಗಳ್ ನೋಡಿದರ್ಪೆ ।
ಯ್ಮೆಱೆವನ್ನಂ ಬಾಹುಮೂಲಂ ಪೊಗರನುಗುಳ್ವಿನಂ ಕಣ್ಮಲರ್ ಬಳ್ಳಿಮಿಂಚಂ ॥
ಕೞೆವನ್ನಂ ಮಾಲೆವೂವಂ ನೆಗಪಿ ಸೊಗಯಿಕುಂ ನೀಱೆರೊಳ್ ಪುಷ್ಪಚಾಪಂ ।
ಗುಱಿಯೇಸಂ ತೋಱಲೆಂಬಂ ಪೊದ್ರೆಗೆದಱಿದವೋಲ್ ಪುಷ್ಪಲಾವೀಕದಂಬಂ ॥

ಚಂ ॥ ಸುರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ
ವರುಣನ ಮುತ್ತಿನೆಕ್ಕಸರಮುಂ ಗರುಡಾಂಗದ ಪಚ್ಚೆಯುಂ ಫಣೀ ॥
ಶ್ವರ ಫಣರತ್ನಮುಂ ಬೆಲೆಗೆ ಬಿಣ್ಣಿದುವಲ್ಲಮೆನಿಪ್ಪ[2] ಪೆಂಪಿನಿಂ ।
ದೆರಡನೆಯಬ್ಧಿರತ್ನವಸರಂ ಗೆಲೆವಂದುದು ರೋಹಣಾದ್ರಿಯಂ ॥ ೧೨೧ ॥

---

118, 119—ಈ ಪದ್ಯಗಳು ಗ, ಘ ಗಳಲ್ಲಿಲ್ಲ.
1. ನಡೆವಟ್ಟು. ಕ. ಖ. (ಗಳವಟ್ಟು. ಘ.)
2. ರತ್ನದಿಂದೆರಡನೆಯಬ್ಧಿಯನ್ನ.

ಮ॥ಸ್ರ॥ ವನಜಂ ಪಂಕ್ರಾಂಕಿತಂ ಗೋವಳಿತಿಯ ಮೊಲೆಯೊತ್ತಿಂಗೆ ಘಕ್ಕಾಯ್ತು ಗೋವ
ರ್ಧನ ವಕ್ಷೋಭಾಗವೌರ್ವಜ್ವಲನ ಬಹುಲ ಧೂಮಾಕುಲಂ ಪಾಲ ಮುನ್ನೀ ॥
ರ್ನಪಾಯಸ್ಥಾನಮೆಂದಾ ಪುರವರದ ವಣಿಗ್ವಾಟ ಹರ್ಮ್ಯಂಗಳೊಳ್ಮು ।
ನ್ನಿನ ಸಂಚಾರಸ್ವಭಾವಂ ಪಱಿಪಡೆ ಪದೆಪಿಂ ಲಕ್ಷ್ಮಿ ನಿಶ್ಚಿಂತಮಿರ್ಪಳ್ ॥೧೨೩॥

ಕಂ॥ ದಿವಿಜ ವಿಮಾನಂ ಮಾಡದ
ಪೆವು ಮಾಡಿದುವೆಂಬ ಭೇದಮಲ್ಲದೆ ಚೆಲ್ವಿಂ ॥
ನವರತ್ನರಚನೆಯಿಂ ಭೇ
ದವಿಲ್ಲ ತತ್ಪುರದ ಭವನಮೆನಿತನಿತಱೊಳಂ ೧೨೪ ॥

ಇರುಳುಂ ಪಗಲುಂ ಪುರದೊಳ್
ಬೆರಸಿರ್ಪುವು ಪದ್ಮರಾಗಗೃಹದೆಳವಿಸಿಲಿಂ॥
ಹರಿನೀಲಗೃಹದ ತಮ್ಮದು
ಬ್ಬರದಿಂ ಶಶಿಕಾಂತಗೃಹದ ಚಂದ್ರಾತಪದಿಂ ೧೨೫ ॥

ಶಿಲ್ಪಿ ಗಡ ಕಲ್ಪಪತಿಸಂ
ಕಲ್ಪಂ ರತ್ನೋಪಲಂ ದಳಂ ಗಡ ಶೋಭಾ ॥
ತಲ್ಪಮಿದೆನ್ನದೆ ಬೇಱಿ ವಿ
ಕಲ್ಪಿಸುವನೆ ಗಾಂಪನೆನಿಸುಗುಂ ಕರುಮಾಡಂ ॥ ೧೨೬ ॥

ನೆಲೆಮಾಡದ ಪೊಸದೇಸಿಯ
ನೆಲೆ ನಾಡದ ಕಲ್ಪಸದನಮೆಯ್ದು ಧಣಂ
ನೆಲೆಯಾದುದಿದಱ ತೆಱದಿಂ
ನೆಲೆಯಾದುದೆ ಸಕಲಜನದ ಕಣ್ಗಂ ಮನಕಂ ॥ ೧೨೭ ॥

ಉ॥ ಬಾಳತೃಣಂಗಳೆಂದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀ ।
ಜಾಳಕಮಲ್ಲಿ ಮಾಣಿಕದ ಕೆಂಬೊಳಪಂ ಬಿಸಿಲೆಂದು [1]ನಟ್ಟಿರುಳ್
ಮೇಳಿಸುಗುಂ ರಥಾಂಗಮೆಟಲಿಕ್ಕಿದ ಮುತ್ತಿನ ಸೂಸಕಂಗಳಂ ।
ಬಾಳಮೃಣಾಳಮೆಂದು ಕರ್ದುಕಲ್ಬಗೆಗುಂ ಕಲಹಂಸ ಪೋತಕಂ ॥ ೧೨೮ ॥

ಚಂ॥ ಗಿಳಿ ಗಿಳಿವೆಣ್ಗೆ ಚೂತಫಲಮಂ ಕಲಹಂಸಿಗೆ ಹಂಸನಬ್ಜಕಂ ।
ದಳಮನಿಭಂ ಕರೇಣುಗೆ ಲವಂಗ ದಳಂಗಳನೀವ [2] ಚಿತ್ರಮಂ ॥
ತಳೆದು ವಿಲಾಸಮಂ ಮೆಱಿವ ರಾಣಿಯುವಾಸದ ಬಳ್ಳಿಮಾಡದು ।
ಜ್ವಳ ಮಣಿಭಿತ್ತಿ ಚೆಲ್ವನೊಳಕೊಂಡೊಳಕೊಂಡುದಪೂರ್ವ ಭಿತ್ತಿಯಂ ॥೧೨೯॥

---

1. ಕಟ್ಟಿರುಳ್. ಕ. ಖ.
2. ಭಾವಮಂ. ಗ. ಘ.

ಕಂ॥ ಬೆರಲಿಂ ಮಿಡಿಯಿಪ್ಪ ಪುಲಕಾಂ
ಕುರಮಂ ಪುಟ್ಟಿಸುವ ನೋಡೆ ತಲೆದೂಗಿಪ್ಪ ಸುಂ ॥
ದರಮೆನಿಪ ಕುಸುರಿವೆಸದಿಂ
ದರಮನೆ ಮಾಳ್ಪುದು ಮಯಂಗಮತಿವಿಸ್ಮಯಮಂ ॥ ೧೨೯ ॥

॥ ನೆರೆದಿರ್ಪರ್ ಚತುರಾನನರ್ ಪಲಬರೆನ್ನೊಳ್ ರಾಜಬಾಧಾಪರಂ ।
ಪರೆಯುಂ ಕಂಟಕರಾಜಿಯುಂ ರಜಮುಮೆನ್ನೊಳ್ ಪೊರ್ದವೆನ್ನೊಳ್ ನಿರಂ ॥
ತರವೊಪ್ಪಂ ಕಿಡದೆಂದು ನಾಭಿಕಮಲಾವಾಸಂ ಪುರಂ ನಾಭಿಪಂ ।
ಕರುಹಕ್ಕೀವುದು ನೀಲರತ್ನಗೃಹಕಾಂತಿ ಧ್ವಾಂತದಿಂ ದೈನ್ಯಮಂ ॥ ೧೩೦ ॥

ಅಂತತಿಶಯಮೆನಿಪಯೋಧ್ಯಾಪುರದಧಿಪತಿ—

॥ ಮನುಚೂಡಾಮಣಿ ನಾಭಿ! ನಾಭಿಸುತನಾದಿಬ್ರಹ್ಮನಾ ಬ್ರಹ್ಮನಂ ।
ದನನಾರ್ಗಂ ಮಿಗಿಲಾದನಾದಿಭರತಂ, ಷಟ್ಖಂಡ ಭೂನಾಥನಾ ॥
ಮನುಜೇಂದ್ರಾತ್ಮಜನರ್ಕಕೀರ್ತಿ ನೆಗಟ್ದಿಂ। ತದ್ವಂಶಮತ್ಯಂತ ಪಾ ।
ವನಮತ್ಯುನ್ನತಮಾಯ್ತು ಸದ್ಗುಣ ಪತಾಕಾವಂಶಮೆಂಬನ್ನೆಗಂ ॥ ೧೩೧ ॥

॥ಸ್ರ॥ ನೆಲನಂ ಮರ್ಯಾದೆಯಿಂ ಪಾಲಿಸಿ, ನಿಯಮಿಸಿ ವರ್ಣಾಶ್ರಮಾಚಾರಮಂ ದೋ ।
ಷ ಲವಂ ಮೆಯ್ವೊರ್ದದಂತಿಂದ್ರಿಯ ಸುಖದೊದವಂ ತೀರ್ಚಿ/ಸಾಮ್ರಾಜ್ಯದೊಳ್ ಮು ।
ನ್ನಲಿಧಲ್ಲಿಂದತ್ತಲಾತ್ಯಂತಿಕ ಸುಖಪದಮಂ ಪೆತ್ತ ರಾಜಾಧಿರಾಜರ್ ।
ಪಲರಿಂದಿಕ್ಷ್ವಾಕುವಂಶಂ ಕುಲನದಿಯವೊಲಾಯ್ತುವ್ಯವಚ್ಛಿನ್ನರೂಪಂ ॥೧೩೨॥

ಕಂ॥ [1] ಮನುನಾಭಿ ನರೇಂದ್ರನಿನಿ
[2] ತ್ತನುಕ್ರಮಂಗಿಡದೆ ಪೆರ್ಚುವಡೆದಾ ವಂಶಂ ॥
ಮುನಿಸುವ್ರತ ಜಿನಪತಿ ವರ
ಮಾನೂನಮಾದತ್ತುದಾತ್ತ ಶಾಖಾಕೀಣ

ಕ್ಷಿತಿನಾಥಂ ತನ್ಮುನಿ ಸು
ವ್ರತನಾಥನ ಕಾಲದಂದು ತದ್ವಂಶದೊಳ ।
ಪ್ರತಿಮಂ ವಿಜಯರಥಂ ತ
ತ್ಸತಿ ಹೇಮಲತಾಂಗ ಹೇಮಮಾಲಿನಿ ಯೆಂಬಳ್ ॥ ೧೩೪ ॥

---

1. ಜನಿಯಿಸಿನಾಭಿನರೇಂದ್ರನಿ
2. ನನು. ಗ. ಘ.

ಕಂ ॥ ವಿಜಿಗೀಷುವೃತ್ತಿಯಿಂ ಭೂ
ಭುಜರಂ ಬೆಸಕೆಯಿಸಿ ಕೊಂಡು ಭೂಮಂಡಲಮಂ ॥
ಭುಜದಂಡದೊಳಿರಿಸಿದನೇ
ನಜಯ್ಯಭುಜಬಲನೋ ವಿಜಯರಥ ನರನಾಥಂ ॥ ೧೩೫ ॥

ಆ ನರೇಂದ್ರನ ನಂದನಂ—

ಕಂ ॥ ಜಿತರಿಪು ಸುರೇಂದ್ರಮನ್ಯ
ಕ್ಷಿತಿಪತಿ ರಿಪುನೃಪಕುಲಾಂಗನಾಜನಮನ್ಯೂ ॥
ದ್ಧತಬಾಷ್ಪ ಸಲಿಲಧಾರಾ
ಪ್ರತಾನದಿಂ ಕೀರ್ತಿವಲ್ಲಿಯಂ ಬೆಳೆಯಿಸಿದಂ ॥ ೧೩೬ ॥

ಆ ವಿಶದಕೀರ್ತಿಗೆ ಕೀರ್ತಿಶ್ರೀಯೆಂಬಳರಸಿಯಾಗೆ—

ಕಂ ॥ ಅಂದಮುದಟಲೆಯೆ ಮನಸಿಜ
ನಂದಮುಳಿಳವಳವಿಗಳಿದು ಕೇಸರಿಯುಳವಂ ॥
ಬೆಂದಗುಳೆ ವಜ್ರಬಾಹು ಪು
ರಂದರರೆಂಬಿರ್ವರವರ್ಗೆ ನಂದನರಾದರ್ ॥ ೧೩೭ ॥

ಕಡಿದು ವಿಪಕ್ಷಮನಿಂದ್ರಂ
ಕಡಿದಂತೆ ಕುಲಾದ್ರಿಪಕ್ಷಮಂ ತೋಳ್ವಲಮಂ ॥
ಪಡೆದಂ ಪರಪ್ರತಾಪಂ
ಪೊಡರ್ಪುಗಿಡುವಂತೆ ವಜ್ರಬಾಹು ಕುಮಾರಂ ॥ ೧೩೮ ॥

ಪರಪುರಮನುರಿಪಿ ದೆಸೆಗ್ಗುರಿ
ವರಿವಿನೆಗಂ ತನ್ನ ತೇಜಮುರಿನೃಪವದನಾಂ
ಬುರುಹಂ ಕರಿಂಕುವರಿದಿರೆ
ಪುರಂದರಂ ನೃಪಪುರಂದರಂ ಪೊಗಟಿಸಿದಂ ॥ ೧೩೯ ॥

ಮಗನೊರ್ವಂ ತನಗಿರ್ವರ್
ಮಗಂಗೆ ಸುತರಾಗೆ ಮೂಱುಕಣ್ಣನೆ ಮೂಱುಂ ॥
ಜಗಮುಂ ತನಗೆಱಗಿಸಿದಂ
ತ್ರಿಗುಣಿಸೆ ತನ್ನೊಳ್ಮನೋರಥಂ ವಿಜಯರಥಂ ॥ ೧೪೦ ॥

ಚಂ॥ ವಿಜಯರಥಂ ಧರಿತ್ರಿಗೆ ಮನೋರಥ ಸಿದ್ಧಿಯನಿತ್ತು ವಕ್ತ್ರಪಂ।
[1]ಕಜ ವರರಾಜಹಂಸವಧು ವಾಗ್ವಧು ರಂಜಿಸೆ ತನ್ನ ಕೀರ್ತಿ ದಿ॥
ಗ್ಗಜ ರದನಕ್ಕೆ ಕೀರ್ತಿಮುಖವಾಗೆ ಜಗಜ್ಜನಕಂಠಭೂಷಣಂ।
ನಿಜಗುಣನಾಮವಾಗಿರೆ ವಿರಾಜಿಸಿದಂ ಕವಿತಾಮನೋಹರಂ ॥

ಇದು ಪರಮಜಿನಸಮಯ ಕುಮುದಿನೀ ಶರಚ್ಚಂದ್ರ
ಬಾಲಚಂದ್ರ ಮುನೀಂದ್ರ ಚರಣ ನಖ ಕಿರಣ
ಚಂದ್ರಿಕಾ ಚಕೋರ ಭಾರತೀ ಕರ್ಣಪೂರ-
ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರಚರಿತಪುರಾಣದೊಳ್
ಪೀಠಿಕಾ ಪ್ರಕರಣಂ
ಪ್ರಥಮಾಶ್ವಾಸಂ.

## ದ್ವಿತೀಯಾಶ್ವಾಸಂ

ಕಂ ॥ ಶ್ರೀಯಂ ವಿತರಣದೊಳ್, ವಾಕ್
ಶ್ರೀಯಂ ರಾಜನ್ಯವೃತ್ತಿಯೊಳ್, ವಿಮಲಯಶ ॥
ಶ್ರೀಯಂ ಜಿನಪ್ರವಚನ
ಶ್ರೀಯದೊಳತಿಶಯಿಸಿ ನೆಗಟ್ಟನಭಿನವಪಂಪಂ ॥ ೧ ॥

ಆ ವಿಜಯನರನಾಥನೊಂದು ದಿವಸ ಪೊಡ್ಡೋಲಗಂಗೊಟ್ಟಿರ್ಪುದುಂ—

ಮ ॥ ಸಕಲಕ್ಷತ್ರಕಿರೀಟತಾಡಿತ ಪದಾಂಭೋಜಾತನಾಸ್ಥಾನ ವೇ ।
ದಿಕೆಗುತ್ತಾನಿತ ಚಿತ್ರವೇತ್ರಲತನೋರ್ವಂ ಕಾರ್ಯವಿಜ್ಞಾಪನೋ ॥
ತ್ಸುಕಚಿತ್ತಂ, ಧವಲೋತ್ತರೀಯವಸನಂ, ಲಂಬೋದರಂ, ಲಂಬಕೂ ।
ರ್ಚಕಲಾಪಂ, ಸಿತಕಂಚುಕಂ, ತ್ವರಿತದಿಂ ಬಂದಂ ಪ್ರತೀಹಾರಕಂ ॥

ಅಂತು ಬಂದು ಮೊಗಸಾಲೆಯೊಳ್ಮೆಯ್ಯಿಕ್ಕಿ ಮೊಗಸುತ್ತಿನ ದುಗುಲದ ಬಿನ್ನಪದ ಸೆಱಗನಧರಪಲ್ಲವಕ್ಕೆ ತೆಗೆದು, ದೇವ! ನಾಗಪುರಮನಾಳ್ವಿಭವಾಹನನ ತನೂಭವನುದಯಸುಂದರಕುಮಾರನರಮನೆಯ ಬಾಗಿಲೊಳ್ಬಂದು ನಿಂದಿರ್ದಪನೆಂದು ಬಿನ್ನವಿಸೆ ಬರವೇಟ್ಟೆಂಬುದುಂ—

ಮ ॥ ಸ್ರ ॥ ದಿವದೊಳ್ ಬೆಳ್ದಿಂಗಳಂ ಬಿತ್ತರಿಸೆ ತ್ವರ್ಗಳವಮುಕ್ತಾವತಂಸಪ್ರಭಾ ಪ ।
ಲ್ಲವಮಾಕಾರಂ ಸ್ಮರಾಕಾರಮನಜನಿಸೆ ಪೊಕ್ಕಂ ನೃಪಾವಾಸಮಂ ವಾ ॥
ಸವಸೌಂದರ್ಯಂ, ಧರಾವಲ್ಲಭಸುಭಗ ಸಭಾಲೋಕನಾಕರ್ಷಣಂ, ಮಾ ।
ಡೆ ವಿಶಾಲೋರಸ್ಸ್ಥಲೀ ನಿಸ್ತುಲ ಚಕಚಕಿತ ಸ್ಫಾರಹಾರಂ ಕುಮಾರಂ ॥ ೩ ॥

ಕಂ ॥ ಕತಿಪಯ ಪರಿಜನ ಪರಿವೃತ
ನತಿಲಲಿತಾಕೃತಿ ಸಿತಾತಪತ್ರದ ನೆಟಲೊಳ್ ॥
ಸಿತ ಶತಪತ್ರಚ್ಛಾಯಾಂ
ಚಿತ ಬಾಲ ಮರಾಲ ಲೀಲೆಯಂ ಪಾಲಿಸಿದಂ

ಅಂತು ಬಂದು ನೃಪಸಭಾಸದನಮಂ ಪೊಕ್ಕು—

ಕಂ ॥ ಓಲಗಿಸಿ ವಸ್ತುವಾಹನ
ಮಾಲೆಯನುತ್ತಂಸ ಮಣಿ ಮರೀಚಿಗಳಿಂ ಭೂ ॥
ಪಾಲನ ಚರಣಸರೋಜ
ಕ್ಕೋಲಗಿಸಿದನುದಯಸುಂದರಂ ತಣ್ಣಿಸಿಲಂ ॥ ೫ ॥

ಅಂತು ವಿನತನಾದನಂತರಂ ಸುರೇನ್ದ್ರಮನ್ಯು ವಜ್ರಬಾಹು ಪುರಂದರರೊಳಂ ವಿನಯವೃತ್ತಿಯಂ ಮೆಱೆದು ಸಮುಚಿತಾಸನದೊಳ್ ಕುಳ್ಳಿರ್ದು ಮುಕುಲಿತಾಂಜಲಿ ಪುಟನಾಗಿ—

ಮ ॥ ಸಕಲಕ್ಷತ್ರಪವಿತ್ರ ನಿನ್ನ ಚರಣಾಂಭೋಜಾತ ಸೇವಾಸವು ।
ತ್ಸುಕನಸ್ಮತ್ಪಿತೃನೆನ್ನ ತಂಗೆಯನನಂಗಶ್ರೀನಟೀ ನಾಟ್ಯವೇ ॥
ದಿಕೆಯಂ ತನ್ನ ಮಗಳ್ಗುಣೋದಯನನಂಗೋನ್ಮಾದೆಯಂ ವಜ್ರಬಾ ।
ಹು ಕುಮಾರಂಗಿಭವಾಹನಂ ಮದುವೆಮಾಳ್ಪುತ್ಸಾಹದಿಂದಟ್ಟಿದಂ ॥ ೬ ॥

ಎಂದು ಬಿನ್ನವಿಸೆ ವಿಜಯರಥ ಮಹೀನಾಥನುದಯಸುಂದರನ ಮುಖಾರವಿಂದಮಂ ನೋಡಿ—

ಉ ॥ ಕನ್ಯಕೆ ವಜ್ರಬಾಹುಗನುರೂಪೆ ಗಡಂ ಕುಡುವಂ ಗಡಂ ಜಗ ।
ನ್ಮಾನ್ಯನೆನಿಪ್ಪುದಾತ್ತನಿಭವಾಹನವಲ್ಲಭನಿಂತಿದನ್ಯಸಾ ॥
ಮಾನ್ಯಮೆ ನಮ್ಮ ಕೊಳ್ಕೊಡೆಗೆ ತಕ್ಕೆಡೆಯಂ ಸಮಕಟ್ಟಿ ಕೊಟ್ಟ[1]ನೇಂ
ಧನ್ಯನೊ ಧಾತ್ರನೆಂದು ನುಡಿದಂ ಪ್ರಿಯಮಂ ವಿಜಯಾಂಗನಾಪ್ರಿಯಂ ॥ ೭ ॥

ಕಂ ॥ ಅಧಿರಾಜಂ ವದನಾಂಬುಜ
ಮಧುವೆನಿಸಿದ ಮಧುರ ವಚನದಿಂ ತಣಿಪೆ ಮನೋ ॥
ಮಧುಕರಮನುದಯಸುಂದರ
ನಧಿಕೋತ್ಸವ ರಸತರಂಗಿತಾಶಯನಾದಂ ॥

ಅಂತಾತನಂ ಸಂತೋಷಂಬಡಿಸಿ ವಿಜಯರಥಂ ವಿವ ಾಂಗಳೋಪಕರಣ ಪುರಸ್ಸರಮಾಶೀರ್ನಿನದವೊದವೆ ಶುಭದಿನ ಮುಹೂರ್ತದೊ

ಕಂ ॥ ಓರನ್ನರೆನಿಪ ರಾಜಕು
ಮಾರಕರೊಡನೇಱಿ ವಜ್ರಬಾಹುಕುಮಾರಂ ।
ವಾರಣಮನ್ನೇಱಿದಂ ದಿ
ಗ್ವಾರಣಮಂ ದಿಕ್ಕುಮಾರರೇಱುವ ತೆಱದಿಂ ॥

1. ನೆಂದನ್ಯನೊ ದಾತ್ರನೆಂದು. ಕ ಖ. ಚ. ನೆಂದುನ್ನತಚಿತ್ತನೊಪ್ಪೆ.

ಪಟುಪಟಹ ಶಂಖ ರುತ್ರಿ ದಿ
ಕ್ತಟವಮಂ ತಳ್ಪೊಯ್ಯೆ। ಗಂಡಮಂಡಲತಟದೊಳ್ ॥
ನಟಿಯಿಸೆ ಮಣಿಕುಂಡಲ್ಲ ರುಚಿ
ಪಟಲಂ, ನ್ನಪನಣೆದು ನೂಂಕಿದಂ ವಾರಣಮಂ ॥ ॥ ೧೦ ॥

ಮ ॥ ಎರಡುಂಪಕ್ಕದೆ ಪಣ್ಣಿದೋಜೆವಿಡಿಯಂ ಕೈಗೆಯ್ದು ಬಂದ್ದೇಜಿ ಚಾ
ಮರಮಂ ಕನ್ನೆಯರಿಕ್ಕೆ। ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್
ಬರ್ಕೆ। ಬಂದಂ ಧವಳಾತಪತ್ರದಡಿಯೊಳ್ ಕಾಲ್ಗೋದು ಗಂಧಾಂಧ ಸಿಂ।
ಧುರಮಂ ಮೆಯ್ಗಲಿ ವಜ್ರಬಾಹುಮಹಿಪಂ ವಜ್ರಾಯುಧಂ ಬರ್ಪವೋಲ್ ॥೧೧॥

ಕಂ॥ ಕೆಲಕೆಲದೊಳ್ ರಾಜಸುತರ್
ಕೆಲಬರ್ ಬರೆ, ರಾಜಚಿಹ್ನ ಪಾಳಿಧ್ವಜ ಸಂ ॥
ಕುಲಮುಂ ಭಟಕಟಕಮುಮಾ
ದಲ್ಲೆಯೊಳ್ಪರೆ, ವಜ್ರಬಾಹು ಪಯಣಂಬಂದಂ ॥ ೧೨ ॥

ಅಂತು ಬರುತ್ತುಂ—

ಮ ॥ ಮುಗಿಲಂ ಮುಟ್ಟಿದ ರತ್ನಕೂಟರುಚಿಯಿಂ ಜ್ಯೋತಿರ್ವಿಮಾನಂಗಳಂ।
ನಗುವಂತುದ್ಧತ ನಿರ್ಝರಪ್ಲವನದಿಂ ಗಂಗಾಸ್ರವಂತ್ಪೂರಮಂ ॥
ನಗುವಂತುನ್ನತಿವೆತ್ತ ಕಲ್ಪತರು ಸಾನೂದ್ಯಾನದಿಂ ಮೇರುವಂ।
ನಗುವಂತೊಪ್ಪುವುದಂ ವಸಂತಗಿರಿಯಂ ಕಂಡಂ ಮಹೀಮಂಡನಂ

ಆ ವಸಂತಗಿರಿಯೊಳೆಡೆಯಾಡುವ ವಿದ್ಯಾಧರವಧೂಜನದ ಸೋರ್ಮುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱೆಯ ತುಱುಂಗಲುಮಂ, ಸಿದ್ಧಕಾಮಿನಿಯರ ಕಪೋಲಪತ್ರದಿಂ ಮದನಕೇಳಿಯೊಳುದಿರ್ದ ಕತ್ತುರಿಯುಮಂ, ಕನಕ ಕದಳೀದಳದ ಪತ್ರಭಂಗಂಗಳುಮಂ, ಕಿಂಪುರುಷ ದಂಪತಿಗಳ ಸುರತಕೋಲಾಹಲದಿಂದನಂಗ ಸಂಗೀತಕ ಸದನಮೆನಿಸುವೆಳಲತೆಯ ಜೊಂಪಂಗಳುಮಂ, ಕಿನ್ನರ ನಿತಂಬಿನಿಯರ್ ಚೆಂಬೊನ್ನಶಿಲೆಯ ಮೇಲೆ ವಿರಚಿಸಿದ ಚೆನ್ನೆಯ್ದಿಲೆಸಳ ಪಸೆಗಳುಮಂ, ಗಂಧರ್ವಗಣಿಕೆಯರ ಬಹುಳಪರಿಮಳಕ್ಕೆಳಸಿ ಬಳಸುವೆಳದುಂಬಿಗಳ ನಾದಕ್ಕೆ ಬೆರ್ಚಿ ಬಿಸುಟ ಕರ್ಣಪೂರ ಪಾರಿಜಾತ ಸ್ತಬಕಂಗಳುಮಂ, ಓರೊಂದೆಡೆಯೊಳ್ ಕಿಸುಸಂಜೆಯಂ ಪಸರಿಸುವ ಕಿಸುಗಲ್ಲ ಕೂಟಂಗಳುಮಂ, ಓರೊಂದೆಡೆಯೊಳಂಧಕಾರಮಂ ಕೆದಱುವಿಂದ್ರನೀಲದೊಡ್ಡಂಗಲ್ಗಳುಮಂ, ಅಲ್ಲಿಗಲ್ಲಿಗೆ ನಿರ್ದ್ರವಜಲದ್ಯುತಿಯನೊಡರಿಸುವ ವೈಡೂರ್ಯಶಿಖರಂಗಳುಮಂ, ಅತ್ತಲಿತ್ತಲೆಳವೆಳ್ದಿಂಗಳಂ ಬಿತ್ತರಿಸುವ ಚಂದ್ರಕಾಂತದ ಪಾಸಱೆಗಳುಮಂ, ಎಲ್ಲದೆಸೆಗಂ ತಣ್ಪಿಸಿಲನವಟಯಿಸುವ ವಜ್ರಶಿಲಾತಲಂಗಳುಮಂ, ಬೇಱೆವೇಱೆ ಮಾಣಿ

ಕದ ಪೊಳಪು ಮುಟ್ಟೆ ಕಿಡಿಯಿಡುವ ಸೂರ್ಯಕಾನ್ತದ ಶಿಲೆಗಳುಮಂ ಅತಿಕುತೂಹಲದಿಂ ನೋಡುತ್ತೆ ಮುಟ್ಟೆಬರ್ಪ ಸಮಯದೊಳ್ ತೊಟ್ಟನೆ ಕಟ್ಟೆದಿರೊಳ್.

ಮ॥ ಸ್ರ॥ ಮನಮಂ ಮುಟ್ಟೈಸಿ, ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ, ತನ್ನಿಂ।
ತನುವಂ ಬೇರ್ಕೆಯ್ದು ಬಾಹ್ಯೇಂದ್ರಿಯಮನುಡುಗಿ, ಕೈಯಿಕ್ಕಿ ನಿರ್ವಾಣಸಾಮ್ರಾ॥
ಜ್ಯ ನಿವಾಸಕ್ಕೊರ್ವನಂತರ್ಮುಖನಭಿಮುಖನಾದಿತ್ಯಬಿಂಬಕ್ಕೆ ಯೋಗೀಂ।
ದ್ರನತಂದ್ರಂ ನಿರ್ನಿಮೇಷಂ ನಗನಿಕಟ ಹಟದತ್ನಕೂಟಂಬೊಲಿರ್ದಂ॥ ೧೪ ॥
ಅಂತಾಮಹಾತಿಥಿ ನಯನಾತಿಥಿಯಾಗಿರ್ಪುದುಂ—

ಕಂ ॥ ಮುಗಿದುವು ಕರಕಮಲಂಗಳ್
ಬಗೆಯಿಂ ಮುಂಬರಿದು ಮುನಿಮುಖಾಂಬುಜಮಂ ತುಂ॥
ಬಿಗಳಂತೆ ಮುಸುಱಿದುವು ದಿ
ಟ್ಟಿಗಳೀನಭಿನುತನೊ ವಜ್ರಬಾಹುಕುಮಾರಂ ॥ ೧೫ ॥

ದಾರುಣ ಸಂಸರಣ [1]ವಿಷೋ
ರ್ವೀರುಹಮಂ ಕೀಲ್ವ ಬವಸೆಯಿಂದಿರ್ದಪನೀ॥
ಧೀರನೆನುತ್ತುಂ ರಾಜಕು
ಮಾರಕನಾಮುನಿಯ ಬಗೆದ ಬಗಯುಂ ಬಗದಂ ॥ ೧೬ ॥

[2]ದಿನಮುಖದರ್ಶನದಿಂ ತೊ
ಟ್ಟನೆ ಕಟ್ಟಿಲೆ ಪಿಂಗುವಂತೆ ಮುನಿಪತಿ ಮುಖ ದ॥
ರ್ಶನದಿಂ ಚಿತ್ತದ ಕಟ್ಟಲೆ
ಜನಪತಿಗೊರ್ವೊದಲೆ ಪಿಂಗಿಪೋದತ್ತಾಗಳ್ ॥ ೧೭ ॥

ಏನಯ್ಯ ಖಡ್ಗಧಾರೆಯು
ಜೇನೆಯ್ದುಂ ನಕ್ಕುವಂತೆ, ಸಂಸಾರಸುಖ
ಕ್ಕಾನಳಿಪ ವಿಷಯಲೋಭದಿ
ನೇನಸ್ಸಂತಾನಮೆನ್ನನೇನ್ನಟಲಿಸದೋ ॥ ೧೮ ॥

ಎಂದು ತಱಿಸಂದು ಮನದಱಕದಿಂದವಲೋಕಿಸುತ್ತಿರ್ಪುದುಮುದಯ ಸುಂದರಂವಜ್ರಬಾಹುಕುಮಾರನ ಮುಖಾರವಿಂದಮಂ ನೋಡಿ—

---

1. ಮಹೋ. ಕ. ಖ. ಗ ಘ.
2. ಇನ. ಗ. ಘ.

ಉ॥ ಭಾವ್ಯಮುನೀಂದ್ರರಂ ಬಿಡದೆ ನೋಡಿದಪ್ಪೆ ಮನವೊಲ್ದೊಡಂ ತಪ।
ಶ್ರೀವಧು ಕಾಮಿನೀಜನದವೋಲ್ ನಿನಗೀವಳೆ ಕೂರ್ತು ವಸ್ತ್ರಭೂ।
ಷಾವಳಿಯಂ ಕಚಾವಳಿಯನೀವಧು ಗರ್ವದ ಗಾಳು ವಸ್ತ್ರಭೂ।
ಷಾವಳಿಯಂ ಕಚಾವಳಿಯನಿತ್ತ್ರರನಲ್ಲದೆ ಪೊರ್ದಲೀವಳೇ

ಎಂದು ಸರಸಮಂ ನುಡಿದೊಡರಸನುದಯಸುಂದರಂಗೆಂದನ್ ಆಂ ತಪಮಂ ಕೈಕೊಂಡೊಡೆ ನೀನೇಗೆಯ್ವೆಯೆನೆ ನಿನ್ನೊಡನಾನುಂ ತಪಮಂ ಕೈಕೊಳ್ವೆನೆಂಬುದುಂ—

ಪೃಥ್ವಿ॥ ಒಡಂಬಡಿಸಿ ವಾಗ್ವಿಡಂಬನದಿನಾತನಂ ಬಂಧಮಂ
ಪಡಲ್ವಡಿಪ ಬೇಗದಿಂದ್ಧಿೞಿದು ವಾರಣಸ್ಕಂಧದಿಂ॥
ತೊಡರ್ಪಱಿದ ವನ್ಯವಾರಣದ ಮಾೞ್ಕೆಯಿಂದೇಱಿದಂ
ತೊಡರ್ಪನನಿಸಾನುವಂ ಬಗೆಯದಾಕುಭೃತ್ಸಾನುವಂ ॥ ೨೦ ॥

ಆಗಳಾತನ ಮನದ ತಱಿಸಲವಂ ಕಂಡು—

ಕಂ॥ ನಗೆ ದಿಟವಾದೊಡೆ ನಾಡೆಯು
ಮಗಿದು ಸುಹೃಜ್ಜನಮುಮುದಯಸುಂದರನುಂ ಕೈ
ಮುಗಿದೆಱಗೆ ಮ್ರಾಣ್ಬನಲ್ಲೆಂ
ಬಗೆಯದಿರಿಂ ಪೆಱತನೆಂದು ಪಱಿಪಡೆ ನುಡಿದಂ ॥ ೨೧ ॥

ಈ ಮುನಿಯುಮ್ ಮುನೀಮನಮುಮ
ನ್ನೀವ್ಯೆಯುಮನ್ನೀಮನುಷ್ಯಗತಿಯುಮನ್ನಾಂಮು॥
ನ್ನೇಮಾತೊ ಪಡೆದೆನಿಲ್ಲೀ
ಸಾಮಗ್ರಿಯೊಳಪ್ಪ ಕೆಯ್ವೆನಘವಿಘಟನಮಂ ॥ ೨೨ ॥

ಎಂದು ಮನದ ಪರಿಚ್ಛೇದಮಂ ನಾಲಗೆಗೆ ತಂದು ಪರಿಜನಮನೊಡಂಬಡಿಸಿ—

ಉ॥ ಕರ್ವಿನ ಬಿಲ್ಲನಿಕ್ಕಿ ಭಯದಿಂ ಮದನಂ ಪರಿದೇಱೆ ಪುತ್ತನಾ
ಪರ್ವತಮಂ ನರೇಂದ್ರಸುತನೇರಿ ವಿರಾಜಿತಕೇಶಪಾಶಮಂ
ಪರ್ವಿದ ಮೋಹಪಾಶದೊಡನೊರ್ಮೊದಲೊಳ್ ಪಱಿದಿಕ್ಕಿದಂ ಜಸಂ
ಪರ್ವುವಿನಂ ಜಗತ್ತ್ರಯಮನಾ ಮುನಿಮುಖ್ಯನ ಪಾದಪಾರ್ಶ್ವದೊಳ್

ಅಂತು ವಜ್ರಬಾಹುಕುಮಾರಂ ಗುಣಸಾಗರಭಟ್ಟಾರಕರ ಚರಣೋಪಾಂತದೊಳ್ ತಪಶ್ಚರಣ ನಿರತನಪ್ಪುದುಂ—

ಕಂ॥ ಎನ್ನೊಡವಂದಂತಕನಂ
ಬೆನ್ನಟ್ಟಲೊಡರ್ಚಿದಂ ಜಿತಾತ್ಮಂ ಸೆಡೆದಂ ॥
ದೆನ್ನ ಜಸಮುಱುಗುಮೆನ್ನೆನಗದೆ
ಬನ್ನಂ ಬನ್ನಕ್ಕೆ ಬೇರೆ ಕೋಡೆರಡೊಳವೇ ॥ ೨೪ ॥

ಎಂದುದಯಸುಂದರನುಂ ಪರಿಚ್ಛೇದಿಸಿ ತನ್ನೊಡನೆ ತಪಕ್ಕೆ ತಱಿಸಂದಿರ್ಪತ್ತು ಮೂವರರಸುಮಕ್ಕಳ್ವೆರಸು ತಪೋನಿಧಿಯ ಸನ್ನಿಧಿಯೊಳ್ ಜಾತರೂಪಧರನಪ್ಪುದುಂ—

ಕಂ॥ ಅಗ್ರಜನೊಳಾದ ಜಿನದೀ
ಕ್ಷಾಗ್ರಹಣಮನನುಜೆ ಕೇಳ್ದು ತಾನುಂ ಜಿನದೀ ॥
ಕ್ಷಾಗ್ರಹಮಂ ಪಡೆದಳ್ ಲ
ಬ್ಧಿಗ್ರಹಣದಿನೊಳ್ಪುವಡೆವುದೊಂದಚ್ಚರಿಯೇ ॥ ೨೫ ॥

ಅಂತು ಗುಣೋದಯುಂ ನಿರ್ಭರ ತಪೋಭರಮುಂ ತಳೆದಳಿತ್ತಲ್ ವಿಜಯರಥ ಮಹೀನಾಥಂ ತನ್ನವೊಮ್ಮನಪ್ಪ ವಜ್ರಬಾಹುಕುಮಾರನ ತಪಃಪ್ರಪಂಚಮುಂ ತಿಳಿದು-

ಚಂ॥ ಮದುವೆಗೆ ಪೋಪುದೆತ್ತ ಗಿರಿಕಂದರದೊಳ್ ಮುನಿಯಂ ಮನನ್ಸಿ ಕ
ಟ್ಟಿದಿರೊಳೆ ಕಾಣ್ಬುದೆತ್ತ ಮದುವೆ ಕಾರಣಮಾಗೆ ಕಡಂಗಿ ಮೋಹಪಾ ॥
ಶದ ತೊಡರಂ ಬಿದಿರ್ಚಿ ದೆಸೆ[1]ಯಂ ತುವರಂ ನಿಜಕೀರ್ತಿಯಿಂ ನಿಮಿ
ರ್ಚಿದನೆನೆ ವಜ್ರಬಾಹುವ ನೆಗೞ್ತೆ ಪೊಗೞ್ತೆಗಳುರ್ಬಿಮಾಗದೇ ॥ ೨೬ ॥

ಕಂ॥ ಯುವರಾಜಂ ನವಯೌವನ
ನವಯುವದಿಂ ದೀಕ್ಷೆಗೊಡ್ಡಿದಂ ತನುವನಿದೇ ॥
[2]ನವಿಚಲನೊ ಕುಮಾರಂ ಪೋ
ಹವಿಷಾಹಿಯ ಕಾಲಕೂಟ ರದಮುಂ ರಚ್ಚುಂ ॥ ॥ ೨೭ ॥

ಕಿಱುಗೂಸು ವಿಷಯ ಸುಖಮುಂ
ತೊಱೆದು ತಪಂಬಟ್ಟನಿನ್ನೆವರಮುಱುಪಿಂದಾಂ ॥
ಮಱೆದಿರ್ದೆನೆಂದು ತಂದಂ
ತಱಿಸಲವಂ ತನ್ನ ಚಿತ್ತದೊಳ್ ವಿಜಯರಥಂ ॥ ೨೮ ॥

ಅಂತು ವಿಜಯರಥನರೇಂದ್ರಂ ನಿಜತನೂಜನಪ್ಪ ಸುರೇಂದ್ರ ಮನ್ಯುವೆರಸು

1. ಯೊಂಟು. ಗ.
2. ನವಕಲನೊ. ಚ.

ತನ್ನ ಮೊಮ್ಮನಪ್ಪ ಪುರಂದರಂಗೆ ನಿಜರಾಜ್ಯಮನಿತ್ತು ನಿರ್ವಾಣಘೋಷರೆಂಬ ಮುನಿ ಮುಖ್ಯರ ಸಮೀಪದೊಳ್ ತಪೋರಾಜ್ಯದೊಳ್ ನಿಂದನಿತ್ತಲಾ ಪುರಂದರಂ ಸಕಲ ಸಾಮ್ರಾಜ್ಯಸುಖ ಸುಧಾರಸದಿಂ ತಣಿದು ವಿಷಯವೈರಾಗ್ಯತತ್ಪರಂ ಕ್ಷೇಮಂಕರ ಮುಮುಕ್ಷುಗಳ ಸಮಕ್ಷದೊಳ್ ದೀಕ್ಷೆಯಂ ಕೈಕೊಂಡು ನಿಲ್ವುದುಂ—

ಕಂ॥ ಕೀರ್ತಿಮುಖದಂತೆ ಕೀಲಿಸೆ
ಕೀರ್ತಿ ದಿಶಾದಂತಿದಂತಮಂ ತದಪತ್ಯಂ ॥
ಕೀರ್ತಿಧರನೆಂಬನರಸಂ
ಧಾರ್ತ್ತಸ್ವರ ಕುಧರದಂತಿರಿಳೆಯುಂ ತಳೆದಂ ॥ ೨೯ ॥

ಆ ಕೀರ್ತಿಧರ ನರೇಂದ್ರನೊಂದುದಿವಸಂ ಮಣಿಮಾಡದ ಮೇಲೆ ಮಣಿಮಯಾ ಸನದೊಳಾಪ್ತ ಪರಿಜನ ಪರಿವೃತನೊಡ್ಡೋಲಗದೊಳಿರ್ಪುದುಮಾ ಸಮಯದೊಳ್—

ಕಂ॥ ಇನಮಂಡಲಮುಂ ಸ್ವರ್ಭಾ
ನು ನುಂಗೆ ಕಡುಗಂದಿ ಕುಂದುಗೊಂಡಿರ್ಪುದುಮಾ ॥
ಜನನಾಥನದುವೆ ನಿರ್ವೇ
ಗ ನಿಮಿತ್ತಮೆನಲ್ ವಿರಾಗಮುಂ ಕೊಂಡಂ ॥ ೩೦ ॥

ಜಗಮುಂ ಬೆಳಗುವ ಚಂಡಾಂ
ಶುಗವಿಾ ಸ್ಥಿತಿ ರಾಹುವಿಂದಮಾದತ್ತೆನಲೇ ॥
ನುಗಿಬ್ಬಗಿಮಾಡದೆ ಕಾಲೋ
ರಗಮುಸ್ಮದ್ವಿಧಮನನ್ಯ ರಾಜನ್ಯಕಮಂ ॥ ೩೧ ॥

ಎಂದು ವೈರಾಗ್ಯ ಪರಿಣತಿಯಿಂ ಚತುರುದಧಿ ವಲಯ ವಲಯಿತ ಧರಿತ್ರಿಯಂ ತೃಣಮಂ ಒಗೆವಂತೆ ಬಗೆಯೆ ಮಂತ್ರಿಮಂಡಲ ಮಹಾ ಸಾಮಂತರತಿ ಚಕಿತ ಚಿತ್ತರಾಗಿ—

ಮ॥ ಪರಚಕ್ರಕ್ಕೆಡೆಮಾಡಿ ಭೂವಲಯಮುಂ ಬಂಡಾರಮುಂ ಬಾಲ ವೃ
ಧ್ದರನೀಡಾಡಿ ತಪಕ್ಕೆ ಪೋಪುದನಯಂ ಭೂಪಾಲ ನಿನ್ನಂ ಪುರಂ॥
ದರನೀ ರಾಜ್ಯಭರಕ್ಕೆ ಯೋಜಿಸಿ ತಪೋರಾಜ್ಯಕ್ಕೆ ಮೆಯ್ವಂದನ್ನಂ
ತಿರೆ ನೀನಾಚರಿಸಲ್ಲದಂದು ಧರೆ ಮಾತ್ಸ್ಯನ್ಯಾಯಮೇನಾಗದೇ

ಅದಱಿಂ ನಿನ್ನಯ ರಾಜ್ಯ ರಕ್ಷಣಾರ್ಥಮಾತ್ಮಜನಂ ಪಡೆದು ತಪಂಬಡುವುದೆಂದು ಮಂತ್ರಿಮಂಡಲಮೊಡಂಬಡಿಸೆ ಕೀರ್ತಿಧರನೊಡಂಬಟ್ಟು ಪಲವುಕಾಲಮರಸುಗೆಯ್ಯು ತಿರಲಾ ಮಹೀವಲ್ಲಭನ ಸಹದೇವಿವೆಸರ ಮಹಾದೇವಿಗೆ—

ಕಂ ॥ ಪೀನ ಕುಚಾನನದೊಳ್ ಕ
ಪ್ಪಾನನದೊಳ್ ಬೆಳ್ಪು ತೋಱೆ ತೋಱಿದುದಾ ಚಂ ॥
ದ್ರಾನನೆಗೆ ಗರ್ಭಚಿಹ್ನಂ
ಮಾನಸದೊಳ್ ತೋಱೆ ಬೇಱೆ ಹರ್ಷವಿಷಾದಂ ॥ ೩೩ ॥

ಉ ॥ ಸಂತತಿ ರಾಜ್ಯರಕ್ಷಣೆಗೆ ಪುಟ್ಟಿದ ಸಂತಸಮುಂ ಮಹೀಭುಜಂ ।
ಸಂತತಿ ಪುಟ್ಟೆ ಬಿಟ್ಟು ಧರೆಯಂ ತಪದೊಳ್ ತಱಿಸಲ್ಕೆಮೆಂಬ ಚಿಂ ॥
ತಾಂತರಮುಂ ಮನಕ್ಕೆ ಬರೆ ಮಾಡಿದಳಾಕ್ಷಣದೊಳ್ ನರೇಂದ್ರಸೀ ।
ಮಂತಿನಿ ತದ್ವಿರುದ್ಧ ರಸ ನಾಟಕ ರಂಗಮನಂತರಂಗಮಂ[1] ॥ ೩೪ ॥

ಅಂತಾಕೆ ಗೂಢಗರ್ಭದಿಂ ಕೆಲವಾನುಂ ದಿವಸಕ್ಕೆ ಬಡವಂ ನಿಧಾನಮುಂ ಪಡೆ ದಂತೆ ಮಗನಂ ಪಡೆದು ಪೆಱರಱಿಯದಂತೆ ನಡಪುತಿರ್ಪುದುಂ—

ಕಂ ॥ ಭೇದಿಸಿ ಸಹದೇವಿಗೆ ಮಗ
ನಾದುದನೊರ್ವಂ ಧನಾರ್ಥಿ ಮೆಚ್ಚಂ ಪಡೆವೊಂ ॥
ದಾದರದಿನಱಿಪೆ ಭೂಪತಿ
ಗಾದುದು ಬ್ರಗ್ಗೆ ತ್ತೀರ್ದದೀಗಳೆಂಬನುರಾಗಂ ॥ ೩೫ ॥

ಮ ॥ ಮಗನಾದಂ ಸಹದೇವಿಗೆಂದೊಸಗೆ[2]ದಂದಾತಂಗೆ ಚೆಂಬೊನ್ನರಾ ।
ಶಿಗಳಂ ವಸ್ತ್ರವಿಲೇಪನಾಭರಣಮಂ ಸಾಲ್ವನ್ನೆಗಂ ಕೊಟ್ಟನಾ ॥
ಜಗತೀ ವಲ್ಲಭನೆನ್ನ ಪೂಣ್ಕೆ ತುದಿಗೆಯ್ದಿತ್ತೆಂಬ ಸಂಪ್ರೀತಿ ಕೈ ।
ಮಿಗೆ ಸಂಸಾರ ಶರೀರಭೋಗ ಪರಿನಿರ್ವೇಗಂ ತಪಃಪ್ರೀತಿಯಿಂ ॥ ೩೬ ॥

ಕಂ ॥ ತೊಟ್ಟಿಲ ಮಗಂಗೆ ಪಟ್ಟಂ
ಗಟ್ಟಿ ಜರತ್ತೃಣ ಸಮಾನಮೆನೆ ವಸುಮತಿಯಂ ॥
ಬಿಟ್ಟು ಜಿನದೀಕ್ಷೆಗೊಂಡಂ
ಮುಟ್ಟುವಿನಂ ಕೀರ್ತಿ ದೆಸೆಗಳಂ ಕೀರ್ತಿಧರಂ ॥ ೩೭ ॥

ಉ ॥ ಇತ್ತ ಸುಕೌಶಲಕ್ಕೊಡೆಯನಾಗಿ ಸುಕೌಶಲನೆಂಬ ನಾಮಮುಂ ।
ಪೆತ್ತು ನಿರಂತರೋಪಚಯದಿಂ ನವಯೌವನನಾಗಿ ಮಿಱಿದು ॥
ದ್ವೃತ್ತರನಿಕ್ಕಿ ಸುತ್ತಣ ಕಡಲ್ವರೆಗಂ ನೆಲನಂ ನಿಮಿರ್ಚಿ ಭೂ ।
ಪೋತ್ತಮನಿಂತು ತನ್ನ ಜಸಮಂ ದೆಸೆಯಂತುವರಂ ನಿಮಿರ್ಚಿದಂ ॥ ೩೮ ॥

---

1 ಮೊಳ್. ಕ. ಖ. ಗ. ಘ.

2 ವೇಳ್ದು. ಗ. ಘ

ಕಂ ॥ ಚತುರುದಧಿ ಮೇಖಲಾಲಂ
ಕೃತ ವಸುಧಾದೇವಿಗಜ್ಜ಼ಗಾಪಿನವರ್ ದಿ ॥
ಕ್ಕೃತಿಗಳೆನೆ, ಸಾರ್ವಭೌಮೋ
ನ್ನತಿಯಂ ತಳೆದಂ ಸುಕೌಶಲ ಕ್ಷಿತಿನಾಥಂ ॥ ೩೯ ॥

ಆ ಸುಕೌಶಲನ ಜನನಿಯಪ್ಪ ಸಹದೇವಿ ಸಹಚರೀಸಮನ್ವಿತೆ ಮಣಿಮಾಡದ ನೆಲೆಯ ಮಣಿಮಯಾಸನದ ಮೇಲೆ ಲೀಲೆಯಿಂ ಕುಳ್ಳಿರ್ದುದುಮೊಂದುದಿವಸಂ—

ಕಂ ॥ ಊರಡವಿಯೆಂಬ ಬಗೆಯಂ
ತಾರಧೃತಿತ್ವರಿತ.ಮಂದಮಲ್ತೆನೆ ಗೆತ್ತಿ,ಬಂ ॥
ದೂರಂ ಯತಿಪತಿ ಪೊಕ್ಕಂ,
ತಾರಾಪತಿಯಂತೆ ಪಡೆದು ನಯನೋತ್ಸವಮಂ ॥ ೪೦ ॥

ಕಂ ॥ ಮುನಿಯಂ ಕಂಡಾ ಕ್ಷಣದೊಳೆ
ತನೂಭವಂ ದೀಕ್ಷೆಗೊಳ್ಗುಮೆಂಬಾವೇಶಂ ॥
ಮನದೊಳಿರೆ ಲೋಚನಾತಿಥಿ
ಯನತಿಥಿಯಂ ಕಂಡು ಕಲುಷಮಂ ಕೈಕೊಂಡಳ್ ೪೧ ॥

ಗುಣಹೀನೆ ಧರ್ಮಹಾನಿಯು
ನೆಣಿಸದೆ ಪಾಪಕ್ಕೆ ಮಣಿಯದುಪವಾಸದ ಪಾ ॥
ರಣೆಯೊಳೆ ಪೊಟಲಿಂದ್ಧತಿ ದಾ
ರುಣಮತಿ ಪೊಜಮಡಿಸಿ ಕಳೆದಳಾ ಯತಿಪತಿಯಂ ೪೨ ॥

ಮ ॥ ಪತಿ ಮುನ್ನಂ ತನಗೆಂಬಿದಂ ಬಗೆದಳಿಲ್ಲಿಕ್ಷ್ವಾಕುವಂಶಾವನೀ ।
ಪತಿ ಲೋಕ ಸ್ತುತನೆಂಬುದಂ ನೆನೆದಳಿಲ್ಲೀಗಳ್ ತಪೋಮಾರ್ಗ ವಿ ॥
ಶ್ರುತನೆಂಬುನ್ನತಿಯಂ ವಿಚಾರಿಸಿದಳಿಲ್ಲಾ ಕಾಂತೆ ದುರ್ಮೋಹದಿಂ ।
ಮತಿಗೆಟ್ಟಾ ಯತಿಯಂ ಪರಾಭವಿಸಿ ಚರ್ಯಾವಿಘ್ನಮಂ ಮಾಡಿದಳ್ ॥ ೪೩ ॥

ಆಗಳದಂ ಕಂಡು ಸುಕೌಶಲನ ದಾದಿಯಪ್ಪ ವಸಂತಮಾಲೆ ಕೀರ್ತಿಧರ ನರೇಂದ್ರನಪ್ಪುದನಱಿದು—

ಕಂ ॥ ಅಪಮಾನಮಂ ಸುಕೌಶಲ
ನೃಪಾಲ ಜನಕಂಗೆ,ಪತಿಗೆ,ಕೀರ್ತಿಧರ ಕ್ಷ ॥
ತ್ರ ಪವಿತ್ರಂಗೊಡರಿಸಿದಳ್
ವಿಪರೀತಮಿದೆಂದು ನೊಂದು ಶೋಕಂಗೆಯ್ವಳ್ ॥ ೪೪ ॥

ಆಗಳ್—

ಮ ॥ ಬಸಿಱಂ ಪೋದಿಕೊಳುತ್ತುಮಿಪ್ಪ ನಿಜಧಾತ್ರೀವಕ್ತ್ರಮಂ ನೋಡಿ ಜೇ ।
ವಸಮಂ ನಿಮ್ಮ ಮನಕ್ಕೆ ನಿರ್ಭಯದಿನಾವಂ ತಂದನಾತಂಗೆ ಸೈ ॥
ರಿಸೆನಾನೆಂದು ಸುಕೌಶಲ ಕ್ಷಿತಿಭುಜಂ ಕಟ್ಟಾಗ್ರಹಂಗೆಯ್ಯೆ ಸೂ ।
ಚಿಸಿದಳ್ ಕಾಂತೆ ವಸಂತಮಾಲೆ ನಿಜ ಶೋಕೋದ್ರೇಕ ವೃತ್ತಾಂತಮಂ ॥ ೪೫ ॥

ಅದಂ ನೆಱೆಯೆ ಕೇಳ್ದು—

ಮ ॥ ಪಸುಗೂಸಿಂಗೆನಗಿತ್ತು ರಾಜ್ಯಪದಮಂ ನಿಂದಂ ತಪೋರಾಜ್ಯದೊಳ್ ।
ವಸುಧಾವಲ್ಲಭನಾ ಮುನೀಶ್ವರನ ಪಾದೋಪಾಂತಮಂ ಪೊರ್ದಿ ಸಾ ।
ಧಿಸುವೆಂ ನಿರ್ವೃತಿಸೌಖ್ಯಮಂ, ವಿಷಯಸೌಖ್ಯಂ ಮುಖ್ಯಮಲ್ತೆಂದು ಭಾ ।
ವಿಸಿ ಬಿಟ್ಟಂ ಸಿರಿಯಂ ಸುಕೌಶಲನದೇಂ ವೈರಾಗ್ಯಸಂಪನ್ನನೋ ॥ ೪೬ ॥

ಕಂ ॥ ಮುನಿಭೋಜನವಿಘ್ನಂ ಮ
ಜ್ಜನನಿಯಿನಾಯ್ತೆನ್ನ ದೂಸಱಿಂ[1] ತಾಯ್ಗೇನಾಂ ॥
ಮುನಿವೆನೊ ಮುನಿಯಪ್ಪನ್ನೆಗ
ಮನಶನಮೆನಗೆಂದು ಚಿತ್ತದೊಳ್ ತಱಿಸಂದಂ ॥ ॥ ೪೭ ॥

ಅಂತು ಪರಿಚ್ಛೇದಿಸಿ—

ಕಂ ॥ ಧವಲಾತಪತ್ರ ವಾರಣ
ವಿವಿಧ ಧ್ವಜ ಚಾಮರಂಗಳಂ ರಾಜ್ಯಶ್ರೀ ॥
ಗಿವು ತೊಡವೆಂದವನೊಲ್ಲದೆ
ಭುವನೇಶಂ ರಾಜಭವನಮಂ ಪೊಱಮಟ್ಟಂ ॥ ೪೮ ॥

ಅಂತು ಪೊಱಮಟ್ಟು ಪಾದಮಾರ್ಗದಿನುಪವನಮನೆಯ್ದಿ ಕೀರ್ತಿಧರ ಭಟ್ಟಾರಕರಂ ತ್ರಿಃಪ್ರದಕ್ಷಿಣಂಗೆಯ್ದು ದೀಕ್ಷಾಪ್ರಸಾದಮೆಂದು ವಂದಿಸಿ ಕುಳ್ಳಿರ್ದುಮಾಗಳಖಿಲಪರಿಜನಂ ಸಂಭ್ರಮಂಬೆರಸು ಬಂದು—

ಮ ॥ ಎಮಗಿನ್ನಾರ್ ಶರಣೆಂದು ಮಾಂಡಲಿಕರುಂ ಸಾಮಂತರುಂ ಮಂತ್ರಿ ವ ।
ರ್ಗಮುಮಂತಃಪುರಮುಂ ವಿಲಾಸಿನಿಯರುಂ ಬಾಯ್ವಿಟ್ಟು ಪುಯ್ಯಲ್ಚೆ ಶೋ ।
ಕಮಿದೇಕೇಕೆಯ ಗರ್ಭದರ್ಭಕನೆ ನಿಮ್ಮಂ ರಕ್ಷಿಸಲ್ಕಾಲ್ಗುಮೆಂ ।
ದು ಮಹಾದೇವಿಗೆ ಚಿತ್ರಮಾಲೆಗವರಂ ಭೂಪಾಲನೊಪ್ಪಿಸಿದಂ ॥ ೪೯ ॥

---

1 ತಾಯೆನ್ನಂ. ಕ. ಖ; ತಾಯ್ಗೆಸಂ. ಗ. ಘ. ಚ.

ಕಂ॥ ಸ್ತ್ರೀ ಬಾಲ ಸಾಧ್ಯವಿಳೆ ನಿ
ವ್ರ್ಯಾ ಬಾಹಾಬಲದಿನಾದುದೆನಗಾ ತೆಱದಿಂ॥
ದೀ ಬಾಲೆಯ ಗರ್ಭದೊಳಿ
ರ್ದಾ ಬಾಲನನರಸುಮಾಡ್ಪುದಿದು ನಿಮಗೆ ಬೆಸಂ॥ ॥ ೫೦ ॥

ಎಂದು ಪರಿಜನಮನೊಡಂಬಡಿಸಿ ಕೀರ್ತಿಧರ ಮುಮುಕ್ಷುಗಳ ಸಮಕ್ಷದೊಳ್ ದೀಕ್ಷೆಯಂ ಕೈಕೊಂಡು—

ಕಂ॥ ಶ್ರುತದಗ್ಗಳಿಕ್ಕೆ ತಪದು
ನ್ನತಿಕ್ಕೆ ತನ್ನೊಳೆ ನೆಗೞ್ತೆವೆತ್ತಿರೆ ಭೂವಿ॥
ಶ್ರುತನೆನೆ ಸುಕೌಶಲ ವ್ರತಿ
ಪತಿ ತಪದಿಂ ಶ್ರುತದಿನಾರುಮಂ ಗೆಲೆವಂಥಂ ॥ ೫೧ ॥

ಅಂತವಿಶ್ರಾನ್ತತಪಶ್ರೀಯನಪ್ಪುಕೆಯ್ದಿರ್ಪಿನಂ—

ಕಂ॥ ಕಡವಲರ್ದುವು ಮೊಲ್ಲೆಯ ಪೂ
ಗುಡಿ ನಿಮಿರ್ದುವು ಸೋಗೆ ಕೇಗಿದುವು ಕೇದಗೆ ಪೆ॥
ಳ್ಪುಡಿವೋದುವು ಚಾದಗೆಗಳ್
ಕಡಂಗಿ ನುಂಗಿದುವು ತೋರವನಿಯಂ ಕಾರೊಳ್ ॥ ೫೨ ॥

ಆ ಘನಸಮಯ ಪ್ರವೇಶದೊಳ್ ತನ್ಮುನಿಯುಗಳಂ ವೃಕ್ಷಮೂಲನಿಯೋಗ ನಿರ್ವರ್ತನಾನಂತರಂ ಯೋಗ್ಯಕಾಲಾವೇಕ್ಷೆಯಿಂ ಕಾಂತಾರಭಿಕ್ಷೆಗೆ ಬರುತಿರೆ—

ಉ॥ ಕಣ್ಬುಗಲ್ಪು ದವ್ಯಯುನಿಗಿತ್ತಪಮಾನದಿನಾರ್ತರೌದ್ರದಿಂ।
ಪೆಣ್ಬುಲಿಯಾಗಿ ಪುಟ್ಟೆ ಸಹದೇವಿ ಬರುತ್ತಿರೆ ಕಂಡಶಂಕಿತರ್
ಕಣ್ಬೊಲದೊಳ್ ನಿವೃತ್ತಿಪರಿಣಾಮಮೊಡಂಬಡೆ ಧರ್ಮಶುಕ್ಲದೊಳ್
ಜಾಣ್ಣಡೆದಿಕ್ಕೆ ಕೈಯನುಪಸರ್ಗ ಸಹಿಷ್ಣುಗಳಿರ್ದರಿರ್ವರುಂ ॥ ೫೩ ॥

ಮ॥ಸ್ರ॥ ತನುವಂ ಬೇರ್ಕೆಯ್ದು ತಮ್ಮಂ ಮುನಿಪತಿಗಳನುಪ್ರೇಕ್ಷೆಯಂ ತಾಳ್ದಿ ಸನ್ಯಾ।
ಸನಯುಕ್ತರ್ಚಿತ್ತದೊಳ್ ನಿಶ್ಚಲವಿರಿಸಿ ಜಿನಶ್ರೀ ಪದಾಬ್ಜಂಗಳಂ ಪಂ॥
ಚ ನಮಸ್ಕಾರಂಗಳಂ ನಾಲಗೆ ಜಪಿಯಿಸೆ ಗುಂಜದ್ಘನಾ ರಂಜಿತಂ ಕಾಂ।
ಚನಶೈಲದ್ವಂದ್ವಮಿರ್ಪಂತಿರೆ ಶುಭಚರಿತರ್ ಪೂಣ್ದು ಕೈಯಿಕ್ಕಿ ನಿಂದರ್॥ ೫೪ ॥

ಅಂತು ನಿಂದ ಮುನಿಯುಗಳಮಂ ಕಂಡು ಕಡು ಮುಳಿದು—

ಮ ॥ ಜಡಿಯುತ್ತುಂ ಬಾಲಮಂ, ಕಣ್ಣುರಿಯನುಗುಳೆ, ಜಿಹ್ವಾನಲಂ ಪೆರ್ಚೆ, ಬಾಯ್ಬಿ।
ಟ್ಟೊಡೆವನ್ನಂ ಗರ್ಜಿಸುತ್ತುಂ ಪವನಜವದೆ ಮೇಲ್ವಾಯ್ದು ಪೊಯ್ದುತ್ತು, ಕೈಯೊ॥
ಜ್ಜಿಡೆಯಿಂ ಬಾಯೋಜ್ಜ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ।
ಸಿಡಿಲೆಂಬಾಶಂಕೆಯಂ ಪೆಣ್ಬುಲಿ ಪಡೆದು ಪೆತ್ತ ಗೇರ್ಧಕ್ತಸೇವಾನುರಕ್ತಂ ॥ ೫೫ ॥

ಅಂತಾಪುಲಿ ಮುನೀಂದ್ರಯುಗಳದ ಮೇಲೆ ಪಾಯ್ದುಗಿಬಗಿಮಾಡುದುಮಾ ಮ
ಹೋಪಸರ್ಗಮಂ ಸೈರಿಸಿ—

ಕಂ ॥ ಘಾತಿಯುಮನಘಾತಿಯುಮಂ
ಘಾತಿಸಿ ಕೀರ್ತಿಧರ ಯೋಗಿ[1] ಮುಕ್ತಿಗೆ ಸಂದಂ॥
ಘಾತಿಕ್ಷಯದಿಂ ಕೈವ
ಲ್ಯಾತಿಶಯಂಬೆತ್ತ ನಾ ಸುಕೌಶಲ ಮುನಿಪಂ ॥ ೫೬ ॥

ಉ ॥ ಇತ್ತ ವಿಚಿತ್ರಮಾಲೆಗೆ ತನೂಭವನಾಗೆ, ಹಿರಣ್ಯಗರ್ಭನೆಂ।
ದತ್ತು ಧರಿತ್ರಿಗರ್ಭದೊಳೆ ವಲ್ಲಭನಾಗೆ ಸಮಸ್ತರಾಜ್ಯಸಂ॥
ಪತ್ತಿಗೆ ತತ್ಸುತಂ ಬಳೆದು ಚಾಗದ ಬೀರದ ಪೆರ್ಮೆಯಿಂ ದಿಶಾ।
ಭಿತ್ತಿಯನೆಂಟನೆಯ್ದೆ ತೆರೆಸುತ್ತಿದನಾತ್ಮ ಯಶೋ ದುಕೂಲದಿಂ ॥ ೫೭ ॥

ಕಂ ॥ ಸರಸ ಬಿಸಗರ್ಭಗೌರಂ
ಪರೆಯೆ ಜಸಂ, ಪರಪುರಕ್ಕೆ ಗರ್ಭಸ್ರಾವಂ ॥
ದೊರೆಕೊಳೆ, ಹಿರಣ್ಯಗರ್ಭಂ
ಧರಿತ್ರಿಯಂ ಹರ್ಷಗರ್ಭಮೆನೆ ಪಾಲಿಸಿದಂ, ॥ ೫೮ ॥

ತದಪತ್ಯಂ ನಹುಷಂ ಚತು
ರುದಧಿವರಂ ವಸುಧೆಯಂ ನಿಮಿರ್ಚೆ, ಭುಜಾಗ ।
ರ್ವದಗುರ್ವಿಂ ಮಾಣ್ದನೆ ಚತು
ರುದಧಿಯೊಳುದವಾಸಮಿರಿಸಿದಂ ರಿಪುನೃಪರಂ ॥ ೫೯ ॥

ಈ ಸಕಲ ಧರೆಯನುಗ್ರಭು
ಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂ ॥
ನ್ಯಾಸಂ ರಿಪು ದಾರಕರಂ ।
ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ ॥ ೬೦ ॥

ತತ್ತನೂಭವಂ—

---

1. ಕೇವಲಿಯಾದಂ. ಚ.

ಕಂ॥ ಸಂಹರಿಸಿ ರಿಪು ಮದದ್ವಿಪ
ಸಂಹತಿಯಂ, ಬೀರಸಿರಿಗೆ ವಲ್ಲಭನಾದಂ॥
ಸಿಂಹಪರಾಕ್ರಮನೆನಿಸಿದ
ಸಿಂಹರಥಂ ಸಾರ್ವಭೌಮವಿಭವ ಸನಾಥಂ ॥ ೬೧ ॥

ಆ ಸಿಂಹರಥನ ಸುತನಯೋಧ್ಯಾಸಿಂಹಾಸನಮನಲಂಕರಿಸಿ—

ಕಂ॥ ಒರ್ವನೆ ಧನ್ವಿಯೆನಲ್ ಸಕ
ಲೋರ್ವರೆಯಂ ಕಾದು ತನ್ನ ಬಾಣದ ಮೊನೆಯೊಳ್ ॥
ಮೂರ್ವಲಮುಂ ತವಿಸಿದನೆನೆ
ದೋರ್ವಲಮೇಂ ಬ್ರಹ್ಮರಥನೊಳ ವಿತಥಮಾಯ್ತೋ ॥ ೬೨ ॥

ತತ್ತನಯಂ—

ಕಂ ಸಮರ ಮುಖದೊಳ್ ವಿರೋಧಿ
ಪ್ರಮುಖರನೆಯ್ಸಿ ಸೆ ಶಿಲೀಮುಖಂ ಯಮ ಮುಖಮಂ॥
ಕ್ಷಮೆಯಂ ತಳೆದಂ ಚಾಪಾ
ಗಮ ಚತುರ್ರ್ಭ ಚತುರ್ಮುಖಂ ಚತುರ್ಮುಖನೆಂಬಂ ॥ ೬೩ ॥

ಭೂಮಂಡಲಮಂ ತಳೆದಂ
[1]ಕ್ಷೇಮಾಸ್ಪದಮಾಗೆ, ನಾಮಮಹಿಮೋನ್ನತಿಯಿಂ ॥
ಹೇಮಾಚಲಮಂ ಮೆಚ್ಚಂ,
ಹೇಮರಥಂ ಶ್ರುತಿಮುಖಂ ಚತುರ್ಮುಖತನಯಂ ॥ ೬೪ ॥

ಆ ರಾಜಸುತಂ ಕೀರ್ತಿ ಸು
ಧಾರಸದಿಂ ತಣ್ಪುವಡೆದು ಪರಿಪೂರ್ಣಕಲಾ ॥
ಧಾರಂ ಸಕಲೇಂದುರಥಂ
ವೈರಿ ಮನೋರಥ ರಥಾಂಗಮುಂ ವಿಘಟಿಸಿದಂ ॥ ೬೫ ॥

ಆ ಮಹೀಭುಜನ ತನೂಭವಂ—

ಕಂ॥ ತೇಜಂ ಪುದುವಿಲ್ಲೆನಿಸಿ ವಿ
ರಾಜಿಸೆ, ಪರರಾಜಮಂಡಲಂ ತನ್ನಿಂ ನಿ ॥
ಸ್ತೇಜಂ ಬೆತ್ತಿರೆ, ಬೆಳಗಿದ
ಸೀ ಜಗಮಂ ಭಾನುವೆಂಬಿನಂ ಭಾನುರಥಂ ॥ ೬೬ ॥

1. ಪ್ರೇಮಾ. ಕ. ಖ. ಚ.

ಮತ್ತಂ ತದನ್ವಯದೊಳ್ ಮಯ ಮಾಂಧಾತೃ ವೀರಸೇನ ಕಮಲಬಂಧು ವಸನ್ತತಿಲಕ ಕುಬೇರದತ್ತ[1] ಮೃಗಾರಿದಮನ ದ್ವಿಪರಥ ಹಿರಣ್ಯಕಶಿಪ್ಪುರ್ಕರಥ[2] ದಿಲೀಪ ರಘುವೀರ ಪ್ರಮುಖರೆನಿಬರಾನುಮ್ಮರಸುಗಳನುಕ್ರಮದಿಂ ರಾಜ್ಯಂಗೆಯ್ದು ಕೆಲಬರಮರಕಾಮಿನೀ ಕಚಗ್ರಹಣಮುಂ ಕೆಲಂಬರಮೃತಲಕ್ಷ್ಮೀಪಾಣಿಗ್ರಹಣಮುಂ ಪಡೆವುದುಂ—

ಕಂ ॥ ಧರಣೀಪ್ರಾಕಾರದ ವೀ
ರ ರಸಾರ್ಣವ ಸೇತು ದಾನಗುಣಭೂಷಣ ದಿ ॥
ಕ್ಕರಿ ಧರ್ಮರತ್ನರೋಹಣ
ಗಿರೀಂದ್ರಮಿಕ್ಷ್ವಾಕು ವಂಶಮಾಯ್ತಪ್ರತಿಮಂ ॥ ೬೭ ॥

ಆ ವಂಶದೊಳ್ ವಿನೀತಾಪುರಮನಾಳ್ವನನರಣ್ಯನೆಂಬರಸನಖಿಲ ರಾಜಕುಲ ಮಣಿಮುಕುಟ ಮಕರಿಕಾಪತ್ರ ವಿಚಿತ್ರಚಿತ್ರಿತ ಪಾದಪೀಠಂ—

ಕಂ ॥ ನೆನೆಯಿಸುವಂ ಮಾನ್ಯಪುರಾ
ತನ ರಾಜನ್ಯಕಮನತುಲ ಬಾಹಾ ಬಲದಿಂ ॥
ದನರಣ್ಯಂ ಕೃತಪುಣ್ಯಂ
ಮನುವಂಶ ವರೇಣ್ಯನಖಿಲ ಭುವನ ಶರಣ್ಯಂ ॥ ೬೮ ॥

ಅನರಣ್ಯನೆಂಬ ಪೆಸರಂ
ಜನಪತಿದೇಶದೊಳರಣ್ಯಮಿಲ್ಲೆನೆ ನಾನಾ ॥
ಜನಪದಮುಂ ಪಡೆದು ಜಗ
ಜ್ಜನಂ ಕುಡಲ್ ಪಡೆದನುನ್ನತ ಪಡ್ಡದನ ಪೆಸರಂ ॥ ೬೯ ॥

ನ್ಯಾಯಾರ್ಜಿತವಿತ್ತಂ ಧ
ರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇ ॥
ಕಾಯತ್ತಮಾಗೆ ಧರೆಯಂ
ಜೀಯೆನಿಸಿದನಿಂತುದಾತ್ತ ಚರಿತರುಮೊಳರೇ ॥ ೭೦ ॥

ಆ ವಸುಧಾವಲ್ಲಭನ ಮ
ನೋವಲ್ಲಭೆ ರೂಪವತಿ ಕಲಾವತಿ ಪೃ ॥
ಥ್ವೀವಧು ಧೈರ್ಯದೊಳಂ ಪೃ
ಥ್ವೀವನಿತೆಗೆ ಯುವತಿ ಸವತಿಯೆನೆ ಪೆಸರ್ವಡೆದಳ್ ॥ ೭೧ ॥

1. ಮೃಗಾರಿ ಮದನದ್ವಿಪ. ಚ. ಮೃಗಾರಿ ಮದದ್ವಿಪ. ಕ. ಖ.
2. ದಿಲೀಪ ಪುರೂರವ ರಘುವೀರ ಗ. ಘ.

ಕಂ ॥ ಕಡುಚೆಲ್ವಿಂ ರತಿಗೆಗ್ಗಂ
ಪಡೆದು ವಿಲಾಸಕ್ಕೆ ದೇಸಿವಡೆದವನಿಪನೊಳ್
ಪಡೆದು ಪಿರಿಯರಸಿತನಮಂ
ಪಡೆದಳ್ ತನಯರನನಂತರಥ ದಶರಥರಂ

ಆ ಪೃಥ್ವೀವಧೂಮಹಾದೇವಿಯೊಳಖಿಲ ಪೃಥ್ವೀವಲ್ಲಭಂ ಧರ್ಮಾರ್ಥವಿರುದ್ಧಮಾಗದಂತು ವಿಷಯಸುಖಮನನುಭವಿಸುತ್ತಿರ್ದೊಂದು ದಿವಸಂ—

ಮ ॥ ಭುವನ ಸ್ತುತ್ಯಪದಂ ಸಹಸ್ರಕಿರಣಂ ಸ್ವಭ್ರಾನುವಿಂದಂ ಪರಾ ।
ಭವಮಂ ಪೊರ್ದುವವೋಲ್ ಸಹಸ್ರಕಿರಣಂ ಮಾಹಿಷ್ಮತೀವಲ್ಲಭಂ ॥
ಬವರಂಗೆಯ್ದು ದಶಾನನಂಗೆ ರಣದೊಳ್ ಸೋಲ್ತೀವದಿಂ ಕ್ಷತ್ರ ಪು ।
ತ್ರವರೇಣ್ಯಂ ಜಿನದೀಕ್ಷೆಗೊಂಡನನರಣ್ಯಂ ಕೇಳ್ದನಾ ವಾರ್ತೆಯಂ ॥ ೭೩ ॥

ಅಂತು ಕೇಳ್ದುದುವೆ ತನಗೆ ನಿರ್ವೇಗನಿಮಿತ್ತಮಾಗೆ—

ಕಂ ॥ ಕೆಳೆಯಂ ಸಹಸ್ರಕಿರಣಂ
ತಳೆದಂ ದೀಕ್ಷೆಯನುಪೇಕ್ಷಿಸಲ್ ಪದನಲ್ಲೀ
ಯುಳಿಯನಪೇಕ್ಷಿಸೆನೆಂದಾ
ಗಳನಂತರಥಂಗೆ ನುಡಿದನಿಂತನರಣ್ಯಂ ॥ ೭೪ ॥

ಸ್ರ ॥ ಪಡೆದೆಂ ನಿನ್ನನ್ನನಂ ರಕ್ಷಿಸಲಖಿಲಧರಾಚಕ್ರಮಂ ಪುತ್ರ ನೀಂ ಬೆ ।
ಳ್ಗೊಡೆಯಂ ಕೈಕೊಳ್ ಧರಾಭಾರಮನಿಱಪೆನಗೆಂದಂಗೆ ದಂತಾಂಶು ಜಾಲಂ ॥
ಕುಡಿಮಿಂಚಂ ಬೀಱೆ ಕೈಯಂ ಮುಗಿದು ನುಡಿದನೇವಾತೊ ನಿರ್ವಾಣಮಾರ್ಗ ।
ಕ್ಕೊಡಸಲ್ವೆಂ ನಿಮ್ಮ ಚಿತ್ತಕ್ಕೆಡಱದ ನೆಲನಂ ದೇವ ಕೈಕೊಳ್ವನಲ್ಲೆಂ ॥ ೭೫ ॥

ಎಂದು ತನ್ನೊಡನೆ ತಪಂಬಡಲೊಡಂಬಟ್ಟು ತಱಿಸಂದು ನುಡಿವುದುಮೊಂದು ತಿಂಗಳ ಮಗನಪ್ಪ ದಶರಥಂಗೆ ಪಟ್ಟಂಗಟ್ಟಿ ತಾನುಮನಂತರಥನುಂ ಅಭಯಘೋಷಭಟ್ಟಾರಕರ ಪಾದೋಪಾಂತದೊಳ್ ತಪಂಬಟ್ಟು—

ಕಂ ॥ ಅನರಣ್ಯಂ ಮುಕ್ತಿಶ್ರೀ
ವನಿತಾವರನಾದನಂತನನಂತರಥಂ ಚಿ ॥
ತ್ತನಿರೋಧ-ದಗ್ಧಕರ್ಮೇಂ
ಧನ ಭಾರನನಂತ ವೀರ್ಯಕೇವಲಿಯಾದಂ ॥ ೭೬ ॥

ಆ ಮಹಾಮಹಿಮೆಯೊಳ್—

ಮ ॥ ಸ್ರ॥ ಅಮರೇಂದ್ರೋದ್ಯಾನದಿಂ ಪೂಮಳೆ ಕಱೆಯೆ ಸುರೇಂದ್ರಾಗಮಂ ರಾಗಮಂ ಬೀ।
ಱೆ ಮುರುದ್ಗಂಭೀರ ಭೇರೀನಿನದಮೊದವೆ ನಿರ್ವಾಣ[1]ಕೈವಲ್ಯಮಾಂಗ ॥
ಲ್ಯ ಮಹೋತ್ಸಾಹ ಪ್ರಮೋದಾಮರ ಕಲಕಲಮಾನಂದಮಂ ಮಾಡೆಗೋಮಾಂ।
ಚಮನಾನಂದಾಶ್ರುವಂ ತಾಳ್ದಿದನಮಲಯಶಂ ಭಾರತೀಕರ್ಣಪೂರಂ ॥ ೭೭ ॥

ಇದು ಪರಮಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖಕಿರಣ ಚಂದ್ರಿಕಾಚಕೋರ
ಭಾರತೀಕರ್ಣಪೂರ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರ ಚರಿತ
ಪುರಾಣದೊಳ್ ವಂಶವರ್ಣನಂ
—ದ್ವಿತೀಯಾಶ್ವಾಸಂ—

# ತೃತೀಯಾಶ್ವಾಸಂ

ಕಂ ॥ ಶ್ರೀವನಿತೆ ವಕ್ಷದೊಳ್ ಮು
ಕ್ತಾವಳಿಯಂತೆಸೆಯೆ ತೊಟ್ಟಿಲೊಳ್ ಪಟ್ಟಿತ್ತ ॥
ಲ್ಬಾವಳಯಂ ಭುಜದೊಳ್ ಶೋ
ಭಾವಹಮೆನೆ ಪೆಂಪುವೆತ್ತನಭಿನವಪಂಪಂ

ಎಳನೇಸಜಂತೆ ಜಗಮಂ
ಬೆಳಗಿದನೆಳದಿಂಗಳಂತೆ ಸಕಲ ಧರಿತ್ರೀ ॥
ತಳಮನೆಱಗಿಸಿದನೆಳವೆಯೊ
ಳೆಳೆ ಬಣ್ಣಿಸೆ ದಶರಥಂ ಭಗೀರಥ ಚರಿತಂ

ಆ ವಂಶಜರ ಗುಣಂಗಳ
ನಾವಗಮೊಳಕೊಂಡು ತನ್ನ ವಿಶದ ಯಶೋ ಮು ॥
ಕ್ತಾವಳಿಯಂ ಧರೆಗಿತ್ತು ಧ
ರಾವಲ್ಲಭನತ್ಯುದಾತ್ತನೆನೆ ಪೆಸರ್ವಡೆದಂ,

ಚಿರಕಾಲದ ಕಱೆವೂವೆಂ
ದಿರದೆ ವಿರಿಂಚಿಯ್ಯ ಮುಖಾರವಿಂದಮನುಱದಾ ॥
ದರದಿಂದಿರ್ದಳ್ ಸಿತಮಧು
ಕರವಧು ವಾಗ್ವಧು ನರೇಂದ್ರ ಮುಖಸರಸಿಜದೊಳ್,

ಜಡಧಿಯ ರತ್ನಂಗಳ್ಪೊಂ
ದೊಡವಿನುಪಾಶ್ರಯದಿನೆಸೆವವೋಲ್ ದಶರಥನಿಂ ॥
ಜಡಜಜನ ವಿದ್ಯೆಗಳ್ ನೂ
ರ್ಮಡಿಸಿದುವಾಶ್ರಯ ವಿಶೇಷಮೇಂ ಕೇವಲಮೇ

ಅಱುವತ್ತುನಾಲ್ಕು ವಿದ್ಯೆಯ
ನಱದುಂ ದಶರಥನ ಚಿತ್ತಮನುರಾಗದಿನೇ ॥
ನೆಱಗಿದುದೊ ಧರ್ಮಶಾಸ್ತ್ರ
ಕ್ಕಱವುಳ್ಳಂ ವಿಕಥೆಯೊಳ್ ಮನಂ ನಿಱಸುಗುಮೇ

ಕಂ || ಓದಿದೊಡೇನರಗಿಳಿ ಕ
ಲ್ತೋದುವವೋಲ್ ಧರ್ಮಶಾಸ್ತ್ರಮಂ ದಶರಥನಂ ||
ತೋದಿ ತಿಳಿದವನಿಪತಿ ಮ
ರ್ಯಾದೆಯೊಳಿಸಗುವುದು ಧರ್ಮಪರನೆನೆ ಲೋಕಂ || ೭ ||

ಕಾದಳ್ ವರ್ಣಾಶ್ರಮ[1]ಧ
ರ್ಮಾದಿಗಳಂ ಮಾಜದಂತು ನೆಲನಂ ನೃಪನಾ ||
ಜ್ಞಾ ದೇವತೆ ವೇದಿಕೆ ಮ
ರ್ಯಾದೆಯೊಳಂಭೋನಿಧಾನಮಂ ನಿಲಿಸುವವೋಲ್ || ೮ ||

ಚ || ಮನಮೆಳದಾಗೆ ವೈರಿಗೆ,ಮುನೀಷಿಜನಂ ಮನಮಾಯೆ ಮಾನಿನೀ
ಜನಮುಭಿಮಾನಮಂ ಮಜಿಯೆ ಭೂಭುವನ ಸ್ತವನೀಯಮಾದುದಾ ||
ತನ ಬಲಗೈಯೊಳಿರ್ಪ ಜಯಲಕ್ಷ್ಮಿಗ್ರಮಾತನ ಸೊಲ್ಲೊಳಿರ್ಪ ವಾ
ಗ್ವನಿತೆಗಮಾ ಮಹೀಪತಿಗಮುಪ್ಪತಿಮಂ ಪರಿಪೂರ್ಣ ಯೌವನಂ || ೯ ||

ಅಂತು ದಶರಥ ನರನಾಥಂ ನವಯೌವನಲಕ್ಷ್ಮಿಯನಪ್ಪುಕೆಯ್ದು ಲಾವ ಣ್ಯಲಕ್ಷ್ಮೀ ವಿರಾಜಿತೆಯೆನಿಪ್ಪಪರಾಜಿತೆಯುಮಂ, ಮದನ ವ್ಯೋಹನ ವಿದ್ಯಾದೇವತೆಯ ಮಿತ್ರೆಯೆನಿಪ್ಪ ಸುಮಿತ್ರೆಯುಮಂ, ಕಂತು ಸಂತಾಪನ ದೀಪ ಕಳಿಕಾ ಪ್ರಭೆಯೆನಿಪ್ಪ ಸುಪ್ರ ಭೆಯುಮಂ, ಓರೊರ್ವ ಪೇರುರದೊಳಿರ್ಪ ಸಿರಿಯಂ ಗಾಢಾಲಿಂಗನದ ನೆವದಿಂ ನೆಲೆಮೊಲೆ ಯೊಳಿಟ್ಟೊತ್ತುವಂತೆರ್ದೆವತ್ತುಗೆವೆತ್ತು, ಕಲಭಾಷಿತ ಸುಧಾಜಲದಿಂ ಸರಸ್ವತಿಯ ಕಲಾ ವಲೇಪಮಂ ಕರ್ಚಿ ಕಳೆವಂತೆ ಮೊಗಂಬಡೆದು, ಪ್ರಣಯಕಲಹ ಕೇಳಿಯಿಂ ವಿಜಯ ಶ್ರೀಯಂ ಜನಿಸುವಂತೆ ತೋಳ್ವಿರಗನಪ್ಪುಕೆಯ್ದು, ತನಗೆ ಮನೋನಯನ ವಲ್ಲಭೆ ಯರೆನಿಸೆ—

ಕಂ || ಕುಲಸತಿಯರಿಂ ನೃಪಂ ದಾ
ನ ಲೇಖೆಯಿಂ ದಿಗಿಭಮಮೃತಕಳೆಯಿಂ ಶಶಿ ಮೇ ||
ಖಲೆಯಿಂ ಮಂದರಶೈಲಂ,
ವಿಲಾಸಮಂ ತಳೆದುದೆನೆ ಬೆಡಂಗಂ ತಳೆದಂ || ೧೦ ||

ಇನನನೆಂತು ಬೆರಸಿ ಸಂಜೆಯೊ
ಳನುರಾಗಿಯೆನಿಪ್ಪನಂತೆ ನೃಪನಾನೃಪನಂ ||
ದನೆಯರೊಳನುರಾಗದಿನಿ
ರ್ದನವರತಂ ತೊಳಗಿ ಬೆಳಗಿದಂ ಸತ್ಪಥಮಂ || ೧೧ ||

ಕಂ ॥ ನೀರೊಳಗಿರ್ದುಂ ಪೊರ್ದದು
ನೀರಂ ನೀರೇಜಮೆಂಬವೋಲಬಲಾ ಶ್ಯಂ ॥
ಗಾರರಸ ಮಗ್ನನಾಗಿಯು
ಮಾರಳವೆನೆ ತಳೆದನರಸನಿಂದ್ರಿಯ ಜಯಮಂ ॥ ೧೨ ॥

ಮ ॥ ಸ್ರ ॥ ಕುಳಭೂಭೃತ್ಕೂಟದೊಳ್ ಮಾಣಿಕದೆಳವಿಸಿಲೆಂತಂತೆ ದಿಕ್ಕುಂಭಿ ಕುಂಭ।
ಸ್ಥಳದೊಳ್ಸಿಂದೂರಮೆಂತಂತಮರನದಿಯೊಳಾರಕ್ತ ನೀರೇಜ ಪತ್ರಾ ॥
ವಳಿಯೆಂತಂತಬ್ಧಿಯೊಳ್ವಿದ್ರುಮ ಸಮುದಯಮೆಂತಂತೆ ಪರ್ವಿತ್ತು ರಾಗಾ।
ವಿಳಮಪ್ಪಂತುರ್ವಿಯೆಲ್ಲಂ ದಶರಥ ವಸುಧಾಧೀಶ ತೇಜಃಪ್ರಕಾಶಂ ॥ ೧೩ ॥

ಉ ॥ ಖಂಡಿಸಿ ವೈರಿವಂಶವನಮಂ ಕಡಿದುದ್ಧತ ಶಾಖೆಯಂ ಭುಜಾ।
ದಂಡ ಕೃಪಾಣದಿಂ ಸಮಜು ಕಂಟಕಮಂ ಸಮೆದಾತಪತ್ರದಿಂ ॥
ಚಂಡಕರ ಪ್ರತಾಪಮಖಿಲೋರ್ವರೆಗಿಲ್ಲೆನೆ ತಣ್ಪುಮಾಡಿದಂ।
ದಂಡಧರೋತ್ತಮಂ ದಶರಥಂ ಸಫಲೀಕೃತ ಸನ್ಮನೋರಥಂ ॥ ೧೪ ॥

ಚ ॥ ಅನಿಮಿಷ ಗಾಯಕರ್ದಶರಥ ಕ್ಷಿತಿನಾಯಕನಂಕಮಾಲೆಯಂ।
ತನತನಗೊಲ್ದು ಪಾಡುವೆಡೆಯೊಳ್ಪುಳಕಂ ಪೊಜಪೊಣ್ಮೆ ಸೋಲ್ತು ಕೇ ॥
ಳ್ವನಿಮಿಷ ನಾಯಕಂ ತನಗೆ ಚಾಮರಮಿಕ್ಕುವ ದೇವಕಾಮಿನೀ।
ಜನ ಮಣಿಕಂಕಣ ಧ್ವನಿಗೊನಲ್ದವರಂ ಕಿಸುಗಣ್ಣಿ ನೋಡುವಂ ॥ ೧೫ ॥

ಉ ॥ ನೋಡಿರೆ ಕಿನ್ನರರ್ದಶರಥ ಕ್ಷಿತಿನಾಥನ ಬೀರದೇಳ್ಗೆಯಂ।
ಪಾಡೆ[1] ಮರುಳ್ದು ಕೇಳ್ವ ಪದದೊಳ್ಕವಿಸಾರ್ದು ಜಿನುಂಗೆ ಸೌರಭ ॥
ಕ್ಕಾಡುವ ತುಂಬಿಗಳ್ನಿಜನಾಥನವರ್ಕೆ ಕನಲ್ದು ಮಾಣದೀ।
ಡಾಡುವನಾ ನಮೇರು ಕುಸುಮಸ್ತಬಕಂಗಳ ಕರ್ಣಪೂರಮಂ ॥ ೧೬ ॥

ಕಂ ॥ ಬಾಳಬಿಸಿಲಿನನ ತೇಜಮ
ನೇಳಿಸೆ ನೆಲನಂ ಪಯೋಧಿಪರ್ಯಂತಂ ಬಾಯ್
ಕೇಳಿಸಿ ದಶರಥನೊಳ್ಪಂ
ಪಾಳಿಸಿ ಸುಖದಿಂದಮರಸುಗೆಯ್ಯುತ್ತಿರ್ದಂ ॥ ೧೭ ॥

ಆ ನಿಖಿಲರಾಜ ಕಿರೀಟಕೀಲಿತ ಹರಿನೀಲ ಮದಾಳಿಮಾಲಾ ಪರಿಚುಂಬಿತ ಚರಣಾರವಿಂದನೊಂದು ದಿವಸಮಾಪ್ತಪರಿಜನಂಬೆರಸು ಕರುಮಾಡದೆರಡನೆಯ ನೆಲೆ

1. ಮುಗುಳ್ದು. ಕ. ಖ. ಗ. ಘ.

ಯ ವೊಗಸಾಲೆಯೊಳಿಕ್ಕಿದ ಮಣಿಮಯಾಸನಮನಲಂಕರಿಸಿ ಕರ್ಣಪೂರ ಪಾರಿಜಾತ ಸ್ತಬಕ ಪರಿಮಳಕ್ಕೆಳಸಿ ಬಳಸುವೆಳದುಂಬಿಯ ಕಳರವಮನಾಲಿಸುತಿರ್ಪುದುಮಾ ಸಮಯದೊಳ್—

ಮ ॥ ನಯನೋತ್ಸಾಹಮನಿತ್ತು ದೇಹ ರುಚಿಯಿಂದೆಯ್ತಂದನಾಕಾಶ ಗಂ।
ಗೆಯ ನೀರ್ಗ್ಯಾನಿಸನೆಂಬಿನಂ ದಶರಥ ಕ್ಷೋಣೀಶನಾಸ್ಥಾನ ಭೂ ॥
ಮಿಯನಾ ನೀರದಮಾರ್ಗದಿಂದಿಳಿದು ಸನ್ಮಾರ್ಗಕ್ಕೆ ಮೆಯ್ವಾರದ।
ನಯಮಂ ಸಾರದನಾವ ಕಾಳೆಗದೊಳಂ ಕಣ್ಣಾರದಂ ನಾರದಂ ॥ ೧೮ ॥

ಕಂ ॥ ಬಿಸಸೂತ್ರದ ಕಟಿಸೂತ್ರಂ,
ಪೊಸದುಗುಲದ ಕೋವಣಂ, ಕಮಂಡಲು ರಾರಾ ॥
ಜಿಸೆ ದಂಡಪಾಣಿ ಪೊಕ್ಕಂ
ಕಿಸುರಟೋಪಂ, ಪಿಸುಣ ಪಸರಿಗಂ, ನೃಪಸಭೆಯಂ ॥ ೧೯ ॥

ಅಂತಾ ನಾರದಂ ನಭೋಮಂಡಲದಿಂ ಸಭಾಮಂಡಲಕ್ಕವತರಿಸೆ—

ಕಂ ॥ ಇದಿರೆಜ್ದು ಚಾಟುಕಾರಮ
ನುದಾತ್ತನೇನಿತ್ತು ಮಾಣ್ದನೇ ಕಾಂಚನ ಪೀ ॥
ಠದೊಳಿರಿಸಿ ಮುಕುಳಿತಾಂಜಲಿ
ಸದರ್ಭ ಸಾಕ್ಷತಮನರ್ಘ್ಯಪಾದ್ಯಮನಿತ್ತಂ ॥ ೨೦ ॥

ಬಂದ ಬರವಾವುದೀ ಬರ
ವಿಂದಂ ಚರಿತಾರ್ಥನಾದೆನಾನೆಲ್ಲಿಂದಂ ॥
ಬಂದಿರೆನೆ ನೃಪತಿ, ನಾರದ
ನೆಂದಂ ದಶನಾಂಶು ಕೆದಱಿ ಚಂದ್ರಾತಪಮಂ ॥ ೨೧ ॥

ಆನೀ ಜಂಬೂದ್ವೀಪದ ಪೂರ್ವವಿದೇಹದ ಪುಂಡರೀಕಿಣೀಪುರದ ಸೀಮಂಧರಸ್ವಾಮಿಗಳ ಪರಿನಿಷ್ಕ್ರಮಣ ಕಲ್ಯಾಣ ವಿಭೂತಿಯಂ ನೋಡಿ ಬಂದೆನೆಂದು ಸಭೆಯಂ ಕಣ್ಸನ್ನೆಯಿಂ ತೊಲಗಿಸಿ ದಶರಥಂಗೆ ಕಟ್ಟೇಕಾಂತದೊಳಿಂತೆಂದಂ—

ಉ ॥ ಲಂಕೆಗೆ ಪೋಗಿ ಶಾಂತಿ ಜಿನಭಕ್ತಿಯೊಳ್ತಾಂ ಸ್ಮರ ದಾನದಂತಿ ವ।
ಜ್ರಾಂಕುಶ ದರ್ಶನ ಸ್ತವನದಿಂ, ಚರಿತಾರ್ಥನೆನಾದೆನಾಗಿ, ವೀ ॥
ತಾಂಕುಶನಪ್ಪ ರಾವಣನೊಳಂ ನೆರೆದೀನುಡಿಗೇಳ್ದು ನಾಡೆಯುಂ।
ಶಂಕೆಯೊಳೊಂದಿ ಬಂದೆನಱಿಪಲ್ಪೆಱತೇಂ ನಿಮಗಾ ಪ್ರಪಂಚಮಂ ॥ ೨೨ ॥

ಅದೆಂತೆನೆ ವಿಭೀಷಣಂ ಸಾಗರಬುದ್ಧಿವೆಸರ ನೈಮಿತ್ತಿಕನಂ ಬರಿಸಿ ರಾವಣನ ಮರಣಕಾರಣಮುಂ ಬೆಸಗೊಳ್ವುದುಂ—

ಕಂ॥ ಏನುಂ ತೊದಳಿಲ್ಲಿದುವೆ ಶಿ
ಲಾನಿಕ್ಷಿಪ್ತಾಕ್ಷರಂ ವಿಭೀಷಣ ರಣದೊಳ್ ॥
ಜಾನಕಿಯ ದೂಸಱಿಂ ಲಂ
ಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ ॥ ೨೩ ॥

ಎನೆ ವಿಭೀಷಣಂ ವಿಷಣ್ಣನಾಗಿ—

ಕಂ ॥ ಆರಯಿಲವರುತ್ಪತ್ತಿಗೆ
ಕಾರಣಮೆನಿಸಿರ್ದ ಜನಕನಂ ದಶರಥನಂ ॥
ಮಾರಣಮುಂ ಪೊರ್ದಿಸುವೆಂ
ಕಾರಣ ವಿಘಟನಮೆ ಕಾರ್ಯ ವಿಘಟನಮಲ್ತೇ ॥ ೨೪ ॥

ಎಂದು ತಱಿಸಂದು—

ಚ ॥ ಎನಗಿದಯುಕ್ತಮೆನ್ನ ಬಗೆ ಪಾಪನಿಬಂಧನವೋವುದೆಂಬಿದಂ ।
ನೆನೆಯದೆ ತನ್ನ ಸೋದರನೊಳಪ್ಪ ವಿಪತ್ತಿಗಣಂ ವಿಭೀಷಣಂ ॥
ಮನದೊಳಟಿಲ್ಪು ನಿಮ್ಮನಱಿಯಲ್ಬಗೆದಂದನಿದರ್ಕೆ ತಕ್ಕುದಂ ।
ನೆನೆದಿರಿಮಾನಿದಂ ತಡೆಯದಿಂ ಜನಕಂಗಱಿಪಲ್ಕೆ ಪೋದಪೆಂ ॥ ೨೫ ॥

ಎಂದು ನಾರದಂ ನೀರದಪಥಕ್ಕೆ ನೆಗೆದು ಮಿಥಿಳೆಯನೆಯ್ದಿ ಜನಕಂಗಮಾ ಸ್ವರೂಪಮನಱಿಪಿಪೋಪುದುಮಿತ್ತಲ್ ದಶರಥನಾ ವಾರ್ತೆಯೆಲ್ಲಮುಂ ಸಮುದ್ರ ಹೃದಯನೆಂಬ ತನ್ನ ಮಂತ್ರಿಮುಖ್ಯಂಗಱಿಪುವುದುಮಾತನಿದರ್ಕೆ ಕಾಲವಂಚನಮೆ ಕಾರ್ಯಮೆಂದು ನಿಶ್ಚಯಿಂಗೆಯ್ದು ದಶರಥನಂ ಕಳಿಪಿ ಚಿತ್ರಕನುಂ ತಾನುಮಲ್ಲದೆ ಪೆಱ ರಱಿಯದಂತು ಕರುವಿಡಿಸಿ ಲಾಕ್ಷಾರಸಾದಿಗಳಿಂ ಸಪ್ತ ಧಾತುಗಳಂ ಪಡೆದು ವರ್ಣ ಕ್ರಮುಂ ಗೆಯ್ಯೆ—

ಕಂ ॥ ಇದು ಭೂಪನ ರೂಪಿದು ಲೆ
ಪ್ಪದ ರೂಪೆನಲೆಂತುಮಱಿಯಲರಿದೆನೆ ಬಗೆಗೊಂ ॥
ಡುದು ನಡೆವ ನುಡಿವ ತೆಱದಿಂ
ಪ್ರದೇಶಸೌಕ್ಷ್ಮವಮಿದೇಂ ವಿಚಿತ್ರಮೊ ಚಿತ್ರಂ ॥ ೨೬ ॥

ಅಂತು ಪರವಿದ್ಧಮುಂ ಪ್ರತ್ಯಕ್ಷಮುಂ ಮಾಡಿದ ಚಿತ್ರಕನ ಪರಿಣತಿಯಂ ಮನದೆ

ಕೊಂಡು ಲೆಪ್ಪದರಸನಂ ಕರುಮಾಡದೆರಡನೆಯ ನೆಲೆಯೊಳಿರಿಸಿ ಪರಿಜನಮುಂ ತಾನುಮೋಲಗಿಸುತ್ತಿರೆ—

ಕಂ ॥ ಜನಕನ ಮಂತ್ರಿಯುಮಿಾ ಕ್ರಮ
ದಿನನುಷ್ಠಿಸಿ ಕಳಿಪೆ ಜನಕನುಂ ದಶರಥನುಂ ॥
ದಿನಕರನುಂ ಹಿಮಕರನುಂ
ಘನಾಘನಾಂತರಿತರಾದರೆನೆ ತಲೆಗರೆದರ್ ॥ ೨೭ ॥

ಅನ್ನೆಗಮಿತ್ತ ವಿಭೀಷಣಾದೇಶದಿಂ ಬಂದ ತೀಕ್ಷ್ಣಪುರುಷರ್ ಪುರಮಂಪೊಕ್ಕು ಕರುಮಾಡಮುಂ ಪುಗಲ್ಪಡೆಯದೆ ತಡೆದಿರ್ಪುದುಂ—

ಉ ॥ ಅಟ್ಟಿದ ಜಟ್ಟಿಗರ್ತಡೆಮದರ್ಕೆ ಕನಲ್ದು ವಿಭೀಷಣಂ ಮುಗಿ ।
ಲ್ವಟ್ಟೆಯಿನಟ್ಟಿ ತಿಂಬ ಜವನಂ[1]ತಿರಯೋಧ್ಯೆಗೆ ಬಂದು ಪೊಕ್ಕು ಪೊಂ ॥
ಬೆಟ್ಟಮೆನಿಪ್ಪ ಪೊನ್ನಕರುಮಾಡಮನಂದಿರುಳಲ್ಲಿ ಕಂಡು ಕ ।
ಣ್ಕಟ್ಟನೊಳಿರ್ದ ಲೆಪ್ಪದರಸಂ ಕೊಲವೇಟ್ಟನಸಾರ ಚೇತನಂ ॥ ೨೮ ॥

ಅಂತುಪೇಟ್ಟುದುಂ

ಕಂ ॥ ಬೆಸನಂ ವಿದ್ಯುದ್ವಿಳಸಿತ
ವೆಸರ ವಿಯಚ್ಚರ ಭಟೋತ್ತಮಂ ಪಡೆದು ಜವಂ ॥
ಮುಸಗಿದನೆನೆ ಕಾಪಿನವ
ರ್ದೆಸೆಗಿಡೆ ಪೊಕ್ಕಿಱಿದು ಕೊಂದು ತಲೆಯಂ ತಂದಂ ॥ ೨೯ ॥

ಆ ಸಮಯದೊಳ್—

ಕಂ ॥ ಪರಿಜನದ ಭೂಪನಂತಃ
ಪುರದಬಳಾಜನದ ನೆಗೆದ ಹಾಹಾರವಮೆ ॥
ಯ್ದುರೆ ಕಿವಿಗೆ ಕೇಳ್ದು ನಲಿದಂ
ಕರುಣಾರಸ ರಹಿತನಾವನಾಖಚರನವೋಲ್ ॥ ೩೦ ॥

ಕಂ ॥ ಕೊಲಲೆಂದು ಬಂದು ಲೆಪ್ಪದ
ತಲೆಯಂ ಕೊಂಡುಯ್ದನಾ ವಿಭೀಷಣನೊರುಂ ॥
ಕೊಲಲಾರ್ಪರೆ ಸಾಯದರಂ
ಲಲಾಟದೊಳ್ ವಿಧಿಯ ಬರೆದ ಲಿಪಿ ಜಲಲಿಪಿಯೇ ॥ ೩೧ ॥

1. ತಿವಿನೀತೆಗೆ. ಗ.

ಅಂತವನ ತಂದ ತಲೆಯಂ ಕಡಲೊಳೀಡಾಡಿ ಜನಕನುಮನಂತೆವಾಡಿ ಮಗುಟಿ ಲಂಕೆಗೆ ಪೋಗಿ—

ಮ ॥ ಮನದೊಳ್ತನ್ನ ನೆಗಟ್ಟಿಯಂ ನೆನೆದು ಕಷ್ಟಂಗೆಯ್ದೆನಾಕೀ ದಶಾ ।
ನನನಂ ಕೊಲ್ವವನಾವನೀ ಕಡಲನಾವಂ ದಾಂಟುವಂ ಲಂಕೆಗಾ ॥
ವನೊ ಬರ್ಪಂ ಗಡ ಭೂಮಿ ಗೋಚರನಿದಂ ನೈಮಿತ್ತಿಕಂ ಪೇಟ್ಟೊಡಾ।
ತನ ಮಾತಿಂಗವಿಚಾರಿತಂ ನೆಗಟ್ದೆನೆಂದುಬ್ಬೆಗಮುಂ ತಾಳ್ದಿದಂ ॥ ೮ ॥

ಕಂ ॥ ಜಿನಗೃಹಮಂ ಪ್ರಾಯಶ್ಚಿ
ತ್ತ ನಿಮಿತ್ತಂ ನಿರತಿಶಯಮೆನಲ್ಮಾಡಿಸಿದಂ ॥
ತನಗೆ ಕಷಾಯೋದಯದಿಂ
ಜನಿಯಿಸೆ ಪೊಲ್ಲಮೆಯನೊಳ್ಪಿದಂ ಸ್ಥಿರಿಪನೇ ॥ ೩೩ ॥

ಅನ್ನೆಗಮಿತ್ತ ದಶರಥನ ಜನಕನ ಪರಿಜನಂ ಲೆಪ್ಪದರಸನಪ್ಪುದನಱಿದು ಸಂತೋಷಂಬಟ್ಟಿರ್ಪುದುಂ, ಅತ್ತ ದಶರಥನುಂ ಜನಕನುಂ ರೂಪ ಪರಾವರ್ತನದಿ ನನೇಕ ದೇಶಂಗಳಂ ನೋಡುವುದೆ ತಮಗೆ ವಿನೋದವಾಗೆ ತೊಟಲುತ್ತುಂ ಬಂದು—

ಕಂ ॥ ಸಕಲರ್ತುಕ ವನದಿಂ, ದೀ
ರ್ಘಿಕೆಯಿಂ ಪುಷ್ಕರಿಣಿಯಿಂ, ಸರೋವರದಿಂ ಕೌ ॥
ತುಕಮನವರ್ಕಂಡಕೌ
ತುಕ ಮಂಗಳಪುರಮನುರ್ವರಾ ನೂಪುರಮಂ ॥ ೩೪ ॥

ಚ ॥ ಮಿಸುಗುವ ಪೊನ್ನಕೋಂಟೆ ಮುಗಿಲಂ ತುಡುಕುತ್ತಿರೆ, ಪೆಂಪುವೆತ್ತಗಟ್ ।
ಬಿಸರುಹಮುಳ್ಳರಲ್ದು ಸಿರಿ ಕಣ್ದೆಱೆದಂತಿರೆ ಸುತ್ತಲುಂ ಬನಂ ॥
ಕುಸುಮಶರಂಗೆ ಪೊಚ್ಚಪೊಸ ಜೌವನದಂತಿರೆ ರಾಜಧಾನಿ ಕ ।
ಣ್ಗೆಸದಳಮೊಪ್ಪಿ ತೋಱಿದುದು ಕೌತುಕ ಮಂಗಳಮಾತ್ತ ಮಂಗಳಂ ॥ ೩೫ ॥

ಆ ಪುರದ ಪೊಱವೊಟಲನೆಯ್ದೆವರ್ಪಾಗಳ್—

ಕಂ ॥ ಲಲನಾ ರತ್ನದೊಳಂ ಜಯ
ಲಲನಾ ರತ್ನದೊಳಮುಪ್ಪ ತೋಳ್ಪೆರಗನ್ನನಾ ॥
ಕುಲಮಱಿಪುವಂತೆ ಬಲಗ
ಣ್ಬಲಗೈ ಕೆತ್ತಿದುವು ದಶರಥಂಗೊರ್ವೊದಲೊಳ್ ॥ ೩೬ ॥

ಅಂತೆಯ್ದೆವರ್ಪುದುಮಾಪುರದ ಬಹಿಃಪುರೋದ್ಯಾನ ಪ್ರದೇಶದೊಳ್ ಕನಕ

ಪ್ರಾಕಾರ ಕಮನೀಯಮುಮಂಬರ ತಳ ಚುಂಬಿ ಚಂಚದ್ಧ್ವಜರಾಜಿ ವಿರಾಜಮಾನ ಮುಮನೇಕ ಮಣಿಭವನ ಭಾಸುರಮುಮೆನಿಸಿ ಜನಮನೋಹರಂ ಸ್ವಯಂವರ ಭೂಮಿ ನಯನಾಭಿರಾಮಮಾದುದಲ್ಲಿ—

ಕಂ ॥ ಪಳುಕಿನ ಚೌಖಂಡಂಗಳ
ಕೆಳಗಣ ಚೆಂಬೊನ್ನ ಮತ್ತವಾರಣದೊಳ್ ಕ ॥
ಣ್ಗೊಳಿಸಿದರನೇಕ ದೇಶಂ
ಗಳ ರಾಜತನೂಜರೋಳಿಯಿಂದಿರ್ಕೆಲದೊಳ್ ॥ ೩೭ ॥

ಆಗಳಲ್ಲಿ—

ಮ ॥ ನಯನಾಕರ್ಷಣವಿದ್ಯೆ ಗಂಡುವರಿಜಂ ಕೈಕೊಂಡುದೋ,ಗಂಡಗಾ ।
ಡಿಯನೀತಂಗೆ ಮನೋಜನೊಪ್ಪಿಸಿದನೋ ಪೇೞಿಂಬಿನಂ ಬಣ್ಣಿಸಲ್ ॥
ಬಯಸಲ್ತಕ್ಕ ಬೆಡಂಗು ಕಣ್ಗೊಳಿಸೆ ತನ್ನಂ ಕಂಡಣಂ ಕನ್ನೆಯಾ ।
ಸೆಯನಾ ರಾಜಕುಮಾರಕರ್ತೊೞ್ತಿವಿನಂ ಪೊಕ್ಕಂ ಸಭಾಸದ್ಮಮಂ ॥ ೩೮ ॥

ಚ ॥ ತೊಡವುಗಳಿಡ್ಡಮಾದನಿತಱಿಂ ತನಗಕ್ಕುಮೆ ಗಾಡಿ/ಗಾಡಿ ಮೆ ।
ಯ್ದೊಡವೆನೆ,ಮಾಸಿ ರೂಪುಗರೆದಿರ್ದೊಡವಘಾತನ ರೂಪಿದೊಂದು ಕ ॥
ಣ್ದೊಡವೆನೆ,ಬೇಱದೊಂದು ಬಗೆಗಿಕ್ಕಿದ ಟಿಕ್ಕೆನೆ,ವಶ್ಯದೊಂದು ತ
ಣ್ಜೊಡರೆನೆ,ನೋೞ್ಪ ನೋಟಕರ ಕಣ್ಗೊಳಗಾದುದು ಕಣ್ಣಪಾಪೆವೋಲ್ ॥ ೩೯ ॥

ಅಂತು ದಶರಥಂ ಸ್ವಯಂವರ ಸಭಾಸದನಮಂ ಪೊಕ್ಕು ತಾನುಂ ಜನಕನುಮೊಂದು ಕಡೆಯ ಪಟ್ಟಕಾಂಚನಮಂಚೋಪಾಂತದೊಳ್ ನಿಂದು ನೋಡುತ್ತುಮಿರೆ—

ಕಂ ॥ ಏಱಿ ಮಣಿವೆಸದ ಸಿವಿಗೆಯು
ನೇಱಿಸಿ ಕುಡುವಿಲ್ಲನೊಡನೆ ಬರೆ ಕಂದರ್ಪಂ ॥
ನೀಱೆ ಮುಗಿಲ್ವೊರೆಯೊಳ್ ಮೆ
ಯ್ದೋಱುವ ಶಶಿಕಳೆಯ ಗಾಡಿಯಂ ಗೆಲೆವಂದಳ್ ॥ ೪೦ ॥

ಯುವತೀರತ್ನದ ಕೆಲದೊಳ್
ಧವಳ ವಿಲೋಚನ ಮರೀಚಿ ತಿಂಗಳ ಬೆಳಗಂ ॥
ಕವರ್ದು ಕೊಳೆ ಕುಂಚದಡಪದ
ಡವಕೆಯ ಕನ್ನಡಿಯ ಕನ್ನೆಯರ್ಕಣ್ಗೆಸೆದರ್ ॥ ೪೧ ॥

ಎಳವೆೞ್ಱಿ,ಪೊನ್ನ ಪುತ್ತಳಿಗೆ,ರನ್ನದ ದೀವಿಗೆ,ತನ್ನ ಪುಷ್ಪ ಕೋ ।
ಮಳ ತನು ಬೇೞ್ಱಿ ಬೀೞ್ಱಿ ನಯನೋತ್ಸವಮಂ,ನಿಜಲೋಚನಂಗಳು ॥

ತ್ಪಳ ದಳ ದಾಮ್ರಮಮಂ ಕೆದಱಿ ಕಣ್ಗೆಸೆದಳ್ । ನವರತ್ನಮಾಲೆ ಕೆಂ ।
ದಳದೊಳನಂಗಪಾಶಮೆನೆ ಕೈಕೆ ಮನೋಜನ ಬಯ್ತ ಬಯ್ಕೆವೋಲ್ ॥ ೪೨ ॥

ಆ ಸಮಯದೊಳಖಿಳ ರಾಜಕುಲದುಭಯ ವಿಶುದ್ಧಿಯುಮನನ್ವಯ ಪ್ರಸಿದ್ಧಿಯುಮನಱಿಪಿ—

ಕಂ ॥ ಕಂಚುಕಿ ಪರಿವಿಡಿಯಿಂ ನೃಪ
ಸಂಚಯಮುಮಂ ತೋಱಿ ನಿಂದುದಿಲ್ಲವಳ ತಟ ॥
ತ್ಸಂಚಲ ನಯನಯುಗಂ ನಿಜ
ದಿಂ ಚಳವೊಂದೆಡೆಯೊಳಿಂತುಮೇಂ ನಿಂದಪುದೇ ॥ ೪೩ ॥

ಉ ॥ ಆ ನೆರೆದಿರ್ದ ರಾಜಸುತರಂ ಪರಿದೆಯ್ದಿ ಬಟಲ್ದು ವಿಶ್ರಮ ।
ಸ್ಥಾನಮನಾ ಮಹೀಭುಜನ ಮೆಯ್ಸಿರಿಯಂ ಸೆಱೆಗೆಯ್ಯೆ ತತ್ಸರೋ ॥
ಜಾನನೆ ತನ್ನ ಲೋಲ ನಯನೋತ್ಪಲಮಾಲೆ ನೃಪಂಗೆ ಮಾಲೆಯಂ ।
ತಾನೊಸೆದಿಕ್ಕಿದಳ್ಖಿಲ ರಾಜಕುಲಂ ಮನವಿಕ್ಕುವನ್ನೆಗಂ ॥ ೪೪ ॥

ಕಂ ॥ ಆ ರಾಜನ್ಯಕಮಿರೆ ಕ
ನ್ಯಾರತ್ನಂ ರೂಪುಗರೆದೊಡಂ ನಿಜಪುಣ್ಯ ॥
ಪ್ರೇರಣೆಯಿಂ ಕೈಸಾರ್ದ
ತ್ತಾ ರಘುವೀರಂಗೆ ಪುಣ್ಯದೊಳ್ ಪುರುಡುಂಟೇ ॥ ೪೫ ॥

ಉ ॥ ಎತ್ತಿದುವಾತಪತ್ರಶತಮುಕ್ಕಿದುವಾಗಳೆ ಹೇಮಚಾಮರಂ ।
ಮುತ್ತಿನ ಸೇಸೆಯಂ ತಳಿದರಂಗನೆಯರ್ ಗಗನಾಂತರಾಳಮಂ ॥
ಮುತ್ತಿದುದುತ್ಸವಾನಕ ರವಂ ದ್ವಿಜಮಂಗಳ ಮಂತ್ರ ನಾದಮು ।
ಣ್ಮೆತ್ತಿನಿತುಂ ವಿಭೂತಿ ಪತಿಗಾದುದು [1]ಬಾಲಿಕೆ ಸೂಡೆ ಮಾಲೆಯಂ ॥ ೪೬ ॥

ಅಂತಾತಂಗೆ ಕನ್ನೆ ಕೈಸಾರ್ವುದುಂ—

ಉ ॥ [1]ಬಾಲಿಕೆ ಮುಗ್ಧೆ ತಕ್ಕುದಱಿಯಳ್ ಪಲರಂ ಪೆಱಗಿಕ್ಕಿ ಸೂಡಿದಳ್
ಮಾಲೆಯನಾಕೆಯಂ ಕಳೆದುಕೊಳ್ವುದು ದೇಸಿಗನಂ ತಗುಳ್ವುದೀ ॥
ಕಾಲವಿಳಂಬಮೇವುದೆನುತುಂ ರಣಬಾಲಕರಾ ಸಮಸ್ತ ಭೂ ।
ಪಾಲಕ ಬಾಲಕರ್ ಕದನಕೇಳಿಗೆ ಮಚ್ಚರದಿಂದೊಡರ್ಚಿದರ್ ॥ ೪೭ ॥

---

1. ಬಾಲಕಿ. ಕ. ಖ. ಗ. ಘ. ಚ.

ಚ ॥ ಅನರಣ್ಯ ಪ್ರಿಯನಂದನಂ ದಶರಥಂ ಸಾಕೇತನಾಥಂ ಶರಾ ।
ಸನ ವಿದ್ಯಾಗುರು ವೀರನೆಂದಱಿದುದಿಲ್ಲೀಕಾಕಿ ಸಾಮಾನ್ಯನೆಂ ॥
ದನಿತುಂ ರಾಜಸಮಾಜಮಾಜಿಗುಱಿದೆಯ್ತಂದತ್ತು ನೀರ್ಗೆತ್ತ ಬೆ ।
ಳ್ತನದಿಂ ಕತ್ತುರಿವಾಣಿಯಂ ಜಡಜನಂ ಕೈಗುತ್ತಲೇಟ್ಟಿರ್ಪವೋಲ್ ॥ ೪೮ ॥

ಅಂತು ರಣ ಪಟಹ ಪಟು ನಿನದವೊದವೆ ವಿಳಯ ಜಳಧಿಯಂತೆ ನೆಲೆಯಿಂ ತಳರ್ದ ರಾಜಕುಲಮಂ ಕಂಡು ಕೈಕೆಯ ಜನಕಂ ಭಯಚಕಿತ ಚಿತ್ತನಾಗಿ—

ಚ ॥ ಶುಭಮತಿ ಪೂಡಿ ತಂದು ರಥಮಂ ತಡೆಯಲ್ ಪದನಲ್ತು ಸಾಮದಿಂ ।
ಶುಭಮನೊಡರ್ಚಲಾಂ ನೆಱೆವೆನೆನ್ನೆಱಿಸಿ ಕೈಕೆಯನಿನ್ನೀ ವರೂಥಮಂ ॥
ಸಭೆಯನಗಲ್ಚಿ ಪೋಪುದೆನೆ ಕೇಳ್ದಿನಿಸಂ ನಸುನಕ್ಕು ಭೂಭುಜ ।
ಪ್ರಭು ನುಡಿದಂ ಮುಖೇಂದುಕಿರಣಂ ನಿಮಿರ್ವಂತಿರೆ ದಂತಕಾಂತಿಗಳ್ ॥೪೯॥

ಉ ॥ ಆನೆ ಕಲಂಕುವಂತೆ ಕೊಳನಂ ಬಿಡದಾನೆ ಕಲಂಕುವೆಂ ಕರು ।
ತ್ತೀನೆರೆದಾಂತ ರಾಜಕವನೆನ್ನಿಂದಿನಿಸಂ ನಡೆ ನೋಟ್ಪುದೆಂದು ಪಂ ॥
ಚಾನನದಂತೆ ಗರ್ಜಿಸಿ ರಘೂದ್ವಹನೇಱಿ ವರೂಥಮಂ ಘನ ।
ಜ್ಯಾ ನಿನದಂ ಭಯಂಗೊಳಿಸೆ ಜೇವೊಡೆದಂ ನಿಜ ಚಾಪದಂಡಮಂ ॥ ೫೦ ॥

ಚ ॥ ಅತಿಶಯಮಾಗೆ ತನ್ನ ಮುಖಚಂದ್ರಬಲಂ ಮಣಿಮೇಖಲಾರವಂ ।
ಶ್ರುತಿಪಥಮಂ ಪಳಂಚೆ ಜಯ ಡಿಂಡಿಮ ನಿಸ್ವನದಂತೆ ಮೇಲುದು ॥
ದ್ಗತ ಜಯ ಕೇತುವಂ ಮಿಗೆ ಮನೋರಥ ಸಾರಥಿ ಕೈಕೆ ಬಂದು ಭೂ ।
ಪತಿಯೊಡನೇಱಿದಳ್ ರಥಮನಾ ರಘುವೀರನ ವೀರಲಕ್ಷ್ಮಿವೋಲ್ ॥ ೫೧ ॥

ಆಗಳಕಾಲ ಜಲಧರಂಗಳಂತೆ ನಿಖಿಲ ನೃಪಸುತರ್ ಸುತ್ತಿಮುತ್ತಿ ಶರವರ್ಷಮಂ ಕಱೆಯೆ—

ಕಂ ॥ ತಾಗೆ ಸರಲ್, ಪಾವಿನ ಪಲ್
ತಾಗಿದವೋಲ್ ಮೂರ್ಛೆವೋಗೆ ಸಾರಥಿ ರಥಮಂ ॥
ಬೇಗಂ ಚೋದಿಸಿದಳ್ ವಧು,
ರಾಗರಸಂ ದಶರಥಂಗೆ ನೆಲೆವೆರ್ಚುವ ವೋಲ್ ॥ ೫೨ ॥

ಮಿಱಿದೆ ಕೇಱದೆ ನೇಣಂ
ತೋಱಿದದೆಸೆಗಾಕೆಗಂ ಹಯಕ್ಕಂ ಚಿತ್ತಂ ॥
ಬೇಱಿಲ್ಲೆನೆ ಪರಿದುದು ಜವ
ನೇಱಿದ ರಥಮಿಂತಿದೆನೆ ರಥಂ ದಶರಥನಾ ॥ ೫೩ ॥

ಚ ॥ ದೆಸೆ ಮುಸುಳ್ವನ್ನೆಗಂ ಮುಸುಗಿ ರಾಜತನೂಭವರೆಚ್ಚ ಬಾಣಮುಂ ।
ಪೊಸಮಸೆಯಂಬಿನಿಂ ಕಡಿದು ಕಟ್ಟಿಲೆಯುಂ ಬೆದಱಿಟ್ಟೆ ಕಣ್ಗಗು ॥
ರ್ವಿಸುವಿನ ಮಂಡಲಕ್ಕೆ ಪರಿವೇಷಮುದಾಯ್ತೆನೆ ತೀವ್ರತೇಜಮುಂ ।
ಪಸರಿಸಿ ಕಣ್ಗೆ ಕುಂಡಲಿತ ಚಾಪಮುಗುರ್ವಿಸಿದಂ ಮಹೀಭುಜಂ

ಕೆಲರ ವರೂಥಮಂ ಕೆಲರ ವಾಜಿಗಳಂ ಕೆಲರುಗ್ರಬಾಣಮಂ ।
ಕೆಲರ ಕಿರೀಟಮಂ ಕೆಲರ ಚಾಪಮನಿರ್ಕಡಿ ಮಾಡಿ ತನ್ನ ದೋ ॥
ರ್ಬಲದ ಪೊಡರ್ಪು ಜೀಯೆನಿಸೆ ಮಾರ್ಪಡೆಯಂ ಕೊಲಲೊಲ್ಲನಿಲ್ಲಮೆ ।
ಯ್ಗಲಿ ರಘುವೀರ ನಾಥನ ಶರಾಸನ ವಿದ್ಯೆಗಿದಾವ ವಿಸ್ಮಯಂ ॥ ೫೫ ॥

ಕಂ ॥ ಗಱಿಯಿಂ [1]ಸೋರ್ಚಿದುದೆನ್ನೆಕೆಂ
ಗಱಿಯುಂ ಬೆಟ್ಟಿಟ್ಟ ರಾಜಸುತ ಸಂದೋಹಂ ॥
ಗಱಿ ಸೋಂಕದೆ ಬೆಳ್ಕಿರಲೆಗೆ
ಗಱಿ ಮೂಡಿದ ತೆಱದಿನೋಡಿ ಪೋದತ್ತಾಗಳ್ ॥ ೫೬ ॥

ಮ ॥ ಮೃಗರಾಜಂಗಗಿದೋಡುವಾನೆಗಡುಪಂ ಕೈಕೊಂಡು ಯೂಥಾಧಿಪಂ ।
ಮುಗುಟ್ಟಂ ಸಿಂಹದ ಮೇಲೆ ಪಾಯ್ವ ತೆಱದಿಂ ಹೇಮಪ್ರಭಂ ರಾಜಸೂ ॥
ನುಗಳಂ ತನ್ನೊಡಗೂಡಿಕೊಂಡು ಕಱಿದಂ ಜ್ಯಾಘಾತ ಮೇಘಧ್ವನಿ ।
ಸ್ಥಗಿತಾಶಾಮುಖನುನ್ಮುಖಾಂಶು ಚಪಲಾವೇಗಂ ಶರಾಸಾರಮಂ ॥ ೫೭ ॥

ಆ ಸಮಯದೊಳ್—

ಕಂ ॥ ಇದು ಮಾಯ್ದಾ ಮಯಮೊಂಧ
ಲ್ಲಿದು [2]ಕೋಟ್ಯನುಕೋಟಿ ರಥಮೆನಲ್ ವೈರಿಬಲಂ ॥
ಬೆದಱಿ ಮನೋಜವದಿಂ ಪರಿ
ದುದು ಪೂರ್ಣಮನೋರಥಂ ರಥಂ ದಶರಥನಾ ॥ ೫೮ ॥

ಅಂತು ಪರಿದು ನೆರೆದ ರಾಜನ್ಯಕಮುಂ ಪಱಿಯಂತೆ ಪಲಾಯನಶೀಲಮಾಡಿ ಹೇಮಪ್ರಭನಂ ಮುಟ್ಟೆವಂದು—

---

1. ಸೊಚ್ಚಿದರೆನೆ. ಚ; ಸೋರ್ಚಿದರೆನೆ. ಗ.

2 ಕೋಟಾಕೋಟಿ. ಕ. ಖ. ಗ. ಘ. ಚ

ಕಂ॥ [1]ಕಡುಕೆಯ್ದು ಗಂಡವಾತಂ
ನುಡಿದಿರ್ದಿರಾದಂತೆ ಗಂಡನಾಗೆನುತುಂ [2]ಕೈ ॥
ಮುಡಗದೆ ದಶರಥನೆಚ್ಚಂ
ಸಿಡಿ[3]ಲೆಳ್ಗಿಡಿಗಳವೊಲಂಬನಂಬಟ್ಟುವಿನಂ ॥ ೫೯ ॥

ಅಂತಿಸುವುದುಂ

ಕಂ॥ ಉಡಿಯೆ ಪಱಿಯಿಗ, ವರೂಥಂ
ಕೆಡೆಯೆ, ಭುಜಾದಂಡ ವಜ್ರಮಯ ಕೋದಂಡಂ ॥
ಕಡಿಕಂಡವಾಗೆ, ಪಱಿಪಡೆ
ಪೊಡರ್ಪುಗ್ರ, ಹೇಮಪ್ರಭಂ ಹತಪ್ರಭನಾದಂ ॥ ೬೦ ॥

ಆ ಸಮಯದೊಳ್ ದಶರಥನಭಯಘೋಷಣೆಯೊಡನೆ ಜಯಪತಾಕೆ ನಭಮನಳ್ಳಿಱಿಯೆ ಬೀರಸೇಸೆಯೊಡನೆ ಸೊಯಂಬರ ಸೇಸೆಯನಾಂತು ಪೌರಜನದ ಮನದೊಡನೆ ಕೌತುಕಮಂಗಳ ಪುರಮಂ ಪುಗುವಾಗಳ್—

ಉ॥ ಓಡಿಸಿದಾತನೀತನಿದಿರಾದ ವಿರೋಧಿಗಳಂ ವಿಲಾಸದಿಂ ।
ಱೋಡಿಸಿದಾತನೀತನಸಮಾಯುಧನಂ । ತನಗೊಲ್ದು ಮಾಲೆಯಂ ॥
ಸೂಡಿಸಿದಾತನೀತನವನೀಶ್ವರ ಕನ್ಯೆಯನೆಂದು ತೋಱಿ ಮಾ ।
ತಾಡಿದುದೊಲ್ದು ನೋಡಿದುದು ಪೌರ ವಧೂಜನಮಾದಿರಾಜನಂ ॥ ೬೧ ॥

ಅಂತು ಪುರಮಂ ಪೊಕ್ಕರಮನೆಗೆ ಬಿಜಯಂಗೆಯ್ವುದುಂ ದಶರಥಮಹೀನಾಥನಪು ದನಱಿದು—

ಉ॥ ನೋಡಿರೆ । ಕನ್ನೆಯುಂ ದಶರಥಂಗನುರೂಪೆಯುನ್ನೀವ ಸೈಪು ಕೈ ।
ಗೂಡಿದುದೆಂದು ತನ್ನ ವಿಭವಕ್ಕನುರೂಪವಮೆಸಲ್ವಿವಾಹಮುಂ ॥
ಮಾಡಿದನುತ್ಸವಕ್ಕೆ ಪೊಱಗೊರ್ವರುಮಿಲ್ಲೆನೆ ಕೊಟ್ಟು ಸಂತಸಂ ।
ಮಾಡಿದನಾರೊಳಂ ಶುಭಮತಿ ಕ್ಷಿತಿನಾಥನಿದೇನುದಾತ್ತನೋ ॥ ೬೨ ॥

ಆಗಳಾ ವಿವಾಹಾನಂತರಂ ಕೈಕೆವೆರಸು ದಶರಥನಯೋಧ್ಯೆಗೆ ಜನಕಂ ಮಿಥಿಳೆಗೆ ಪೋಗಿ ಮುನ್ನಿನಂತೆ ಸುಖದಿನರಸುಗೆಯ್ಯುತ್ತಿರ್ದರಿತ್ತಲ್ ದಶರಥ ನರೇಂದ್ರನೊಂದು ದಿವಸಂ—

1. [illegible] ಕ. ಖ. ಚ.
2. [illegible] ಕ. ಖ; ತಾಂ ಮುಡುಗದೆ. ಘ. ; ಕೈಮುಡಗದೆ. ಗ. ಚ.
3. [illegible] ಘ.

ಕಂ॥ ಪರಿಮಿತ ಪರಿಜನ ಪರಿವೃತ
ನರಸಂ ಬಗೆದರಸಿ ತೇರನೆಸಗಿದ ಗೆಲವಂ॥
ತರವೇೞೆ ವೃದ್ಧಕಂಚುಕಿ
ತರೆ ಬಂದಳ್ ಕೈಕೆ ಬಳಸಿಬರೆ ಸಹಚರಿಯರ್ ॥ ೬೩ ॥

ತರಳಕಟಾಕ್ಷಂ ಮೋಹನ
ಶರಮೆನೆ ಮೇಖಲೆಯ ಪಾರಿಹಾರ್ಯದ ಮಣಿನೂ॥
ಪುರದ ಮಧುರಸ್ವನಂ ಮು
ಪ್ಪುರಿಗೂಡಿದ ಮದನಪಾಶಮೆನೆ ನಡೆತಂದಳ್ ॥ ೬೪ ॥

ಅಂತುಬಂದು—

ಕಂ॥ [1]ತನಿಸೋಂಕು ಸೋಂಕಿ ಸಿಂಹಾ
ಸನದೊಳ್ ತನ್ನೊಡನೆ ಕೈಕೆ ಕುಳ್ಳಿರೆ ಪುಳಕಂ॥
ತನಗೆ ತಲೆದೋಱೆ ದಶರಥ
ಜನಪತಿ ಕ್ಕೆವಂವ ಕಲ್ಪತರುವಂ ಪೋಲ್ತಂ ॥ ೬೫ ॥

ಅನಂತರಮಾಕೆಯ ಮುಖಾರವಿಂದಮನಾನಂದ ವಿಸ್ಫಾರಿತ ವಿಲೋಚನನಾಗಿ ನೋಡಿ—

ಕಂ॥ ಈಕೆ ರಥಮೆಸಗೆ ವೈರಿ ಪ
ತಾಕಿನಿಯಂ ಗೆಲ್ದೆನೀಕೆ ಗೆಯ್ದುಪಕೃತಿಗಾ॥
ನೀಕೆಯ ಬೇಡಿದುದಂ ನಿ
ರ್ವ್ಯಾಕುಳಮಾಯದೊಡೆ ಮೆಚ್ಚು ಪೊಳ್ಳಾಗಿರದೇ ೬೬ ॥

ಎಂದು ಪರಿಜನದ ಮೊಗಮಂ ನೋಡಿ ಕೈಕೆಯಂ ನಿನ್ನ ಮೆಚ್ಚಿದುದಂ ಬೇಡಿಕೊಳ್ಳೆಂಬುದುಂ—

ಕಂ॥ ಏನಂ ಬೇಡುವೆನೆಂದ
ಬ್ಜಾನನೆ ಬಗೆ ಬೆದಱೆ ಬಗೆಗೆ ಬಂದೊಡಮೆಯನ್ನೊ॥
ಲ್ದಾನೆರೆದಾಗಳೆ ಕುಡಿಮೆಂ
ದ್ದಾ ನೃಪತಿಗೆ ಕೈಕೆ ಬೈಕೆಗೊಟ್ಟಳ್ ಮೆಚ್ಚಂ ॥ ೬೭ ॥

---

[1] ತನು. ಗ; ತನುಸೋಂಕು ಸೋಂಕೆ. ಘ; ತನುಸೋಂಕೆ. ಚ.

ಅನಂತರಂ ನಿಜಪ್ರಿಯನ ನಿಯಮದಿನದೊಳಾಸನದಿನೆಬ್ದು ಪೂಮಾಲೆಯು ಮನವನಿಪತಿಯ ನಯನಕುವಲಯ ಮಾಲೆಯುಮನ್ನಾಂತು, ಬಟಿಲ್ಕುಡಿ ಚೆಲ್ವಿಂಗೆ ಮುಡಿಗವಿದ್ದಂತೆ ಸೊಗಯಿಸೆಯುಂ, ಕೊರಲೊಳಿಕ್ಕಿದೆಕ್ಕಸರದ ಕೆಂಬಟ್ಟೆಯ ತೊಂಗಲ ನಂಗ ಜಂಗಮಲತೆಯ ತಳಿರ ತೊಂಗಲಂತೆ ಪೊಳೆಯೆಯುಂ, ಮೇಲುದಱ ಸೆಱಂಗ ನುಱಿ ಸೆಱಿಗೆಯ್ದು ಪೊಱಪೊಣ್ಮುವ ಪರಭಾಗದ ಶರೀರಕಾಂತಿ ಲಾವಣ್ಯರಸದ ತಂದ ಲನಗುಂದಲೆಮಾಡೆಯುಂ, ಘನನಿತಂಬಬಿಂಬಮಂ ಬಳಸಿದ [1]ನೂಲತೊಂಗಲ ಮಧುರಧ್ವನಿ ಮನುಜ ಮಕರಧ್ವಜನ ಮನಮನೊಡನೊಡನೆ ಕರೆವಂತಡಿಗಡಿಗೆ ಪೊಣ್ಮೆಯುಂ, ಮನೋಜರಾಜನ ನೀರಾಜನ ದೀಪಕಳಿಕೆಯಂತೆ ಕೈಕೆ ನಿಜ ನಿವಾಸಕೆ ಬಿಜಯಂಗೆಯ್ವುದುಂ—

ಚ ॥ ನೆನೆಯಿಸೆ ಪೂವಿನಂಬನಪರಾಜಿತೆ ಕಣ್ಗೆ, ಸುಮಿತ್ರೆ ಮೈತ್ರಿಯಂ ।
ಜನಿಯಿಸೆ, ಬೀಱಿ ಸುಪ್ರಭೆ ತನುಪ್ರಭೆಯಂ, ಗೆಲೆ ಕೈಕೆ ಕಂತುರಾ ॥
ಜನ ಜಯಲಕ್ಷ್ಮಿಯಂ, ನಿಜಕುಲಾಂಗನೆಯರ್ಪೆಸರ್ವೆತ್ತ ನಾಲ್ವರಿಂ ।
ಜನಪನ ರಾಜಲೀಲೆ ಗೆಲೆವಂದುದು ಮನ್ಮಥರಾಜ ಲೀಲೆಯಂ ॥ ೬೮ ॥

ಅಂತು ದಶರಥಮಹೀನಾಥನಿಷ್ಟ ವಿಷಯಸುಖ ಸಂತುಷ್ಟನಾಗಿರ್ಪುದುಂ

ಕಂ॥ ಅಪರಾಜಿತಾ ಮಹಾದೇ
ವಿ ಪತಿವ್ರತೆ ಶೀಲ ಗುಣ ಕಳಾ ಪರಿಣತಿಯಿಂ ॥
ನೃಪನ ಮನಂಬಡೆದುಂ ಧ
ರ್ಮಪತ್ನಿಯೆನೆ ಪಡೆದಳಗ್ರಮಹಿಷೀ ಪದಮಂ, ॥ ೬೯ ॥

ಅಂತಾ ಕಾಂತೆ ದಶರಥನ ಮನೋರಥ ಜನ್ಮಭೂಮಿಯೆನಿಸಿರ್ದೊಂದುದಿವಸಂ—

ಚ ॥ ಋತುಮತಿ ದೇವಿ ರನ್ನದ ವಿತರ್ದಿಕಯೊಳ್ನಿಲಸಿರ್ದು ಮಾಧವೀ ।
ಲತೆಯ ಬೆಡಂಗುವೆತ್ತ ಸೆಳೆಯಂ ಪಿಡಿದಂಗಜ ಮೋಹಪಾಶಮಂ ॥
ರತಿ ಪಿಡಿದಂತೆ ದೇಸೆವಡೆದಳ್ ಪಡೆವಂತು ಮದಾಲಸಂಗಳಾ ।
ಯುತ ನಯನಂಗಳಾತ್ಮರುಚಿ ಮಂಜರಿಯಿಂ ಕುಸುಮೋಪಹಾರಮಂ ॥ ೭೦ ॥

ಕಂ॥ ಕಮಳಾನನೆಗೆ, ದರಸ್ಮಿತ
ಕುಮುದಾಕ್ಷಿಗೆ ಕರ್ಣಿಕಾರಕೋಮಳೆಗೆ. ವಿಚಿ ॥
ತ್ರಮೆ ಪುಷ್ಪವತಿಗೆ ನೇತ್ರ
ಭ್ರಮರಾಕರ್ಷಣ ವಿಲಾಸಮೆನೆ ಸೊಗಯಿಸಿದಳ್ ॥ ೭೧ ॥

---

1. ಮೇಖಲಾವೃತ ಮಣಿಕಿಂಕಿಣೀ. ಗ. ಘ.

ಅನಂತರಂ ಕೌಶಲ್ಯೆ ಚತುರ್ಥಸ್ನಾನ ಮಾಂಗಲ್ಯಮನಪ್ಪುಕೆಯ್ದು—

ಚ ॥ ಮುಳ್ಳೆಯುಜದಣ್ಪು ಮಲ್ಲಿಗೆಯ ಸೋರ್ಮುಡಿ [1]ನಿಪ್ಪೊಸತಪ್ಪ ಮೌಕ್ತಿಕಂ ।
ಗಳ ತೊಡವುಟ್ಟ ಪಟ್ಟಳಿಗೆ ದಂತಮರೀಚಿಗಳಿಂ ಬೆಳರ್ತ ಬಾ ॥
ಯ್ಪುಳಿಕಿನ ಪೆಣ್ಗೆ ಪ್ರಾಸಟೆಯೆನಿಪ್ಪ ವಿಲಾಸಮನೀಯೆ ಪುಷ್ಪಕೋ ।
ಮಳಿ ವಧು ಕೊಂಡ ಬೆಳ್ಪಸದನಂ ಸೆಱಗೊಂಡುದನಂಗನಾಜ್ಞೆಯಂ ॥ ೭೨ ॥

ಅಂತು ಕೈಗೆಯ್ದು—

ಮ ॥ ಕಡೆಗಣ್ಣಾಮಶರಂಗಳಂ ಕೆದಱೆ, ಭೃಂಗಾಸ್ತ್ರವೃಷ್ಟಿಯುಂ ಮಾಡೆ ಸೋ ।
ರ್ಮುಡಿ, ಲಾವಣ್ಯ ರಸ ಪ್ರವಾಹ ಭರಮುಂ ತುಂಗಸ್ತನಂ ತಾಳೆ, ಕ್ರೀ ॥
ಸಡಿಗಳ್ಕೇಸರ ಪಾಂಸುವಂ ಕೆದಱೆ, ಬಂದಳ್ ದೋರ್ಲತಾಂದೋಳನಂ ।
ಪಡೆವನ್ನಂ ಮಣಿಪಾರಿಹಾರ್ಯ ರವದಿಂ ಕರ್ಣಾಮೃತಾಸಾರಮುಂ ॥ ೭೩ ॥

ಕಂ ॥ ಶಶಿಲೇಖೆ ಬಂದು ಪುಗುವಂ
ತೆ ಶರದ್ಘನ ಕೂಟ ಸದನಮಂ, ಲೀಲೆಯಿನಾ ॥
ಶಶಿವದನೆ ಬಂದು ಪೊಕ್ಕಳ್
ವಿಶಾಲ ಶಶಿಕಾಂತ ಕಾಂತ ಶಯ್ಯಾಗೃಹಮಂ ॥ ೭೪ ॥

ಅಂತುಪೊಕ್ಕು—

ಕಂ ॥ ಪಳಿಕಿನ [2]ಪಱಿವಾವುಗೆಯಿಂ,
ತೊಳಗುವ ಹಂಸೋಪಧಾನ ಕಲ್ಪಿತ ತಲ್ಪ ॥
ಸ್ಥಳದಿಂ ರಂಜಿಪ ರನ್ನದ
ಸೆಳೆಮಂಚದಮೇಲೆ ಲೀಲೆಯಿಂ ಕ್ಕುಳ್ಳಿರ್ದಳ್ ॥ ೭೫ ॥

ಆಗಳಾ ಗೃಹಾಧಿದೇವತೆಯಧರಮಣಿಯಂತೆ ಜಲಜಲಿಸುವ ಮಾಣಿಕದ ಸೊಡರ್ಗುಡಿಗಳುಂ, ಇಕ್ಷುಚಾಪ ಶರಮೋಕ್ಷ ಹುಂಕಾರದಂತೆ ಶಿಲೀಮುಖ ಝುಂಕಾರ ಮುಖರಂಗಳೆನಿಸುವುಪಹಾರ ಕುಸುಮಂಗಳುಂ, ಸ್ಮರ ಗುರುಶಿಷ್ಯರಂತೆ ಸಮ್ಮೋಹನ ಮಂತ್ರಮುಂ ಪದಂಗುಟ್ಟುವ ಶುಕಶಾರಿಕೆಗಳುಂ, ಸಂಭೋಗ ರಸತರಂಗಿಣಿಯ ತೆರೆಯುಲಿಪದಂತೆ ಮಧುರಮಾದ ಪಾರಿವದುಲಿಪಂಗಳುಂ, ಮದನಮೋಹನ ಮೂರ್ಛೆಯಂ ಬೀಱುವಂತೆ ದಂತಿದಂತದಿಂ ಕಂಡರಿಸಿದಂಚೆವಿಂಡನೇಳಿಸಿ ಸುೞಿವ

---

1. ನೀರ್ಪೊಸ. ಘ.
2. ಪೊಳೆ. ಕ. ಖ; ಪಾವುಗೆಯಿಂದಂ. ಗ. ಘ.

ಬಾಲ ಮ‌ರಾಳಂಗಳುಂ, ಕಾಮಕಾಳೋರಗ ಲೇಖೆಯಂತೆ ನಿರ್ಮಿರ್ವ ನೀಲಮಣಿಸ್ತಂಭ ದುನ್ಮುಖ ಮಯೂಖಲೇಖೆಯಂ ಕರ್ದುಂಕುವ ದೀವದ ನವಿಲ್ಗಳುಂ, ಪಚ್ಚೆಯ ಜಗಲಿಯ ಚೆಲ್ವಿಂಗೆ ಕಣ್ದೆಱವಿಯಾದಂತೆ ತೆಱಂಬೊಳೆವ ದೀವದ ಹರಿಣಿಗಳ ಲೋಚನ ಪ್ರತಿಬಿಂಬಂಗಳುಂ, ಚಂದ್ರಾತಪಕ್ಕೆ ತನಿಗಂಪಾದಂತೆ ಚಂದ್ರಕಾಂತದ ಚಷಕಂಗಳೊಳ್ ಮ‌ಗಮಗಿಸುವ ಚಂದನಕರ್ದಮಮುಂ, ಮಣಿಭಾಜನಂಗಳೊಳ್ ಕುಸುಮಶರ ಕೃಶಾನುವಿನ ಪೊಗೆಯುಮುರಿಯುಮೆಂಬಂತೆ ಮೇಗೆ ನೆಗೆವ ಮಱಿದುಂಬಿಯ ಬಂಬಲಿಂದೆಸೆವ ಕುಂಕುಮಪಂಕಮುಂ, ಕಂದರ್ಪ ಘಟಸರ್ಪದಂತೆ ಧೂಪಘಟದಿ ನೊಗೆವಗರುವಿನ ಪೊಗೆಯುಮತಿ ರಮಣೀಯಮಾಗೆ—

ಕಂ॥ ಪಳಿಕಿನ ಶುಕ್ತಿಕೆಯೊಳ್ ಕ
ಣ್ಗೊಳಿಸುವ ಕತ್ತುರಿಯ ಕರ್ದಮಂ ಹಿಮಕರಮಂ ॥
ಡಳದ ಕಱ್ಱೆಯಂತೆ ನಯನೋ
ತ್ಪಳಮನಲರ್ಚಿದುದು ಸೌಧ ಶಯ್ಯಾಗೃಹದೊಳ್ ॥ ೭೬ ॥

ಚ॥ ಉಗಿಬಗಿ ಮಾಡಿ ಧೂಪದ ಕವಲ್ವೊಗೆಯೊಳ್ ತನಿಗಂಪನುಂಡು ತ ।
ಣ್ಣಗೆ ತಣಿದೊಯ್ಯನೊಯ್ಯನಿದಿರ್ಗುಂ ಬಱಿಯುಂ ನೆಗೆಯುತ್ತುಮಿರ್ಪ ತುಂ ॥
ಬಿಗಳಱಿಪಂ ಮನಕ್ಕೆ ತರಲಾರ್ತುವು ತದ್ಗೃಹದೇವತಾಜನಂ ।
ಸೊಗಯಿಸುವಿಂದ್ರನೀಲ ಮಣಿಯಿಂ ತಿಱಿಕಲ್ಪನಾಡುವಂತೆವೋಲ್ ॥ ೭೭ ॥

ಅಂತು ಸೊಗಯಿಸುವ ಸೆಜ್ಜೆವನೆಯೊಳಪರಾಜಿತಾ ಮಹಾದೇವಿ ಸರೋವರದೊಳಿರ್ಪ ಜಲದೇವತೆಯಂತೆ ವಿಲಾಸತಲ್ಪತಳದೊಳಿರ್ಪುದುಮಾಗಳುಪಚರಿತ ಗರ್ಭಾಧಾನ ಮಂಗಳವಿಧಾನಂ ದಶರಥಮಹೀನಾಥಂ ನಿಜ ನಿರತಿಶಯರೂಪಂ ದರ್ಪಕನ ರೂಪದರ್ಪಮನ್ನದಿರ್ಪೆ ಭೂಷಣಮಯೂಖಲೇಖೆ [1]ಚಿತ್ರಭಿತ್ತಿಗೆ ನಿರ್ವಾಣಲೇಖೆಯೆನಿಸೆ ಚರಣ ನಖಕಿರಣದಿನುಪಹಾರ ಕುಸುಮಂಗಳಂ ದ್ವಿಗುಣಿಸುತ್ತು ಮೊಳವುಗುವುದುಂ—

ಮ॥ ನ್ನುದನಂ ಜೇವೊಡೆಗೆಯ್ದುವೋಲ್ ಕನಕ ಕಾಂಚೀ ನಿಸ್ವನಂ ಪೊಣ್ಮೆ ಮೇ ।
ಲುದನೊಟ್ಟೈಸಿ ಕುಚಂ ಕದಕ್ಕದಿಸೆ ಮುಗ್ಧಾಲೋಕನಂ ಲಜ್ಜೆಯಂ ॥
ಪದೆಪಂ ಮುಂದಿಡೆ ಮೇರೆದಪ್ಪೆ ನಿಜಲಾವಣ್ಯಾರ್ಣವಂ ಭೂಭುಜಂ ।
ಗಿದಿರೆಟ್ಟಿಳ್ ಸತಿ ಪುಷ್ಪಚಾಪ ಚತುರಂಗಂ ಮೀಱಿ ಮೇಲೇಳ್ವವೋಲ್ ॥೭೮॥

ಆಗಳರಸನರಸಿಯ ಮನಃಕುಮುದಿನಿಯಂ ಚತುರಪರಿಹಾಸ ವಚನಚಂದ್ರಿಕೆಯಿಂದಲರ್ಚಿ—

---

1. ಚಿತ್ರವನಿತೆಗೆ. ಚ.

ಕಂ॥ ಮರಕತಮಣಿ ಮುದ್ರಿಕೆಯಿಂ
ನರೇಂದ್ರನಂಗನೆಯ ಕೋಮಳಾಂಗುಲಿಯನಲಂ ॥
ಕರಿಸುವ ನೆವದಿಂ ಮೆಲ್ಲನೆ
ಬರೆ ತೆಗೆದುತ್ಸಂಗ ತಳ್ಪಮಂ ದಯೆಗೆಯ್ದಂ ॥ ೭೯ ॥

ಅನಂತರಂ—

ಕಂ॥ ಓರೊರ್ವರ ತನಿಸೋಂಕಿಂ
ದೋರೊರ್ವರ ಮೆಯ್ಯೊಳೊಗೆಯೆ ರೋಮಾಂಚಂ ಶೃಂ ॥
ಗಾರ ಸುಧಾರಸ ವಾರಿಧಿ
ತೀರ ಲತಾದ್ರುಮದೊಳೊಗೆದ ಕೊನರೆಂಬಿನೆಗಂ ॥ ೮೦ ॥

* * * * *

ಅಂತು ಸೂಟಿಕ್ಕಿವಂದು ನಿದ್ರಾವಸರ ನಿಮೀಲಿತ ಲೋಚನೆಯಾಗಿ—

ಕಂ॥ ದಾನ ದ್ವಿರದನಮಂ, ಪಂ
ಚಾನನಮಂ, ಚಂಡಭಾನುವಂ, ಚಂದ್ರಮನಂ ॥
ಮಾನಿನಿ ನಿಶಾವಸಾನದೊ
ಳೀ ನಾಲ್ಕುಂ ಶುಭದಮಪ್ಪ ಕನಸಂ ಕಂಡಳ್ ॥ ೮೧ ॥

ಆ ಸಮಯದೊಳ್ ನಿಜರಾಜಸದನ ಸರಸೀ ಸರೋಜ ರಜಮನೊಟ್ಟಿಕೊಂಡು ಸುೞಿವ ಸುಪ್ರಭಾತ ಪ್ರಭಂಜನನುಂ, ಮದನ ಮದಕುಂಜರದ ಮಣಿಯೇಱಿಂ ಮಿಱುವ ರಾಜಹಂಸ ಕೂಜಿತಮುಂ, ದಿನಮುಖ ದರ್ಶನಾತುರತೆಯಿಂ ಬರ್ಪ ಸಂಧ್ಯಾದೇವತೆಯ ನೂಪುರನಿನದಮಂ ನೆನೆಯಿಸುವ ಚಂಚರೀಕದಿಂಚರಮುಂ, ಉದಯನಗ ನಿಕುಂಜಮನೇಱುವ ರವಿಯ ರಥಚಕ್ರಚೀತ್ಕಾರಮಂ ಚಲ್ಲವಾಡುವ ರಥಾಂಗರವಮುಂ, ನೈಯ್ದಿಲ್ಗೊಳದ ಸೊಬಗು ಸೊಪ್ಪಾಗೆ ಕಮಳಿನಿಗೆ ಪುಟ್ಟಿದಟ್ಟ ಹಾಸಮನುದಾಸೀನಂ ಮಾಡ್ಪ ಕೊಳರ್ವಕ್ಕಿಯ ಕಳಕಳಧ್ವನಿಯುಮನುಕೂಲಮಾಗೆ—

ಕಂ॥ ಮಂಗಳ ಪಾಠಕ ರವಮುಂ
ಮಂಗಳ ಗಾಯಿನಿಯ ಗೀತರವಮುಂ ಪರಿಚ ॥
ರ್ಯಾಂಗನೆಯರ ನೂಪುರದ ರ
ವಂಗಳುಮಿತ್ತುವು ಸುಖಪ್ರಬೋಧಮನಾಗಳ್ ॥ ೮೨ ॥

ಅಂತುಪ್ಪವಡಿಸಿ—

ಇಲ್ಲಿ ಗ್ರಂಥಪಾತವಾದಂತೆ ತೋರುತ್ತದೆ

ಕಂ॥ ವ್ಯವಹಾರ ಮಂಗಳಾಚಾ
ರವೆಲ್ಲವಂ ತೀರ್ಚಿ ಮುಖ್ಯ ಮಾಂಗಲ್ಯಮನಾ ॥
ಯುವತಿ ಜಿನಪೂಜೆಯಂ ಮಾ
ಡಿ ವಿಚಿತ್ರಮೆನಿಪ್ಪ ಚಿತ್ರಶಾಲೆಗೆ ಬಂದಳ್ ॥ ೮೩ ॥

ಅಂತು ಬಂದು ಮರಕತಮಣಿ ವೇದಿಕೆಯು ನಡುವಣ ಚೆಂಬೊನ್ನ ಪಟ್ಟವಣೆಯ ಮೇಲೆ ರೋಹಣನಗ ನಿತಂಬದೊಳ್ಪೊಳೆವ ರತ್ನ[1]ಶಲಾಕೆಯಂತೆ ನಿಜಶರೀರ ಕಾಂತಿ ಪಸರಿಸೆ ಕುಳ್ಳಿರ್ದುದುಂ, ಆಗಳುಭಯಪಾರ್ಶ್ವದೊಳಂ ಚಾಮರಗ್ರಾಹಿಣಿಯರ್ಕಳ್ ಕಾಶ ಕಣಿಶಂಗಳಿಂದೆಸೆವ ಶರಲ್ಲಕ್ಷ್ಮಿಯುಂ ನೆನೆಯಿಸೆ ಕುಂಚದಡಪದ ಡವಕೆಯು ಕನ್ನಡಿಯ ಪರಿಚಾರಿಕೆಯರ್ ಕುಸುಮಶರ ವಶೀಕರಣ ಮಂತ್ರಾಧಿದೇವತೆಯ ಪರಿವಾರ ದೇವತೆಯರೆನಿಸೆ—

ಕಂ ॥ ಕರ ಕಿಸಲಯ ರುಚಿಯಿಂದಂ
ಪರಭಾಗಂಬಡೆದು ರಾಗಮಂ ಬೀಱುವಿನಂ ॥
ಚರಣ ಮಣಿವಲಯ ಮಣಿನೂ
ಪುರಮಂ ನೃಪವಧುಗೆ ತುಡಿಸಿದಳ್ ಮತ್ತೊರ್ವಳ್ ॥ ೮೪ ॥

ಗೆಲೆವಂದುವಲರ್ದ ಕರ್ಣೆ
ಯ್ದಿಲ ಪೂಗಳ ಚೆಲ್ವನೀಗಳೆನೆ. ಕೆನ್ನೆಗಳಾ ॥
ದ್ದಲೆಗೆಯ್ದಿದ ಚೆನ್ನೆಯ ಕ
ಣ್ಮಲರೊಳ್ ಕಾಡಿಗೆಯನೆಚ್ಚಿದಳ್ ಮತ್ತೊರ್ವಳ್ ॥ ೮೫ ॥

ಅಂಬುಜದ ಬಂಡನುಣ್ಬೆಳ
ದುಂಬಿಯನಜನಿಸೆ ಮನೋಜ ಗಜಗಮನೆಯ ವ ॥
ಕ್ತ್ರಾಂಬುಜದೊಳ್ ಮತ್ತೊರ್ವಳ್
ಬಿಂಬಾಧರೆ ಮೃಗಮದಾಂಬು ತಿಲಕಮನಿಟ್ಟಳ್ ॥ ೮೬ ॥

ತೊಳಗುವವತಂಸ ಮುಕ್ತಾ
ಫಳ ರುಚಿಯೊಳ್ ಕೆಲದ ಕನ್ನೆಯರ ನಗೆಗಣ್ಗಳ್ ॥
ಪೊಳೆದುವು ಪೊಸವೆಳ್ದಿಂಗಳ
ಬಳಸಿಂಗೊಳಗಾದ ಚಳ ಚಕೋರಂಗಳವೋಲ್ ॥ ೮೭ ॥

---

1 ಪಾಲೆಯಂತೆ. ಕ. ಖ. ಚ.

ಉ ॥ ಒಂದೆಲೆವೋದಶೋಕೆಯೆರ[1]ಡಳ್ಗಡಿಬಾಲತಮಾಲ ಷಂಡದೊಳ್ ।
ಮಂದ ಸಮೀರನಿಂ ಪೊಳೆವವೋಲ್ ತಳಮುಂ ನಳಿತೋಳುಮಂದಮಂ ॥
ಮುಂದಿಡೆ ಪಿಕ್ಕಿಪಿಕ್ಕಿ ಪುಡಿಗತ್ತುರಿಯಂ ತಳಿದಳ್ಪಿಜಳ್ ಲತಾ ।
ಸುಂದರಿ ಕಾಮಪಾಶದವೊಲಿರ್ದ ಲತಾಂಗಿಯ ಕೇಶಪಾಶದೊಳ್ ॥ ೮೮ ॥

ಅಂತು ಕೈಗೆಯ್ದು ಮಣಿದರ್ಪಣಮನವಲೋಕಿಸುತಿರ್ಪುದುಮಾ ಪ್ರಸ್ತಾವದೊಳ್

ಉ ॥ ಚಿತ್ರಲಯ ಪ್ರಗಲ್ಭ ಹಯವಲ್ಗನದಿಂ ಮಣಿಕುಂಡಲಾಂಶುಗಳ್
ಚಿತ್ರಿಸೆ ಗಂಡಭಿತ್ತಿಯನುರಸ್ಥಳ ರಂಗದೊಳಂಗಹಾರಮಂ ॥
ಸೂತ್ರಿಸೆ ತಾರಹಾರ ರುಚಿ ಮಂಜರಿಗಳ್ ನಿಜರೂಪಮಂಗನಾ ।
ನೇತ್ರ ವಿಕಾಸಮಂ ಪಡೆಯೆ ಪೊಕ್ಕನಿಳಾಧಿಪನಾ ನಿವಾಸಮಂ ॥ ೮೯ ॥

ಅಂತು ಪೊಕ್ಕು ಪರಿಮಿತ ಪರಿಜನಂ ದಶರಥ ಮಹೀನಾಯಕನುಚ್ಚೈಶ್ಶ್ರವದಿನಿಳಿವ ನಿಳಿಂಪ ನಾಯಕನಂತೆ ವಾಹನದಿನಿಳಿದು ಬಂದು ನಿಜಸತಿಯಂಗಮಂ ಸೋಂಕಿ ಕುಳ್ಳಿರ್ಪುದುಂ—

ಕಂ॥ ಅರಸಿ, ಸುಲಿಪಲ್ಲ ಪಸರಿಪ
ಮರೀಚಿ ಮನಸಿಜನ ಜಸಮಿದೆನಲಮರ್ದಿನ ಬ ॥
ಲ್ಸರಿ ಸುರಿದಪುದೆನಲವನೀ
ಶ್ವರಂಗಿರುಳ್ ತನ್ನ ಕಂಡ ಕನಸಂ ಪೇಳ್ದಳ್ ॥ ೯೦ ॥

ಆಗಳವನೀಪತಿ ನಿಜಮನೋವಲ್ಲಭೆಯ ಶುಭಸ್ವಪ್ನದರ್ಶನಕ್ಕೆ ಹರ್ಷಚಿತ್ತನಾಗಿ-

ಮ ॥ ಸತತಂ ದಾನಿ ಮದೇಭದಿಂ, ಸಕಲ ಭೂಭೃನ್ಮಸ್ತಕನ್ಯಸ್ತ ಪಾ ।
ದತಳಂ ಕೇಸರಿಯಿಂ, ಪ್ರತಾಪನಿಲಯಂ ತಿಗ್ಮಾಂಶುವಿಂ, ಸತ್ಕಲಾ ॥
ಚತುರಂ ಚಂದ್ರನಿನಾದಪಂ ನಿನಗೆ ನೇತ್ರಾನಂದನಂ ನಂದನಂ ।
ಸತಿ ನೀನಲ್ಲದರಿನ್ನವಪ್ಪ ಕನಸಂ ಕಾಣ್ಬಂತು ಮುಂ ನೋಂತರಾರ್ ॥ ೯೧ ॥

ಎಂದು ತತ್ಫಲ ಸ್ವರೂಪ ನಿರೂಪಣಂ ಮಾಳ್ಪುದುಂ—

ಕಂ ॥ ಶ್ರುತಿಪಥಮಂ ಸಾರ್ತರೆ ಘನ
ರುತಿ ರಾಗಮನಪ್ಪುಕೆಯ್ವವೋಲ್ ಸೋಗೆನವಿಲ್ಗ ॥
ಸುತ ಲಾಭವಾರ್ತೆಯಂ ಕೇ
ಳ್ದು ತನೂದರಿ ರಾಗರಸ ತರಂಗಿತೆಯಾದಳ್ ॥ ೯೨ ॥

1. ಡೊಳ್ಗುಡಿವೋದ. ಗ. ಘ.

ಅನಂತರಮವನಿಪತಿ ಸತಿಗೆ ಸಮಯೋಚಿತ ಪರಿಚರ್ಯಾಚತುರೆಯರಂ ನಿಯೋಜಿಸಿ ಬಿಜಯಂಗೆಯ್ವುದುಂ ಕತಿಪಯ ದಿವಸಂಗಳ್ ನಿರತಿಶಯ ಸುಖಸ್ವರೂಪಂಗಳಾಗಿ ಪೋಗೆ—

ಕಂ॥ ಎಳವಸಿಱೊಳ್ ಸತಿಯ ಮೊಗಂ
ಬೆಳರ್ತುದರ್ಥನ್ವರ್ಥಮಾಯ್ತು ಚಂದ್ರಾನನೆಯೆಂ ॥
ದಿಳೆ ಪೊಗೞ್ವ ಮಾತು ನೀಳ್ದುದು
ಲಳಿತಾಳಕಮಾಳೆ ಸುಯ್ಗೆ [1]ಸಾರ್ವಳಿಗಳವೋಲ್ ॥ ೯೩ ॥

ಮಕರಾಂಕ ದ್ವಿಪಮದ ಪ
ಟ್ಟಿಕೆಯೆನಿಸಿ ಕಪೋಲಮೂಲಮಂ ಮುಟ್ಟಿದುವಾ॥
ಚಕಿತಾಕ್ಷಿಯ ಹರಿನೀಳಾ
ಳಕಂಗಳಾನನ ಸರೋಜಿನೀ ಮಧುಪಂಗಳ್ ॥ ೯೪ ॥

ತೋರಮೊಲೆಗಳ ಮೊಗಂಗಳ್
ರಾರಾಜಿಸಿ ಕರ್ಪುವೆತ್ತು ಮೋಹನ ಧೂಮೋ ॥
ದ್ಗಾರಿಗಳಂ ಕಾಂಚನ ಭೃಂ
ಗಾರಿಗಳಂ ಪೋಲ್ತುವರಸಿಗಂದೆಳವಸಿಱೊಳ್ ॥ ೯೫ ॥

ಬಟ್ಟಿದುವೆನಿಪ್ಪ ಮೊಲೆಗಳ
ತೊಟ್ಟು ಕಱಂಗುವುದುಮೊಡನೆ ಸರ್ವಸ್ವಮುಮಂ ॥
ಕೊಟ್ಟು ಕಱಂಗಿದರಹಿತರ್
ಕೆಟ್ಟುವು ವಳಿಯೊಡನೆ ವೈರಿವಂಶಾವಳಿಗಳ್ ॥ ೯೬ ॥

ಚ ॥ ಉದರದೊಳಿರ್ದ ಬಾಲಕನಶೇಷ ಕಲಾನಿಧಿ ತಪ್ಪದಪ್ಪನ ।
ಲ್ಲದೊಡೊಗೆದೊಂದೆ ನಾಳದೊಳೆ ಹೇಮಸರೋಜಮುಮಳ್ಗಳಾಗಿಪು॥
ಟ್ಟಿದುವವಱೊಳ್ ಮದಾಳಿ ನೆಲಸಿರ್ದಪುವೆಂ[2]ತೆನೆ ನೀಳ್ದಬಾಸೆ ಬೀ ।
ಗಿದಮೊಲೆ ನೀಳಚೂಚಕಮಿವೇಂ ಬಗೆಗೊಂಡುವೊ ಲೋಲನೇತ್ರೆಯಾ ॥ ೯೭ ॥

ಕಂ ॥ ಉದರದೊಳಿರ್ದ ತನೂಭವ
ನುದಾರತಾ ಗುಣದ ಪೆರ್ಮೆಯಂ ಪೇೞ್ವವೊಲಾ ॥
ಸುದತಿಗೆ ನಿರಂತರಂ ಪಾ
ತ್ರದಾನಮಂ ಮಾೞ್ಪ ಬಯಕೆ ಪುಟ್ಟಿತ್ತಾಗಳ್ ॥ ೯೮ ॥

---

1 ಪಾರ್ವ. ಗ. ಘ.
2. ದೆನೆ. ಕ. ಖ

ಕಂ ॥ ಉಭಯ ಶ್ರೇಣಿಯ ಖಚರ
ಪ್ರಭುಗಳ ಸಿಂಹಾಸನಂಗಳೊಳ್ ಕುಳ್ಳಿರಲಂ ॥
ದಿಭ ಗಮನೆ ಬಯಸಿದಳ್ ಸಾ
ರ್ವಭೌಮನೀ ತನಯನೆಂಬುದಂ ಸೂಚಿಪವೋಲ್ ॥ ೯೯ ॥

ಪರ ಭೂಪಾಲದ್ವೀಪಾಂ
ತರಾಳ ಕೇಳೀವನಂಗಳಂ ಕಿಟ್ಟಿ ತ ॥
ತ್ಪುರಮನುರಿಪುವುದನೀಕ್ಷಿಸ
ಲರವಿಂದಾನನೆಗೆ ಬಯಕೆಯಾಯ್ತೆಳವಸಿಱೊಳ್ ॥ ೧೦೦ ॥

ಕುಲ ಕುಧರಮನೇಱಿ ದಿಶಾ
ವಲೋಕನಂ ಮಾಡುವಖಿಲಕುಲವಾಹಿನಿಯೊಳ್ ॥
ಜಲಕೇಳಿಯನಾಡುವ ಬಯ
ಕೆ ಲತಾಕೋಮಲೆಗೆ ಪುಟ್ಟಿದತ್ತೆಳವಸಿಱೊಳ್ ॥ ೧೦೧ ॥

ಬಸಿಱ ಮಗಂಗಿಲ್ಲಿವರಂ
ವಸುಧಾತಳವೇಕ ಭೋಗ್ಯಮೆಂದಱಿಪುವವೋಲ್ ॥
ವಸುಧೆಯ ನಾಲ್ಕುಂಕಡೆಯೆಡೆ
ಯ ಸುರಭಿ ವೃತ್ತಿಕೆಯನಟ್ಟಿಯಿಂ ಸೇವಿಸುವಳ್ ॥ ೧೦೨ ॥

ಅವನೀಶ್ವರನಾಗಳ್ ಪುಂ
ಸವನಂ ಮೊದಲಾದ ಸಕಲ ಮಾಂಗಲ್ಯ ಮಹೋ ॥
ತ್ಸವಮುಂ ಮೆಱೆದಂ ತಣಿವ
ನ್ನವಿತ್ತು ವಸುಮತಿಗೆ ವಸ್ತ್ರಭೂಷಾವಳಿಯಂ ॥ ೧೦೩ ॥

ಅಂತು ನೆಗಟ್ಟಿ ಮಹೋತ್ಸವಂಗಳೊಡನೆ ಗರ್ಭಮುಂ[1] ಬಂಧುಜನ ಹರ್ಷ ಗರ್ಭಮುಂ[1] ಪರಿಪೂರ್ಣಮಾಗೆ—

ಚ ॥ ಮರಕ್ತ ರಂಗದೊಳ್ ರಮಣಿ ತೀವಿದ ಗರ್ಭದ ಬಿಣ್ಪಿನಿಂ ನಯಂ ।
ಬೆರಸೆಡೆಯಾಡುವಾಗಳಡಿಯೂಡಿದ ಮೆಲ್ಲಡಿವಜ್ಜೆಗಳ್ ಮನೋ ॥
ಹರಮೆನೆಸಿರ್ದುವೀ ಸತಿಯ ಗರ್ಭದೊಳಿರ್ದ ತನೂಜನಾದಪಂ ।
ವರನೆನಗೆಂದಿಳಾವಧುಗೆ ಪಲ್ಲವಿಸಿತ್ತನುರಾಗಮೆಂಬಿನಂ ॥ ೧೦೪ ॥

---

1. ಇದು ಚ. ಪುಸ್ತಕದಲ್ಲಿಲ್ಲ.

ಉ ॥ ಹಾರಮನಿಕ್ಕಿ ಮಿಕ್ಕ ಕನಕಾಭರಣಂಗಳ ಬಿಣ್ಪನೇನುಮಂ ।
ಸೈರಿಸದಿರ್ಪುದಪ್ಪುದೆ ವಲಂ ಕನಕಾದ್ರಿಯ ಬಿಣ್ಪನಪ್ಪೊಡಂ ॥
ಸೈರಿಸದರ್ಭಕಂ ಬಳೆಯೆ ಗರ್ಭಸರೋಜದೊಳಾ ವಿನೀಳ ।
ನೀರೇರುಹನೇತ್ರೆ ತತ್ಕನಕಮಾತ್ರದ ಬಿಣ್ಪನದೇಕೆ ಸೈರಿಪಳ್ ॥ ೧೦೫ ॥

ಚ ॥ ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತ ಮಂಗಳ ಪ್ರಸಾ ।
ಧನಮೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣಮಾಲೆ ತೆಂ ॥
ಗಿನ ತಿರುಳೋಲೆ ತಾವರೆಯನೂಲುಡೆನೂಲ್ ಸಿರಿಕಂಡದಣ್ಪು ಮು ।
ತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ ॥ ೧೦೬ ॥

ಘನಕುಚೆ ಮೇಳದಂಗನೆಯ ಮೇಲೆ ಮಲಂಗಿ ಸರೋಜಪತ್ರ ವಿಲ ।
ಜನಪವನಂ ವಿಕಾಸಮನೊಡರ್ಚೆ ಮನಕ್ಕೆ ಸುಧಾಪ್ರವಾಹಮಂ ॥
ಬಿನಮೆರಡುಂ ಕೆಲಂಬಿಡಿದು ಬಾಜಿಪ ವಾದ್ಯದಿನೋಜೆವೆತ್ತ ಗಾ ।
ಯನಿಯರ ಸೀಯನಪ್ಪ ರಸಗೇಯಮನಾಲಿಸುತಿರ್ಪಳೊರ್ಮೆಯುಂ ॥ ೧೦೭ ॥

ಉ ॥ ಸೋರ್ಮುಡಿ ಮಾಲೆಯಿಂ ಕದಪುಗಳ್ ಮಲಯೋದ್ಭವ ಪತ್ರಭಂಗದಿಂ ।
ಪೆರ್ಮೊಲೆ ಹಾರದಿಂದೆಸೆಯೆ ಬಂಬಲಬಾಡಿದ ರೂಪು ಗಾಡಿಯಂ ॥
ನೂರ್ಮಡಿ ಮಾಡೆ ಮೇಳದವಳಂ ಸತಿ ನಿರ್ಭರ ಗರ್ಭಭಾರದಿಂ ।
ನೆರ್ಮಿ ನಿಮಿರ್ಚುವಳ್ ಪುರುಳಿಯೊಳ್ ಪರಿಹಾಸ ವಚೋವಿಲಾಸಮಂ ॥ ೧೦೮ ॥

ಅಂತು ವಿವಿಧವಿಲಾಸಂಗಳಿಂ ದಿವಸಂಗಳಭಿಲಷಿತ ಫಲಪ್ರಸವಂಗಳಾಗೆ ಸುಖ ಪ್ರಸವ ಸಮಯದೊಳ್—

ಕಂ ॥ ಉರ್ವರೆ ಮಣಿಪರ್ವತಮಂ ।
ಶಾರ್ವರಿ ಪರಿಪೂರ್ಣಚಂದ್ರನಂ ಪಡೆವಂತಿರ್ ॥
ತ್ರ್ವತ್ನಿ ಸರ್ವಲಕ್ಷಣ
ಸರ್ವಗುಣಾನ್ವಿತನೆನಿಪ್ಪ ಸುತನಂ ಪಡೆದಳ್. ॥ ೧೦೯ ॥

ನೀರಜಮಾದುದು ಮೇದಿನಿ ।
ನೀರಜವಿಮಾತನ ಚರಿತ್ರಮೆಂದಱಿಪುವವೋಲ್ ॥
ನೀರಚ್ಛಮಾದುದೀ ವಸು
ಧಾರಮಣಂ ಸ್ವಚ್ಛಹೃದಯನೆಂದಱಿಪುವವೋಲ್ ।

ಕಂ || ಉದಯಿಸಿದ ತನೂಜನ ತೇ
ಜದೊಳೇನುಂ ಮಲಿನಭಾವ ಲಾಂಛನಮಿಲ್ಲಂ ||
ಬುದನಱಿಪುವಂತೆ ಪೊಗೆಯಿ
ಲ್ಲದೆ ಪೊಣ್ಮಿತ್ತಗ್ನಿ ದಕ್ಷಿಣಾವರ್ತಮುಖಂ || ೧೧೧ ||

ಈ ತನಯನೆ ಸಕಲೋತ್ಸವ
ಹೇತುಃ ಜಗತ್ತಾಪ ಶಮನನೆಂದಱಿಪುವವೋಲ್ ||
ಶೀತಲ ಸಮೀರನೆಸಗಿ
ತ್ತಾತನ ಜಸದಂತೆ ವಿಶದಮಾಯ್ತಾಕಾಶಂ || ೧೧೨ ||

ಎಳವಿಸಿಲುಂ ಬೆಳ್ದಿಂಗಳು
ಮೆಳಸಿದುವೆನೆ ರಮ್ಯ ಹರ್ಮ್ಯಶಿಖರ ಸ್ಥಳಿಯೊಳ್ ||
ಪೊಳೆದುವು ಪೊಂಗಳಸಂಗಳ
ಪೊಳೆಪುಂ ಕೇತನ ದುಕೂಲ ಚೇಲಾಂಚಲಮುಂ || ೧೧೩ ||

ಅವಿರಳಮೆನೆ ಪೂವಲಿ ಪುದಿ
ದುವು ಗುಡಿಯುಂ ತೋರಣಂಗಳುಂ ತಳ್ತುವು ಬ ||
ದ್ದವಣಂ ಬಾಜಿಸಿದುವು ವೀ
ಧಿವೀಧಿಯೊಳ್ ಕೇರಿಕೇರಿಯೊಳ್ ಮನೆಮನೆಯೊಳ್ || ೧೧೪ ||

ಉ || ರಾಗದ ಬಳ್ಳಿವಳ್ಳಿಯೆನೆ ರನ್ನದ ತೋರಣಮಾಲೆ ಕೂಡೆ ಚೆ |
ಲ್ವಾಗಿರೆ ದಾನಮೇಘ ರುತಿಯಂತಿರೆ ಮಂಗಳ ತೂರ್ಯನಾದಮಾ ||
ಶಾಗಜ ಕರ್ಣಪೂರಮೆನೆ ರಾಗ ರಸಾಮೃತಮಾಧಿಗ ಘೋಷದಂ |
ತಾಗಿರೆ ಪುಣ್ಯಪಾಠಕ ರವಂ ಪೊಸತಾದುದು ರಾಜಮಂದಿರಂ || ೧೧೫ ||

ದೇಸೆ ವಿಲಾಸಮಂ ಪಡೆಯೆ ಗೊಂದಳವಕ್ಕಣಮಾಗಳಾ ನೃಪಾ |
ವಾಸದೊಳಾಡಿದತ್ತೆಸೆಯೆ ಪಾಣಿತಲಂ ಪಡೆವಂತೆ ಕುಂಕುಮ ||
ಸ್ಥಾಸಕಮಂ ಕುರುಳ್ ಕೆದಱುವಂತೆ ತಮಾಲ ನವ ಪ್ರವಾಳಮುಂ |
ಕೇಸಡಿ ಪಾಸುವಂತೆ ತಳಿರಂ ನಗೆಗಣ್ಣಾಗುಳ್ವಂತೆ ನೆಯ್ದಿಲಂ || ೧೧೬ ||

ಚ || ಉದಯಿಪುದುಂ ತ್ರಿಲೋಕತಿಲಕಂ ಗೃಹದೇವತೆಯರ್ ಪ್ರಸನ್ನವೇ |
ಷದಿನೊಸೆದಾಡುವಂತೆ ಮಣಿಭಿತ್ತಿಗಳಂ ಮಣಿಕುಟ್ಟಿಮಂಗಳಂ ||
ಪುದಿದು ಮನಕ್ಕೆ ಸಂತಸಮನಿತ್ತುವು ನೃತ್ಯರಸಾಮೃತ ಪ್ರವಾ |
ಹದೊಳವಗಾಹಮಿರ್ದ ಗಣಿಕಾಪ್ರಚಯ ಪ್ರತಿಬಿಂಬ ಲಕ್ಷ್ಮಿಗಳ್ || ೧೧೭ ||

ಆ ಪ್ರಸ್ತಾವದೊಳ್ ದಶರಥಮಹೀನಾಥಂ ಸುತಮುಖ ನಿರೀಕ್ಷಣ ಭರದಿಂ ಪಾರಿಜಾತಂ ಕೋರಕಿತಮಾದಂತೆ ಪುಲಕಿತಶರೀರನಾಗಿ—

ಮ ॥ ಜಿನ ಪೂಜೋತ್ಸವಮಂ ಸುರೇಂದ್ರನಳವಲ್ತೆಂಬನ್ನೆಗಂ ಮಾಡಿ ಬೇ ।
ಳ್ದನಿತಂ ಬೇಳ್ದವರ್ಗಿತ್ತು ಕಲ್ಪಕುಜಮಂ ಕೀಳ್ಮಾಡಿ ಸನ್ಮಾನಭಾ ॥
ಜನರಂ ಸಜ್ಜನರಂ ವಿಚಿತ್ರ ವಸನ ಸ್ರಗ್ಭೂಷಣಾಲೇಪದಿಂ ।
ಜನಪಂ ಮನ್ನಣೆಮಾಡಿ ತತ್ತನಯ ಜನ್ಮೋತ್ಸಾಹಮಂ ಮಾಡಿದಂ ॥ ೧೧೮ ॥

ಚ ॥ ದಿವಿಜ ಕುಜಂಗಳಾರ್ಥಿಗೆಗಳಾದುವು ಸಿದ್ಧರಸಂ ತಟಾಕಮಾ ।
ದುವು ಸುರಧೇನು ಪಿಂಡಱಿಯದೊಂದೆಡೆಯೊಳ್ ನೆರೆದಿರ್ದುವೆಂಬಿನಂ ॥
ಭುವನ ಜನಕ್ಕೆ ಬಾಂಧವ ಜನಕ್ಕಖಿಲಾರ್ಥಿಜನಕ್ಕೆ ಹರ್ಷದಿಂ ।
ದವರಿವರೆನ್ನದಿತ್ತು ಮೆಱೆದಂ ಜನಪಂ ಸುತ ಜಾತಕರ್ಮಮಂ ॥ ॥ ೧೧೯ ॥

ಅಂತು ಜಾತಕರ್ಮೋತ್ಸವಮಂ ಮಾಡಿ ದಶಮದಿನದೊಳ್ ಪದ್ಮಾಲಂಕೃತ ವಿಶಾಲವಕ್ಷಸ್ಸ್ಥಲನಪ್ಪುದಱಿಂ ಪದ್ಮನುಂ, ಸಕಲ ಶುಭ ಲಕ್ಷಣಾಭಿರಾಮನಪ್ಪುದಱಿಂ ರಾಮಚಂದ್ರನುಮೆಂದಿವು ಮೊದಲಾಗೆ ಪೆಱವುಮನ್ವರ್ಥನಾಮಂಗಳನಿಟ್ಟು ಕತಿಪಯ ದಿನಂಗಳೊಳ್—

ಕಂ ॥ ರವಿಕಿರಣಂ ಸೋಂಕದೆ ಹಾ
ಸ ವಿಲಾಸಂಬಡೆದ ಕಮಲಮಂ ನೆನೆಯಿಸುಗುಂ
ನೆವಮಿಲ್ಲದ ನಗೆಯಿಂದೊ
ಪ್ಪುವಾಸ್ಯಮುತ್ತಾನಶಯ್ಯೆಯೊಳ್ ಬಾಲಕನಾ ೨೦ ॥

ನಿರಪೇಕ್ಷಕಮೆನಿಸಿಯುಮೋಂ
ಪರಿದತ್ತಲೆ ಪರಿವ ಸುತನ ಕಣ್ಬೆಳಪಿಂದಂ ॥
ತೆರೆಮಸಗಿದುದರಸಿಯ ಮೋ
ಹ ರಸಂ ಚಂದ್ರಿಕೆಯಿನಮೃತ ಜಲರಾಶಿಯವೋಲ್ ॥ ೧೨೧ ॥

ಹರಿನೀಲೋತ್ಪಲ ವಿರಚಿತ
ಸ್ಫುರಳೆಲೆ ಬಾಲಕನ ನಿಟಿಲದೊಳ್ ನಯನ ಮನೋ ॥
ಹರಮಾದುದರ್ಧಚಂದ್ರೋ
ದರದೊಳ್ ಕಣ್ಗೊಳಿಸಿ ತೋರ್ಪ ಕರ್ಪೆಂಬಿನೆಗಂ ॥ ೧೨೨ ॥

ಕಂ || ಅರುಣಮಣಿ ಕರ್ಣಭೂಷಣ
ಮರೀಚಿ [1]ಪಸರಿಸಿದ ರಾಮಚಂದ್ರ ಶರೀರಂ ||
ಪರಿಭವಿಸಿದುದೆಳವಿಸಿಲಾ
ವರಿಸಿದ ಕಮನೀಯ ಪುಂಡರೀಕ ಶ್ರೀಯುಂ || ೧೩೩ ||

ಅರಸಿಯ ಮನದೊಳ್ ಕೆಂಜಡೆ
ದೊರೆಕೊಳಿಸುವುದುಚಿತವೊಡನೆ ಕಜ್ಜಲರುಚಿಯೊಳ್ ||
ಪೊರೆದ ನಯನೋತ್ಪಲಂಗಳ್
ದೊರೆಕೊಳಿಪುದು ಚಿತ್ರಮಲ್ತೆ ರಾಗೋತ್ಸವಮಂ || ೧೩೪ ||

ಧಾತ್ರಿಯೊಳನ್ಯರ ತೇಜೋ
ಮಾತ್ರಮುಮಾಂ [2]ಸಲಿಸೆನೆಂಬ ತೇಜದಿಂ ಪೊಯ್ಯಲ್ ||
ಧಾತ್ರಿಯ ಕಯ್ಯಿಂ ನಿಮಿರ್ದಂ
ಕ್ಷತ್ರಶಿಖಾಮಣಿ ಮಣಿಪ್ರದೀಪಾಂಕುರಮುಂ || ೧೩೫ ||

ಕಿವಿಗಿನಿದೆನಿಪ್ಪ ವೀಣಾ
ರವದೊಳನಾದರಮನುಂಟುಮಾಡಿತ್ತು ತನೂ ||
ಭವನ ತಳರ್ನಡೆಯೊಳ್ ಪೊ
ಣ್ಮುವ ಮೃದುಪದ ಕನಕ ಕಿಂಕಿಣೀಝುಣಝುಣಿತಂ || ೧೩೬ ||

ಶ್ರವಣಕ್ಕರ್ಥವ್ಯಕ್ತಿಯ
ನವಟಯಿಸದೆ ನೆಗಟ್ಟ ವಶ್ಯಮಂತ್ರಾಕ್ಷರದಂ ||
ತವೆಪೊಕ್ಕೆಲ್ಲರುಮಂ ಸೋಲಿಸಿ
ದುವು [3]ತೊದಲಂನುಡಿವ ರಾಮಚಂದ್ರನ ನುಡಿಗಳ್ || ೧೩೭ ||

ತಿಳಿಗೊಳದೊಳಗೆಡೆಯಾಡುವ
ಕಳಹಂಸನ ಬಾಲಕೇಳಿ ಪುದುವೆನೆ ಮಧುಪಾ ||
ಟಳನೇತ್ರಂ ಧವಳಾಂಗಂ
ಪಳಿಕಿನ ಕುಟ್ಟಿಮದಮೇಲೆ ದಟ್ಟಡಿಯಿಟ್ಟಂ || ೧೩೮ ||

---

1. ಪರಿಕಲಿಸೆ. ಚ.
2. ಸಹಿಸೆ. ಘ.
3. ತೊದಳೊಳ್ಪುದಿದ. ಗ. ಘ.

ನಡೆಗಲ್ವಂದುಂ ಬಿಣ್ಣಿಂ ।
ಕೊಡೆ ನೆಗೆದಪುದುರ್ವಿಯೆಂದು ವಾಸುಗಿ ಪಲವುಂ ॥
ಪಿಡೆಯುಂ ಶಿಶುನಡೆವೆಡೆಯೊಳ್ ।
ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ ೧೨೯ ॥

ಮಣಿಯೇಱಂ ಚೆಂಬೊನ್ನಡೆ
ಮಣಿಯುಲಿಗೆಲೆ ಗೆಲ್ವನಂಗರುಚಿಯಿಂದ್ಯೈರಾ
ವಣಮುಂ ಕುಮಾರ ಚೂಡಾ
ಮಣಿ ಲಾಲಾಜಲದೊಳಂ ಚತುರ್ದಂತದೊಳಂ ॥ ೧೩೦ ॥

ಅಮೃತಾಂಶು ಪೆರ್ಚೆ ಪೆರ್ಚುವ
ಸಮುದ್ರಮೆಂತಂತೆ ರಾಮಚಂದ್ರಂ ದಿವಸ ॥
ಕ್ರಮದಿನಭಿವೃದ್ಧಿವೆತ್ತಾ
ಕ್ರಮಿಸಿದನತಿಮುಗ್ಧಭಾವಮಂ ಶೈಶವಮಂ ॥ ೧೩೧ ॥

ಅಂತು ರಾಮಚಂದ್ರನಾದಿತ್ಯನಂತೆ ನಿತ್ಯೋದಯಮನಪ್ಪುಕೆಯ್ವುದುಂ—

ಕಂ ॥ ಬಾಲತ್ವದೊಳಮುದಾತ್ತ ಗು
ಣಾಲಯಮೆನಿಸಿದ ತನೂಜ ಮುಖಚಂದ್ರಮನಂ ॥
ಲೀಲೆಯಿನೀಕ್ಷಿಸಿ ದಶರಥ
ನೋಲಾಡಿದನಧಿಕ ರಾಗರಸ ವಾರಿಧಿಯೊಳ್ ॥ ೧೩೨ ॥

ಅಂತು ಸಂತೋಷದ ಪರಮಪದಮನೆಯ್ದಿರ್ಪುದುಮದಲ್ಲದೆಯುಮಾ ಮಹೀವಲ್ಲಭನ ಮೋಹವಲ್ಲರಿಗಳೇ ಪೂತುವೆಂಬಂತೆ ಪುಷ್ಪವತಿಯರಾಗಿ ನಾಲ್ಕು ನೀರ್ಮಿಂದು ಬೆಳ್ವಸದನದ ಪೊಸದೇಸೆ ವಿಳಾಸಂಬಡೆಯೆ ಸೂಟಿಗ್ಗೆ ವಂದು ಶುಭಸ್ವಪ್ನ ದರ್ಶನಾನಂತರಂ ಕೆಲವು ದಿವಸಮಿರ್ಪಿನಂ—

ಕಂ ॥ ಕುಲದೊದವಿಂಗೀ ಸತಿಯರೆ
ಕುಲದೇವತೆಯರ್ಕಳೆಂಬ ಬಗೆ ಪುಟ್ಟುವಿನಂ ॥
ತಲೆದೋಱಿ ಗರ್ಭಚಿಹ್ನಂ
ತಲೆದೋಱುದುದವನಿಪತಿಗೆ ರಾಗೋದ್ರೇಕಂ ॥ ೧೩೩ ॥

ಆಗಳಾಕೆಗಳ ಪಸುರ್ಪೆಸೆವಸಿಯು ಬಾಸೆ ಲಾವಣ್ಯನದಿಯ ಶೈವಾಲಲತೆಯ ಲಾಸ್ಯಮನಪಹಾಸ್ಯಂಗೆಯ್ಯೆಯುಮಾಕೆಗಳ ಕಱಂಗಿದ್ದ ಕುಚ ಚೂಚುಕಂಗಳಿಂದೆಸೆದು ತೋಳಮೊದಲಿಂ ಜಕ್ಕುಲಿಸುವ ಪೆರ್ಮೊಲೆ ಕರ್ನೆಯ್ದಿಲೆಸಳಂ ನಲಿದು ಕರ್ಚುವ ಜಕ್ಕವಕ್ಕಿ

ಯ ವಿಲಾಸಮನಿಕ್ಕಿ ಮೆಟ್ಟಿಯುಮಾಕೆಗಳ ಮುಖರಸದೊಳ್ಮೂಡಿ ಮುಳ್ಕಾಡುವ ಕಪೋಲ ಯುಗಳಂ ತಿಳಿಗೊಳದೊಳಗಣ ಬಿಳಿಯ ತಾವರೆಯೆಸಳಂ ಸರಸವಾಡೆಯು ಮಾಕೆಗಳ ಪೆಜಿನೊಸಲಂ ಮೆಟ್ಟಿ ನಿಮಿರ್ದ ತೋರಗುರುಳ ತೊಂಗಲೆಳವೆಜಿಯನಂ ಧಕಾರವಮಾವರಿಸಿದಂತೆ ತೋಜಿಯುಂ, ಅನಂತರಮುವರ್ಗೆ ಪುಂಸವನ ಸೀಮಂತೋನ್ನಯನಾದಿಸಕಲ ಮಂಗಳವುಂ ದಶರಥನರನಾಥವಮ್ಮಾಳ್ಪುದುಮನುಕ್ರಮದಿಂ ಶುಭ ದಿಸಮುಹೂರ್ತದೊಳ್ ಸುಮಿತ್ರೆ ಲಕ್ಷ್ಮಣನಂ, ಕೈಕೆ ಭರತನಂ, ಸುಪ್ರಭೆ ಶತ್ರುಘ್ನನಂ ಪಡೆವುದುಂ.

ಕಂ ॥ ಪಸರಿಸೆ ಪೂವಲಿಗಳ್ ಬಾ
ಜಿಸೆ ಬದ್ದವಣಂಗಳೊಡನೆ ಮಿಳ್ಳಿಸೆ ಗುಡಿಗಳ್ ॥
ದೆಸೆಬಿದ್ದವಾಡೆ ತರುಣಿಯ
ರೊಸಗೆಯುಮೋಲೊಸಗೆಯಾದುದಂದರಮನೆಯೊಳ್ । ॥ ೧೩೪ ॥

ಆಸಮಯದೊಳ್ ದಶರಥಂ ಸುತಮುಖದರ್ಶನೋತ್ಸುಕಂ ಕತಿಪಯಾಪ್ತ ಪರಿಜನ ಪರಿವೃತಂ ಸುಮಿತ್ರಾದೇವಿಯ ಸೂತಿಕಾಸದನಮಂ ಪೊಕ್ಕು—

ಮ ॥ ಸಿರಿ ಸಿಂಹಕ್ಕಭಿಷೇಕಮಂ ಪಡೆವುದಂ, ರತ್ನಾಕರಂ ಸುತ್ತಿದು।
ರ್ವರೆಯಂ, ಭಾಸುರಚಕ್ರಮಂ, ಕನಸಿನೊಳ್ ಪೊಂಬೆಟ್ಟನೇಜುದುದಂ ॥
ಹರಿಣೀನೇತ್ರೆ ಸುಪುತ್ರೆ ಕಂಡುದಜಿನಾಳ್ಗಂ ಬೆಳ್ಳಿವೆಟ್ಟಂಬರಂ ।
ಭರತಕ್ಷೇತ್ರಮನೆಂದು ಕಣ್ ತಣಿವಿನಂ ಸೌಮಿತ್ರಿಯಂ ನೋಡಿದಂ ॥ ೧೩೫ ॥

ಕಂ ॥ ಬಾಲಾರ್ಕ ಮರೀಚಿಯೆನಲ್
ಬಾಲಕನ ಶರೀರಕಾಂತಿ ಪಸರಿಸೆ ಹರ್ಷೋ ॥
ನ್ಮೀಲನದಿಂ ದಶರಥ ನರ
ಪಾಲಕ ಮುಖಕಮಳಮೇಂ ಮನಂಗೊಳಿಸಿದುದೋ ॥ ೧೩೬ ॥

ಅನಂತರಂ ಭರತಶತ್ರುಘ್ನರ ಜನ್ಮೋತ್ಸವ ಮಂಗಳಮನಾಚರಿಸಿ—

ಮ ॥ ಮನುವಂಶಾಂಬರಭಾನು, ಕಲ್ಪತರು ಕೈವಂದಂತೆ, ರೈವೃಷ್ಟಿ [1]ಪ ।
ಳ್ಚನೆ ಕೊಂಡಂತೆ, ಸುರೇಂದ್ರಧೇನು ಕಜಿದಂತಾ [illegible] ಕೀರ್ತಿತ್ತು, ಸ ॥
ಮ್ಮನದಿಂದಿತ್ತು, ಸುಹೃಜ್ಜನಂ ಪರಿಜನಂ ವಿದ್ವಜ್ಜನಂ [illegible] ಘನೆಲ್ ।
ತನಯರ್ ಮೂವರ ಜಾತಕರ್ಮಮುಮನತ್ಯುತ್ಸಾಹದಿ ಮಾಡಿದಂ ॥ ೧೩೭

1. ತೊಟ್ಟನೆ ಕೊಂಡಂತೆ. ಗ. ಘ. ; ಳಚ್ಚನೆ ಕೋಲಂತೆ ಕ ಖ

ಅಂತು ದಶರಥಮಹೀನಾಥಂ ಸಂತಾನ ಸಮೃದ್ಧಿಯಿನತಿಪ್ರವರ್ಧಮಾನಸುಖಾಧೀನ ಮಾನಸನಾಗಿರ್ಪುದುಂ—

ಕಂ ॥ ಅವನೀವಲ್ಲಭ ತನಯರ್
ನವ ಶಶಿಕಲೆಯಂತೆ ಪಡೆದು ನಯನೋತ್ಸವಮಂ ॥
ದಿವಸಕ್ರಮದಿಂದಂ ವೃ।
ದ್ಧಿವಡೆದರಮರಾವನೀಜದಗೆಯೆಂಬಿನೆಗಂ ॥ ೧೩೮ ॥

ನಸುನಗೆ ಕಮಳದ ಸಿರಿಯಂ
ನಸುನಗೆ ಜನನಿಯರ ಲೋಚನಭ್ರಮರಂಗಳ್ ॥
ಮುಸುಱಿದುವು ಮೋಹವಲ್ಲರಿ
ಪಸರಿಸಿ ಪರ್ವಿದುದು ಸುತರ ಲಾಲಾಜಲದಿಂ ॥ ೧೩೯ ॥

ತಳರಡಿ ಯಿಡುವತ್ತಲೆ ಪರಿ
ದೆಳಸುವ ಜನನಿಯರ ದಿಟ್ಟಿ ಮಣಿಕುಟ್ಟಿಮಮಂ ॥
ಬಳಸೆ ಪೊಸತಲರ್ದ ನೆಯ್ದಿ
ಲ್ಗೊಳದೊಳಗಣ ರಾಜಹಂಸನಂ ನೆನೆಯಿಸಿದರ್ ॥ ೧೪೦ ॥

ಚ ॥ ಅರಳೆಲೆ ಮುತ್ತಿಗಾಯ್ ಪುಲಿಯುಗುರ್ ನವರತ್ನದ ಕಂಕಣಂಗಳುಂ।
ಗುರಮುಡಿನೂಲ ಪೊನ್ನ ಮಣಿಕಿಂಕಿಣಿ ರನ್ನದ ಘಂಟಿ ನೂಪುರಂ॥
ವರ ವಲಯಂಗಳೆಂಬ ಪಲವಂದದ ಚಂದದ ಬಾಳವೆಂದಮೊ।
ಪ್ಪಿರೆ ಪಿತೃಮಾತೃಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ ॥ ೧೪೧ ॥

ಅಂತು ದಶರಥ ಮಹೀನಾಥನ ಸಾಮ್ರಾಜ್ಯಶ್ರೀಯ ಮಣಿಮಯಾಭರಣದಂತೆ ಸೊಗಯಿಸುವ ಸುತರ ಬಾಲಕೇಳೀದರ್ಶನದಿಂ ಸುಮಿತ್ರೆಯ ನಯನಪುತ್ರಿಕೆ ನಲಿದು ನರ್ತಿಸೆಯುಂ, ಕೈಕೆಯ ತನುಲತಿಕೆ ಪುಳಕ ಕಳಿಕೆಯಂ ತಳೆಯೆಯುಂ, ಸುಪ್ರಭೆಯ ಮನಃಪ್ರಮೋದಮುದಿತೋದಿತಮಾಗೆಯುಂ ರಾಮ ಲಕ್ಷ್ಮಣ ಭರತ ಶತ್ರುಘ್ನರನುಕ್ರಮದಿಂ ಶೈಶವಮನತಿಕ್ರಮಿಸೆ—

ಕಂ ॥ ವಸುಮುದುದವರ್ನ್ನರ್ಥಂ
ವಸುಧೆಗೆಲ್ ಕಱಿದು ಪೊನ್ನ ಮಟಿಯಂ ದಾನ॥
ವ್ಯಸನಿ ದಶರಥನದೇಂ ಪೊಸ
ಯಿಸಿದನೊ ಚೌಲೋಪನಯನ ಮಹಿಮೋತ್ಸವಮಂ ॥ ೧೪೨ ॥

ಕಂ ॥ ಪರಮ ಪ್ರೇಮಂ ಜನ್ಮಾಂ
ತರದಿಂದೊಡವಂದುದೆನಿಸಿ ಗೆಡೆ ಬೆಚ್ಚವೊಲ
ಚ್ಚರಿಯಾಗೆ ರಾಮ ಲಕ್ಷ್ಮಿಣ್ರ
ಧರರೊಳವೂದತ್ತು ಭರತಶತ್ರುಘ್ನರೊಳಂ ॥ ೧೪೩ ॥

ಅವುಳ್ಗಳಿವರೆಂಬಿನಂ ತವು
ಗವುಳ್ವಿಸರವುರ್ದೆಸೆಯೆ,ತಾಯ ತಂದೆಯ ಚಿತ್ತ ॥
ಕ್ಕವುರ್ದಿನ ವುಟಿಯುಂ ಕಜಿದರ್
ಕುವೂರಕರ್ ವೂರ್ತಿಗೊಂಡ ಪುರುಷಾರ್ಥದವೋಲ್ ॥ ೧೪೪ ॥

ಮ ॥ ಸುರಧೇನು ಸ್ತನಭಾರದಂತೆ ಪುರುಷಾರ್ಥಂ ವೂರ್ತಿಗೊಂಡಂತೆ ನಾ।
ಲ್ವರುವೊಂದಾಗಿರೆ ನಂದನರ್ ದಶರಥಂ ನಾಲ್ಕುಂ ಸಮುದ್ರಂಬರಂ ॥
ಧರೆಯಂ ಕೂಡೆ ನಿವಿರ್ಚಿ ನಾಲ್ದೆಸೆಯೊಳಂ ನಾಲ್ಕುಂ ಜಯಸ್ತಂಭಮಂ।
ಚರಿತಾರ್ಥರ್ ನಿಲಿಸಲ್ ಸಮರ್ಥರಿವರೆಂದುತ್ಸಾಹಮಂ ತಾಳ್ದಿದಂ ॥ ೧೪೫ ॥

ಮತ್ತಂ ನಿಜ ತನೂಭವರ ನಿರ್ಜಿತ ಮನೋಜಾಕಾರಮುಮಂ, [1]ತಿಳ ಮಸೂರಿಕಾದಿ ಶುಭ ವ್ಯಂಜನರಂಜಿತ ಪ್ರಶಸ್ತಾವಯವಂಗಳುಮಂ, ಹಲ ಕುಲಿಶ ಶಂಖ ಚಕ್ರ ಲಾಂಛನಂಗಳಪ್ಪ ಕರ ಚರಣಂಗಳುಮಂ ನೋಡಿ 'ಸಕಲ ಸಾಮ್ರಾಜ್ಯಶ್ರೀಯನಪ್ಪುಕೆಯ್ವಂತೆ ಸಂತೋಷದಂತಮನೆಯ್ದಿ—

ಕಂ॥ ಸವಿವೆವಸರಮಿದು ವಿದ್ಯಾ
ಯುವತಿಯ ವದನಾರವಿಂದ ಮಧುವನೆನುತ್ತುಂ ॥
ವಿವಿಧ ಕಳಾಚಾರ್ಯರನಾ
ರ್ಯವರ್ಯರಂ ಗುರು ನಿಯೋಗದೊಳ್ ಯೋಜಿಸಿದಂ ॥ ೧೪೬ ॥

ಶುಭದಿನ ಮುಹೂರ್ತದೊಳ್ ಪು
ಣ್ಯಭಾಗಿಗಳ್ ಕಲಿಸೆ ಗುರುಗಳೊಡವಂದುದೊ ಪೂ ॥
ರ್ವ ಭವೋಪಾರ್ಜಿತ ವಿದ್ಯಾ
ವಿಭವಮೆನಲ್ ಸಕಲಶಾಸ್ತ್ರ ಪರಿಣತರಾದರ್ ॥ ೧೪೭ ॥

ರೋಮಾಂಚಮನೊಡರಿಸೆಯುಂ
ರಾಮನ ಲಕ್ಷ್ಮಣನ ಭರತ ಶತ್ರುಘ್ನರ ವಿ
ದ್ಯಾ ಮಹಿಮೆ ಚತುಷ್ಷಷ್ಟಿಕ
ಲಾ ಮಹಿತರ ಮನದೊಳೀರ್ಷ್ಯೆಯಂ ಪುಟ್ಟಿಸುಗುಂ ॥ ೧೪೮ ॥

---

1. ಮುಡಿಳ. ಘ. ; ತಿಲಿಳ. ಚ.

ಮ॥ ಸೊಡರಂ ಪೊತ್ತಿಸಿಕೊಂಡು ಪೋಗೆ ಸೊಡರೊಳ್ ತೇಜಂ ಗುಣಾಧಿಕ್ಯದಿಂ।
ಕಡುಗೊರ್ವಂ ಪಡೆವಂತೆ ತಮ್ಮ ವಿಶದಪ್ರಜ್ಞಾ ಗುಣೋತ್ಕರ್ಷದಿಂ॥
ಪಡೆವಾತೇನಜುವತ್ತುನಾಲ್ಕು ಕಳೆಯುಂ ತತ್ಕೋವಿದರ್ ಮೆಚ್ಚೆ ನೂ।
ರ್ಮಡಿ ಮೇಲಾದುವು ರಾಮಲಕ್ಷ್ಮಣರೊಳೇಂ ಸತ್ಕೀವೆ ಸಾಮಾನ್ಯಮೋ

ಚ॥ ಕಲಿತನಮುಂ ಮಹಾಬಲಮುಮುಳ್ಳನ ಕಯ್ದುವೆ ಕಯ್ದು ಪಂದೆದು।
ರ್ಬಲನೆನಿಸಿರ್ದವಂ ಪಿಡಿದ ಕೈದುವದೇತರ ಕೈದುವೆಂಬಿನಂ॥
ಕಲಿಸಿದ ಭಾರ್ಗವಾ[1]ತ್ಮಜರನೋಡಿದ ತಜ್ಞರ ಮುಯ್ಯು ನೆತ್ತಿಯಂ।
ಗೆಲೆ ಸಲೆ ರಾಮಲಕ್ಷ್ಮಣರದೇಂ ನೆರೆ ಕಲ್ತರೊ ಕೈದುವೆಲ್ಲಮಂ ॥ ೧೫೦ ॥

ಮ॥ ಮಿಗೆ ವಂದೆಲ್ಲರ ಬಿಲ್ಲ ಬಿನ್ನಣದ ಬಿಣ್ಪಿಂ ರಾಮನೇಸೆಂಬಿನಂ।
ಮ್ಮಿಗೆ ತನ್ನೇಸ್ಸುಪಮಾನಮಾದುದೆನೆ ರಾಮಂ ಕಲ್ತ ಬಿಲ್ಬಲ್ಮೆಯಂ॥
ಪೊಗಟಲ್ವೇಟ್ಪುದೆ ರಾಮನೊಳ್ ಸದೃಶವೆಂಬನ್ನಂ ಧನುರ್ವಿದ್ಯೆಯಿಂ।
ಜಗಮಂ ಮೆಚ್ಚಿಸಿ ಚಾಪ ಚಾಪಲತೆಯಂ ಕೊಂಡಾಡಿದಂ ಲಕ್ಷ್ಮಣಂ॥ ೧೫೧ ॥

ಅಂತವರ್ ಸಕಲಶಸ್ತ್ರ ಶಾಸ್ತ್ರ ವಿದ್ಯಾವಿಶಾರದರಾಗಿ ಕುಮಾರ ದಶ್ಲಾತಿಶಯ ಮನಪ್ಪುಕೆಯ್ವುದುಂ—

ಚ। ಹಿಮಕರ ಬಿಂಬದಿಂ ಕಡೆದುದೋ ಪಳಿಕಿಂ ಪಡೆದತ್ತೊ ಪೂಗಳಿಂ।
ಸಮೆದುದೊ ಚಂದ್ರಕಾಂತಮಣಿಯಿಂ ಬೆಸಕೆಯ್ದುದೊ ಮೌಕ್ತಿಕಂಗಳಿಂ॥
ಸಮನಿಸಿದತ್ತೊ ಕೋಮಲಮೃಣಾಳಿಕೆಯಿಂ ಪರಿಪೂರ್ಣಮಾಯ್ತೊ ಪೇ।
ಟುಮಿದೆನೆ ರಂಜಿಸಿತ್ತು ರಘುರಾಮನ ಪಾಂಡುರ ದೇಹಮಂಡಲಂ ॥ ೧೫೨ ॥

ಕಂ॥ ಉನ್ನತ ಲಲಾಟ ಪಟ್ಟಂ,
ಮನ್ನಿಸದಷ್ಟಮಿಯ ಚಂದ್ರನಂ ನಗೆಗಣ್ಗಳ್ ॥
[2]ಮುನ್ನಡೆವಿಡಿದುವು ಕಮಳಮ
ನಿನ್ನೇವಣ್ಣಿಪುದೊ ರಾಮನಭಿರಾಮತೆಯಂ ॥ ೧೫೩ ॥

ಚ॥ ತೆರೆ ಕರೆಗಣ್ಮಿದಿಂಗಡಲ ಗಾಡಿಯನೇಳಿಸ ತೋರಮುತ್ತಿನೈ।
ಸರದ ಮರೀಚಿಯಿಂ ಸಿರಿಯ ತಾಯ್ವನೆ ರಾಮನ ವ್ಯೋರುರಂ ಮನೋ॥
ಹರಮೆನಿಸಿತ್ತು ವಾರವನಿತಾಜನ ವಶ್ಯವಿಧಾನ ವೇದಿಯೊಳ್।
ದೊರೆಯೆನಿಸಿತ್ತು ಧೈರ್ಯಗುಣ ರೋಹಣಶೈಲ ಶಿಲಾತಲೋಪಮಂ ॥ ೧೫೪ ॥

---

1. ತ್ಮಜನಿಸೋದಿತ ತಜ್ಞರ ಮುಯ್ಯು ನೆತ್ತಿಯುಂ. ಚ.
2. ಮುನ್ನುರೆ ಕ. ಖ. ಗ ಘ.

ಕಂ ಎಳಿಸಿದುವು ಲಕ್ಷ್ಮಣನ ವಿ
ಶಾಳ ವಿಲೋಚನ ಯುಗಂಗಳಂಗ ಪ್ರಭೆಯಿಂ ||
ಮೇಳಿಸಿ ನಗೆಯುಂ ಪಾಳಿಸಿ
ಕಾಳಿಂದಿಯೊಳಲರ್ದ ಪುಂಡರೀಕ ಶ್ರೀಯಂ || ೧೫೫ ||

ಹರಿನೀಲ ರತ್ನಮುಂ ಕಂ
ಡರಿಸಿದ ಕಣ್ಗೆ ಅವಿಗೆಯ್ದ[1] ಜೀವಂಬೊಯುಂ ||
ತಿರೆತೋರ್ಪ ಗಂಡಗಾಡಿಗೆ
ಪುರುಷೋತ್ತಮನೆಂದು ಕೊಂಡು ಕೊನೆದುದು ಲೋಕಂ || ೧೫೬ ||

ಚ || ಮನಮನಲರ್ಚಿದತ್ತು ಪುರುಷೋತ್ತಮನುಚ್ಚ ಲಲಾಟ ಲೇಖೆ ಕೃ
ಷ್ಣನ ಕುರುಳೋಳಿ ವಿಷ್ಣುವಿನ ಪೇರುರವಾಯತಿವೆತ್ತ ವಾರಿಜಾ ||
ಕ್ಷನ ಧವಳೇಕ್ಷಣಂ ಪುರುಷಸಿಂಹನ ಸಿಂಹ ಕಟೀತಟಂ ಜನಾ |
ರ್ದನನ ಭುಜಂಗ ಭೀಮ ಭುಜಮಂಬುಜನಾಭನ ನಾಭಿಮಂಡಲಂ || ೧೫೭ ||

ಪೊಳೆಯೆ ನಖಾಂಶುಮಂಡಲ ಫಣಾಮಣಿ ಪಂಚಫಣಾಸಿತಾಹಿಗಳ್
ಬಳೆದಪುವೀಂಟಲೆಂದು ದಶಕಂಠನ ಬಲ್ಲುಸಿರಂ ತದೀಯ ನಿ ||
ರ್ಮಳತರ ಕೀರ್ತಿ ದುಗ್ಧರಸಪಾನಮನಂಬಿನೆಗಂ ಪೊದಟ್ಟಿ ಕೋ |
ಮ್ಮಳಿಕೆಯನಾಳ್ದು ನೀಳ್ದು ಬಗೆಗೊಂಡುವು ಕೃಷ್ಣನ ಬಾಹುಶಾಖೆಗಳ್ || ೧೫೮ ||

ಉ || ಹಾರ ಮರೀಚಿಯಂ ಮರಕತಚ್ಛವಿಯಂ ಗೆಲೆ ದೇಹದೀಪ್ತಿ ನೀ
ಹಾರ ಮರೀಚಿಯಂ ಕುಸುಮ ಸಾಯಕನಂ ಗೆಲೆ ಗಂಡಗಾಡಿ
ಧೀರವ ನಾದಮುಂ ಜಲಧರಧ್ವನಿಯಂ ಗೆಲೆ ಬೇಜಿಬೇಜಿ ಗಂ |
ಭೀರರವಂ ಬಲಾಚ್ಯುತರದೇನೆಸೆದಿರ್ದರೊ ರಾಮಲಕ್ಷ್ಮಣರ್

ಮ || ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ ತಾರಶೈಲಕ್ಕೆ ತೆಂ
ಕಣದಂ ಕಂಕಣದಂತೆ ಕೈಗೆವರಿಸಲ್ ಭೂಚಕ್ರಮುಂ ಚಕ್ರಮುಂ ||
ರಣದೊಳ್ ಸಾಧಿಸಲೆಂದು ಪುಟ್ಟಿದವರೇಂ ಸಾಮಾನ್ಯರೇ ರಾಮಲ
ಕ್ಷ್ಮಣರಪ್ರಾಕೃತವಿಕ್ರಮರ್ ತ್ರಿಭುವನ ಪ್ರಖ್ಯಾತ ಕೀರ್ತಿಧ್ವಜರ್ || ೧೬೦ ||

ಅಂತು ರಾಮ ಲಕ್ಷ್ಮಣ ಭರತ ಶತ್ರುಘ್ನರೆಂಬ ನಾಲ್ವರ್ ತನೂಭವರುಂ ನಾಲ್ಕುಂ ರತ್ನಶಿಲಾಸ್ತಂಭಂಗಳಂತೆ ರಘುಕುಲ ಸಮುದ್ಧರಣ ಸಮರ್ಥರಾಗೆ ದಶರಥಂ ಪರಿಪೂರ್ಣ ಮನೋರಥನಾಗಿ—

1. ಗೆಯ್ದು. ಕ. ಖ. ಗೆಯ್ದು. ಚ.

ಮ॥ ಸ್ರ॥ ಧನಮಂ ಮರ್ಯಾದೆಯಿಂದಾರ್ಜಿಸಿ ವಿಷಯಸುಖಾಸ್ವಾದನಂ ದೋಷನಿಷ್ಠಾ।
ದನಮುಳ್ತೆಂಬಂತೆ ಚಿತ್ತಕ್ಕೊದವಿಸೆ ಪದೆಪಂ ಭಾರತೀ ಹಂಸಿ ವಕ್ತ್ರಾ॥
ಬ್ಜಿನಿಯೊಳ್ ನಾನಾವಿಧಂ ನರ್ತಿಸೆ ಹಿಮಕರ ಭಾಸ್ವದ್ಯಶೋ ವಲ್ಲಿಗಾಲಂ।
ಬನಘಾಂಭೋರಾಶಿ ವೇಲಾ ವನಮೆನೆ ನೆಗಟ್ದಂ ಭಾರತೀಕರ್ಣಪೂರಂ॥ ೧೬೧॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖಕಿರಣ ಚಂದ್ರಿಕಾಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಕುಮಾರೋದಯವರ್ಣನಂ
—ತೃತೀಯಾಶ್ವಾಸಂ—

## ಚತುರ್ಥಾಶ್ವಾಸಂ

ಕಂ॥ ಶ್ರೀಸುದತಿ ತನ್ನುರಸ್ಸರ
ಸೀ ಸದನದೊಳಿರ್ದು ಪಾತ್ರದಾನ ವಿನೋದ ॥
ವ್ಯಾಸಂಗಮನೊದವಿಸೆ ಸೌ
ಖ್ಯಾಸೀನಂ ಪೆಂಪುವೆತ್ತನಭಿನವಪಂಪಂ ॥ ೧ ॥

ಅನ್ನೆಗಮಿತ್ತಲ್—

ಕಂ॥ ಮಿಥಿಳಾ ಪುರಾಧಿನಾಥಂ
ಪ್ರಥಿತಯಶಂ ಜನಕನಾಮಮಹೀಭುಜನ ಮನೋ ॥
ರಥ ಭೂಮಿ ವಿದೇಹಿಗದೇಂ
ಪೃಥು ಕುಚ[1]ಯುಗದೊಡನೆ [2]ಕೊರ್ವುವಡೆದುದೊ ಮಧ್ಯಂ ॥ ೨ ॥

ಶಶಿಕಾಂತ ಮುಕುರದಂತಿರೆ
ಶಶಿಮುಖಿಯ ಕದಂಪುಗಳ್ ಬೆಳರ್ತುವು ಹರಿನೀ ॥
ಲ ಶಲಾಕೆಯಂತೆ ಬಾಸೆಗೆ
ವಿಶೇಷಮೆನೆ ಪಸರಿಸಿತ್ತು ಕರ್ಪೆಳವಸಿಱೊಳ್ ॥ ೩ ॥

ವಳಿರೇಖೆ ಮಸುಳೆ ಗರ್ಭಂ
ಬಳೆವುದುಮೊಡವಳೆದು ಸತಿಯ ಮಧ್ಯಂ ಚೆಲ್ವಂ ॥
ತಳೆದುದು ನಯನಾನಂದಮ
ನೆಳವೆಱೆ ಪರಿಪೂರ್ಣಮಾದೊಡಂ ಪುಟ್ಟಪವೋಲ್ ॥ ೪ ॥

ಆ ಸಮಯದೊಳ್—

ಕಂ॥ ಭವ ಭದ್ಧ ವೈರದಿಂ ಕಾ
ದು ವಿದೇಹಿಯ ಗರ್ಭಮಂ ನಿಶಾಚರನಿರ್ದಂ ॥
ವಿವಿಧೋಪಸರ್ಗಮಂ ಪಡೆ
ಯವೆ ಮುಳಿಸಂ ಪಡೆವ ಮುಳಿವ ದುಶ್ಚರಿತಂಗಳ್ ॥ ೫ ॥

---

1. ಭರ. ಗ. ಚ.
2. ತೋರ್ಪು. ಗ

ಆ ವಿದೇಹಿಯ ಗರ್ಭಮನಾನಿಶಾಚರನದೇಂಕಾರಣದಿಂ ಕಾದಿರ್ದನೆಂದೊಡೆ ಚಂದ್ರಪುರಮನಾಳ್ವಂ ಚಂದ್ರಧ್ವಜನಾತನರಸಿ ಮನಸ್ವಿನಿಯೆಂಬಳಾಕೆಗೆ ಪುಟ್ಟಿದ ಚಿತ್ತೋತ್ಸವೆಯೆಂಬ ಬಾಲಿಕೆಯುಮಾನೃಪನ ಪುರೋಹಿತನ ಮಗನಪ್ಪ ಕಪಿಳನೆಂಬ ಬಾಲಕನುಂ—

ಕಂ ॥ ಒಡನಾಡಿಯುಮೊಡನೋದಿಯು
ಮೊಡವಳೆದುಂ ಪಲವುಕಾಲದಿಂದನುಬಂಧಂ ॥
ಗಿಡದೊಡಲೆರಡಸುವೊಂದೆನೆ
ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್ ॥ ೬ ।

ಅಂತವರೋರೊರ್ವರಂ ಮಚ್ಚಿ—

ಮ ॥ ಪದೆಪಿಂ ಚುಂಬಿಸದುಮ್ಮಳಂ ಬಯಸಿದಾಗಳ್ಮನ್ಮಥಕ್ರೀಡೆ ಕೂ ।
ಡದಟಿಲ್ ಕಳ್ವೊಡಗೂಡು[1]ವಂಜಿಕೆ ಮನಕ್ಕುದ್ವೇಗಮಂ ಮಾಡೆ ನೋ ॥
ಡದೆ ತಾಯ್ತಂದೆಯುಗಲ್ಕೆಯಂ ಮದನ ರಾಗೋನ್ಮಾದದಿಂ ಮುಂದುಗಾ ।
ಣದೆ ಮುಗ್ಧಾಶಯರಾ ವಿದಗ್ಧಪುರಮಂ ಪೊಕ್ಕಿರ್ದರಾಯಿರ್ವರುಂ ॥ ೭ ।

ಕಂ ॥ ಅನಿತಿಂದ್ರಿಯ ಸುಖಮುಂ ಸ್ಪ
ರ್ಶನ ಸುಖಮೊಂದಱೊಳಡಂಗಿದತ್ತೆನೆ ನೃಪ ನಂ ॥
ದನೆಯುಂ ದ್ವಿಜ ನಂದನನುಂ
ಮನೋಜ ಸುಖರಸ ವಿಲೀನ ಮಾನಸರಿರ್ದರ್ ॥ ೮ ॥

ಅಂತಿರ್ಪುದುಮೊಂದುದಿವಸಂ ಪ್ರತಾಪಸಿಂಹನ ಮಗಂ ತತ್ಪುರಾಧಿಪತಿ—

ಚ ॥ ಕೊಡೆವಿಡಿದಂತೆ ಮಂಡಳಿಸೆ ಮೇಲೆ ಕಿರೀಟಮರೀಚಿ ಸುತ್ತಲುಂ ।
ಕಡಿತಲೆಯಾಳ್ ಕಡಂಗಿಬರೆ ಮಾರ್ಗಮೊಡಂಬಡೆ ರಾಜಮಾರ್ಗದೊಳ್ ॥
ನಡೆಯೆ ಹಯಂ ವಿಳಂಬಿತದೆ ಕುಂಡಳಮಂಡಿತನೇಂ ವಿಳಾಸಮಂ ।
ಪಡೆದನೊ ಪದ್ಮರಾಗ ಮಣಿಕುಂಡಲ ಮಂಡಿತ ಗಂಡಮಂಡಲಂ ॥ ೯ ।

ಅಂತು ಬರುತ್ತುಂ—

ಚ ॥ ಶರದದ ಚಂದ್ರನಂ ನಗೆಮೊಗಂ ನಗೆ ಚಂದ್ರಮರೀಚಿಮಾಲೆಯಂ ।
ತರಳ ಕಟಾಕ್ಷಮಾಲೆ ಗೆಲೆ ಬಂದು ಗೃಹಾಂಗಣದೊಳ್ ಲತಾ ತನೂ ॥

---

1 ವುಜ್ಜುಗ. ಖ. ಗ. ಘ.; ವಂಜಮೆ. ಚ.

ದರಿ ನಡೆನೋಡೆ ಕಂತು ನಡೆ ಪೂಡಿದ ಪೂಗಣೆಗೆತ್ತು ನಾಡೆ ಕಾ।
ತರತೆಯನಪ್ಪುಕೆಯ್ಯೆ ಬಗೆ ನೋಡಿದನಾಕೆಯನಾ ಕುಮಾರಕಂ ॥ ೧೦ ॥

ಅಂತಾತಂ ಕಣ್ಸೋಲ್ತುನೋಡಿ ದೂದವಿಯನಟ್ಟುವುದುಂ—

ಚ ॥ ಬಗೆಯದೆ ತನ್ನ ಮುನ್ನಿನೊಲವಂ ನೆಲೆಯಿಂದೊಡಗೂಡಿ ಬಂದುದಂ।
ಬಗೆಯದೆ ಪಾೞಿಯುಂ ಪಸುಗೆಯುಂ ಗುಣಹಾನಿಯನಪ್ರಸಿದ್ಧಿಯುಂ ॥
ಬಗೆಯದೆ ಬಂದ ದೂದವಿಗೆ ಚಿತ್ತಮನೊಪ್ಪಿಸಿ ಕೂಟದಾಸೆಯುಂ।
ಬಗೆದಳಿದಾವ ವಿಸ್ಮಯಮೊ ನಾರಿಗೆ ನಚ್ಚಿನ ಕೆಯ್ದು ಕೈತವಂ ॥ ೧೧ ॥

ಅಂತಾಕೆಯನಾ ಕುಮಾರಂ ಬರಿಸಿ ತನಗರಸಿಮಾಡಿ ಕಪಿಳನಂ ಮರುಳ್ಮಾಡಿ ಕಳೆವುದುಮಾತನದುವೆ ನಿರ್ವೇಗಕಾರಣಮಾಗೆ ಕೆಲವುಕಾಲದಿನಾರ್ಯಗುಪ್ತರೆಂಬಾಚಾರ್ಯರ ಸಮಕ್ಷದೊಳ್ ಬಾಹ್ಯತಪೋರೂಪಮಂ ತಳೆದು—

ಕಂ ॥ ಆ ಸುದತಿ ನೆಲಸೆ ಚಿತ್ತ ನಿ
ವಾಸದೊಳಾ ಕಪಿಳಮುನಿ ತಪಶ್ರೀ ತನುವಂ ॥
ಬಾಸಣಿಸೆ [1]ತೇದು ಪೊನ್ನಂ
ಪೂಸಿದ ಕರ್ಬೊನ್ನ ಪಾಪೆಯಂತೆವೊಲಿರ್ದಂ ॥ ೧೨ ॥

ಒಪ್ಪಿಸಿ ಮನಮಂ ಮಾನಿನಿ
ಗೊಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ॥
ಸೊಪ್ಪಾಗಿರ್ದೊರ್ಚವಡಿಯ
ಕುಪ್ಪಸಮಂ ಪೋಲ್ತು ಪೊಱಗೆ ನೇರ್ರಿದನಾದಂ ॥ ॥ ೧೩ ॥

ಮುನಿ ನಡೆದಾ ತಪದೊಳ್ ಜೀ
ವನಮಂ ತವೆ ಪೀರ್ದು ದೇವಗತಿ ಸಮನಿಸೆ ಮು ॥
ನ್ನಿನ ಪಗೆಯಂ ಕುಂಡಲನಂ
ನೆನೆವವಧಿಯಿನಳವಿಗಱಿದ ಮುಳಿಸಂ ತಳೆದಂ ॥ ೧೪ ॥

ಆತಂ ನಿಜವಿರೋಧಿಯಪ್ಪ ಕುಂಡಲಮಂಡಿತಂ ಪೆಱತೊಂದು ಪೆಣ್ಣೊಸುವೆರಸು ವಿದೇಹಿಯ ಗರ್ಭದೊಳ್ ಬಳೆವುದಂ ತಿಳಿದು—

1. ತೆಗೆದು. ಕ. ಖ. ಗ. ಘ.

ಕಂ ॥ ಗರ್ಭದ ಪೆಣ್ಗೂಸಿಂಗಂ
ಗರ್ಭಿಣಿಗಂ ಬಾಧೆ ಪಿಂಗೆ ಪೆತ್ತಾಗಡೆ ಗ ॥
ರ್ಭಾರ್ಭಕನನುಯ್ವೆನೆಂಬೀ
ದುರ್ಭಾವನೆಯಿಂ ವಿದೇಹಿಯಂ ಕಾದಿರ್ದಂ ॥ ೧೫ ॥

ಮ ॥ ಹರಿದಿಕ್ಕಾಂತೆಗೆ ಚಾರು ಚಂದ್ರಕಳೆಯುಂ ಚಂಡಾಂಶುವುಂ ಪುಟ್ಟುವಂ ।
ತಿರೆ ಭೂವಲ್ಲಭ ಚಿತ್ತವಲ್ಲಭೆಗೆ ಪುತ್ರೀಪುತ್ರರೊಂದಾಗಿ ರಾ ॥
ಗ ರಸಂ ಕೈಮಿಗೆ ಪುಟ್ಟೆ ಪೂರ್ವಭವ ಬದ್ಧಕ್ರೋಧದಿಂ ಬಾಲನಂ ।
ಸುರ[1]ನುರ್ವಿಂ ಪಿಡಿದುಯ್ದನುಯ್ವತೆಱದಿಂ ಸ್ವರ್ಭಾನು ಬಾಲಾರ್ಕನಂ ॥೧೬॥

ಅಂತು ನೆಗೆದು ಗಗನಮಾರ್ಗದೊಳ್ ಪೋಗುತ್ತುಂ—

ಚ ॥ ಒಗೆವೆನೊ ಬೀಸಿ ಪಾಸಱೆಯೊಳಟ್ಟುವೆನೋ ಕಡಲೊಳ್ ಕರುಳ್ಗಳಂ ।
ತೆಗೆವೆನೊ ಕುತ್ತಿ ಕತ್ತಿಗೆಯೊಳಿಕ್ಕುವೆನೋ ವಿಪಿನಾಗ್ನಿಯೊಳ್ಕರು ॥
ತ್ತುಗಿವೆನೊ ಕೂಡೆ ಮೆಯ್ಪೊವಲನಲ್ಲದೊಡೆನ್ನಟಿಲಾಱದೆಂದು ದಿ ।
ಟ್ಟಿಗಳೊಳೆ ನುಂಗುವಂತೆ ನಡೆನೋಡಿದನಾ ಶಿಶುವಂ ನಿಶಾಚರಂ ॥ ೧೭ ॥

ಅಂತು ನೋಡಲೊಡಮರ್ಭಕನ ಪೂರ್ವಭವದಣುವ್ರತ ಸಾಮರ್ಥ್ಯದೊಳಂ ನಿಜಮಹಾವ್ರತ ಸಂಸ್ಕಾರದೊಳಂ—

ಕಂ ॥ ಫಣಿ ಗರು[2]ಡಾಂಕದ ಪಚ್ಚೆಯ
ಮಣಿಯಂ ಕಂಡಂತೆ ಮಣಿಯೆ ಶಿಶುವದನ ನಿರೀ ॥
ಕ್ಷಣದಿಂದಾಕ್ಷಣದೊಳ್ ದಾ
ರುಣಭಾವಂ ದೇವನುಪಶಮಕ್ಕೆಡೆಯಾದಂ ॥ ೧೮ ॥

ಒಡಲೊಳಗುಡಿದ ಸರಲ್ ಪೊಱ
ಮಡುವುದಯುಸ್ಕಾಂತ ಸನ್ನಿಧಾನದೊಳೆಂತಂ ॥
ತೊಡಲಿಂ ಪೋದುದು ಮುನಿಸಿನ
ಪೊಡರ್ಪು ನಕ್ತಂಚರಂಗೆ ಶಿಶುಸನ್ನಿಧಿಯೊಳ್ ॥ ೧೯ ॥

ಅಂತುಪಶಮ ಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ ತನ್ನ

1. ನೊರ್ವಂ. ಕ. ಖ. ಗ. ಘ. ಚ.
2. ಡಾಂಡದ. ಚ. ; ಡಾಂಗದ. ಕ. ಖ. ಗ. ಘ.

ಕರ್ಣಕುಂಡಲಮಂ ಬಾಲಕನ ಕರ್ಣಯುಗಳಂಗಳೊಳಮರ್ಚಿ ಪರ್ಣಲಘುವಿದ್ಯೆಯಿ
ನೀಡಾಡಿ ಪೋಪುದುಂ—

ಚ॥ ತನುರುಚಿ ಕರ್ಣಕುಂಡಲಮರೀಚಿ ವಿಯತ್ತಳಮೆಲ್ಲಮಾ ಪಳ।
ಚ್ಚನೆ ಬೆಳಪಂತು ಪರ್ಣಲಘುವಿದ್ಯೆಯೊಳೊಯ್ಯನೆ ಬಂದು ಖೇಚರೇಂ॥
ದ್ರನ ಮೃದುತಲ್ಪದೊಳ್ ಸುರ ಕುಮಾರಕನಂದುಪಪಾತ ತಲ್ಪದೊಳ್।
ಜನಿಯಿಸಿದಂತೆ ಕಣ್ಗೆ ಪಡೆದಂ ಶಿಶು ನಿರ್ಭರ ಹರ್ಷ ಭಾರಮಂ ॥ ೨೦ ॥

ಅಂತಾ ಶಿಶುವಂ ದಕ್ಷಿಣಶ್ರೇಣಿಯ ರಥನೂಪುರಚಕ್ರವಾಳಪುರಮನಾಳ್ವಿಂದುಗತಿ
ವಿಯಚ್ಚರೇಂದ್ರನಂದಿನ ಸ್ಸೂಟಿಗ್ವಿವಂದ ಪುಷ್ಪವತಿ ಪೆಸರ ಮಹಾದೇವಿ ಫಲವತಿಯಾದ
ಳೆನಿಸಿ ಕೊಟ್ಟು ಕುಂಡಲ ಪ್ರಭಾ ಮಂಡಲ ವಿಳಾಸಮಂ ತಳೆದನಪ್ಪುದಱಿಂ ಪ್ರಭಾ
ಮಂಡಲನೆಂದು ಪೆಸರನಿಟ್ಟನನ್ನೆಗಮಿತ್ತಲ್—

ಉ॥ ಈಗಳೆ ಪುಟ್ಟಿದೆನ್ನ ಶಿಶುವಂ ಕರುಣಂ ತನಗಿಲ್ಲದೆತ್ತಿಕೊಂ।
ಡಾಗಸದತ್ತಲಂತಕನ ದೂತನವೋಲ್ ಪಿಡಿದುಯ್ದನೊರ್ವನಿ॥
ನ್ನೇಗಳ ಗೆಯ್ವೆನೆಂದಟಿ ವಿದೇಹಿ ನವೋತ್ಪಲಮಾಲೆ ಕಾಱುವಂ।
ತಾಗೆ ಕದುಷ್ಣ ವಾರಿಗಳನುಣ್ಮಿದುವಾಕೆಗೆ ಬಾಷ್ಪವಾರಿಗಳ್ ॥ ೨೧ ॥

ಕಂ॥ ಬಡವಂ ಚಿಂತಾಮಣಿಯಂ
ಪಡೆವಂತೆಂತಾನುಮೊರ್ವನಂ ತನಯನನಾಂ॥
ಪಡೆದಾಗಳೆ ಮತ್ತೊರ್ವಂ
ಪಿಡಿದುಯ್ದಂ ದನುಜನೆಂದು ಶೋಕಂಗೆಯ್ವಳ್ ॥ ೨೨ ॥

ರಕ್ಷಾವಿಧಾನಮಂ ತನು
ರಕ್ಷಕರಂ ಬಗೆಯದೆನ್ನ ತನಯನನುಯ್ವಂ॥
ರಾಕ್ಷಸನೆಂದಟ್ಟಿಳ್ ಧವ
ಳೇಕ್ಷಣೆ ದಳದಳಿಸಿ ಸುರಿಯೆ ಬಾಷ್ಪಜಲಂಗಳ್ ॥ ೨೩ ॥

ಕುಳವೃದ್ಧೆಯರುಂ ಧಾತ್ರೀ
ಕುಳಮುಂ ಶುದ್ಧಾಂತ ಕಾಂತೆಯರ್ಕಳುಮುಟಲಿಂ॥
ದಟಿ ಕಂಡು ಜನಕನತಿ ವಿ
ಹ್ವಳ ಚಿತ್ತಂ ಶೋಕರಸಮನೊಳಕೊಂಡಿರ್ದಂ ॥ ೨೪ ॥

ಆಗಳ್ ಮೌಹೂರ್ತಿಕರೀ ಶುಭಮುಹೂರ್ತದೊಳ್ ಪುಟ್ಟಿದ ಬಾಲಕಂಗ ವೋ
ಘಮಪಾಯಮಾಗದೀಕೆಯುಮಗಣ್ಯ ಪುಣ್ಯವತಿಯಕ್ಕುಮೆಂದು ಶೋಕಮನದಿರ್ಪೆ

ವಿದೇಹಿ ಸಂತೋಷಂಬಟ್ಟು ನಿಜ ತನೂಜೆಯ ಮುಖ ಸರೋಜಮಂ ನೋಟ್ಪುದುಂ–

ಕಂ॥ ಆ ಸತಿಗೆ ಪುಟ್ಟಿ ಹರ್ಷ ವಿ
ಕಾಸಂ ಮಧುಬಿಂದುಮಾಲೆ ನೀಲೋತ್ಪಲದಿಂ॥
ಸೂಸುವವೋಲ್ ನಗೆಗಣ್ಣಿಂ
ಸೂಸಿದುವಾನಂದಬಾಷ್ಪಬಿಂದುವಿತಾನಂ ॥ ೨೫ ॥

ತದನಂತರಂ—

ಕಂ॥ ಆ ರಾಜಭವನದೊಳ್‌ಮಣಿ
ತೋರಣಮೊಡರಿಸಿದುವೀಕ್ಷಣಾಕರ್ಷಣಮಂ॥
ಭಾರತಿಕನಾಗೆ ಮುಂದ ಸ
ವಿಾರಂ ಕೈಸಜಿಾದುವುತ್ಸವ ಧ್ವಜ ತತಿಗಳ್ ॥ ೨೬ ॥

ಕೆದಜಿಾದ ಪಿಷ್ಟಾತಕದಿಂ
ದೊದವಿದ ಪಟವಾಸ ಚೂರ್ಣದಿಂದೆಳವಡೆ ಕ॥
ಟ್ಟಿದ ರನ್ನದ ಮೇಲ್ಕಟ್ಟಿಂ
ಪದೆಪಂ ಪುಟ್ಟಿಸಿದುದಿಟ್ಟಳಂ ನೃಪಸದನಂ ॥ ೨೭ ॥

ಬದ್ದವಣಂ ಬಾಜಿಸೆ ದೆಸೆ
ಬಿದ್ದಂ ಕುಣಿದಾಡೆ ಗಣಿಕೆಯರ್ ಪೂವಲಿಯೊಳ್॥
ಮುದ್ದಾಡೆ ತುಂಬಿಗಳ್‌ಮುಗಿ
ಲುದ್ದಂ ಪರಿದತ್ತು ಹರ್ಷರಸಮಾ ಪುರದೊಳ್ ॥ ೨೮ ॥

ಚ॥ ಪಡೆಮುದು ಗಾಯನೀಮಧುರ ಮಂಗಳ ಗೇಯಮುಪಾಯನಂಗಳಂ।
ಕುಡಲೆಡೆಯಾಡುತಿರ್ಪ ಗಣಿಕಾ ಮಣಿನೂಪುರ ಕಿಂಕಿಣೀರವಂ।
ಕುಡಿದುಪಹಾರ ಪುಷ್ಪರಸಮಂ ಮೊರೆದೇಟ್ಪಳಿನೀ ರವಂ ಮುಗ।
ಳ್ಪಡೆಯೆ ವಿದೇಹಿ ಪೌರಜನ ಕರ್ಣರಸಾಯನದೊಂದು ತಂದಲಂ ॥ ೨೯ ॥

ಅಂತು ಜಾತಕರ್ಮೋತ್ಸವಮಂ ಮಾಡಿ ದಶಮದಿನದೊಳ್ ಸರ್ವಲಕ್ಷಣ ಸಸ್ಯಸಂಪತ್ತಿಗೆ ಸೀತೆಯಪ್ಪುದಜಿಂ ಸೀತೆಯೆಂದು ಪೆಸರನಿಟ್ಟು ಕೊಂಡಾಡಿ ನಡ ಪುತ್ತುಮಿರೆ ಮದನಮೋಹನ ದೀಪಕಳಿಕೆಯಂತೆಯುಂ, ಕಾಮ ಕಲ್ಪಲತೆಯಂತೆ ಯುಂ, ನಿರಂತರೋಪಚಯಮನಪ್ಪುಕೆಯ್ದು ಭರತಶಾಸ್ತ್ರಾದಿ ಸಕಲ ಕಲೆಯೊಳತಿ ಪರಿಣತಿವಡೆದು–

ಕಂ॥ ಶಶಿಲೇಖೆಯೆನಲ್ ಕರ್ಪೂ
ರ ಶಲಾಕೆಯೆನಲ್ ವಿಲೋಚನೋತ್ಸವಮಂ ಮಾ॥
ಡಿ ಶಿಲೀಮುಖಕುಂತಳೆ ಮದ
ನ ಶಿಲೀಮುಖದಂತೆ ಭುವನಮಂ ಸೋಲಿಸಿದಳ್ ॥ ೩೦ ॥

ಮನಸಿಜನಾಜ್ಞಾರೂಪಮಿ
ದೆನೆ ಕರ್ವಿನಬಿಲ್ಲನೊಲ್ಲದುರ್ಚುವ ಸರ್ವ್ವೊ॥
ಹನ ಶರಮೆನೆ ಬಾಜಿಸಿದುದು
ಜನಕಜೆಯ ಬೆಡಂಗು ಮದನ ಜಯ ಡಿಂಡಿಮಮಂ ॥ ೩೧ ॥

ಉ॥ ಲೀಳೆಯನಪ್ಪುಕೆಯ್ದು ನಯನೋತ್ಸವಮಂ ದಯೆಗೆಯ್ವ ಗಾಡಿಯಿಂ।
ದೇಳಿಸಿ ಕಾಮ ಕಲ್ಪಲತೆಯಂ ಪರಿಪೂರ್ಣ ಕಳಾವಿಳಾಸದಿಂ॥
ದೇಳಿಸಿ ಚಾರು ಚಂದ್ರಕಲೆಯಂ ನೆಲೆವೆರ್ಚಿಸಿದಳ್ ಮರಾಳ ಲೀ।
ಲಾಳಸಯಾನೆ ಜಾನಕಿ ವಿದೇಹಿಗೆ ಮೋಹರಸ ಪ್ರವಾಹಮಂ ॥ ೩೨ ॥

ಕಂ॥ ಜನಕಂಗೆ ಹರ್ಷದೊದವಂ
ಜನಿಯಿಸಿ ಜಾನಕಿಯ ರೂಪವಿಭವಂ ಮಾಡಿ॥
ತ್ತನುರೂಪಂ ನೃಪಸುತನಾ
ವನೊ ವರನೀ ವನಿತೆಗೆಂಬ ಮನದುಮ್ಮಳಮಂ ॥ ೩೩ ॥

ಚಂ॥ ಜನಕಜೆ ಮೀಱಿ ಶೈಶವಮನೇಂ ತಲೆದೋಱಿದುದೋ ನವೀನ ಯೌ।
ವನ ವಿಭವಂ ಮುಗುಳ್ನಗೆಯನೊಂದೆರಡಂ ನಿಜ ಪಲ್ಲವಾಧರಂ॥
ನನೆಯ ಸರಲ್ಗಳೊಂದೆರಡುಮಂ ಕಡೆಗಣ್ ಕುಡುವುರ್ವು ಕಾಮದೇ।
ವನ ಕುಡುವಿಲ್ಲನೊಂದೆರಡುಮಂ ಪಡೆದೊಪ್ಪಮನಪ್ಪುಕೆಯ್ವಿನಂ ॥ ೩೪ ॥

ಅಂತು ಜಾನಕಿ ಜನನೀಜನಕರ ಮನಕ್ಕೆ ಸಂತೋಷಮನೊದವಿಸುತಿರ್ಪಿನ ಮೊಂದುದಿವಸಂ—

ಮ॥ಸ್ರ॥ ಚರನೊರ್ವಂ ಬಂದು ಬೇಗಂ ಜನಕನ ಸಭೆಯಂ ಪೊಕ್ಕು ಮೆಯ್ಯಿಕ್ಕಿ ಭೀತಾ।
ತುರ ಚಿತ್ತಂ ಚೀನ ಚೇಲಾಂಚಲಮನಧರದತ್ತುಯ್ದು ಚಿತ್ತೈಸಿದೊಂದಂ॥ ೬
ಹರಿವಂಶೋತ್ತಂಸ ಲೋಕಾದ್ಭುತಮನಸಮಯೋತ್ಪಾತಮಂ ಲೋಕಲುಂಟಾ।
ಕರಸಂಖ್ಯಾತರ್ ಕಿರಾತರ್ ನೆರೆದು ನಿಖಿಲ ಭೂಚಕ್ರಮಂ ಸೂಱಿಗೊಂಡರ್॥

ಕಂ॥ ಇಱಿದು ತವಿಸುವೊಡೆ ಪಡೆ ನಾ
ಡೆಱೆಯರ ಕೈಯಳವಿಯಲ್ತು ಕಂಡಂತುಟನೆ॥

ನ್ನಱಿವಂತುಟನುಳ್ಳಂತುಟ
ನಱಿಪುವೆನವಧರಿಪುದೆಂದು ಚರನಿಂತೆಂದಂ ॥ ೩೬ ॥

ಕಂ॥ [1]ಧನದಾಚಲಕ್ಕೆ ಬಡಗಣ
ದೆನೆ ವಿಜಯಾರ್ಧಾಚಲಕ್ಕೆ ತೆಂಕಣದೆನೆ ದು॥
ಷ್ಟ ನಿವಾಸಮರ್ಧ[2]ಪರಮೆಂ
ಬ ನಾಮದಿಂ ಮ್ಲೇಚ್ಛದೇಶಮಿರ್ಪುದಪಾರಂ ॥ ೩೭ ॥

ಅಲ್ಲಿ ಮಯೂರಮಾಲೆಯೆಂಬ ಶಬರ ಶಿಬಿರಮನಾಳ್ವ ತರಂಗತಮನೆಂಬ ಶಬರ ನಾಯಕಂ ತನ್ನಾಳ್ವನಾಡ ಬೇಡವಡೆಯೆಲ್ಲಮಂ ಕೂಡಿಕೊಂಡು ಕಪೋತ ಕಾಂಭೋಜ ಕಣಾದಿ ದೇಶಂಗಳಂ ಕಿಡಿಸುತ್ತುಂ ಬಂದು—

ಉ॥ ನಾಡರಸಂ ತಗುಳ್ದು ತಡೆಗಾಲದ ಮಾರಿಯ ಮೂರಿಯಂತೆ ಕ।
[3]ಣ್ಗೋಡದೆ ಬಾಲ ವೃದ್ಧ ವನಿತಾ ವಧೆಗೆಯ್ದು ಕವರ್ತೆಗೊಂಡು ಸು॥
ಟ್ಟೋಡಿಸಿ ಜಾತಿಯಂ ಕಿಡಿಸಿ ನಾಡನವಂ ಕಡಿದಿಕ್ಕಿ ಮೆಚ್ಚಿದಂ।
ಬೇಡರಸಂ ತರಂಗತಮನಾನಿರೆ ಬೇಡರಸೆಂಬ ಗರ್ವದಿಂ ॥ ೩೮ ॥

ಎಂದು ಬಿನ್ನವಿಸೆ—

ಕಂ॥ ಚರ ವಚನಮನಾಲಿಸಿ ತುಂ
ಬುರಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದಾ॥
ಹರಿವಂಶಕೇತು ಕಣ್ಕಿಸು
ಸೆರೆವರಿಯೆ ಕೃತಾಂತನಂತೆ ಮುಳಿದಿಂತೆಂದಂ ॥ ೩೯ ॥

ಉ॥ ಒಂದೆ ಕುಠಾರದಿಂದಡವಿಯಂ ಕಡಿವಂತಿರೆ ಪೋದುಗಾಜನೆ।
ನ್ನೊಂದೆ ಭುಜಾಸಿಯಿಂ ಶಬರಕೋಟಿಯ್ನನಿಕ್ಕಿ ಪಿಶಾಚ ಕೋಟಿಗಾ॥
ನಂದಮನುಂಟುಮಾಳ್ಪೆನುಱದಾನಿದನೇಳಿಸಿದೆಂದು ದುರ್ಯಶೋ।
ದುಂದುಭಿ ನಾದಮಾವರಿಸದಿರ್ಕುಮೆ ಕೂಡೆ ಜಗಂಗಳೆಲ್ಲಮಂ ॥ ೪೦ ॥

ಕಂ॥ ಇಱಿಯದೆ ಬೇಡಿದೊಡೀಯದೆ
ಬಱಿದೆ ಕುಲೀನತೆಗೆ ಬೆಸೆದು ಪಾರ್ಥಿವ ಶಬ್ದ॥
ಕ್ಕೆಱೆವಟ್ಟೆನಿಸಿ ಧರಿತ್ರಿಗೆ
ಪೊಱೆಯೆನಿಪಂ ರಾಜ ನಾಮಧಾರಕನಲ್ತೇ ॥ ೪೧ ॥

---

1. ಕನಕಾ. ಚ. ; 2. ಪುರ. ಗ. 3. ; ಣ್ಣಾಡದೆ. ಚ.

ಎಂದು ಪರಿಚ್ಛೇದಿಸಿ ನುಡಿಯೆ—

ಕಂ॥ ನಿನಗೆ ಸಹಾಯಂ ದಶರಥ
ಜನನಾಥಂ ತತ್ಸಹಾಯದಿಂ ಲುಬ್ಧಕ ವಾ ॥
ಹಿನಿಯಂ ಮರ್ದಿಸು ಧುರದೊಳ್
ನಿನಗಂ ತನಗಂ ಜವಂಗಮಿದಿರಾಂಪವರಾರ್ ॥೪೨ ॥

ಎಂದು ಮಂತ್ರಿಮಂಡಲಂ ಬಿನ್ನವಿಸೆ ಜನಕಂ ದಶರಥನಲ್ಲಿಗೆ ಲೇಖವಾಹಕರ ನಟ್ಟಿ ಸಮರಸನ್ನದ್ಧನಾಗಿ ಬೇಗವೊಂದೆರಡು ಪಯಣಮಂ ನಡೆದನಿತ್ತಲ್—

ಕಂ॥ ಬಾರಿಸಿ ಲೇಖಾರ್ಥಮನವ
ಧಾರಿಸಿ ದಶರಥಮಹೀಭುಜಂ ಪೊಯಿಸುವುದುಂ ॥
ಭೇರಿಯ ಬಂಭಾರವಮುದು
ಭೈರವ ರವದಂತೆ ತೀವೆ ಗಗನೋದರಮಂ ॥ ೪೩ ॥

ಆ ವೃತ್ತಾಂತಮಂ ತಿಳಿದು—

ಚಂ॥ ಪುದಿಯೆ ವಿಭೂಷಣಾಂಶು ನಭಮಂ ತನುದೀಧಿತಿ ಬೇಱದೊಂದು ಜೊ ।
ನ್ನದ ಸಿರಿ ಕಾರ ಕಾರಿರುಳ ಮೆಯ್ಸಿರಿ ತಪ್ಪದೆನಲ್ ದಿಗಂತಮಂ ॥
ಪುದಿಯೆ ಬಲಾಚ್ಯುತರ್ ತರುಣಕೇಸರಿವೋಲ್ ಪುಗುತಂದರಿರ್ವರುಂ ।
ಕದನ ಮದೋದ್ಧತರ್ ದಶರಥಕ್ಷಿತಿನಾಥ ಸಭಾಂತರಾಲಮಂ ॥ ೪೪ ॥

ಅಂತು ಬಂದು ತಂದೆಯ ಪಾದಾರವಿಂದಕ್ಕೆಱಗಿ—

ಕಂ॥ ಬಲದೆಡಗೆಲದಾಸನದೊಳ್
ಬಲಾಚ್ಯುತರ್ ನೆಲಸಿ ಮೇರುನಗದುಪನಗಮಂ ॥
ಗೆಲೆವಂದರ್ಪಸರಿಸೆ ನಿ
ಸ್ತುಲ ಮುಕ್ತಾಭರಣ ಕಿರಣ ನಿರ್ಝರ ನೀರಂ ॥ ೪೫ ॥

ಅನಂತರಂ—

ಕಂ॥ ಗೆಲೆ ನಿಟಿಲಮರ್ಧಚಂದ್ರನ
ವಿಲಾಸಮಂ ನೊಸಲೊಳಿಸೆಯೆ ಕರ ಸರಸಿಜ ಕು ॥
ಟ್ಮಲಮಮೃತಕಳೆಗೆ ದಂತಾಂ
ಶು ಲೇಖೆ ಮಾರ್ಪೊಳೆಯೆ ರಾಮಚಂದ್ರಂ ನುಡಿದಂ ॥ ೪೬ ॥

ಕಂ॥ ದೇವರ್ ದಿಗ್ವಿಜಯ ವ್ಯಸ
ನಾವಷ್ಟಂಭದೊಳೆ ನಡೆಯದಾಟವಿಕರೊಳಾ ॥
ದೀವಿಗ್ರಹಕ್ಕೆ ನಡೆವುದಿ
ದಾವುದೊ ಜಸಮಿಱುಪೆಗಾನೆ ಮೊಗಮಿಕ್ಕುವುದೇ ॥ ೪೭ ॥

ಅದಱಿಂ ದೇವರೀ ಬೆಸನನೆಮಗೆ ದಯೆಗೆಯ್ವುದಿವರನಾಸ್ವಾದಿತ ರಣ ರಸರ್ ಕಿಱಿಯರೆಂದು ಬಗೆಯವೇಡದೆಂತೆನೆ—

ಚ ॥ ಕಿಡಿ ಕಿಱಿದಾದೊಡಂ ಸುಡದೆ ಕಾನನಮಂ ತರುಣಾರ್ಕನಾದೊಡಂ।
ಕಿಡಿಸನೆ ತೀವ್ರಮಪ್ಪ ತಮಮಂ ಹರಿ ಬಾಲಕನಾದೊಡಂ ಪಡ ॥
ಲ್ಪಡಿಸನೆ ಗಂಧಸಿಂಧುರ ಘಟಾವಳಿಯಂ ಕಿಱುಗೂಸೆನಲ್ಕೆವೇ ।
ಡೆಡೆಱಿದರಂ ಜವಂಗೆ ಪೊಸತಿಕ್ಕನೆ ವಿಕ್ರಮಶಾಲಿ ಲಕ್ಷ್ಮಣಂ ॥ ೪೮ ॥

ಕಂ॥ ಮಾತೇನೊ ಕಿಂಕಿರಾತಂ
ಪೂತಂತೆ ಕಿರಾತಸೇನೆ ಪುಣ್ಬಡೆ ಶರ ಸಂ ॥
ಘಾತದ ಸವಿದೋರ್ಕುಂ ರಘು
ಜಾತಂಗೆಂಟನೆಯ ಕೇಶವಂಗಿದಿರುಂಟೇ ॥ ೪೯ ॥

ಸ್ರ ॥ ಅಂಬೇಱಿಂ[1]ಗಾಂತರಂ ತತ್ತ್ರಱದಱಿದು ಭುಜಾಗರ್ವಮಂ ಬಿಟ್ಟು ಬಾಯ್ವಿ।
ಟ್ಟಂ ಬೇಯೆಂಬನ್ನೆಗಂ ಬೆಂದಗುಳ್ವ ಮೆಱೆದು ಬಿಲ್ಬಲ್ಮೆಯಂ ನಾಡನಿನ್ನೆಂ॥
ದುಂ ಬೇಡರ್ಪೊರ್ದದಂತಾಗಿರೆ ನಿಯಮಿಸಿ ಬಂದಪ್ಪೆನಾನೆಂದು ಶೌರ್ಯಾ।
ಲಂಬಂ ರಾಮಂ ರಣಕ್ಕುಬ್ಬಿಗನೆನೆ ಬೆಸನಂ ತಂದೆಯಂ ಬೇಡಿಕೊಂಡಂ॥ ೫೦ ॥

ಅಂತು ಬೆಸನಂ ಬೇಡಿಕೊಂಡು ತಂದೆಯಂ ಬೀಟ್ಕೊಂಡು—

ಕಂ॥ ಅಪರಿಮಿತಮೆನಿಪ ಚತುರಂ
ಗ ಪತಾಕಿನಿ ತಮಗೆ ಕದನಕೇಳಿಗೆ ನೆರಮ ॥
ಲ್ತುಪಕರಣಮೆನಿಪ ಕೋದಂ
ಡಪಾಣಿಗಳ್ ದಂಡಪಾಣಿಗೆಣೆಯೆನೆ ತಳರ್ದರ್ ॥ ೫೧ ॥

ಗೆಲಲಱಿದಿವರಿಂ[?]ರ ದೋ
ರ್ಬಲಮಂ ತ್ರಿಭುವನದೊಳಿವರ್ಗೆ ನೆರಮಲ್ತು ಚತು ॥
ರ್ಬಲಮಿನಿತುಂ ನುಡಿ ನೆರವೆನೆ
ಬಲಾಚ್ಯುತರ್ ನಿಚ್ಚವಯಣದಿಂದೆಯ್ತಂದರ್ ॥ ೫೨ ॥

1. ದಾಂತರಂ. ಘ.

ಅಂತೆಯ್ದಿವರ್ಪುದುಮವರನುಚಿತ ಪ್ರತಿಪತ್ತಿಯಿಂ ಮನ್ನಿಸಿ—

ಪೃ॥ ನೆಲಂ ಬೆಸಲೆಯಾದವೋಲ್ ನೆರೆದ ಲುಬ್ಧಕವ್ಯೂಹಮಂ।
ಗೆಲಲ್ ನೆಱೆದೆನೀಗಳೆಂಬ ಬಲಗರ್ವಮಂ ತಾಳ್ದಿದಂ॥
ಬಲಾಚ್ಯುತರ ಕೂಟದಿಂ ಜನಕನುಗ್ರ ವನ್ಯದ್ವಿಪಂ।
ಬಲಂಬಡೆದುದೆಂಬಿನಂ ವಿಕಟ ದಂತಕೂಟಂಗಳಿಂ ॥ ೫೩ ॥

ಅನಂತರಮುದಾತ್ತರಾಘವನಮೋಘ ಶರಾಸನಾದಿ ವಿವಿಧಾಯುಧ ಸನಾಥನಾಗಿ ರಥಮನೇಱೆ ಲಕ್ಷ್ಮಣಂ ಕಾಲ್ಗಾಪಿನೊಳ್ ನೆರೆದುಬರೆ ಜನಕ ಕನಕರಿರ್ವರ್ ವಿಜಯ ಗಜಮನೇಱೆ ಮುಂ[1]ಗೋಲೊಳ್ ನಡೆಯೆ ನಾಡ ಗಡಿಯನೆಯ್ದಿ ಬರ್ಪ ಸಮಯದೊಳ್—

ಮ॥ ಬಲಭಾರಕ್ಕೆ ಬಿಗುರ್ತು ಸುಯ್ಯೆ ಫಣಿರಾಜಂ ಸುಯ್ದುಸುಯ್ಲಿಂ ಧರಾ।
ವಲಯಂ ಕಿಟ್ಟು ನಭಕ್ಕೆ ಪಾಱೆದಪುದೋ ಪೇೞೆಂಬಿನಂ ಭಾನುಮಂ॥
ಡಲಮಂ ಮುಂಡಳಿಸಿತ್ತು ತದ್ಬಲ ಪದ ಪ್ರೋದ್ಧೂತ ಧೂಳೀಚ್ಛಟಾ।
ವಲಿ ಕಲ್ಪಾಂತ ಕೃಶಾನುಧೂಮ ಪಟಲೀ ಶಂಕಾ ಸಮುತ್ಪಾದಕಂ ॥ ೫೪ ॥

ಅನಂತರಂ ನೆಲಂ ಬೆಸಲೆಯಾದಂತೆ ಬರ್ಪ ಬೇಡವಡೆ ರಸೆಯಿನೊಗೆವಸುರಗ ಪಡೆಯಂತೆಯುಂ, ವ್ಯೋಮತಳದಿನಿೞಿವ ಧೂಮಕೇತುಗಳಂತೆಯುಂ, ಕಡೆಗಾಲದೊಳೆಡೆವೊತ್ತಿ ಸುತ್ತಲುಂ ನೆಗೆವನಲನ ಪೊಗೆಯಂತೆಯುಂ, ನಡೆವ ನಂಜಿನ ಬಿಂಜದಂತೆಯುಂ, ಕರ್ಬುಲಿಯ ಪಿಂಡಿನಂತೆಯುಂ, ಸಿಂಗದ ಜಂಗುಳಿಯಂತೆಯುಂ, ಜವನೆರ್ಮೆಪೋರಿವಿಂಡಿನಂತೆಯುಂ, ಬರಸಿಡಿಲ ಬಳಗದಂತೆಯುಂ, ಕಾಲಾಯಸ ಕಾಳಪುರುಷ ಪರಿಷಜ್ಜನದಂತೆಯುಂ, ಕಾಳರಕ್ಕಸನ ಸಂತಾನದಂತೆಯುಂ, ಕುಲನಗಮಹತ್ತರ ಕುಲದಂತೆಯುಂ, ಅರ್ಧಪ್ರಹಾರವರ್ಧನದಂತೆಯುಂ, ಯಮ [2]ಘಂಟಾಸಂಘಾತದಂತೆಯುಂ, ಮಾರಿಯ ಮೂರಿಯಂತೆಯುಂ, ಕ್ರೂರಗ್ರಹ ಪರಿಗ್ರಹದಂತೆಯುಂ, ಅಗುರ್ವುಮದ್ಭುತಮುಮಾದುದಲ್ಲಿಂಬೞಿಯಂ—

ಚ ॥ ಕರಿಗಳೆಱಂಕೆವೆಟ್ಟುಗಳವೋಲ್ ನಡೆತಂದುವು ವಾಜಿರಾಜಿಗಳ್।
ತೆರೆಗಳ ತೆರ್ಕೆಯಂತೆ ಕವಿತಂದುವು ಲುಬ್ಧಕ ಸೈನಿಕಾಬ್ಧಿಯೊಳ್॥
ಕರಿ ಮಕರಂಗಳಂತೆ ರಥಕೋಟಿಗಳಾಸುರಮಾಗೆ ಬಂದುವಾ।
ವರಿಸಿದುವಾವಗಂ ಗಗನಮಂ ವೃಕ ಕಾಕ ಸೃಗಾಲ ಕೇತುಗಳ್ ॥ ೫೫ ॥

---

1. ಗೋಲೊಳ್. ಕ. ಖ. ಗ. ಘ. ಚ; 2. ಘಂಟ. ಚ.

ಕಂ॥ ಝಂಜೆಯ ದನಿ ದಿಕ್ಪಾಲರ
ನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿ ॥
ಕ್ಕುಂಜರಮಂ ಬೆದರಿಸೆ ನಭ
ಮಂ ಜೇವೊಡೆಯುಲಿಪು ಸುತ್ತಿ ಮುತ್ತಿತ್ತಾಗಳ್ ॥ ೫೬ ॥

ಪಲದಿವಸಕ್ಕೆಂತಾನುಂ
ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ॥
ಗೊಲೆಗೊತ್ತಿ ತೀವಿ ತೆಗೆದೇಂ
ನಲಿವರಿದರೊ ಜವನ ದೂತರೆನಿಸಿ ಕಿರಾತರ್ ॥ ೫೭ ॥

ಕರಿಘಂಟಾನಾದಂ ಹಯ
ಖುರಪುಟ ನಿನದಂ ವರೂಥ ಚೀತ್ಕಾರಂ ಕಿಂ ॥
ಕರ ಚಾಪ ಟಂಕೃತಂ ಭೋ
ರ್ಗರೆವಿನಮಾರ್ದೆತ್ತಿದತ್ತು ವನಚರ ಸೈನ್ಯಂ ॥ ೫೮ ॥

ಮುತ್ತಿತ್ತ ರಾಮಚಂದ್ರನ ಬಲವೆ ಚಂದ್ರಬಲವಾಗೆ—

ಕಂ ॥ ಆನೆ ಹಯಂ ತೇರಾಳೆಂ
ಬೀನಾಲ್ಕುಂ ಸೇನೆ ಬೇಡವಡೆಯೊಡೆಯನ ಪೇ ॥
ರಾನೆ ಹಯಂ ತೇರಾಳೆಂ
ಬೀನಾಲ್ಕುಂಸೇನೆಯೊಡನೆ ತಾಗಿದುವಾಗಳ್ ॥ ೫೯ ॥

ಉ ॥ ಪಂದಲೆ ಪಾಱೆ ಪುಟ್ಟೆ ಬಿಸುನೆತ್ತರ ಸುಟ್ಟುರೆ ಬಾಣಜಾಲದಿಂ ।
ಪಂದರವಿಕ್ಕಿದಂತಿರೆ ನಭಂ ಮದದಾನೆಯ ದಂತ ಶಲ್ಕವೆಂ ॥
ಟುಂದೆಸೆಗುಳ್ಕದಂತೆಸೆಯೆ ಕೂರಸಿ ಕೂರಸಿಯೊಳ್ಪಳಂಚೆ ಭೋ ।
ರೆಂದೊಡನುಣ್ಮೆ ತೋರಗಿಡಿ ತಾಗಿದುವಂದೆರಡುಂ ಚತುರ್ಬಲಂ ॥ ೬೦ ॥

ಅಂತು ಕಾದುವಾಗಳ್—

ಚ ॥ ಇನಿತು ಸಿಡಿಲ್ಗೆ ಕಾಯ್ಪಿನಿತು ನಂಜಿನ ಗಾಳಿಗೆ ವೇಗವಿಲ್ಲೆನಲ್ ।
ಕನಕನನಾಜಿಯೊಳ್ ಪಿಡಿದು ಕಟ್ಟಿದನಳ್ಕುಱೆ ಸುತ್ತಿ ಮುತ್ತಿದಂ ॥
ಜನಕನನೆಚ್ಚನಚ್ಚುಡಿಯೆ ಲಕ್ಷ್ಮಣನೇಱಿದ ತೇರನಾವನಾಂ ।
ಪನೊ ಯಮುನಂತರಂಗ ಸುಭಟೋತ್ತಮನಂ ಮಹಾಜಿಯೊಳ್ ॥ ॥ ೬೧ ॥

ಶಾ ॥ ತೇರಚ್ಚಂ ಮುಱಿಯೆಚ್ಚು ಬಿಲ್ಲನುಡಿಯೆಚ್ಚಶ್ವಂಗಳಂ ಸೂತನಂ ।
ಕೂರಂಬಿಂ ಕೆಡೆಯೆಚ್ಚು ತಾಂ ಗಡೆನಗಂ ಮಾಱಾಂಪ ಗಂಡಂ ಗಡೆಂ ॥

ದಾರುತ್ತುಂ ಗೆಲೆ ಕಾದೆ ಲಕ್ಷ್ಮಣನೊಳಂ ಕಂಡಂತದಂ ಲೋಕ ಸಂ।
ಹಾರಂಮಾಳ್ಪ ಕೃತಾಂತನಂತೆ ರಘುಜಂ ಕೊಂಡಂ ಧನುರ್ದಂಡಮಂ॥ ೬೨॥

ಚ ॥ ಒದವಿದ ಚಾಪಟಂಕೃತಿ ಭಯಂಕರಮಾಗೆ ವರೂಥಭಾರದಿಂ।
ದದಿರೆ ನೆಲಂ ಮನಃಪವನವೇಗದಿನೆಯ್ದಿ ಬಲಂ ಮಹಾಬಲಂ॥
ಕದನಮದಾವಿಲಂ ಕಱಿಯೆ ಬಲ್ಸರಿಯೆಂಬಿನಮಂಬನಂಬು ನ।
ಟ್ಟದೆ ನೆಱನಾಗೆ ಕೂಡೆ ಗತಜೀವಿತಮಾಯ್ತು ಕಿರಾತ[1]ಸಾಧನಂ ॥ ೬೩ ॥

ಆಗಳ್—

ಕಂ॥ ಗೆಲ್ವಾರೆ ಜನಕಸೇನೆ, ಸ
ಡಿಲ್ದಗಿಯೆ ಕಿರಾತಸೇನೆ, ದಶರಥರಾಮಂ॥
ಬಿಲ್ದೆಗೆದಿಸೆ, ಮಾರ್ಪಡೆಯೊಳ್
ಬಲ್ದಲೆಯರ್ ಶಬರನಾಯಕರ್ ಪಡಲಿಟ್ಟರ್ ॥ ೬೪ ॥

ಆ ಸಮಯದೊಳ್ ಲಕ್ಷ್ಮಣಂ ಲಯಸಮಯ ಸಮುತ್ಪಾದನ ಸಮಗ್ರ ವೀರ ಗ್ರಹಾವೇಶಮನಪ್ಪುಕೆಯ್ದು—

ಕಂ॥ ಪಾರದೆ ಕೈದುವ ಬಲಮುಂ
ಪಾರದೆ ನೆರವಲಮನೊಂದೆ ತೋಳ್ವಲದಿಂ ಸಂ॥
ಹಾರಿಸಿದಂ ಮಾರ್ಬಲಮುಂ
ವಾರಿಜನಾಭಂಗೆ ಸಂಗರಕ್ಕಿದಿರುಂಟೇ ॥ ೬೫ ॥

ಅಂತು ರಾಮಲಕ್ಷ್ಮಣರ್ ಕಡಂಗಿ ಕಾದುವಾಗಳವರ ಬಲಕ್ಕೆ ಸುಗಿದು ಮೆಯ್ದೆಗೆವ ಬೇಡವಡೆಯುಂ ಕೂಡಿಕೊಂಡು—

ಚ ॥ ಅದಿರದಿದಿರ್ಚಿ ತಾಗಿದ ತರಂಗತಮುಂ ದಿನನಾಯಕಂಗಿದಿ।
ರ್ಚಿದ ತಮದಂತೆ ಮೆಯ್ದೆಗೆಯೆ ಮಾರ್ಬಲದಾನೆಗೆ ಕೂಟಪಾಕಳಂ॥
ಕುದುರೆಗೆ [2]ಕರ್ಣದೂಷಿಕೆ ರಥಕ್ಕೆ ಸಿಡಿಲ್ ಭಟಮಂಡಲಕ್ಕೆ ಕೆಂ।
ಡದ ಮಟಿಯೆಂಬಿನಂ ಕಱಿದನಂಬಿನ ಪೆರ್ಮೞೆಯಂ ಹಲಾಯುಧಂ॥ ೬೬॥

ಉ ॥ ಕಾದಲಿದಿರ್ಚಿ ಕೈದುವಿಡಿಯಲ್ಬಗೆದರ್ಪುದು ಮೊಗ್ಗೆ ಮಂಜಿನಂ।
ತಾದುದು ನಂಜನೆಂಜಲಿಸಿದಂತೆವೊಲಾದುದು ಬೇಗೆ ಪರ್ವಿದಂ॥

---

1. ಸಂಕುಲಂ. ಕ. ಖ.; ಸೈನಿಕಂ ಗ. ಘ.
2. ದಂತ. ಚ.

ತಾದುದು ಗಾಳಿಗೊಡ್ಡಿದ ಮುಗಿಲ್ಗೆಣೆಯಾದುದು ಕೂಡೆಯೊಕ್ಕಿದಂ।
ತಾದುದು ರಾಮಬಾಣ ಹತಿಯಿಂದಿದಿರಾದ ವಿರೋಧಿಸಾಧನಂ ॥ ೬೭ ॥

ಆಗಳ್—

ಕಂ ॥ ಬಲವಱಿಯೆ ತರಂಗತಮಂ
ಪಲಾಯನೋದ್ಯುಕ್ತನಾಸೆವಟ್ಟಂ ಜಂಘಾ ॥
ಬಲಮಂ ದಶರಥರಾಮನ
ಶಿಲೀಮುಖಕ್ಕೆಡಱುವಂತವಂ ದಶಮುಖನೇ ॥ ೬೮ ॥

ಓಡಲೊಡರಿಸುವೊಡಂ ತೊಡೆ
ಸೇಡೊಡರಿಸಿದಪ್ಪುದೆಂದು ಭಯರಸದಿಂದ ॥
ಲ್ಲಾಡೆ ಮನಂ ಕೈದುವನೀ
ಡಾಡಿದನಂಜಿಸುಗುಮೊರುಮಂ ರಾಮಶರಂ ॥ ೬೯ ॥

ತುಱಿಲಾಳ್ತನಕ್ಕವಂ ನೀ
ರಿಱಿವಂತಳವಱಿದು ಸೂಸೆ ಕಣ್ಣೀರ್ತೇರಿಂ ॥
ದಿಱಿದಂ ನೆಲಕ್ಕೆ ಜಸಮುಡಿ
ಗಿಱಿವಿನೆಗಂ ಲುಬ್ಧಕಂ ನೆಲಂ ಪಱಿವಿನೆಗಂ ॥ ೭೦ ॥

ಚ ॥ ಸುಗಿದಿರೆ ಚಂದ್ರಮಂಡಲದಮುಂದೆ ತಮಂ ಕೆಡೆದಿರ್ದುದೆಂಬಿನಂ।
ಮುಗಿಯೆ ಕರಾಂಬುಜಂ ಕುವಲಯಂ ನಗುವಂತಿರೆ ರಾಮಚಂದ್ರನೇ ॥
ಬಗ್ಗಿಗೆ ದೆಸೆಗೆಟ್ಟು ತೊಟ್ಟನೆ ತರಂಗತಮಂ ಶರಣೆಂದು ಬೀೞ್ವುದುಂ।
ಗಗನಮನಾಗಳಾವರಿಸಿದತ್ತು ಪಹಾರ ಘನಾನಕ ಸ್ವನಂ ॥ ೭೧ ॥

ಕಂ ॥ ಅಂಬರಮಂ ವಿಜಯಪತಾ
ಕಾಂಬರವೊಡನೊಡನೆ ಸಕಲ ದಿಗ್ವನಿತಾವ ॥
ಕ್ತ್ರಾಂಬುಜಮನಭಯಘೋಷಂ
ಚುಂಬಿಸಿದುವು ಕಱಿದುದಮರ ಕುಸುಮಾಸಾರಂ ॥ ೭೨ ॥

ಅಂಜದಿರಂಜದಿರೆನೆ ಮುಗಿ
ದಂಜಲಿಪುಟಮಂ ತರಂಗತಮನಿದಿರೊಳ್ನಿಂ ॥
ದಂಜನಗಿರಿಯವೊಲಿರೆ ಕೊ
ಟ್ಟಂ ಜಯಜಾಯಾಸಹಾಯನಭಯಮನಾಗಳ್ ॥ ೭೩ ॥

ಉ ॥ ಮುತ್ತಿನ ಪೊನ್ನ ಪೆರ್ಮಡುಗೆಯಂ ವಸನಂಗಳನಿತ್ತರಣ್ಯದೊಳ್ ।
ನಿತ್ತರಿಪಂತು ನಾಡ ಗಡಿಯುಂ ಮಱೆದುಂ ಪುಗದಂತವಂಗೆ ಭೂ ॥
ಪೋತ್ತಮನಾಜ್ಞೆಯೆಂಬ ಮಣಿಮುಂಡನಮುಂ ನಡುನೆತ್ತಿಗಿತ್ತು ದಿ ।
ಗ್ಭಿತ್ತಿಗೆ ಕೀರ್ತಿಚಂದನ ವಿಲೇಪನಮನಿತ್ತನಿದೇನುದಾತ್ತನೋ ॥ ೭೪ ॥

ಕಂ ॥ ಪ್ರಬಲನಬಲನವ್ರೂಲಂತಾ
ಶಬರಂ ಬೀೞ್ಕೊಂಡು ಬೇಗಮೆಂದುದನೇಗೊಂ ॥
ಡು ಬರ್ದುಂಕಿ ಪೋದನೆನೆ ರಾ
ಮಬಾಣಮುಂ ಕದನಭೂಮಿಯೊಳ್ ಮಾಱುವರಾರ್ ॥ ೭೫ ॥

ಆಗಳನೇಕಮುಂಗಳ್ತಾನಕ ರವಂಗಳೊಡನೆ—

ಕಂ ॥ ನಗುವಂತೆ ಪೆಱರ ಬಿಲ್ಲ
ಲ್ಮೆಗಳಂ ತಣ್ಬೆಳಗನುಗುಳೆ ಪೂಜಿಪ ನೆವದಿಂ ॥
ಜಗದಧಿಪ ಧನುರ್ಗುಣಮುಂ
ತ್ರಿಗುಣಿಸಿದಂ ತೋರಮುತ್ತಿನೇಕಾವಳಿಯಿಂ ॥ ೭೬ ॥

ಅಂತು ಪೂಜಿಸಿ—

ಉ ॥ ಮಾರಣಮಂತ್ರ ನಾದಮೆನಿಸಿತ್ತು ವಿರೋಧಿಗೆ ಶಾಂತಿಕಕ್ರಿಯಾ ।
ಕಾರಣ ಮಂತ್ರನಾದಮೆನಿಸಿತ್ತು ಧರಿತ್ರಿಗೆ ಮೃತ್ಯು ವಂಚನೋ ॥
ಚ್ಚಾರಣ ಮಂತ್ರನಾದಮೆನಿಸಿತ್ತೆಮಗಚ್ಚರಿ ನಿನ್ನ ಚಾಪ ಟಂ ।
ಕಾರ ನಿನಾದಮೊಂದೆ ಪಲವುಂ ತೆಱನಂ ತಳೆದಂದಮಾವುದೋ ॥ ೭೭ ॥

ಕಂ ॥ ಏನಂ ಪ್ರತ್ಯುಪಕಾರಮ
ನಾನೊಡರಿಸುವೆಂ ಕುಮಾರ ಕನ್ನೆಯನಿತ್ತೆಂ ॥
ಮೇನಕೆಯಿಂ ಮಿಗಿಲೆನಿಸಿದ
ಜಾನಕಿಯುಂ ಮದನ ವಶ್ಯ ಮಣಿದೀಪಿಕೆಯುಂ ॥ ೭೮ ॥

ಅನುಬಂಧಮನ್ವಯಾ ಗತ
ಮೆನಿಸಿದುದದನಧಿಕಮಾಗೆ ಮಾಳ್ಪನುನಯದಿಂ ॥
ದನೆನುಗುಣ ಸಸ್ಯ ಸಂಪಾ
ದನ ಸೀತೆಯೆನಿಪ್ಪ ಸೀತೆಯಂ ನಿನಗಿತ್ತೆಂ ॥ ೭೯ ॥

ಎಂದು ನುಡಿದು ರಾಮನುಮಂ ಸೌಮಿತ್ರಿಯುಮಂ ವಿಚಿತ್ರ ವಸ್ತ್ರಭೂಷಣಾದಿ

ಗಳಿಂದರ್ಚಿಸಿ ಜನಕಂ ಕತಿಪಯ ಪ್ರಯಾಣಂಗಳಿಂ ಕಱುಪುವುದುಂ ರಾಮಲಕ್ಷ್ಮಣ ರಯೋಧ್ಯೆಯುಂ ಪೊಕ್ಕು ಸುಖದಿನಿರ್ಪುದುಮೊಂದುದಿವಸಂ—

ಕಂ ॥ ಜನಕಂ ತನುಜೆಯನಿತ್ತಂ
ಮನುವಂಶಲಲಾಮನಪ್ಪ ರಾಮಂಗೆಂಬೀ ॥
ಜನವಾರ್ತೆಗೇಳ್ದು ನಾರದ
ಮುನಿಗಾದುದು ನೋಳ್ಪ ಕೌತುಕಂ ಜಾನಕಿಯಂ ॥ ೮೦ ॥

ಉ ॥ ಪೆಂಡಿರ ಲೀಲೆಯಂ ಯತಿಗೆ ನೋಳ್ಪುದು ಪಾಱಯೆ ಮುಂಜಿ ಕಚ್ಚಟಂ ।
ಗುಂಡಿಗೆ ಬೋಳಮುಂಡೆ ಮಣಿದಂಡಮಿವೀಕ್ಷಣ ಸೌಖ್ಯ ಹೇತುವೇ ॥
ಕಂಡೊಡೆ ಬಾಲೆಯರ್ ತಮಗೆ ಪೇಸದೆ ಮಾಣ್ಬರೆ ನಾರದಂ ಮರು ।
ಳ್ಗೊಂಡವೊಲಾಗಸಕ್ಕೆ ನೆಗೆದಂ ವೃಥೆಯಲ್ತೆ ಸರಾಗ ಸಂಯಮಂ ॥ ೮೧ ॥

ಅಂತು ನಾರದಂ ಗಗನವೀಧಿಯಿಂ ಮಿಥಿಲೆಗೆ ಬಂದು ಕನ್ನೆವಾಡದ ಬಾಗಿಲ್ವಾಡಮಂ ಪುಗುವಾಗಳ್—

ಕಂ ॥ ಬಿರಿಮುಗುಳಿಂ ತುಱುಗಿದ ತಾ
ವರೆಗೊಳದೊಳಗಾಡುವಂಚೆವೆಣ್ಣನದೇಂ ಚ ॥
ಪ್ಪರಿಸಿವಳೊ ಸೀತೆ ಕನ್ಯಾ
ಪರೀತೆ ವೈಡೂರ್ಯ ರತ್ನಮಯವೇದಿಕೆಯೊಳ್ ॥ ೮೨ ॥

ಆಗಳದೃಷ್ಟಪೂರ್ವಮಂ ನಾರದನ ವಿಕೃತಾಕಾರಮಂ ಕಂಡು ತರುಣಿ ಹರಿಣಿಯಂತೆ ಬೆರ್ಚಿ ಬಿಱುತೋಡುವುದುಂ—

ಕಂ ॥ ತತ್ತರುಣಿಯ ಬಱುವಱಯಂ
ಪತ್ತಿ ಹಿತಾಹಿತ ವಿವೇಕ ವಿಕಲಂ ಪಱಯಂ ॥
ಪೆತ್ತಾಮುನಿಪಂ ಭ್ರಾಮಕ
ದತ್ತೆಳಸುವ ಪಚ್ಚೆಗರ್ಬುನಕ್ಕೆಣೆಯಾದಂ ॥ ೮೩ ॥

ನಾರದನೇಂ ತಳೆದನೊ ಕ
ನ್ಯಾರತ್ನಮನೆಳಸಿ ಪರಿವ ಪರಿಣತಿಯಿಂ ನಿ ॥
ಸ್ಸಾರಮನಂ ನೀಲ ಶಲಾ
ಕಾರತ್ನಮನೆಳಸಿ ಪರಿವ ತೃಣ ಪರಿಣತಿಯಂ ॥ ೮೪ ॥

ಅಂತು ಬಱವಱಯನುಱಯದೆಯ್ತರ್ಪುದುಂ—

ಕಂ ॥ ಧಾತ್ರಿ ಪಟುವಂತು ತನ್ನಂ
ಧಾತ್ರೀಜನಮಡಸಿ ಪಿಡಿದು ಪರಿಭವಿಸುವುದುಂ ॥
ಮಿತ್ರಂ ಶಲಭಕ್ಕೆನೆ ಮುನಿ
ನೇತ್ರೇಂದ್ರಿಯ ಲೋಭದಿಂದಮುಂದಘವಟ್ಟಂ ॥ ೮೫ ॥

ಆಗಳಾ ಕಳಕಳಮುಂ ಕೇಳ್ದು—

ಕಂ ॥ ಕಡಿತಲೆಯುಂ ತೂಗುತ್ತುಂ
ಕಡುಗಲಿಗಳ್ಮುಟ್ಟೆ ಬರ್ಪುದುಂ ಭಯರಸದಿಂ ॥
ನಡುಗುತ್ತುಂ ನಾರದಮುನಿ
ಕುಡುಮಿಂಚಿನ ಗೊಂಚಲಂತೆ ಗಗನಕ್ಕೊಗೆದಂ ॥ ೮೬ ॥

ಅಂತು ಪೊಳೆದು ಪಾಱಿ—

ಶಾ ॥ ಪಿಂದಂ ಬೆನ್ನದಗುಳ್ದಪ್ಪರೆಂದು ಪೆಱಗಂ ನೋಡುತ್ತುಮೋಡುತ್ತುಮೆ ।
ಯ್ತಂದಂ ಗಾಳಿಗೆಱಂಕೆ ಮೂಡಿದವೊಲಾಕಾಶಂಬರಂ ನೀಳ್ದದಂ ॥
ಕುಂದೇಂದು ಪ್ರಭೆಯುಂ ಮನಂಗೊಳಿಪುದಂ ವಿದ್ಯಾಧರೀ ಲೋಚನಾ ।
ನಂದಸ್ಯಂದಿ ತಟೀ ವಿಲಾಸ ವನಮುಂ ಕೈಲಾಸಮುಂ ನಾರದಂ ॥ ೮೭ ॥

ಅಂತಾ ನಗಮನೆಯ್ದಿ ಸಾನು ನಂದನ ಲತಾಮಂದಿರದೊಳಗಣಿಂದುಕಾಂತ ಶಿಲಾತಲದೊಳ್ ವಿಶ್ರಮಿಸಿ ಮನೋವಿಷಾದಮುಮಂ ಗಗನಾಧ್ವಖೇದಮುಮಂ ತಳೆದು ತನ್ನೊಳಿಂತೆಂದಂ—

ಕಂ ॥ ಖೇದಮನೆನಗನಿತಂ ಸಂ
ಪಾದಿಸಿದಾ ಕನ್ನೆ[1]ಗಳವಿಗಱಿದಱಿಲಂ ಸಂ ॥
ಪಾದಿಸುವೆನೆಂದು ಪರಪೀ
ಡಾ ದುಶ್ಚರಿತಕ್ಕೆ ನಾರದಂ ಬಗೆದಂದಂ ॥ ೮೮ ॥

ಅಂತು ಬಗೆದಂದು—

ಉ ॥ ನೂಲ ಪ[2]ವಣ್ಣವಣ್ಗೆಬರೆ ನಿಮ್ನ ಘನೋನ್ನತಮುಂ ಪ್ರದೇಶಮುಂ ।
[3]ಪೋಲಿಸಿ ನಾರದಂ ವಿಷಮ ಚಿತ್ರ ವಿಚಿತ್ರ ಕಲಾ ವಿಶಾರದಂ ॥

---

1. ಗಳಲನದವಳಲಂ. ಕ. ಖ. ಗ. ಘ.
2. ವಣ್ಣೆಕಣ್ಗೆ. ಕ. ಗ. ಘ.
3. ಪಾಲಿಸಿ. ಖ. ಗ. ಘ.

ಬಾಲೆಯ ಮುದ್ದುಗೆಯ್ತುಮುಮನಾಕೆಯ ಸುಂದರ ರೂಪುಮಂ ಮಹಾ ।
ಲೀಲೆಯುಮಂ ದುಕೂಲ ಪಟದೊಳ್ ಬರೆದಂ ಪ್ರತಿಬಿಂಬಮೆಂಬಿನಂ ॥೮೯॥

ಅಂತು ಪರವಿದ್ಧ ಪರಿಣತಿಯಂ ಮೆಱೆದಾಪಟಮಂ ವಿದ್ಯಾಧರರಾಜಧಾನಿ ಯಪ್ಪ ರಥನೂಪುರಚಕ್ರವಾಳಪುರದ ಪೊಱವೊಟಲ ವಿನೋದ ವನದೊಳಗಣ ಮಣಿ ಭವನದೊಳಗೆ [1]ನೇಱ ಪೋಪುದುಮಿತ್ತಲ್—

ಮ ॥ ಕೆಲಬರ್ ಖೇಚರ ರಾಜಕರ್ ಬಳಸೆಯುಂ ಕೇಳೀವನ ಸ್ಥಾನದೊಳ್ ।
ಚಲನ ನ್ಯಾಸ ವಿಲಾಸಮಂ ಮೆಱೆದು ದೇಹಚ್ಛಾಯೆಯುಂ ರತ್ನಕುಂ ॥
ಡಲ ಭೂಷಾ ರುಚಿಯುಂ ಪಳಂಚೆ ಪೆಸೆಯಂ ಸೌಂದರ್ಯದಿಂ ಮನ್ಮಥಂ ।
ಗಲಗಿಕ್ಕಲ್ ನಡೆವಂತೆ ಮಂದಗತಿಯಿಂ ಬಂದಂ ಪ್ರಭಾಮಂಡಲಂ ॥ ೯೦ ॥

ಅಂತು ಬರುತ್ತುಮಾನಿಕೇತನದೊಳಿರ್ದ ಚಿತ್ರಪಟಮಂ ನೋಡಿ—

ಕಂ ॥ ಸಮುದಾಯಶೋಭೆ ವರ್ಣ
ಕ್ರಮದಿಂ ಪ್ರತ್ಯೇಕಶೋಭೆ ಚೆಲ್ವಿಂ ನಯನ ॥
ಕ್ಕಮರ್ದಂ ಮುಂದಿಡೆ ಖೇಚರ
ನೆಮೆಯಿಕ್ಕದೆ ಬಯಸಿನೋಡಿ ಬರೆಪದ ಪೆಣ್ಣಂ ॥ ೯೧ ॥

ಮ ॥ ಅನುರಾಗಂ ತನಗಾಗೆ ಕಂಡನಿತಱಂದಾವಿದ್ಧಮಂ ತನ್ನ ಮು ।
ನ್ನಿನ ಜನ್ಮಾಂತರದಚ್ಚಿಱಂ ಪೊಸಯಿಪಂತಾಲೋಕಿಸುತ್ತಿರ್ಪುದುಂ ॥
ನನೆಯಂಬಿಂದಿಸೆ ನಿರ್ದಯಂ ಮನಸಿಜಂ ಕರ್ಣಾಂತ ವಿಶ್ರಾಂತಲೋ ।
ಚನ ಯುಗ್ಮಂ ನಸುಮುಚ್ಚೆ ಮುಚ್ಚೆಗೊಳಗಾಗಿರ್ದಂ ಪ್ರಭಾಮಂಡಲಂ॥ ೯೨ ॥

ಕಂ ॥ ಬರೆದುರಗಲೇಖೆ ಮೂರ್ಛಾ
ಪರಿಣತಿಯಂ ಮಂತ್ರಶಕ್ತಿಯಿಂ ಪುಟ್ಟಿಪವೋಲ್ ॥
ಬರೆಪದ ಕನ್ನೆ ಭವಾಂತರ
ಪರಿಚಯದಿಂ ಮೋಹಮೂರ್ಛೆಯಂ ಪುಟ್ಟಿಸಿದಳ್ ॥ ೯೩ ॥

ಅದನಾತನ ತಂದೆಯಪ್ಪಿಂದುಗತಿ ಕೇಳ್ದು ಸಂಭ್ರಮದಿಂ ಬಂದು ಶೀತಲ ಕ್ರಿಯೆಗಳನೊಡರ್ಚೆ—

---

1. ನೆರಪಿ. ಖ. ಗ. ಘ.

ಕಂ ॥ ಶಿಶಿರೋಪಚಾರದಿಂ ಖಚ
ರ ಶಿರೋಮಣಿ ನಯನ ಕುವಲಯಂ ಬಿರ್ಚೆ ಮನೋ ॥
ಜ ಶಿಲೀಮುಖ ಕೀಲಿತ ಹೃ
ತ್ಕುಶೇಶಯಂ ತಡೆದು ಮೂರ್ಛೆಯಿಂದೆಚ್ಚತ್ತರ್ಗಂ ॥ ೯೪ ॥

ತದನಂತರಮಾವಿಯಚ್ಚರಾಧಿರಾಜನೀಪಟಮನಿಲ್ಲಿಗಾರ್ತಂದರೆಂದುಮ್ಮಳಿಸು ತ್ತುಮಿರೆ ನಾರದನಾಗಳಲ್ಲಿಗೆ ಬಂದುಚಿತಾಸನದೊಳಿರ್ದು ಖಚರಪತಿಗಿಂತೆಂದಂ—

ಕಂ ॥ ಜನಕಂ ಮಿಥಿಲಾಧಿಪನಾ
ತನ ವನಿತೆ ವಿದೇಹಿಯೆಂಬಳಾಕೆಗೆ ವಿಯದಂ ॥
ಗನೆಗೆ ತುಹಿನಾಂಶು ಕಳೆಯೆನೆ
ಜನಿಯಿಸಿದಳ್ ಸೀತೆಯೆಂಬ ಕನ್ಯಾರತ್ನಂ ॥ ೯೫ ॥

ಮ ॥ ಸುರ ವಿದ್ಯಾಧರ ಕನ್ಯಕಾ ಜನದೊಳಾ ಸ್ತ್ರೀರತ್ನಮಂ ಪೋಲ್ವರೊ ।
ರ್ವರುಮಿಲ್ಲೀ ನೃಪರತ್ನಮಾಕೆಗನುರೂಪಂ ರತ್ನ ಸಂಯೋಗಾಪಕಂ ॥
ದೊರೆವೆತ್ತಿರ್ಕುಮಿದಂ ನಿವೇದಿಸುವೆನೆಂದಾ ಕನ್ಯಕಾ ವಿಭ್ರಮಂ ।
ಬರೆದಾನಿಲ್ಲಿಗೆ ತಂದೆನಕ್ಕೆ ನಿಮಗಂ ಭದ್ರಂ ಶುಭಂ ಮಂಗಳಂ ॥ ೯೬ ॥

ಎಂದು ನಾರದಂ ಪರಸಿ ಪೋಪುದುಮಿತ್ತಲ್—

ಉ ॥ ಏನುಮನಾರೊಳಂ ನುಡಿಯದುಮ್ಮಳದಿಂ ವಿರಹಾಕುಲಂ ಮನೋ ।
ಗ್ಲಾನಿಯನೊಂದಿ ಪೆಣ್ಣಬರೆಪಂ ಬರೆದಂತಿರೆ ಚಿತ್ರಭಿತ್ತಿಯೊಳ್ ॥
ಜಾನಿಸಿ ಚಿತ್ತಮಂ ಪುದಿಯೆ ಮೋಹತಮಂ ಬೆಮರುಣ್ಮೆ ಪೊಣ್ಮೆ
ಜ್ಞಾನಮಿತಾನನಂ ತಳೆದನಾ ಖಚರಾಗ್ರಣಿ ಮೌನಮುದ್ರೆಯಂ ॥ ೯೭ ॥

ಅಂತು ದಿಙ್ಮೂಢನಾದ ಮಗನ ಮೊಗಮನಿಂದುಗತಿ ನೋಡಿ—

ಉ ॥ ಮಾನವ ಕನ್ಯೆಯಂ ಬಯಸಿ ನಂದನ ನಿನ್ನ ಮನಕ್ಕೆ ಚಿಂತೆಯಂ ।
ಮ್ಲಾನತೆಯಂ ಮುಖಕ್ಕೆ ತರವೇಟ್ಟುದೆ ಕೊಳ್ಳುಡೆಗಟ್ಟುವಟ್ಟೆನಂ ॥
ದಾನೆರೆದಟ್ಟೆ ನಿನ್ನ ದೊರೆಯಂ ವರನಂ ಪಡೆದಿರ್ಕೆ ಕೇಳ್ವೆನೇ ।
ಜಾನಕಿಯಂ ವಿವಾಹವಿಧಿಯಿಂ ಜನಕಂ ನಿನಗೀಯದಿರ್ಪನೇ ॥ ೯೮ ॥

ಎಂದು ನಿಜನಂದನನ ಮನೋವಿಷಾದಮಂ ಕಳೆದು ನಮಗಿಲ್ಲಿಗೆ ತಕ್ಕುದಾ ವುದೆನೆ ವಿಯಚ್ಚರ ವೀರನೊರ್ವನಿಂತೆಂದಂ—

ಕಂ ॥ ಇದು ಮಂತ್ರಾಲೋಚಂಬರ
ಮುದಾತ್ತ[1]ಮೆಣಮಲ್ತು ಮಿಥಿಳೆಯಂ ಜನಕನುಮಂ ॥
ಬೆಪಱಿಸಿ ಜಾನಕಿಯಂ ತ
ರ್ಪುದು ಮಾಳ್ಪುದು ದೇವ ಸುತ ವಿವಾಹೋತ್ಸವಮಂ ॥ ೯೯ ॥

ಎನೆ ವಿಯಚ್ಚರೇಂದ್ರನಿಂತೆಂದಂ—

ಕಂ ॥ ಈಯೆ ತರವೇಟ್ಪುದಬಲೆಯ
ನೀಯದೆ ತಂದಂದು ತನಗದತ್ತಾದಾನಂ ॥
ಸ್ತೇಯಮುದಱಿಂದಮುದನ
ಶ್ರೇಯಮನಾಚರಿಸದಲ್ತೆ ಖೇಚರವಂಶಂ ॥ ೧೦೦ ॥

ಸಮನೆನಿಪನೊಡನೆ ಕೊಳ್ಕೊಡೆ
ಸಮನಿಸೆ ಸಮದತ್ತಿ ಭೂಚರರ್ ಖೇಚರರೊಳ್ ॥
ಸಮನಲ್ಲಸುರ್ತವೋಹದಿ
ನೆಮಗಮದಶ್ರೇಯಮಾದೊಡಂ ಕರಣೀಯಂ ॥ ೧೦೧ ॥

ಎಂಬುದುಮಿಂದುಗತಿ ವಿಯಚ್ಚರೇಂದ್ರಂಗೆ ಕುಲಮಹತ್ತರಂ ಚಂದ್ರವರ್ಧನನಿಂತೆಂದಂ—

ಕಂ ॥ ಎರೆದಟ್ಟಿದೊಡೀಯರ್ ಭೂ
ಚರರೆಂತುಂ ನೀಚರದಱಿನಿಲ್ಲಿಗುಪಾಯಾಂ ॥
ತರದಿಂ ತಂದೆರೆಯೆ ಭಯಾ
ತುರಂ ನಿಜಾತ್ಮಜೆಯನೀವೊಡೀವಂ ಜನಕಂ ॥ ೧೦೨ ॥

ಎಂಬುದುಮಾಬೆಸನಂ ಚಪಲವೇಗನೆಂಬ ವಿದ್ಯಾಧರಂ ಬೇಡಿಕೊಂಡು—

ಕಂ ॥ ಗಗನೇಚರ ತೇಜಶ್ಶಿಖಿ
ಪಗೆವರ ಭಾಸುರ ಯಶೋ ವಿತಾನಮನುರಿಪಲ್ ॥
ನೆಗೆದುದೆನೆ ಚಪಲವೇಗಂ
ನೆಗೆದಂ ಗಗನಕ್ಕೆ ವಿಜಿತ ಚಪಲಾವೇಗಂ ॥ ೧೦೩ ॥

ಭೋಂಕನೆ ಬಡಗಣ ದೆಸೆಯಿಂ
ತೆಂಕಣದೆಸೆಗಾಗಿ ನಡೆದುದುಳ್ಕಮಿದೆಂಬಾ ॥
ಶಂಕೆಯನೊಡರಿಸಿ ಮಿಥಿಲೆಗ
ಶಂಕಿತನಾ ಖಚರನಿೞಿದನಂಬರ ತಳದಿಂ ॥ ೧೦೪ ॥

1. ಗುಣ. ಚ.

ಅಂತೆವನಿಗವತರಿಸಿ ಪುರಶ್ರೀಯ ಮುಖಶ್ರೀಯುನನುಕರಿಸುವ ಕಮಲವನ ಸಮಿೀಪದೊಳ್ ವಿಶ್ರಮಿಸಿ ಜನಕಂ ಹಯಪ್ರಿಯನಪ್ಪುದಂ ತಿಳಿದು:—

ಮ ॥ ನೃಪನೀತಂ ತುರಗಪ್ರಿಯಂ ವಿಷಮ ವಾಹಾರೋಹಣಾತ್ಯಂತ ಲೋ ।
ಲುಪನೊಲ್ದೇಱದೆ ಮಾಣನೇಱದೊಡೆ ಸಾಲ್ಗುಂ ಕೊಂಡು ಪೋಪೆಂ ಮದೀ॥
ಯಪುರಕ್ಕೆನ್ನಯ ಪೂಣ್ಕೆ ತೀರ್ಗುಮಿದಱಿಂ ಪೋಗೆಂದು ನಿಶ್ಚೈಸಿ ರೂ ।
ಪ ಪರಾವರ್ತನ ವಿದ್ಯೆಯಿಂ ತುರಗರೂಪಾದಂ ಚರಂ ಖೇಚರಂ ॥ ೧೦೫ ॥

ಅಂತು ವಿಷಮ ಹಯ ವೇಷಮುಂ ತಳೆದು—

ಕಂ ॥ ಎಯ್ದುದೆಡೆಯೆಲ್ಲಮುಂ ಪರಿ
ದೆಯ್ದಿ ಪುರೋಪವನಮೆಲ್ಲಮುಂ ತುಳಿದು ಪಲರ್ ॥
ಬಾಯ್ದೆಱೆದು ಪುಯ್ಯಲಿಡೆ ಕಡು
ಕೆಯ್ದುಕ್ಕೆವಗುದುರೆ ಪೊಟಿಲನಟಿಲಿಸಿತಾಗಳ್ ॥ ೧೦೬ ॥

ಅದು ತಿಗುರಿಯಂದದಿಂ ತಿರಿ
ದುದು ಮುಂದಂ ನೆಗೆದು ಪಿಂದನೀಡಾಡಿ ಬಿಸಿ ॥
ಲ್ಗುದುರೆಯವೋಲ್ ಬಿಱುವರಿವರಿ
ದುದು ಕೆಳರ್ದ ಕೃತಾಂತನಿಂತಿದೆನೆ ಕೃತಕಾಶ್ವಂ ॥ ೧೦೭ ॥

ಕತ್ತರಿಸಿ ಕಿವಿಗಳಂ ನಸು
ಗುತ್ತುತ್ತುಂ ಮೆಯ್ಯ ಖಂಡಮುಂ ಘುರುಘುರೆನು ॥
ತ್ತೊತ್ತರಿಸೆ ಘೋಣ ಪವನನು
ದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯವೋಲ್ ॥ ೧೦೮ ॥

ಖರ ಖುರ ಹತಿಯಿಂ ಖರಮುಂ
ಕರಭಂಗಳನಟ್ಟಿ ಮುಟ್ಟಿ ದಂತಾಹತಿಯಿಂ ॥
ಪರಿದೊರಸಿ ಮನುಷ್ಯರನಾ
ತುರಗಂ ಪುಗಿಸಿತ್ತು ನಿಮಿಷದಿಂ ಯಮಪುರಮುಂ ॥ ೧೦೯ ॥

ಇಡೆ ಗುಂಡೆಯ್ದುವು [1]ಪೊಯ್ದೊಡೆ
ಬಡಿಕೊಳ್ಳವು ತುತ್ತೆ ಕಯ್ದುವುರ್ಚವು ಮನದಿಂ ॥
ಕಡುಗಡಿದು ಮಿಥಿಲೆಯಂ ಕೂ
ಗಿಡಿಸಿದುದೆದ್ಭುತ ತುರಂಗಮುಂ ಸಿಂಗದವೋಲ್ ॥ ೧೧೦ ॥

---

1. ಬಾಯ್ಪಡೆ. ಚ.

ಮ॥ಸ್ರ॥ ಕರೆವ್ರೋಯೆಂಬತ್ತಲಿತ್ತಲ್ ತೊಲಗು ತೊಲಗು ಪೋಗೆಂಬ ಬಾಯೆಂಬ ಬಿದ್ದಂ।
ಬರಿಯೆಂಬೋವೋವೊ ಕೂಕೂಗುಗಿದೆನುಡಿದೆನೇಗೆಯ್ವೆನೆಂಬುಚ್ಚನೀಚಂ॥
ಪುರುಷ ಸ್ತ್ರೀ ಬಾಲ ವೃದ್ಧ ಸ್ಥವಿರ ಯುವ ಜನಾತಂಕ ಶಂಕಾತಿರೇಕಂ।
ಪುರದೊಳ್ಪೊಣ್ಮಿತ್ತು ವಿದ್ಯಾಧರ ಕೃತಕ ಹಯಾಟೋಪ ಘೋರ ಪ್ರಲಾಪಂ॥

ಉ॥ ಬಾಲಕರಂ ಕೆಲರ್ ಮುದುಪರಂ ಕೆಲರಕ್ಷಿವಿಹೀನರಂ ಕೆಲರ್।
ಬಾಲೆಯರಂ ಕೆಲರ್ಪಿಡಿದು ಚೆಚ್ಚರದಿಂದರರೀ ಪುಟಂಗಳಂ॥
ಕೀಲಿಸಿ ತಮ್ಮತಮ್ಮ ಮನೆವೊಕ್ಕಿರೆ ತತ್ಪುರಮೆಲ್ಲಮುಲ್ಲಕ।
ಲ್ಲೋಲಮಕಾಲಮೃತ್ಯು ಭಯ ವಿಹ್ವಲಮಾದುದು ಸೂಕಳಾಶ್ವದಿಂ ॥೧೧೨॥

ಆ ಸಮಯದೊಳ್—

ಚ॥ ಕಳಕಳನಾದಮಾದ ತೆಜನಂ ಜನಕಂ ತಿಳಿದಾ ಸವಾರಿಗಳ್।
ತಳೆದು ಖಲೀನಮಂ ತುರಿಪದಿಂ ಬರೆ ಸಂದಿಸಿ ಪಿಂದೆ ರಾಜಮಂ॥
ಡಳಿ ಬರೆ ಬಂದು ನಿಂದು ಹಯಮಂ ನಡೆ ನೋಟ್ಪುದುವಿಾಕ್ಷಣಾಂಶುಮಂ।
ಡಳಿಸಿದುದಿಂದು ರಶ್ಮಿಯೊಳೆ ತೀರ್ಚಿತೊಡರ್ಚಿದ ಕೇಟಿ ನೇಣವೋಲ್ ॥೧೧೩॥

ಅಂತು ನೋಡಲೊಡಂ—

ಕಂ॥ ಸೂಕಳಮುಲ್ತಿದು ಸಕಲ ಗು
ಣಾಕರಮೆನೆ ಜನಕ ಮುಖ ವಿಲೋಕನದಿಂದು॥
ದ್ರೇಕಮನುಟಿದಿರೆ ವಾಹಕ
ರಾಕುಟಿಲಾಶ್ವಕ್ಕೆ ಖರ ಖಲೀನಮನಿಟ್ಟರ್ ॥೧೧೪॥

ಉ॥ ಒಟ್ಟಜೆಗೆಟ್ಟು ಕಾರ್ಯವಶದಿಂ ಖಚರಂ ಪಿಡಿಪಟ್ಟು ಪಲ್ಲಣಂ।
ಗಟ್ಟಿಸಿಕೊಂಡುಮೇನೊ ಮುಖಲೀನ ಖಲೀನ ಕಶಾಭಿಘಾತದಿಂ॥
ತೊಟ್ಟನೆ ನೋವನೆಯ್ದಿದನಿದಾವುದು ಚೋದ್ಯಮೊ ಕೈತವಕ್ಕೆ ಕೈ।
ಗೊಟ್ಟ ಖಳಂಗೆ ತೀವ್ರ ಪರಿವೇದನ ಬಂಧನಮಾಗದಿರ್ಕುಮೇ ॥೧೧೫॥

ಅಂತು ಮಾಯಾಹಯಮಂ ಮುಂದುರಂಬುಗಿಸುವುದುಮಾಸಮಯದೊಳ್—

ಕಂ॥ ಮೃಗನಾಭಿಯನಾನೆಯ ಕೊಂ
ಬುಗಳಂ ಪೆರ್ವಿದಿರ ತೋರಮುತ್ತಂ ಕಣ್ಬೇ॥
ಲಿಗಳಂ ಮುಂದಿಟ್ಟೊರ್ವಂ
ಪುಗುತಂದಂ ರಾಜಭವನದೊಳಗಂ ಶಬರಂ ॥೧೧೬॥

ಅಂತು ಬಂದು ತನ್ನ ತಂದುಪಾಯನಮಂ ಕೊಟ್ಟೆಱಗಿ ಪೊಡೆವಟ್ಟು ದೇವ! ನಮ್ಮ ಬನದೊಳೊಂದು ಭದ್ರಗಜಮಿರ್ದುದೆಂದು ಬಿನ್ನವಿಸೆ—

ಕಂ ॥ ಜನಕಂ ವನ್ಯ ಗಜಾಲೋ
ಕನ ಕೌತುಕ ಚಿತ್ತನಾದನುಚಿತಮೆ ವಲಮಾ ॥
ವನೊ ಭೂಭುಜಂ ಗಜಪ್ರಿಯ
ನೆನಿಸದನರಸಾನೆಯಿಲ್ಲದೇನೊಪ್ಪುಗುಮೋ ॥ ೧೧೭ ॥

ಅನಂತರಂ—

ಕಂ ॥ ಪರಿಜನಮುಮಾಪ್ತ ಜನಮುಂ
ಪರಿಕಾಱರುಮೋಜೆವಿಡಿಯುಮೊಡವರೆ ವನ್ಯ ॥
ದ್ವಿರದನ ಬಂಧನ ಕೌತುಕ
ನರಣ್ಯಮಂ ಮುಟ್ಟೆವಂದನಂದು ನರೇಂದ್ರಂ ॥ ೧೧೮ ॥

ಆ ಮಹಾಗಹನ ಸರಲ ಸಲ್ಲಕೀ ಪ್ರದೇಶದೊಳ್—

ಮ ॥ ಮುಗಿಲೊಡ್ಡಂ ಗೆಲೆವಂದ ಕಾಯಭರದಿಂ ಪೊಂಬಟ್ಟನೊಟ್ಟೈಪ ದಿ ।
ಟ್ಟಿಗಳಿಂ ಕಾಳಿಗನಾಗನಂ ನಗುವ ಕೈಯಿಂ ಕಾರ ತಂದಲ್ವೊಲ ॥
ಲ್ಲುಗುವೆಂಟುಂ [1]ಮದವಟ್ಟೆಯಿಂ ಪೆಱಿಯ ಸೌಭಾಗ್ಯಕ್ಕೆ ತೋಡಾದ ಕೋ ।
ಡುಗಳಿಂದೇಂ ಜನಕಂಗೆ ಹರ್ಷಜನಕಂ ತಾನಾಯ್ತೊ ವನ್ಯದ್ವಿಪಂ ॥ ೧೧೯ ॥

ಆಗಳಾ ಗಜದ ಬೞಿಸಂದು [2]ನಡೆವಾನೆ ವಾಹಕರೊಡನೆ ಪೋಗಲೆಂದು ಪಲ್ಲಣಿಸಿ ಕೆಲದೊಳಿರ್ದ ಕೃತಕ ತುರಂಗಮಂ ತರಿಸಿ—

ಕಂ ॥ ಉಂಗುಟಮನಂಕ[3]ವಣಿಗೆ ಕ
ರಾಂಗುಳಿಯುಂ ಸ್ಕಂಧ ಸಂಧಿಗುಯ್ದೇಱಿದನು ॥
ತ್ತುಂಗ ತುರಂಗಮಮಂ ನೃಪ
ತುಂಗಂ ಸೂಕಳಮಿದೆಂದು ಸೆಡೆದನೆ ಮನದೊಳ್ ॥ ೧೨೦ ॥

ಅಂತು ಬೆಂಗೆವಂದು ಕೇಟನಳವಡೆ ಪಿಡಿದು ತೊಡೆಯೊ[4]ಳವುಂಕಿ ನೂಂಕು

---

1. ಮದವರ್ಕೆ. ಚ.
2. ದಾನೆಯುಂ ತರಲಾನೆ ವಾಹಕ. ಚ.; ತರಲ್ನಡೆವಾನೆವಾಂಕ. ಕ. ಖ.
3. ವಣಿ. ಕ.; 4. ಳವುಂಚಿ. ಚ.

ವುದುಂ, ಬಿಸಿಲ್ಗುದುರೆಯಂತೆ ಪೊಳೆದುಚ್ಚೈಶ್ಶ್ರವದಂತೆ ನಭಕ್ಕೆ ನೆಗೆದ- ರವಿರಥ ವಾಜಿಯಂತೆ ಪವನ ಪಥದೊಳ್ ಪರಿವುದುಂ—

ಕಂ॥ ತ್ರಿದಶಂ ಮೇಣ್ ಖಚರಂ ಮೇಣ್
ಕುದುರೆಯ ರೂಪಿಂದಮುರಸನಂ ಮುನ್ನಿನ ಜ॥
ನ್ಮದ ಪಗೆವನುಯ್ದನಂತ
ಲ್ಲದೊಡೆ ವಿಯದ್ಗಾಮಿಯಪ್ಪ ಕುದುರೆಗಳೊಳವೇ ॥ ೧೨೧ ॥

ಎಂದು ಸಕಳ ಪರಿಜನಂ ವಿಕಳಮಾಗಿಯುಂ ನೈಮಿತ್ತಿಕನಿಂದರಸನ ಬರವ ನಱಿದುಮ್ಮಳಮನುಱಿದಿರ್ಪುದುಮಿತ್ತಲ್—

ಕಂ॥ ಎಡೆಯೆಡೆಯ ಬೆಟ್ಟನೆಡೆಯೆಡೆ
ಯಡವಿಯನೆಡೆಯೆಡೆಯ ನಾಡನೆಡೆಯೆಡೆಯೂರಂ॥
ಮಿಡಿದನಿತು ಬೇಗದಿಂ ಕಱಿ
ದೊಡರಿಸಿದುದು ನೃಪತಿಗಾಹಯಂ ವಿಸ್ಮಯಮಂ ॥ ೧೨೨ ॥

ಚ॥ ತ್ವರಿತದಿನೆಯ್ದೆವಂದು ಪುರಮಂ ರಥನೂಪುರಚಕ್ರವಾಳಮಂ।
ಪುರ ವನ ವೀಥಿಯೊಳ್ ನಡೆಯೆ ವಾಜಿ ವಿಳಂಬಿತದಿಂ ಧರಾಧಿಪಂ॥
ಧರಣಿಗೆ ಪಾಯ್ದು ಕಯ್ಯ ಕರವಾಳಳಿಮಾಳೆ ಸರೋಜ ಕೋಶದೊಳ್।
ಮೊರೆಯದೆ [1]ನೀಳ್ದವೋಲಿರೆ ವಸಂತನನೇಳಿಸಿದಂ ವನಾಂತದೊಳ್॥ ೧೨೩ ॥

ಕಂ॥ ಇಡಿದಡರೆ ಕಾಯ್ತ ಮಾಮರ
ದಡಿಯೊಳ್ ವಿಶ್ರಮಿಸಿ ಪಥ ಪರಿಮ್ಲಾನತೆಯಂ॥
ಕಿಡಿಸಿ ನರೇಂದ್ರಂ ತನ್ನೊಳ್
ನುಡಿದಂ ಸಂಸೃತಿಯ ಕರ್ಮ ವಿಷಮ ಸ್ಥಿತಿಯಂ ॥ ೧೨೪ ॥

ಅಮೃತಂ ವಿಷಮಕ್ಕುಂ ವ
ಕ್ರಮಾದೊಡಾವಿಷಮುಮಮೃತಮಕ್ಕುಂ ವಿಧಿವ॥
ಕ್ರಮನುಱಿದೊಡಂತೆ ಹಯಮೆ
ನ್ನುಮನಿಲ್ಲಿಗೆ ತಂದುದಿನ್ನವಘಟಿತಮೊಳವೇ ॥ ೧೨೫ ॥

ಆನೆಲದಿಂ ಮಾಯಾ ಹಯ
ಮೀನೆಲದತ್ತೆನ್ನನೆಱಿದು ತರ್ಪುದುಮಾಕ॥

---

1. ನಿಂದ.

ಟ್ಟಾನೆಯುಮಾಕುದುರೆಯುಮಾ
ಸೇನೆಯುಮೇನೆನಗೆ ಮಾಡಲಾರ್ತುವೆ ಹಿತಮಂ ॥ ೧೨೬ ॥

ಕಂ ॥ ಸಮನಿಸಿದನಿಷ್ಟ ಸಂಯೋ
ಗಮನಿಷ್ಟವಿಯೋಗಮಂ ಚತುರ್ಗತಿಗಳೊಳಂ ॥
ಭ್ರಮಿಯಿಸಿ ಕೈಕೊಳ್ಗಂ ತಾ
ನೆ ಮಿಕ್ಕವರ್ ನೆರೆದು ತನಗೆ ನೆರವಾದಪರೇ ॥ ೧೨೭ ॥

ಉದಯಿಸಿದ ಶುಭಾಶುಭ ಕ
ರ್ಮದ ಫಲಮಂ ಸದೃಶಮಾಗೆ ಕಾಣ್ಬುದು ಸಮುಚಿ ॥
ತ್ತದೊಳಿರ್ಪುದು ತಕ್ಕುದು ತ
ಕ್ಕು[1]ದಲ್ತು ತಕ್ಕಂಗೆ ತಗದ ಹರ್ಷ ವಿಷಾದಂ ॥ ೧೨೮ ॥

ಎಂದು ಉದಾತ್ತಚಿತ್ತನಲ್ಲಿಂ ತಳರ್ದು ವನವಿಳಾಸಮಂ ನೋಡಿ ಮೆಚ್ಚು ತ್ತುಂ ನಡೆಯೆ ಮುಂದೆ ಮಾಕಂದ ನಂದನದ ಬಳಸಿನೊಳಮಶೋಕವನದ ಪುದಿ ವಿನೊಳಂ ನಾಗಚಂಪಕ ವನದ ಸುತ್ತಿನೊಳಮತಿ ರಮಣೀಯಮಾಗಿ—

ಮ ॥ ಪದೆಪಂ ಕಣ್ಗೆ ಮನಕ್ಕೆ ಸಂತಸಮನಿತ್ತೇಂ ಮಾಣ್ಬುದೇ ಮಾಣ್ದುದಿ ।
ಲ್ಲದು ಬೇಱೊಂದಮರಾಚಲೇಂದ್ರಮೆನೆ ನಾನಾರತ್ನ ಕೂಟಾಂಶು ಜಾ ॥
ಲದಿನಾಶಾವಧುಗಿತ್ತು ಚಿತ್ರಪಟಮಂ ಚೈತ್ಯಾಲಯಂ ಮತ್ತಮಿ ।
ತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಂ ॥ ೧೨೯ ॥

ಪೃಥ್ವಿ ॥ ಇರುಳ್ ಕುಮುದನೇತ್ರದಿಂ, ಕಮಳನೇತ್ರದಿಂದಂ ಪಗಲ್ ।
ನಿರೀಕ್ಷಿಸುವಪೇಕ್ಷೆಯಿಂ ವಸುಧೆ ತಜ್ಜಿನಾವಾಸಮಂ ॥
ದರಸ್ಮಿತ ಮುಖಂಗಳಂ ಪಲವನಪ್ಪುಕೆಯ್ದಿರ್ಪವೋಲ್ ।
ಸರಸ್ಸಮಿತಿ ಸುತ್ತಿ ಪೊಮ್ಮಗಿಲ ಸುತ್ತಲುಂ ರಂಜಿಕುಂ ॥ ೧೩೦ ॥

ಅಂತತಿಶಯಮಪ್ಪ ಜಿನಭವನಮಂ ಕಂಡು ಬಲಗೊಂಡು—

ಮ ॥ ಅಳಿ ಮಾಳಾ ಮಿಳಿತ ಪ್ರಸೂನ ಸುರಭಿ ದ್ರವ್ಯಂಗಳಿಂದರ್ಚನಾ ।
ಫಳ ಶಾಲ್ಯಕ್ಷತ ಧೂಪ ದೀಪ ಚರು ಸಂದೋಹಂಗಳಿಂ ಸರ್ವಮಂ ॥

---

1. ದಲ್ತೆ. ಕ. ಖ. ಚ.

ಗಳ ಸಂಪೂರ್ಣಮೆನಿಪ್ಪ ಜೈನಗೃಹಮಂ ಪೊಕ್ಕಂ ಜಿನಸ್ತೋತ್ರ ಚಾ।
ಪಳ ಜಿಹ್ವಾಗ್ರ ಸಮಗ್ರ ನಾಟಕ ನಟಂ ಸಾಹಿತ್ಯವಿದ್ಯಾಧರಂ ॥೧೩೧॥

ಇದು ಪರಮಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖಕಿರಣ ಚಂದ್ರಿಕಾಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಜನಕ ಜಿನಭವನದರ್ಶನ ವರ್ಣನಂ
—ಚತುರ್ಥಾಶ್ವಾಸಂ—

## ಪಂಚಮಾಶ್ವಾಸಂ

ಕಂ॥ ಶ್ರೀ ಜಿನ ಗೃಹಮಂ ತ್ರಿಭುವನ
ಪೂಜಿತಮಂ ಪದ್ಮರಾಗ ಮಣಿ ತೋರಣ ವಿ ॥
ಭ್ರಾಜಿತಮಂ ಪೊಕ್ಕಂ ಜನ
ತಾ ಜಂಗಮ ಕಲ್ಪವೃಕ್ಷನಭಿನವಪಂಪಂ ॥ ೧ ॥

ಅಂತು ಪೊಕ್ಕು ಪದ ಪಯೋರುಹ ಮರೀಚಿಯಿಂ ಮಧ್ಯರಂಗಮನಳಂಕರಿಸಿ ಮುಕುಳಿತ ಕರಾಂಬುಜಂ ತ್ರಿಭುವನ ಪ್ರಭುಗಭಿಮುಖನಾಗಿ—

ಉ॥ ಕೇವಲ ಬೋಧದಿಂದಱಿದು ಪಾತ್ರಮಪಾತ್ರಮಿದೆಂಬ ಭೇದಮಂ ।
ದೇವರ ದೇವ ಸಂಚಕರಮಕ್ಷಯ ಮೋಕ್ಷಸುಖಕ್ಕೆನಲ್ ಏನೇ ॥
ಯಾವಳಿಗಿತ್ತುದಾತ್ತ ದ್ವಿಜೇಂದ್ರ ನರೇಂದ್ರ ಫಣೀಂದ್ರ ರಾಜ್ಯ ಲ ।
ಕ್ಷ್ಮೀ ವಿಭವಂಗಳಂ ತಳೆದೆ ನೀಂ ಜಸಮಂ ಜಗದೊಳ್ ಜಿನೇಶ್ವರಾ ॥ ೨ ॥

ಉ॥ ಇತ್ತಪೆ ನೀನೆ ದೇಹಿಗನುರೂಪಮೆನಲ್ ಸುಖ ಲೇಶಮಾದಿಯಾ ।
ಗತ್ತಲನಂತ ಸೌಖ್ಯಮವಸಾನಮೆನಲ್ ಪೆಱರಾರುಮಿಾವರಿ ॥
ಲ್ಲಿತ್ತಪರನ್ಯರೆಂದು ಬಹಿರಂಗ ನಿಮಿತ್ತದಿನೆಂಬರೆನ್ನೆ ದೇ ।
ವೋತ್ತಮ ನೀನೆ ಚಾಗಿವೆಸರಂ ಪಡೆದೈ ಜಗದೊಳ್ ಜಿನೇಶ್ವರಾ ॥ ೩ ॥

ಚ॥ ಪಗೆಕೆಳೆಯೆಂಬ ಭೇದದಱಿತಂ ತಮಗಿಲ್ಲದೆ ತಮ್ಮ ನಂಟರಂ ।
ಪಗೆವರೆ ಗೆತ್ತು ಕೊಂದು ಕಲಿಯಪ್ಪವರಕ್ಕೆಮ ಘಾತಿ ಕರ್ಮಮಂ ॥
ಪಗೆವಡೆಯಂ ಪಡಲ್ವಡಿಸಿ ಕೀಱಿ ಕೃತಾಂತನನಿಕ್ಕಿ ವೀರಲ ।
ಕ್ಷ್ಮಿಗೆ ನೆಲೆಯಾದ ಮೆಯ್ಗಲಿಯೆ ನೀನೆ ವಲಂ ಜಗದೊಳ್ ಜಿನೇಶ್ವರಾ ॥ ೪ ॥

ಚ॥ ನನೆಗಣೆಯಿಂ ಜಗತ್ರಯಮನಂಡಲೆದಂಗಭವಂಗೆ ಭಂಗಮಂ ।
ಜನಿಯಿಸಿದೈ ಚರಾಚರರುಮಂ ತವೆ ನುಂಗಿದ ಕಾಲ ದಂದಶೂ ॥
ಕನ ರದಮಂ ಕಟಲ್ಚಿ ಕಳೆದೈ ಕಡು ಬಲ್ಲಿದನಪ್ಪ ಮೋಹಮ ।
ಲ್ಲನ ಬಲಗಯ್ಯನಯ್ಯ ಮುರಿದೈ ಕಲಿ ನೀನೆ ವಲಂ ಜಿನೇಶ್ವರಾ ॥ ೫ ॥

ಉ॥ ನೀಱೆಯರುನ್ನತ ಸ್ತನ ಭರಂಗಳ ಭಾರಮವುಂಕಿ ಸೋಂಕೆ ನೀ ।
ರೇಱಿದರೇಱಿದರ್ಪೆಱರವು ಪೀಠಮನನ್ಯರೊಳಾಪ್ತರೆಂಬ ಮಾ ॥
ತೇಱದು ಭಾರತೀ ಸ್ತನ ಭರಂಗಳ ಭಾರಮವುಂಕಿ ಸೋಂಕೆ ನೀ ।
ರೇಱದೆ ಸಿಂಹ ವಿಷ್ಟರಮನೇಱಿದೆ ನೀನೆ ವಲಂ ಜಿನೇಶ್ವರಾ ॥ ೬ ॥

ಚ ॥ ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನ ಪದ ಪ್ರತಿಕೂಲ ವೃತ್ತಿ ಮು।
ಕ್ತಿಗೆ ನಿಜ ತತ್ವ ಭಾವನೆಯೆ ಕಾರಣಮೆಂದೊಡೆ ನೀನೆ ದೇಹ ಯಾ॥
ತ್ರೆಗೆ ಸುಖ ದುಃಖ ಯೋಜನೆಗೆ ದೇಹಿಗೆ ಮುಖ್ಯನೆ ನಿನ್ನನಂತಱಿಂ।
ಜಗಮನಶೇಷಮಂ ಪಡೆವೆನೆಂಬುದು ಯುಕ್ತಿ ವಲಂ ಜಿನೇಶ್ವರಾ ॥ ೭ ॥

ಕೊಲೆಯು ವಿಕಲ್ಪ ಕೋಟಿಗಳೆ ದುಷ್ಕೃತಮೆಲ್ಲಮಬಾಧೆಯೊಂದೆ ಬಂ।
ಬಲ ಸುಕೃತಂಗಳೆಲ್ಲಮವನಿರ್ಬಗೆಯಾಗಿರೆ ಮಾಡಿ ಮಾನವರ್ ॥
ಪೊಲೆಗಿಡದಂತು ದುಃಖ ಸುಖ ಹೇತುಗಳಂ ನಿಜ ದಿವ್ಯ ಭಾಷೆಯಿಂ।
ಜಲಕನೆ ತೋಱಿದೈ ಸಕಲ ದೇಹಿಗೆ ನೀನೆ ಶರಣ್ ಜಿನೇಶ್ವರಾ ॥ ೮ ॥

ಮದನ ಪತತ್ರಿ ನಿನ್ನ ದೆಸೆಗಾಣದು ಮೋಹ ಮಹಾಹಿ ನಿನ್ನ ನ।
ಣ್ಮದು ಕಲುಷಾನಲಂ ನಿಜದಯಾರಸದಿಂ ಮಸಿಯಾಯ್ತು ಪಾಪವಿ॥
ಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳಮಾಯ್ತೆನೆ ಪೆಣ್ಣ ಮಣ್ಣ ಮೋ।
ಹದ ಪರಮಾತ್ಮರಂತಿರಲಿ ನೀನೆ ಜಗತ್ಸ್ತುತನೈ ಜಿನೇಶ್ವರಾ ॥ ೯ ॥

ಉ ॥ ನೋಟದ ತೀಟದಾಲಿಸುವ ಸೇವಿಸ ವಾಸನೆಗೊಳ್ವ ಸೌಖ್ಯಮಂ।
ಮಾಟದ ಸೌಖ್ಯಮೆಂದು ಪೆಸರ್ಗೊಳ್ಳದೆ ನಿನ್ನೊಳಭೇದಮಾದ ಕೊಂ॥
ಡಾಟದನಂತಸೌಖ್ಯಮನೆ ಮರ್ಚಿದ ಮರ್ಚುಗೆಯೊಳ್ ತೊಡರ್ಚು ಮಾ।
ಱಾಟದಿನೆನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್ ಜಿನೇಶ್ವರಾ ॥ ೧೦ ॥

ಎಂದು ದರ್ಶನಸ್ತುತಿಗೆಯ್ದು—

ಕಂ ॥ ಜಿನ ಮುಖ ದರ್ಶನದಿಂದಂ
ಜನಕಂ ಮುನ್ನಾದ ಖೇದಮಂ ಮಱೆದು ಸುಧಾ॥
ವನನಿಧಿಯೊಳ್ ಮುಳುಗಿದವೋಲ್
ತನುಪುಳಕಿತಮಾಗೆ ಹರ್ಷರಸಮಯನಾದಂ ॥ ೧೧ ॥

ಅನ್ನೆಗಮಿತ್ತಲ್—

ಚ ॥ ಕೃತಕ ತುರಂಗಮಾಕೃತಿಯನಂದುಪಸಂಹೃತಿ ಮಾಡಿ ಮುನ್ನಿನಾ।
ಕೃತಿಯೊಳೆ ಪೋಗಿ ಪೊಕ್ಕನುಚರಂ ಖಚರಂ ಖಚರೇಂದ್ರಸದ್ಮಮಂ॥

---

* ೭, ೮, ೯, ೧೦—ಈ ನಾಲ್ಕು ಪದ್ಯಗಳೂ ಗ. ಚ. ಗಳಲ್ಲಿಲ್ಲ; ಇವು ಮಲ್ಲಿನಾಥಪುರಾಣದ ೧೨ ನೆಯಾಶ್ವಾಸದ ಅಂತ್ಯದಲ್ಲಿ ಇವೆ.

ಪತಿಯು ಪದಾರವಿಂದಮನರಿಂದಮನರ್ಚಿಸಿದಂ ಕಿರೀಟ ಕೀ ।
ಲಿತ ಹರಿನೀಲ ರತ್ನ ರುಚಿ ಮಂಜರಿ ಯೆಂಬ[1]ತಸೀ ಲತಾಂತದಿಂ ॥ ೧೨ ॥

ಅಂತು ಸರ್ವಾಂಗಪ್ರಣತನಾಗಿ—

ಕಂ ॥ ತಂದೆಂ ರಮ್ಯಕ ವನ ಜಿನ
ಮಂದಿರದ ಕೆಲಕ್ಕೆ ಮಿಥಿಳೆಯಿಂ ಜನಕನನೆಂ ॥
ದಿಂದುಗತಿಗನುಚರಂ ಪೋ
ದಂದಮುಮಂ ಬಂದತೆಱನುಮಂ ನೆಱೆ ಪೇೞ್ದಂ ॥ ೧೩ ॥

ಆಗಳಾ ವಿಯಚ್ಚರಾಧಿರಾಜನತಿಹರ್ಷಚಿತ್ತನಂಗಚಿತ್ತಮನಿತ್ತು—

ಮ॥ ಸ್ರ ॥ ಗಗನಾಂತರ್ಭಾಗದೊಳ್ ಪೂಗೊಳನಲರ್ದಮ್ಪೊಲಿಂಬಾಗೆ ಚಿತ್ರಾತಪತ್ರಂ।
ಪಗಲಂ ಭೂಷಾಂಶು ಜಾಲಂ ದ್ವಿಗುಣಿಸೆ ಮುಗಿಲಂ ಮುಟ್ಟಿ ನಾನಾಧ್ವಜಂ
ಗಳ್ ॥
ಭಗವಜ್ಜೈನಾಂಘ್ರಿ ಪೂಜಾ ಪರಿಕರ ಸಹಿತಂ ಮಂಗಳಾತೋದ್ಯ ನಾದ ।
ಸ್ಥಗಿತಾಶಾ ಖಂಡನಾಖಂಡಲ ವಿಭವದಿನೇೞ್ತಂದನಾ ಖೇಚರೇಂದ್ರಂ ॥ ೧೪ ॥

ಆಸಮಯದೊಳ್—

ಕಂ ॥ ಇದು ಖಚರ ಲೋಕಮೀ ಬ
ರ್ಪುದೆ ಖೇಚರ ನಿಚಯಮೆಂದು ಮನದೊಳ್ ಜನಕಂ ॥
ಪದೆದೀಕ್ಷಿಸುವನ್ನೆಗಮದು
ಪುದಿದುದು ಮಣಿ ಮಕುಟ ಕಿರಣದಿಂದಾಬನಮಂ ॥ ೧೫ ॥

ಅಂತು ಗಗನ ತಳದಿನವನೀ ತಳಕ್ಕವತರಿಸಿದಿಂದುಗತಿ ಮಂದಗತಿಯಿಂ ಜಿನ ಮಂದಿರಮಂ ಬಲಗೊಂಡೊಳಗಂ ಪೊಕ್ಕು ದರ್ಶನ ಸ್ತುತಿಗೆಯ್ದನೇಕಾರ್ಚನೆಗಳಿನರ್ಚಿಸಿ—

ಕಂ ॥ ಆ ಗಗನ ಚರ ಪ್ರವರಂ
ಸ್ವಾಗತ ಸಂಭಾಷಣಂಗಳಿಂ ಜನಕನನ ॥
ಭ್ಯಾಗತನಂ ಮನ್ನಿಸಿದಂ
ಶ್ರೀಗೆಂತುಂ ವಿನಯಮೊಂದೆ ಭೂಷಣಮಲ್ತೇ ॥ ೧೬ ॥

---

1. ಸಿತಾಲತಾಂತದಿಂ. ಕ. ಖ.; ಲತಾಂತಮಾಲೆಯಿಂ. ಗ. ಘ.

ಅಂತು ಮನ್ನಿಸಿ—

ಚ ॥ ಅಲರ್ದ ಮುಖಾಬ್ಜಮಂದರಿಪೆ ಚಿತ್ತದ ಪತ್ತುಗೆಯಂ ಕಡಂಗಿ ಕ ।
ಣ್ಮಲರನುರಾಗಮಂ ಕೆದಱಿ ನೋಡಿ ನರೇಂದ್ರ ಮುಖಾರವಿಂದಮಂ ॥
ಜಲಜಲಿಸುತ್ತುಮಿರ್ಪ ದಶನಾಂಶು ಪೊದಟ್ಟಿ ತಟಿದ್ವಿಳಾಸಮಂ ।
ಗೆಲೆ ನುಡಿದಂ ಘನ ಧ್ವನಿ ಘನಧ್ವನಿಯಂ ಮಿಗೆ ಖೇಚರಾಧಿಪಂ ॥ ೧೭ ॥

ಕಂ ॥ ಎನ್ನ ತನಯಂಗೆ ತಕ್ಕಳ್
ನಿನ್ನ ತನೂಜಾತೆ ರೂಪವತಿ ಸೀತೆ ಗಡಾ ॥
ಕನ್ನೆಯನೆನ್ನ ಮಗಂಗಿ
ತ್ತೆನ್ನೊಡನೊಡರಿಸು ಧರಾಧಿಪತಿ ಕೋಳ್ಕೊಡೆಯಂ ॥ ೧೮ ॥

ಎನೆ ಜನಕನಿಂತೆಂದಂ—

ಕಂ ॥ ನಿನ್ನ ತನಯಂಗೆ ನಮಿವಂ
ಶೋನ್ನತ ಕುಡಲಪ್ಪುದಾದೊಡಂ ಕನ್ನೆಯನಾಂ ॥
ಮುನ್ನಮೆ ರಾಮಂಗಿತ್ತೆನ
ದನ್ನಿಲೆ ನುಡಿಯದೊಡೆ ಮೆಚ್ಚಲಱಿಗುಮೆ ಲೋಕಂ ॥ ೧೯ ॥

ಎನೆ ಸನ್ಮತಿವೆಸರ ವಿದ್ಯಾಧರನಿಂತೆಂದಂ—

ಕಂ ॥ ದೊರೆಕೊಂಡ ನಿಧಿಯನೊಲ್ಲದೆ
ಜರಗಂ ಕರ್ಚುವುದೆ ತನ್ನ ತನಯಂಗೆ ವಿಯ ॥
ಚ್ಚರ ರಾಜನೆರೆದೊಡೀಯದೆ
ದೊರೆಯಲ್ಲದ ಮಾನವಂಗೆ ಕುಡುವುದೆ ಕೂಸಂ ॥ ೨೦ ॥

ಆರಾದೊಡಮೆರೆವರ್ಗ
ನ್ಯಾರತ್ನಮನೆರೆದೊಡೀಯೆಮೆಂಬರೆ ಕುಡುವಂ ॥
ತಾರಾಮನೋಳೇ[1] ಗಂಡೈ
ಪೌರುಷಮಂ ತಕ್ಕುದಱಿದು ನೆಗಟಲ್ವೇಡಾ ॥ ೨೧ ॥

ಎನೆ ಜನಕಂ ಮುನಿಸಂ ಮನಕ್ಕೆ ತಾರದೆ ರಾಮನ ಭುಜ ಪ್ರತಾಪಮಿಲ್ಲಧಂದುತ ರಂಗತಮನೆಂಬ ಶಬರ ನಾಯಕನಿಂ ವಿನೀತಾಖಂಡಮನಿತುಂ ಮ್ಲೇಚ್ಛ ದೇಶಮುಕ್ಕು

---

1. ಳೇಂ ಕಂಡೈ. ಘ

ಮಂತಾಗದಂತೆಮ್ಮುಮನೆಮ್ಮಭಿಮಾನಮುಮಂ ಕಾದೊಡೆಮ್ಮ ಮಗಳಂ ಕನ್ಯಾರತ್ನಮಂ ಸೀತೆಯನಿತ್ತೆನೆನೆ ಮತ್ತೊರ್ವ ಖಚರನಿಂತೆಂದಂ;

ಕಂ ॥ ಎರಲೆಯುಮಂ ಬೇಡನುಮಂ
ಧುರದೊಳ್ ಬೆಂಕೊಂಡನೆಂದದಂ ಸಾಹಸಮಾ ॥
ಗಿರೆ ಪೊಗೞ್ವೆ ಸಕಳ ವಿದ್ಯಾ
ಧರ ವಲ್ಲಭ ಸಭೆಯೊಳಿದು ಪೊಗೞ್ತೆಗೆ ಪೊಲನೇ ॥ ೨೨ ॥

ಗಗನಾಂಗಣದೊಳ್ ನಡೆವರ್
ಬಗೆದೆಡೆ[1]ಗೇಂಬಾೞ್ತೆಯಾದುದಾವೊಡಮೆಗಳಂ ॥
ಬಗೆದಾಗಡೆ ಕುಡುಗುಂ ವಿ
ದ್ಯೆಗಳೆನೆ ಖೇಚರರ ಮಹಿಮೆ ಭೂಚರರ್ಗುಂಟೇ ॥ ೨೩ ॥

ಎನೆ ಜನಕಂ ಮುನಿದು—

ಚ ॥ ಪುರು ಜಿನನಾದಿಯಾಗೆ ಜಿನಪುಂಗವರುಂ ಭರತೇಶನಾದಿಯಾ ।
ಗಿರೆ ಸಕಲಾರ್ಧ ಚಕ್ರಿಗಳುಮೇಂ ಗಳ ಭೂಚರರಲ್ಲದಾರೊ ಖೇ ॥
ಚರರದನೇಕೆ ನೀ[2]ನಱಿಯೆ ಪಾಱಿದೊಡೇಂ ಫಲಮುಂಟೆ ಪಕ್ಕಿಯುಂ ।
ತಿರೆ ಪುರುಷಾರ್ಥಮಲ್ತು ಪರ ನಿಂದೆಯುಮಾತ್ಮ ಗುಣ ಪ್ರಶಂಸೆಯುಂ ॥ ೨೪ ॥

ನಿಮಗವರೇತಱಿಂದುಱದರೆಂದಿೞಿಕೆಯ್ವಿರೊ ವಂಶ ವೀರ್ಯದಿಂ ।
ಸಮನವಗರ್ಾರುಮಿಲ್ಲವರಶೇಷ ಕಲಾ ಕುಶಲರ್ ಪ್ರಚಂಡ ವಿ ॥
ಕ್ರಮರವರೀ ತ್ರಿಖಂಡ ಭರತೋರ್ವರೆಯುಂ ಭುಜ ದಂಡದಿಂಹವಾ ।
ಕ್ರಮಿಸುವ ಗಂಡಗರ್ವದ ಬಲಾಚ್ಯುತರಲ್ಲರೆ ರಾಮ ಲಕ್ಷ್ಮಣರ್ ॥ ೨೫ ॥

ಎಂಬುದುಮಿಂದುಗತಿ ವಿಯಚ್ಚರೇಂದ್ರನಾನುಡಿಗೆ ಕನಲ್ದು—

ಮ ॥ ದೆಸೆಬಿದ್ದಂ ಬಲಗರ್ವಮಂ ಪೊಗೞ್ವೆ ವಜ್ರಾವರ್ತಮಂ ರಾಮನೇ ।
ಱಿಸೆ ವೈದೇಹಿಯನೀವುದಾಱದೊಡೆ ಮತ್ಪುತ್ರಂ ಪ್ರಭಾಮಂಡಲಂ ॥
ಗೆ ಸರೋಜಾಕ್ಷಿಯನೀವುದೀ ನುಡಿಯನೇಗೊಳ್ಳೆಂಬುದುಂ ರಾಮ ಸಾ ।
ಹಸಮಂ ಬಲ್ಲುದಱಿಂದಮಾನುಡಿಯನೇಗೊಳ್ಳೆಂ ಮಹೀವಲ್ಲಭಂ ॥ ೨೬ ॥

---

1. ಗಂ ಬಾಳ್ತಿಯಾದೊಡಾವೊಡಮೆ. ಚ
2. ನಱುಯು. ಗ. ಘ ಚ.

ಅನಂತರಂ ಜನಕನಂ ವಿಚಿತ್ರ ವಸ್ತ್ರಾದಿಗಳಿನರ್ಚಿಸಿ ವಿದ್ಯಾಧರ ಕುಲಕ್ಕೆ ಮೊದಲಿಗರಪ್ಪ ನಮಿ ವಿನಮಿಗಳ್ಗೆ ನಾಗರಾಜನಿತ್ತ ನಾಗ [1]ವಿದ್ಯಾಧಿಷ್ಠಿತಂಗಳಪ್ಪ ವಜ್ರಾವರ್ತ ಸಾಗರಾವರ್ತಂಗಳೆಂಬ ಬಿಲ್ಗಳಂ ಹಲಾಯುಧ ಗದಾಯುಧ ಸಮನ್ವಿತಂಗಳಂ ತರಿಸಿ ಕೊಟ್ಟವರ್ಕೆ ಚಂದ್ರವರ್ಧನನೆಂಬ ಮಹತ್ತರನಂ ಕಾಪುವೇಟ್ಟು ಕಟಿಪುವುದುಂ ವಿಯಚ್ಚರ ಬಲಂಬೆರಸವರಿರ್ವರುಂ ಮಣಿಮಯ ವಿಮಾನಂಗಳ ನೇಱಿ ಪವನ ಪಥದೊಳ್ ಮನಃಪವನವೇಗದಿಂ ಮಿಥಿಳೆಗೆ ಬರುತ್ತಿರ್ಪುದುಂ—

ಚ ॥ ಗಗನದೊಳೊಡ್ಡುಗಟ್ಟಿ ಬೆಳಗಾ ಬರುತಿರ್ಪುದದಲ್ತು ರೋಹಣಾ ।
ದ್ರಿಗಳಿಟಿತರ್ಪುವಲ್ಲವು ನವಗ್ರಹ ಮಂಡಲಮಲ್ತು ಕಲ್ಪ ವಾ ॥
ಸಿಗರ ವಿಮಾನಮಲ್ತು ಜನಕಂ ಬರುತಿರ್ದಪನೆಂದು ಕಣ್ಬೊಲಂ ।
ಬುಗೆ ನಲಿದತ್ತು ದಿಟ್ಟಿವೆಳಗಿಂ ಗುಡಿಗಟ್ಟಿ ಪುರಾಂಗನಾಜನಂ ॥ ೨೭ ॥

ಉ ॥ ಎಲ್ಲಿಗೆ ಪೋದನೆಮ್ಮರಸನೆನ್ನೆಮ ಗಾರ್ ಶರಣೆಂಬ ಭೇದಮುಂ ।
ತಲ್ಲಳಮುಂ ಮೊದಲ್ಗಿಡಿಸಲಾ ಬರುತಿರ್ದನೆ ನಮ್ಮ ನೃಪಿನಿಂ ॥
ದಿಲ್ಲಿಗೆ ಭೂಪನೆಂದು ನಡೆ ನೋಟಿಪ್ಪೆಡೆಯೊಳ್ ನಿಜ ಲೋಚನ ಪ್ರಭಾ ।
ಪಲ್ಲವದಿಂ ವಿಪಲ್ಲವಮನಿತ್ತುದು ಚಂದ್ರಿಕೆಗಂಗನಾಜನಂ ॥ ೨೮ ॥

ಅಂತು ಜನಕಂ ಮಿಥಿಲೆಯಂ ಪೊಕ್ಕು ಚಂದ್ರವರ್ಧನಾದಿಗಳನುಚಿತ ಪ್ರತಿಪತ್ತಿಯಿಂ ಮನ್ನಿಸಿ ಬೀಡಿಂಗೆ ಬೆಸಸೆ ಪುರದ ಬಹಿರ್ಭಾಗದ ರಮ್ಯಪ್ರದೇಶದೊಳ್—

ಮ ॥ ನೆಲೆಮಾಡಂಗಳನೇಕಮಾಗೆ ನೆಲೆವೀಡಂ ವಿದ್ಯೆಯಿಂ ಮಾಡಿ ಮೆ ।
ಯ್ಗಲಿ ತಳ್ವಿಲ್ಲದೆ ಚಂದ್ರವರ್ಧನವನ[2]ಭೀಷ್ಪಾವಲ್ಲರೀ ವರ್ಧನಂ ॥
ಬಲ ನಾರಾಯಣ ಬಾಹು ದಂಡದಳವಂ ನೋಡಲ್ ಗದಾದಂಡದಿಂ ।
ಹಲದಿಂ ಕೂಡಿದ ಚಾಪ ದಂಡ ಯುಗಮಂ ಬೈತಲ್ಲಿ ಕಾದಿರ್ಪುದುಂ ॥೨೯॥

ಅನ್ನೆಗಮಿತ್ತಲ್—

ಕಂ ॥ ಪ್ರಿಯ ಸಂಭಾಷಣ ಸಹಿತಂ
ಬಯಸಿದುದಂ ಪರಿಜನಕ್ಕೆ ಸಾಲ್ವಿನಮಿತ್ತ ॥
ಪ್ರಿಯಮಂ ಪುಟ್ಟಿಸಿದಂ ಸುರ
ಭಿಯೊಳೇನೌದಾರ್ಯ ನಿಧಿಯೊ ಜನಕ ನರೇಂದ್ರಂ ॥ ೩೦ ॥

ಅನಂತರಂ ಮಜ್ಜನ ಭೋಜನಾದಿ ದಿವಸ ವ್ಯಾಪಾರಮಂ ತೀರ್ಚಿ ಸೆಜ್ಜೆವನೆ

---

1. ವಿದ್ಯಾವೇಷ್ಟಿತಂ ಚ. 2. ಭೀಷ್ಮಾ. ಕ. ಖ. ಚ.

ಯೊ[1]ಳುಪಧಾನವಿರಾಜಮಾನ ಹಂಸ ತೂಲ ತಳ್ಪದೊಳ್ ವಿಶ್ರಮಿಸಿ ನಿಜಮನೋ ವಲ್ಲಭೆಗೆ ತನ್ನ ಪೋದ ಬಂದ ವೃತ್ತಾಂತಮಂ ನೆಱೆಯೆ ಪೇೞೆ ಘನ ನಿನದಮಂ ಕೇಳ್ದ ಹಂಸವನಿತೆಯಂತೆ ವಿಕಳೆಯಾಗಿ—

ಉ ॥ ನೋಡಿರೆ ಪುಟ್ಟಿದಾಗಳೆ ಖಳಂ ಶಿಶುವಂ ಪಿಡಿದುಯ್ದೊಡೀಕೆಯಂ ।
ನೋಡಿ ತನೂಜನಂ ಮಱೆದೆನೀಕೆಯುಮಂ ಗಡ ಬಿಲ್ಗಳಂ ನೆವಂ ॥
ಮಾಡಿ ವಿಯಚ್ಚರಾನುಚರರುಯ್ದಪರೆಂದು ವಿದೇಹಿ ಮೆಯ್ಯನೀ ।
ಡಾಡಿ ಕಪೋಲಮಂ ತೊಳೆದಳುಣ್ಮಿದ ಲೋಚನ ವಾರಿಧಾರೆಯಿಂ ॥ ೩೧ ॥

ಅಂತು ವಿಕಳೆಯಪ್ಪುದುಂ—

ಉ ॥ ಅಂಬುಜ ನೇತ್ರೆ ನಿನ್ನ ಮನದುಮ್ಮಳಮಂ ಬಿಡು ತನ್ನ ತೋಳ್ಗೆ ಪಾ ।
ಱುಂಬಳೆ ಭೂರಿ ಭೂವಳಯಮೆಂಬಳವಂ ತಳೆದಿರ್ದನನಂತ ವೀ ॥
ರ್ಯಂ ಬಲಭದ್ರನೇಱುಸುಗುಮಂಕದಬಿಲ್ಲನಳುರ್ಕೆಗೆಟ್ಟು ಬಿ ।
ಲ್ಲುಂಬೆಱಗಾಗಿ ಪತ್ತುವಿಡೆ ಕನ್ನೆಯ ಲೋಭಮನನ್ಯರಾಜಕಂ ॥ ೩೨ ॥

ಮ ॥ ಸ್ರ ॥ ಋಣವಿಲ್ಲೀಬಿಲ್ಗೆ ವಿದ್ಯಾಧರರ್ಗಿವು ಋಣಸಂಬಂಧದಿಂ ರಾಮನಂ ಲ ।
ಕ್ಷ್ಮಣನಂ ಪೊರ್ದಲ್ಕೆ ವೇಡಿರ್ದುವು ನೆವದೊಳೆ ಕೈ ಸಾರ್ದುವೀಬಿಲ್ಗಳಿಂ ಧಾ ॥
ರಿಣಿಯಂ ಬಾಯ್ಕೇಳಿಸಲ್ ಕಾರಣಪುರುಷರಿವರ್ ಪುಟ್ಟಿದರ್ ಪಕ್ಷ್ಮವಿ ಕ್ಷೇ ।
ಪಣಮಾತ್ರಂ ಕಾರ್ಮುಕಾರೋಪಣಮವರ್ಗದಱಿಂದೇಕೆ ಶೋಕಾತಿರೇಕಂ ॥

ಎಂದು ಸತಿಯ ಶಂಕೆಯಂ ಕಳೆದು ಗೃಹ ಮಹತ್ತರಂಗೆ ಬೆಸಸುವುದುಂ—

ಕಂ ॥ ಬಹಿರುದ್ಯಾನದ ಕೆಲದೊಳ್
ಬಹು ರತ್ನ ಸುವರ್ಣಮಯಮೆನಲ್ ನಯನ ಸುಖಾ ॥
ವಹಮಂ ಮಾಡಿಸಿದಂ ಗೃಹ
ಮಹತ್ತರಂ ನಿಮಿಷದಿಂ ಸ್ವಯಂವರ ಗೃಹಮಂ ॥ ೩೪ ॥

ಆ ಸ್ವಯಂವರ ಭೂಮಿ ಪೂರ್ವಾಪರಾಯತ ಚತುರಶ್ರಮೆನಿಸಿ ಪೊಳೆವ ಪೊಮ್ಮಗಿಲ ಬಳಸಿನೊಳಂ, ದಕ್ಷಿಣೋತ್ತರ ಮುಖಂಗಳಾಗಿ ತೋರ್ಕೆವೆತ್ತ ಕರ್ಕೇತನದ ನೆಲೆಮಾಡಂಗಳೊಳಮವಱ ಮುಂದಣಿಂದುಕಾಂತದ ಬಯಲ ಮಂಡಪಂಗಳೊಳಂ, ಅವಱಿರ್ಕೆಲದ ಕರ್ಕೇತನದ ಚೌಪಳಿಗೆಗಳೊಳಂ, ಅವಂ ಸುತ್ತಿ ಮುತ್ತಿದ ಮಾಣಿಕದ

1. ಲ್ಲಿತಾನೋಪಧಾನಾದಿ. ಗ. ಫ.

ಮತ್ತವಾರಣಂಗಳೊಳಮಲ್ಲಿಂ ಪೊಱಗೆ ಶೋಣ ಮಣಿ ಕಳಶ ಕರ ಕಿಸಲಯಂಗಳಾ ನಭಶ್ರೀಯ ನಾಲಿಂಗಿಸುವ ಬಾಗಿಲ್ವಾಡಂಗಳೊಳಮವಱ ಮುಂದೆ ಸಂದಣಿಸಿದ ಮರಕತ ಮಕರ ತೋರಣಂಗಳೊಳತಿ ರಮಣೀಯಮಾಗಿ—

ಮ ॥ ದಿವಿಜೋರ್ವೀರುಹಮಿತ್ತ ದೇವರ ಮನೋವ್ಯಾಪರದಿಂದಾದ ದೇ ।
ವ ವಿಮಾನಂಗಳಿವೆಂಬಭೇದದೊಳೆ ಭೇದಂ ಮಾಟ ಕೂಟಂಗಳಿಂ ॥
ನವರತ್ನೋಪಲ ಕರ್ಮದಿಂ ಮಣಿವಿತಾನಶ್ರೇಣಿಯಿಂ ಭೇದಮೆಂ ।
ಬವರಾರೆಂಬಿನೆಗಂ ಸ್ವಯಂವರಗೃಹಂ ಕಣ್ಗೇಂ ಬೆಡಂಗಾದುದೋ ॥ ೩೫ ॥

ಆ ಸ್ವಯಂವರವಿಹಾರಕ್ಕೆ ಜನಕಂ ಪ್ರಧಾನ ಪುರುಷ ಪುರಸ್ಸರಂ—

ಕಂ ॥ ಪುರುವಂಶದ ಕುರುವಂಶದ
ಹರಿವಂಶದ ನಾಥವಂಶ ದುಗ್ರಾನ್ವಯದು ॥
ರ್ವರೆಯೊಡೆಯರಾದಿಯಾಗಿರೆ
ನರನಾಥ ಸುತರ್ಕಳೆನಿಬರಾನುಂ ಬಂದರ್ ॥ ೩೬ ॥

ನಾನಾ ವಾಹನಮುಂ ನಾ
ನಾನಕಮುಂ ವಂಶ ವಿಧೃತ ನಾನಾ ಧ್ವಜ ಸಂ ॥
ತಾನಮುಮೆಸೆದಿರೆ ಬಂದರ್
ನಾನಾ ದೇಶಾಧಿನಾಥ ನಂದನರನಿಬರ್ ॥ ೩೭ ॥

ಆ ಸಮಯದೊಳ್ ದಶರಥಂ ರಾಮ ಲಕ್ಷ್ಮಣ ಭರತ ಶತ್ರುಘ್ನರ್ವೆರಸು ಬಂದೊಂದು ಪಳಿಕಿನ ಚೌಪಳಿಗೆಯೊಳ್ ರತ್ನಮುದ್ರಿಕೆಯ ಮಧ್ಯ ನಾಯಕ ರತ್ನದಂತಿರ್ಪುದುಂ—

ಚ ॥ ಶರನಿಧಿ ರತ್ನರಾಶಿಗಳಿನುರ್ವರೆ ರೋಹಣ ಪರ್ವತಂಗಳಿಂ ।
ಸುರಗಿರಿ ಸಾನು ಕಲ್ಪಕುಜದಿಂ ಗಗನಸ್ಥಳಿ ತಟ್ಟಿ ತಾರಕಾ ॥
ಪರಿಕರದಿಂ ಸರೋಜಿನಿ ಮರಾಳದಿನೊಪ್ಪುವ ಮಾಱ್ಕೆಯಿಂ ಸ್ವಯಂ ।
ವರ ಗೃಹಮೊಪ್ಪಮಂ ತಳೆದುದೊಪ್ಪುವ ರಾಜ ತನೂಜ ರಾಜಿಯಿಂ ॥ ೩೮ ॥

ಅನ್ನೆಗಮಿತ್ತಲ್—

ಚ ॥ ಮಳಯಜ ಮಿಶ್ರ ತೀರ್ಥ ಜಲ ಧಾರೆಗಳಿಂ ಶಶಿ ಕಾಂತ ಕಾಂತಮಂ ।
ಗಳ ಕಲಶಾಂಶು ಧಾರೆಗಳಿನಿರ್ಮಡಿಸಿತ್ತು ವಿವಾಹ ಮುಖ್ಯ ಮಂ ॥

ಗಳ ಸವನಂ ವಿಳಾಸವತಿ ಸೀತೆಗೆ ದಿಕ್ತಟಮಂ ಪಳಂಚಿ ಮಂ।
ಗಳ ಪಟಹ ಸ್ವನಂ ಪುದಿಯೆ ಮಂಗಳ ಗಾಯಕ ಗೀತ ನಿಸ್ವನಂ ॥ ೩೯ ॥

ಕಂ॥ ಹಿಮ ಕಿರಣ ಮಾಲೆ ಮುಸುಕಿದ
ಕುಮುದಿನಿಯ ಬೆಡಂಗು ತನಗೆ ಪುದುವೆನೆ ಮೃಗನೇ॥
ತ್ರೆ ಮನಂಗೊಂಡಳ್ ಮಲಯಜ
ಹಿಮ ಕರ್ದಮ ಕಲಿಲ ಸಲಿಲ ಸವನೋತ್ಸವದೊಳ್ ॥ ೪೦ ॥

ಆ ಮಂಗಲಸವನ ಸಮಯಾನಂತರಂ ಜಾನಕಿ ನೀರಾಜನ ವಿರಾಜಮಾನೆ ಧಾರಾನಿಳಯ ಜಲಯಂತ್ರ ಪುತ್ರಿಕೆಯಂತೆ ನಯನ ಪುತ್ರಿಕೆಗೆ ಮಣಿಭೂಷಣಮೆನಿಸಿ ಪಳಿಕಿನ ಪಟ್ಟವಣೆ ಕೇಸಡಿಯ ಕೆಂಪಿನಿಂದರುಣಮಣಿಯನೊಟ್ಟೈಸೆ ಮೆಟ್ಟಿ ನಿಲ್ವು ದುಮಾ ನಿತಂಬಿನಿಯ ಸಿತಂಬ ಸೂತ್ರದೊಳ್ ತೊಡರ್ಚಿದ ತೋರಮುತ್ತುಗಳಂತೆ ಯುಂ, ಆ ವೃತ್ತಕುಚೆಯ ಕುಚಕಳಶದೊಳೊಸರ್ವ ಲಾವಣ್ಯರಸ ಬಿಂದುಗಳಂತೆ ಯುಂ, ಆ ಕನಕ ಕೇತಕೀ ದಳನಖಿಯ ನಖಮುಖದೊಳುಣ್ಮುವ ಮಯೂಖ ಮಂಜರಿ ಯಂತೆಯುಂ, ಆ ಪಲ್ಲವಾಧರೆಯಧರಪಲ್ಲವದೊಳ್ ಪೊಳೆವ ದರಹಾಸ ಕಳಿಕೆಯಂತೆ ಯುಂ, ಆ ಚಳಾಳಕೆಯಳಕವಲ್ಲರಿಯೊಳ್ ಬೆಳರ್ತ ಬಿರಿಮುಗುಳಂತೆಯುಂ, ಓರೊಂದೆ ಜಲಬಿಂದು ಬಿಡುತಪುದುಂ—

ಕಂ॥ ಆ ರಮಣಿಯ ತನುಲತೆಯಿಂ
ವಾರಿಕಣ ಪ್ರಚಯಮಂ ದುಕೂಲಾಂಚಲದಿಂ॥
ವಾರಾಂಗನೆಯರ್ ತೊಡೆದರ್
ನೀರಂಜಿಸುವಂತೆ ಮಣಿಶಲಾಕೆಯನಾಗಳ್ ॥ ೪೧ ॥

ಮ॥ ನಗೆಗಣ್ಸೂಸೆ ವಿಳಾಸಮಂ ನಗೆಮೊಗಂ ಲಾವಣ್ಯಮಂ ಬೀಜಿಕಿ ಸಾ।
ವಗಿಸುತ್ತುಂ ಕಚಬಂಧಮಂ ಶಿಥಿಲ ನೀವೀಬಂಧಮಂ ಕಾಂಚಿಯೊಳ್॥
ತೆಗೆಯುತ್ತುಂ ಸ್ಮರಮಂತ್ರ ದೇವತೆಯವೋಲ್ ಬಾಹಾ ಲತಾಂದೋಳನಂ।
ಒಗೆಯಂ ಬಲ್ಸೆಜಿಗೆಯ್ಯೆ ಬಾಲೆ ಮೆಜಿದಳ್ ಲೀಲಾ ಪದನ್ಯಾಸಮಂ॥೪೨

ಅಂತು ಬಂದು ಚೆಂಬೊನ್ನ ಕನ್ನೆಮಾಡದ ಮೊಗಸಾಲೆಯೊಳಿಕ್ಕಿದ ಮುತ್ತಿನ ಬಿತ್ತರಿಕೆಯೊಳ್ಕುಳ್ಳಿರ್ಪುದುಂ ಮೇಳದಂಗನೆಯರ್ ಮಂಗಳ ಪಸದನಂಗೊಳಿಸಲ ವಸರಂಬಡೆದು ವಿಚಿತ್ರ ಚೀನಾಂಬರಮಂ ನಿಜಿವಿಡಿದುಡಿಸಿ, ಕೆಂದಾವರೆಯನೆಳವಿಸಿ ಲೆಳಸಿದಂದಮಾಗೆ ಲಾಕ್ಷಾರಸದಿನಡಿಯಊಡಿಯುಂ, ಚರಣನಖ ಚಂದ್ರ ಮಾಲಿಗೆ ನಕ್ಷತ್ರಮಾಲೆಯನೋಲಗಿಸುವಂತೆ ಮುಕ್ತಾಫಲ ನೂಪುರಮಂ ತುಡಿಸಿಯುಂ, ಪುಳಿನ ವಳಯಮಂ ಪೊಂದಾವರೆಯ ಬಳ್ಳಿ ಬಳಸಿದಂತೆ ಸಿತಂಬ ವಳಯದೊಳ್ ಮಣಿ

ಮೇಖಲೆಯಂ ತೊಡರ್ಚಿಯುಂ, ಮದನ ಮದ ರದನಿ ರದನದೊಳ್ ಕೀರ್ತಿಮುಖಮುಂ ಕೀಲಿಸುವಂತೆ ಶತಪತ್ರ ಭಂಗಮುಂ ತುಂಗಸ್ತನಾಭೋಗದೊಳ್ ಸಂಗಳಿಸಿಯುಂ, ಪೀವರ ಪಯೋಧರ ಮಂಡಳಕ್ಕೆ ಪರಿವೇಷಮುಂ ಪಡೆವಂತೆ ಪಂಚರತ್ನದ ಬಣ್ಣಸರ ಮುಂ ಕೊರಲೊಳಿಕ್ಕಿಯುಂ, ಬಾಹುಲತೆಯ ಬಿಬಿಲಂತೆ ರತ್ನಕಾಂತಿ ಕವಲ್ವರಿವಿನಮುಂ ಗದಮುಂ ನಳವಡಿಸಿಯುಂ, ಸಿರಿಸದ ಬಾಸಿಗಮುಂ ಭೃಂಗಮಾಲೆ ಬಳಸುವಂತೆ ನಳಿ ತೋಳೊಳ್ ಪಚ್ಚೆಯ ಪಿಂಡುಗಂಕಣಮನೇಱಿಸಿಯುಂ, ನನೆಗಣೆಗೆ ಗಱಿಗಟ್ಟುವಂ ತಂಗುಲಿಯೊಳ್ ರತ್ನಮುದ್ರಿಕೆಯುಂ ಮುದ್ರಿಸಿಯುಂ, ಸ್ಮರ ವಶೀಕರಣ ಯಂತ್ರಮುಂ ಬರೆವಂತೆ ಕಪೋಲ ತಳದೊಳ್ ಮಕರಿಕಾ ಪತ್ರಮುಂಬರೆದುಂ, ಪೊಸಮಸೆಯ ಪೂಗ ಣೆಗೆ ಪೊಗರಂ ಪಡೆವಂತೆ ನಗೆಗಣ್ಣ ಳೊಳಂಜನಮನಚ್ಚೆಗೆಯ್ದುಂ, ಕರ್ಣಾಂತ ವಿಶ್ರಾಂತ ವಿಲೋಚನದೊಳ್ ಪಡಿಯಿಟ್ಟು ನೋಟ್ಪಂತೆ ಕಿವಿಯೊಳವತಂಸೋತ್ಪಲಮುಂ ತೊಡರ್ಚಿಯುಂ—

ಚ ॥ ಉರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿವಂತೆ ಮೆಲ್ಲಮೆ ।
ಲ್ಲಗೆ ತಲೆವಿಕ್ಕಿ ಚಂದ್ರ ಕಿರಣಂಗಳನಾಗಳೆ ರಾಹು ನುಂಗಿ ಮ ॥
ತ್ತುಗುಳ್ವುದೆಂಬಿನಂ ಮುಡಿಸಿ ಬಾಲೆಯ ಸೋರ್ಮುಡಿಯುಂ ಲಲಾಟದೊಳ್ ।
ಮೃಗಮದ ಬಿಂದುವಂ ಪೆಱಗೆ ನುಣ್ಣಱೆಯಂ ಪಡೆವಂತೆ ತಿರ್ದಿದರ್ ॥೪೩॥

ಆಗಳಾಕೆಯ ಮಂಗಳವಸದನಮೇ ತನಗೆ ಬೀರವಸದನಮಾಗೆ—

ಕಂ ॥ ಬಾಲೆಯ ಕಡೆಗಣ್ಣೋಟಮೆ
ಸಾಲದೆ ನನೆಗಣೆಗಳೇವುವೆಂದು ಮನೋಜಂ ॥
ಶೂಲಿಯನೊಸಲುರಿಗಣ್ಣಂ
ಪೀಲಿಯ ಕಣ್ಣೆಂಬನಾವನೆನಗಿದಿರೆಂಬಂ ॥ ೪೪ ॥

ಮನಸಿಜನೆನೆ ರತಿಯೆನೆ ಕ
ರ್ವಿನ ಬಿಲ್ಲೆನೆ ಕುಸುಮ ಬಾಣಮೆನೆ ಕೋಕಿಲ ನಿ ॥
ಸ್ವನಮೆನೆ ಮಧುಕರ ಝಂಕೃತ
ಮೆನೆ ಸೀತೆಯ ಪಸದನಕ್ಕೆ ಪರ್ಯಾಯಂಗಳ್ ॥ ೪೫ ॥

ಅಂತು ಕೈಗೆಯ್ದುಮಾ ಸಮಯದೊಳ್—

ಕಂ ॥ ಹರಿವಂಶ ನಿಯಮದಿಂ ಹಿತ
ಪುರೋಹಿತಂ ಶುಭಮುಹೂರ್ತದೊಳ್ ಕನ್ಯಕೆಯಂ ॥
ತರವೇಱಿ ವೃದ್ಧ ಕಂಚುಕಿ
ವೆರಸು ಮನೋರಥಮೆನಿಪ್ಪ ರಥಮಂ ತಂದರ್ ॥ ೪೬ ॥

ಆಗಳಾಪುರೋಹಿತಾದೇಶದಿನನೇಕ ಮಂಗಳಾನಕ ನಿನದಮೊದವೆ ರಥಮನೇರಿ–

ಕಂ ॥ ರಮಣಿಯರೆರಡುಂ ಕೆಲದೊಳ್
ಚಮರರುಹಮನಿಕ್ಕೆ ಬೀಱಿ ಬೆಳ್ಗೊಡೆ ಬೇರೊಂ ॥
ದಮೃತಾಂಶುವನಾಕ್ಷಣದೊಳ್
ಹಿಮಾಂಶುಮುಖಿ ಮೆಱೆದಳೀಕ್ಷಣಾಕರ್ಷಣಮಂ ॥ ೪೭ ॥

ಆಗಳಾಸ್ಯಂದನಮಂ ಸುತ್ತಿಮುತ್ತಿ ಕುಂಚದಡಪದ ಡವಕೆಯ ಕನ್ನಡಿಯ ಪರಿಚಾರಿಕೆಯರುವೊಡನಾಡಿಗಳಪ್ಪಯ್ನೂರ್ವರ್ ಕನ್ನೆಯರುಂ ಮಂಗಳೋಪಕರಣ ದ್ರವ್ಯಂಗಳಂ ಪಿಡಿದು ನಡೆಯೆ—

ಚ ॥ ಮದನ ಪತಾಕೆ ಚುಂಬಿಸೆ ವಿಯನ್ಮುಖಮಂ ಸ್ಮರಚಾಪ ಟಂಕೃತಂ ।
ಪುದಿಯೆ ದಿಗಂತಮಂ ಕುಸುಮಸಾಯಕ ಸಾಯಕಮುರ್ಚೆ ರಾಜಲೋ ॥
ಕದ ಮನಮಂ ಮನೋಜ ವಿಜಯಾಂಗನೆ ಜಾನಕಿ ಪೊಕ್ಕಳಾ ಸಭಾ ।
ಸದನ ಸುವರ್ಣ ಗೋಪುರಮನೇಱಿ ಹಿರಣ್ಮಯಮಂ ವರೂಥಮಂ ॥ ೪೮ ॥

ಕಂ ॥ ಕನ್ನೆಯರಖಿಲ ಕಲಾ ಸಂ
ಪನ್ನೆಯರಯ್ನೂರ್ವರಲರ್ದ ತಾವರೆಗಳವೋಲ್ ॥
ತನ್ನೊಡವರೆ ಬಂದಳ್ ಸಿರಿ
ಸನ್ನಿದವಾದಂತೆ ಸೀತೆ ಕನ್ಯಾರತ್ನಂ ॥ ॥ ೪೯ ॥

ಅಂತುಬಂದು—

ಚ ॥ ಜನಕಜೆ ವಶ್ಯದೀಪ ಕಲಿಕಾಕೃತಿಯಿಂ ಪುಗೆ ತತ್ಸಭಾ ನಿಕೇ ।
ತನ ಕುಸುಮೋಪಹಾರ ಮಣಿರಂಗಮನಂಗಣಮಂ ನರೇಂದ್ರನಂ ॥
ದನರ್ಗೆ ಮನೋವಿಕಾರದೊಡನಂಗ ವಿಕಾರಮದೇಂ ಪೊದಟ್ದುದೋ ।
ನನೆಕೊನೆಯೇಱುವಂತೆ ವನರಾಜಿ ಮಧು ಪ್ರಥಮ ಪ್ರವೇಶದೊಳ್ ॥ ೫೦ ॥

ಕಂ ॥ ಉದಯಿಸೆ ಶಶಿಕಳೆ ತೆರೆಮಸ
ಗಿದ ಪಾಲ್ಗಡಲಂತೆ ನೃಪಕುಮಾರ ಕದಂಬಂ ॥
ಸುದತಿ ಪುಗೆ ಸಭೆಯನೊಳಕೊಂ
ಡುದು ಮದನ ವಿಕಾರ ಚೇಷ್ಟೆಯಂ ಬಹುವಿಧಮಂ ॥ ೫೧ ॥

ದಿನಲಕ್ಷ್ಮಿಯ ಪುಗಿಲೊಳ್ಕೋ
ಕನದಾಕರ ನಿಕರಮೊಡನೆಸಳ್ಮಸಗುವವೋಲ್ ॥

ಜನಕಾತ್ಮಜೆ ಪುಗೆ ಸಭೆಯುಂ
ಜನಿಯಿಸಿದುದು ಮದನ ಚೇಷ್ಟೆ ರಾಜನ್ಯಕದೊಳ್ ॥ ೫೨ ॥

ಆಗಳಾಕೆಯ ಲಾವಣ್ಯ ಮದಿರಾರಸ ಸೇವನೆಯಿಂ ಕರಂ ಸೊರ್ಕ್ಕಿ—

ಕಂ॥ ದ್ವಿಗುಣಿಸೆ ನಖರುಚಿ ಪೂಮಾ
ಲೆಗಳಂ ಕಾಂರುಳೊಳೊಗೆದ ತಾರಾವಳಿಯಂ ॥
ನಗೆ ತೋಱರದುರುಂಬಂ ಸಾ
ವಗಿಸಿದನಡಿಗಡಿಗೆ ನೃಪಕುಮಾರಕನೊರ್ವಂ ॥ ೫೩ ॥

ಪರಭಾಗಂಬೆತ್ತಿರೆ ಪ
ದ್ಮರಾಗ ಮಣಿ ಪಾಣಿಪದ್ಮರಾಗದಿನೊರ್ವಂ ॥
ನರನಾಥ ಸುತಂ ಮೆಱೆದಂ
ಕಿರೀಟಮಂ ತಿರ್ದುವಂತೆ ಭುಜಶಾಖೆಗಳಿಂ ॥ ೫೪ ॥

ತಾರಾವಳಿಯಂ ತಳೆದ ನ
ಭೋರಂಗದ ಭಂಗಿ ತನಗೆ ಪುದುವೆಸಿಸಿದುದಂ ॥
ಪೇರುರಮನದೇಂ ಮೆಱೆದನೊ
ಹಾರಮನೋಸರಿಸುವಂತೆ ನೃಪಸುತನೊರ್ವಂ ॥ ೫೫ ॥

ಮಂಗಳ ಮಣಿಪೀಠಂ ವಿಜ
ಯಾಂಗನೆಗೆನೆ ಕೊರ್ವುವೆತ್ತುದಂ ಮತ್ತೊರ್ವಂ ॥
ತುಂಗ ಭುಜ ಶಿಖರಮಂ ರ
ತ್ನಾಂಗದಮಂ ಸಾರ್ಚುವೊಂದುನೆವದಿಂ ಮೆಱೆದಂ ॥ ೫೬ ॥

ಮ॥ ಶೀವಿಬೆಡಂಗುವೆತ್ತ ಕಮಲಾಕರದೊಳ್ ರಮಣೀಯಮಾದ ಕೆಂ।
ದಾವರೆ ಪೂವಿನೊಳ್ ಸೆಣಸಿದತ್ತು ಕುಮಾರ ವಿಶಾಲ ವಕ್ಷದೊಳ್ ॥
ಸಾವಗಿಸುತ್ತುಮಿರ್ಪ ಪದದೊಳ್ ಪೊಳೆದೊಪ್ಪುವ ತೋರಮುತ್ತಿನೆ।
ಕ್ಕಾವಳಿ ಸೂಸುವಂಶುಜಲದಿಂ ಬೆಳರ್ಗೆಂಪಳವಟ್ಟ ಕೆಂದಳಂ ॥ ೫೭ ॥

ಆಗಳಾ ಸ್ವಯಂವರ ಮಧ್ಯಭೂಮಿಗೆ ಮಣಿಭೂಷಣಮೆನಿಸಿ ಮನಂಗೊಳಿಸುವ ಪಳಿಕಿನ ಚೌಪಳಿಗೆಯು ನೀಲ ಶಿಲಾಸ್ತಂಭಮಂ ಮಲಂಗಿ ಪೊನ್ನ ಪುತ್ತಳಿಗೆಯ ವಿಳಾಸಮನಸಕಟಿಂದು ತಟಿದ್ವಲ್ಲರಿ ಬಳಸಿದ ಶರಲ್ಲಕ್ಷ್ಮಿಯಂತೆಯುಂ, ತಾರಾವಳಿ ಬಳಸಿದಿಂದುಕಳೆಯಂತೆಯುಂ, ವಿದ್ರುಮ ಲತೆ ಬಳಸಿದ ಲಾವಣ್ಯರಸ ಸಮುದ್ರ ವೇಲೆ

ಯಂತೆಯುಂ ಕನ್ಯಕಾ ಕದಂಬದ ಬಳಸಿಂ ಬಗೆಗೊಳಿಸಿ ನಿಖಿಲಜನ ಮನಃಪೀಠ
ದೊಳ್ ಮನಸಿಜಂ ಪ್ರತಿಷ್ಠೆಗೆಯ್ದ ರತಿಯಂತೆ ನಿರತಿಶಯಮಾಗಿರ್ಪುದುಂ—

ಕಂ ॥ ಸಕಳೇಂದು ಮುಖಿಯನಾ ಕ
ನ್ನಿಕೆಯಂ ಕಣ್ಸೋಲ್ತು ನೋಡಿ ಮತ್ತೊರ್ವಂ ಕೌ ॥
ತುಕದಿಂದೆವೆಯಿಕ್ಕದೆ ರಾ
ಜ ಕುಮಾರಂ ಸುರ ಕುಮಾರನಂ ಗೆಲೆವಂದಂ ॥ ೫೮ ॥

ತರುಣಿಯ ಲಾವಣ್ಯ ರಸಾಂ
ಬುರಾಶಿಯೊಳ್ ತೇಂಕೆ ತನ್ನ ಕಣ್ಣುಂ ಮನಮುಂ ॥
ಮರವಾನಸನಂತೊರ್ವಂ
ಸ್ಮರ ಸಮ್ಮೋಹನ ಶರಕ್ಕೆ ಗುಱಿಯಾಗಿರ್ದಂ ॥ ೫೯ ॥

ಅಳವಡಿಸುವಂತೆ ಮಣಿಕುಂ
ಡಳಮುಂ ನಸು ಮುರಿದು ಜನಕಸುತೆಯ ಕಪೋಲ ॥
ಸ್ಥಳಮುಂ ಮೃಗಮದ ಪತ್ರಾ
ವಳಿ ವಿಳಸಿತಮುಂ ಮರುಳ್ದು ನೋಡಿದನೊರ್ವಂ ॥ ೬೦ ॥

ತಳವೆಳಗಾದಂ ವನಿತಾ
ತಿಳಕದ ಪೆಱೆ ನೊಸಲ ರೋಚನಾ ತಿಲಕದ ಚೆ ॥
ಲ್ವೆಟೆಕುಳಿಗೊಳೆ ಸಮ್ಮೋಹನ
ತಿಳಕದವೋಲ್ ಮನಮನವನಿಪಾಲಕ ತಿಲಕಂ ॥ ೬೧ ॥

ಬಾಳೆಯ ಸೋರ್ಮುಡಿ ಮನಸಿಜ
ಕಾಳೋರಗನಂತೆ ಮನದೊಳಾ ಕಂಪನಮುಂ ॥
ಮೇಳಿಸೆ ಮತ್ತೊರ್ವಂ ಭೂ
ಪಾಳಂ ಪಾವಡರ್ದನಂತೆ ಬೆಱಗಾಗಿರ್ದಂ ॥ ೬೨ ॥

ಮ ॥ ತನು ರೋಮಾಂಚಮನಪ್ಪುಕೆಯ್ಯೆ ನೃಪನೊರ್ವಂ ಕನ್ಯಕಾರೂಪ ದ ।
ರ್ಶನದಿಂ ತತ್ಪುಲಕಂಗಳಂ ಕಲ ವಿಪಂಚೀ ನಾದಮುಂ ಕೇಳ್ದು ಭೋಂ ॥
ಕನೆ ಮೆಯ್ವೆರ್ಚಿದುವೆಂದು ಬಂಚಿಸಿಯುಮೇಂ ಮೇಲ್ವಾಯ್ವುದಂಲೋಲಲೋ ।
ಚನಮುಂ ತಾಂಗಿದನಿಲ್ಲ ಜಾನಕಿಯ ಸೌಂದರ್ಯಕ್ಕಿದಾಶ್ಚರ್ಯಮೋ ॥ ೬೩ ॥

ಉ ॥ ಪಲ್ಲವ ಪಾಟಲಾಧರೆಯ ಪೀನ ಪಯೋಧರ ಮಂಡಲಂಗಳಾ ।
ಪಲ್ಲಹರೀ ಪರಂಪರೆಯನೀಯೆ ಸಮುತ್ಸುಕ ಲೋಚನ ಪ್ರಭಾ ॥

ಪಲ್ಲವದಿಂ ದುಕೂಲ ನವ ಪಲ್ಲವ ಶೋಭೆಯನಾಗಳೊರ್ವನಿ ।
ತ್ತಲ್ಲಿಯೆ ಕಣ್ಬೆಳಂಚಲೆಯೆ ಜಾನಕಿಯಂ ಮನವೊಲ್ದು ನೋಡಿದಂ ॥ ೬೪ ॥

ಮ ॥ ಕೆಲರಾಗಳ್ ಋಜುವಿಂದಮರ್ಧಋಜುವಿಂದಂ ಸಾಚಿಯಿಂದಂ ಕೆಲರ್ ।
ಪಲವುಂ ಭಂಗಿಯಿನಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ ಕ ॥
ಣ್ಮಲರಂ ಚಿತ್ತಮನಿತ್ತು ಚಿತ್ರಿಸಿದವೋಲ್ ನಿಷ್ಪಂದರಾಗಿರ್ಪುದುಂ ।
ಗೆಲೆವಂದತ್ತು ವಿಚಿತ್ರ ಚಿತ್ರಸಭೆಯಂ ಭೂಭೃತ್ಸಭಾಮಂಡಲಂ ॥ ೬೫ ॥

ಕಂ ॥ ಅನಿತಿಂದ್ರಿಯಮುಂ ವಿಷಯಮ
ನನಾಕುಲಂ ಬಿಟ್ಟು ದರ್ಶನೇಂದ್ರಿಯವೊಂದ ॥
ರ್ಕನುವಶಮಾದುವೆನಲ್ ನೃಪ
ತನಯರ್ ಜಾನಕಿಯಮೇಲೆ ಕಣ್ಣಾಗಿರ್ದರ್ ॥ ೬೬ ॥

ಕರಣಂ ನಯನಮೆ ವಿಷಯಂ
ತರುಣಿಯೆ ಪೆಱತೇನುಮಿಲ್ಲೆನಲ್ ರಾಜತನೂ ॥
ಜರ ಕಣ್ಗಳೆಳಸಿ ಬಳಸಿದು
ವುರವಣಿಸಿದುವಟ್ಟಿ[1]ಮುಟ್ಟಿದುವು ಜಾನಕಿಯಂ ॥ ೬೭ ॥

ಅನಂತರಂ—

ಕಂ ॥ ಬಿಸರುಹ ನೇತ್ರೆಗೆ ಜಾನಕಿ
ಗೆ ಸುಟ್ಟಿ ತೋಱುತ್ತು[2]ಮಱಿಪಿದಳ್ ಪರಿವಿಡಿಯಿಂ ॥
ಪೆಸರ್ಗೊಂಡು ವೃದ್ಧ ಕಂಚುಕಿ
ಪೆಸರ ನೃಪಾತ್ಮಜರ ವಂಶ ವೀರ್ಯ ಶ್ರುತಮಂ ॥ ೬೮ ॥

ಅಂತಱಿಪುವ್ರದುಂ—

ಕಂ ॥ ಕಡು ಮುಂದಮುಪ್ಪ ಕಣ್ಣೆಮೆ
ಕುಡುವುರ್ವಂ ತಡುಕೆ ನೋಡೆ ಮೊಗರಸವೆಂಬಿಂ ॥
ಗಡಲೊಳ್ ಪೊಳೆವೆಳಮಾಳೆಯ
ಬೆಡಂಗನೊಳಕೊಂಡುಪಕ್ಷಿಗಳ್ ಜಾನಕಿಯಾ ॥ ೬೯ ॥

---

1. ಪತ್ತಿ. ಚ.
2. ಮಱಿಪಿದಂ ಗ. ಚ.

ಚ ॥ ನನೆಯ ಸರಲ್ಗಳಂತೆ ನೆಱಿದಿಂಗಳ ತಣ್ಣದಿರಂತೆ ಕಂತುರಾ ।
ಜನ ಕರವಾಳನೆಯ್ದೆಳಪಿನಂತೆ ನವೋತ್ಪಲ ದಾಮದಂತೆ ಪೂ ॥
ವಿನ ಮಱಿಯಂತೆ ತುಂಬಿಗಳ ಮಾಲೆ ತೆಱಂಬೊಳೆವಂತೆ ಲೋಲಲೋ ।
ಚನ ರುಚಿ ಸುತ್ತಿಮುತ್ತಿದುದಶೇಷ ನೃಪಾಲ ಸಭಾಂತರಾಳಮಂ ॥ ೭೦ ॥

ಅಂತು ನೋಡಿ—

ಚ ॥ ಎಱಗದೆ ಪೂತ ಚಂಪಕವನಕ್ಕೆ ನಮೇರು ಮಹೀರುಹಕ್ಕೆ ಬಂ ।
ದೆಱಗುವ ಚಂಚರೀಕದವೊಲಾಕೆಯ ಕೇಕರಮನ್ಯರಾಜಕ ॥
ಕ್ಕೆಱಗದೆ ರಾಘವಂಗೆಱಗೆ ಕಂಚುಕಿ ಕಣ್ಣಱಿದಾ ಲತಾಂಗಿಗ ।
ಟ್ಟೆಱಿಯೊಳಭಿವರ್ಣಿಸಲ್ ಬಗೆದ[1]ಳಾ ಧರಣೀಶ ಗುಣ್ಯೈಕ ದೇಶಮಂ ॥ ೭೧ ॥

ಉ ॥ ಪ್ರಾಕೃತನಲ್ಲನೀ ದಶರಥಾಗ್ರತನೂಭವನೇಕವಾಕ್ಯನಾ ।
ಶಾಕರಿ ಕರ್ಣ ಚಾಮರಯಶಂ ಚರಮಾಂಗನನಂತವೀರ್ಯನಿ ॥
ಕ್ಷ್ವಾಕು ಕುಲಾಮೃತಾರ್ಣವ ಸುಧಾಕಿರಣಂ ರಣಮೇರು ಲೋಕ ಲುಂ ।
ಟಾಕ ನಿದಾಘ ತಾಪ ಹರ ವರ್ಷಣ ಮೇಘನುದಾತ್ತರಾಘವಂ ॥ ೭೨ ॥

ಕಂ ॥ ಕರಿಯಂ ಕಾಮಂ ಬಿಸ ಪಾಂ
ಡುರವರ್ಣಂ ರಾಮನಿದುವೆ ಭೇದಮಭೇದಂ ॥
ನಿರತಿಶಯಮಪ್ಪರೂಪಿಂ
ವರನಾಗಲ್ ನಿನಗೆ ತಕ್ಕನೀ ರಘುವೀರಂ ॥ ೭೩ ॥

ಎಂಬುದುಮಾಸಮಯದೊಳಾ ವಿದ್ಯಾಧರ ಮಹತ್ತರಂ ವಿಧಿಪೂರ್ವಕಮಾ ವಿಷಮ ಚಾಪಮನರ್ಚಿಸುವುದುಂ—

ಮ ॥ ರಸನಾ ಶಂಪಾ ಶತಂ ಸಂಚಳಿಸೆ ಪುದಿಯೆ ಫೂತ್ಕಾರಮಾಶಾಂತಮಂ ದ ।
ಳ್ಳಿಸೆ ವಹ್ನಿಜ್ವಾಲೆ ದೀರ್ಘಾನನ ಕುಹರ ಸಹಸ್ರಂಗಳಿಂ ಕಣ್ಗಳಿಂದೆ ॥
ಣ್ದೆಸೆಗಂಗಾರಂಗಳೆತ್ತಂ ಕೆದಱಿ ಫಣಸಹಸ್ರಂಗಳಂ ಬಿರ್ಚಿ ಕಣ್ಗ ।
ರ್ವಿಸಿ ವಜ್ರಾವರ್ತ ಚಾಪಂ ಪಡೆದುದು ಭಯಮಂ ಕಾಳ ಕಾಳಾಹಿ ರೂಪಂ॥೭೪॥

ಕಂ ॥ ಸಿಡಿಲಂತೆ ಮೊಳಗಿ ನೆಲನಂ
ಪೊಡೆಯುತ್ತುಂ ಪತ್ತು ದೆಸೆಗಮುಪ್ಪಳಿಸುತ್ತುಂ ॥
ಪಡೆದುವಗುರ್ವಂ ಜವನೆರ್ದೆ
ಗಿಡೆ ವಜ್ರಾವರ್ತ ಸಾಗರಾವರ್ತಂಗಳ್ ॥ ೭೫ ॥

1. ನಾ ಚ.

ಆಗಳವರ ಮಸಕಮಂ ಕಂಡು ಭಯಂಗೊಂಡು ಖಚರಮಂಡಲಂ ಪ್ರಭಾಮಂಡಲಂಗೆ ಕನ್ನೆ ಕೈಸಾರ್ದಳೆಂದು ಪೆಱಸಾರ್ದು ನೋಡುತಿರ್ಪುದುಂ—

ಸ್ರ ॥ ಈ ವಜ್ರಾವರ್ತ ಕೋದಂಡಮನವಯವದಿಂದೇಱಿಸಲ್ ಸಾಲ್ವ ದೋರ್ದಂ।
ಡಾವಷ್ಟಂಭ ಪ್ರಚಂಡಂ ಜನಕಜೆಗೆ ವರಂ ಬರ್ಪುದೆಂಬೀ ವ್ಯವಸ್ಥಾ ॥
ರಾವಂ ಕರ್ಣಾವತಂಸಂ ಪಸರಿಸೆ ನಿಜಪೀಠಂಗಳಿಂದೆಟ್ಟಿದಾಗಳ್ ।
ತೀವ್ರತ್ತಿರ್ಪನ್ನೆಗಂ ಭೂಷಣ ರುಚಿ ಕಕುಭಾನೀಕಮಂ ರಾಜಲೋಕಂ ॥೭೬॥

ಕಂ ॥ ಮನಸಿಜನುಂ ಚಂದ್ರಮನುಂ
ದಿನಕರನುಮನೇಕರೇಕೆ ನೆರೆದರೊ ಪೇೞಿಂ ॥
ಬಿನೆಗಂ ನೃಪತನಯರ್ಬಿ
ಲ್ಲನೇಱಿಸಲ್ ತಮ್ಮ ಬೆಳಗೆ ಬೆಳಗೆನೆ ಬಂದರ್ ॥ ೭೭ ॥

ಅಂತು ಬಂದಗುರ್ವುಪರ್ವೆ ಬಿಗುರ್ವಿಸಿದ ಬಿಲ್ಗಳಂ ಕಂಡು ಭಯಂಗೊಂಡು:—

ಮ ॥ ಉರಿಯಂ ಕಾಱುವ ಕೆಂಡಮಂ ಕಱಿವ ಬಿಲ್ಲಂ ಕಂಡೆವಿಲ್ಲುಕ್ಕೆವಂ ।
ತರುಣೀರತ್ನಮನಿಟ್ಟುಕೊಳ್ವ ಸಮುಕಟ್ಟಂದಟ್ಟಿದಂ ಖೇಚರಂ ॥
ಮರುಳಾದಂ ಜನಕಂ ವ್ಯವಸ್ಥೆಯನೊಡಂಬಟ್ಟಾರೊ ಕಲ್ಯಾಣ ತ ।
ತ್ಪರರೀ ಮಂಗಳ ಲಗ್ನದೊಳ್ ಕುಳಿಕದಂಷ್ಟ್ರಾ ಲಗ್ನಮಂ ಸೈರಿಪರ್ ॥ ೭೮ ॥

ಕಂ ॥ ಅಹಿದರ್ಶನಮಲ್ತು ಶುಭಾ
ವಹಂ ವಿವಾಹಕ್ಕೆ ವಿಷಮವಿೞಾ[1]ಮಾರ್ಗಮಹಿ ॥
ಗ್ರಹಣಂ ಮುನ್ನಂ ಪಾಣಿ
ಗ್ರಹಣಂ ಬೞಿಯಂ ಗಳಿನ್ನವಘಟಿತಮೊಳವೇ ॥ ೭೯ ॥

ಮಧುಪರ್ಕಮಲ್ತು ಮಂಗಳ
ವಿಧಾನದೊಳಗೊಂದುಮಲ್ತು ಪಾವಂ ಪಿಡಿವೀ ॥
ವಿಧಿ ಕನ್ಯಾ ಪರಿಣಯನ
ಪ್ರಧಾನ ಕಾರ್ಯಂಗಡಿನ್ನವಘಟಿತಮೊಳವೇ ॥ ೮೦ ॥

ಕುಡುವೆಂ ಜಾನಕಿಯಂ ಪಿಡಿ
ದೊಡಜಗರಮನೆಂದು ಮುನ್ನ ಪೇೞ್ದೊಡೆಯಾಗಾ ॥
ರುಡಮಂ ಕಲ್ತು ವಿವಾಹ
ಕ್ಕೊಡರಿಸುವಂ ಬಱಿದೆ ಪಿಡಿವನಾವನೊ ಪಾವಂ ॥ ೮೧ ॥

---

1. ವಿಷಮಾಹಿ. ಚ; * ಈ ಪದ್ಯವು ಕ. ಖ. ಚ. ಗಳಲ್ಲಿಲ್ಲ.

ಉ ॥ ದೂರದೊಳಂಜದೀಕ್ಷಿಸುವ ಕಣ್ಗಲಿಗಳ್ ನೃಪರಾರುಮಿಲ್ಲೆನಲ್ ।
ಸಾರೆವರಲ್ ಮನಂಗಿಡದ ಮೆಯ್ಗಲಿಯಾವನೊ ಬಾಹುವೀರ್ಯದಿಂ ॥
ದಾರಿವನೆತ್ತಲಾರ್ಪನೆನಲೇಱಿಸುವುದ್ಧತ ವೃತ್ತಿ ನಾಡೆಯುಂ ।
ದೂರಮಿವರ್ಕೆ ಬಿಲ್ವೆಸರನಿಟ್ಟವನುರ್ವಿಗೆ ನಂಜನಿಟ್ಟವಂ ॥ ೮೨ ॥

ಎಂದು ನೆರೆದರಸುಮಕ್ಕಳೆಲ್ಲರಾಬಿಲ್ಲಂ ಕಂಡು ಬಲ್ಗರಂ ಪೊಡೆದಂತೆ ಪೆಡಂಮಗುಳೆ—

ಶಾ ॥ ದೇಶಾಧೀಶ ತನೂಭವರ್ ಸೆಡೆವುದುಂ ಸಾಕೇತ ಸಿಂಹಾಸನಾ ।
ಧೀಶಂ ಕಂಡು ದರಸ್ಮಿತಂ ದಶರಥಂ ಭ್ರೂವಲ್ಲರೀ ಪಲ್ಲವಾ ॥
ದೇಶಂ ನೋಡೆ ಮುಖಾಬ್ಜಮಂ ಸಭೆಯಿನೆೞ್ದಿಂ ತುಂಗವಂಶಂ ಸುರೇಂ।
ದ್ರಾಶಾದಂತಿ ಬಲಂ ಜಿತಾಹಿತಬಲಂ ದುರ್ವಾರ ಬಾಹಾಬಲಂ ॥ ೮೩ ॥

ಅಂತು ತಳರ್ವುದುಂ—

ಕಂ ॥ ಜನ ನಯನ ಪ್ರತಿಬಿಂಬಂ
ತನುರುಚಿಯೊಳ್ಪೊಳೆಯೆ ನಡೆವ ನೆಯ್ದಿಲ್ಗೊಳನಂ ॥
ನೆನೆಯಿಸಿ ಮಾಣ್ದನೆ ರಾಮಂ
ನೆನೆಯಿಸಿದನನುಕ್ಷಣಂ ಸಹಸ್ರೇಕ್ಷಣನಂ ॥ ೮೪ ॥

ಮ ॥ ಬಲಭದ್ರಂ ರಜತಾದ್ರಿ ಬರ್ಪತೆಱದಿಂ ಬಂದಂ ಧನುರ್ದರ್ಶನಾ ।
ಕುಲರಂ ರಾಜತನೂಜರಂ ಸ್ಮಿತಮುಖಂ ನೋಡುತ್ತುಮುದ್ಭ್ರೂಲತಂ ॥
ಕೆಲರಂ ಮೂರ್ಛೆಗೆ ಸಂದರಂ ಕೆಲಬರಂ ಬೆಳ್ಕುತ್ತು ಬೆನ್ನಿತ್ತರಂ।
ಕೆಲರಂ ಬೆಕ್ಕಸಮುತ್ತರಂ ಕೆಲಬರಂ ಶಂಕಾ ವಿಷಾತಂಕರಂ ॥ ೮೫ ॥

ಅಂತೆಯ್ದುವರ್ಪುದುಂ—

ಚ ॥ ಪದನಖ ದೀಪ್ತಿ ಮಂಜರಿ ನಿಚೋಳಕದಂತಿರೆ ತನ್ನನಾವಗಂ ।
ಪುದಿಯಲೊಡಂ ಬಿಗುರ್ವಣೆ ರಘೂದ್ವಹ ಸನ್ನಿಧಿಯಿಂದದೃಶ್ಯಮ ॥
ಪ್ಪುದುಮಿಳಿದಾಯ್ತು ಚಾಪಲತೆ ರೋಹಣಶೈಲ ವಿಷಾಪಹಾರ ರ ।
ತ್ನದ ವಿತತಾಂಶು ತಳ್ತಡರೆ ನಿರ್ವಿಷಮಾದ ಮಹಾ ವಿಷಾಹಿವೋಲ್ ॥೮೬ ॥

ಆಗಳಾ ವಿಷಮ ಕೋದಂಡಮನೇರಂಡ ಕಾಂಡಮಂ ಬಗೆವಂತು ಬಗೆದು—

ಮ ॥ ಪದುಳಂ ನಿಂದೆಡಗಯ್ಯೊಳೊತ್ತಿ ರಘುಜಂ [1]ಕೊಪ್ಪಂ ಪದಾಂಗುಷ್ಠಮೂ ।
ಲದೊಳಿಟ್ಟೇಱಿಸೆ ಕಾಲದಂಡ ನಿಭಮಂ ಕೋದಂಡಮಂ ಭೂತಳಂ ॥

1. ಕೊಳ್ಪಂ. ಚ.

ಪದುಳಂನಿಂದುದೆ ಶೇಷಕಂಠ ಕಠಿನಾಸ್ಥಿ ಶ್ರೇಣಿ ನುಗ್ಗಾಗದಿ ।
ರ್ದುದೆ ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತದೇಂ ಮಾಣ್ದುದೇ ॥೮೭॥

ಕಂ ॥ ಇರ್ವ್ವ ಭರಂಗೆಯ್ದನೆ ಗೊಲೆ
ಗೊರ್ವೋದಲೊತ್ತಿದನಗುರ್ವು ಮೆಯ್ವೆತ್ತುದನಾ ॥
ಕಾರ್ಮುಕಮಂ ರಘುವೀರನ
ದೋರ್ಮ್ಮಂಡಳ ಶಕ್ತಿ ಮನುಜ ಸಾಧಾರಣಮೋ ॥ ೮೮ ॥

ಮ ॥ ಪುಲಕಂ ಜಾನಕಿಗುತ್ಸವಂ ಜನಕರಾಜಂಗುಮ್ಮಳಂ ಖೇಚರಾ ।
ವಲಿಗುದ್ವೇಗಭರಂ ನರೇಂದ್ರ ಸುತ ಸಂದೋಹಕ್ಕೆ ಸವ್ಯೋಹನಂ ॥
ಲಲನಾಶ್ರೇಣಿಗೆ ವಿಸ್ಮಯಂ ಪುರಜನಕ್ಕಾಕರ್ಷಣಂ ಲೋಚನಾ ।
ವಲಿಗಾಯ್ತೇಱಿಸಿ ನೀವಿ ಜೇವೊಡೆಯೆ ವಜ್ರಾವರ್ತಮಂ ರಾಘವಂ ॥ ೮೯ ॥

ತದನಂತರಂ—

ಮ ॥ ಸಮದಂ ಲೀಲೆಯಿನೆತ್ತಿ ಖೇಚರಬಲಂ ಕಿಟ್ಟಿತ್ತಿ ಪಾಱಿತ್ತನು ।
ಕ್ರಮದಿಂದಾನತಮಾಗೆ [1]ಕೊಪ್ಪು ಪಿರಿದುಂ ಲಜ್ಜಾನತಂ ರಾಜಲೋ ॥
ಕಮಣಂ ಬೆಕ್ಕಸಮುತ್ತುದೇಱಿಸುವುದುಂ ಕೋದಂಡಮಂ ರಾಮನ ।
ಶ್ರಮದಿಂ ಮನ್ಮಥನಾಗಳೇಱಿಸನೆ ಮಾಱಿಚ್ಚಂ ಪುರಸ್ತ್ರೀಯರಂ ॥ ೯೦ ॥

ಕಂ ॥ ಅವತಂಸಮಾದುವಮರ
ಸ್ತವನಂಗಳ್ ಸಕಳ ಜನದ ಜಯಜಯ ನಿನದಂ ॥
ಕಿವಿಸದ್ದಂ ಕಿಡಿಸಿದುದು
ತ್ಸವ ಪಟಹ ಧ್ವನಿಗಳುಣ್ಮಿ ಪೊಣ್ಮಿದುವಾಗಳ್ ॥ ೯೧ ॥

ಎತ್ತಿದುವು ಮಂಗಲಧ್ವಜ
ಮೆತ್ತಿದುದು ಸಿತಾತಪತ್ರವಾಗಸಮಂ ಪೊ ॥
ತ್ತಿತ್ತಿದುದಾಶೀರ್ವಾದಂ
ಮುತ್ತಿನ ಸೇಸೆಗಳನಿಕ್ಕಿದರ್ ಮಾನಿನಿಯರ್ ॥ ೯೨ ॥

ಆಗಳಾ ಬಳನ ದೋರ್ಬಲಕ್ಕೆ ಕಂಚುಕಿ ರೋಮಾಂಚ ಕಂಚುಕಿತ ಶರೀರೆ ಯಾಗಿ ಜಾನಕೀದೇವಿ ನಿಜಮನೋರಥಂ ಸಫಲವಾದುದಿದುವೆ ಪುಣ್ಯಾವಹ ಸಮಯ ಮಖಿಲ ರಾಜಕುಲ ಶೇಖರನಂ ಕುಸುಮಶೇಖರನಂ ಮಾಲ್ಪುದೆಂದು ಬಿನ್ನವಿಸೆ—

---

1. ಕೊಳ್ಪು. ಚ

ಉ॥ ಆವೆಡೆ ಹಂಸಿಗೀನಡೆಯ ಚೆಲ್ವೆನೆ ನೂಪುರದಿಂಚರಂ ಸ್ಮರಂ।
ಜೇವೊಡೆದಂದಮಾಗೆ ಮೃದುಪಾದತಳಂಗಳ ಕೆಂಪು ಕೂಡೆ ಕೆಂ॥
ದಾವರೆವೂಗಳಂ ಕೆದಱುವಂತಿರೆ ಕುಂತಳ ಸೌರಭಕ್ಕೆ ಭೃಂ।
ಗಾವಳಿ ಮೇಲೆ ಪೀಲಿದಟ್ಟೆಯುಂತಿರೆ ಬಂದಳದೊಂದುಲೀಲೆಯಿಂ ॥ ೯೩ ॥

ಕಂ॥ ಅಲರ್ಗಣೆಯನಂಗಜಂಗೀ
ಯಲೆಂದು ರತಿ ಬರ್ಪ ಮಾಟಕ್ಕಿಯಿಂ ಮಾಲೆಯನಾ॥
ಲಲಿತಾಂಗಿ ಪಿಡಿದು ಕಣ್ಗಂ
ಕೆಲಕ್ಕಮಾ ದಾಶರಥಿಯ ಬಗೆಗಂ ಬಂದಳ್ ॥ ೯೪ ॥

ಅಂತುಬಂದು—

ಉ॥ ಮಾಲೆಯಮೇಲೆ ತುಂಬಿಗಳಮಾಲೆ ತೆಱಂಬೊಳೆದಾಡೆ ಬೇಱೆ ಪೂ।
ಮಾಲೆಯ ಲೀಲೆಯಂ ಕೆದಱೆ ಕೇಕರಮಾಲೆ ಶಿರೀಷಮಾಲೆಯಂ॥
ಸೋಲಿಸೆ ನೀಳ್ದ ಬಾಹುಲತೆ ತೋಳ ಮೊದಲ್ ಮದನಾನುರಾಗಮಂ।
ಸಾಲಿಡೆ ಸಾರ್ದು ಸೀತೆ ರಘುವಂಶನಮೇರುಗೆ ಮಾಲೆಸೂಡಿದಳ್ ॥ ೯೫ ॥

ಮ॥ ಸ್ರ॥ [1]ತನಿಸೋಂಕಿಂ ಮೆಯ್ಗೆ ರೋಮಾಂಚಮನೊದವಿಸಿ ರಾಮಂಗೆ ವೈದೇಹಿ ನೀರೇ।
ಜನಿಸರ್ಗಾಮೋದ ಗಂಧೋದಕ ಸವನಮನಿತ್ತಟ್ಟಿಱಿಂ ಬಾಹುಮೂಲಂ॥
ಸ್ತನಮೂಲಂ ನಾಭಿಮೂಲಂ ತ್ರಿಗುಣಿಸೆ ಸುಮನಶ್ಶೇಖರಂ ಮಾಡಿ ಕಂದ।
ರ್ಪನ ವಾಮೋಪಾಂತದೊಳ್ ರಂಜಿಸುವ ರತಿಯ ಸೌಂದರ್ಯಮಂ ಸೂಱೆ
[ಗೊಂಡಳ್ ॥ ೯೬ ॥

ಕಂ॥ ಬಲದೇವಂಗೇವುದೋ ಬೆಂ
ಬಲಮಾತನೊಳಾದ ಮೋಹದಿಂ ಕೃಷ್ಣಂ ದೋ॥
ರ್ಬಲದೃಪ್ತಂ ಸೆಣಸಿದರಂ
ಕೊಲಲುಂ ಗೆಲಲುಂ ಕಡಂಗಿ ಪಿಂದನೆ ಬಂದಂ ॥ ೯೭ ॥

ಆಕಾರಮಲ್ತು ವಜ್ರ
ಪ್ರಾಕಾರಮಿದೆನಿಸಿ ಲಕ್ಷ್ಮಣಂ ಬರೆ ಚಾಪಂ॥
ವೈಕುರ್ವಣ ವಿಷಮ ಫಣೀಂ
ದ್ರಾಕೃತಿಯಂ ಬಿಟ್ಟು ಮುಟ್ಟಮಿರ್ದತ್ತಾಗಳ್ ॥ ೯೮ ॥

ಗರುಡೋದ್ಗಾರ ಮಣಿಚ್ಛವಿ
ಗರುಡಧ್ವಜನೆನಿಪ ಕೃಷ್ಣನಿದಿರೊಳ್ ಧನು ತ॥

---

1 ತನು......ವಿಸೆ ಗ ಘ ಚ.

ಸ್ಮರಗಾಕಾರಮನುಪಸಂ
ಹರಿಸಿ ನಿಜಾಕೃತಿಯನಿರ್ಪುದೊಂದಚ್ಚರಿಯೇ ॥ ೯೯ ॥

ಅಂತುಬಂದು—

ಚ ॥ ನಗಧರನೆತ್ತನೇ ಧನುವನೇಱಿಸನೇ ನಗಸಾನು ಕೂಟಮುಂ ।
ಪಗೆವರನೇಱಿಸಲ್ ನೆಱೆವಲಂಘ್ಯಬಲಂ ಬಲಗರ್ವದಿಂದದಂ ॥
ಬಗೆದನೆ ಪುರ್ಬನೇಱಿಸುವ ಮಾಟಕ್ಕೆಯಿನಶ್ರಮದಿಂ ಪೊಡರ್ಪು ಕೈ ।
ಮಿಗೆ ರಿಪುಮರ್ದನಂ ಧನುವನೆತ್ತಿದನೇಱಿಸಿದಂ ಜನಾರ್ದನಂ ॥ ೧೦೦ ॥

ಪೃಥ್ವೀ ॥ ಪರಾಭವಿಸಿದಂ ಗುಣ ಪ್ರಗುಣ ಚಂಡ ಕೋದಂಡದಿಂ ।
ಪರಿಸ್ಫುರಿತ ಪಂಚರತ್ನ ರುಚಿ ಸಾಗರಾವರ್ತದಿಂ ॥
ವಿರೋಧಿಬಲ [1]ಪೋತ ವೀರರಸ ಸಾಗರಾವರ್ತದಿಂ ।
ಸುರೇಂದ್ರಧನು ಮೂಡಿದಂಬರಮನಂದು ಪೀತಾಂಬರಂ ॥ ೧೦೧ ॥

ಚ ॥ ಉದಧಿ ಕಲಂಕಿದತ್ತು ದೆಸೆ ತಲ್ಲಳಿಸಿತ್ತಮರಾದ್ರಿ ಗಾಳಿಗೊ ।
ಡ್ಡಿದ ಸೊಡರಂತೆ ಸಂಚಲಿಸಿದತ್ತು ನೆಲಂ ನಡುಗಿತ್ತು ದಿಗ್ಗಜಂ ॥
ಮದಮುಡುಗಿತ್ತು ಖೇಚರಬಲಂ ಪೆಳಱಿತ್ತು ಕರುತ್ತು ದಿವ್ಯ ಚಾ ।
ಪದ ತಿರುವಾಯ್ಗೆ ದಿವ್ಯಶರಮಂ ತರೆ ದೋರ್ಬಲಶಾಲಿ ಲಕ್ಷ್ಮಣಂ ॥ ೧೦೨ ॥

ಚ ॥ ಕರ ಕಮಲಂಗಳಂ ಮುಗಿದು ಲಕ್ಷ್ಮಣದೇವ ಶರಣ್ಯ[2]ಮೆಂಬ ದೇ ।
ವರ ನುಡಿ ಪೊಣ್ಮಿದತ್ತಲರ ಪೆರ್ಮೞೆ ಕೊಂಡುದು ದೇವದುಂದುಭಿ ॥
ಸ್ವರಮೊಗೆದತ್ತವರ್ಗಗಿದು ಖೇಚರ ರಾಜ ಮಹತ್ತರಂ ಭಯಾ ।
ತುರನೆಮೆಯಿಕ್ಕದೆಂಟನ್ನೆಯ ಕೇಶವನಂ ಬೆಱಗಾಗಿ ನೋಡಿದಂ ॥ ೧೦೩ ॥

ಕಂ ॥ ಅದಟಂ ವಜ್ರಾವರ್ತ
ಕ್ಕೆ ದಿವ್ಯಮೆನಿಸಿದ ಹಲಾಯುಧಂಬೆರಸು ಬಲಂ ॥
ಗದೆವೆರಸು ಸಾಗರಾವ
ರ್ತ ದಿವ್ಯ ಚಾಪಕ್ಕುಪೇಂದ್ರನಧಿಪತಿಯಾದಂ ॥ ೧೦೪ ॥

ಚಂದ್ರಾಸ್ಯೆಯರಂ ಮನದೊಳು
ಪೇಂದ್ರಂಗೀರೊಂಬದಿಂಬರಂ ನಿರ್ಜಿತ ದೇ ॥
ವೇಂದ್ರ ಗಣಿಕೆಯರನಂಕದ
ಚಂದ್ರಧ್ವಜನಳ್ಕಿ ಕಪ್ಪಮಿಾವವೊಲಿತ್ತಂ ॥ ೧೦೫ ॥

---

1. ಪಾತ. ಕ. ಖ. ಚ; ದೈತ್ಯ. ಗ. ಘ 2. ನೆಂಬ. ಘ.

ಆಗಳನೇಕಾರ್ಚನೆಗಳಿಂ ಧನುರ್ಯುಗಲಮಂ ಜನಕನರ್ಚಿಸುವುದುಂ—

ಕಂ॥ ಅನರಣ್ಯಸುತಂ ದಶರಥ
ಜನಪತಿ ಕರಿಘಟೆಯೊಳಶ್ವದಟಿದೊಳುಪೇಂದ್ರಂ ॥
ಜನಕ ತನೂಜೆಯುಮಂ ರಾ
ಮನುಮಂ ಮುಂದಿಟ್ಟು ಮಿಥಿಳೆಗಭಿಮುಖರಾದರ್ ॥ ೧೦೬ ॥

ಅಂತು ಸ್ವಯಂವರಶಾಲೆಯಿಂ ತಳರ್ವುದುಂ—

ಉ ॥ ಅಟ್ಟಳೆಯಂ ಪಳಂಚಿ ಪುರ ಗೋಪುರಮಂ ಪರಿದೇಱಿ ಕೋಂಟೆಯಂ ।
ಮೆಟ್ಟಿ ಸುಧಾ ಗೃಹಾವಳಿಗೆ ಲಂಘಿಸಿ ಹರ್ಮ್ಯತಳಕ್ಕೆ ಪಾಯ್ದು ಚೌ ॥
ವಟ್ಟಮನೆಯ್ದಿ ದೇವಗುಲದಾದಲೆಯಿಂ ಗಗನೋದರಕ್ಕೆ ದಿಂ ।
ಕಿಟ್ಟುದು ದುಂದುಭಿಸ್ವನಮನೇಱಿಸಿ ಭೋಂಕನೆ ಶಂಖನಿಸ್ವನಂ ॥ ೧೦೭ ॥

ಆಗಳಾ ಪುರಜನಂಗಳುತ್ತುಂಗ ಮಾಟ ಕೂಟ ಪ್ರಾಸಾದಂಗಳನೇಱಿ—

ಚ ॥ ತಲೆವಱಿದಾನೆ ಸುತ್ತಿ ಪಲವುಂ ಬರೆ ತಳ್ತಿರೆ ಮೇಘಡಂಬರಂ ।
ಲಲನೆಯರಿಕ್ಕೆ ಚಾಮರಮನಿರ್ಕೆಲದಾನೆಯ ಪುಷ್ಪಕಂಗಳೊಳ್ ॥
ನೆಲಸಿ ಕುಳಾಚಳಾಕೃತಿಯನೇಱಿ ಗಜೇಂದ್ರಮನಿಂದ್ರನಂತೆ ಬ ।
ರ್ಪಲಘುಪರಾಕ್ರಮಂ ದಶರಥಂ ಪರಿಪೂರ್ಣಜಗನ್ಮನೋರಥಂ ॥ ೧೦೮ ॥

ವನಧಿತರಂಗದಂತಿರೆ ತುರಂಗ ದಟಿಂ ಬರೆ ವಾಜಿ ರಾಜ ವ ।
ಲ್ಗನದಿನುರಸ್ಸ್ಥಲಂಬಿಡಿದು ಲಕ್ಷ್ಮಿಯ ಕೇಕರದಂತೆ ತೋರಮು ॥
ತ್ತಿನ ತಿಸರಂ ತೆಱಂಬೊಳೆಯೆ ಮಿಂಚಿನವೋಲ್ ಮಣಿಕುಂಡಲಾಂಶುಗಳ್ ।
ತೊನೆಯೆ ಕದಂಪಿನೊಳ್ ಮದನನಂತಿರೆ ಬರ್ಪವನಲ್ತೆ ಲಕ್ಷ್ಮಣಂ ॥೧೦೯॥

ಮ ॥ ತನಿಸೋಂಕಿಂ ತನಗೀಯೆ ಹರ್ಷಭರಮಂ ಲಜ್ಜಾಭರಾಕುಂಚಿತಾ ।
ನನೆ ವೈದೇಹಿ ತದೀಯ ಕುಂತಳ ಸಹಸ್ರಕ್ಕೆತ್ತು ತಿರ್ಯಗ್ವಿಳೋ ॥
ಕನಮಂ ಹೇಮ ವರೂಥದೊಳ್ ನೆಲಸಿ ನೇತ್ರಾನಂದಮಂ ಮಾಳ್ಪ ರೂ ।
ಪಿನ ಚೆಲ್ವಿಂ ಮದನಂಗೆ ಲಾಘವಮನಿತ್ತಾ ಬರ್ಪವಂ ರಾಘವಂ ॥ ೧೧೦ ॥

ಚಲ ನೀಲಾಚಲ ರತ್ನಕೂಟಮೆನೆ ಕಾಲ್ಗೋದಾನೆಯಂ ದೋರ್ಭುಜಂ ।
ಗ ಲತಾ ದಂಷ್ಟ್ರಿಕೆ ಕಣ್ಗಗುರ್ವಿಸುವಿನಂ ವಜ್ರಾಂಕುಶಂ ಮೌಕ್ತಿಕಾ ॥
ವಲಿ ವಕ್ಷಸ್ಸರಸೀಮೃಣಾಳಿಕೆ ಬೆಡಂಗಂ ಬೀಱೆ ಚಂದ್ರಾರ್ಕರಂ ।
ಗೆಲೆವಂದಾ ಬರುತಿರ್ಪವರ್ ಭರತಶತ್ರುಘ್ನರ್ ಪುರೋಭಾಗದೊಳ್ ॥ ೧೧೧ ॥

ಎಂದು ಪುರಜನ ಪರಿಜನಂಗಳೋರೊರ್ವರೊಳ್ ನುಡಿಯೆ ಪುರಮಂ ಪೊಕ್ಕು ಕರುಮಾಡದ ಮುಂದಣ ವಿವಾಹಮಂಡಪದ ಮುಂದೆ ವಾಹನಂಗಳನಿೞಿದು ಪುಣ್ಯ[1]ಪುಣ್ಯಾಂಗನಾಜನದ ತಳಿವ ಸಜಳ ಧವಳ ಕಳಮಾಕ್ಷತಂಗಳಿನಳಕ ವಲ್ಲರಿಯಂ ಕುಸುಮಿಸುತ್ತುಮೊಳಗಂ ಪುಗುವುದುಂ—

ಮ ॥ ಹರಿನೀಲ ಸ್ತಂಭಮಂ [2]ಜಾಗದ ಪಡಲಿಗೆಯುಂ ತುಂಗ ಭೃಂಗಾರಮುಂ ನೆ।
ಮ್ಮಿರೆ ಭಾಸ್ವದ್ಭಿತ್ತಿಯಂ ಸುತ್ತಿರೆ ಸುರುಚಿರ ಚಿತ್ರಂ ಹರಿದ್ರತ್ನ ಮಧ್ಯಾ ॥
ಜಿರಮಂ ಮುಕ್ತಾವಲೀ ರಂಗವಲಿ ಬಳಸೆ ಕರ್ಕೇತನ ದ್ವಾರ ಶಾಖಾಂ ।
ತರಮಂ ರತ್ನ ಸ್ಫುರತ್ತೋರಣಮೆಳಸೆ ಬೆಡಂಗಾದು[3]ದುದ್ವಾಹ ಗೇಹಂ ॥ ೧೧೨ ॥

ಕಂ ॥ ಸುರ ದಂಪತಿಗಳ ವಿದ್ಯಾ
ಧರ ದಂಪತಿಗಳ ನರೇಂದ್ರ ದಂಪತಿಗಳ ಕಿ ॥
ನ್ನರ ದಂಪತಿಗಳ ವಿದ್ಧಂ
ವಿರಾಜಿಸಿತ್ತದಱ ಪೊಳೆವ ಪಳಿಕಿನ ಕೇರೊಳ್ ॥ ೧೧೩ ॥

ಪುರು ಜಿನ ಚರಿತಂ ಭರತೇ
ಶ್ವರ ಚರಿತಂ ಸಗರ ಚಕ್ರವರ್ತಿಯ ಚರಿತಂ ॥
ಹರಿವಂಶ ವೀರಪುರುಷರ
ಚರಿತಂ ಬರೆದಿರ್ದುವಲ್ಲಿ ಕೆಲಕೆಲವೆಡೆಯೊಳ್ ॥ ೧೧೪ ॥

ಆಮೋದ ಮುದಿತ ಮಧುಕರ
ದಾಮಕದೊಳ್ ನೀಲರತ್ನ ದಾಮಂ ಮಲ್ಲೀ ॥
ದಾಮಕದೊಳ್ ಮುಕ್ತಾಫಲ
ದಾಮಂ ತಡವಾದುವೊಡನೆ ಮಣಿಮಂಡಪದೊಳ್ ॥ ೧೧೫ ॥

ಆಲಂಬಿತ ಮಣಿ ಘಂಟಾ
ಜಾಲಕದೆಡೆಯೆಡೆಯೊಳೆಬಲೆ ಕಟ್ಟಿದ ಮುಕ್ತಾ ॥
ಮಾಲಕೆಯಂ ನವ ವಿಚಕಿಲ
ಮಾಲಕೆಗೆತ್ತೆಳಸಿ ಸುೞಿವುವಳಿ ಕಳಭಂಗಳ್ ॥ ೧೧೬ ॥

ಮಂಗಳ ಗಾಯನಿಯರ ಗೀ
ತಂಗಳನುಪಹಾರ ಕುಸುಮ ಮಧುಪಾನ ವ್ಯಾ ॥
ಸಂಗದೊಳಿರ್ದೆಳದುಂಬಿಗ
ಳಿಂಗೊರಲಿಮ್ಮಡಿಸಿದತ್ತು ರಾಜಾಂಗಣದೊಳ್ ॥ ೧೧೭ ॥

1 ಪಣ್ಯಾಂಗನಾ. ಕ ಖ 2. ಪೊನ್ನದ. ಚ 3. ದಂತ್ಪಾಹ ಚ

ಕಂ ॥ ಪಳಿಕಿನ ಕಂಭಂಗಳ್ ಕ
ಣ್ಗೊಳಿಸುವ ಮಾಣಿಕದ ಸೊಡರ್ಗಳಿಂ ನಾಡೆಮನಂ ॥
ಗೊಳಿಸಿದುವು ಲಸಿತ ಭಸಿತೋ
ಜ್ಜ್ವಲಗಾತ್ರಂ ಸ್ಥಾಣು ನೊಸಲ ಕಣ್ದೋಱಿದವೋಲ್ ॥ ೧೧೮ ॥

ಅರುಣಮಣಿ ದೀಪ ರುಚಿಯಿಂ
ಪರಭಾಗಂಬಡೆದ ನೀಲರತ್ನ ಸ್ತಂಭಾಂ ॥
ತರದಬಲಾಪ್ರತಿಬಿಂಬಂ
ಸಿರಿ ನೆರ್ವಿಂದಳೆನಿಸಿದತ್ತು ಪೀತಾಂಬರನಂ ॥ ೧೧೯ ॥

ಚ ॥ ಉಗುಳ್ದಪುದಿಂದ್ರಚಾಪ ಲತೆಯಂ ನವರತ್ನ ವಿತಾನಮಾಡಿದ ।
ತ್ತಗುರುವ ಧೂಪಧೂಮ ಲತೆ ತುಂಬಿಯ ನೀಲದ ಮೆಯ್ಗೆ ಹಾಸ್ಯಮಂ ॥
ಪಗಲನಿರುಳ್ಗೆ ಮಾಣಿಕದ ದೀವಿಗೆ ಕೈಸೆಱೆಗೊಟ್ಟುದುತ್ಪತಾ ।
ಕೆಗಳನಿಲಂಗೆಮಾಡಿದುವು ಮಾರ್ಗ ನಿರೋಧಮನಾ ನಿವಾಸದೊಳ್ ॥ ೧೨೦ ।

ಆ ಮಂಟಪದ ಮಧ್ಯಪ್ರದೇಶದೊಳ್—

ಕಂ ॥ ಮರಕತ ಮಂಗಲ ವೇದಿಕೆ
ಧರಾಂಗನಾ ಕೇಶಬಂಧದಂತಿರೆ ಮುಕ್ತಾ ॥
ವಿರಚಿತ ರಂಗವಲಿ ಮನೋ
ಹರಮಾದುದು ತೊಳಗಿ ಪೊಳೆವ ತಲೆದುಡುಗೆಯವೋಲ್ ॥ ೧೨೧ ॥

ಪಸುರ್ವರಲ ಜಗಲಿಯೊಳ್ ರಂ
ಜಿಸಿದುದು ಚೆಂಬೊನ್ನ ಪಟ್ಟವಣೆ ಪಸುರೆಲೆಯಿಂ ॥
ಮುಸುಕಿದ ತಾವರೆಗೊಳದೊಳ್
ಪಸುರ್ಗಱಿದು ಮರಲ್ದರಲ್ದ ಪೊಂದಾವರೆವೋಲ್ ॥ ೧೨೨ ॥

ಎಳ ಅಡಕೆಯ ಗೊನೆಯಿಂ ಮಾ
ತುಳುಂಗದಿಂ ನಾರಿಕೇಳಫಲದಿಂ ದ್ರಾಕ್ಷಾ ॥
ಫಳದಿಂ ಕಾಂಚನ ಕದಳೀ
ಫಳದಿಂದೊಪ್ಪಿದುದು ವೇದಿಕಾಂತರ್ಭಾಗಂ ॥ ೧೨೩ ॥

ಮ ॥ ಬಿಸಸೂತ್ರ ತ್ರಿತಯಂ ಯವಾಂಕುರ ಕೃತ ಗ್ರೈವೇಯಕಂ ಪಲ್ಲವೋ ।
ಲ್ಲಸಿತಾದರ್ಶ ಸುದರ್ಶನೀಯಮಮಲ ಸ್ರಕ್ಸುಂದರಂ ಪಂಚರ ॥

ತ್ನ ಸಮುಸ್ತೌಷಧಿ ಗರ್ಭಮಕ್ಷತ ಯುತಂ ದೂರ್ವಾಂಚಿತಂ ಸರ್ವಥಾ ।
ನ್ಯ ಸಮುತ್ತಂಭಿತ ಪೂರ್ಣ್ಣ ಕುಂಭಮೆಸೆದತ್ತಾವೇದಿಕಾ ಮಧ್ಯದೊಳ್ ॥ ೧೨೪ ॥

ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣ್ಣ ಕ್ರೌಂಚದೊಳ್ ರೋಚನಂ ।
ಘನ ಹಾರೀತಕ ಹಂಸಿಯೊಳ್ ಹರಿತ ದೂರ್ವಂ ರಾಜತ ದ್ರೋಣಿಯೊಳ್ ॥
ಘನಸಾರಂ ಹರಿನೀಲ ಶುಕ್ತಿಕೆಗಳೊಳ್ ಕಸ್ತೂರಿ ಮಾಣಿಕ್ಯ ಭಾ ।
ಜನದೊಳ್ ಕುಂಕುಮ ಪಂಕಮೇಂ ಮೆಱೆದುವೋ ಮಾಂಗಲ್ಯ ಸಾಕಲ್ಯಮಂ॥

ಕಂ ॥ ಮಿಸುಗುವ ಕೆಂಪಳಿರಂ ದ್ವಿಗು
ಣಿಸೆ ಮೇಗೊಗೆವಂಶುಮಾಲೆ ವೇದಿಕೆಯೊಳ್ ರಂ ॥
ಜಿಸಿದುವೆಳನೇಸಱಿಂ ನೆನೆ
ಯಿಸುವ ಚತುಷ್ಕೋಣ[1] ಶೋಣ ಮಣಿಕಲಶಂಗಳ್ ॥ ೧೨೬ ॥

ಆ ಸಕಲ ಮಂಗಲದ್ರವ್ಯ ಸಂಸೇವ್ಯಮಾನ ಮಣಿವೇದಿಕಾ ಮಧ್ಯ ವಿಶಾಲ ಕಲಧೌತ ಪೀಠದೊಳ್ ರತಿಯುಂ ರತಿಪತಿಯುಮಿರ್ಪವೋಲ್ ದಂಪತಿಗಳಿರ್ದರಲ್ಲಿ ಪೂರ್ವಭಾಗದೊಳ್ ದಶರಥನಿಂದ್ರನಂದದಿನುಪೇಂದ್ರ ಭರತ ಶತ್ರುಘ್ನ ಸಮನ್ವಿತನುಮನೇಕ ಮಕುಟಬದ್ಧ ಪರಿವೃತನುಮಾಗಿರ್ದಂ; ಮತ್ತಮಪರಭಾಗದೊಳಪರಾಜಿತಾ ಮಹಾದೇವಿ ಸುಮಿತ್ರೆ ಸುಪ್ರಭೆ ಕೈಕೆವೆರಸನಂತ ಸಾಮಂತ ಸೀಮಂತಿನಿಯರ ನಡುವೆ ಸುರ ಪುರಂಧ್ರಿಯರ್ಬಳಸಿದಿಂದ್ರಾಣಿಯಂತೆ ಮಹಾ ಮಹಿಮೆವೆತ್ತಿರ್ಪುದುಮಿತ್ತಲ್—

ಉ ॥ ರನ್ನದ ಬಾಯಿನಕ್ಕೆ ಪಲವಂದದ ಚಂದದ ಸೀರೆಗೆನ್ನವ ।
ರ್ತನ್ನವರೆನ್ನದಿತ್ತೊಸಗೆಗೀ ನೆಲದೊಳ್ ಪೊಱಗಾರುಮಿಲ್ಲೆನಲ್ ॥
ಮನ್ನಿಸಿ ವೈಮೆಯಂ ಮೆಱೆದಳಂದು ವಿದೇಹಿ ವಿವಾಹ ಗೇಹದೊಳ್ ।
ಸನ್ನಿದಮಾದ ಕಲ್ಪಲತೆಯೋ ಸುರಧೇನುವೊ ಪೇೞಮೆಂಬಿನಂ ॥ ೧೨೭ ॥

ಅಂತಪಾರಪುಣ್ಯ [2]ಪುಣ್ಯಾಂಗನಾಜನಕ್ಕೆ ಪಂಚರತ್ನದುಪಾಯನಮನಿತ್ತು ಪಳಂಚಿನುಂಗುರದ ನೂಪುರದ ನೂಲ ತೊಂಗಲ ಸಂಕಲೆಯ ಪಿಂಡುಗಂಕಣದ ಕಲಕಲ ನಿನದಮತನು ಚಾಪ ಲತಾ ಟಂಕಾರ ಶರಮೋಕ್ಷ ಹೂಂಕಾರದಂತೆ ಕಿವಿಸದ್ದಂ ಕಿಡಿಸೆ, ಕಡೆಗಣ್ಣ ಕಾಂತಿ ಕುಡಿಮಿಂಚಿನ ಗೊಂಚಲಂತೆ ಸಂಚಲಿಸೆ, ಪೆಂಡವಾಸದ ವಿಲಾಸಿನೀ ಜನಂಗಳಂಗಜ ಜಂಗಮ ಲತೆಯಂ ಸುತ್ತಿದೆಳಲತೆಗಳೆನೆ ವಿವಿಧೋಪಾಯನ ರತ್ನ ಪಟಲಿಕೆಗಳಂ ಪಿಡಿದೊಡನೆ ಬರೆ ಬಂದು—

---

1. ಪೂರ್ಣ. ಚ.
2. ಪಣ್ಯಾಂಗನಾ. ಕ. ಖ. ಗ.

ಉ ॥ ಕತ್ತುರಿಬೊಟ್ಟನಿಟ್ಟು ಬಿಡುಮುತ್ತಿನ ಸೇಸೆಯನಿಕ್ಕಿ ಮಾಲೆವೂ ।
ವೆತ್ತಿ ವಿಚಿತ್ರ ವಸ್ತ್ರ ಮಣಿಭೂಷಣಮಂ ಮಣಿಭಾಜನಂಗಳಿಂ ॥
ದಿತ್ತು ವಿದೇಹಿ ಸಾರ ಘನಸಾರದ ರನ್ನದ ಬಾಯಿನಂಗಳಿಂ ।
ಚಿತ್ತ ವಿಕಾಸಮಂ ಪಡೆದಳಂದಪರಾಜಿತೆಗಂ ಸುಮಿತ್ರೆಗಂ ॥ ೧೨೮ ॥

ಆ ಸಮಯದೊಳ್ ಜನಕನಭಿಜನ ಸನಾಭಿಜನ ಸಮನ್ವಿತಂ ಗಣಕ ಗಣ ಪುನಃಪುನರುಚ್ಚರಿತ ಪುಣ್ಯಾಹ ಪ್ರಶಸ್ತ ರವದೊಡನೆ ಅಗಣ್ಯ ಪುಣ್ಯ ಪುಣ್ಯಾಂಗನಾ ಜನದಾಶೀರ್ವಾದನಾದವೊದವೆಯುಂ, ಮಾಂಗಲ್ಯ ಗೀತ ಮಧುರ ಧ್ವನಿಗಳೊಡನೆ ಮಂಗಲ ಪಾಠಕ ಪಠನ ಧ್ವನಿಗಳುಣ್ಮಿ ಪೊಣ್ಮೆಯುಂ, ರಘುಕುಲ ರಾಜ ಭವನ ಕಲಶೋದ್ಧರಣಮೆ[1]ನಿಸಿ ಶುಚಿ ಸುರಭಿ ಸಲಿಲ ಪೂರ್ಣ ಸುವರ್ಣ ಕಲಶಮನೆತ್ತಿ—

ಮ ॥ ಜಗತೀ ಜಂಗಮ ಕಲ್ಪವೃಕ್ಷಮಿದೆ ಕೈವಂದತ್ತೆನಲ್ ಬಾಹು ಶಾ ।
ಖೆಗಳೊಳ್ ಪೊಂಗಳಸಂ ಮನಂಗೊಳಿಸೆ ಭೂಪಂ ತನ್ನ ಸಂತಾನ ವೃ ॥
ದ್ಧಿಗೆ ಪೊಯ್ನೀರೆಱೆವಂತೆ ಹರ್ಷ ಪುಲಕಂ ಕೈಗಣ್ಮೆ ಹರ್ಷಾಶ್ರು ಕೈ ।
ಮಿಗೆ ಕೈನೀರೆಱೆದಂ ಪಳಂಚೆ ದೆಸೆಯಂ ಮಾಂಗಲ್ಯ ತೂರ್ಯ ಸ್ವನಂ ॥ ೧೨೯ ॥

ಅಂತು ಪಾಣಿಗ್ರಹಣಂಗೆಯಿಸುವುದುಂ—

ಕಂ ॥ ತೆಂಕಣ ಗಾಳಿಯ ಸೋಂಕಿನೊ
ಳಂಕುರಿಸಿದ ಚೂತಲತೆಯವೋಲ್ ಕೆಂದಳಮಂ ॥
ಸೋಂಕೆ ಬಲ ಕರತಳಂ ಪುಳ
ಕಾಂಕುರವೊದವಿದುವು ಜಾನಕಿಯ ತನುಲತೆಯೊಳ್ ॥ ೧೩೦ ॥

ಅಪಮಾನಿಸಿದಂ ಬಾಲಾ
ತಪಮೆಳಸಿದ ಪುಂಡರೀಕ ಷಂಡದ ಸೊಬಗಂ ॥
ಚಪಲಾಕ್ಷಿಯ ಕೋಮಳ ಪಾ
ಣಿಪಲ್ಲವ ಸ್ಪರ್ಶ ಹರ್ಷದಿಂ ರಘುರಾಮಂ ॥ ೧೩೧ ॥

ಅತಿ ಲಲಿತಾಕೃತಿಯುಂ ದಂ
ಪತಿಯಂ ನೋಡಿದುದು ಪುರಜನಂ ನೋಡುವವೋಲ್ ॥
ಶತಮುಖನಂ ಶಚಿಯಂ ರತಿ
ಪತಿಯಂ ರತಿಯಂ ಹಿಮಾಂಶುವಂ ರೋಹಿಣಿಯಂ ॥ ೧೩೨ ॥

ಅಂತು ನೆರೆದು ನೋೞ್ಪಾಗಳ್—

1. ನಿಸಿದ ರಾಮಚಂದ್ರಂಗೆ ಸುರುಚಿರ. ಗ. ಘ.

ಕಂ ॥ ಅನುವಿಸಿದುದು ರಜತಾಚಲ
ದನರ್ಘ್ಯ ಮಣಿ ವಿಕಟ ಕೂಟಮಂ ದಶರಥರಾ ॥
ಮನ ಮಣಿಮಯ ಮಕುಟಂ ಕಾ
ಮನ ಬಿಲ್ಲಂ ಬೀಱೆ ಬೇಱೆ ನಿಜದೀಧಿತಿಗಳ್ ॥ ೧೩೩ ॥

ಮರಕತ ಮಣಿ ಕುಂಡಲ ರ
ಶ್ಮಿರೇಖೆಯಿಂ ಗಂಡ ಮಂಡಳಂ ಸೇವಾಳಂ ॥
ಬೊರೆದ ಸಿತಕಮಲದಂತಿರೆ
ಕರಮೆಸೆದಂ ನೃಪಕುಮಾರ ಚೂಡಾರತ್ನಂ ॥ ೧೩೪ ॥

ಜಯಲಕ್ಷ್ಮಿಯ ಮಣಿಪೀಠಂ
ಭಯಾನತ ಕ್ಷತ್ರ ವಜ್ರಪಂಜರಮಿದೆನಲ್ ॥
ನಯನೋತ್ಸವಮಂ ಪಡೆದುವು
ಜಯಧೀರನ ಬಾಹುಯುಗಲದಂಗದ ಯುಗಳಂ ॥ ೧೩೫ ॥

ಉಭಯ ಪ್ರಕೋಷ್ಠ ಶಾಖಾ
ಸುಭಗ ಧನುರ್ಗುಣ ಕಿಣಂಗಳುಂ ಮಣಿಮುದ್ರಾ ॥
ಪ್ರಭೆಯುಂ ಗೆಲೆವಂದುವು ಬಾ
ಹು ಭುಜಂಗನ ಕೊರಲ ಕಱೆಯ ಫಣಮಣಿ ರುಚಿಯಂ ॥ ೧೩೬ ॥

ಜಳ ಬುದ್ಬುದ ಮಾಲೆಗಳವಿ
ಚಳಂಗಳಿಂಗಡಲ ಮಡುವಿನೊಳ್ ಪೊಳೆವವೊಲೇಂ ॥
ಪೊಳೆದುವೊ ನಿಸ್ತುಲ ಮುಕ್ತಾ
ವಳಿಗಳ್ ಹಲಧರ ವಿಶಾಲ ವಕ್ಷಸ್ಸ್ಥಲದೊಳ್ ॥ ೧೩೭ ॥

ಉ ॥ ಪಿಂಗಿದುದಂಗಜಂಗೆ ಕಡುಗಾಡಿಯ ಗರ್ವಮಪೂರ್ವಸೃಷ್ಟಿ ಚೆ ।
ಲ್ವಿಂಗಿನಿ[1]ತೆಡ್ಡಮಪ್ಪರೆ ಫಣೀಂದ್ರ ಸುರೇಂದ್ರ ಕುಮಾರರೆಂದು ಕ ॥
ಣ್ಪಿಂಗದೆ ಪತ್ತೆ ಚಿತ್ತದೊಡನೀಕ್ಷಿಸಿದತ್ತು ಪುರಾಂಗನಾ ಜನಂ ।
ಮಂಗಳ ಭೂಷಣ ಪ್ರಚಯದಿಂದಭಿರಾಮನೆನಿಪ್ಪ ರಾಮನಂ ॥ ೧೩೮ ॥

ರಾಜಕುಮಾರರಿರ್ಕೆ ಸುರರಾಜ ಕುಮಾರಕರೊಳ್ ಮನುಷ್ಯ ಕ ।
ನ್ಯಾ ಜನಮಿರ್ಕೆ ಮಿಕ್ಕ ಸುರಕನ್ಯೆಯರೊಳ್ ದೊರೆಯಪ್ಪರಾರೊ ಪೇ ॥

---

1. ತಪ್ಪುಪಪ್ಪುರೆ. ಚ.

ಟೀ ಜಿತಕಂತುಗೀ ಜಿತ ಮನೋಭವಕಾಂತೆಗೆನುತ್ತು ಮಂಗನಾ ।
ರಾಜಿ ನಿರೀಕ್ಷಿಸಿತ್ತು ರಘುನಂದನನಂ ಜನಕಾತ್ಮಜಾತೆಯುಂ ॥ ೧೩೯ ॥

ಚ ॥ ತೊಡವುಗಳೀ ಸರೋಜದಳ ನೇತ್ರೆಯ ಮೆಯ್ವೆಳಗಿಂದುಪಾಶ್ರಯಂ ।
ಬಡೆದುವು ನೋಟ್ಪರುಮ್ಮಳಿಸುವಂತಿರೆ ರತ್ನವಿಭೂಷಣಂಗಳ ॥
ರ್ದೆಡೆಯ ವಿಳಾಸಮುಂ ಮಱಿಸಿದಪ್ಪುವೆನಲ್ ತೊಡವಾಕೆಗೊಪ್ಪಮಂ ।
ಪಡೆವೆಡೆಗಲ್ಲಮಾ ವಧುಗೆ ಮಂಗಳಕಾರಣಮಲ್ತೆ ಭೂಷಣಂ ॥ ೧೪೦ ॥

ಎಂದು ಪುರಜನಂಗಳತಿ ಕುತೂಹಲದಿನವಲೋಕಿಸುತ್ತಿರ್ಪುದುಮಾ ವಿವಾಹ ಮಂಗಲ ಮಹೋತ್ಸವ ಮಹಾಮಹಿಮೆಯೊಳ್—

ಮ ॥ ಸ್ರ ॥ ಪೆಱರಾರಿಂತೀವರೆಂಬೀ ಜನದ ಕಳಕಳಂ ಪೊಣ್ಮೆ ಸಾಮ್ರಾಜ್ಯಚಿಹ್ನಂ ।
ಪೊಱಗಾಗತ್ಯಂತ ವಸ್ತ್ರಾದಿಗಳನಖಿಲ ಲೋಕಕ್ಕೆ ಸಂಕಲ್ಪವರ್ಷಂ ॥
ಕಱೆದತ್ತೆಂಬಂತು ಧಾತ್ರೀಪತಿ ಜನಕನುದಾತ್ತಂ ಮಹೋತ್ಸಾಹಚಿತ್ತಂ ।
ನೆಱೆದತ್ತಿಲ್ಲೆನ್ನ ದಾನಕ್ಕಖಿಲ ಜನಮೆನುತ್ತುಂ ಮೊಗಂನೋಡದಿತ್ತಂ ॥ ೧೪೧ ॥

ಅಂತು ಜನಕಂ ಬೀಯದ ಚಾಗದ ಪೆರ್ಮೆಯುಂ ಮೆಱೆವುದುಂ ರಾಮ ಚಂದ್ರಂ ಚಂದ್ರೋದಯದ ಸಮುದ್ರದಂತೆ ಪೆರ್ಚುವಡೆದು—

ಮ ॥ ಪಡೆದಂ ಶಾಶ್ವತಲಕ್ಷ್ಮಿಯುಂ ಪರಹಿತ ವ್ಯಾಪಾರಮಂ ಪಾಲಿಸಲ್ ।
ಪಡೆದಂ ಪನ್ನಗರಾಜ ದಿವ್ಯ ಧನುವಂ ಭೂಚಕ್ರಮಂ ರಕ್ಷಿಸಲ್ ॥
ಪಡೆದಂ ದರ್ಪಕ ರೂಪ ದರ್ಪಮನದಿರ್ಪಲ್ ಮೂರ್ತಿಯುಂ ಕೀರ್ತಿಯುಂ ।
ಪಡೆದಂ ಕೀಟ್ಪಡಿಸಲ್ ಸುಧಾಜಲಧಿಯುಂ ಸಾಹಿತ್ಯವಿದ್ಯಾಧರಂ ॥ ೧೪೨ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಳಚಂದ್ರ
ಮುನೀಂದ್ರ ಚರಣ ನಖ ಕಿರಣ ಚಂದ್ರಿಕಾಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಸೀತಾ ಸ್ವಯಂವರ ವರ್ಣನಂ
—ಪಂಚಮಾಶ್ವಾಸಂ—

# ಷ ಷ್ಠಾ ಶ್ವಾ ಸಂ

ಕಂ ॥ ಶ್ರೀರಾಮಂ ವಿಶದ ಯಶ
ಶ್ರೀರಾಮಾ ರಮಣನರ್ಥಿಜನತಾ ಸುರಭೂ ॥
ಜಾರಾಮಂ ಧರ್ಮೋದ್ಯಮ
ಧೌರೇಯನುದಾತ್ತ ಚಿತ್ತನಭಿನವಪಂಪಂ ॥ ೧ ॥

ಅಂತು ರಾಮಲಕ್ಷ್ಮಣರೊಳುದಿತೋದಿತಮಾದಗಣ್ಯ ಪುಣ್ಯ ಪ್ರಭಾವಮಂ ಕಂಡು—

ಮ ॥ ಸಿರಿಯುಂ ಪ್ರೈಮೆಯುಮಾದುವಗ್ರಜರೊಳಾಯ್ತಿಲ್ಲೆನ್ನೊಳೆಂಬೇವದಿಂ ।
ಭರತಂ ಲೋಭರತಂ ವಿಷಾದಭರ ತಂದ್ರೀಭೂತ ಚಿತ್ತಂ ತಪೋ ॥
ಭರ ತೃಷ್ಣಾ[1]ಪರನಪ್ಪುದಂ ತಿಳಿದು ತದ್ವೃತ್ತಾಂತಮಂ ಕೈಕೆ ಮೋ ।
ಹರಸಂ ಕೈಮಿಗೆ ಕಾದಲಂಗೆ ಪತಿಗಂದಿಂತೆಂದಳೇಕಾಂತದೊಳ್ ॥ ೨ ॥

ಕಂ ॥ ಭರತನ ವದನಾಂಭೋಜಂ
ಕೊರಗಿದುದು ಮನಸ್ಸರೋಜದೊಡನೆತ್ತಾನುಂ ॥
ಪರಿಣಯನೋತ್ಸವ ಚಿಂತಾ
ಭರಮಾತನ ಬಗೆಗೆ ಬಂದುದಾಗಲಿವೇಟ್ಕುಂ ॥ ೩ ॥

ಕನಕಂಗಂ ಸುಪ್ರಭೆಗಂ
ಜನಿಯಿಸಿದ ವಿಶಾಲನೇತ್ರೆ ಕನಕಪ್ರಭೆಯಂ ॥
ಜನನಾಥ ಮದುವೆಮಾಡಾ
ತನನಿರದೆ ತೊಡರ್ಚು ಮೋಹಪಾಶದ ತೊಡರೊಳ್ ॥ ೪ ॥

ಎನೆ ಮನದೆಕೊಂಡು ಜನಕನುಮಂ ಕನಕನುಮಂ ಬರಿಸಿ—

ಕಂ ॥ ಅನುಬಂಧ ಪರಂಪರೆಯಂ
ಜನಿಯಿಸಲೆಮಗಟ್ಟಿಯಾದುದೀವುದು ನಿಜನಂ ॥
ದನೆಯನನುರೂಪೆಯಂ ಮ
ತ್ತನಯಂಗೆನೆ ದಶರಥಂಗೆ ಕನಕಂ ನುಡಿದಂ ॥ ೫ ॥

---

1. ಭರನಪ್ಪುದಂ. ಕ. ಖ. ಚ.

ಕಂ ॥ ಮುನ್ನಮೆ ಭರತಂಗೀವೆಂ
ಕನ್ನೆಯನೆಂಬಱಿವು ಮನದೊಳಿರೆ ಮನದಱಿವಂ ॥
ಬಿನ್ನವಿಸಲಿರ್ದೆನಾ ಬೆಸ
ನನ್ನಿಮ್ಮಡಿ ಬೆಸಸೆ ಬಯಕೆ ಕೂಡಿದುದೀಗಳ್ ॥ ೬ ॥

ಎಂದಂದಿನ ದಿನದೊಳೆ ಮೌಹೂರ್ತಿಕ ನಿರೂಪಿತ ಶುಭಮುಹೂರ್ತದೊಳ್—

ಕಂ ॥ ಇನಿವಿರಿದು ವಿಭವಮಾದುದೆ
ಜನಕ ತನೂಭವೆಯ ಮದುವೆಯೊಳಮೆಂಬಿನೆಗಂ ॥
ಕನಕಪ್ರಭೆಯುಂ ಪದೆಪಿಂ
ಕನಕಂ ಭರತಂಗೆ ಮದುವೆಮಾಡಿದನಾಗಳ್ ॥ ೭ ॥

ಆ ವಿವಾಹ ವಿಭವದೆಸಕಕ್ಕಮವರ ಭುಜಬಲದ ಮಸಕಕ್ಕಂ ವಿದ್ಯಾಧರಮಹತ್ತರಂ ವಿಸ್ಮಿತಚಿತ್ತನಾಗಿ ಮಿಥಿಲೆಯಿಂ ರಥನೂಪುರಚಕ್ರವಾಳಪುರಕ್ಕೆ ಬಂದು ನಿಜಪತಿಯನಿಂದುಗತಿಯಂ ಕಂಡು—

ಚ ॥ ಗಣನೆಗಳುಂಬಮಾಗೆ ಮೊದಲಿಂ ತುದಿಯೆಯ್ದೆ ತಗುಳ್ದು ರಾಮಲ ।
ಕ್ಷ್ಮಣರ[1] ಮಹಾಪ್ರಭಾವಮನದಂ ನೆರೆ ಬಣ್ಣಿಸೆ ಕೇಳ್ದು ಖೇಚರಾ ॥
ಗ್ರಣಿ ಕಿಱಿದಾಯ್ತು ನಮ್ಮದಸೆ ಕೇವಲರಲ್ಲರವರ್ ದಿಟಕ್ಕೆ ಕಾ ।
ರಣ ಪುರುಷರ್ ತ್ರಿಖಂಡ ಭರತೋರ್ವಿಗೆ ವಲ್ಲಭರಾಗದಿರ್ಪರೇ ॥ ೮ ॥

ಎಂದು ಬಗೆಬೆದಱಿ ವಿದ್ಯಾಧರಾಧಿರಾಜನುಷಸ್ಸಮಯದ ರಾಜಮಂಡಲದಂತೆ ನಿಸ್ತೇಜನಾಗಿರ್ಪುದುಮಾ ಖಚರವಲ್ಲಭ ತನೂಭವಂ ಪ್ರಭಾಮಂಡಲಂ ಮನಃಕರಂಡಕದೊಳಾ ಕನ್ಯಾರತ್ನಮಂ ತಳೆದು—

ಕಂ ॥ ಅಯ್ದು ಮಲರ್ಗಣೆಗಳಂ [2]ಕಡು
ಕೆಯ್ದಿಸೆ ಮದನಂ ವಿಯೋಗಿ ಯೋಗಿಯ ತೆಱದಿಂ ॥
ದಯ್ದುಂ ವಿಷಯ ಸುಖಕ್ಕಂ
ಮೆಯ್ದೆಗೆದಾಕೆಯನೆ ಬಿಡದೆ ಜಾನಿಸುತಿರ್ದಂ ॥ ೯ ॥

ಅಂತು ಕನ್ಯಾಸಕ್ತಿಯಿಂ ಕನ್ಯಾಸಕ್ತನಾದಾದಿತ್ಯನಂತೆ ಪ್ರಭಾಮಂಡಲಂ ಹತಪ್ರಭಾಮಂಡಲನಾಗಿ ವಸಂತಧ್ವಜನೆಂಬ ಸಹಚರಂಗೆ ಸೀತಾ ವಿರಹದಿಂದಾದ ತನ್ನ ಮನೋವಿಷಾದಮನಱಿಪಿ—

---

1. ಮಹತ್ತ್ವಮಂ ಮಹಿಮೆಯಂ. ಕ. ಖ. ಗ. ಘ. 2. ಕಡಿ.

ಕಂ ॥ ಆರಮಣಿಯಧರಮಣಿಯ ಸು
ಧಾರಸದಿಂದಲ್ಲದೆನ್ನ ಮನಸಿಜ ತಾಪಂ ॥
ತೀರದು ತೀರ್ಚುರ್[1]ವುದೆನ್ನ ಮ
ನೋರಥಮನಿದರ್ಕೆ ನೀನೆ ಸಖ ಸಾರಥಿಯೈ ॥ ೧೦ ॥

ಎಂಬುದುಮಾತನ ಕೆಲದೊಳಿರ್ದ ಬೃಹತ್ಕೇತುವೆಂಬ ವಿದ್ಯಾಧರನಿಂತೆಂದಂ—

ಉ ॥ ಪೋದುವು ನಮ್ಮಬಿಲ್ಗಳಿರಡುಂ ಜನಕಾತ್ಮಜೆಗಗ್ನಿಸಾಕ್ಷಿಯಿಂ ।
ದಾದುದು ರಾಮನಾಳ್ಮದುವೆ ಬಿಲ್ದೆಱೆದೆತ್ತು ಬರ್ದುಂಕೆ ಪುಣ್ಯದಿಂ ॥
ಪೋದ ಮಹತ್ತರಂ ಮಗುಟ್ದಿನಾಕೆಯ ಪಂಬಲೊಳಪ್ಪುದೇಂ ರಣಾ
ಸ್ವಾದನ ಲಂಪಟರ್ ನೆರೆದು ಕಾದುವಮಪ್ಪೊಡೆ ರಾಮಲಕ್ಷ್ಮಣರ್ ॥ ೧೧ ॥

ಎನಲೊಡಂ—

ಕಂ ॥ ಪುರ್ವಿನ ಗಂಟುಂ ಕಣ್ಣೊಳ್
ಪರ್ವಿದ ಕಿಸುಸೆರೆಗಳುಂ ಕಪೋಲ ಸ್ಥಲದೊಳ್ ॥
ಕೊರ್ವಿದ ಬೆಮರ್ವನಿಯುಂ ಕರ
ಮರ್ವಿಸೆ ಮುನಿಸಿಂ ಕುಮಾರನಂದಿಂತೆಂದಂ ॥ ೧೨ ॥

ಉ ॥ ಮಾನವರೆನ್ನೊಳಯ್ಯ ಕಲಿಗಳ್ ರಣಕೇಳಿಗೆ ಸಾಲ್ವರೆಂಬಿದಂ ।
ನೀನುಱಿ ರಾಮಲಕ್ಷ್ಮಣರನಶ್ರಮದಿಂ ಬೆದಱಿಟ್ಟ ತಂದಪೆಂ ॥
ಜಾನಕಿಯಂ ಕುಲಾಗತ ಧನುರ್ಯುಗಳಂಬೆರಸೆಂದು ಕೇಱಿ ಪಂ
ಚಾನನದಂತೆ ಗರ್ಜಿಸಿ ವಿಮಾನಮನೇಱಿದನಾಕುಮಾರಕಂ ॥ ೧೩ ॥

ಚ ॥ ಕುಲಮದವೊಂದು ರೂಪಮದವೊಂದು ವಯೋಮದವೊಂದು ತನ್ನದೋ ।
ರ್ಬಲಮದವೊಂದು ಜಾತಿಮದವೊಂದು ಕಲಾಮದವೊಂದು ದೇವತಾ ॥
ಬಲಮದವೊಂದು ರಾಜ್ಯಮದವೊಂದಿನಿತಲ್ಲದೆ ಬೇಱೆ ರಾಗಮು ।
ಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಡ ಮುಂದುಗಾಣ್ಬರೇ ॥ ೧೪ ॥

ಅದಱಿನಾ ಮದಾ[2]ವಿಲಂಬಲನನಬಲನಂ ಬಗೆವಂತೆ ಬಗೆದು ಕತಿಪಯ ಖಚರ ಪರಿಜನಂಬೆರಸು ಗಗನಮಾರ್ಗದಿಂ ಪೋಗುತ್ತುಂ ದಿಗವಲೋಕನಂಗೆಯ್ದು ತನ್ನ ಮುನ್ನಿನ ಜನ್ಮದೊಳ್ ಕುಂಡಲ ಮಂಡಿತನಾಗಿರ್ದಂದಿನ ವಿದಗ್ಧ ನಗರಮಂ ಕಾಣ

---

1. ಪೆಸೆನ್ನ. ಚ. 2. ವಲಂಬನನವರನಬಲರಂ. ಘ.

ಲೊಡಂ ಜಾತಿಸ್ಮರನಾಗಿ ಮೂರ್ಛೆಗೆ ಸಲ್ವುದುಮೊಡ[1]ನೆ ವಿಯಚ್ಚರರಾತನಂ ರಥ ನೂಪುರಚಕ್ರವಾಳಪುರಕ್ಕಿಂದುಗತಿ ಖಚರ ಚಕ್ರವರ್ತಿಯ ಕೆಲಕ್ಕೆ ತರ್ಪುದುಂ—

ಕಂ ॥ ಘನಸಾರ ಸಲಿಲಮಂ ಚಂ
ದನ ರಸಮಂ ತಳಿದು ಬೀಸೆ ಬಿಜ್ಜಣಿಗೆಯ ತ ॥
ಣ್ಣನೆ ತೀಡುವೆಲರ ತೀಟದಿ
ನಿನಿಸಾನುಂ ತಡೆದು ಮೂರ್ಛೆಯಿಂದೆಚ್ಚಿತ್ತಂ ॥ ೧೫ ॥

ಆಗಳಾ ವಿಯಚ್ಚರಾಧಿಪತಿ ಕುಮಾರನ ಮುಖಾರವಿಂದಮಂ ನೋಡಿ—

ಕಂ ॥ ಜನಕಜೆಯಿಂ ನೂರ್ಮಡಿ ಮಿಗಿ
ಲೆನಿಪ್ಪ ಕಡುಚೆಲ್ವವೆತ್ತ ಖೇಚರ ಕನ್ಯಾ ॥
ಜನದೊಳ್ ವಿವಾಹ ಮಂಗಲ
ಮನೊಡರ್ಚುವೆನವ್ವ ಬಿಸುಡು ಮನದುಮ್ಮಳಮಂ ॥ ೧೬ ॥

ಎಂಬುದುಂ ಪ್ರಭಾಮಂಡಲಂ ಕಿಂಚಿದುನ್ನಮಿತ ಕಂಧರನಿಂದುಗತಿಯ ವದ ನೇಂದುವಂ ನೋಡಿ ಮುಕುಳಿತ ಕರ ಕಮಲನೆಂದನೆನ್ನ ಮೂರ್ಛಾಪ್ರಪಂಚಕ್ಕಿದು ನಿಮಿತ್ತವಲ್ತೀ ಪೋದ ಭವದೊಳಾಂ ಪ್ರತಾಪಸಿಂಹನೆಂಬ ದೇಶಾಧೀಶಂಗೆ ಕುಂಡಲ ಮಂಡಿತನೆಂಬೆನಾಗಿ ಪುಟ್ಟಿ ತಂದೆಗವಿಧೇಯನಾಗಿ ಪೋಗಿ—

ಕಂ ॥ ಬಿಟ್ಟಜನನೆನಗೆ ಪಾಪದ
ಬಟ್ಟೆಯೆ ಪೆರ್ವಟ್ಟೆಯಾಗೆ ನಾಡಂ ಬೀಡಂ ॥
ಸುಟ್ಟುಱಿದು ಕಟ್ಟೆ ಕವರ್ದಾಂ
ಕಟ್ಟಾಳ್ತನದಿಂ ವಿದಗ್ಧ ನಗರದೊಳಿರ್ದೆಂ ॥ ೧೭ ॥

ಎನಗರಸಿ ಮಾಡಿದೆಂ ಕಪಿ
ಲನೆಂಬನಾಪುರದೊಳಿರ್ಪನೊರ್ವಂ ದ್ವಿಜನಾ ॥
ತನಪೆಂಡತಿಯಂ ದರ್ಪಾಂ
ಧನೆನಾಡದ ಗೊಡ್ಡಮೇನುಮಿಲ್ಲೆಂಬಿನೆಗಂ ॥ ॥ ೧೮ ॥

ಅಂತಿರ್ಪುದುಂ—

---

1. ನೆಯು. ಕ. ಖ. ಗ.

ಕಂ ॥ ಅನರಣ್ಯನ ಪಡೆವಳ್ಳಂ
ಮುನಿದಿಱಿದೋಡಿಸಿದೊಡೋಡಿ ಪರ ಮಂಡಲದೊಳ್ ॥
ಜಿನಮುನಿ ಮುಖ್ಯಂ ಕುಡೆ ಪಡೆ
ದೆನಣುವ್ರತಮಂ ವಿನೇಯಜನ ಸಮ್ಮತಮಂ ॥ ೧೯ ॥

ಅಂತಾಮಾರ್ಗಮಂ ಪತ್ತುವಿಡದೆ ನಡೆದು ಜೀವಿತಾವಧಿಯೊಳ್ ದೇವಗತಿ ವಡೆದಾನುಮೆನ್ನ ದೇವಿಯುಮಾ ದೇವಲೋಕದಿಂ [1]ಬೞಿಲ್ಚಿ ಬಂದಿಲ್ಲಿ ಜನಕನ ಮಹಾ ದೇವಿಯಪ್ಪ ವಿದೇಹಿಯ ಗರ್ಭದೊಳವಳ್ಗಳಾಗಿ ಪುಟ್ಟಿ ಬಳೆವುದುಮಾಸಮಯದೊಳೆನ್ನ ಮುನ್ನಿನ ಪಗೆವನಪ್ಪ ಕಪಿಳಂ ದೇವಗತಿವಡೆದೆನ್ನಂ ಪಿಡಿದುಯ್ದು ಕೊಲಲೊಡರ್ಚಿ ಕಾಣಲೊಡಂ ಕರುಣಿಸಿ ತನ್ನ ಮಣಿಕುಂಡಲಮನೆನ್ನ ಕಿವಿಯೊಳಿಟ್ಟು ಪರ್ಣಲಘು ವಿದ್ಯೆಯಿಂ ನಿಮ್ಮ ತಲ್ಪದೊಳಿರಿಸಿ ಪೋಗೆ ದೇವರೆನ್ನಂ ಪಿರಿಯರಸಿಗೆ ದಯೆಗೆಯ್ದು ಕೊಂಡಾಡಿ ನಡಪಿ ಯುವರಾಜ ಪದವಿಯಂ ದಯೆಗೆಯ್ದಿರಾನುವೆನ್ನ ತಂಗೆಯಪ್ಪುದ ನಱಿಯದೆ ಸೀತಾದೇವಿಗಾಟಿಸಿದೆನೆಂದು ಬಿನ್ನವಿಸೆ—

ಕಂ ॥ ಖಚರಪತಿ ವಿಸ್ಮಯಾಕುಲಿ
ತ ಚಿತ್ತನಜ್ಞಾನ ತಿಮಿರ ವಿಘಟನ ದೀಪ ॥
ಪ್ರಚುರ ರುಚಿಯೆನಿಸೆ ಮಣಿ ಮಕು
ಟ ಚಂಕನ್ರತ್ಕಾಂತಿ ತಲೆಯನೇಂ ತೂಗಿದನೋ ॥ ೨೦ ॥

ಅಂತು ಬಗೆಯೊಳೊಗೆದ ವಿಸ್ಮಯಮೆ ತನಗೆ ವೈರಾಗ್ಯ ಹೇತುವಾಗೆ—

ಕಂ ॥ ದೊರೆಕೊಳ್ಳದೊಳ್ಳಿತಾದುದು
ತರುಣಿಯ ಸಂಬಂಧಮಿಾ ಸುತಂಗೆತ್ತಾನುಂ ॥
ದೊರೆಕೊಂಡೊಡೆನ್ನ ವಂಶಂ
ದುರಂತ ದುಷ್ಕೀರ್ತಿ ದಾವಶಿಖಿಗೊಳಗಕ್ಕುಂ ॥ ೨೧ ॥

ಉಪಕಾರಮನೊಡರಿಸುವಂ
ಗಪಕಾರಮನುಂಟುಮಾಳ್ಕುಮುಪಕಾರಿಗೆ ತಾ ॥
ನುಪಕಾರಮನೊಡರಿಸುಗುಂ
ವಿಪರೀತಂ ಬಗೆದುನೋಡೆ ಕರಣ ಗ್ರಾಮಂ ॥ ೨೨ ॥

ಉ ॥ ಪೋದುವು ಮತ್ಕುಲಾಗತ ಧನುರ್ಯುಗವೆನ್ನ ಮಹೋನ್ನತಿಕ್ಕೆ ಕೀ ।
ೞಾದುದು ರಾಮಲಕ್ಷ್ಮಣರ ತೇಜಮಗುಂದಲೆಯಾದುದೆಂದು ನಿ ॥

1. ಬೞಿ. ಚ.

ರ್ವೇದಮನಪ್ಪುಕೆಯ್ದು ಗಗನೇಚರಸಂಪದಮಂ ಪೊಗೞ್ತಿವೆ ।
ತ್ತಾದೊರೆತಂ ಜರತ್ತೃಣ ಸಮಾನವೆನಲ್ ಬಗೆದಂ ವಿಯಚ್ಚರಂ ॥ ೨೩ ॥

ಅಂತು ವೈರಾಗ್ಯಪರಂ ನಿಜ ವಿಯಚ್ಚರಾಧಿರಾಜ ವಿಭವಮಂ ಪ್ರಭಾಮಂಡಲಂಗಿತ್ತಂದಿನದಿನದೊಳ್ ಮಹೇಂದ್ರೋದ್ಯಾನದೊಳಿರ್ಪ ಸರ್ವಭೂತಹಿತ ಭಟ್ಟಾರಕರ ಪದಪಯೋರುಹದ ಸಮಕ್ಷದೊಳ್ ದೀಕ್ಷೆಗೊಳ್ವುದುಂ—

ಕಂ ॥ ಇಂದುಗತಿಯಂತೆ ರಾಜ್ಯಮ
ನೊಂದರ್ಕಂ ಬಾೞ್ತಿಗೆಯ್ಯದಾವನೊ ತೊಱೆದಂ ॥
ಮಂದರಧೈರ್ಯಂ ನೃಪನೆಂ
[1]ದೊಂದೇತೆಱಮುಮುಸಮಿತಿ ಪೊಗೞ್ದಿತ್ತಾಗಳ್ ॥ ೨೪ ॥

ಅಂತು ವಿಯಚ್ಚರಾಧಿರಾಜಂ ಮುನಿರಾಜ ಪದವಿಯನಪ್ಪುಕೆಯ್ವುದುಮಿತ್ತಲ್ ಜನಕಂ ಸಕಲ ಸಾಮ್ರಾಜ್ಯ ರಾಜ್ಯ ಚಿಹ್ನಮುೞಿಯಲುೞಿದ ವಸ್ತುವಾಹನಾದಿಗಳಂ ಸೀತೆಗೆ ಬೞಿವೞಿಗೊಟ್ಟು ಅಯೋಧ್ಯೆಗೆ ಕೞಿಪುವುದುಂ ದಶರಥಂ ಕತಿಪಯ ಪ್ರಯಾಣಂಗಳಿಂ ವಿನೀತಾನಗರಮಂ ಪೊಕ್ಕಿರಲೊಂದುದಿವಸಂ—

ಕಂ ॥ ಸುಕೃತ ಸುರದ್ರುಮ ವನಪಾ
ಲಕನೆಂಬಿನಮತುಲ ವಿಚಕಿಲೋದ್ಗಮಮಂತಂ ॥
ದಕಲುಷ ಚಿತ್ತಂ ದಶರಥ
ಸಕಲೋರ್ವೀಶಂಗೆ ಋಷಿನಿವೇದಕನಿತ್ತಂ ॥ ೨೫ ॥

ಅಂತು ಸಮಯೋಚಿತ ಸುಮನೋದರ್ಶನಮನಿತ್ತು ದೇವ! ನಮ್ಮ ಸರಯೂ ನದೀತೀರದ ಮಹೇಂದ್ರೋದ್ಯಾನದೊಳ್ ಮನಃಪರ್ಯಯಜ್ಞಾನಿಗಳಪ್ಪ ಸರ್ವಭೂತ ಹಿತಭಟ್ಟಾರಕರ್ ಮಹಾಋಷಿ ಸಮುದಾಯಂಬೆರಸು ಯೋಗ ನಿಯೋಗದಿಂದಿರ್ದರೆಂದು ಬಿನ್ನವಿಸೆ—

ಕಂ ॥ ನೊಸಲೊಳ್ ಕರಪಲ್ಲವ ಪುಟ
ಮೆಸೆದಿರೆ ದಶರಥನೃಪಂ ಮುನೀಶ್ವರರಿರ್ದಾ ॥
ದೆಸೆಗೆ ಮೊಗಮಿತ್ತು ತನ್ನಿ
ರ್ದ ಸಿಂಹವಿಷ್ಟರದಿನೆೞ್ದು ವಿನಮಿತನಾದಂ ॥ ೨೬ ॥

ಆಗಿ ಪರಿಮಿತ ಪರಿಜನಂಬೆರಸು ಮುನೀಂದ್ರರಿರ್ದ ಮಹೇಂದ್ರೋದ್ಯಾನಕ್ಕೆ ಬಂದು—

---

1. ದೊಂದುತ್ತರ. ಚ.

ಉ ॥ ದೀಪ ಕಳಾಪಮಂ ತಳೆದು ಬಾಲಿಕೆಯರ್ಬರೆ ಸುತ್ತಿ ಮುತ್ತಿ ತಾ।
ರಾಪತಿ ತಾರೆಗಳ್ವೆರಸು ಮಂದರಮಂ ಬಲಗೊಳ್ವ ಮಾಟ್ಕೆಯಿಂ ॥
ಭೂಪತಿ ಸರ್ವಭೂತ ಹಿತ ದಿವ್ಯಮುನೀಂದ್ರರನಂದು ಬಾಲಚಂ।
ದ್ರಾಪರನಾಮಧೇಯರನದೇಂ ಬಲಗೊಂಡನೊ ಭಕ್ತಿಪೂರ್ವಕಂ ॥ ೨೭ ॥

ಅಂತು ಬಲಗೊಂಡಷ್ಟವಿಧಾರ್ಚನೆಗಳಿಂದರ್ಚಿಸಿ ಗುರುಭಕ್ತಿ ಪೂರ್ವಕಂ ವಂದಿಸುವುದುಂ—

ಕಂ ॥ ಮದನಫಣಿ ನಿರ್ವಿಷೀಕರ
ಣ ದಿವ್ಯಮಂತ್ರ ಸ್ವನಂ ಜರಾಮರಣ ಶಿಲಾ ॥
ವಿದಳನ ಟಂಕಧ್ವನಿ ಪೊ
ಣ್ಮಿದತ್ತು ಮುನಿ ಪರಸೆ ಧರ್ಮವೃದ್ಧಿ ನಿನಾದಂ ॥ ೨೮ ॥

ಕ್ಷುಭಿತ ದಯಾರ್ಣವ ಘೂರ್ಣಿತ
ರಭಸಮೆನಲ್ ಪರಸಿದತ್ತನಂತರವಾ ಸ ॥
ತ್ಸಭೆ ವಿನತ ಮಕುಟ ಮಣಿ ರುಚಿ
ವಿಭಾಸಿಯುಂ ನೃಪಪುರಸ್ಸರಂ ರಾಜಕಮುಂ ॥ ೨೯ ॥

ಅನಂತರಂ ದಶರಥಂ ಸಮುಚಿತಾಸನದೊಳ್ ರಾಮ ಲಕ್ಷ್ಮಣ ಭರತ ಶತ್ರುಘ್ನರ್ವೆರಸು ಕುಳ್ಳಿರ್ದು ದೀಕ್ಷಿತನಾದ ಇಂದುಗತಿಯುಮಂ ಪರಿಮ್ಲಾನ ದೀನಾನನನಾಗಿ ತನ್ಮುನಿಯ ಸಮಕ್ಷದೊಳಿರ್ದ ಪ್ರಭಾಮಂಡಲನುಮಂ ಕಂಡು ಮುನಿಮುಖ್ಯಂಗೆಱಗಿ ಮುಕುಳಿತಾಂಜಲಿ ಪುಟನಾಗಿ—

ಉ ॥ ಬಾಲ ಮೃಣಾಳಮಂ ಪಿಡಿದು ಕೀೞ್ವವೊಲಶ್ರಮದಿಂ ಮನೋಭವ।
ವ್ಯಾಲ ಗಜೇಂದ್ರ ದಂತ ಯುಗಳಂಗಳನೇಕೆಯೊ ಕಿೞ್ತನೇಕೆ ನಿ ॥
ರ್ಮೂಲಿಸಿದಂ ಭವಾಟವಿಯನೀ ಜಿನರೂಪ ಕುಠಾರದಿಂ ಪ್ರಭೋ।
ಧಾಲಯ ಪೇೞಿಮಾ ಖಚರ ಚಕ್ರಿಯೊಳಾದ ತಪಃಪ್ರಪಂಚಮಂ ॥ ೩೦ ॥

ಎಂದು ಬಿನ್ನವಿಸೆ—

ಕಂ ॥ ಶ್ರುತ ದೇವತಾ ಕಟಾಕ್ಷ
ದ್ಯುತಿ ಪಸರಿಸಿ ಪರ್ವುವಂದದಿಂ ನಿಜದಂತ ॥
ದ್ಯುತಿ ಪಸರಿಸೆ ದಯೆಯಿಂ ಯತಿ
ಪತಿ ನುಡಿದಂ ಮಧುರ ಮೃದು ಗಭೀರ ಧ್ವನಿಯಿಂ ॥ ೩೧ ॥

ಈ ಖಚರ ಪ್ರಭು ಪ್ರಭಾಮಂಡಲನ ಪೋದ ಭವದೊಳಾದ ವೃತ್ತಾಂತಮುಮ ನೀಭವದೊಳಾದ ಸೀತಾಪ್ರಪಂಚಮುಮಂ ಕೇಳ್ದು ತಿಳಿದದುವೆ ನಿರ್ವೇಗಕಾರಣ ಮಾಗೆ ದೀಕ್ಷೆಗೊಂಡನೆಂಬುದುಂ ಪ್ರಭಾಮಂಡಲಂ ವಿನಯ ವಿನಮಿತ ಶಿರಸ್ಸರೋಜ ನಾಗಿ—

ಕಂ ॥ ಇಂದುಗತಿ ಖಚರಪತಿ ಪಿರಿ
ದೊಂದಟ್ಟಿಱನೆನಗೆ ಮಾಳ್ಪುದಂ ಬೆಸಸಿಂ ನೀ ॥
ಮೆಂದು ಮುಕುಳಿತ ಕರಂ ಮುನಿ
ವೃಂದಾರಕರಂ ಕುಮಾರಕಂ ಬೆಸಗೊಂಡಂ ॥ ೩೨ ॥

ಅಂತು ಬೆಸಗೊಳ್ವುದುಮವರಿಂತೆಂದು ಬೆಸಸಿದರ್ : ಧಾಮ ನಾಮಧೇಯ ಗ್ರಾಮದೊಳಿರ್ಪಂ ಧರಾಮರಂ ವಿಮುಂಚಿಯೆಂಬನಾತನ ಕುಲವಧು [1] ವಸುಮತಿ ವೆಸರವಳವರ್ಗತಿಭೂತಿಯೆಂಬ ತನಯನಾದಂ—

ಕಂ ॥ ಆತಂಗೆ ಸರಸೆಯೆಂಬಳ್
ಪಾತಕಿ ಕುಲವನಿತೆಯೆನಿಸಿ ಕಯನೆಂಬ ಮಹಾ ॥
ಪಾತಕನೊಳ್ ಪುದುವಾಳ್ದಳ್
ಜಾತಿಯ ನೀತಿಯ ನೆಗೞ್ತೆ ನೆಲೆಗಿಡುವಿನೆಗಂ ॥ ॥ ೩೩ ॥

ಆಯುರ್ದಶೆಯುೞಿಗುಂ ನರ
ಕಾಯುಷ್ಯಂ ಕಟ್ಟುಗುಂ ಪರಾಭವಮುಕ್ಕುಂ ॥
ಶ್ರೀಯುೞಿಗುಮೆನ್ನದನ್ಯ
ಪ್ರೇಯಸಿಯುಂ ಸರಸೆಯುಂ ಕಯುಂ ಕಳ್ದುಯ್ದಂ ॥ ೩೪ ॥

ಅಂತಾಕೆಯುಂ ಕಯುಂ ಕಸವರಂಬೆರಸುಯ್ವುದುಂ ಅತಿಭೂತಿ ಮತಿವಿಕಲ ನಾಗಿ—

ಕಂ ॥ ಸುಡು ಪೊಲ್ಲಳನೆನ್ನದೆ ತ
ನ್ನೊಡಮೆಯ ಕೇಡಿಂಗಮವಳಪೋಗಿಂಗಂ [2] ನಿ ॥
ರ್ಗಡಿ ಬೆನ್ನೊಳಱಿಸಿ ಪೋದಂ
ಕಡು ಮೋಹಿತರಾರುಮುಚಿತಮಂ ನೆನೆದಪರೇ ॥ ೩೫ ॥

---

1. ಮನುಪತಿ. ಚ.
2. ನಿಳ್ದಡಿ. ಚ. ; ನಿಗ್ಗಡಿ ಗ. ಘ. ; ನಿರ್ಗಡೆ. ಕ. ಖ.

ಮತ್ತಿತ್ತ ವಿಮುಂಚಿಯುಂ ದಾನಾರ್ಥಿಯಾಗಿ ಮಗುಟ್ದು ಬಂದು ಮಗನ ವಾರ್ತೆಯಂ ಕೇಳ್ದು ತಾನುಂ ತನ್ನ ಪೆಂಡತಿಯಪ್ಪನುಮತಿಯುಂ ಸರಸೆಯ ತಾಯ ಪ್ಪುರಿಯುಂ ಕಪ್ಪಡಮನುಟ್ಟತಿಭೂತಿಯನಱಸುತ್ತಂ ಬಂದಂಬರಪುರದೊಳ್ ಸರ್ವ ಮುನಿಗಳೆಂಬ ದಿವ್ಯಜ್ಞಾನಿಗಳ ಪಕ್ಕದೆ ಧರ್ಮಮಂ ಕೇಳ್ದು ವಿಮುಂಚಿ ಮುಂಚಿ ತೊಱೆದನನುಮತಿಯುಂ ಉರಿಯುಂ ಕನಕಶ್ರೀಕಂತಿಯರ ಪಕ್ಕದೆ ತೊಱೆದು ದೇವಗತಿವಡೆದರ್—

ಕಂ ॥ ಅಪವರ್ಗ ಲಕ್ಷ್ಮಿಯುಂ ಕುಡು
ವ ಪರಮಜಿನ ಚರಣ ಸೇವೆಗರಿದಾದುದೆ ನಾ ॥
ಕಪದ ಪ್ರಾಪ್ತಿಯನೊದವಿಸು
ವ ಪೆರ್ಮೆಯೆನೆ ದಿವದೊಳನಿಬರುಂ ಜನಿಯಿಸಿದರ್ ॥ ೩೬ ॥

ಮತ್ತಿತ್ತ ಸರಸೆ ದುರಾಚಾರದಿಂ ಕಾಲಮಂ ಕಟೆಪಿ ನರಕ ತಿರ್ಯಗ್ಗತಿಗ ಳೊಳ್ ತಿರಿಯುತ್ತುಂ ಬಂದು ಬಲಾಹಕವೆಂಬಬೆಟ್ಟದೊಳ್ ಪುಲಿಯಾಗಿ ಪುಟ್ಟಿ ಬೇಗೆಗಿರ್ಚಿನೊಳ್ ಸತ್ತು ಚಂದ್ರಧ್ವಜನೆಂಬರಸನರಸಿ ಮನಸ್ವಿಗೆ ಚಿತ್ರೋತ್ಸವೆ ಯೆಂಬ ಮಗಳಾಗಿ ಪುಟ್ಟಿದಳದಲ್ಲದೆಯುಮತ್ತಲ್—

ಮ ॥ ಮಕರಾಂಕದ್ವಿಪ ದಂತದಂಡ ದಳಿತ ಸ್ವಾಂತಂ ಪರ ಪ್ರೇಯಸೀ ।
ವಿಕಲಂ ದುರ್ಗತಿಯೊಳ್ ಕಯಂ ತಿರಿತರುತ್ತುಂ ಬಂದು ಮತ್ತಂ ಕ್ರಮೇ॥
ಳಕನಾದಂ ಕಟೆದಲ್ಲಿಯುಂ ಕಪಿಳನೆಂಬಂ ಧೂಮಕೇಶಂಗೆ ದಾ ।
ರಕನಾದಂ ಕಡೆಯೊಳ್ ವಿಚಾರಿಸೆ ವಿಚಿತ್ರಂ ಕರ್ಮ ನಿರ್ಮಾಪಣಂ ॥ ೩೭ ॥

ಮತ್ತಿತ್ತಲತಿಭೂತಿಯುಂ ನರಕಾಯುಷ್ಯಾದಿ ಭವಾಟವಿಯೊಳ್ ತೊಟಲುತ್ತುಂ ಬಂದು ತಾರಾಕ್ಷವೆಂಬ ಹಂಸವನದೊಳ್ ಕಲಹಂಸನಾಗಿ ಜಿನ ಸ್ತವನ ಶ್ರವಣ ದಿಂದುಪಶಮ[1] ಚಿತ್ತನಾಗಿ ಕಿನ್ನರಗತಿವಡೆದನಂತರಂ ಕುಂಡಲ ಮಂಡಿತನಾಗಿ [2] ವಿದಗ್ಧಪುರಮನಾಳುತ್ತಿರೆ ಕಪಿಳಂ ಚಿತ್ರೋತ್ಸವೆಯುಂ ತನಗೆ ಪೆಂಡತಿಮಾಡಿ ತಂದಾ ಪುರದೊಳಿರ್ಪುದುಂ ನಿನಗೆ ಮುನ್ನಿನ ಪೆಂಡತಿಯಾದನುಬಂಧಂ ಕಾರಣಮಾಗೆ ನೀನಾಕೆಯಂ ಕಪಿಳನ ಕೈಯಿಂ ಕಳೆದುಕೊಂಡೈ; ಮುಂಪೇಟ್ದ ವಿಮುಂಚಿಯುಂ ಸುರ ಲೋಕದಿಂ ಬಂದಿಂದುಗತಿಯಾದನಾತನ ಪೆಂಡತಿಯಪ್ಪಂದಿನನುಮತಿ ಪುಷ್ಪವತಿಯಾ ದಳದುಕಾರಣದಿಂದಿವರ್ ನಿನಗತಿಸ್ನೇಹಿತರಾದರಂದಿನ ಕಯಂ ಕಪಿಳದೇವನಾಗಿ ನೀಂ

---

1. ಭಾವನದಿಂ. ಚ.
2. ವಿದಗ್ಧ ನಗರದೊಳ್ ಕಪಿಲನ ಕೈಯಿಂ ಚಿತ್ರೋತ್ಸವೆಯಂ ಅತಿಭೂತಿಯಾದಂದಿನನು ಬಂಧಂ ಕಾರಣಮಾಗೆ ನೀಂ ಕಳೆದುಕೊಂಡೆ. ಚ.

ಪುಟ್ಟಿದಾಗಳೆ ನಿನ್ನಂ ಕೊಂಡುಪೋದಂ; ನೀನತಿಭೂತಿಯಾದಂದಿನುರಿಯೆಂಬ ನಿಮ್ಮತ್ತೆ ದೇವಗತಿಯಿಂ ಬಂದು ಜನಕನ ಮಹಾದೇವಿ ವಿದೇಹಿಯಾಗಿ ನಿನಗೀಗಳಬ್ಬೆಯಾದ ಳೆಂದು ಭಟ್ಟಾರಕರ್ ಬೆಸಸುವುದುಂ—

ಮ ॥ ಅಱಿದಾತ್ಮೀಯ ಸುಹೃದ್ಭವಾಂತರಮನಾದ್ಯಂತಂ ಪ್ರಭಾಮಂಡಳಂ।
ಬೆಱಗಾದಂ ರಘುರಾಮನುಂ ದಶರಥಕ್ಷೋಣೀಶನುಂ ಸೈಪು ಕ ॥
ಣ್ದೆಱೆದಂತುತ್ಸುಕರಾದರುಣ್ಮೆ ಪುಳಕಂ ಕೈಗಣ್ಮೆ ಹರ್ಷಾಶ್ರು ಮೆ।
ಯ್ಮಱೆದಳ್ ಜಾನಕಿ ಕೇಳ್ದುಕೇಳ್ದು ತಲೆಯಂ ತೂಗಿತ್ತು ರಾಜನ್ಯಕಂ॥೩೮॥

ಕಂ ॥ ಅಮೃತದ ಕಡಲೊಳ್ಮುಳುಗಿ
ತ್ತಮೃತಾಂಶು ಮಯೂಖ ಲೇಖೆಯಂ ತಟಸ್ಕೈಸಿ ॥
ತ್ತಮರ್ದಂ ಮುಕ್ಕುಳಿಸಿತ್ತೆನೆ
ಸಮನಿಸಿದುದು ರಾಜಸಭೆಗೆ ಹರ್ಷೋತ್ಕರ್ಷಂ ॥ ೩೯ ॥

ಅಲ್ಲಿಂ ಬೞಿಯಂ—

ಕಂ ॥ ಮಣಿಕುಂಡಲ ಕಿರಣಂಗಳ್
ಸೆಣಸುವಿನಂ ನಖಮಯೂಖದೊಳ್ ದಶರಥ ಧಾ ॥
ರಿಣಿಪತಿಯ ಪದ ಪಯೋಜ
ಪ್ರಣಮನಮನೊಡರ್ಚಿದಂ ವಿಯಚ್ಚರತಿಲಕಂ ॥ ॥ ೪೦ ॥

ಅನಂತರಂ ರಾಮ ಲಕ್ಷ್ಮಣ ಭರತ ಶತ್ರುಘ್ನರೊಳ್ ವಿನಯವೃತ್ತಿಯಂ ಮೆಱೆ ವುದುಂ—

ಕಂ ॥ ಅನುಜೆ ನಿಜಾಗ್ರಜ ಪದ ಕೋ
ಕನದಕ್ಕಾನಂದ ಬಾಷ್ಪ ಮಧು ಬಿಂದುವನಿ ॥
ತ್ತನುನಯದಿನೆಱಗಿದಳ್ ಸೀ
ತೆ ನಗುವಿನಂ ಭ್ರಮರಕಂ ಭ್ರಮದ್ಭ್ರಮರಕಮಂ ॥ ೪೧ ॥

ಅಂತು ವಿನಯಭರದಿನೆಱಗಿದನುಜೆಯಂ ಪ್ರಭಾಮಂಡಳನಖಂಡಿತ ಪುಣ್ಯ ಭಾಗಿನಿಯಾಗೆಂದು ಪರಸಿ ಪರಮಾನಂದ ಪರಂಪರೆಯನಪ್ಪುಕೆಯ್ದಿರ್ಪುದುಂ—

ಸ್ರ॥ ಆದಿವ್ಯಜ್ಞಾನಿಯಿಂದಂ ತಿಳಿದು ಪದ ಪದಾರ್ಥಂಗಳಂ ಪೂರ್ವ ಜನ್ಮ।
ಪ್ರಾದುರ್ಭಾವ ಪ್ರಪಂಚಂಗಳನಧಿಕ ಮನೋರಾಗದಿಂ ತನ್ಮುನಿ ಶ್ರೀ ॥
ಪಾದಾಂಭೋಜಂಗಳಂ ಪೂಜಿಸಿ ವಿನಯದೆ ಬೀಳ್ಕೊಂಡು ಭೇರೀನಿನಾದಂ।
ರೋದೋಂತರ್ಭಾಗಮಂ ಜಕ್ಕುಲಿಸೆ ನೃಪತಿ ಸಾಕೇತಮಂ ಬಂದು ಪೊಕ್ಕಂ॥

ಮ ॥ ಮಣಿಘಂಟಾ ಮಣಿಕಿಂಕಿಣೀ ಮಣಿವಿತಾನ ಸ್ವರ್ಣ ಲಂಭೂಷ ಭೂ ।
ಷಣಮುಂ ರತ್ನ ವಿಮಾನಮುಂ ಭರತನುಂ ಶತ್ರುಘ್ನನುಂ ರಾಮಲ ॥
ಕ್ಷ್ಮಣರುಂ ತನ್ನೊಡನೇಱಿ ಸೋಂಕೆ ಬರೆ ಸೋತ್ಸಾಹಂ ಹರಿದ್ರತ್ನ ತೋ ।
ರಣ ಶೋಭಾವಹಮುಂ ನರೇಂದ್ರ ಗೃಹಮುಂ ಪೊಕ್ಕಂ ಪ್ರಭಾಮಂಡಲಂ॥೪೩॥

ಅಂತು ಪುಗುವುದುಂ ಕುಮಾರನಂ ಮಣಿಮಯಾಸನದೊಳಿರಿಸಿ ಮಧುಪರ್ಕ ಪೂರ್ವಕಮುಪಾರ ಸಾರ ವಸ್ತ್ರಾಭರಣ ವಸ್ತುವಾಹನಂಗಳಿಂ ಪೂಜಿಸಿ ಬಟಿಯಂ ಜನ ಕಂಗೆ ಬಟಿಯನಟ್ಟುವುದುಂ ವಿದ್ಯಾಧರಮುಹತ್ತರಂ ಪವನವೇಗನೆಂಬಂ ಮನಃ ಪವನವೇಗದಿಂ ಮಿಥಿಳೆಯನೆಯ್ದಿ ರಾಜಮಂದಿರಮುಂ ಪೊಕ್ಕು—

ಕಂ ॥ ನಮಿತಂ ಖಚರಾನುಚರಂ
ಕ್ರಮದಿಂ ತಿಳಿವಂತು ತನಗೆ ತನಯನ ವೃತ್ತಾಂ ॥
ತಮುನಱಿಪೆ ಜನಕನತಿ ಸಂ
ಭ್ರಮಚಿತ್ತಂ ಪದೆದು ಪಲವುಸೂಟಿಪ್ಪೆಸಗೊಂಡಂ ॥ ೪೪ ॥

ಮ ॥ ಕೊಲಲೆಂದುಯ್ದ ನಿಶಾಚರಂ ಖಚರರಾಜಂಗುಯ್ದುಕೊಟ್ಟಂ ಗಡಂ ।
ಕುಲ[1]ನಿಸ್ತಾರಕನೆನ್ನ ದಾರಕನನಾತಂ ಬಂದು ಸಾಕೇತದೊಳ್ ॥
ನೆಲಸಿರ್ದಂ ಗಡ ಸೈಪು ಕಣ್ದೆಱೆದುದೆಂದಾನಂದಬಾಷ್ಪಾಂಬು ಕ ।
ಣ್ಮಲರಿಂ ಕೈಗಟಿವಾಗಿ ಪೊಣ್ಮೆ ಜನಕಂ ರೋಮಾಂಚಮುಂ ತಾಳ್ದಿದಂ॥ ೪೫॥

ಅಂತು ಹರ್ಷರಸ ತರಂಗಿತಾಂತರಂಗನಾಗಿ—

ಕಂ ॥ ತನುಜಾಗಮನೋತ್ಸವಮುಂ
ತನಗಱಿಪಿದ ಖೇಚರಂಗೆ ನಿಜರಾಜ್ಯಮನೀ ॥
ವನಿತುವರಮಧಿಕರಾಗಂ
ಜನಿಯಿಸೆ ಜನಕಂ ನಿಜಾಂಗಚಿತ್ತಮನಿತ್ತಂ ॥ ೪೬ ॥

ಅನಂತರಂ—

ಕಂ ॥ ರವಿರಥಮನುತ್ಸವ ಧ್ವಜ
ನಿವಹಂ [2]ತುಡುಕಿದುವು ಕೆದಱಿದುವು ಪೂವಲಿಗಳ್ ॥
ಕಿವಿ ಶಬ್ದಂಗೆಟ್ಟಿರೆ ಬ
ದ್ದವಣಂ ಬಾಜಿಸಿದುವೊಡನೆ ಮಿಥಿಳಾಪುರದೊಳ್ ॥ ೪೭ ॥

---

1. ವಿಸ್ತಾರಕ. ಗ. 2. ವೆತ್ತಿದುವು. ಚ.

ಚ ॥ ತನಯ ಮುಖೇಂದು ಮಂಡಲಮನೀಕ್ಷಿಸುವುತ್ಸುಕ ವೃತ್ತಿ ಚಿತ್ತದೊಳ್ ।
ನನೆಕೊನೆವೋಗೆ ಸಜ್ಜನ ಸುಭಾಷಿತದೊಳ್ ಪುದುವೊಕ್ಕು ಸೇಸೆಯಂ ॥
ಮನಮೊಸೆದಾಂತು ಬಾಂಧವಜನಂಬೆರಸುತ್ಸವದಿಂ ವಿದೇಹಿಯುಂ ।
ಜನಕನುಮೇಱಿದರ್ ಮಣಿವಿತಾನ ವಿರಾಜಿತಮಂ ವಿಮಾನಮಂ ॥ ೪೮ ॥

ಅಂತು ವಿಮಾನಾರೂಢರಾಗಿ ಕಿಱಿದಾನುಂ ಬೇಗದಿಂದಯೋಧ್ಯೆಗೆ ಬಂದು ರಾಜಭವನಮಂ ಪೊಕ್ಕು ಜನಕನುಂ ವಿದೇಹಿಯುಂ ದಶರಥಂಗಮಪರಾಜಿತಾ ಮಹಾದೇವಿಗಂ ತುಱುಗೆಯ್ವುದುಂ, ರಾಮಾದಿಗಳವರ್ಗೆ ವಿನಯವಿನತರಾಗಿ ಪರಕೆಯಂ ಕೈಕೊಳ್ವುದುಂ, ಜಾನಕಿಯುಂ ಜನನೀಜನಕರಂ ನಿಬಿಡಾಲಿಂಗನಂಗೆಯ್ದವರ ಪದ ಪಯೋರುಹಕ್ಕೆಱಗೆ ಪ್ರಭಾಮಂಡಳಂ ತಂದೆಯ ಪಾದಾರವಿಂದಮಂ ಮಣಿಕುಂಡಲ ಪ್ರಭಾಮಂಡಲ ಬಾಲಾತಪದಿನರ್ಚಿಸುವುದುಂ, ಜನಕಂದಿಕ್ಕರಿ ಕರಾನುಕಾರಿಗಳಪ್ಪ ತೋಳ್ಗಳಿಂ ತೆಗೆದು ತಬ್ಬಿಕೈಸಿ, ಮಗನ ಮೊಗಮನಟ್ಟಿತುರ್ನೋಡಿ, ಕಲ್ಪತರು ಕೋರಕಿತವಾದಂತೆ ಪುಳಕಮಂ ತಳೆದು, ಆನಂದಬಾಷ್ಪ ಬಿಂದು ಸಂದೋಹದಿಂ ನಂದನನ ಸಹಸ್ರ ಕುಂತಳ ಕಲಾಪಕ್ಕೆ ಬಿಡುಮುತ್ತಿನ ತಲೆದುಡುಗೆಯಂ ಪಡೆದು, ಮೋಹರಸ [1]ಸುಧಾಪೂರದೊಳವಗಾಹಮಿರ್ಪುದುಂ—

ಕಂ ॥ ಅಂಬಿರಿವಿಡೆ ಭೋಂಕನೆ ನಯ
ನಾಂಬುಗಳತಿವಿಹ್ವಲಂ ಪ್ರಭಾಮಂಡಲನಾ ॥
ತ್ಮಾಂಬಿಕೆಯ ಪದಕ್ಕೆಱಗಿದ
ನಂಬುರುಹಕ್ಕೆಱಗಿದಳಿಗಳೆನಿಸೆ ಕುರುಳ್ಗಳ್ ॥ ೪೯ ॥

ಆಗಳಾ ವಿದೇಹಿಸುತ ಪರಿಷ್ವಂಗ ಸುಖಾನುಭವಮನಪ್ಪುಕೆಯ್ವುದುಂ—

ಮ ॥ ಮೊಲೆವಾಲಂಬಿರಿವಿಟ್ಟು ಸೂಸೆ ಮೊಲೆಯುಂ ಬಾಷ್ಪಾಂಬು ಕೈಗಣ್ಮೆ ಕ ।
ಣ್ಮಲರಿಂ ಮೆಯ್ಯನಿರ್ಗಳ್ ಪೊದಱ್ದೊಗೆಯೆ ಮೆಯ್ಯಿಂ ಗದ್ಗದಂ ಕಂಠ ಕಂ॥
ದಲದಿಂದುದ್ಗತಮಾಗೆ ಮನ್ಯುಮಿಗೆ ನಾನಾಚೇಷ್ಟೆ ನಾನಾರಸಂ ।
ತಲೆದೋಱಿತ್ತು ವಿದೇಹಿಗಚ್ಚರಿ ಸುತ ವ್ಯಾಮೋಹ ಕೌತೂಹಲಂ ॥ ೫೦ ॥

ಚ ॥ ಉದಯಿಸಿದಾಗಳಾತನನಗಲ್ದೞಲಾತನ ಬಾಲಕೇಳಿಯಂ ।
ಪದೆದವಲೋಕಿಸಲ್ ಪಡೆಯದುಮ್ಮಳವಾತನ ಸೋಂಕಿನೊಳ್ ಪೊದ ॥
ಱ್ದುದವಿದ ಮೋಹವಾತನ ಮುಖಾಬ್ಜ ವಿಲೋಕನ ಜಾತಕೌತುಕಂ ।
ಸುದತಿವಿದೇಹಿಗೇಂ ಪಡೆದುದೋ ರಸಸಂಕರ ಚಿತ್ರ ಚೇಷ್ಟೆಯಂ ॥ ೫೧ ॥

---

1. ಸುಧಾರಸ. ಕ. ಖ ಗ. ಘ.

ಚ ॥ ತನಯನನಾಗಳಂತೆ ಪಡೆದಂತೆ ಮನೋಮುದಮಂ ವಿದೇಹಿಯುಂ ।
ಜನಕನುಮುಪ್ಪುಕೆಯ್ಯೆ ರಘುವಂಶ ನಮೇರುಗೆ ಚಿತ್ರರತ್ನಮಂ ॥
ಡನ ವಸನಂಗಳಿಂದೊಸೆದು ಮನ್ನಿಸೆ ಹರ್ಷಮಳುಂಬವಾಯ್ತು ಚಂ ।
ದನರಸ ಮಗ್ನರಪ್ಪವರನಪ್ಪಿದುವಿಂದು ಕರಂಗಳೆಂಬಿನಂ ॥ ೫೨ ॥

ಅಂತು ದಶರಥನಭ್ಯಾಗತ ಪ್ರತಿಪತ್ತಿಯಂ ಮಾಳ್ಪುದುಮನುದಿನಂ ಪ್ರಭಾಮಂಡಲಂ ರಾಮಲಕ್ಷ್ಮಣರೊಡನೆ ಕೂಡಿ ವಿವಿಧ ವಿನೋದಂಗಳಿಂ ದಿವಸಂಗಳನೇಕವಾಗೆಯುಮೇಕಕ್ಷಣದಂತೆ ನಿರಂತರೋತ್ಸವಮನೊದವಿಸೆ ಸುಖದಿನೊಂದುತಿಂಗಳ್ವರಮಯೋಧ್ಯೆಯೊಳಿರ್ದು, ಮಿಥಿಲೆಗೆ ಬಂದು ಜನಕನ ರಾಜ್ಯಮಂ ತನ್ನ ಕಿಱಿಯಮ್ಮನಪ್ಪ ಕನಕಂಗೆ ಕೊಟ್ಟು, ಜನಕನುಂ ವಿದೇಹಿಯುಂ ಬೆರಸು ರಥನೂಪುರ ಚಕ್ರವಾಳಪುರಕ್ಕೆ ಪೋಗಿ, ವಿದ್ಯಾಧರವಿಭೂತಿಯೊಳ್ ಸುಖದೊಳಿರ್ದನನ್ನೆಗಮಿತ್ತಲೊಂದು ದಿವಸಂ—

ರಥೋದ್ಧತ ॥ ಉರ್ವರಾಧಿಪತಿ ಕಂಡನರ್ಚನಾ ।
ಪೂರ್ವಕಂ ದಶರಥಾವನೀಶ್ವರಂ ॥
ಸರ್ವಭೂತಹಿತ ನಾಮಧೇಯರಂ ।
ಸರ್ವಭೂತ ಹಿತ ಸಾಧು ಮುಖ್ಯರಂ ॥ ೫೩ ॥

ಅಂತು ಕಂಡು ಗುರುಭಕ್ತಿ ಪೂರ್ವಕಂ ವಂದಿಸಿ—

ಕಂ ॥ ಎನ್ನ ಭವಾವಳಿಯಂ ದಯೆ
ಯಿನ್ನಿಮ್ಮಡಿ ಬೆಸಸಿಮೆಂದು ಕೈಮುಗಿದಿರೆ ಕಿಂ ॥
ಚಿನ್ನಮಿತ ಕಂಧರಂ ಪದ
ಸನ್ನಿಧಿಯೊಳ್ ದಶರಥಂಗೆ ಮುನಿಪತಿಯೆಂದಂ ॥ ೫೪ ॥

ಮೊದಲಿಲ್ಲೆನಿಪ್ಪ ಸಂಸಾ
ರದಲ್ಲಿ ಸುಖದುಃಖಮಂ ಚತುರ್ಗತಿಯೊಳ್ ಮಾ ॥
ಣದೆ ತಿರಿದು ಶುಭಾಶುಭ ಕ
ರ್ಮದ ಫಲಮಂ ನಗುತುಮುಱುತುಮುಣುತುಂ ಬಂದೈ ॥ ೫೫ ॥

ಅಂತನಂತಮಾದ ಭವಾವಳಿಯಿಂ ತಿರಿತರುತ್ತುಮೀಭವಕ್ಕೆಂಟನೆಯ ಭವದೊಳೊರ್ಮೆ ಸೇನಾಪುರಮೆಂಬ ಪುರದೊಳ್—

ಕಂ ॥ ಮುನಿಚರ್ಯಾ ವಿಘ್ನದೊಳಂ
ಜಿನಧರ್ಮದ್ವೇಷ ಮತಿಯೊಳಂ ದುರ್ಗತಿಯೊಳ್ ॥

ಜನಿಯಿಸಿ ದುರಂತ ದುಃಖಮ
ನನುಭವಿಸಿದೆ ವಕ್ರಭಾವಮುಬಲಿಸದಾರಂ ॥ ೫೬ ॥

ಅಂತೆತ್ತಾನುಂ [1] ಸವಿಪಾಕ ನಿರ್ಜರೆಯಿಂ ದುಷ್ಕರ್ಮ ಫಲಮಂ ತವಿಸಿ ನಿಜ ದಿನುಪಶಮುಭಾವಮುಂ ಪಡೆದದಱ ಫಲದಿಂ ಚಂದ್ರಪುರಮನಾಳ್ವ ಚಂದ್ರನೆಂಬ ನರೇಂದ್ರಂಗಮಾತನ ಮನೋಹಾರಿಣಿ ಧಾರಿಣಿಗಂ ಧಾರಣನೆಂಬ ಮಗನಾದೆ; ನಿನಗೆ ಸುಧರ್ಮೆಯೆಂಬಳ್ [2] ಪತ್ನಿಯಾಗೆ ಜಿನಧರ್ಮಮಂ ಪತ್ತುವಿಡದೆ ನಡೆದು ಚತು ರ್ವಿಧ ದಾನ ಶೂರನಾಗಿ ಶರೀರಭಾರಮನಿೞಿಪಿ ಧಾತಕೀ ಷಂಡದ ಮೂಡಣ ಮಂದರ ದುತ್ತರ [3] ಕುರುವಿನೊಳ್ ಪುಟ್ಟಿ ಮೂಱುಪಳಿತೋಪಮಂಬರಮಲ್ಲಿಯ ಸುಖಮನನು ಭವಿಸಿ ದೇವಗತಿವಡೆದು—

ಉ ॥ ಪೊಸದ ಸೌರಭಂ ತವದ ಮೈಸಿರಿ ಬಾಡದ ದಾಮಮುಟ್ಟೊಡಂ ।
ಮಾಸದ ಸೀರೆ ಧಾತುಮಲವಿಲ್ಲದೊಡಲ್ ಪರಿಪೂರ್ಣ ಯೌವನಂ ॥
ಲೇಸೆನಿಸಿರ್ದ ರೂಪು ಶುಭಲಕ್ಷಣವೆಂಬಿವನಪ್ಪುಕೆಯ್ದನಾ ।
ಯಾಸದಿನೀಸಿದ್ದೈ ಮೊದಲ ಸಗ್ಗದ ಬಾೞ್ಕೆಯೆರಟ್ಕಡಲ್ಗಳಂ ॥ ೫೭ ॥

ಮತ್ತಮಲ್ಲಿಂದಂ ಬಂದು ಪುಷ್ಕಲಾವತೀ ವಿಷಯದ ಪುಂಡರೀಕಿಣೀ ಪುರಮ ನಾಳ್ವ ನಂದಿಘೋಷ ನರಪತಿಗಮಾತನರಸಿಯಪ್ಪ ವಸುಮತಿಗಂ ನಂದಿವರ್ಧನ ನೆಂಬ ನಂದನನಾದೆ; ನಿನ್ನ ತಂದೆಯಪ್ಪ ನಂದಿಘೋಷನೊಂದುದಿವಸಂ ಕ್ರೀಡಾ ವನಕ್ಕೆ ಪೋಗಿ, ದಿವ್ಯಯೋಗಿಗಳಂ ಕಂಡು, ಧರ್ಮಮಂ ಬೆಸಗೊಂಡು, ಸಂಸಾರ ಶರೀರ ಭೋಗ ನಿರ್ವೇಗ ಪರನಾಗಿ ನಿನಗೆ ರಾಜ್ಯಮಂ ಕೊಟ್ಟು ಯಶೋಧರ ಭಟ್ಟಾರಕರ ಚರಣೋಪಾಂತದೊಳ್ ತಪಶ್ಚರಣ ನಿರತನಾಗಿ ಸಮಾಧಿವಿಧಿಯಿಂ ವಿಗ್ರಹಮನುೞಿದು, ಬೞಿಯುಮುಗ್ರಿಮ ನವ ಗ್ರೈವೇಯಕ ಮಧ್ಯನಾಯಕನಾದಂ; ನೀನುಮೊಂದು ಪುಬ್ಬಕೋಟಿ ಕಾಲಮರಸುಗೆಯ್ದು, ಜಿನಧರ್ಮಮಂ ಪತ್ತುವಿಡದೆ ನಡೆದು ಕಡೆಯೊಳಯ್ದನೆಯ ಕಲ್ಪದುಪಪಾತ ತಲ್ಪದೊಳ್ ದೇವನಾದೈ—

ಕಂ ॥ ಅಯ್ದುಂ ಕಲ್ಯಾಣಮನಿ
ತ್ತೆಯ್ದಿಪುದಯ್ದನೆಯ ಗತಿಯುನವಯುವದಿಂ ತಾ ॥
ನಯ್ದನೆಯ ನಾಕಲೋಕಮ
ನೆಯ್ದಿಪುದು ಜಿನೇಂದ್ರ ಸೇವೆಗಾವುದು ಗಹನಂ ॥ ೫೮ ॥

ಅಂತಲ್ಲಿಯ ಸುಖಮನನುಭವಿಸಿ ಬಂದು ಮಂದರದಪರವಿದೇಹದ ವಿಜ

1. ಸಂವಿಪಾಕ. ಚ. 2. ಸದೃಷ್ಟಿಪತ್ನಿ. ಗ. 3. ಕುರವಕದೊಳ್. ಕ. ಖ. ಗ. ಘ.

ಯಾರ್ಧದ ಶಶಿಪುರಮನಾಳ್ವ ರತ್ನಮಾಲಿಗಂ ವಿದ್ಯುಲ್ಲತೆಗಂ ಸೂರ್ಯಂಜಯನೆಂಬ ಮಗನಾದೆ; ನಿಜಜನಕನಪ್ಪ ರತ್ನಮಾಲಿ ಸಿಂಹಪುರಮನಾಳ್ವ ವಜ್ರಲೋಚನ ನೊಳ್ ಕಾದಲೆಂದು ಚತುರಂಗ ಬಲ ಸಹಿತನಾಗಿ ಪೋಗುತ್ತಮಿರೆ—

ಕಂ ॥ ಮನದ ಮುನಿಸೆಂಬ ಕಟ್ಟಿಲೆ
ಯನಲೆವ ಮಾಣಿಕ್ಯ ದೀಪಮೆನೆ ದಿವದಿಂದಾ ॥
ತನ ಮುಂದಣ್ಗೆಱೆತಂದಂ
ದಿನಲಕ್ಷ್ಮಿಗೆ ತನ್ನ ದೇಹರುಚಿ ಕುಡೆ ಕೊರ್ವಂ ॥ ೫೯ ॥

ಅಂತುಬಂದು—

ಕಂ ॥ ವಿಗ್ರಹದೊಳ್ ನಿನಗಿನಿತೇ
ಕಾಗ್ರಹವುಱೆ ಮುಳಿಸನೊಂದು ಕಥೆಯುಂ ಕೇಳೇ ॥
ಕಾಗ್ರ ಮನದಿಂದಮೆಂದು ಸ
ಮಗ್ರಾವಧಿ ಬೋಧನಮರನಂದಿಂತೆಂದಂ ॥ ೬೦ ॥

ಈ ಭರತದ ವಿಜಯಾರ್ಧ ಮ
ಹೀಭೃತ್ತಟ ತಿಲಕಮೆನಿಪ ಶಶಿಪುರದೊಡೆಯಂ ॥
ಭೂ ಭುವನ ಪ್ರಥಿತ ಯಶಂ
ಶ್ರೀಭೂತಿ ಸುಭೂತಿವೆಸರ ಸುತನಂ ಪಡೆದಂ ॥ ೬೧ ॥

ಉಪಮನ್ಯುವೆಂಬವಂ ತನ
ಗೆ ಪುರೋಹಿತನಾಗೆ ಪಿರಿಯ ಸಿರಿಯಂ ಸುಖದಿಂ ॥
ದುಪಭೋಗಿಸುತ್ತುಮಿರ್ದೊ
ರ್ಮ್ಮೆ ಪೊರ್ದಿದಂ ಕಮಲಗರ್ಭ ಯತಿಪತಿ ಪದಮಂ ॥ ೬೨ ॥

ಅಂತಾ ತಪೋನಿಧಿಯ ಸನ್ನಿಧಿಯೊಳ್ ಮಧು ಮದ್ಯ ಮಾಂಸ ನಿವೃತ್ತನಾಗಿ ವರ್ತಿಸುತ್ತಿರ್ಪ ಶ್ರೀಭೂತಿಯುಂ ತತ್ಪುರೋಹಿತನಪ್ಪುಪಮನ್ಯು ದುಷ್ಟಮತಿ ನಷ್ಟ ವ್ರತಮ್ಮಾಡಿ, ತಾನುಂ ರಣಮರಣದಿಂ ವಾರಣವಾಗಿ ಮತ್ತಂ ಮರಣಮನೆಯ್ದಿ, ಮುನ್ನಂ ತನ್ನ ಪತಿಯುಪ್ಪ ಶ್ರೀಭೂತಿಯ ಮೋಹದಿಂದಾತನ ಸುತನಪ್ಪ ಸುಭೂತಿಗಂ ಯೋಜನಗಂಧಿಗ[1]ಮರಿಂದಮನೆಂಬ ನಂದನನಾಗಿ, ತಾನೊಂದುದಿವಸಂ ಕಮಲಗರ್ಭ ಮಹಾಋಷಿಯ ದರ್ಶನದಿಂ ಜಾತಿಸ್ಮರನಾಗಿ, ತತ್ಸಮೀಪದೊಳ್ ತೊಱೆದು ತಪೋ

1. ಮರವಿಂದ. ಕ. ಖ.

ನಿಷ್ಠೆಯೊಳ್ ನೆರೆದು ದೇವನಾಗಿ ಶತಾರ ಕಲ್ಪದೊಳನಲ್ಪ ಸುಖಮನನುಭವಿಸುತಿರ್ದ ನನ್ನೆಗಮಿತ್ತಲ್—

ಕಂ ॥ ಅಂದು ದುರಾಚಾರದ ಫಲ
ದಿಂದಂ ಶ್ರೀಭೂತಿ ಸತ್ತು ಪುಲ್ಲೆಯ ಬಸಿಱೊಳ್ ॥
ಬಂದಂ ಕಾಟ್ಕಿಚ್ಚುರ್ಚೆ ಸುಡಲ್
ಬೆಂದಂ ಮಂದಾರಮೆಂಬ ಗಹನಾಂತರದೊಳ್ ॥ ೬೩ ॥

ಅಂತು ಕಱಿದು ಕಾಂಭೋಜದೊಳ್ ಕಿರಿಂಜಯನೆಂಬ ಕಿರಾತನಾಗಿ—

ಕಂ ॥ ಆಡಿದ ಕಾಡೊಳ್ ಜವನೆ
ಚ್ಚಾಡಿದನೆನೆ ಕೊಂದು ತಿಂದು ಕೈಯುಂ ಕಾಲುಂ ॥
ಮೂಾಡಿದುವು ಪಾತಕಕ್ಕೆನೆ
ಕಾಡೊಡೆಯಂ ಕಱಿದು ಶರ್ಕರಾಪ್ರಭೆಗಿೞಿದಂ ॥ ೬೪ ॥

ಅದನುಪಮನ್ಯುಚರನಪ್ಪ ದೇವನವಧಿಯಿನಱಿದಲ್ಲಿಗೆ ಬಂದು ನಿನಗೆ ಧರ್ಮೋಪದೇಶಂಗೆಯ್ಯೆ ಕೈಕೊಂಡು ನೀನೀಗಳ್ ರತ್ನಮಾಲಿಯಾದೆ; ನಿನಗೆ ಧರ್ಮೋಪದೇಶಂಗೆಯ್ದವಾವೆಂದು ಪೇೞೆ, ಕೇಳ್ದದುವೆ ನಿರ್ವೇಗಕಾರಣಮಾಗೆ ಸೂರ್ಯಂಜಯನೆಂಬ ನಿಜ ತನೂಜನಂ ರಾಜ್ಯಮಂ ಕೈಕೊಳ್ವುದೆನಲಾತಂ ತಪೋರಾಜ್ಯಮನಲ್ಲದೊಲ್ಲೆನೆಂಬುದುಂ, ತದಪತ್ಯನಪ್ಪ [1]ಕಲ್ಪಾನಂದಂಗೆ ರಾಜ್ಯಮಂ ಕೊಟ್ಟು ರತ್ನಮಾಲಿ ಸೂರ್ಯಂ ಜಯುಂಬೆರಸು ತಿಲಕಸುಂದರ ಮುನಿಗಳ ಸಮಕ್ಷದೊಳ್ ದೀಕ್ಷೆಗೊಂಡನೇಕ ಕಾಲಂ ತಪಂಗೆಯ್ದು ಮಹಾಶುಕ್ರ ಕಲ್ಪದೊಳ್ ಪುಟ್ಟಿ ಪದಿನಾಱು ಸಾಗರೋಪಮಮನಲ್ಲಿಯ ಸುಖಮನನುಭವಿಸಿ ಬಂದಂದಿನ ಸೂರ್ಯಂಜಯನೆ ನೀನೀಗಳ್ ದಶರಥನಾದೆ; ನೀಂ ನಂದಿವರ್ಧನನಾದಂದಿನ ನಿನ್ನ ತಂದೆಯಪ್ಪ ನಂದಿಘೋಷರೆಂಬವರ್ ತೊಱೆದು ನವಗ್ರೈವೇಯಕದೊಳ್ ನೆಲಸಿ ಬಂದು ಸರ್ವಭೂತಹಿತ ಭಟ್ಟಾರಕರಾವಾದೆವಾ ಶ್ರೀಭೂತಿಯುಮುಪಮನ್ಯುವುಂ ಬಂದು ನಿನ್ನ ಮೈದುನರಪ್ಪ ಜನಕನುಂ ಕನಕನುಮಾದರೆಂದು ಬೆಸಸೆ ದಶರಥಂ ವಿಸ್ಮಯಾಕ್ರಾಂತ ಸ್ವಾಂತನಾಗಿ—

ಚ ॥ ಯತಿಪತಿ ಪೇೞೆ ಕೇಳ್ದು ಭವಸಂತತಿಯಂ ಬಗೆದಾ ಜವಂಜವ ।
ಸ್ಥಿತಿಯನನಾದಿಯಂ ಸುಕೃತ ದುಷ್ಕೃತ ಕರ್ಮ ವಿಪಾಕ ಸೌಖ್ಯ ದು ॥
ಸ್ಸ್ಥಿತಿಗಳನುಂಡು ರಾಟಳದ ಗುಂಡಿಗೆಯಂತೆವೊಲಾದೆನೆಂದು ನಿ ।
ರ್ವೃತಿಸುಖದತ್ತಲಾಟಿಸಿದನೇಂ ರಘುಸೂನು ಮಹಾನುಭಾವನೋ ॥ ೬೫ ॥

---

1. ಕಲ್ಪಾಮುರಂಗೆ. ಕ. ಖ. ಘ.; ಕಲ್ಪಾಪುರಂಗೆ ನಂದಂಗೆ. ಗ.

ಚ ॥ ಅವಚಱದಿನ್ನೆಗಂ ಸವಿದೆಸಿಂದ್ರಿಯ ಸೌಖ್ಯಮನಗ್ರ ನಂದನಂ ।
ಕವಚಹರಂ ಜಿತಾಹಿತಬಲಂ ಬಲನನ್ನನಿರಲ್ ಮಹಾಪರಾ ॥
ಭವಮಿದಱಿಂದಮಾವುದೆನಗೆಂದಿರದುತ್ತರಿಸಲ್ಕೊಡರ್ಚಿದಂ ।
ಭವ ಜಲರಾಶಿಯಂ ದಶರಥಂ ಜಿನರೂಪ ವಹಿತ್ರ ಯಾತ್ರೆಯಿಂ ॥ ೬೬ ॥

ಮ ॥ ಪರಪೀಡಾಕರಮೆಂತು ನೋಡುವೊಡಮರ್ಥೋಪಾರ್ಜನಂ ತದ್ದುರಾ ।
ಚರಿತೋದೀರಿತ ದುಃಖ ತಿಕ್ತ ಫಲ ಸೇವಾಕಾಲದಂದೊರ್ವರುಂ ॥
ನೆರವಿಲ್ಲಾ ಧನ ಸೇವೆಯಂದೆ ನೆರವಪ್ಪರ್ ನಂಟರೆಂದಂದು ತಾಂ ।
ಮರುಳಕ್ಕುಂ ಪುರುಳಕ್ಕುಮೇ ಮಱೆದು ಹಾನಾದಾನ ವಿಜ್ಞಾನಮಂ ॥ ೬೭ ॥

ವನಿತಾ ಸಂಕುಲಮುಂ ಷಡಂಗ ಬಲಮುಂ ಭಂಡಾರಮುಂ ವಸ್ತುವಾ ।
ಹನಮುಂ ತನ್ನೊಡವರ್ಪುವಲ್ಲವೊಡವರ್ಕುಂ ಪುಣ್ಯಪಾಪಂಗಳೆಂ ॥
ಬಿನಿತಂ ಭಾವಿಸಿ ತಾನೆ ತನ್ನ ದೆಸೆಯಿಂ ತನ್ನಂದಮಂ [1] ಭಾವಿಸಲ್ ।
ಮನಮಂ ತಾರದೆ ಬಾಹ್ಯಮಂ ಬಯಸುವಂತಶ್ಶೂನ್ಯನುಂ ಮಾನ್ಯನೇ ॥೬೮॥

ಅಱೆವೆಣ್ಣಾದೊಡವೊಂದೆರಡ್ದಿವಸವೊಂದಾಗಿರ್ದವಂ ನಂಟನೆಂ ।
ದುಱೆದಂದನ್ಯರನಾಸೆಗೆಯ್ಯುಳವಳಿಂ ನಿರ್ವ್ಯಾಕುಳಂ ಪೊಲ್ಲಿವಳ್ ॥
ಪಱೆಗಂಜಳ್ ಭರತಾದಿಗಳ್ ಪಲವುಕಾಲಂ ತನ್ನೊಳೋತಿರ್ದವರ್ ।
ಕಱೆದಂದಾ ಕ್ಷಣದೊಳ್ ಧರಾರಮಣಿ ಮತ್ತೊರ್ವಂಗೆ ಪುರ್ವಿಕ್ಕುವಳ್ ॥೬೯॥

ಮೃಗಭೂ ಮಿಶ್ರಿತ ಸಾಂದ್ರ ಚಂದನ ರಸಂಗಳ್ ಚಂದನೋಶೀರ ವಾ ।
ರಿಗಳುಂ ನರ್ತಿತ ಹೇಮ ಚಾಮರ ಚಲನ್ಮಂದಾನಿಲಂಗಳ್ ವಿಲಾ ॥
ಸ ಗೃಹಂಗಳ್ ಕಳೆಯಲ್ಕೆ ಸಾಲ್ದಪುವೆ ರಾಗದ್ವೇಷ ವೇಗಂಗಳಿಂ ।
ಬಗೆಯೊಳ್ ಪೆರ್ಚಿದ ತಾಪಮಂ ಕಳೆವವೋಲ್ ಜೈನಾಂಘ್ರಿ ಕಲ್ಪಾಂಘ್ರಿಪಂ ॥

ಕಂ ॥ ಎನಿತೆನಿತಂ [2]ಪುಂಜಿಸಿದೊಡ
ವನಿತನಿತುಂ ಮಣಿಯಲಱಿಯದಣಿಯರಮುರಿಗುಂ ॥
ಧನದಿಂ ಲೋಭಾಗ್ನಿಯನಿಂ
ಧನ ಭಾರದಿನಾವನಗ್ನಿಯುಂ ನಂದಿಸುವಂ ॥ ॥ ೭೧ ॥

ಜನಕನನರಣ್ಯನಗ್ರಜ
ನನಂತರಥನಿಳೆಯನೊಂದುತಿಂಗಳ ಕೂಸಿಂ ॥
ಗೆನಗಿತ್ತು ತೆಱೆದರೆನ್ನವೊ
ಲಿನವಂಶದೊಳಿಂತು ಮೋಹ ಮೂರ್ಛಿತರೊಳರೇ ॥ ೭೨ ॥

1. ಸಾವಿಸಲ್. ಚ. 2. ಭುಂ. ಕ. ಖ.; ಭಂ. ಗ.

ಅಕ್ಕರ ॥ ಸಾವ ಪುಟ್ಟುವ ಭಯಮುಂ ಸಂಸಾರಮುಂ ಸಪ್ತಧಾತುಜಮುಂ ದೇಹಸ್ಥಿತಿಯು ।
ನಾವವಸ್ತುವನುಂಡೊಡಂ ತಣಿಯದ ಕಾಂಕ್ಷೆಯುಂ ಬಗೆದು ತನ್ನೊ ॥
ಳೀವುದೀ ತೊಡರ್ಪಿನಗಿದೇಕೆಂದು ದಶರಥಂ ಭಾವಿಸಿ ಭಾವಿತಾತ್ಮನಂ ।
ಭಾವಿತಾತ್ಮನಂ ಪರಮಯೋಗೀಂದ್ರನಂ ಬೀಟಿಕ್ಕೊಂಡಯೋಧ್ಯೆಗೆ ಬಂದ ನಾಗಳ್ ॥ ೭೩ ॥

ಅಂತರಮನೆಯನಧಿರಾಜಂ ಪೊಕ್ಕು ನಿರ್ವರ್ತಿತ ನಿತ್ಯನಿಯಮನಾಸ್ಥಾನ ಮಂಟಪ ಮಧ್ಯ ಸ್ಥಿತ ಸಿಂಹಾಸನಮನಲಂಕರಿಸಿರ್ಪುದುಂ—

ಚ ॥ ನೆಲಸಿದ ರಾಜಮುಂಡಲಿಯು ಮುಂಡಳಿಕರ್ಕಳ ದಂಡನಾಥ ಮಂ ।
ಡಲಿಯ ನಿಯೋಗಿ ವರ್ಗದ ಪುರೋಹಿತ ವರ್ಗದ ಮಂತ್ರಿ ವರ್ಗದು ॥
ಜ್ವಲ ನವರತ್ನ ಭೂಷಣ ಕಿರೀಟ ಹಟದ್ರುಚಿಯಿಂದದೇಂ ಪಳಂ ।
ಚಲಿದುದೊ ರಾಜರಾಜಸಭೆ ಕುಂಭಜನೀಂಟಿದ ತೋಯ ರಾಶಿಯುಂ ॥ ೭೪ ॥

ಕಂ ॥ ಗುರು ಜನಮುಮಾಪ್ತ ಜನಮುಂ
ಪರಿಜನಮುಂ ಬಂಧುಜನಮುಮಾಶ್ರಿತ ಜನಮುಂ ॥
ಪರಿಜನಮುಂ ತಿಂತಿಣಿಯಾ
ಗಿರೆ ಸಭೆಪೋಲ್ತತ್ತು ರತ್ನಮೇಳಾಪಕಮುಂ ॥ ॥ ೭೫ ॥

ಅಂತೊಡ್ಡೋಲಗಂಗೊಟ್ಟು ದಶರಥ ಮಹೀನಾಥಂ ನಿಜ ತನೂಭವರಂ ಬರವೇಟ್ಟಿಟ್ಟುವುದುಂ ತದಾಜ್ಞೆಯುಂ ತಲೆಯೊಳಾಂತು—

ಚ ॥ ಹಲ ಮುಸಲಾಯುಧಂ ನಡೆವ ತಾರ ನಗೇಂದ್ರಮನೊಂದುಕರ್ಮುಗಿಲ್ ।
ಬಳಸಿದವೊಲ್ ವಿರಾಜಿಸೆ ವಿನೀಲಪಟಂ ನಡೆತಂದನೇಕ ಕುಂ ॥
ಡಲಮುದಯಾರ್ಕ ಮುಂಡಲಮುನೇಳಿಸೆ ಶೇಷನಶೇಷ ಧಾತ್ರಿಯುಂ ।
ತಳೆವೆಡೆಯೊಳ್ ನೆರಂಬಡೆದವೋಲಿರೆ ದಕ್ಷಿಣ ವಾಮ ಬಾಹುಗಳ್ ॥ ೭೬ ॥

ಮ ॥ ಘನ ದೋರ್ದಂಡ ವಿಮುಂಡಿತಂ ಘನಗದಾ ದಂಡಂ ಬೃಹತ್ಕಾಲದಂ ।
ಡನಿಭಂ ಭೀಕರಮಾಗೆ ಪೀತವಸನಂ ಸಂಧ್ಯಾಂಬುದಂ ಕೋದ ನೀ ॥
ಲನಗೇಂದ್ರಂ ನಡೆತರ್ಪ ಮಾಟ್ಕೆಯಿನುಪೇಂದ್ರಂ ದುರ್ಜಯಂ ರಾಮಚಂ ।
ದ್ರನ ಪಿಂದಂ ನಡೆತಂದನಾಯತ ಸಿತಾಂಭೋಜೇಕ್ಷಣಂ ಲಕ್ಷ್ಮಣಂ ॥ ೭೭ ॥

ಚ ॥ ಇದಿರ್ವರೆ ತತ್ಸಭಾಜನದ ಕಣ್ಮಲರುಂ ಮನಮುಂ ಕೆಲಕ್ಕೆ ವಂ ।
ದೊದವಿದ ಭಕ್ತಿಯಿಂದೆಱಗಿದಂ ಪಿತೃ ಪಾದಯುಗಕ್ಕೆ ರಾಘವಂ ॥

ಪದನಖ ಚಂದ್ರ ಮಂಡಲಿಗೆ ಚಂದ್ರಿಕೆಯಂ ಕುಡೆ ದೇಹದೀಪ್ತಿ ಹಾ।
ರದ ನೆವದಿಂದಮೋಲಗಿಸೆ ತಾರಗೆಯಂ ನಿಜಕಂಠ ಕಂದಳಂ ॥ ೭೮ ॥

ಅನಂತರಂ ಲಕ್ಷ್ಮಣ ಭರತ ಶತ್ರುಘ್ನರ್ ಸರ್ವಾಂಗ ಪ್ರಣತರಪ್ಪುದುಂ ಅನಂತ ಸುಖ ಭೋಗ ಭಾಗಿಗಳಾಗಿಮೆಂದು ಪರಸಿ ಪರ್ಯಂಕ ಪಾರ್ಶ್ವದೊಳಿಕ್ಕಿದ ಮಣಿಮ ಯಾಸನಂಗಳೊಳ್ ಕುಳ್ಳಿರಿಸಿ ದಶರಥಂ ರಾಮಚಂದ್ರನ ಮುಖಚಂದ್ರಮಂ ನೋಡಿ–

ಚ ॥ ನಿಲೆ ನುಡಿವೀವ ಕಾವ ಧರೆಯಂ ಪ್ರತಿಪಾಲಿಪ ಧರ್ಮವೀಧಿಯಿಂ।
ತೊಲಗದ ಪೆರ್ಮೆಯಂ ತಳೆದ ಪೆರ್ಮಗನಂ ಭುವನಾಧಿಪತ್ಯದೊಳ್ ॥
ನಿಲಿಸಿ ನಿಸರ್ಗ ದುರ್ಗಮೆನಿಸಿರ್ದಪವರ್ಗ ಪಥಕ್ಕೆ ದಾಱಿಯಿ।
ಟ್ಟಲಘು ಪರಾಕ್ರಮಕ್ಕೆ ನೆಲೆಯಾಗದ ಪಾರ್ಥಿವನೇಂ ಕೃತಾರ್ಥನೇ ॥ ೭೯ ॥

ಮ ॥ ನೊಸಲೊಳ್ ಕಣ್ಬಡೆದಂತೆ ಪುತ್ರ ಪಡೆದೆಂ ನಿನ್ನಂ ಸ್ಫುರತ್ತೇಜನಂ।
ವಸುಧಾ ರಾಜ್ಯಮನೊಪ್ಪುಗೊಳ್ ನಿಲಿಸು ನೀನೆನ್ನಂ ತಪೋರಾಜ್ಯದೊಳ್॥
ಪಸುಗೂಸಿಂಗೆನಗಿತ್ತು ಮಜ್ಜನಕನೀ ಸಂಪತ್ತಿಯಂ ಪೂಣ್ದು ಸಾ।
ಧಿಸಿದಂ ಸಜ್ಜನತಾ ಶರಣ್ಯನನರಣ್ಯಾಂ ಮೋಕ್ಷ ಸಂಪತ್ತಿಯಂ ॥ ೮೦ ॥

ಮ ॥ ಸುತ ನಮ್ಮನ್ವಯದೊಳ್ ಪುರಾತನ ಜಗದ್ವಿಖ್ಯಾತ ಭೂನಾಥರೀ।
ಸ್ಥಿತಿಯಿಂ ರಾಜ್ಯ ಸುಖಂಗಳೊಳ್ ತಣಿದು ತತ್ತ್ವಾಭ್ಯಾಸ ವಿಶ್ರಾಂತ ಜೀ॥
ವಿತರಾದರ್ ಮಱಿದೀ ಕುಲಕ್ರಮುಮನಾನಿಂತಿ[1]ರ್ದು ಸನ್ಮಾರ್ಗ ಪ।
ದ್ಧತಿಯಂ ಹಾಸ್ಯರಸ ಪ್ರವಾಹ ಭರದಿಂ ಪ್ರಕ್ಷಾಳಿತಮ್ಮಾಟ್ಪೆನೇ ॥ ೮೧ ॥

ಮ ॥ ತಿಲಕಾಕಾರದಿನಿರ್ಕೆ ನಿನ್ನ ನೊಸಲೊಳ್ ಸಾಮ್ರಾಜ್ಯಪಟ್ಟಂ ಧರಾ।
ವಲಯಾಲಂಕೃತಮಕ್ಕೆ ನಿನ್ನ ಭುಜದಂಡಂ ನಿನ್ನ ಮೌಳಿಪ್ರಭಾ॥
ವಲಿಯಿಂ ಚಿತ್ರಿತಮಕ್ಕೆ ಬೆಳ್ಗೊಡೆ ತಪಶ್ರೀಗಾಂ ಮನಂದಂದೆನೆ।
ನ್ನೊಲವಂ ಪಾಲಿಸು ಪಾಱಿಯಲ್ತು ಪಿತೃವಾಕ್ಯೋಲ್ಲಂಘನಂ ರಾಘವಾ॥೮೨॥

ಚ ॥ ಕಿಡಿವಿಡೆ ಕರ್ಪರಂ ಸುಗಿದು ಮೆಯ್ದೆಗೆದಂ ಕಮಠಾಧಿಪಂ ಪಡ।
ಲ್ವಿಡೆ ಪೆಡೆಗಳ್ ಫಣಿಪ್ರಭು ಮೊಗಂದಿರಿದಂ ದೆಸೆಯಾನೆ ಮಾರ್ಕೊರ॥
ಲ್ವಡೆಯದೆ ತಟ್ಗಿ ಮುಟ್ಗಿದುವಿವರ್ಕತಿಭಾರದೊಳಾದ ಸೇದೆಯಂ।
ಕಿಡಿಸಿ ತನೂಜ ನೀಂ ತಳೆವುದೀ ನೆಲನಂ ನಿಜಬಾಹು ದಂಡದೊಳ್ ॥ ೮೩ ॥

ಎಂಬುದುಂ ರಾಮಚಂದ್ರಂ ಮುಕುಳಿತ ಕರಸರೋಜನಾಗಿ—

---

1. ರ್ದ. ಚ.

ಮ ॥ ಧರೆಯಂ ದ್ವಾದಶ ಚಕ್ರವರ್ತಿಗಳಿಗಿತ್ತಲ್ ದೇವ ನಿಮ್ಮಾ ಭುಜಾ ।
ಪರಿಘಕ್ಕೊಪ್ಪಿಸಿ ಬೇಟ್ಪುದಂ ಪಡೆದುವೆತ್ತಾನುಂ ದಿಶಾದಂತಿ ದಿ ॥
ಕ್ಕರಿಣೀ ಪೇಚಕ ಚುಂಬನೈಕ ಸುಖಮಂ ಶೇಷೋರಗಂ ಭೋಗಿನೀ ।
ಪರಿರಂಭೋತ್ಸವಮಂ ಪುರಾಣ ಕಮಠಂ ನಿದ್ರಾಂಗನಾ ಸಂಗಮಂ ॥ ೮೪ ॥

ಚ ॥ ಬಳವದರಾತಿ ಮಂಡಲಮನಂಡಲೆದುದ್ಧತ ಬಾಹು ದಂಡದಿಂ ।
ದಿಳೆಯನಿಳೇಶ ನೀಂ ತಳೆದುದಂ ರಣ ಬಾಲಕರೆಮ್ಮ ವಂದಿಗರ್ ॥
ತಳೆವರೆ ವಿಶ್ವಲೋಕಮುಮನಶ್ರಮದಿಂ ಪ್ರಬಲ ಪ್ರಭಂಜನಂ ।
ತಳೆವವೊಲಕ್ಷಮಂ ತಳೆಯಲಾರ್ಕುಮೆ ವೀಜನ ಮಂದಮಾರುತಂ ॥ ೮೫ ॥

ಎನೆ ದಶರಥಂ ತನಯನ ವಿನಯ ವಚನಮಂ ಮನದೆ ಕೊಂಡು—

ಮ ॥ ತನಯಂಗೊಪ್ಪಿಸಿ ರಾಜ್ಯಮಂ ನಿಯಮದಿಂ ನಿಲ್ವರ್ ತಪೋರಾಜ್ಯದೊಳ್ ।
ಮನುವಂಶ ಕ್ಷಿತಿನಾಥರೀ ಸ್ಥಿತಿಗೆ ನಿನ್ನಂ ಪ್ರಾರ್ಥಿಸಲ್ವೇಡ ನಂ ॥
ದನ ಸಂಕ್ರಂದನ ವಂದನೀಯ ಪದದೊಳ್ ನಿಲ್ವೆಂ ತಪೋರಾಜ್ಯದೊಳ್ ।
ನಿನಗಸ್ಮದ್ವಚನಂ ವಿಧೇಯಮದಱಿಂ ಕೈಕೊಳ್ ಧರಾಭಾರಮಂ ॥ ೮೬ ॥

ಎಂದಿವುಮೊದಲಾಗೆ ಪಲತೆಱದಿಂ ಮಱುಮಾತಿಂಗೆಡೆಯಿಲ್ಲದಂತು ನುಡಿದೆಂತಾನುಂ ರಾಮುನನೊಡಂಬಡಿಸಿ ರಾಜ್ಯಸ್ಥನಪ್ಪಂತು ಮಾಡೆ ತದನಂತರಂ ಭರತಂ ಮುಕುಳಿತ ಕರಸರೋಜನಾಗಿ—

ಚ ॥ ಒಡಲಶುಚಿತ್ವಮಂ ಗತಿ ಚತುಷ್ಟಯದೊಳ್ ದೊರೆಕೊಳ್ವನಿಷ್ಟಮಂ ।
ಕಿಡುವ [1]ಸುಖಂಗಳಿಂ ತಣಿಯದಾಯುಸಮಂ ತಿಳಿದಿರ್ದುಮೇನೊ ನಿ ॥
ಮ್ಮಡಿ ನಿಮಗಳ್ಕಿ ಬಿನ್ನವಿಸಲಿನ್ನೆವರಂ ಸೆಡೆದಿರ್ದೆನಿನ್ನೆರಂ ।
ಬಡೆದೆನಿಳೇಶ ನಿಮ್ಮೊಡನೆ ಸಾಧಿಸುವೆಂ ಪರಮಾ[2]ರ್ಥಸೌಖ್ಯಮಂ ॥ ೮೭ ॥

ಉಪಚಿತ ಸೌಖ್ಯಮೊಂದಧಿಕ ದುಃಖ ಸಮಾಗಮ ಜನ್ಮಭೂಮಿಯೊಂ ।
ದಪಗತ ದೋಷಮೊಂದಖಿಲ ದೋಷ ಸಮನ್ವಿತಮೊಂದತಾಪಮೊಂ ॥
ದಪರಿಮಿತಾನುತಾಪ ಪದಮೊಂದದಱಿಂ [3]ಜಿನಪಾದ ಕಲ್ಪಪಾ ।
ದಪ ಪರಿಸೇವೆಗಂ ಜನಪ ಸಂಪದ ಸೇವೆಗಮಾವುದಂತರಂ ॥ ೮೮ ॥

ಎಂದು ತಱಿಸಂದು ಭರತಂ ಬಿನ್ನವಿಸೆ ತತ್ಸಭೆಯೊಳೊರ್ವಳತಿತ್ವರಿತ

---

1. ಸುಖಂಗಳಂ. ಚ. 2. ತ್ಥ. ಕ ಖ. ಚ. 3. ನಿಜ. ಕ. ಖ. ಗ. ಘ. ಚ.

ಗತಿಯಿಂ ಬಂದು ರಾಮಂಗೆ ರಾಜ್ಯಮನಿತ್ತು ದಶರಥಂ ಭರತಂಬೆರಸು ತಪೋವನಕ್ಕೆ ಪೋಪುದಂ ನಿವೇದಿಸೆ ಕೈಕೆ ವಿಕಳೆಯಾಗಿ—

ಕಂ ॥ ಧರೆಯಂ ರಾಮಂಗಿತ್ತಂ
ಗುರುವಾನಱಿಪಿಂದಮಿರ್ದೊಡೆನಗಕ್ಕುಂ ಕಿಂ ॥
ಕರ ಭಾವಮೆಂಬ ಬಗೆಯಿಂ
ಭರತಂಗೊಡರಸಿದುದಕ್ಕುಮಿಾ ನಿರ್ವೇಗಂ ॥ ॥ ೮೯ ॥

ಅವನೀಶ್ವರನೊಡನೆ ತನೂ
ಭವಂ ತಪಂಬಟ್ಟೊಡಾಸೆಯಾರೆನಗೆಂದಾ ॥
ಯುವತಿ ಭಯಚಕಿತೆ ಚಿಂತಾ
ರ್ಣವ ಗರ್ತ ನಿಮಗ್ನೆ ಮಱೆದಳೆಮೆಯಿಕ್ಕುವುದಂ ॥ ೯೦ ॥

ತಕ್ಕಱಿದೆನಗೆ ಸಪತ್ನಿಯ
ರಿಕ್ಕುಂಗೊಱಂಗೆ ಬಯಸಿ ಪಾರ್ದಿರ್ಪ ವಿಷಾ ॥
ದಕ್ಕೆ ಗುರಿಯಪ್ಪ ದುರ್ಯಶ
ಮಕ್ಕುಂ ತನಯಂ ತಪಕ್ಕೆ ಪಕ್ಕಾಗಲೊಡಂ ॥ ॥ ೯೧ ॥

ಎಂದು ಪಲುಂಬಿ ಪಂಬಲಿಸುತ್ತುಮಾ ಸಮಯದೊಳ್—

ಕಂ ॥ ತನಗಿನಿಯನಿತ್ತ ಮೆಚ್ಚಂ
ನೆನೆದಳ್ ಮಡಗಿಟ್ಟು ಮಱೆದ ಧನಮಂ ಬಡವಂ॥
ನೆನೆವಂತೆ ಕಾಂತೆ ಚಿಂತಾ
ಘನಾಂಧಕಾರ ಪ್ರದೀಪ ರೂಪೋಪಮಮಂ ॥ ೯೨ ॥

ಅಂತು ನೆನೆದು ಮನದೊಳ್ ಗುಡಿಗಟ್ಟಿ ಭರತನಂ ರಾಜ್ಯಮೋಹದೊಳ್ ತೊಡರ್ಚಲೆಂದೊಡರ್ಚಿ—

ಚ ॥ ಕನಕ ವಿಭೂಷಣ ಪ್ರಭೆ ತನುಪ್ರಭೆಯಿಂ ತನಿಗೊರ್ವುಗೊರ್ವೆ ಮೋ ।
ಹನಮನೊಡರ್ಚಲೆಂದು ಗುಣ ಹಾನಿಗೆ ಬೆರ್ಚದೆ ಧರ್ಮಹಾನಿಯಂ॥
ನೆನೆಯದೆ ಪಾತ್ರಸೇವೆ ವೃಥೆಯಾದುದೆನಲ್ ಮಲಿನಾಂತರಂಗೆ ಟ ।
ಕ್ಕಿನಸೊಡರಂತೆ ಕೈಕೆ ಪುಗುತಂದಳಿಳಾಧಿಪ ರಮ್ಯ ಹರ್ಮ್ಯಮಂ ॥ ೯೩ ॥

ಕಂ ॥ ಉದ್ವೇಗ ಭರಂ ಸಭೆಗೆ ಜ
ಗದ್ವಲ್ಲಭನಭಿಮತಕ್ಕೆ ವಿಘ್ನಮುಪಾಯಂ ॥

ವಿದ್ವಜ್ಜನಕ್ಕೆ ಪಸುಗೆಗೆ
ವಿದ್ವೇಷಣ ವಿದ್ಯೆ ಬರ್ಪ ತೆಱದಿಂ ಬಂದಳ್ ॥ ೯೪ ॥

ಅಂತು ಕೆಲಕ್ಕೆ ಬಂದು—

ಚ ॥ ಅನುಚಿತಮೆಂಬಿದಂ ಬಗೆಗೆ ತಾರದೆ ದುರ್ಯಶಮಕ್ಕುಮೆಂಬಿದಂ ।
ನೆನೆಯದೆ ಕೈಕೆ ದೇವರೆನಗೀವುದು ಬೈಕೆಯ ಮೆಚ್ಚನೆಂಬುದುಂ ॥
ಮನುಕುಲದೊಳ್ ತೊದಳ್ನುಡಿ ಪೊದಟ್ಗಿಮೆ ಬೆರ್ಚದೆ ಬೇಡಿಕೊಳ್ ತಪೋ ।
ವನ ಗಮನಕ್ಕೆ ವಿಘ್ನಕರಮಲ್ಲದುದಂ ಮೃಗಶಾಬ ಲೋಚನೇ ॥ ೯೫ ॥

ಎನೆ ಮನದೆ ಕೊಂಡು—

ಚ ॥ ವದನ ಸುಧಾಂಶು ಬಿಂಬದ ಕಳಂಕದ ಬಿತ್ತುಗಳಂತೆ ವಕ್ತ್ರ ಪ ।
ದ್ಮದ ಮಧುಪಾನಮಂ ಸವಿದು ಸೊರ್ಕಿದ ತುಂಬಿಗಳಂತೆ ನೀಳ್ದುವಾ ॥
ಸುದತಿ ಸಮಗ್ರನಗ್ರಜನಿರಲ್ ಪಟುಗಂಜದೆ ಪಾಪ ಭೀರುವಾ ।
ಗದೆ ಭರತಂಗೆ ರಾಜ್ಯ ಭರಮಂ ಕುಡವೇಟ್ಡ ಮಲೀಮಸೋಕ್ತಿಗಳ್ ॥ ೯೬ ॥

ಕಂ ॥ ದಶರಥನಂ ಕೈಕೆ ಚತು
ರ್ದಶ ವರ್ಷಾವಧಿಯನವನಿಯಂ ಬೇಡೆ ಚತು ॥
ರ್ದಶ ಭುವನಾವಧಿಯೆನೆ ದು
ರ್ಯಶ[1]ಸ್ಫುಟನ್ನಾದಮಾದಮೋನೊದವಿದುದೋ ॥ ೯೭ ॥

ಕನವನಿಪ ಕಾಳರಾತ್ರಿಯ
ದನಿಯಂತಾ ನೃಪನ ಕಿವಿಗೆ ದುಸ್ಸಹಮಾಯ್ತಾ ॥
ವನಿತೆಯ ನುಡಿ ಕಿಡಿಯಂತಿರೆ
ಮನಕ್ಕೆ ಪಡೆದತ್ತು ವೇದನಾಸ್ವಾದನಮಂ ॥ ೯೮ ॥

ಡೋಲಾಯಮಾನ ಮನನ
ಸ್ತಾಲಾಪಂ ಗತ ಮನೋರಥಂ ದಶರಥನಾ ॥
ಬಾಲೆಯ ದನಿ ಕಿವಿವುಗೆ ಘ್ರನ
ಮ್ರಾಲೆಯ ದನಿಗೇಳ್ದ ಹಂಸನಂತಳವಟುದಂ ॥ ೯೯ ॥

ಮ ॥ ಎರಡಕ್ಕುಂ ನುಡಿ ಮೆಚ್ಚುಗೊಟ್ಟು ಕುಡದಂದೀ ಕೈಕೆಗಾನಿತ್ತೊಡಂ ।
ಧರೆಯಂ ಸ್ತ್ರೀಜಿತನಾಗಿ ಕೊಟ್ಟನವನೀಶಂ ರಾಮನಿರ್ದಂದದಿಂ ॥

---

1. ಸ್ಫುಟತ್ಪುಟಹನಾದಮೋ. ಗ; ಯಶಃಪಟಹ ಗಭೀರ ನಾದಮೋ. ಘ.

ಭರತಂಗಂಬಪವಾದಮಕ್ಕುಮದಱಿಂದೇನೆಂಬೆನಾನೆಂದು ಮೂ।
ಗರವೋಲ್ ಮೌನದೊಳೊಂದಿ ಪಚ್ಚಬಗೆಯಿಂ ದುಮ್ಮಿಚ್ಚಮಂ ತಾಳ್ದಿದಂ೧೦೦

ಅಂತು ದಶರಥ ನರನಾಥಂ ದಿವಸದವಸಾನದ ರಥಾಂಗದಂತೆ ಚಿಂತಾಕ್ರಾಂತ ನಾಗಿರ್ಪುದುಂ—

ಕಂ ॥ ಮಜ್ಜನನಿ ನೆಲನನೆನಗ
ಸ್ಮೃಜ್ಜನಕನನೆರೆದಳೆಂದು ನೊಂದಂ ಭರತಂ ॥
ಲಜ್ಜಾನತನಭಿಮಾನದ
ಪಜ್ಜೆಯನೇಂ ತಪ್ಪಿ ಮೆಟ್ಟಲಱಿಗುಮೆ ತಕ್ಕಂ ॥ ೧೦೧ ॥

ಇಷ್ಟಮೆನಗಲ್ತು ಪತಿಗಮ
ನಿಷ್ಟಂ ಭಾವಿಸಿದಳಿಲ್ಲ ತನಗಂ ದೃಷ್ಟಾ ॥
ದೃಷ್ಟ ವಿರೋಧಂ ದುರ್ಣಯ
ಚೇಷ್ಟಿತಮಂ ಜನನಿ ಮುಗ್ಧಮತಿ ತಿಳಿದಪಳೇ ॥ ೧೦೨ ॥

ಎಂದು ಭರತಂ ವಿಷಾದ ಭರ ತಂದ್ರೀಭೂತ ಚೇತಸನಾಗಿರ್ಪುದುಂ—

ಚ ॥ ನುಡಿದಳನಿಷ್ಟಮಂ ನುಡಿದಳನ್ನೆಯಮಂ ಪತಿಗಂ ವಿರುದ್ಧಮಂ।
ನುಡಿದಳಸೇವ್ಯಮಂ ನುಡಿದಳನ್ವಯ ರಾಜ್ಯ ವಿನಾಶ ಹೇತುವಂ ॥
ನುಡಿದಳೆನುತ್ತುಮಳ್ಕದೆ ನರೇಂದ್ರ ಸಭಾ ಜನಮುಂದು ಕೈಕೆಯುಂ।
ನುಡಿದುದು ಮೆಚ್ಚಿದಂದದೊಳೆ ದೋಷಮೆ ದುರ್ಬಲಮಾಗದಿರ್ಕುಮೇ॥೧೦೩॥

ಮನದಱಿಪಿಲ್ಲದಂಗನೆಯರೊರ್ವರುಮಿಲ್ಲೆನೆ ಕೈಕೆ ಬೇಡಿ ಮೇ।
ದಿನಿಯನಿದೇಕೆ ಮಾಡಿದಳೊ ಮುಗ್ಧೆ ಸಹೋದರರೊಳ್ ವಿಭೇದಮಂ ॥
ತನಗಪವಾದಮಂ ದಶರಥಂಗೆ ವಿಷಾದಮನೀಗಳಾತ್ಮನಂ।
ದನನ ಮನಕ್ಕೆ ಖೇದಮನದೊಂದುಚಿತಾಚರಣ ಪ್ರಮಾದಮಂ ॥ ೧೦೪ ॥

ಕಂ ॥ ಇತರರಳ[1]ವಲ್ಲದಪರಾ
ಜಿತಾ ಸುತಂಗಲ್ಲದೇಕೆ ದೇವಿ ಧರಿತ್ರೀ ॥
ಪತಿಯುಂ ವಸುಮತಿಯುಂ ಜಡ
ಮತಿ ಬೇಡಿದಳೆಂದು ಕೆಲಬರೇಳಿಸಿ ನುಡಿದರ್ ॥ ೧೦೫ ॥

---

1. ವಳ್ಳಿ. ಗ.

ಕಂ॥ ಕೀರ್ತಿಸೆ ಧರೆ ತಲೆಗರೆದಿರೆ
ಮೂರ್ತಲೆ ರಾಘವನಮೋಘಶರಮುಂ ವಜ್ರಾ ॥
ವರ್ತಮುಮಲ್ಲದೆ ರಕ್ಷಿಸ
ಲಾರ್ತಪುವೇ ನೆಲನನುೞಿದರಂಬುಂ ಬಿಲ್ಲುಂ ॥ ೧೦೬ ॥

ಗುಣಹಾನಿಗೆ ಬೆರ್ಚದೆ ಧಾ
ರಿಣಿಯುಂ ಪ್ರಣಯದಿನಿಳೇಶನಿತ್ತೊಡಮೇಂ ಲ ॥
ಕ್ಷ್ಮಣನೀಯಲೀಯನೆಂಬುದ
ನೆಣಿಸಳೆ ಜಡಮತಿಗಳಾಗದಿರ್ಪರೆ ಪೆಂಡಿರ್ ॥ ೧೦೭ ॥

ಸುತಮೋಹದಿನೀ ವಧು ಪತಿ
ಹಿತಮಂ ಭಾವಿಸಿದಳಿಲ್ಲ ತನಗಮುಣಂ ದು ॥
ರ್ಗತಿ ಹೇತುವನತಿದ್ರೋಹಂ
ಗತಿಗಿಡಿಸುಗುಮೆಂಬ ನಾಡನುಡಿ ತಪ್ಪುಗುಮೇ ॥ ೧೦೮ ॥

ಮೋಘಮನಖಿಲ ಪರಿಗ್ರಹ
ದಾಘಮನೀ ಕೈಕೆ ಬೇಡೆ ಧರೆಯುಂ ತೃಣದಿಂ॥
ಲಾಘವಮೆನೆ ಬಗೆದೀಗುಂ
ರಾಘವನೌದಾರ್ಯ ತುಂಗನೀಯದುದುಂಟೇ ॥ ೧೦೯ ॥

ಮ॥ಸ್ರ॥ಭರತಂ ಲಜ್ಜಾನತಂ ತಾಯ್ ವಿಕಳೆ ದಶರಥಂ ವಿಹ್ವಲಂ ಲಕ್ಷ್ಮಣಂ ಕೋ।
ಪ ರಸಾವೇಶಂ ಸಭಾಮಂಡಲಮುಸಕೃದಸದ್ವಾಕ್ಯ ಮುಕ್ತೋಷ್ಠಮಂತಃ ॥
ಪುರವಂತಶ್ಶೂನ್ಯಮಿಂತಿರ್ಪುದುಮುಪಚಿತ ಕಾರುಣ್ಯ ದೃಷ್ಟಿ ಪ್ರಭಾ ನಿ ।
ರ್ಭರ ಪೂರಂ ಪಾರಿಜಾತಂ ಕಡಲ ನಡುವೆ ಕೈವಂದವೋಲ್ ರಾಮನಿರ್ದಂ

ಉ ॥ ತಂದೆಯ ನನ್ನಿ ನಿಲ್ವುದು ಮನೋರಥವಪ್ಪುದು ತಾಯ್ಗೆ ರಾಜ್ಯದೊಳ್ ।
ನಿಂದಪನೆನ್ನ ತಮ್ಮನೊಸೆದಿತ್ತು ಕೃತಾರ್ಥನೆನಪ್ಪೆನೆನ್ನ ಸೈ ॥
ಪಿಂ ದೊರೆಕೊಂಡುದೀ ಪರಮ ಲಾಭಮೆನುತ್ತುಮುದಾತ್ತ ಚಿತ್ತನಾ ।
ನಂದಮನಪ್ಪುಕೆಯ್ದು ಪುಲಕೋದ್ಗಮಮಂ ತಳೆದಂ ಹಲಾಯುಧಂ॥ ೧೧೧ ॥

ಚ ॥ ಮಗನೆನಿಪಂಗೆ ಮಾತೃಪಿತೃ ಭಕ್ತಿಯೆ ಕೃತ್ಯಮಿಹತ್ರೆಗಂ ಪರ ।
ತ್ರೆಗಮುಪಕಾರಿ ಬೇಱೆ ಪೆಱತಾವುದೊ ಚಾರುಚರಿತ್ರಮೆಂದು ಕೀ ॥
ರ್ತಿಗೆ ದೆಸೆ ಸಾಲವೆಂಬಿನೆಗಮರ್ಣವ ಮೇಖಲೆಯಂ ಧರಿತ್ರಿಯಂ ।
[1]ಬಗೆಯನೆ ಬಾೞ್ತಿಗೆಯ್ಯನೆ ಜರತ್ತೃಣ ಲಾಘವಮೆಂದೆ ರಾಘವಂ ॥ ೧೧೨ ॥

1. ಬಗೆದನೆ ಬಾೞ್ತಿಗೆಯ್ದನೆ. ಚ.

ಚ ॥ ಅಸದನುಶಾಸನಂ ಸದವನಂ ನೃಪಲಕ್ಷಣವೊಂದು ಬಾಹು ಸಾ ।
ಹಸಗುಣವೊಂದು ದಾನಗುಣಮಾಯೆರಡುಂ ನಿಮಿರ್ವಂತು ಪೋಗಿ ಸಾ ॥
ಧಿಸುವೆನರಾತಿ ಮಂಡಲಮನೆನ್ನನುಜಂಗೆನಗಮ್ಮನಿತ್ತುದಂ ।
ವಸುಧೆಯನೀವೆನೆಂದು ಮನದೊಳ್ ತಱಿಸಂದನುದಾತ್ತರಾಘವಂ ॥ ೧೧೩ ॥

ಅಂತು ನಿಶ್ಚಯಿಸಿ ಕೈಕೆಯ ಮುಖಕಮಲ ವಿಲೋಕನಂಗೆಯ್ದು ಮುಕುಳಿತ ಕರಕಮಲನುಂ ವಿಕಸಿತ ಹೃದಯ ಕಮಲನುಮಾಗಿ—

ಚ ॥ ಪುಸಿ ಪೊಲನಲ್ತು ನಾಲಗೆಗೆ ಪಂದೆತನಂ ಮೊಱೆಯಲ್ತು ಕೈಯ ಕೂ ।
ರಸಿಗೆ ಕುಲಕ್ರಮಂ ರಘುಕುಲಕ್ಕಿದು ದೇವಿಯರ್ಗೆನ್ನ ದೂಸಱಂ ॥
ಪುಸಿನುಡಿಯಂ ಮದೀಯ ಜನಕಂ ನುಡಿದಂದು ಜನಾಪವಾದವೆ ।
ಣ್ದೆಸೆಗಮನರ್ಗಳಂ ಪರೆಗುಮಾನದನೇಳಿಸೆ ದೈನ್ಯಮಾಗದೇ ॥ ೧೧೪ ॥

ಮ ॥ ಧರೆಯಂ ತಂದೆಯ ನನ್ನಿಗಿತ್ತು ಧರೆಯಂ ಕೈಕೊಂಡೊಡೆನ್ನೊಳ್ಪು ಬೀ ।
ಸರಮಕ್ಕುಂ ಬಗೆ ಕೂಡದಂದು ನಿಮಗಕ್ಕುಂ ಪ್ರಾರ್ಥನಾಭಂಗಮಾ ॥
ಯೆರಡುಂ ದುರ್ಣಯವೆನ್ನ ಕೀರ್ತಿಗೆ ಕಲಂಬಂ ಮಾಡುಗುಂ ರಾಜ್ಯಮಂ ।
ಭರತಂಗಟ್ಟಿಱಿಕೊಳಿತ್ತೆನೆನ್ನ ನುಡಿಯಂ ನೀನಿಂತು ನಂಬಂಬಿಕೇ ॥ ೧೧೫ ॥

ಕಂ ॥ ಎನಗೆ ಬೆಸಸಿದೊಡೆ ಸಾಲದೆ
ಜನನಿಯರೀ ಧರೆಯನೆನ್ನ ತಮ್ಮಂಗಾನೀ ॥
ಯೆನೆ ಬೇಡವೇಟ್ಟುದೇ ಮ
ಜ್ಜನಕನನಿಲ್ಲಿವರಮಿಂತಿದಾವುದು ಗಹನಂ ॥ ೧೧೬ ॥

ಎಂದು ತಾಯ ಬಯಕೆಯಂ ತೀರ್ಚಿ—

ಮ ॥ ಜನಕಂ ರಾಜ್ಯಮನೀಯೆ ರಾಮನ ಮುಖಂ ಹರ್ಷಕ್ಕೆ ಪಕ್ಕಾದುದಿ ।
ಲ್ಲನುಜಂಗಯ್ಯನ ನನ್ನಿಯಂ ಸಲಿಸಲೆಂದೀವಲ್ಲಿ ಹರ್ಷಕ್ಕೆ ತಾ ॥
ಯ್ವನೆ ತಾನಾದುದಿದಾವುದಚ್ಚರಿಯೊ ಪೇಱೀವಲ್ಲಿ ಸತ್ಪಾತ್ರದೊಳ್ ।
ಧನಮಂ ಪೋ ನಲಿವಂದದಿಂ ನಲಿವನೇ ಧನ್ಯಂ ಧನಪ್ರಾಪ್ತಿಯೊಳ್ । ೧೧೭ ॥

ತದನಂತರಮುದಾತ್ತರಾಘವಂ ತಂದೆಯ ಮುಖಾರವಿಂದಮಂ ನೋಡಿ—

ಚ ॥ ಎಡೆಗುಡದಿರ್ದೊಡಂ ಗಗನಮಂಡಲಮುರ್ವರೆ ತಾಳದಿರ್ದೊಡಂ ।
ಮಿಡುಕದೆ ಗಾಳಿ ಮೆಯ್ಸರಿದೊಡಂ ಮಳೆಗಳ್ ಮಳೆಗಾಲದಂದಣಂ ॥

ತಡೆದೊಡಮಗ್ನಿ ತೋಱದೊಡಮುಷ್ಣತೆಯುಂ ರಘುವಂಶಜರ್ ತೊದ ।
ಳ್ನುಡಿದೊಡಮೂಹವಕ್ಕೆ ಸೆಡೆದಿರ್ದೊಡಮೆಂತೊ ಜಗಕ್ಕೆ ಜೀವನಂ ॥ ೧೧೮ ॥

ಕಂ ॥ ದೇವರೆನಗಿತ್ತೊಡಂ ವಸು
ಧಾ ವಲಯಮನಾಳ್ವರೆನ್ನತಮ್ಮಂದಿರೆ ಚಿಂ ॥
ತಾ ವಿಷಯಮಲ್ತು ಭರತಂ
ಗೀವುದು ವಸುಮತಿಯನೆನ್ನೊಳಿಡೆಗಟ್ಟಂಟೇ ॥ ೧೧೯ ॥

ಭರತಂ ತಪಕ್ಕೆ ನಡೆಗುಂ
ಧರೆಯೊಳ್ ನಿಲಿಸದೊಡೆ ಸುತನಗಲ್ಕೆಯೊಳಕ್ಕುಂ ॥
ಮರಣಂ ಜನನಿಗೆ ನಿಮಗಂ
ದೊರೆಕೊಳ್ಗುಮದೃಷ್ಟ ಬಾಧೆವೆರಸಪವಾದಂ ॥ ೧೨೦ ॥

ಪ್ರಾಪ್ತಿಯನಸಕಱಿಯಲುಮ
ಪ್ರಾಪ್ತಿಯನಾಗಿಸಲುಮಾಗದದಱಿಂ ದೋಷಾ॥
ವಾಪ್ತಿಯನೇಂ ನಿಮ್ಮನ್ನರ್
ಸುಪ್ತರವೋಲ್ ಮೋಹಮೂರ್ಛೆಯಂ ತಾಳ್ದುವರೇ ॥ ೧೨೧ ॥

ಎಂತುಟು ಶುಭಾಶುಭೋದಯ
ಮಂತುಟನನುಭವಿಪರಾರುಮಿದನಱಿಯುತ್ತುಂ ॥
ಚಿಂತಾಜ್ವರಮಂ ಪಿರಿಯರ್
ಸ್ವಾಂತದೊಳಿರಿಸುವುದೆ ದೇವ ಜಡಮತಿಗಳವೋಲ್ ॥ ೧೨೨ ॥

ಮ ॥ ಪಡೆಮಾತೇಂ ಸುತ ಮೋಹದಿಂ ದಶರಥಂ ಮಾತಾಡಿದಂ ತಪ್ಪನೆಂ ।
ದೊಡೆ ದೇವರ್ಗಪವಾದಮಕ್ಕುಮೆನಗಂ ರಾಮಂ ಗಡಂ ಕೇಳ್ದುಮಾ ॥
ನುಡಿಯಂ ರಾಜ್ಯಮನಾಸೆಗೆಯ್ದನೆನೆ ದೈನ್ಯಂ ಬರ್ಕುಮಿನ್ನಾಸೆಗೆ ।
ಯ್ದಾಡೆ ನಿಮ್ಮಾಜ್ಞೆಗೆ ತಪ್ಪಿದೆಂ ಸಲಿಸಿಮೊರ್ವಿಂಗೆನ್ನ ವಾಗ್ವೃತ್ತಿಯಂ॥೧೨೩॥

ಮ॥ ಸ್ರ॥ ಪದಿನಾಲ್ಕುಂವರ್ಷಮುಂ ತಾಯ್ ತನಯನ ತಪಮಂ ಮಾಣಿಸಲ್ ರಾಜ್ಯಮಂ ಬೇ ।
ಡಿದಳೊಳ್ಪಂ ಮಾಡಿದಳ್ ಸೋದರ ವಿರಹಿತಮೇಬಾಟ್ಟಿ ಸಾಮ್ರಾಜ್ಯ ಸಂಪ॥
ತ್ಪದಮುಸ್ಮದ್ಬಾಹು ವೀರ್ಯ ಪ್ರಕಟನದೊಲವಿಂದನ್ನೆಗಂ ದಿಗ್ಜಯೋದ್ಯೋ ।
ಗದಿನೀಗಳ್ ಪೋಗಿ ಬರ್ಪೆಂ ಭರತನ ನೊಸಲೊಳ್ ನಿಲ್ಕೆ ಸಾಮ್ರಾಜ್ಯಪಟ್ಟಂ॥

ಎಂದು ಬಿನ್ನವಿಸಿದ ರಾಘವನವೋಘ ವಾಕ್ಯ ಮಾಣಿಕ್ಯ ಕಿರಣದಿನಪಸಾರಿತ ಮೋಹಾಂಧಕಾರನಾಗಿ—

ಮ॥ಸ್ರ॥ಪರಮಶ್ರೀ ವಲ್ಲಭಂಗೀ ಚರಮ ತನುಗಿದೇಬಾಲ್ತೆ ನಮ್ಮಾವ ರಾಜ್ಯಂ।
ಪರಮಾಣು ಪ್ರಾಯಮೆಂದಾ ತನಯನ ವಿನಯಕ್ಕಂ ನಯಕ್ಕಂ ಗುಣಕ್ಕಂ॥
ಚರಿತಕ್ಕಂ ಬೆಕ್ಕಸಂಬಟ್ಟಧಿಪತಿ ತಲೆಯಂ ತೂಗಿದಂ ಸೂಸುವನ್ನಂ।
ಸುರಚಾಪ ಶ್ರೇಣಿಯಂ ಭಾಸುರ ಮಣಿಗಣ ನಾನಾಂಶು ಕೂಟಂ ಕಿರೀಟಂ॥

ಆ ಸಮಯದೊಳ್ ಭರತಂ ದಶರಥಂಗೆ ಮುಕುಳಿತಾಂಜಲಿ ಪುಟನಿಂತೆಂದಂ—

ಕಂ॥ ಜ್ಯಾಯನ ರಾಜ್ಯಮನಯ್ಯ ಕ
ನೀಯನಪೇಕ್ಷಿಸುವುದುಚಿತಮಲ್ತು ತಪೋರಾ॥
ಜ್ಯಾಯತ್ತಮೆನ್ನ ಚಿತ್ತಂ
ನ್ಯಾಯಾರ್ಜಿತಮಲ್ಲದೆನಿಪ ಧನಮೇಬಂಡಂ ॥ ೧೨೬ ॥

ಹೇಯಮನಱಿದುಂ ರಾಜ್ಯಮ
ನೀಯಲಪೇಕ್ಷಿಸುವಿರೆನಗೆ ನೀವೊಲ್ಲದುದಂ॥
ಶ್ರೇಯಸ್ಕರಮಲ್ಲದುದಂ
ಹೇಯಮುಪಾದೇಯಮೆನಗದೆಂತಾದಪುದೋ ॥ ೧೨೭ ॥

ಎನ್ನೆವರಂ ವೈರಾಗ್ಯಂ
ತನ್ನೊಳ್ ತಲೆದೋಱದನ್ನೆವರವೊಲವಕ್ಕುಂ॥
ತನ್ನಂ ತಾನಱಿದ ಬೞಿ
ಕ್ಕೆನ್ನರ್ಗಂ ವಿಷಯ ಸುಖದೊಳೊಲವಾದಪುದೇ ॥ ೧೨೮ ॥

ಎನೆ ದಶರಥಂ ಭರತನ ಪರಿಚ್ಛೇದಮಂ ಮನದೊಳೆ ಮೆಚ್ಚಿ ತನಯ! ನಿನಗಿದನ್ನೆವರಂ ಸಮಯಮಲ್ಲದೆಂತೆನೆ—

ಕಂ॥ ಪರಮ ಪುರುಷಾರ್ಥಮಿರ್ದುದು
ಚರಮದೊಳನ್ನೆವರಮುೞಿದ ಪುರುಷಾರ್ಥದೊಳಾ॥
ಚರಿಸುವುದು ತಕ್ಕುದದಱಿಂ
ಪರಿವಿಡಿಯಂ ತಪ್ಪಲಾರ್ಗಮೇಂ ಬಂದಪುದೇ ॥ ೧೨೯ ॥

ಅದಱಿಂ ನಿನಗೆ ನಿಜಾಗ್ರಜನ ವಚನಮೆ ವಿಧೇಯಮೆನೆ ಮಱುವಾತುಗುಡಲಱಿಯದೆ ಭರತನಿರೆ ರಾಘವನಿಂತೆಂದಂ—

ಉ ॥ ನನ್ನಿಗೆ ಬನ್ನಮಾದೊಡಯಶಂ ಪಿರಿದಪ್ಪುದು ತಂದೆಗೆಂಬಿದಂ ।
ನಿನ್ನ ವಿಯೋಗದಿಂ ಜನನಿಗಪ್ಪುದು ಜೀವ ವಿಯೋಗಮೆಂಬಿದಂ ॥
ನಿನ್ನ ನೆಗಟ್ತೆಗಂ ಮಹಿಮೆಗಂ ಪಿತೃವಾಕ್ಯಮೆ ಕೃತ್ಯಮೆಂಬಿದಂ ।
ನಿನ್ನೊಳೆ ನೀನೆ ಭಾವಿಸುವುದೇಳಿಸಲಪ್ಪುದಿದಾಗದೆಂಬಿದಂ ॥ ೧೩೦ ॥

ಚ ॥ ಕ್ರಮ ಪರಿಪಾಲನಾರ್ಥಮೆನಗಿತ್ತನಿಳಾಧಿಪನಿತ್ತೆನೆನ್ನ ರಾ ।
ಜ್ಯಮನಧಿರಾಜ ಸತ್ಯ ಪರಿಪಾಲನೆಗಾಂ ನಿನಗಂತಱಿಂದದ ॥
ಕ್ರಮಮಣಮಲ್ತು ನೀಂ ತಳೆವುದೊರ್ಮನದಿಂ ಯುವರಾಜ ರಾಜ್ಯಭಾ ।
ರಮನಧಿರಾಜ ವಾಕ್ಯಮೆನಗಂ ನಿನಗಂ ಕರಣೀಯಮಲ್ಲವೇ ॥ ೧೩೧ ॥

ಎಂದು ರಾಮನನುಜನಂ ರಾಜ್ಯದೊಳ್ ನಿಲ್ವಂತೆಂತಾನುಮೊಡಂಬಡಿಸೆ ವಿಸ್ಮಯಂಬಟ್ಟು—

ಉ ॥ ಏದೊರೆಯರ್ ಮಹಾಪುರುಷರಾದ್ಯರಿದಂ ಪಿಡಿದೊರ್ವರೊರ್ವರೊಳ್ ।
ಕಾದಿದರೋಡಿದರ್ ಮಡಿದರಲ್ಲದೆ ತಂದೆಯ ನನ್ನಿಗಿತ್ತರಾರ್ ॥
ಮೇದಿನಿಯಂ ಜರತ್ತೃಣಮನೀವವೊಲೆಂದು ಕಡಂಗಿ ಬಣ್ಣಿಸಿ ।
ತ್ತಾದರದಿಂ ಮಹೀಭುಜ ಸಭಾ ವಲಯಂ ಬಲಭದ್ರರಾಮನಂ ॥ ೧೩೨ ॥

ಮ ॥ ಉರ್ವೀನಾಥರನೇಕರುಂ ಮಡಗಿ ಭಂಡಾರಂಗಳಂ ಲೋಭದಿಂ ।
ಪೆರ್ಪಾವಾಗಿ ಪಿಶಾಚಮಾಗಿ ಪಲಕಾಲಂ ಕಾದುಕೊಂಡಿರ್ಪರಾ ॥
ರುರ್ವೀಚಕ್ರಮನಿಂತು ಕೊಟ್ಟರನುಜಂಗೆಂದಾ ಸಭಾವಿಷ್ಟರೋ ।
ರೊರ್ವರ್ ಬಣ್ಣಿಸಿದರ್ ಪರಾರ್ಥ ಗುಣ ಕಲ್ಪಾರಾಮನಂ ರಾಮನಂ ॥ ೧೩೩ ॥

ಕಂ ॥ ಕಾಗಿಣಿಗೆ ಮರಂ ಬೀಟಿ
ಲ್ಪೋಗಿರ್ಕುಂ ಕಡಲ ಕಡೆವರಂ ನಿಮಿರ್ದ ಮಹೀ ॥
ಭಾಗಮನನುಜಂಗಿತ್ತಂ
ಭಾಗಿಗಳಾರ್ ಸೀರಪಾಣಿಯೊರೆಗಂ ದೊರೆಗಂ ॥ ೧೩೪ ॥

ಎಱಗುವುದೂರ್ಧ್ವಜ್ವಲನಮೆ
ತೆಱನೆನಿಸಿದ ದೀಪವರ್ತಿ ನಿಧಿಗಾ ನಿಧಿಯಂ ॥
ತೊಱೆದಂ ದಲೆಂದೊಡಾರ್ಪಿನ
ತಱಿಸಲವಂ ಕಂಡನೇಕಕುಂಡಲನೆ ವಲಂ ॥ ೧೩೫ ॥

ವಸುಮತಿಯಂ ವೃತ್ಪಿಂಡ
ಕ್ಕೆ ಸಮಂಗಂಡಾರೊ ಕೊಟ್ಟು ತಂದೆಯ ಪಱಿಯಂ ॥

ಮಸುಳಿಸಿ ಹಲಿಯವ್ರೊಲೆಂಟುಂ
ದೆಸೆವರೆಗಂ ವಿಶದ ಕೀರ್ತಿಯಂ ಪಸರಿಸಿದರ್ ॥ ೧೪೬ ॥

ಕಂ ॥ ಏನಾನುಮನಿತ್ತು ಕೆಲರ್ ।
ದಾನಗುಣಕ್ಕಂತೆ ಬೆಸೆವರಯ್ಯನ ಸತ್ಯ ॥
ಕ್ಕೇನಯ್ಯ ರಘುಜನಂತಂ
ಭೋನಿಧಿ ವಳಯಿತಮನಿಳೆಯನಿತ್ತವನಾವಂ ॥ ೧೪೭ ॥

ಎಂದು ಪೊಗಟ್ವಿ ಸಭಾಜನದ ಸ್ತವನಕ್ಕಂ ಭರತಂ ಕ್ರಮುಂದಪ್ಪಿ ಸಾಕೇತ ಸಾಮ್ರಾಜ್ಯ ಪಟ್ಟಮನೊಡಂಬಟ್ಟುದರ್ಕಂ ಲಕ್ಷ್ಮಣಂ ಕಟ್ಟುಕಡೆದು—

ಕಂ ॥ [1]ಅಡೆವೊತ್ತೆ ಕೋಪಶಿಖಿ ಕ
ಣ್ಗಿಡಿಯಂ ಕೆಂಡಮುಮನುಗುಳೆ ಪುರ್ವ[2]ರ್ವಿಸೆ ಮೋ ॥
ಗಡರ್ಪ ಪೊಗೆಯಂತೆ ಕೃಷ್ಣಂ
ಕಡೆಗಾಲದೊಳೊಗೆದ ಧೂಮಕೇತುವೊಲಿರ್ದಂ ॥ ೧೪೮ ॥

ಅಂತು ಕೋಪವಶ ಗತನಾಗಿ—

ಶಾ ॥ ಕಾರಾಗಾರದೊಳಿಂದ್ರನಂ ಸೆಜ[3]ಯಿಡಲ್ ಗೋತ್ರಾದ್ರಿಯಂ ಚಾಳಿಸಲ್ ।
ತಾರಾಮಂಡಲಮಂ ನೆಲಕ್ಕೆ ನೆಲನಂ ವ್ಯೋಮಕ್ಕೆ ಪಕ್ಕಾಗಿಸಲ್ ॥
ಪಾರಾವಾರದ ನೀರನೀಂಟಲಖಿಳಾಶಾದಂತಿ ದಂತಂಗಳಂ ।
ಬೇರಿಂದಂ ಕಿಳಲಂದದೇಂ ಬಗೆದನೋ ರಕ್ತೇಕ್ಷಣಂ ಲಕ್ಷ್ಮಣಂ ॥ ॥೧೪೯॥

ಕಂ ॥ ಸೌಮಿತ್ರಿ ವಿಲಯಕಾಲ ಮ
ಹಾಮೇಘ ಸ್ಕಂಧ[3] ವಿಕಟ ನರ್ತಿತ ವಿದ್ಯು ॥
ದ್ದಾಮವಿುದೆನೆ ದಂತಾಂಶು
ಸ್ತೋಮಂ ಪೊಳೆದುಳ್ಕೆ ಬೆಟ್ಟವೆಟ್ಟನೆ ನುಡಿದಂ ॥ ೧೫೦ ॥

ಭರತಾವನಿಯಂ ಕೊಟ್ಟಂ
ಭರತಂಗೆ ರಘುಪ್ರವೀರನಯ್ಯನ ನುಡಿಯಂ ॥
ಪರಿಪಾಲಿಸ[4]ಲೆಂಗುವೆ ಪೇಟ್
ಧರೆಯಂ ಬೆಳ್ಮಾಡಿಕೊಂಡರೆಂಗುಂ ಲೋಕಂ ॥ ೧೫೧ ॥

---

1 ಅಡಿ ಗ. ಘ. 2. ರ್ವಿಸಿ ಮೋಗಡರೆ. ಕ. ಖ. ಗ. ಘ. 3. ವಿಕಟ ವರ್ತಿತ. ಕ. ಖ. ಗ; ನಿಕಟ ನರ್ತಿತ. ಘ; ನಿಕಟ ವರ್ತಿತ. ಚ. 4. ಲೇಗುವೆ. ಗ. ಚ.

ಕಂ ॥ ಕ್ರಮಮನತಿಕ್ರಮಿಸಿ ಪರಾ
ಕ್ರಮಮಿಲ್ಲೆಂದಿೞಕೆಗೆಯ್ದು ಭರತಂಗಿತ್ತಂ ॥
ದಮಿತಾರಿ ದಶರಥಂ ರಾ
ಜ್ಯಮನೆಂಗುಂ ರಾಮನಿತ್ತನೆಂಗುಮೆ ಲೋಕಂ ॥ ೧೪೨ ॥

ಮ॥ಸ್ರ॥ ನಮಗಕ್ಕುಂ ನಿಸ್ಸಹಾಯಂ ಬಹು[1]ವಿಧದಿನಪಾಯಂ ಸುಖೋಪಾಯಮಕ್ಕುಂ।
ತಮಗೇಕಾಯತ್ತಮಕ್ಕುಂ ಪ್ರಜೆ ಪರಿಜನವೆಂದಬ್ಬೆ ಕೌಟಲ್ಯದಿಂ ರಾ ॥
ಜ್ಯಮನೀರೇೞಬ್ದಮುಂ ಬೇಡಿದಳಱಯದೆ ನೀಮಿತ್ತೊಡಂ ಮಿಕ್ಕರಂ ಮ ।
ಟ್ಟಮಿರಲ್ ಪೇೞೀಗುಮೇ ರಾಘವ ಕೊಡೆನೆಳಲೊಳ್ ಸಾಗರಾವರ್ತಚಾಪಂ॥

ಎಂದು ಪೊಡೆವ ಸಿಡಿಲಂತೆ ಗರ್ಜಿಸಿ ಮಣಿಮಯಾಸನದಿನೆೞ್ದು—

ಕಂ ॥ ರೋಮಾಂಚದೊಡನೆ ಸಭೆಗೆ ಮ
ನೋಮುದಮಪ್ಪಂತು ನುಡಿಯೆ ಲಕ್ಷ್ಮಣದೇವಂ ॥
ರಾಮಂ ಪರಾರ್ಥ ಚರಿತ
ಪ್ರೇಮಂ ಕಣ್ಣುರ್ವುಜರ್ವಿ ನೋಡಿದನಾಗಳ್ ॥ ೧೪೪ ॥

ಪಿರಿಯಣ್ಣನ ಜರ್ವಿಂಗೋ
ಸರಿಸಿದುದಲ್ಲದೊಡೆ ಶಾರ್ಙ್ಗಪಾಣಿಯ ಮುನಿಸುಂ ॥
ಹರನುರಿಗಣ್ಣುಂ ಲೋಕಮ
ನರೆಗಳಿಗೆಗೆ ಬೂದಿಮಾೞ್ಪುದೊಂದಚ್ಚರಿಯೇ ॥ ೧೪೫ ॥

ಪರಿಹರಿಸಿದನೊದವಿದ ಕೋ
ಪ ರಸಾವೇಶಮನುಪೇಂದ್ರನಣ್ಣನ ಚಿತ್ತಂ ॥
ಕೊರಗಿದಪುದೆಂದುದಾತ್ತಂ
ಪಿರಿಯಂಗಿಚ್ಛಾವಿಘಾತಮಂ ಮಾಡುವನೇ ॥ ೧೪೬ ॥

ದಾರುಣ ಭಾವಮನುಪಸಂ
ಹಾರಿಸಿ ಕಣ್ಣಱದು ಮಟ್ಟಮಣ್ಣನ ಕೆಲದೊಳ್ ॥
ವಾರಿಜನಾಭಂ ಗರುಡೋ
ದ್ಗಾರ ಹರಿನ್ಮಣಿಯ ಕೆಲದ ಫಣಿಯವೊಲಿರ್ದಂ ॥ ೧೪೭ ॥

ಅನಂತರಂ ದಶರಥಂಗೆ ರಾಮನಿಂತೆಂದಂ—

---

1. ದಿನದಿ. ಕ. ಖ. ಗ. ಘ.

ಮ ॥ ಇರವೇಟ್ಕುಂ ಪೆಱಪಿಂಗಿ ಪಾಂಗಱಿಯದಾನಿಲ್ಲಿರ್ಪುದುಂ ಸುತ್ತುಗುಂ ।
ಪರಿವಾರಂ ಗುಣಹಾನಿ ನೆಟ್ಟನೆನಗಕ್ಕುಂ ಮುನ್ನಮೆನ್ನಿತ್ತುದುಂ ॥
ಭರತಂ ಪೆತ್ತುದುಮಾಳಮಕ್ಕುಮಪವಾದಾತೋದ್ಯ ನಾದಂ ವಸುಂ ।
ಧರೆ ನಿಲ್ವನ್ನೆವರಂ ದಿಶಾಕರಟಿ ಕರ್ಣಾಸ್ಫಾಲನಂಮಾಡುಗುಂ ॥ ೧೪೮ ॥

ಮ॥ಸ್ರ॥ತಲೆಯೊಳ್ ನಿರ್ಮಾಜ್ಞೆಯಂ ರನ್ನದ ತಲೆದೊಡವಂ ಪೊತ್ತು ಮೆಯ್ವೆತ್ತ ಬಾಹಾ।
ಬಲದಿಂ ಬೆಂಕೊಂಡಖಂಡಪ್ರಭರನಹಿತರಂ ಸಾಧಿಪೆಂ ವಿದ್ವಿಷನ್ಮಂ ॥
ಡಲಮಂ ಬೀೞ್ಕೊಂಡೆನೆಂದಯ್ಯನ ಚರಣಯುಗಕ್ಕರ್ಘ್ಯಪಾದ್ಯಂಗಳಂ ನಿ ।
ಸ್ತುಲ ಮೌಳಿ ಸ್ಥೂಲ ಮುಕ್ತಾಫಲ ರುಚಿ ಜಲದಿಂ ರಾಮನುದ್ದಾಮನಿತ್ತಂ ॥

ಅಂತು ವಿನತ ಮಸ್ತಕನಾಗಿ ಸಭೆಯಿನೆೞ್ದು ಪೋಗೆ—

ಕಂ ॥ ಒಡನೆ ದಶರಥನ ಕಣ್ಗಳ್
ನಡೆದುವು ಕಣ್ಣೊಡನೆ ತಳರ್ದು ನಿಲ್ಲದೆ ಮನಮುಂ ॥
ನಡೆದುದದಱೊಡನೆ ನಿಡುಸುಯ್
ನಡೆದುದು ಸುಯ್ಯೊಡನೆ ನೃಪತಿ ಮೂರ್ಛೆಗೆ ಸಂದಂ ॥ ೧೫೦ ॥

ಮ॥ಸ್ರ॥ಕಡೆಗಣ್ಣಿಂ ಕರ್ಣಮೂಲಕ್ಕೊಗೆದುಗುತರೆ ಬಾಷ್ಪಾಂಬುಗಳ್ ಸುಯ್ಲ ಪೊಯ್ಲಿ ।
ರ್ದೆಡೆಯೊಳ್ [1]ಸಂದೇಹಮಂ ಪುಟ್ಟಿಸೆ ಮಿಡುಕುವ ತಾಣಂಗಳಲ್ಲಲ್ಲಿ ಸತ್ವಂ ॥
ಗಿಡೆ ಧೈರ್ಯಂಗೆಟ್ಟು ಸಂಸಾರಮನುಱದ ಮಹಾಸತ್ವನುಂ ಮೂರ್ಛೆವೋದಂ ।
ಗಡ ಜನ್ಮಾರಣ್ಯದೊಳ್ ಮಿಕ್ಕರನಟಿಲಿಸದೇ ಮೋಹದಾವಾಗ್ನಿ[2]ದಾಹಂ ॥೧೫೧॥

ಅಂತು ದಶರಥಂ ಮೂರ್ಛಿತನಾಗೆ—

ಮ॥ಸ್ರ॥ ಪತಿ ಪುತ್ರಂ ಪೋಗೆ ಮೂರ್ಛಾಭರ ಪರವಶನಾಗಿರ್ಪುದುಂ ಕೈಕೆ ಲಜ್ಜಾ ।
ನತೆ ಕಾಂಚೀ ರತ್ನಘಂಟಾ ರವದೊಡನಪವಾದ ಪ್ರಣಾದಂ ದಿಶಾ ಸಂ ॥
ತತಿಯಂ ತಳ್ಪೊಯ್ಯೆ ತಳ್ಪೊಯ್ದು ಮೆದುಱುಗಲನೊಟ್ಟೈಸಿ ಬಾಷ್ಪಾಂಬು ಧಾರಾ।
ತತಿ ಮುಕ್ತಾಹಾರಮಂ ಪೆರ್ಮೊಲೆಗೆ ಕುಡೆ ತದಾಸ್ಥಾನದಿಂದೆೞ್ದು ಪೋದಳ್ ॥

ಅನಂತರಂ—

ಕಂ ॥ ಅನುಜಂ ಸಭೆಯಿನಗಲ್ದ
ಣ್ಣನ ಬೞಯಂ ಸಲ್ವ ಸಮಯದೊಳ್ ಬೇಗಂ ಲೋ ॥

---

1. ಸಂದೇಹಮಂ ಸಂಗಳಿಸೆ ಮಿಡುಕುದಾಣಂ. ಗ. ಘ. 2. ತಾಪಂ. ಕ. ಚ.

ಚನದ ಬಟಿಸಲ್ವ ಮನಮುಂ
ತನುವಿನ ಬಟಿಸಲ್ವ ನೆಟಿಲನಿನಿಸಿಟಿಕೆಯ್ದಂ ॥ ೧೫೩ ॥

ಕಂ ॥ ಪ್ರತ್ಯಂತ ದೇಶ ಭೂಭೃದ
ಪತ್ಯರನೆಟ್ಟಿಟ್ಟೆ ಪುಗಿಸಿ ಕಾಂತಾರ ನಗೋ ॥
ಪತ್ಯಕಮುಂ ಕೌಸಲ್ಯಾ
ಪತ್ಯಂಗೋಲಗಿಪೆನವರ ಹರಿವಿಷ್ಟರಮಂ ॥ ೧೫೪ ॥

ಎಂದು ಮನದೊಳ್ ಮಂತಣಮಿರ್ದು ಲಕ್ಷ್ಮಣಂ ಸಭೆಯಿನೆಟ್ದು ಪೋಪು ದುಂ—

ಚ ॥ ಕ್ರಮುದೊಡೆಯಂಗೆ ತಂದೆ ಧರೆಯಂ ಕುಡಲೆಂದಿರೆ ದೈವಯೋಗದಿಂ ।
ಸಮುನಿಸಿದತ್ತು ಪುಣ್ಯ ಪುರುಷಂಗಮರಣ್ಯ ನಿವಾಸಮೆಂದು ಖೇ ॥
ದಮುನೊಳಕೊಂಡು ಗದ್ಗದ ರವಂ ನತ ದೀನ ಮುಖಂ ಪ್ರಲಾಪ ಸಂ ।
ಭ್ರಮಮುದಿತಾಶ್ರು ಶೋಕರಸ ಭಾಜನಮಾದುದು ತತ್ಸಭಾ ಜನಂ ॥ ೧೫೫ ॥

ಮಾಲಿನಿ॥ ವಿಗತ ದಿಗಿಭವಾಶಾ ದೇಶಮುಸ್ತಂಗತಾರ್ಕಂ ।
ಗಗನ ಪರಿಧಿ ಯಾತ ಪ್ರಾಣವಾತಂ ಶರೀರಂ ॥
ಸೊಗಯಿಸದವೊಲಾಗಳ್ ರಾಘವಂ ಪೋಗೆ ಕಣ್ಗಂ ।
ಬಗೆಗಮಿಟಿಕೆಯಾದತ್ತಾ ಸಭಾ ಚಕ್ರವಾಲಂ ॥ ೧೫೬ ॥

ಅನ್ನೆಗಮಾ ವೃತ್ತಾಂತಮೆಲ್ಲಮಂ ಸುಮಿತ್ರೆ ಕೇಳ್ದಪರಾಜಿತಾ ಮಹಾದೇವಿ ಯಲ್ಲಿಗೆ ವಂದು—

ಕಂ ॥ ಎರೆದಳ್ ಗಡ ಕೈಕೆ ವಸುಂ
ಧರೆಯಂ ಭರತಂಗೆ ರಾಮನಿತ್ತಂ ಗಡಿದೇಂ ॥
ದೊರೆಕೊಳ್ಗುಮೆ ಕರ್ಣಪರಂ
ಪರೆಯಿಂ ಕೇಳ್ದುದನೆ ನಿಮಗೆ ಪೇಟಲ್ಬಂದೆಂ ॥ ೧೫೭ ॥

ಎಂಬುದುಮುಪರಾಜಿತೆ ಭಯಚಕಿತ ಚಿತ್ತೆಯಾಗಿ—

ಕಂ ॥ ಎರೆವನ್ನಳೆ ಕೈಕೆ ವಸುಂ
ಧರೆಯಂ ತೃಣವಾಗೆ ಬಗೆದು ಕುಡುವನ್ನನೆ ಮಂ ॥
ದರಧೈರ್ಯಂ ರಾಮಂ ನುಡಿ
ದೊರೆಕೊಳ್ಗುಂ ದೈವಘಟನೆಯಿಂದಾಗದುದೇಂ ॥ ೧೫೮ ॥

ಎಂದವರ್ ತಮ್ಮೊಳುಮ್ಮಳಿಸಿ ನುಡಿಯುತ್ತಿರ್ಪುದುಂ—

ಕಂ ॥ ಐರಾವಣ ಗಜಮುಂ ಜನ
ವಾರಣಮೊಂದಾಗಿ ಪುಗುವವೋಲ್ ಪುಗುತಂದರ್ ॥
ಸೀರ ಗದಾ ಹಸ್ತರ್ ಬಲ
ನಾರಾಯಣ ದೇವರಂತವುರದರಮನೆಯಂ ॥ ೧೫೯ ॥

ಅಂತರಮನೆಯಂ ಪೊಕ್ಕು ಜನನೀಯುಗಳ ಪದಪಯೋಜಕ್ಕೆ ವಿನತರಾಗಿ ಸಮುಚಿತಾಸನದೊಳಿರ್ದು ಲಕ್ಷ್ಮಣದೇವಂ ಶ್ರೀರಾಮದೇವನ ಪರಾರ್ಥ ವೃತ್ತಿಯಂ ಬಿನ್ನವಿಸೆ ಕೇಳ್ದು ಅಪರಾಜಿತಾಮಹಾದೇವಿ ಶೋಕಾನಲ ದಂದಹ್ಯಮಾನ ಮಾನಸೆ ಯಪ್ಪುದುಂ—

ಕಂ ॥ ಅನವರತ ಬಾಷ್ಪಜಲ ಸೇ
ಚನದಿಂದಪರಾಜಿತಾ ಮಹಾದೇವಿಯ ಲೋ ॥
ಚನಪುತ್ರಿಕೆ ಬೆಳೆಯಿಸಿದುದು
ವನಪಾಲಿಕೆಯಂತೆ ಮೋಹ ಮೂರ್ಛಾ ಲತೆಯಂ ॥ ೧೬೦ ॥

ಚ ॥ ಬಿದಿ ಬೆದಱಿಟ್ಟದಂ ಮಗನೆ ಮುನ್ನ ತವರ್ಮನೆ ನಾಮಶೇಷಮಾ।
ದುದು ಪತಿಯುಂ ತಪಕ್ಕೆ ನಡೆವಂ ಸುತ ನೀನುಮಗಲ್ದು ಪೋದೊಡಾ ॥
ವುದು ಗತಿ ಜೀವಿಪಂದಮೆನಗಾವುದು ಪೊರ್ದುವೆನಾರನೆಂದು ಗ।
ದ್ಗದ ರವಮುಣ್ಮೆ ತಂದಳಪರಾಜಿತೆ ಕಣ್ಗೆ ಕದುಷ್ಣ ವಾರಿಯಂ ॥ ೧೬೧ ॥

ಕಂ ॥ ವನಚರ ವನಮೃಗ ವನಖಗ
ವನೇಭ ವನದಹನ ವನವಿಷಾಹಿಗಳಿನಪಾ ॥
ಯನ ಬಹುಳಮಪ್ಪ ವನಮಂ
ತನೂಭವಂ ಪುಗುವೊಡೆಂತದಂ ಸೈರಿಸುವೆಂ ॥ ೧೬೨ ॥

ಅಗ್ರಸುತನಂ ಸಮಗ್ರ ಗು
ಣಾಗ್ರಣಿಯಂ ರಾಮನನ್ನನಂ ದಶರಥನಂ ॥
ತುಗ್ರಾಟವಿವುಗಿಸಿದ ಮದ
ನ ಗ್ರಹ ಪೀಡಿತರನಾರುಮಂ ಕಂಡಱಿಯೆಂ ॥ ೧೬೩ ॥

ಪರಿಹರಿಸಿ ಪಾಟಿಯುಂ ಪಾ
ಪಿ ರಾಮನಂ ಪುಗಿಸಿ ವಿಪಿನಮಂ ನಿಜ ಸುತನಂ ॥

ಕರುಮೂಡಂಬುಗಿಸಿದಪಳ್
ಕರುಣಂಗೆಟ್ಟಾಕೆ ಕೈಕೆ ಕಲ್ಲೆರ್ದೆಯಕ್ಕಂ ॥ ೧೬೪ ॥

ಕಂ ॥ ಕೊಟ್ಟೊಡೆ ಜನಕಂ ಪಾೞಿಯು
ಒಟ್ಟಿಯನಸಕೞಿದು ಪಿರಿಯನಿರೆ ತಾನುವೊಡಂ ॥
ಒಟ್ಟಂ ಗಡ ರಾಜ್ಯಕ್ಕೆನೆ
ಕೆಟ್ಟೆೞಿಪರ್ ಭರತನನ್ನರಾರ್ ಮನುಕುಲದೊಳ್ ॥ ೧೬೫ ॥

ಅಸದರ್ಥ ಸ್ವೀಕಾರಂ
ಪಸುಗೆಯೆ ನಿನಗೆಂದು ಬಿಡದೆ ಶತ್ರುಘ್ನಂ ಬಾ ॥
ರಿಸದೆ ಭರತನೊಳೊಡಂಬ
ಟ್ಟು ಸೈರಿಸಿರ್ಪಿರವೆ ಪೇೞಿದೇ ಕೈತವಮಂ ॥ ೧೬೬ ॥

ಮ ॥ ಅನುಕೂಲಂ ಬಿದಿ ಕೈಕೆಗಕ್ರಮದಿನಿತ್ತಂ ರಾಜ್ಯಮಂ ರಾಮದೇ ।
ವನದಂ ಲಕ್ಷ್ಮಣದೇವ ಮೀಱುವುದುಮಣ್ಣಂಗಕ್ಕುಮುದ್ವೇಗವೆಂ ॥
ದೆನಸುಂ ಮೀಱದೆ ಮಾಣ್ದೆ ಮಾಣದೊಡೆ ವಿದ್ವಿಷ್ಟಾಂಗನಾ ಗರ್ಭ ಪಾ ।
ತನಮೇನಾಗದೆ ನೀವಿ ಜೇವೊಡೆಯೆ ನೀನೀ ಸಾಗರಾವರ್ತಮಂ ॥ ೧೬೭ ॥

ಅರಸಂ ಪಾೞಿಗೆ ತಪ್ಪೆ ಪಾವಡರ್ದರಂತುನ್ಮಾದವಾದಂತೆ ಮೆಯ್ ।
ಮರವಟ್ಟಂತೊಡಲಿಂದುಸಿರ್ ತೊಲಗಿದಂತಾ ಸನ್ನಿಪಾತ ಜ್ವರಂ ॥
ದೊರೆಕೊಂಡಂತವಿವೇಕದಿಂದಭಿಜನಂ ವಿದ್ವಜ್ಜನಂ ಮಂಡಲೇ ।
ಶ್ವರ ಸೇನಾಪತಿ ಮಂತ್ರಿ ಮಂಡಲಮದೇಂ ಮಾರ್ಕೊಳ್ಳದಂತಿರ್ಕುಮೇ॥ ೧೬೮॥

ಕಂ ॥ ಅದು ಚಿತ್ರದ ಸಭೆ ಮದ ಸ
ರ್ಪದ ಸಭೆ ತಿರ್ಯಙ್ಮನುಷ್ಯ ಸಭೆ ಪೆಱತೇನ ॥
ಲ್ಲದೊಡೆ ಪೊಱಮಡಿಸಿ ಕಳೆವುದೆ
ಮದೀಯ ನಂದನನನಭಿಜನಾನಂದನನಂ ॥ ೧೬೯ ॥

ಎಂದೞಲುಮೆರ್ದೆವಱಲುಮೊದವೆ ಮಗನ ಮೊಗಮಂ ನೋಡಿ—

ಮ ॥ ಕ್ರಮಮಂ ನೋಡದೆ ನಂಟರಂ ತೊಱೆದು ನಾಡಂ ಬಿಟ್ಟು ಸಪ್ತಾಂಗ ರಾ।
ಜ್ಯಮನೀಡಾಡಿ ಸಪತ್ನನಂ ನಿಲಿಸಿ ಸಿಂಹಾಸಂದಿಯೊಳ್ ತಾಯ್ಗೆ ದುಃ ॥
ಖಮನುತ್ಪಾದಿಸಿ ಪೋಪುದಾವುದುಚಿತಂ ಪಿಂತಿರ್ಪುದಿಲ್ಲುಯ್ವುದೆ ।
ಮ್ಮುಮನೆಂದಂಬಿಕೆ ಮೆಯ್ಯನೊಕ್ಕು ವಿಗಳದ್ಬಾಷ್ಪಾಂಬುವಿಂ ತೇಂಕಿದಳ್ ॥

ಅಂತು ಶೋಕವಿಕಳೆಯಾದ ಕೌಶಲ್ಯೆಗೆ ಲಕ್ಷ್ಮೀಧರನಧರ ಕಿಸಲಯದಮೇಲೆ ದಂತಕಾಂತಿ ಲತಾಂತವಾಲೆ ಪಸರಿಸೆ ಮುಕುಳಿತ ಕರ ಸರೋಜನಾಗಿ—

ಮ ॥ ಕಲಿಯುಂ ಚಾಗಿಯುಮಿನ್ನರಾರ್ ಮನುಕುಲರ್ ಮುನ್ನಾದರೆಂಬನ್ನೆಗಂ ।
ನೆಲನುಂ ನೇಸಱುಮುಳ್ಳಿನಂ ನಿಲಿಸಿದಂ ತನ್ನೂರ್ಮೆಯುಂ ಪೆರ್ಮೆಯುಂ ॥
ಕುಲ ನಿಸ್ತಾರಕನೇಕ ಕುಂಡಲನದರ್ಕಾನಂದಮಂ ತಾಳ್ದದಾ ।
ಕುಲಮಂ ತಾಳ್ದುವುದೇ ಮದಗ್ರಜನೊಳಾದೀ ಪೌರುಷಂ ಶೋಚ್ಯಮೋ ॥೧೭೧॥

ಚ ॥ ಚರಮ ಶರೀರನೆಯ್ದುವನೆ ಬಾಧೆಯನುತ್ತಮಸತ್ತ್ವ[1]ನಾರ್ತದೊಳ್ ।
ಪೊರೆವನೆ ಪುಣ್ಯಮೂರ್ತಿಗೆಡಱುಂ ದೊರೆಕೊಳ್ಗುಮೆ ಮೂಱು ಲೋಕಮುಂ ॥
ಧುರದೊಳನಂತವೀರ್ಯನೊಳಿದಿರ್ಚುಗುಮೇ ಬಗೆದೀ ವಿಷಾದಮಂ ।
ಪರಿಹರಿಸಿಂ ಬಳಂ ಪ್ರಬಳನಾದೆಸೆಗುಮ್ಮಳಮೇವುದಂಬಿಕೇ ॥ ೧೭೨ ॥

ಕಂ ॥ ಕೆಲದ ನೆಲದರಸುಮಕ್ಕಳ
ನಲಂಪ್ಯ ಬಲರಂ ತಗುಳ್ದು ಕಳೆದೊಂದೆಡೆಯೊಳ್ ॥
ನೆಲೆವೀಡು ಮಾಡಿ ನಿಮ್ಮಂ
ಬಲಭದ್ರಂ ತರಿಸದಿನಿಸನಂತರಿಸುವನೇ ॥ ೧೭೩ ॥

ಉ ॥ ಪಂಬಲಿಸಲ್ಕೆ ಬೇಡ ಪೆಱತೇಂ ಭರತಂ ಭವದೀಯ ದಿವ್ಯ ಪಾ ।
ದಾಂಬುಜ ಸೇವೆಗೆಮ್ಮಳವಿಗಗ್ಗಳನಲ್ಲದೊಡಂ ಸಮಸ್ತ ಲೋ ॥
ಕಾಂಬಿಕೆ ನಿಮ್ಮೊಳಾದಿಸುವೆಸಕ್ಕೆ ಸುಮಿತ್ರೆಯೆ ಸಾಲ್ವಳಗ್ರಜಂ ।
ಗಾಂ ಬೆಸಕೆಯ್ವೆನಿಂ ತೊಲಗಿಸಿಂ ಮನದೊಳ್ ನಿಮಗಾದ ಖೇದಮಂ॥೧೭೪॥

ಎಂದು ಸೌಮಿತ್ರಿ ಬಿನ್ನವಿಸೆ ಮನದೊಳವಧಾರಿಸಿ ಕೌಶಲ್ಯೆ ವಿಗತ ಶೋಕ ಶಲ್ಯೆ ನಂದನನ ಮುಖಾರವಿಂದಮಂ ನೋಡಿ—

ಚ ॥ ಸುಚರಿತೆ ಸೀತೆ ನಿನ್ನೊಡನೆ [2]ಬರ್ಪವಳಿರ್ಪವಳಲ್ಲಳಿರ್ಪುದೇ ।
ನುಚಿತಮೆ ಪೇೞ್[3]ವಿಯಾಕೆಗೊಡನುಯ್ವುದೆನಲ್ ರಘುರಾಮನಂಬಿಕಾ ॥
ವಚನಮನಾತ್ಮಚಿತ್ತದೊಳೊಡಂಬಡುವೆತ್ತದನಂತೆ ಗೆಯ್ವೆನೆಂ ।
ದಚಲಿತನಾನತಂ ಪದ ನಖಾಂಶುಗಳಿಂ ತಳೆದಂ ಲಲಾಮಮಂ ॥ ೧೭೫ ॥

ಅಂತು ರಾಮನಪರಾಜಿತಾಮಹಾದೇವಿಯ ಸುಮಿತ್ರಾದೇವಿಯ ಪಾದ ಪಲ್ಲವಂ

---

1. ನಾರ್ಥ. ಗ.; ನರ್ಥ. ಫ. 2. ಬರ್ಪವಳಲ್ಲಳಿರಲ್ಕೆ ಬರ್ಪುದೇನುಚಿತಮೆ. ಚ.
3. ವಿಯಾಕೆಯೊಡ. ಕ. ಖ. ಗ. ಫ.

ಗಳುಮನಾಶೀರ್ವಾದ ಪಾರಿಜಾತ ಸ್ತಬಕಂಗಳುಮನುತ್ತಂಸಂಮಾಳ್ಪುದುಮನಂತರಂ ಲಕ್ಷ್ಮಣಂ ಮಣಿ ಕಿರೀಟ ಕಿರಣದಿಂ ತದೀಯ ಪದ ನಖ ಮಯೂಖಮಂ ಕೊರ್ವಿಸೆ ಸಾರ್ವಭೌಮನಾಗೆಂದು ಪರಸಿ—

ಮ ॥ ಶಯನ ಕ್ಲೇಶದೊಳನ್ನ ಪಾನ ಗಮನಾಯಾಸಂಗಳೊಳ್ ನಿನ್ನ ಸೇ।
ದೆಯುಮಂ ನೋಡದತಿಪ್ರಯತ್ನ ಪರಿಚರ್ಯಾರಂಭದಿಂ ಪುತ್ರ ಸೀ॥
ತೆಯುಮಂ ರಾಮನುಮಂ ಸಮಾಹಿತಮನಮಾ‌ಡೆಂದು ಸಂಪ್ರೀತಿಯಿಂ।
ಪ್ರಿಯದಿಂ ಪ್ರಾರ್ಥಿಸಿದಳ್ ಗುಣಪ್ರಿಯೆ ಸುಮಿತ್ರಾದೇವಿ ಸೌಮಿತ್ರಿಯಂ॥೧೭೬॥

ಗುಣಮಂ ನೋಡದರಣ್ಯಮಂ ಪುಗಿಸಿದಳ್ ರಾಜ್ಯಾರ್ಹನಂ ಪುತ್ರಕಾ।
ರಣದಿಂ ಕೈಕೆ ಸುಮಿತ್ರೆ ರಾಮನೊಡವೋಗೆಂದಟ್ಟಿದಳ್ ಪಾಲಿಸಲ್॥
ಗುಣಮಂ ಲಕ್ಷ್ಮಣನಂ ಜಗಂ ಪೞಿವಿನಂ ಜೀಯೆಂಬಿನಂ ಕೇವಲಂ।
ಗುಣಹೀನರ್ ಗುಣವಂತರನ್ನೆಯಮನೊಳ್ಪಂ ಮಾಳ್ಪುದಾಶ್ಚರ್ಯಮೋ ॥೧೭೭॥

ಅಂತು ರಾಮಲಕ್ಷ್ಮಣರಂಬಿಕೆಯ ಚರಣಾಂಬುಜಂಗಳಂ ಬೀೞ್ಕೊಂಡರ ಮನೆಯಂ ಪೊಱಮಟ್ಟು ಪಾದಮಾರ್ಗದಿಂ ವಿಪಣಿಮಾರ್ಗದೊಳಗನೆ ವೈದೇಹಿವೆರಸು ಬರ್ಪ ಸಮಯದೊಳ್ ಕೌವರಿಗೊಂಡು ನೆರೆದು ಪರಿತಂದು ನೋೞ್ಪ ಪುರಜನಂಗಳಲ್ಲಿ ಕೆಲಬರಿಂತೆಂದರ್—

ಉ ॥ ಸಂಗಡದಿಂ ಪುರಾಂಗನೆಯರಿಕ್ಕದೆ ಸೇಸೆಯನೇಕೆ ಶಂಖ ನಾ।
ದಂ ಗಗನಕ್ಕೆ ಲಂಘಿಸದೆ ಮಂಗಲ ತೂರ್ಯ ನಿನಾದಮುಣ್ಮದೆ॥
ತ್ರಂ ಗುಡಿ ತೋರಣಂ ತುಱುಗಿ ಕಟ್ಟದೆ ಮಂಗಲ ಗೀತ ನಾದಮುಂ।
ಮಂಗಲ ಪಾಠಕ ಸ್ತುತಿಯುಮಿಲ್ಲದೆ ಭೂಪರದೆತ್ತ ವೋದಪರ್ ॥೧೭೮॥

ಆನೆಯಮೇಲೆ ಬೆಳ್ಗೊಡೆಯನೆತ್ತಿಸಿ ಚಾಮರಮಿಕ್ಕೆ ಚಾರು ಚಂ।
ದ್ರಾನನೆಯರ್ಕಳಿರ್ಕೆಲದ ಪೆರ್ವಿಡಿಯೊಳ್ ನೆಲಸಿರ್ದು ಸುತ್ತಲುಂ॥
ದಾನ ಗಜಂ ಘನಾಘನದವೋಲ್ ಬರೆ ಬಾರದೆ ಪಾದಮಾರ್ಗದಿಂ।
ಜಾನಕಿಯುಂ ಬಲಾಚ್ಯುತ[1]ರುಮೇಳಿದರಂದದೆ ಬರ್ಪುದಾವುದೋ ॥ ೧೭೯ ॥

ಶಾ ॥ ಪೌರಸ್ತ್ರೀ ನಯನಪ್ರಭಾ ಸಹಚರಂ ಹಾರಾಂಶು ವಿಸ್ತೀರ್ಣ ವ।
ಕ್ಷೋರಂಗ ಸ್ಥಲದೊಳ್ ರಸಾಭಿನಯಮಂ ತೋರ್ಪನ್ನೆಗಂ ವಾಜಿಯಂ॥
ಧಾರಾ ಪಂಚಕದೊಳ್ ವಿಚಿತ್ರ ಲಯದಿಂ ತಾಮೇಱಿ ಬರ್ಪೀ ಮಹಾ।
ಧೀರರ್ ಕಾಲ್ನಡೆಯೊಳ್ ನೃಪಾವಸಥದಿಂ ಬರ್ಪಂದಮಾವಂದಮೋ ॥೧೮೦॥

---

1. ರುಂ (?) ಮೞಿದರಂದದಿನೆತ್ತ ವೋದಪರ್. ಚ.

ಉ ॥ ಮಂಗಲ ರತ್ನವೇದಿಕೆಯೊಳೋಲಗಸಾಲೆಯೊಳಿಂದು[1]ಕಾಂತ ರಾ ।
ಜಾಂಗಣದೊಳ್ ಗೃಹೋಪವನದೊಳ್ ಗೃಹದೀರ್ಘಿಕೆಯೊಳ್ ವಿಲಾಸಗೇ ॥
ಹಂಗಳೊಳಂಚೆವಿಂಡಿನೊಡನಾಡುವ ಜಾನಕಿ ಪಾದಮಾರ್ಗದಿಂ ।
ದಂಗಡಿ ವೀದಿಯೊಳ್ ಪತಿಯ ಪಿಂತನೆ ಮೆಯ್ಗರೆದೆತ್ತ ಪೋದಪಳ್ ॥ ೧೮೧ ॥

ಮತ್ತಮಲ್ಲಿ ಕೆಲರ್ ನಯ ನಿಪುಣರುಂ ಕಲಾಕುಶಲರುಮುದಾತ್ತರಾಘವನಲ್ಲದೆ ಪದಪಲ್ಲವರಾಗದಿಂ ನಿಖಿಲ ಪರಿಜನ ಮನೋರಾಗಮನೊದವಿಸಲುಮವಾರ್ಯ ವೀರ್ಯದಿ ನಯೋಧ್ಯಾ ಸಿಂಹಾಸನಮಂ ಪದುಳಮಿರಿಸಲುಂ, ಕಿಂಚಿದುನ್ನಮಿತ ಭ್ರೂ ಲತಾಂ ಚಲದಿನಖಿಲ ಯಾಚಕ ಮನೋರಥಮಂ ಸಫಲಮ್ಮಾಡಲುಂ, ಭುಜಪ್ರತಾಪ ತಪನ ತಾಪದಿನುದ್ವೃತ್ತ ರಾಜ ಮಂಡಲಮಂ ಮುಸುಳಿಸಲುಂ, ನಿಷ್ಕೃಪ ಕೃಪಾಣಧಾರಾ ಜಲಜಲಧಿಯಿಂ ಶರಣಾಗತ ಕುಭೃತ್ಕುಲಮನೊಳಕೊಂಡು ಕಾಯಲುಂ, ನಿಖಿಲ ದಿಕ್ಪಾಲ ಮಕುಟ ನಿಕಟ ವರ್ತಿ ನಿಜಾಜ್ಞಾಮಾತ್ರದಿಂ ವರ್ಣಾಶ್ರಮ ಚರಿತ್ರಮನವಿಶ್ರಾಂ ತಂ ಮಾಡಲುಂ, ದುರ್ಜಯ ವಜ್ರಾವರ್ತ ಚಾಪ ಟಂಕಾರ ಶರಮೋಕ್ಷ ಹೂಂಕಾರದಿಂ ಶೋಕಲುಂಟಾಕ ವಿಗ್ರಹ ಮದವೀರಗ್ರಹೋಚ್ಚಾಟನಮನೊಡರ್ಚಲುಂ, ಜಗತ್ಪವಿತ್ರ ಚಾರುಚರಿತ್ರದಿಂ ಮನುಸೂತ್ರಮಂ[2]ವಿವರಿಸಲುಂ, ಸಹಜ ಸಾಹಿತ್ಯ ಕಲಾ ಕೌಮುದೀ ವಿಲಾಸದಿಂ ವಿದ್ವಜ್ಜನ ಮನಃಕುಮುದಿನಿಯನಲರ್ಚಲುಂ, ಪ್ರೇಮರಸ ಪುಷ್ಟ ದೃಷ್ಟಿ ಪಾತದಿಂದಭಿಜನಸನಾಭಿಜನಮಂ ಕೃತಾರ್ಥಮ್ಮಾಡಲುಂ, ಪೆಱರ್ ನೆಱೆಯರೆಂದು ಕೈಕೆಯ ಕೈತವಕ್ಕೆ ಕನಲ್ದೊನಲ್ದು ನುಡಿವ ನುಡಿಗಳನಾಲಿಸುತ್ತುಂ ದಿವಸದವಸಾನ ಸಮಯದೊಳ್ ಪುರದ ಪರಭಾಗದ ಅರಭಟ್ಟಾರಕರ ಬಸದಿಯ ಕನಕಪ್ರಾಕಾರಮಂ ಪೊಕ್ಕು—

ಮ ॥ ಲಲಿತಾ[3]ಕಾರಮದೀಯೆ ನಾಡೆ ನಯನಕ್ಕಾನಂದಮಂ ಮೇರುವಂ ।
ಬಲಗೊಳ್ವತ್ರಿತನೂಜನಂತೆ ಬಲಗೊಂಡಂ ಪಂಕಜ ಶ್ರೀಯನಂ ॥
ಡಲೆವನ್ನಂ ನಿಜಪಾದ ವಿನ್ಯಸನ ಸೌಂದರ್ಯಂ ಬುಧ ಪ್ರಸ್ತುತಂ ।
ಬಲಭದ್ರಂ ಜಿನನಾಥ ದಿವ್ಯ ಗೃಹಮಂ ಸಾಹಿತ್ಯವಿದ್ಯಾಧರಂ ॥ ೧೮೨ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಳಚಂದ್ರ
ಮುನೀಂದ್ರ ಚರಣ ನಖ ಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ವನಪ್ರವೇಶ ವರ್ಣನಂ
—ಷಷ್ಠಾಶ್ವಾಸಂ—

1. ಕಾಂತಧಾರಾಂಗಣ. ಚ. 2. ವಿರಚಿಸಲುಂ ಚ. 3. ಕಾರದಿನೀಯೆ. ಕ. ಖ. ಗ. ಘ. ಚ.

# ಸಪ್ತಮಾಶ್ವಾಸಂ

ಕಂ ॥ ಶ್ರೀರಮಣಂ ಬಲಗೊಂಡಖಿ
ಲಾರಾಧ್ಯನ ರತ್ನಭವನಮಂ ಪೊಕ್ಕಂ ನೀ ॥
ಹಾರ ರುಚಿ ರುಚಿರ ಕೀರ್ತಿ
ಶ್ರೀರಮಣಂ ಪೆಂಪುವೆತ್ತನಭಿನವ ಪಂಪಂ ॥ ೧ ॥

ಅಂತು ಜಿನಭವನಮಂ ಪೊಕ್ಕು ಮುಕುಳಿತ ಕರ ಸರೋಜಮುಂ ನೊಸಲ್ಗೆ ತಂದು—

ಕಂ ॥ ಒಡಲುಮನಾತ್ಮನುಮಂ ಬೇ
ರ್ಪಡಿಕುಮುಪ್ಪೋರೊಂದಱೊಳಗೆ ಪೊಕ್ಕಿರ್ದುಱವರ್ನೇಂ ॥
ಪಡೆಮಾತರಭಟ್ಟಾರಕ
ರಡಿದಳಿರೊಳ್ ಪೊಳೆವ ನಖರುಚಿ ಕ್ರಕಚಂಗಳ್ ॥ ೨ ॥

ಎಂದು ದರ್ಶನಸುತ್ತಿಗೆಯ್ದು [1]ಜಿನಭವನ ಮಧ್ಯರಂಗಮಂ ರಾಮಲಕ್ಷ್ಮಣ ರಲಂಕರಿಸಿರ್ಪುದುಮಾಸಮಯದೊಳ್—

ಮ॥ಸ್ರ॥ಭವಬದ್ಧ ಕ್ರೋಧದಿಂ ಸಂಧಿಸೆ ಪೆಱಗೆ ತಮಂ ಸ್ಥಾನಮಂ ಬಿಟ್ಟು ತೇಜಂ।
ತವೆ ಶೋಕಂ ಚಕ್ರವಾಕಕ್ಕೊಡರಿಸೆ ದಿವಸ ಶ್ರೀಯನೀಡಾಡಿ ಕೈಕೊಂ ॥
ಡವರೋಧ ಸ್ತ್ರೀಯರಂ ಪದ್ಮಿನಿಯರನಿನಿಸುಂ ನೋಡದುತ್ತಾನ ಪಾದಂ ।
ದಿವಸೇಂದ್ರಂ ಭೀತಿಯಿಂದಂಬರಮನುಱಿದು ವಾರಾಶಿಯಂ ಪೋಗಿ ಪೊಕ್ಕಂ ॥

ಚ ॥ ಸುಗಿದು ತಮಕ್ಕೆ ಬಿಟ್ಟು ಬಿಸುಪಂ ಪರಿವಾರಮೆನಿಪ್ಪ ಜಕ್ಕವ ।
ಕ್ಕಿಗಳ ವಿಯೋಗಮಂ ನೆನೆಯದಬ್ಜಿನಿಯಂ ಕಡುಗೂರ್ಪನಲ್ಲಳಂ ॥
ಬಗೆಯದೆ ಮಂಡಲಾಗ್ರ ರುಚಿದೋಱದೆ ಭೀತಿಯಿನೋಡಿಪೋಗಿ ತೊ।
ಟ್ಟಗೆ ರವಿ ಸಾರ್ದನಸ್ತಗಿರಿಯಂ ಕ್ಷಣಿಕಂ ಸ್ಥಿರಸಾರನಪ್ಪನೇ ॥ ೪ ॥

ಮ ॥ ದಿನಪಂ ತನ್ನನಗಲ್ದು ಪೋಗೆ ಹರಿದಿಕ್ಕಾಂತಾನನಂ ಕಂದಿದ ।
ತ್ತೆನೆ [2]ಮರ್ವುರ್ವಿದುದಾತನೊಳ್ ನೆರೆಯೆ ರಾಗಂ ಪಶ್ಚಿಮಾಶಾ ವಿಳಾ ॥

---

1. ಜಿನಭವನಮಂ ರಾಜಕುಮಾರರ್ ವಂದನೆಯಂ ಮಾಡಿ ಕುಳ್ಳಿರ್ಪುದುಂ. ಚ.
2. ಮರ್ವರ್ವಿದು. ಚ.

ಸಿನಿಗಾದತ್ತೆನೆ ಸಂಜೆ ರಂಜಿಸಿದುದೇನಾಶ್ಚರ್ಯಮೋ ತಾಳ್ದರಾ ।
ರಿನಿಯಂ ತನ್ನನಗಲ್ದೊಡಂ ನೆರೆದೊಡಂ ನೀರಾಗಮುಂ ರಾಗಮುಂ ॥ ೫ ॥

ಮ ॥ ವಿರಹವ್ಯಾಕುಲಮಾಗೆ ಚಕ್ರಮಿಥುನಂ ಸಂಕೋಚಮುಂ ತಾಳ್ದಿ ತಾ ।
ವರೆ ಕಾಮಾತುರರುಂ ರಜೋಧಿಕರುಮೇಂ ಖೇದಕ್ಕೆ ಪಕ್ಕಾಗದಿ ॥
ರ್ಪರೆ ದೋಷಾಂಧರೆನುತ್ತಮಂ ನಗುವವೋಲ್ ನೆಯ್ದಿಲ್ಗೊಳಂ [1]ಮೇಲ್ಮರ ।
ಲ್ದರಲುತ್ತಿರ್ದುವು ಚಂಚರೀಕ ಮಧುರ ವ್ಯಾಹಾರ ವಾಚಾಲಿತಂ ॥ ೬ ॥

ಕಂ ॥ ಮಿನುಮಿನನೆ ತೋಱೆ ತಾರಗೆ
ಘನತರ ತಿಮಿರಾವಕಾಶಮಾಕಾಶಮುದೇಂ ॥
ನೆನೆಯಿಸಿದುದೊ ಕಡಲೊಳ್ ಸೀ ।
ರ್ಪನಿ ತನುವಂ ಪುದಿಯೆ ತೋರ್ಪ ಕೃಷ್ಣನ ತನುವಂ ॥ ೭ ॥

ಅಂತು ನೇಸರ್ಪಡುವುದುಮಾಸಮಯದೊಳುಮ್ಮಳಿಸಿ ತಮ್ಮಲ್ಲಿಗೆ ವಂದ ಜನನಿಯರೊಳ್ ವಿನಯಮುಂ ನುಡಿದು ಸಂತೋಷಂಬಡಿಸಿ ಮಗುಟ್ದರಮನೆಗೆ ಕಟಿಪಿ ಜಿನಮಂದಿರಕ್ಕೆ ವಂದು, ನಿದ್ರಾ ಮುದ್ರಿತ ಲೋಚನರ್ ನಡುವಿರುಳೆಟ್ದು ಪರಮಜಿನಪತಿಯಂ ಬೀಟ್ಕೊಂಡು ಬಿಲ್ಲುಮನಂಬುಮಂ ಕೊಂಡು, ಸೀತೆ ನಡೆದುಬರೆ ಪೊಟಿಲ ನಡುವಣ ಕ್ಷುಲ್ಲಕ ದ್ವಾರದಿಂ ಪೊರಮಟ್ಟು, ದಕ್ಷಿಣಾಭಿಮುಖರಾಗಿ ಪಯಣಂಬೋವುದುಮನಂತ ಸಾಮಂತ ಸಂದೋಹಮುವರಪಿಂದನೆ ಮಾರ್ಬಟ್ಟೆಯೊಳ್ ಬರ್ಪರಂ ಬೆಸಗೊಳುತ್ತುಂ ಬೇಗಮೆಯ್ತಂದು, ದೂರೋತ್ಸಾರಿತ ವಿಚಿತ್ರಾತಪತ್ರ ವಿವಿಧ ವಾಹನರ್ ವಿನಯವಿನಮಿತೋತ್ತಮಾಂಗರೆಂತಾನುಮೆಯ್ದಿವಂದೆವೆಂದು ಬಿನ್ನವಿಸೆ, ಸೀತೆ ಸೇದೆವಡುವಳೆಂದು ಮೆಲ್ಲಮೆಲ್ಲನೆ ನಡೆಯುತ್ತಿರ್ದವಲ್ಲದಂದಿನ್ನೆವರಂದೂರಂ ಪೋಪೆವೆಂದವರೊಡನೆ ಮಾತಾಡುತ್ತುಮೆಡೆಯೆಡೆಯ ಗ್ರಾಮ ನಗರಂಗಳಂ ನೋಡುತ್ತುಂ ಕಟಿದು ಗಂಭೀರತರಂಗಿಣಿಯ ನೆಯ್ದಿವಂದಲ್ಲಿ ನಿಂದು, ಸಾಮಂತಾದಿಗಳನೆಂತಾನುಮೊಡಂಬಡಿಸಿ ನಿಲಿಸಿ, ತೊಱೆಯಂ ಯಾನಪಾತ್ರದಿಂ ದಾಂಟಿ ಪೋಪುದುಂ, ರಾಮಲಕ್ಷ್ಮಣರಗಲ್ಕೆಗೆ ಸೈರಿಸಲಾರದೆ ಕೆಲಂಬರದುವೆ ನಿರ್ವೇಗಕಾರಣಮಾಗೆ ತನ್ನದೀತೀರದ ಜಿನಾಗಾರದೊಳಿರ್ದ [2]ಶತಕೇತುಗಳೆಂಬ ಗಣಧರಸ್ವಾಮಿಗಳ ಸಮಕ್ಷದೊಳ್ ದೀಕ್ಷೆಗೊಂಡಲ್ಲಿಯೆ ನಿಂದರ್; ಕೆಲಬರ್ ವ್ರತವಿಶೇಷಂಗಳಂ ಕೈಕೊಂಡು ಸಾಕೇತಪುರಕ್ಕೆ ವಂದರದೆಲ್ಲಮುಂ ದಶರಥ ನರನಾಥಂ ಕೇಳ್ದು—

ಚ ॥ ಸೆಡೆದನೆ ತನ್ನ ಬಂಧುಗಳಗಲ್ಕೆಗೆ ಪುತ್ರ ಕಲತ್ರ ಮೋಹದೊಳ್ ।
ತೊಡರ್ದನೆ ಪಟ್ಟಬಂಧಮನೊಡರ್ಚಿದನೇ ಭರತಂಗೆ ರಾಘವಂ ॥

---

1. ಮಲ್ಮರಲ್ದರಲು ಚ  2. ಶ್ರುತಕೇತು. ಘ.

ನಡೆಯೆ ವನಕ್ಕದಂ ಮಱೆದುಮೇಂ[1]ಬೆಸಗೊಂಡನೆ ದೀಕ್ಷೆಗೊಂಡನಾ ।
ಗಡೆ ವಿಭು ಸರ್ವಭೂತಹಿತ ದಿವ್ಯಮುನೀಂದ್ರರ ಪಾದಪಾರ್ಶ್ವದೊಳ್ ॥ ೮ ॥

ಅಂತು ದಶರಥಂ ದಶಧರ್ಮನಿರತನಪ್ಪುದುಂ, ಭರತಂ ರಾಜ್ಯಸುಖ ನಿರತನಾದ ನಾಗಳಪರಾಜಿತಾಮಹಾದೇವಿಯುಮುದಾತ್ತರಾಘವನ ವನಪ್ರವೇಶ ಕ್ಲೇಶಾಯಾಸಮಂ ನೆನೆದವಿಶ್ರಾಂತ ವಿಗಳಿತಾಶ್ರು ಸಲಿಲ ಕಲಿಲ ಕಪೋಲ ಯುಗಳೆ ಗದ್ಗದಕಂಠೆಯಾಗಿ—

ಕಂ ॥ ಏನನಿದಂ ನೆಗೆಟ್ದಿಯ್ ಸುತ
ಕಾನನಮಂ ಪೋಗಿ ಪೊಕ್ಕು ಮಂಗಲ ಗೀತ ॥
ಧ್ವಾನಮಿರೆ ಸಿಂಹ ಶರಭ
ಧ್ವಾನಮನಾಲಿಸುವ ಮಹಿಮೆಗೆಟ್ಟಿಗನಾದೈ ॥ ೯ ॥

ಧವಳ ಚಮರರುಹ ಪವನನ
ನವಮಾನಂಗೆಯ್ದು ಕಂದ ನಿಷ್ಠುರ ಚೀರೀ ॥
ರವ ಮುಖರ ಪರುಷ ಕಾನನ
ಪವಮಾನನ ಸೋಂಕನಾಸೆಗೆಯ್ಯಲ್ ಬಗೆದೈ ॥ ೧೦ ॥

ಚ ॥ ವನ ಜಲಕೇಳಿಯಂ ಬಿಸುಟು ನಂದನ ನಿರ್ಝರ ಶೈಲಸಾನು ನಂ ।
ದನ ಜಲಕೇಳಿಯೊಳ್ ತೊಡರ್ದ ವಾರವಧೂ ಜನ ಮುಗ್ಧ ಸಾಲಕಾ ॥
ನನಮಿರೆ ಸಾಲ ಕಾನನಮನೀಕ್ಷಿಸಲಟ್ಟಿಗನಾದೆ ದಿವ್ಯಭೋ ।
ಜನಮಿರೆ ಕಂದ ಕಂದ ಫಲ ಮೂಲದಿನಾಱಿಸುವೈ ಕ್ಷುಧಾಗ್ನಿಯಂ ॥ ೧೧ ॥

ಮುಡಿಯ ಪಯೋಧರಂಗಳ ನಿತಂಬದಳುಂಬಮೆನಿಪ್ಪ ಬಿಣ್ಪಿನಿಂ ।
ಗಡಣದಿನಂಚೆಯೊಳ್ ಗೃಹ ವನೋಪವನ ಸ್ಥಳದೊಳ್ ವಿನೋದ ದಿಂ ॥
ನಡೆನೆಡೆಯೊಳ್ ಬಟಲ್ವ ಜನಕಾತ್ಮಜೆಯಂ ರಘುವಂಶರಾಮ ನೀಂ ।
ನಡೆಯಿಸುವಂದಮಾವುದೊ ತನೂಜ ದುರಂತ ವನಾಂತರಾಳದೊಳ್ ॥ ೧೨ ॥

ಕಂ ॥ ನಡೆಯಂ ವನ್ಯ ಗಜಂಗಳ
ನಡೆಯೊಳ್ ಸೋಗೆಗಳ ಸೋಗೆಯೊಳ್ ಸೋರ್ಮುಡಿಯಂ ॥
ನುಡಿಯಂ ಕೋಕಿಲ ರುತಿಯೊಳ್
ಪಡಿಯಿಡಲೊಡನುಯ್ದೆ ತನಯ ಜನಕಾತ್ಮಜೆಯಂ ॥ ೧೩ ॥

---

1. ಪೆಸಗೊಂಡನೆ. ಕ. ಖ.

ಎಂದತಿಪ್ರಳಾಪಂಗೆಯ್ಯೆ ಸುಮಿತ್ರೆಯುಮೊಡನೆ ಶೋಕಿಸೆ ಕೈಕೆ ಕೇಳ್ದು ತನ ಗತ್ಯಂತ ಶೋಕಾವೇಗಮಾಗೆ—

ಕಂ ॥ ಪತಿ ದೀಕ್ಷೆಗೊಂಡನಪರಾ
ಜಿತೆಗಿನಿವಿರಿದಾಯ್ತು ದುಃಖಭಾರಂ ಧರೆಯಂ ॥
ಸುತನುಮಿಱಕೆಯ್ದನೀ ದು
ಷ್ಕೃತಮಂ ಸ್ತ್ರೀತ್ವದ ಜಡತ್ವದಿಂದೊಡರಿಸಿದೆಂ ॥ ೧೪ ॥

ಎಂದು ತನ್ನಂ ತಾನೆ ನಿಂದಿಸಿಕೊಂಡು ಭರತನಂ ಬರಿಸಿ ಮಗನೆ ನಿನ್ನ ರಾಜ್ಯಂ ರಾಮಲಕ್ಷ್ಮಣರಿಲ್ಲದೊಪ್ಪಲಱಿಯದವರ ಜನನಿಯರುಮವರ ವಿಯೋಗ ವಿಷಾದ ವೇಗದಿಂ ವಿಗತ ಜೀವಿತೆಯರಪ್ಪರದುಕಾರಣದಿಂ ಬೇಗಮೆಯ್ದೆ ವೋಗಿ ಪೋಗಲೀಯದೆ ನಿಲಿಸಾನುಂ ನಿನ್ನ ಪಿಂದನೆ ಬಂದಪೆನೆಂಬುದುಮಂತೆಗೆಯ್ವೆನೆಂದು ರಾಘವನಂ ಕಟಿಪಿ ಬಂದ ಸಾಮಂತರ್ವೆರಸು ತೊಱೆಯುಂ ಪಾಯ್ದು ಪೋಗಿ ಮುಂದೆ ಕಱಂಗಿ ಕತ್ತಲಿಸಿದ ಕಾನನದ ಬಟ್ಟೆಯೊಳ್ ಜಾನಕಿಯ ಗಮನ ಪರಿಶ್ರಮಮುಮನಾಱಸುತಿರ್ದ ರಘುವೀರನಂ ಮುಟ್ಟೆವಂದು ವಾಹನದಿನಿೞಿದು ಕಾಲಮೇಲೆ ಕವಿದುಬಿಟ್ಟು—

ಕಂ ॥ ಪುದಿಯೆ ತಮಮುಂ ಮನಮುಂ ಮೋ
ಹ ದವಾಗ್ನಿಯ ಧೂಮದಂತೆ ಕರಣ ಬಲ ಪ್ರಾ ॥
ಣದ ಚೇಷ್ಟೆಗೆಟ್ಟು ಭರತಂ
ಪದಾನತಂ ವಿಕಲನಾಗಿ ಮೂರ್ಛೆಗೆ ಸಂದಂ ॥ ೧೫ ॥

ಅಂತು ಮೂರ್ಛಿತನಾಗಿ ಕಿಱದಾನುಂ ಬೇಗದಿನೆಂತಾನುಮೆೞ್ಚತ್ತು ಸೀತೆಗಂ ಲಕ್ಷ್ಮಣಂಗಂ ತುಱಿಲ್ಗೆಯ್ದು ನಿಟಿಲ ತಟ ಘಟಿತ ಮುಕುಳಿತ ಕರಸರೋಜಂ ರಾಮಚಂದ್ರನ ಮುಖಚಂದ್ರನಂ ನೋಡಿ—

ಕಂ ॥ ಆಕ್ರಮದಿನಟಿಪಿ ವಸುಧಾ
ಚಕ್ರಮನಾನಾಸೆಗೆಯ್ಯೆ ದುರ್ಯಶಮಾಶಾ ॥
ಚಕ್ರಾವಧಿಯಕ್ಕುಂ ದೋ
ರ್ವಿಕ್ರಮ ಧನ ನಿಮ್ಮ ಮನದೊಳವಧರಿಪುದಿದಂ ॥ ೧೬ ॥

ಅನಯಂ ಮನುಕುಲದೊಳ್ ನಾ
ಭಿ ನರೇಂದ್ರನಿನಿತ್ತಲಾದುದಿಲ್ಲೆನ್ನಿಂದಂ ॥
ಜನಿಯಿಸಿದೊಡೆ ಕುಲ ದೂಷಕ
ನೆನಿಪ್ಪ ಪಾಪಕ್ಕೆ ಪಱಗೆ ಪಕ್ಕಾಗಿರೆನೇ ॥ ೧೭ ॥

ಚ ॥ ಅನಯದಿನಪ್ಪ ಸಂಪದದಿನಿಲ್ಲಮೆ ನಾಡೆಯುಮಿಂಬುವೆತ್ತುದೆಂ।
ತೆನೆ ಪೞೆವನ್ನರಿಲ್ಲ ಧನಮಿಲ್ಲದರಂ ದುರಿತಾನುಬಂಧಮಿ॥
ಲ್ಲನಯದಿನಪ್ಪುವೀಯೆರಡುಮೆಂಬುದನಿಂಬೞಿದೀವೆಮೆಂಬಿರೆಂ।
ತೆನಗಧಿರಾಜ ರಾಜ್ಯಮನಪೂಜ್ಯಮನಕ್ರಮದಿಂದಮಪ್ಪುದಂ ॥ ೧೮ ॥

ಎಂದು ಬಿನ್ನವಿಸುವನ್ನೆಗಂ ಕೈಕೆಯುಂ ನೂರ್ವರ್ ಸಾಮಂತರೊಡನೆ ಬರೆ ಬರ್ಪಳಂ ಕಂಡು:—

ಕಂ ॥ ಇದಿರೆೞ್ದು ಪರಿದು ಕೈಕೆಯ
ಪದಾಂಬುಜಕ್ಕೆಱಗೆ ರಾಘವಂ ಹರ್ಷದ ಭಾ॥
ರದಿನುಮ್ಮಳವಾ ಸತಿಗಾ
ದುದು ಮನದೊಳ್ ನೆನೆದು ತನ್ನ ಗೆಯ್ದನ್ನೆಯಮಂ ॥ ೧೯ ॥

ಸ್ಥಾನಚ್ಯುತಿ ಮಾಡಿದಳೆಂ
ಬೀ ನೋವಿಲ್ಲೇಕಕುಂಡಲಂ ಕೈಕೆಗೆ ಪಾ॥
ದಾನತನಾದಂ ಪದೆಪಿಂ
ಮಾನ ಕಷಾಯಕ್ಕೆ ತಕ್ಕನೆಡೆಗೊಟ್ಟಪನೇ ॥ ೨೦ ॥

ಅಂತು ವಿನಯ ವಿನಮಿತನಾಗಿರ್ದ ಮಗನಂ ತೆಗೆದು ತೞ್ಕೈಸಿ ಪಲತೆಱದಿಂ ಪ್ರಳಾಪಂಗೆಯ್ದವಿವೇಕದಿನೆನ್ನ ಗೆಯ್ದ ದುರ್ವಿಲಸಿತಕ್ಕೆ ಸೈರಿಸಿ ಮಗನೆ ರಾಜ್ಯಮಂ ಕೈಕೊಳ್ವುದು; ನಿನ್ನ ತಮ್ಮಂದಿರ್ ನಿನಗೆ ಬೆಸಕೆಯ್ದು ಬಾೞ್ವರಿದನುದಾಸೀನಂ ಗೆಯ್ಯದೆ ಮಗುೞೆ ಬಿಜಯಂಗೆಯ್ಯೆಂಬುದುಮಂಬಿಕೆಗೆ ಮುಕುಳಿತ ಕರಾಂಬುಜಂ ರಾಮನಿಂತೆಂದಂ—

ಕಂ ॥ ಅಕಲಂಕ ಚರಿತ್ರಂ ಕ್ಷ
ತ್ರ ಕುಲೋದ್ಗತನೆರಡನುಸಿರ್ದೊಡೈಹಿಕವಾಮು॥
ತ್ರಿಕಮುೞಿಗುಂ ಕೇವಲಮಂ
ಬಿಕೆ ಪಾತಕಮನೃತದಿಂದಮಗ್ಗಳಮುಂಟೇ ॥ ೨೧ ॥

ಎಂದು ಮತ್ತಮಯ್ಯನ ನನ್ನಿಗೆ ಬನ್ನಮಂ ಪಡೆದು ನಿಮ್ಮೊಳಾದ ವಿನಯಮನತಿಕ್ರಮಿಸಿ ತಮ್ಮನಕ್ಕೆಯ ರಾಜ್ಯಮಂ ಕೊಂಡೊಡೆನ್ನ ನುಡಿ [1]ಕಿತ್ತಡಮಕ್ಕುಂ; ಮಗುೞೆ ನುಡಿಯದಿರಿಮೆಂದು ಭರತನುಮನಾಂ ಕುಡಲ್ಪಡೆದ ರಾಜ್ಯಂ ನಿನಗಕ್ರಮಮಣಮಲ್ತು ವಕ್ರಂಬಂದೊಡೆಮ್ಮಾಜ್ಞೆಗೆ ತಪ್ಪಿದೆಯೆಂದು ನಿಲೆ ನುಡಿದು:—

1. ಕೀಟ್ರಡ. ಘ.

ಕಂ ॥ ಬಂಹಿಮುವನ್ನಹಿಮಂ ನಿಜ
ಸಿಂಹ ಕಟೀ ತಟ ವಿಲಾಸಿ ಪರ್ಯಂಕ ತಳಂ ॥
ಸಿಂಹಾಸನವೆನೆ ಭರತಂ
ಗೇಂ ಹಲಿ ಸಾಮ್ರಾಜ್ಯ ಪಟ್ಟಮಂ ಕಟ್ಟಿದನೋ ॥ ೨೨ ॥

ಅಂತು ನಿಜ ವದಾನ್ಯತಾ ಗುಣ ವಿಶುದ್ಧ ಸಿದ್ಧರಸ ಪ್ರವಾಹಕ್ಕೆ ಸೇತುಗಟ್ಟುವಂತೆ ಪಟ್ಟಮಂ ಕಟ್ಟಿ ವಿನಯಮಂ ಮುಂದಿಟ್ಟು—

ಉ ॥ ಈಕ್ಷಿಸುವನ್ನೆಗಂ ಭುವನವಲ್ಲಭ ನಿಮ್ಮ ಪದಾರವಿಂದಮಂ ।
ರಕ್ಷಿಸುವೆಂ ಧರಾವಲಯಮಂ ಭವದಾಜ್ಞೆಗೆ ಬೆರ್ಚಿ ಮನ್ನನ ॥
ಸ್ವಾಕ್ಷಿಕವಾನಪೇಕ್ಷಿಸುವೆನಲ್ಲುಪಭೋಗಮನೆಂದು ಪೂಣ್ದನೇ ।
ನಕ್ಷತಧೈರ್ಯನೋ ಭರತನೊಲ್ವನೆ ಲೋಭರತ ಪ್ರಪಂಚಮಂ ॥ ೨೩ ॥

ಅಂತು ಪ್ರತಿಜ್ಞಾರೂಢನಾದ ಭರತನುಮಂ ಜನನಿಯುಮನುಚಿತಪ್ರತಿಪತ್ತಿಯಿಂ ಮನ್ನಿಸಿ ಪೊಟಲ್ಗೆ ಕಟಿಪಿ ರಾಮಲಕ್ಷ್ಮಣರ್ ಸೀತಾಸಮೇತಂ ಪಯಣಂ ಬೋಪುದುಮಿತ್ತ ಭರತಂ ಕೈಕೆವೆರಸಯೋಧ್ಯೆಯಂ ಪೊಕ್ಕು—

ಮ ॥ ಅಮಳ್ವೆತ್ತಂತೆ ಸಮಾನಮಾಗೆ ಭರತಂ ಕೊಂಡಾಡಿದಂ ಕ್ಷತ್ರಧ ।
ರ್ಮಮುಮಂ ಧರ್ಮಮುಮಂ ಧರಾವಲಯಮಂ ವಿಕ್ರಾಂತದಿಂ ತಾಳ್ದಿ ಸಂ ॥
ಯಮ ಸಂರಕ್ಷಣ ಸತ್ವದಿಂ ತಳೆದು ದಾನಂ ಪೂಜೆ ಶೀಲೋಪವಾ ।
ಸಮನತ್ಯುನ್ನತರಾದ ರಾಜ ತನಯರ್ ತನ್ನನ್ನರಾರೆಂಬಿನಂ ॥ ೨೪ ॥

ಅಂತು ಭರತಂ ರಾಜ್ಯಸುಖ ವಿಮುಖನರಸುಗೆಯ್ಯುತ್ತಿರ್ಪಿನಮಿತ್ತಲ್—

ಉ ॥ ಆತಪ ತಾಪಮಂ ತಳಿರ ಸತ್ತಿಗೆಯಿಂದೆ ತೃಷಾ ವಿಷಾದಮಂ ।
ಶೀತಲ ತೋಯದಿಂದೆ ಪಸಿವಂ ಪರಿಪಕ್ವ ಫಲಂಗಳಿಂದೆ ನಿ ॥
ದ್ರಾತುರ ವೇಗಮಂ ಲತೆಯ ಮಂಟಪದಿಂದೆ ಪಥ ಶ್ರಮಾಂಬುವಂ ।
ಸೀತೆಗೆ ತೂಳ್ದಿದಂ ಕದಳಿಕಾ ದಳ ವೀಜನದಿಂದೆ ರಾಘವಂ ॥ ೨೫ ॥

ಮ ॥ ವನಕೇಳೀ ಗಮನಕ್ಕೆ ದೀಪಕಲಿಕಾ ದೀಪ್ತಿ ಪ್ರತಾನಕ್ಕೆ ವೀ ।
ಜನ ವಾತಕ್ಕೆ ಬಟಲ್ವ ಸೀತೆ ಗಮನಾಯಾಸಕ್ಕೆ ಚಂಡಾಂಶು ತಾ ॥
ಪ ನಿರೋಧಕ್ಕೆ ಸಮಗ್ರ ವಾತ ಹತಿಗೇನುಂ ಬೇವಸಂಬಟ್ಟಳಿ ।
ಲ್ಲಿನಿಯಂ ತನ್ನೊಡನುಯ್ದಪಂ ರಘುಜನೆಂಬೀ ರಾಗದುದ್ರೇಕದಿಂ ॥ ೨೬ ॥

ಕಂ ॥ ಪರಲೊತ್ತೆ ಸೈರಿಸುತ್ತುಂ
ಗುರು ಜಘನ ಭರಂಗಳಿಂ ತಡಮ್ಮೆಟ್ಟುತ್ತುಂ ॥
ಚರಣ ಕಮಲಂಗಳಂ ಸಂ
ವರಿಸುತ್ತುಂ ಸೀತೆ ಸೆಡೆದು ಮೆಲ್ಲನೆ ನಡೆದಳ್ ॥ ೨೭ ॥

ಚ ॥ ಒಗೆದ ಕುಚಂಗಳಿಂ ತೊಲಗೆ ಮೇಲುದನೋರಡಿಗೊರ್ಮೆ ಸೀತೆ ಸಾ ।
ವಗಿಸುವ ಕೆಯ್ತುಮುಂ ವದನಚಂದ್ರ ಸುಧಾ ರಸ ಬಿಂದುವೆಂಬಿನಂ ॥
ನೆಗೆದ ಪಥಶ್ರಮಾಂಬು ಕಣಮುಂ ನಸುಬಂಬಲ ಬಾಡಿದಂಗಮುಂ ।
ತ್ರಿಗುಣಿಸೆ ರಾಗಮಂ ಮಗುಟ್ದು ವೀಕ್ಷಿಸುತುಂ ನಡೆದಂ ರಘೂದ್ವಹಂ ॥

ಮ॥ಸ್ರ॥ಕ್ರಮದಿಂ ಪರ್ಯಂತ ನಾನಾ ಜನಪದ ನಗರ ಗ್ರಾಮ ಪುಣ್ಯಾಶ್ರಮ ಪ್ರಾಂ ।
ತಮೆ ಬೀಡಪ್ಪಂತು ಸೌಮಿತ್ರಿಯ ಸಮುಚಿತ ಪರ್ಯಷ್ಟಿಯಿಂ ಪಿಂಗೆ ಯಾತ್ರಾ ॥
ಶ್ರಮವೇಗಂ ಪಾರಿಯಾತ್ರಾವನಿಯ ನಿಕಟಮಂ ರಾಘವಂ ಜಾನಕೀ ಸ್ಮೇ ।
ರ ಮುಖಾಬ್ಜಾಲೋಕನಂ ಲೋಚನಸುಖ ಮುಖಪಾಥೇಯಮಾಗೆಯ್ದೆ ವಂದಂ ॥ ೨೯ ॥

ಅಂತೆಯ್ದೆವರ್ಪುದುಂ—

ಮ॥ಸ್ರ॥ಫಲಭಾರಾಕ್ರಾಂತ ಸಾರ್ವರ್ತುಕ ನಿಕಟವನಂ ಮೇಖಲಾಕೀರ್ಣ ವಲ್ಲೀ ।
ನಿಲಯಂ ಗಂಧೇಭ ಗಂಧೋತ್ಕಟಮವಿರಳ ಸ್ಸಾನು ಸ್ಥಳೀ ಪದ್ಮನೀಲೋ ॥
ತ್ಪಲ ಷಂಡಂ ಕೂಟಕೋಟಿ ಸ್ಫುರಿತ ಮಣಿ ಮಯೂಖಾವಲೀ ಚಿತ್ರಿತಾಶಾ ।
ವಲಯಂ ಕಣ್ಗಂ ಮನಕ್ಕಂ ಪಡೆದುದು ಪದೆಪಂ ಚಿತ್ರಕೂಟಾಚಲೇಂದ್ರಂ ॥೩೦॥

ಫಣಿಲೋಕಂ ಪಾದಪೀಠಂ ತನಗೆನೆ ರಸೆಯುಂ ಮೆಟ್ಟಿ ಮತ್ತಿತ್ತ ತಾರಾ ।
ಗಣಮಂ ತಳ್ಪೊಯ್ದು ಪೇರರ್ವಿಗಳಿನಸದಳಂ ಕಣ್ಗೆ ಚೆಲ್ವಾಗಿ ನಾನಾ ॥
ಮಣಿಕೂಟಂ ಚಿತ್ರಕೂಟಂ ಸೊಗಯಿಸೆ ಪದೆಪಿಂ ಸೀತೆಯುಂ ರಾಮನುಂ ಲ ।
ಕ್ಷ್ಮಣನುಂ ನೋಡುತ್ತುಮುತ್ಕಂಟಕಿತ ತನುಗಳಾಶೈಲಮಂ ದಾಂಟಿಪೋದರ್ ॥

ಅಂತವರ್ ಚಿತ್ರಕೂಟಾಚಲೇಂದ್ರಮಂ ಬಲದೊಳಿಕ್ಕಿ ಪೋಗಿ ತದನಂತರ ಮವಂತೀ ವಿಷಯದೊಳಗನೆ ಬರುತ್ತುಮದೊಂದು ವಟ ವಿಟಪಿಚ್ಛಾಯಾಚ್ಛಾದಿತ ವಪ್ಪ ತಣ್ಬುೞಲ ನುಣ್ಬಸಲೆಯೊಳ್ ವಿಶ್ರಮಿಸಿ ಪರಿಶ್ರಮಮನಾಱಿಸುತ್ತುಂ—

ಕಂ ॥ ಫಲಭರಿತಂಗಳ ನೀಕೆ
ಯ್ವೊಲಂಗಳಂ ಕಾವರಿಲ್ಲ ನಿರ್ಜಂತುಕಮೀ ॥
ನೆಲನನಿತುಂ ಬೇಡರ ಮೇಣ್
ಕೆಲದರಸರ ಬಾಧೆಯಿಂದೆ ಪಾೞಾಯ್ತುಕ್ಕುಂ ॥ ೩೨ ॥

ಎಂದು ನುಡಿಯುತ್ತುಮಿರ್ಪಿನಮೊರ್ವಂ ಮಾರ್ಬಟ್ಟೆಯೊಳ್ ಬರುತ್ತುಮವರಂ ಕಟ್ಟಿದಿರೊಳೆ ಕಂಡೆಱಗಿ ಪೊಡೆವಟ್ಟು ಮರವಟ್ಟಿರ್ಪುದುಂ, ಲಕ್ಷ್ಮಣನವನನಂಜದಿರೆಂದನುನಯಮಂ ನುಡಿದೀ ನಾಡೇಕೆ ಪಾೞಾದುದೆನೆ ಮುಕುಳಿತಾಂಜಲಿಪುಟನಿಂತೆಂದಂ—

ಕಂ ॥ ಇದವಂತಿ ವಿಷಯಮಿೀ ವಿಷ
ಯದೊಳುಂಟುಜ್ಜಯಿನಿಯೆಂಬ ಪೊೞಲದನಾಳ್ವಂ ॥
ಮದವದರಿ ಕರಟಿ ಮಸ್ತಕ
ವಿದಾರಿ ಸಿಂಹೋದರಂ ಪರಾಕ್ರಮಸಿಂಹಂ ॥ ೩೩ ॥

ಆತಂ ತನ್ನ ಸಾಮಂತನಪ್ಪ ವಜ್ರಕರ್ಣಂ ತನಗೆ ಕೈತವದಿಂದೆಱಗುವುದಂ ಕರ್ಣಪರಂಪರೆಯಿಂ ಕೇಳ್ದು ಕಡುಮುಳಿದು—

ಮ ॥ ಸಕಲಜ್ಞಂ ಪೊಱಗಾಗೆ ಕೈಮುಗಿಯೆನೆಂಬೀ ಪೂಣ್ಕೆಯಿಂ ರತ್ನಮು ।
ದ್ರಿಕೆಯೊಳ್ ಕೀಲಿಸಿ ಜೈನಬಿಂಬಮನದೇನುದ್ವೃತ್ತನೋ ನಮ್ರ ಮ ॥
ಸ್ತಕನಪ್ಪಂ ಗಡ ವಜ್ರಕರ್ಣನೆನಗಂ ಕೌಟಿಲ್ಯದಿಂದೆಂದು ಮಾ ।
ನ ಕಷಾಯಾಶಯನಾತನಿರ್ದ ಪುರಮಂ ಸಿಂಹೋದರಂ ಮುತ್ತಿದಂ ॥ ೩೪ ॥

ಅದಱಿನಾತನೊಳಾದ ಭೀತಿಯಿನೀವಿಷಯಮಿನಿತುಂ ಪಾೞಾದುದಾ ದಶಪುರಮುಮಿದೆ ದೆಸೆಯದಿಲ್ಲಿಗನತಿದೂರಮೆಂದು ಬಿನ್ನವಿಸಿ ಬೀೞ್ಕೊಂಡು ಪೋಪುದುಂ—

ಮ ॥ ವ್ರತಮಂ ಪಾಲಿಸಿದಂ ಮಹಾಪುರುಷನೆಂಬೀ ಸಂತಸಂಗೆಟ್ಟು ದು ।
ರ್ಮತಿ ಸಿಂಹೋದರನಪ್ರಮತ್ತ ಚರಿತಂಗಾ ವಜ್ರಕರ್ಣಂಗೆ ದು ॥
ಸ್ಥಿತಿಯಂ ಮಾಡುವೆನೆಂದು ಬಂದು ಪುರಮಂ ಮುತ್ತಿರ್ದಪಂ ತನ್ಮದೋ ।
ದ್ಧತನಂ ಬಾರಿಸವೇೞ್ಪುದಲ್ಲದೊಡುಪೇಕ್ಷಾ ದೋಷಮೇನಾಗದೇ ॥ ೩೫ ॥

ಕದನೋದ್ಯೋಗದಿನಾಳ್ದನೆತ್ತಿ ಬರೆಯುಂ ಬೆಳ್ಕುತ್ತು ಬೆಸ್ಸಿತ್ತನಿ ।
ಲ್ಲ ದೃಢಾತ್ಮಂದಳೆದಂ ಪಲರ್ ಪೊಗೞ್ವಿನಂ ನಿಶ್ಶಂಕೆಯಿಂ ಪೂಣ್ಕೆದ ॥
ಪ್ಪಿದನಿಲ್ಲೈಹಿಕ ಲಾಭಮಂ ಬಗೆದನಿಲ್ಲೇವೇೞ್ಪೆ ಸದ್ದೃಷ್ಟಿಗ ।
ಲ್ಲದಸದ್ದೃಷ್ಟಿಗೆ ವಜ್ರಕರ್ಣನೆ ವಲಂ ಕೈಯಂ ನೊಸಲ್ಗಯ್ಯದಂ ॥ ೩೬ ॥

ಎನುತ್ತವರಲ್ಲಿಂ [1]ತಳರ್ದು ದಶಪುರಮನೆಯ್ದೆವರ್ಪುದುಂ—

---

1. ತಳೆದು. ಚ.

ಉತ್ಸಾಹ ॥ ಹರಿಯ ಬಳನ ನಡುವೆ ಸೀತೆ ಪೊಳೆಯೆ ಚಳವಿಲೋಚನಂ ।
ಕರಿಯ ಬಿಳಿಯ ಮುಗಿಲ ನಡುವೆ ಪೊಳೆವ ಮಿಂಚಿನಂದದಿಂ ॥
ಬರೆ ಕಡಂಗಿ ವಜ್ರಕರ್ಣನವರನಾತ್ಮ ರಾಜ ಮಂ ।
ದಿರದ ಪೊನ್ನ ನೆಲೆಯ ಮಾಡದಿದಿರೊಳಿರ್ದು ನೋಡಿದಂ ॥ ೩೭ ॥

ಕಂ ॥ ಅತಿ ಲಲಿತ ಗಮನವತ್ಯಾ
ಯತ ನಯನಮನೂನವಕ್ಷಮಾಜಾನು ವಿಳಂ ॥
ಬಿತ ಬಾಹುಯುಗಲಮಪ್ರಾ
ಕೃತಮಿಾ ಸೌಂದರ್ಯಮಿನ್ನರಂ ಕಂಡಱಿಯೆಂ ॥ ೩೮ ॥

ಕಾರಣ ಪುರುಷರಿವರ್ ಸಾ
ಧಾರಣರಲ್ಲರ್ ತೃಣೀಕೃತ ತ್ರಿಭುವನರೇ ॥
ಕಾರಣವೇಟ್ಟಿಂದರೊ ಬಲ
ನಾರಾಯಣರಪ್ಪರಿನ್ನರುಬಿದರುಮೊಳರೇ ॥ ॥ ೩೯ ॥

ಎಂದು ನೀಡುಂ ಭಾವಿಸಿ ವಿಸ್ಮಯ ಸ್ತಿಮಿತ ಲೋಚನನಾಗಿ ನೋಡುತ್ತಿರ್ಪುದು ಮವರ್ ಪುರದುತ್ತರ ಗೋಪುರದ ಜಿನೇಂದ್ರ ಮಂದಿರಮನೆಯ್ದೆ ವಂದು ಮೂಱು ಸೂಟ್ಟಿಲಗೊಂಡು ಜಗತ್ತ್ರಯ ಪ್ರಭುವಿಂಗಭಿಮುಖರಾಗಿ—

ಕಂ ॥ ಜಯ ಜಿತವೃಜಿನ ಜಿನೇಶ್ವರ
ದಯಾನದೀ ಪುಳಿನ ರಾಜಹಂಸ ಭವಾಂಭೋ ॥
ಧಿಯ ತಡಿಯನೆಯ್ದಿಸೆಮ್ಮಂ
ನಯ ನಿಕ್ಷೇಪ ಪ್ರಮಾಣ ಪಾತ್ರದಿನರುಹಾ ॥ ೪೦ ॥

ನೇವಾಳಮೆಂದು ಕೆಲಬರ್
ಪಾವಂ ಪಿಡಿವಂತೆ ದೇವ ನೀನಲ್ಲದರಂ ॥
ದೇವರಿವರೆಂದು ಪಿಡಿದಿ
ನ್ನೇವಿಧಿವಟ್ಟಪರೊ ಮೋಹ ಮೂರ್ಛೆಯಿನರುಹಾ ॥ ೪೧ ॥

ನಿನಗೆ ರಸಮೊಂದೆ ಶಾಂತಮೆ
ಜಿನೇಂದ್ರ ಮನಮಾ ರಸಾಂಬು ನಿಧಿಯೊಳಗವಗಾ ॥
ಹನಮಿರ್ದು ಮಿಕ್ಕ ರಸಮುಂ
ಕನಸಿನೊಳಂ ನೆನೆಯದಂತು ಮಾಡೆಮರುಗಹಾ ॥ ೪೨ ॥

ಕಂ ॥ ಮಣಿಭೂಷಣ ಭರದಿಂ ತನು
ಕಿಣಮುಪ್ಪುದದೇಕೆ ನಿನ್ನ ನಿರ್ಮಲ ಗುಣ ಭೂ ॥
ಷಣಮಂ ದಯೆಗೆಯ್ ಪಡೆವೆಂ
ಪ್ರಣಯಮನಪವರ್ಗ ಲಕ್ಷ್ಮಿಗದಱಿಂದರುಹಾ ॥ ೪೩ ॥

ಸಿಂಗದ ಮೂರ್ಧನಿ ಮದವಾ
ತಂಗಮನಳಱಿಸುವವೋಲ್ ನಿಜ ಪ್ರತಿಬಿಂಬಂ ॥
ಪಿಂಗದೆ ಮನದೊಳ್ ನಿಂದಿರೆ
ಪಿಂಗಿಸುವುದು ಜನನ ಮರಣ ದುಃಖಮನರುಹಾ ॥ ೪೪ ॥

ಮೆಚ್ಚಿಗಡಮಳಿಯೆಗಡ ಬಗೆ
ಬೆಚ್ಚಿರೆ ಬೇಱಾಗೆ ನಿನ್ನ ಪದದೊಳ್ ಮನುಜಂ ॥
ಗುಚ್ಚಗತಿ ನೀಚಗತಿ ವಡೆ
ವಚ್ಚರಿ ಕಣ್ದೆಱೆವ ತೆಱನನಱಿಪೆಮುಗರುಹಾ ॥ ೪೫ ॥

ಜ್ಯಾಯಂಗೆ ನೀನೆ ವಲಮಾ
ದೇಯಂ ನೀನಲ್ಲದನ್ಯ ವಸ್ತುಗಳೆಲ್ಲಂ ॥
ಹೇಯಂಗಳೆಂಬ ತತ್ತ್ವೋ
ಪಾಯಮನೆಮಗೀವುದೇವೆವುಱಿದುವನರುಹಾ ॥ ೪೬ ॥

ನಿತ್ಯಸುಖಮಾತ್ಮ ರೂಪಮ
ನಿತ್ಯಸುಖಂ ಮೋಹರೂಪವೆಂಬ ವಿವೇಕಂ ॥
ಸತ್ಯ ಸ್ವರೂಪಮುದಱೊಳ
ಗತ್ಯಂತಾನುಭವ ವಿಭವಮಕ್ಕೆಮುಗರುಹಾ ॥ ೪೭ ॥

ಎಂದು ದರ್ಶನಸ್ತುತಿಗೆಯ್ದು ಜಿನಮುಖ ದರ್ಶನದಿಂ ಹರ್ಷಚಿತ್ತರಾಗಿ ಚೈತ್ಯಾಲಯದ ಪಟ್ಟಶಾಲೆಯ ಮುಂದಣ ಪರಿಸೂತ್ರದ ಸುತ್ತಣ ಸರೋವರಂಗಳೊಳಲರ್ದ ತಾವರೆಯ ತನಿಗಂಪಂ ತಟ್ಟಿಸಿ ತೀಡುವ ತಣ್ಗಾಳಿಯ ಸೋಂಕಿಂ ಗಮನ ಪರಿಶ್ರಮಮನಾಱಿಸುತಿರ್ಪುದುಮಾಗಳಲ್ಲಿಗೆ ವಜ್ರಕರ್ಣನಟ್ಟಿದ ಬಲ್ಮಾನಸರ್ ಬೋನಮಂ ತಂದು ವಿನತರಾಗಿ ಮಾರ್ಬಲಂಬಳಸಿ ಬಿಟ್ಟಿರ್ದ ದೂಸಱಿಂದೆಮ್ಮರಸಂ ವಜ್ರಕರ್ಣಂ ತಾಂ ಬರಲುಂ ನಿಮ್ಮಂ ಬರಿಸಲುಮಱಿಯದೆಮ್ಮನಟ್ಟಿದನೆಂದು ಬಿನ್ನವಿಸಿ ಮಣಿಮಯ ಭಾಜನದೊಳರ್ಘ್ಯಪಾದ್ಯಮಂ ಕೊಟ್ಟಭ್ಯಾಗತ ಪ್ರತಿಪತ್ತಿಗೆಯ್ವುದುಮವರಭ್ಯವಹೃತಿಯಂ ನಿರ್ವರ್ತಿಸಿ ಕೈಘಟ್ಟಿಯುಮಂ ತಾಂಬೂಲಮಂ

ಕೊಂಡು ಬಂದ ಮಾನಸರಂ ವಿಸರ್ಜಿಸಿದನಂತರಂ ದಾಶರಥಿ ಸೌಮಿತ್ರಿಯ ಮೊಗಮಂ ನೋಡಿ—

ಮ॥ಸ್ರ॥ಅನಿಮಿತ್ತಂ ವಜ್ರಕರ್ಣಂ ನಮಗೆ ವಿನಯಮಂ ಮಾಡಿದಂ ಮಾನ್ಯನಾತಂ।
ಗನುದಾತ್ತಂ ಮತ್ತಚಿತ್ತಂ ಮುಳಿದು ಬಳಸಿ ಸಿಂಹೋದರಂ ಕಾದಲೆಂದಿ॥
ರ್ದನದಂ ನೀಂ ಬಾರಿಸೆಂಬೀ ನುಡಿ ಕಿವಿವುಗೆ ಸೌಮಿತ್ರಿ ದಿವ್ಯಾಸ್ತ್ರ ಬಾಣಾ।
ಸನಮಂ ಕೈವಾರ್ದನಿಲ್ಲಂತಕನ ಬೆಸದೆ ಕಾಳಾಹಿ ಬರ್ಪಂತೆ ಬಂದಂ॥ ೪೮॥

ಅಂತು ಬಂದರಮನೆಯ ಬಾಗಿಲೊಳ್ ನಿಂದು ಪಡಿಯಱನೊಡನೆ ಸಿಂಹೋದರನ ಸಭೆಯನಭಯಂಪೊಕ್ಕು—

ಕಂ॥ ಎಱಗುವುದಂತಿರ್ಕೆಮು ಕಾ
ಯ್ದೆಱಗುವ ಸಿಡಿಲಂತೆ ಘನ ರವಂ ಕೈಮಿಗೆ ನಾ॥
ಡೆಱೆಯಂ ಭರತಂ ಬೆಸಸಿದ
ತೆಱನಂ ಕೇಳೆಂದು ಪೀತವಸನಂ ನುಡಿದಂ ॥ ೪೯ ॥

ಜಿನಪತಿಗಲ್ಲದೆ ಪೊಡೆವಡೆ
ನೆನೆ ದೋಷಿಯೆ ವಜ್ರಕರ್ಣನುಱುವುದು ಮುಳಿಸಂ॥
ವಿನಮದಮರೇಂದ್ರನೆನಿಸಿದ
ಜಿನೇಂದ್ರನೊಳ್ ನಿನಗೆ ಗಂಡ ಮಚ್ಚರಮುಂಟೇ ॥ ೫೦ ॥

ಅವ್ರತಿಕಂಗೆಱಗದ ವೀ
ರ ವ್ರತಮಂ ಕೇಳ್ದು ಹರ್ಷಮಂ ತಾಳ್ದದ ನಿ॥
ನ್ನಬ್ರಹ್ಮಣ್ಯಂ ವರ್ಯಜ
ನ ವ್ರೀಡಾಕರಮದಂ ವಿಚಾರಿಸವೇಡಾ ॥ ೫೧ ॥

[1]ಸುತ್ತುಱುವುದು ಮನ್ನಿಸೆ ಭೂ।
ಪೋತ್ತಮನಾಜ್ಞೆಯನವಜ್ಞೆಗೆಯ್ಯೆ ಕೊಡೆ ನೆಱಲ್॥
ನೆತ್ತಿಗೆ ಗೆಂಟಕ್ಕುಮಿದಂ
ಮತ್ತೆನಿಸದಿರುಚಿತಮಲ್ತು ಗುಣವಿದ್ವೇಷಂ ॥ ೫೨ ॥

ಎನೆ ಸಿಂಹೋದರಂ ಘನರವಕ್ಕೆ ಸಿಡಿಲ್ದ ಸಿಂಹದಂತೆ ಮುನಿದು—

---

1. ಸುತ್ತಱುವುದು. ಕ. ಖ. ಗ. ಚ.

ಕಂ ॥ ಶ್ರೀಯಮನೆನಗಱಿಪಲುಪಾ
ಧ್ಯಾಯನೆ ತನಗಱಿಯನಱಿವನಪ್ಪೊಡೆ ಭರತಂ ॥
ಜ್ಯಾಯಸ ರಾಜ್ಯಮನಯ್ಯ ಕ
ನೀಯಂ ಕೈಕೊಂಡ ತೆಱಂದು ತನಗಾವುಚಿತಂ ॥ ೫೩ ॥

ಅಣ್ಣನ ಮಾತಂ ಮನ್ನಿಸಿ
ಕಣ್ಣಱಿದೋಸರಿಸಿದಂ ಜನಾರ್ದನನಿದಿರೊಳ್ ॥
ತಣ್ಣನೆ ಹರಿಪೀಠದೊಳಿ
ರ್ಪಣ್ಣನೆ ತಾಂ ತನ್ನ ಬೀರಮೆನ್ನಱಿಯದುದೇ ॥ ॥ ೫೪ ॥

ಎನ್ನಾಳೆನಗೆಜಗದೊಡವ
ನನ್ನಿಯಮಿಸುವೆಡೆಗೆ ತಾನುಮೆನಗರಸನೆ ಬಂ ॥
ದೆನ್ನಂ ನಿಯಮಿಸುಗೆಮ ತ
ನ್ನೆನ್ನಳವಂ ಸಮರ ಮುಖದೊಳಱಿಯಲ್ಬರ್ಕುಂ ॥ ೫೫ ॥

ಎನೆ ಲಕ್ಷ್ಮಣಂ ಮಂದಸ್ಮಿತ ಮುಖಾರವಿಂದನಾಗಿ—

ಕಂ ॥ ಅಧಿರಾಜಂಬರೆಗಂ ಕದ
ನ ಧುರೀಣಂ ಗಂಡನಾವನೆನೆ ಮುನಿದು ಘನ ॥
ಪ್ರಧನ ರತಂ ಸಿಂಹೋದರ
ನಧೋಕ್ಷಜಂಗೊರೆಯಿನುರ್ಚಿದಂ ಕೂರಸಿಯಂ ॥ ೫೬ ॥

ಆಗಳದಂ ಕಂಡು ಕಡುಮುಳಿದು—

ಕಂ ॥ ಕಡಿತಲೆಯಂ ತೂಗುತ್ತುಂ
ಕಡಿತಲೆಕಾಱರ್ ಕಡಂಗಿ ಬರೆ ಬಱುಗಯ್ಯೊಳ್ ॥
ತುಡುಕಿ ಪಿಡಿದೆತ್ತಿ ಮುಸಕದಿ
ನೆಡೆಯುಡುಗದೆ ಸಿಬೆಯೊಳಸಗವೊಯ್ಲಂ ಪೊಯ್ಪಂ ॥ ೫೭ ॥

ಉ ॥ ಒರ್ವರಿನೊರ್ವರಂ ಮುಱಿಯೆ ಮೋದಿದನೊರ್ವರಿನೊರ್ವರಂ ಭುಜಾ ।
ಗರ್ವದಿನೋವದಿಟ್ಟನಱಿಯಟ್ಟೆ ಸಿಡಿಲ್ಪೊಡೆವಂತೆ ಪೊಯ್ದನೋ ॥
ರೊರ್ವರಿನೊರ್ವರೊರ್ವರನಗುರ್ವಿಸಿ ಸೌಳನೆ ಸೀಳ್ದನಿಂತಿದೇಂ ।
ಮಾರ್ವಲಮಂ ಪಡಲ್ವಡಿಪಳುರ್ಕೆಗೆ ನಿರ್ದಯನೋ ಜನಾರ್ದನಂ ॥ ೫೮ ॥

ಅದಂ ಕಂಡು ಸಿಂಹೋದರಂ ಸಿಗ್ಗಾಗಿ ಸಿಂಹದಂತೆ ಮೇಲ್ವಾಯ್ವುದುಂ—

ಕಂ ॥ ಬಾಳಂ ಬಂಚಿಸಿ ಪಿಡಿದಂ
ಬಾಳಕನಂ ಪಿಡಿವ ಮಾಟಿಕ್ಕೆಯಿಂದವನಂ ಬಿ ॥
ಲ್ಲಾಳನೆಟಿದುಯ್ವನಾವಂ
ಕಾಳೆಗದೊಳ್ ಲಕ್ಷ್ಮಣಂಗೆ ಕೂರ್ಪಂ ತೋರ್ಪಂ ॥ ೫೯ ॥

ಆಗಳಾ ಕಳಕಳಕ್ಕೆ ಮುನ್ನೀರೆ ಮೇಜಿದಪ್ಪಿದಂತೆ ಬೆಂದಗುಳ್ದು ಬರ್ಪ ಮಾರ್ಪಡೆಗೆ ಕಡೆಗಾಲದ ಕೃತಾಂತನಂತೆ ಪೆಡಂಮಗುಟ್ಟು—

ಕಂ ॥ ಕೂರಾಳಿಂ ಕೂರಾಳಂ
ತೇರಿಂ ತೇರಂ ಕಡಂಗಿ ಹಯದಿಂ ಹಯಮಂ ॥
ವಾರಣದಿಂ ವಾರಣಮಂ
ನಾರಾಯಣನಿಟ್ಟು ತವಿಸಿದಂ ಮಾರ್ಬಲಮಂ ॥ ೬೦ ॥

ಉ ॥ ಏನುಜಿದಾಂಪುದುಂ ಜವನವೋಲ್ ತವೆ ಕೊಂದನೊ ವೈರಿ ಸೇನೆಯಂ ।
ಮಾನವನಂದಮಲ್ಲಮಿದು ದಾನವನಂದಮೆನಲ್ ಬೃಹದ್ಬಲಂ ॥
ಮಾನವರಿಂ ಹಯ ಪ್ರಕರಮಂ ಹಯದಿಂ ರಥಮಂ ರಥಂಗಳಿಂ ।
ದಾನೆಯನಿಟ್ಟು ಕೈಗೆ ದೊರೆಕೊಂಡುದೆ ಕೈದುವೆನಲ್ ಜನಾರ್ದನಂ ॥ ೬೧ ॥

ಅಂತಗುರ್ವುಮದ್ಭುತಮುಮಾಗೆ ಕಾದಿ—

ಮ ॥ ಚಕಿತಾರಾತಿ ಚತುರ್ಬಲಂ ಬಲಯುತಂ ದೋಸ್ತಂಭದೊಳ್ ಸಾಲಭಂ ।
ಜಿಕೆವೋಲ್ ರಂಜಿಸೆ ವೀರಲಕ್ಷ್ಮಿ ರಘುವೀರಂ ಲಕ್ಷ್ಮಣಂ ರಾಷ್ಟ್ರ ಕಂ ॥
ಟಕನಂ ಬಾಟ್ಟಲೆಗೊಂಡನುಯ್ವನಿಭಮಂ ಪಂಚಾನನಂ ಹಸ್ತಿ ಮ ।
ಸ್ತಕ ಮಸ್ತಿಷ್ಕ ರಸಾನುರಕ್ತ ರಸನಂ ಮಾರ್ಕೊಂಡು ಕೊಂಡುಯ್ವವೋಲ್ ॥

ಆ ಸಮಯದೊಳ್ ಪರಿಜನಂಬೆರಸು ಕರುಮಾಡದೆರಡನೆಯ ನೆಲೆಯೊಳಿರ್ದು ವಜ್ರಕರ್ಣಂ ಕರ್ಣಾಂತ ವಿಶ್ರಾಂತ ವಿಸ್ಫಾರಿತ ವಿಲೋಚನನಿದೇನೆಂದು ನೋಡುತ್ತುಮಿರೆ—

ಮ॥ಸ್ರ॥ಗಣನಾತೀತಾನ್ಯ ಸೇನಾಂಗಮನನಿತುಮನೇಕಾಂಗದೊಳ್ ಶೂನ್ಯ ಹಸ್ತಂ ।
ರಣದೊಳ್ ಸೀಳ್ದೊಟ್ಟಿ ಸಿಂಹೋದರನನುಜದೆ ಕೊಂಡುಯ್ದನುದ್ದಂಡನೀತಂ॥
ಗೆಣೆಯಾವಂ ಗಂಡನೆಂದಾ ಪುರಜನವನಿತುಂ [1]ವಿಸ್ಫುರತ್ಪಕ್ಷ್ಮ ವಿಕ್ಷೇ ।
ಪಣಮೆಯ್ತಂದೀಕ್ಷಿಸಿತ್ತುತ್ಸುಕ ಸರಭಸ ಯಾನಂ ಗತಾನ್ಯಾವಧಾನಂ॥ ೬೨ ॥

---

1. ವಿಸ್ಮಯಾಕ್ರಾನ್ತ ವಿಕ್ಷೇಪಣ. ಕ. ಖ. ಗ; ವಿಸ್ಮಯತ್ಪಕ್ಷ್ಮ ವಿಕ್ಷೇಪಣ. ಘ.

ಆ ಸಮಯದೊಳ್—

ಕಂ ॥ ಅವಿರಳ ಗಳದಶ್ರು ಜಲ
ಪ್ಲವ ಧೌತ ಕಪೋಲತಳಮವಂತೀಶ್ವರನಂ ॥
ತವುರಂ ಪರಿಪಾಳಿಪುದೆ
ಮ್ಮವತಂಸಮನೆಂದು ಬಂದು ಕಾಲ್ಗೆಱಗುವುದುಂ ॥ ೬೪ ॥

ಮ ॥ ಮಲೆತಿರ್ದಂ ಗಡ ವಜ್ರಕರ್ಣನೊಳದಂ ನೀಂ ಮಾಣಿಸೆಂದಟ್ಟಿದಂ ।
ಕೊಲಲೆಂದಟ್ಟಿದನಿಲ್ಲ ರಾಮನಧಿರಾಜಂ ಚಿಂತೆ ಬೇಡಂತಱಿಂ ॥
ದೆಲೆ ಸಿಂಹೋದರ ಮಾನಿನೀಜನಮೆ ಶೋಕೋದ್ರೇಕಮಂ ಮಾಣಿಮಂ ।
ಜಲಿಮೆಂದಂ ಘನ ದುಂದುಭಿ ಧ್ವನಿಗಳೊಂದಾದಂತೆ ಲಕ್ಷ್ಮೀಧರಂ ॥ ೬೫ ॥

ಅಂತವರ ಮನದ ಶಂಕಾ ಕಳಂಕಮಂ ಕಳೆದು ಸಿಂಹೋದರನನೆೞೆದುಯ್ವುದುಮವನಿವರ್ ಬಲಾಚ್ಯುತರೆಂದಱಿದು—

ಚ ॥ ಅತಿಬಲನಪ್ಪ ಲಕ್ಷ್ಮಣ ಕುಮಾರನ ವೀರರಸ ಪ್ರವಾಹಿಸೀ ।
ಪತಿತ ಮಹಾ ಮಹೀರುಹಮೆನಲ್ ನತನಾದನವಂತಿ ವಲ್ಲಭಂ ॥
ಹತ ಸುಮನೋವಿಳಾಸನಪಸಾರಿತ ಮೂಲಬಲಂ ನಿರಸ್ತ ವಿ ।
ಸ್ಮೃತ ನಯನಸ್ತಸಾರನವಿಚಾರನಿಳೇಶ್ವರ ಪಾದ ಪಾರ್ಶ್ವದೊಳ್ ॥ ೬೬ ॥

ಆಗಳುದಾತ್ತ ರಾಘವಂ—

ಚ ॥ ಮನದೊಳೆ ಮೆಚ್ಚಿ ಲಕ್ಷ್ಮಣನ ದೋರ್ವಲ ಗರ್ವಮನಾನತಂಗೆ [1]ಸ ।
ಮ್ಮನದೊಳೆ ಭೀತಿಯಂ ಕಳೆದು ವಿಗ್ರಹದಾಗ್ರಹಮಿರ್ಕೆ ವಜ್ರಕ ॥
ರ್ಣನೊಳನುಬಂಧಮಂ ಮಗುೞೆ ಮಾೞ್ಪುದು ನೀನೆನೆ ಜಾನಕೀ ಪ್ರಿಯಂ ।
ವಿನಮಿತ ಮಸ್ತಕಂ ಮುಗಿದ ಕೈವೆರಸೆಂದನವಂತಿ ವಲ್ಲಭಂ ॥ ೬೭ ॥

ಉ ॥ ದೇವರ ಸಮ್ಮವಾವುಗೆಗಳಂ ಪಿಡಿದೆಂಬುದನಿಂಬುಕೆಯ್ವ ಸ ।
ದ್ಭಾವಮೆ ಸಾಲ್ಗುಮೊಲ್ಲೆನುೞಿದೇನುಮನೀ ಬೆಸನಂ ನರೇಂದ್ರ ನೀ ॥
ನೀವುದುಪೇಕ್ಷೆಗೆಯ್ವುದುಮುಪೇಕ್ಷಿಸುವೆಂ ಫಲ ಮೂಲ ವಲ್ಕಲ ।
ಪ್ರಾವರಣಾದ್ರಿ ಕುಂಜ ವನ ವಾಸ ಪವಿತ್ರ ತಪಶ್ಚರಿತ್ರಮಂ ॥ ೬೮ ॥

ಎಂದು ಬಿನ್ನವಿಸುತ್ತಿರ್ಪುದುಮಿತ್ತಲ್—

---

1. ಸನ್ಮಸ. ಚ.

ಕಂ ॥ ಬಱುಗಯ್ಯೊಳೊಂದೆ ಮೆಯ್ಯೊಳ್
ಮಱುವಕ್ಕಮನಿಕ್ಕಿ ಗೆಲ್ದು ಸಿಂಹೋದರನಂ ॥
ಸೆಱೆಗೊಂಡುಯ್ದಂ ಕೃಷ್ಣಂ
ಪೆಱಂಗೆ ಪೇೞ್ ಬಾಹುವೀರ್ಯವಿನಿತಾದಪುದೇ ॥ ೬೯ ॥

ಎಂದು ಮನದೊಳೆ ನಿಶ್ಚೈಸಿ ಪರಿವೃತ ಕತಿಪಯ ಪರಿಜನಂ ವಜ್ರಕರ್ಣಂ ವಜ್ರಕುಂಡಲ ಮರೀಚಿ ಪಗಲ ಸಿರಿಗೆ ಕಣ್ಬೆಱವಿಮಾಡೆ ದೂರೋತ್ಸಾರಿತ ವಿಚಿತ್ರಾತಪತ್ರ ವಿವಿಧ ವಾಹನಂ ಬಸದಿಯಂ ಬಲಗೊಂಡು ದರ್ಶನಸ್ತುತಿಗೆಯ್ದತಿಸಂಭ್ರಮದಿಂ ಬಂದು ಮಣಿಮಕುಟ ಮಯೂಖ ಲೇಖೆ ಪಸರಿಸೆ ದೀಪವರ್ತಿ ನಿಧಿಗೆಱಗುವಂತೆಱಗುವುದುಂ—

ಮ ॥ ಬಲವದ್ವೈರಿಗಳಲ್ಲಿ ಮುನ್ನೆೞೆದುಕೊಂಡಂತಿರ್ದುವಂ ರಾಮ ಕೋ ।
ಮಲ ಪಾದ ದ್ವಿತಯಂ ನತಂಗೆ ಪಡೆದತ್ತತ್ಯುನ್ನತಾಂಗುಷ್ಠದಿಂ ॥
ಬೆಳಗುತ್ತಿರ್ಪ ನಖಂಗಳಿಂ ತಳದ ಕೆಂಪಿಂ ವಜ್ರಕರ್ಣಂಗೆ ನಿ ।
ಶ್ಚಲಮಪ್ಪಂತಿರೆ ಬೇಗಮುನ್ನತಿಯನುದ್ಯತ್ತೇಜಮಂ ರಾಗಮಂ ॥ ೭೦ ॥

ಕೊಟ್ಟುದು ರಾಗಮಂ ತಳಮುದಂಶುಗಳಿಂ ನಖಪಙ್ಕ್ತಿ ಪಟ್ಟಮಂ ।
ಕಟ್ಟಿದುದುನ್ನತಾಂಗುಲಿ ಸಮುನ್ನತಿಯಿಂ ಚರಣಾನತಂಗೆ ಮುಂ ॥
ದಿಟ್ಟುದು ವಜ್ರಕರ್ಣ ವಸುಧಾ ರಮಣೀ ರಮಣಂಗೆ ತೊಟ್ಟಿನಲ್ ।
ಪುಟ್ಟಿಸಿದತ್ತು ಮೆಯ್ಯನಿರ್ಗಳಂ ರಘುವೀರ ವಚಸ್ಸುಧಾರಸಂ ॥ ೭೧ ॥

ಅನಂತರಂ—

ಕಂ ॥ ಎಱಗದೊಡೆ ನೀಚ ವೃತ್ತಿಯ
ನೆಱಗಿದೊಡುನ್ನತಿಯನೀವ ವಿಪರೀತ ಗುಣ ॥
ಕ್ಕೆಱೆವೆಟ್ಟೆನಿಸಿದುಪೇಂದ್ರಂ
ಗೆಱಗಿದನಾದರದೆ ವಜ್ರಕರ್ಣನರೇಂದ್ರಂ ॥ ೭೨ ॥

ಅಂತು ವಿನತನಾಗಿ—

ಕಂ ॥ ಮನಮಂ ಕಾರುಣ್ಯ ರಸಂ
ತನುವಂ ರಾಘವನ ದೇಹರುಚಿ ಪುದಿಯೆ ಸುಧಾ ॥
ವನನಿಧಿಯೊಳ್ ಮುಳುಗಿದವೋ
ಲನುರಕ್ತಂ ಮುಂದೆ ಮುಗಿದ ಕೈವೆರಸಿರ್ದಂ ॥ ೭೩ ॥

ಅಂತು ಸಮುಚಿತ ಪ್ರದೇಶದೊಳಿರ್ಪುದುಮಾ ಸಮಯದೊಳ್—

ಕಂ॥ ಭಂಗಿ ಮನಸಿಜನ ಗಾಡಿಗೆ
ಭಂಗಮನೊಡರಿಸೆ ಕಿರೀಟ ಕಿರಣಂ ನಭಮಂ ॥
ರಂಗಿಸೆ ಕಿಱಿದಾನುಂ ಚತು
ರಂಗ ಬಲಂ ಬೆರಸು ವಿದ್ಯುದಂಗಂ ಬಂದಂ ॥ ೭೪ ॥

ಅಂತು ಬಂದು—

ಕಂ ॥ ಶ್ರೀಮುಖ ದರ್ಶನಮೊಡರಿಸೆ
ರೋಮಾಂಚಮನೆಱಗಿ ವಿದ್ಯುದಂಗಂ ಮುನ್ನಂ ॥
ಕಾಮಧ್ವಂಸಿಗೆ ಬೞಿಯಂ
ರಾಮಂಗಂ ಲಕ್ಷ್ಮಣಂಗಮಾನತನಾದಂ ॥ ೭೫ ॥

ಅಂತಾನತನಾಗಿ ವಜ್ರಕರ್ಣನ ಕೆಲದೊಳ್ ಕುಳ್ಳಿರ್ಪುದುಂ ಲಕ್ಷ್ಮಣಕುಮಾರ ನೀತನಾರ್ಗೆನೆ ವಿದ್ಯುದಂಗನೆಂಬಂ ಕುಂಡಳಪುರದ ಪರದನುಜ್ಜಯಿನಿಗೆ ಪರದುವೋಗಿ ಕಾಮಲತೆವೆಸರ ಪೆಂಡವಾಸದ ವಿಲಾಸಿನಿಗೆ ವಲ್ಲಭನಾಗಿರ್ದಾಕೆಯತ್ತಣಿಂ ಸಿಂಹೋದರನೆನಗೆ ರತ್ನತ್ರಯಾರಾಧಕಂಗಲ್ಲದೆ ಪೆಱರ್ಗೆಱಗೆನೆಂದುದರ್ಕೆ ಕಡುಮುಳಿದು ಕೊಲಲೆಂದು ಬಂದು ಬೞಿಯಟ್ಟಿದುದಂ ಕೇಳ್ದದುವೆ ಪೊೞ್ತಾಗೆ ದಶಪುರಕ್ಕೆ ಬರುತುಮಿದಿರೊಳೆನ್ನಂ ಕಂಡೆನಗೀವೃತ್ತಾಂತಮಂ ಪೇೞ್ದು ಪೋಗಲೀಯದೆ ಮಗುೞೆ ಬಂದು ನಿನ್ನಾದುದನಪ್ಪೆನೆಂದು ಕದನ ಸಹಾಯನಾಗಿರ್ದನಕಾರಣ ಬಂಧುವೀತನೆಂದು ಬಿನ್ನವಿಸೆ ತದನಂತರಂ ವಜ್ರಕರ್ಣನ ಮೊಗಮಂ ನೋಡಿ ರಾಮದೇವಂ ನಿಜವ್ರತ ಪರಿಪಾಲನ ಪರಿಣಾಮಕ್ಕೆ ಮೆಚ್ಚಿದೆಂ, ಮೆಚ್ಚಿದುದಂ ಬೇಡಿಕೊಳ್ಳೆನೆ ಮಹಾಪ್ರಸಾದಮೆಂದಿಂತೆಂದಂ—

ಕಂ ॥ ಪ್ರಾಣೋಪಕಾರಮಂ ಕ
ಲ್ಯಾಣಮನೆನಗಿತ್ತು ದೇವ ತಣಿಯದ ನಿಮ್ಮಾ ॥
ತ್ರಾಣ ಪ್ರವೀಣ [1]ಪರಮ
ಪ್ರಾಣಿ ಹಿತಾಚರಣವಿತರ ಸಾಧಾರಣಮೇ ॥ ೭೬ ॥

ಅಣುವಿಂ ಕಿಱಿದಾದುದು ಧಾ
ರಿಣಿ ದೇವರ ಬಗೆಗೆ ದೇವ ನಿಜ ಸತ್ವಗುಣಂ ॥
ಫಣಿಪತಿಗಮರಿದು ಮನುಜಂ
ಗಣನಾರ್ಹನೆ ಪೊಗೞಲೊಂದೆ ನಾಲಗೆಯ ಜಡಂ ॥ ೭೭ ॥

---

1. ಧರ್ಮ. ಚ.

ಕಂ ॥ ದೇವರ ಬರವೆನಗಾದುದು
ದೇವರ ಬರವೆನ್ನಸಯ್ಪಿನಿಂ ದೇವ ಭವ ॥
ತ್ಸೇವೆ ದೊರೆಕೊಂಡುದೆನಗಿ
ನ್ನಾವುದುಮರಿದುಂಟೆ ಬೇಡಿ ಪಡೆವನಿತುವರಂ ॥ ೭೮ ॥

ಅದಱಿಂ ದೇವ ಸಿಂಹೋದರಂಗೆ ಕಾರುಣ್ಯಂಗೆಯ್ವುದೆಂದು ಬಿನ್ನವಿಸೆ ಲಕ್ಷ್ಮೀ ಧರನದರ್ಕೆ ಮೆಚ್ಚಿ—

ಚ ॥ ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ ತೇಯೆ ಚಂದನಂ ।
ಕುಡದೆ ಸುಗಂಧಮಂ ಪಿಟಿಯೆ ಕರ್ಬಿನಿದಾಗದೆ ಕಾಸೆ ಕಾಂಚನಂ ॥
ಪಡೆಯದೆ ಕಾಂತಿಯಂ ನಿಜದಿನೊಳ್ಳಿದರಪ್ಪವರೆಂತು ಬಾಧೆವ ।
ಟ್ಟೊಡಮುಪಕಾರಮಂ ಪೆಱರ್ಗೆ ಮಾಡದೆ ಬಾಧೆಯನೇಕೆ ಮಾಡುವರ್ ॥೭೯॥

ಕಂ ॥ [1]ಇಱಿಯಲ್ಕೆ ಬಗೆದು ಸಿಂಹೋ
ದರನಿರಿಯುಂ ವಜ್ರಕರ್ಣನೊಳ್ಪನೆ ಬಗೆದಂ ॥
ಪರಪೀಡಾ ಕರಣದೊಳೇಂ
ಪರೋಪಕಾರ ಪ್ರಿಯಂಗೆ ಬಗೆ ಬಂದಪುದೇ ॥ ೮೦ ॥

ಎಂದು ನುಡಿದನಂತರಂ ದಾಮೋದರಂ ಸಿಂಹೋದರಂಗಂ ವಜ್ರಕರ್ಣಂಗಂ ಪರಸ್ಪರ ಕರಗ್ರಹಣದಿಂ ಮನದ ಕಲುಷಮಂ ಕಳೆದು, ನಾಡುಮಂ ಬೀಡುಮಂ ಪಚ್ಚುಕೊಟ್ಟು—

ಕಂ ॥ ನುಡಿ ಕಿತ್ತಡವೆನಿಸದೆ ನೇ
ರ್ಪಡುಗಿಡದೆ ನರೇಂದ್ರನಾಜ್ಞೆಯಿಂದಿರ್ಪುದಿದಂ ॥
ಕಡೆಗಣಿಸೆ ಬಱಿಕ್ಕಣ್ಣನ
ಸುಡುವ ಶಿಲೀಮುಖದೊಳುಂಟೆ ಮುಖದಾಕ್ಷಿಣ್ಯಂ ॥ ೮೧ ॥

ಎಂದು ನಿಯಮಿಸುವುದುಂ ವಜ್ರಕರ್ಣಂ ಪರಿಪೂರ್ಣ ಮನೋರಥಂ ದಾಶರಥಿಯಂ ದೇವರೆನ್ನಮನೆಗೆ ಬಿಜಯಂಗೆಯ್ವುದೆಂದುಯ್ವ ಸಮಯದೊಳ್—

ಕಂ ॥ ತುಱುಗಿದುವು ತೋರಣಂ ಕೈ
ನಿಱಿದುವು ಗುಡಿ ಕಿವುಡುವೀಳ್ವಿನಂ ದಿಕ್ಕರಿಗಳ್ ॥
ಪಱೆ ಮೊಳಗಿದುವುನ್ನತಿ ಕ
ಣ್ದೆಱೆದಂತೆವೊಲಾದುದುತ್ಸವಂ ದಶಪುರದೊಳ್ ॥ ೮೨ ॥

1. "ಅರಿಯಲ್ಕೆ" ಎಂದಿದ್ದಲ್ಲಿ ಪ್ರಾಸವಿರೋಧವಾಗುತ್ತಿರಲಿಲ್ಲ.

ಆ ಸಮಯದೊಳ್ ಸುಟ್ಟೆ ತೋಱಿ—

ಮ॥ ಸ್ರ॥ ವನಿತಾರತ್ನಂ ದಲಾ ಕೋಮಲೆ ಜನಕಜೆ ರಾಮಂ ದಲಾ ಬರ್ಪ ನೀಹಾ।
ರ ನಗೇಂದ್ರ ಪ್ರಾಂಶು ಸಿಂಹೋದರ ಕದನ ಮದೋದ್ರೇಕ ರೌದ್ರ ಗ್ರಹೋಚ್ಚಾ॥
ಟನ ಮುದ್ರಾ ಮಾಂತ್ರಿಕಂ ಲಕ್ಷ್ಮಣನೆ ದಲೆನುತುಂ ಬೇಗಮೆಯ್ತಂದು ಪೌರಾಂ।
ಗನೆಯರ್ ಕಣ್ಣಾರ್ವಿನಂ ನೋಡಿದರಲರ್ಗಣೆಯಂ ತಾಗೆ ನೇತ್ರತ್ರಿಭಾಗಂ॥೮೩॥

ಅಂತು ಪೌರಜನದ ಮನದೊಡನೆ ಪುರಮನರಮನೆಯುಮಂ ಪೊಕ್ಕು ಮಣಿಮಯಮಂಟಪದೊಳಿಕ್ಕಿದ ಮಣಿಮಯಾಸನಮನಲಂಕರಿಸಿ ರಾಮಲಕ್ಷ್ಮಣರಿರ್ಪುದುಮಭಿಜನ ಸನಾಭಿಜನ ಸಹಿತನಾನತನನರ್ಘ್ಯ ಮಣಿಭಾಜನದೊಳರ್ಘ್ಯ ಪಾದ್ಯಮಂ ಕೊಟ್ಟು ಸಿಂಹೋದರನುಮನೊಡನೆಯರಸುಮಕ್ಕಳುಮಂ ವಿಚಿತ್ರ ವಸ್ತ್ರಾಭರಣಂಗಳಿಂದಮರ್ಚಿಸಿ ಮಜ್ಜನ ಭೋಜನಾದಿ ಸತ್ಕಾರಮನಂದಿನ ದಿನದೊಳ್ ಮೆಱೆದು ಮಱುದೆವಸಂ ಶುಭಮುಹೂರ್ತದೊಳ್—

ಕಂ॥ ತನ್ನ ತನುಜೆಯರನೆಣ್ಬ
ರ್ಕನ್ನೆಯರಂ ವಜ್ರಕರ್ಣನುಱೆದರನಿತ್ತರ್॥
ಚೆನ್ನೆಯರನವನಿಪಾಲ
ರ್ಮೂನ್ನೂರ್ವರನಲ್ಲಿ ಮದುವೆನಿಂದನುಪೇಂದ್ರಂ ॥ ೮೪ ॥

ಅಂತು ದಶಪುರದೊಳ್ ಸಿಂಹೋದರನನುಜ್ಜೆಣಿಗೆ ಬೀಱಿಕ್ಕೊಳಿಸಿ ಕೆಲವು ದಿವಸಮಿರ್ಪಿನಂ—

ಉ॥ ನೀರಸವಾಗೆ ಬಳ್ಳಿ ಗಿಡು ಪೆರ್ಮರಗಳ್ ಕರಯಂತ್ರ ನಾಳದಿಂ।
ಭೂ ರಸಮೆಲ್ಲಮಂ ತೆಗೆಯೆ ಭಾನು ದವಾನಲ ಧೂಮ ಧೂಸರಂ॥
ಕಾರಿರುಳಂತೆ ಕಟ್ಟಿಗೆ ದೆಸೆ ಬಂದುದು ಬೇಸಗೆಗಾಲಮುಸ್ತ ಕಾ।
ಸಾರಕ ಸಾರಮಸ್ತಮಿತ ಮಾರುತನುದ್ಗತ ಚೀರಿಕಾ ರುತಂ ॥ ೮೫ ॥

ಕಂ॥ ಕರೆದುವು ಸೀರುಡುಗಳ್ ಪೆ
ರ್ಮರಂಗಳೆಲೆಯಿಕ್ಕಿ ಕಟಲೆ ಬಿಟ್ಟುವು ತೊಱೆಗಳ್॥
ಪರಿಗೆಟ್ಟುವು ಬೆಳ್ವಯಲೊಳ್
ಸರಳಿಸಿದುವು ಮರುಮರೀಚಿಕಾ ವಾಹಂಗಳ್ ॥ ೮೬ ॥

ಸಾರಂ ಕಿಡೆ ಪಾರ್ಥಿವ ಪರಿ
ವಾರಂ ದೆಸೆಗೆಟ್ಟುಪೋಪವೋಲ್ ಪೋದುವು ನಿ॥

ಸ್ಸಾರ ಸರೋಜಾಕರದಿ-
ಸಾರಸ ಕಲಹಂಸ ಚಕ್ರವಾಕ ಕುಟುಂಬಂ ॥ ೮೭ ॥

ಕಂ ॥ ಪರಿವಾರಮೆನಿಪ ಬಹು ಜಲ
ಚರ ಮರಣದಿನಾದ ಖೇದದಿಂದೆರ್ದೆಯೊಡೆದಂ ॥
ತಿರೆ ಕೂಡೆ ಬೀಡೆವರಿದುವು
ನಿರಂತರೋತ್ತಪನ ತಾಪದಿಂ ಪೆರ್ಗೆಱೆಗಳ್ ॥ ೮೮ ॥

ಉರಿವರಿವ ಬಿಸಿಲ್ ಸುಡೆ ಸೀ
ಕರಿವೋದುವಿವೆನಿಸಿ ತುಂಬಿಯುಂ ಕೋಗಿಲೆಯುಂ ॥
ಮರಗಳೆಲೆವೞೆಗಳೊಳ್ ಮು
ಯ್ಗರೆದುವು ಪಡುನೇಸಱಪ್ಪಿನಂ ಬೇಸಗೆಯೊಳ್ ॥ ೮೯ ॥

ಮ॥ಸ್ರ॥ ಪಿಡಿದಿರ್ದಂ ನಲ್ಮೆಯಿಂದೀಕೆಯುಮೆನಗೆ ಕರಂ ಕೂರ್ಪಳೆಂಬೀ ವಿವೇಕಂ ।
ಕಿಡೆ ಜನ್ಮಾವಾಸಮುಂ ಪೀಡಿಸಿ ನಳಿನಿಗೆ ನಿಷ್ಕಾರಣಂ ಕಾಯ್ದು ನೋವಂ ॥
ಪಡೆದಂ ಚಂಡಪ್ರಭಂ ವಾರುಣಿಯನನುದಿನಂ ಸೇವಿಸುತ್ತಿರ್ದರಾಗ ।
ಕ್ಕೆಡೆಗೊಟ್ಟುನ್ಮಾರ್ಗದೊಳ್ ವರ್ತಿಸುವ ಕುವಲಯ ದ್ರೋಹನೇಗೆಯ್ದು
ತೋಱಂ ॥ ೯೦ ॥

ಪೃಥ್ವಿ॥ ವಿಕಾರಮಿನಿಸಿಲ್ಲೆನಲ್ ಮೆಱೆದು ಬಾಹ್ಯಸಾಮಗ್ರಿಯಿಂ ।
ದಕಾರ್ಯಪರನಾಗಿಯುಂ ಪರಮ ಯೋಗಿಯಿರ್ಪಂದದಿಂ ॥
ದಕಂಪಿತ ಶರೀರನಿರ್ದುದು ಜಲಾಶಯೋಪಾಂತದೊಳ್ ।
ಬಕಂ ದರ ನಿಮೀಲಿತಾಂಬಕನಶೇಷ ದೋಷಾಶಯಂ ॥ ೯೧ ॥

ಚ ॥ ಭುವನ ಜನ ಪ್ರಸನ್ನ ಕಮಲಾಕರ ನಿನ್ನ ಪರಾರ್ಥ ಜೀವನಂ ।
ತವುತರೆ ತೀವ್ರ ಕಾಲ ವಶದಿಂದಮೆ ನೀರಸಮಾಯ್ತು ನೀರಜಂ ॥
ಕುವಲಯಮುಪ್ಪುಕೆಯ್ದುದು ವಿಷಾದಮನಂಚೆಗೆ ಖೇದಮಾಯ್ತು ಪೋ ।
ದುವು ಪೊಣರ್ವಕ್ಕಿಗಳ್ ವಿಕಳಮಾದುವು ಮೀನ ಕುಳೀರ ಕೋಟಿಗಳ್ ॥

ಚ ॥ ಮೃಗ ಕುಲಮಾಸೆಗೆಯ್ದು ಮೃಗ ತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ ।
ಪಗಲಿಱುವನ್ನೆಗಂ ಪರಿದು ಗಂಟಲುರಂಬರಮಾಱೆ ಬೆಂದೊವಲ್ ॥
ತೆಗಳಿಗೆ ಬೀೞೆ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿ ।
ಟ್ಟಿಗಳೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿನಾರೊ ಬೇಯದರ್ ॥ ೯೩ ॥

ಚ ॥ ದಿನಕರ ತೀವ್ರ ತಾಪಮುರಿಯೆಣ್ಣೆವೊಲಳ್ವೆ ಶರೀರ ತಾಪದಿಂ ।
ವನರುಹ ಷಂಡಮಂ ತುರಿಪದಿಂದೊಳವೊಕ್ಕು ಕಡಂಗಿ ಕಿಱ್ತಿದಂ ॥
ಮುನಿಸಿನಳುರ್ಕೆಯಂ ಪಗೆಯ ನಂಟರೊಳಂ ಕಡುಕೆಯ್ದು ತೋರ್ಪವೋಲ್ ।
ವನಗಜವೊಟ್ಟೆಕೊಂಡುದು ಮೃಣಾಳಿಕೆಯಂ ನಿಜಮೂರ್ಧ ಪಿಂಡದೊಳ್ ॥

ಕಂ ॥ ತಪನಾತಪದಿಂ ಚೇಷ್ಟಾ
[1]ಕ್ಷಪಣೆಯನೊಳಕೊಂಡು ಕೋಳ್ಮಿಗಂ ಬೆಳ್ಮಿಗಮಾ ॥
ತ್ಮ ಪುರೋಭಾಗದೊಳಿರ್ದೊಡ
ಮುಪಶಮಿಸಿದುದೊಳ್ಪನೀಗುಮಾತಪ ಯೋಗಂ ॥ ೯೫ ॥

ಉದ ಬಿಂದುಗೆತ್ತು ಗಿರಿ ಸಾ
ನು ದೇಶದೊಳ್ ಕಾಯ್ದು ಬಿದಿರ ಪೊಸಮುತ್ತಂ ನುಂ ॥
ಗಿದ ಸೋಗೆವಿಂಡಣಂ ಮಱು
ಗಿದುವುಂಡಿಗೆ ಬೇಯೆ ಕೆಂಡಮಂ ನುಂಗಿದವೋಲ್ ॥ ೯೬ ॥

ಮ ॥ ರವಿಕಾಂತೋಪಲ ವಹ್ನಿಯಿಂದಡವಿಗಳ್ ಭಸ್ಮಾವಶೇಷಂಗಳಾ ।
ದುವರಲ್ವೋದುವು ಬೆಟ್ಟುಗಳ್ ನದನದೀ ದ್ರೋಣೀ ಜಲಂ ಕಾಸಿದೆ ॥
ಣ್ಣೆವೊಲುರ್ವೇಱ್ದುವು ಮೂಷೆಯಿಟ್ಟ ತೆಱದಿಂ ಗ್ರಾವಸ್ಥಲಂ ಲೋಹವಾ ।
ದುವು ರೇಣುಸ್ಥಲಿ ಕಾಱುವಿ ಟ್ಟುವು ನಿದಾಘ ದ್ರಾಘಿಮೋದ್ರೇಕದೊಳ್ ॥ ೯೭ ॥

ಬಹುತಾಪಕ್ಕೆ ಬಿಗುರ್ತು ವಿಷ್ಣುಪಡೆವಂ ಮತ್ಸ್ಯಾವತಾರಕ್ಕಿನಂ ।
ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ ದೇವರ್ಕಳಾಗ್ನೇಯಮೆಂ ॥
ದು ಹವಿರ್ಭಾಗಮನೊಲ್ಲದಿಂದುಕಲೆಯಂ ಕೊಳ್ವರ್ ಮೃಡಂ ಪಾರ್ವತೀ ।
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯ[2]ನಂದಾಲಿಂಗನಂ ಮಾಡುವಂ ॥ ೯೮ ॥

ಅಂತತಿಪ್ರಬಲಮಾದ ನಿದಾಘ ಸಮಯದೊಳ್—

ಕಂ ॥ ದಿನಮಂ ಕೆಲವಂ ದಶರಥ
ತನುಜರ್ ದಶಪುರದೊಳಿರ್ದು ಪೋಗಲೊಡಂ ನೊಂ ॥
ದನದರ್ಕೆ ವಜ್ರಕರ್ಣಂ
ವಿನೀತರುತ್ತಮರಗಲ್ಕೆಯಂ ಸೈರಿಪರೇ ॥ ೯೯ ॥

---

1. ಕ್ಷಪಣತೆಯೊಳ. ಚ.
2. ನೊಲ್ದಾ. ಕ. ಖ. ಘ.

ಅಂತು ಸೀತಾಸಮೇತಂ ರಾಮಲಕ್ಷ್ಮಣರ್ ದಕ್ಷಿಣಾಭಿಮುಖರಾಗಿ ಬಲ್ಲಡವಿಯ ಬಟ್ಟೆವಿಡಿದು ನಡೆವೆಡೆಯೊಳ್—

ಕಂ ॥ ರಾಘವನೆನ್ನಂ ತೃಣದಿಂ
ಲಾಘವಮೆನೆ ಬಗೆದನೆಂಬ ಮನದುಮ್ಮಳದಿಂ ॥
ದಾಘಮನೊಳಕೊಂಡಂತೆ ನಿ
ದಾಘದ ಮುಂಬಗಲೆ ತಳೆದುದಿಳೆ ಕಡುಗಾಯ್ಪಂ ॥ ೧೦೦ ॥

ಇನಕುಲ ಸಾಮ್ರಾಜ್ಯ ಶ್ರೀ
ತನಗಲ್ಲದೆ ತಾಳ್ದಲರಿದದಂ ರಾಮಂ ತ ॥
ನ್ನನುಜಂಗೊಪ್ಪಿಸಿ ಬಂದೊಡೆ
ಕನಲ್ದವೋಲ್ ಚಂಡಭಾನು ಬಿಸುಪಂ ತಳೆದಂ ॥ ೧೦೧ ॥

ಮ ॥ ಇಳೆಯಂ ತಾಳ್ದಿದ ಸತ್ವದಿಂದಮೆನಗಂ ಬಿಲ್ಲಾಳ್ಗಳೆಂಬೇವದಿಂ ।
ಬಳ ನಾರಾಯಣರಂ ನಿಸರ್ಗ ಚಪಲಂ ದಾವಾಗ್ನಿ ಧೂಮ ಧ್ವಜಂ ॥
ಝಳಮಂ ಮೇಲೆ ಕಡಂಗಿ ಪೊಯ್ದು ಮಿಟಿಕೆಯ್ದೇನಾನುಮಂ ಕೇಱ[1]ಚಾ ।
ವಳಿಪಂತಾದುದು ಜೀರ್ಣ ಪರ್ಣ ಪರುಷ ಪ್ರಧ್ವಾನದಿಂ ಮಾರುತಂ ॥ ೧೦೨ ॥

ಚ ॥ ಕಡುವಿಸಿಲುರ್ಚೆ ಕೋಮಲ ಲತಾ ತನು ಬಂಬಲಬಾಡೆ ನಾಡೆ ನೀ ।
ರಡಸಿ ಬಱಲ್ದು ಬರ್ಪ ಪದದೊಳ್ ಜನಕಾತ್ಮಜೆ ಮುನ್ನೆ ಬಿಟ್ಟು ಬಂ ॥
ದೊಡೆ ಬಿಡದುರ್ವರಾ ರಮಣಿ ಬೆನ್ನನೆ ಬಂದಪಳೆಂಬ ಶಂಕೆಯಂ ।
ಪಡೆದು ರಘೂದ್ವಹಂಗೆ ಪಡೆದಳ್ ಗಮನಶ್ರಮ ಖಿನ್ನೆ ಖೇದಮಂ ॥ ೧೦೩ ॥

ಅಂತೆಂತಾನುಮೆಯ್ದೆವಂದುಜ್ಜಯಿನಿಯ ಪಡುವಣ ಪೆರ್ವಱುವಂ ಕಱಿದು ಕುರವಕಮೆಂಬ ಪೊಱಲ ನಿಕಟ ವಟ ವಿಟಪಿಚ್ಛಾಯೆಯೊಳ್ ಸೀತೆ ಸೇದೆವಟ್ಟಿರ್ದುಂ, ಜಲಾನ್ವೇಷಣ ನಿಮಿತ್ತಂ ಲಕ್ಷ್ಮಣಂ ಬರುತ್ತುಮಿರೆ—

ಮ ॥ ಬನಮೊಂದಿರ್ದುದು ಮುಂದೆ ಕಂತು ವನ ದುರ್ಗಾಕಾರದಿಂದಲ್ಲಿ ತ ।
ದ್ವನಲಕ್ಷ್ಮೀ ಮುಖದಂತೆ ನೀರಜ ವನಂ ಚೆಲ್ವಾಯ್ತುದಂ ಕಾದು ಯೌ ॥
ವನದೃಪ್ತರ್ ಕೆಲರಿರ್ದರಲ್ಲಿಗೆ ದಳನ್ನೀಲಾತಸೀ ಚಂಕನ ।
ತ್ತನು ತೋಯಾಹರಣಾರ್ಥಿ ಬಂದನಭಯಂ ಸೌಮಿತ್ರಿ ಶತ್ರುಂಜಯಂ ॥೧೦೪॥

ಆಗಳಲ್ಲಿ—

---

1. ಜಾವಳಿ. ಗ.

ಕಂ ॥ ಪರಪುಷ್ಪದಂತೆ ಪುಗಲೆಂ
ಬರ ಮಾತಂ ಮೀಱಿ ಲಕ್ಷ್ಮಣಂ ಪೊಕ್ಕು ಸರೋ ॥
ವರಮಂ ಮೊಗೆದಂ ಜಲಮಂ
ಸರೋಜ ವಿಸ್ತೀರ್ಣಪರ್ಣ ಪುಟಿಕಾ ಹಸ್ತಂ ॥ ೧೦೫ ॥

ಅಂತು ನೀರಂ ಮೊಗೆದು ಪೂಗೊಳನಂ ಪೊಱಮಡುವುದುಮಾಸ್ಪಮಯದೊಳ್ ಪಿಡಿಯನೇಱಿ ಕಾಮನ ಕೈಪಿಡಿಯಂತೆ ಬರುತುಂ ಕಣ್ಬೊಲದೊಳ್ ತನ್ನಂ ಕಂಡು ಕಣ್ಬೇಟಂಗೊಂಡು ಕೂರಂಕುಸದ ಪೊಳೆಪಿನೊಡನೆ ಪಾಲೊಳ್ ತೊಳೆದ ಕುಡು ಮಿಂಚಿನ ಗೊಂಚಲಂತೆ ಪೊಳೆದು ಸೋಲದಿಂದೆಳಸಿ ಸುೞಿಯಿಸುವ ಕಡೆಗಣ್ಣ ನೋಟ ದಿಂ ಮಾಟದ ಗಂಡವರಿಜೆಂದಱಿದೀ ವೇಷಮನಿವಳಿದೇಕೆ ತಾಳ್ದಿದಳೆಂದಱಿಯಲವ ಸರಂ ಗೊಟ್ಟೆರೆ ಮುಟ್ಟೆ ವಂದು—

ಚ ॥ ಮನದೊಡನೆಕ್ಕೆಯಿಂ ಪರಿಯೆ ಕಣ್ಣಡೆ ನೋಡಿ ಮೃಗಾಕ್ಷಿ ವಾರಿಜಾ।
ಕ್ಷನಕಡುಗಾಡಿಯಂ ಪುರುಷ ವೇಷದ ರಾಜ ತನೂಜೆ ಕಂತು ಮೋ ॥
ಹನ ಶರಮುರ್ಚೆ ಘರ್ಮಜಲ ಕುಟ್ಮಲಮುಂ ಪುಳಕೋದ್ಗಮಂಗಳುಂ।
ತನುಲತೆಯೊಳ್ ಪೊದೞ್ದೊದವೆ ತಾಳ್ದಿದಳುತ್ಕಳಿಕಾ ವಿಳಾಸಮಂ ॥ ೧೦೬ ॥

ಅಂತು ಕಂತುಶರಮುರ್ಚೆ ಬೆರ್ಚೆ ಶರಣ್ಗೆ ಬರ್ಪಂತೆ ವಾಹನದಿಂದಿೞಿದು ಬಂದೀತನಾದೇಶಪುರುಷನೆಂದಱಿದು ನಿಶ್ಚೈಸಿ ಬೀಡಿಂಗೆ ಬಿಜಯಂಗೆಯ್ಯಿಮೆಂದು ಕೈಯಂ ಪಿಡಿದೊಡಗೊಂಡು ಪೋಗಿ ಹಂಸತೂಲತಲ್ಪದೊಳ್ ಕುಳ್ಳಿರಿಸಿ ತಾನುಮೊಡನೆ ಯೆ ಕುಳ್ಳಿರ್ದು ನೀಮಾರ್ಗೇನಿಮಿತ್ತಮಿಲ್ಲಿಗೆ ಬಿಜಯಂಗೆಯ್ದಿರೆಂಬುದುಂ, ಲಕ್ಷ್ಮಣ ದೇವನೆಂದನೆಮ್ಮ ವೃತ್ತಾಂತಮಂ ಬೞಿಕ್ಕೆ ತಿಳಿಯವೇೞ್ದಪೆನೀಗಳೆಮ್ಮತ್ತಿಗೆ ನೀರಡಸಿ ಬೞಲ್ದಿರ್ದೊಡೆಮ್ಮಣ್ಣನ ಬೆಸದಿಂ ಜಳಾಶಯಮನಱಸಿ ಬಂದೆನದಱಿನಿದವಸರ ಮಲ್ಲೆಂಬುದುಮಾಬೆಸಕ್ಕಾನೆ ಸಾಲ್ವೆನೆಂದು ಕಣ್ಗರಗದ ನೀರ್ವೆರಸು ಕೆಲದೊಳಿರ್ದ ಕೆಳದಿಯರನಟ್ಟುವುದುಮಾಕೆಗಳವರಿರ್ದಲ್ಲಿಗೆ ಪೋಗಿ, ಹಿಮ ಸಲಿಲದಿಂ ಗಮನಶ್ರಮ ಮನಾಱಿಸಿ ಮುಂದಿಟ್ಟೊಡಗೊಂಡು ಬಂದು ಮಜ್ಜನ ಭೋಜನಾದಿ ಸತ್ಕಾರಮಂ ಮೆಱೆವುದುಮಾಕನ್ನೆಯ ಜನನಿಯಪ್ಪ ಪೃಥ್ವೀಮತಿ ಮಹಾದೇವಿ ನಿಜ ಪರಿಜನಮಂ ಪೋಗಲ್ವೇೞ್ದು ಕಟ್ಟೇಕಾಂತಮಂ ಮಾಡ್ಪುದುಂ, ಜನನಿಯು ಕಣ್ಣಾರಿದು ಕನ್ನೆ ತನ್ನ ಮುನ್ನೆ ತೊಟ್ಟ ಗಂಡವಚ್ಚಮಂ ಕಳೆದು ಕಟಕ ಕಟಿಸೂತ್ರ ವಿಚಿತ್ರಾಭರಣಾದಿ ದಿವ್ಯ ವಸ್ತುಗಳಿಂದಳಂಕರಿಸಿ—

ಕಂ ॥ ರೂಪ ಪರಾವರ್ತನ ವಿ
ದ್ಯಾ ಪರಿಣತಿಯಿಂದಮತನು ರತಿಯಾದವೊಲಾ ॥

ರೂಪವತಿ ಪುರುಷವೇಷಂ ।
ಪೋಪುದುಮರ್ಚಿಸಿದ ಕೈದುವಿರ್ಪಂತಿರ್ದಳ್ ॥ ೧೦೭ ॥

ಕಂ ॥ ಕ್ರಮ ವಿಕ್ಷೇಪದಿನಂಜೆಗೆ
ಸಮನಿಸೆ ದೈನ್ಯಂ ಲತಾಂಗಿ ಸೀತೆಗೆ ಚೆಲ್ವಿಂ ॥
ಸಮನಧಿಕವೆಂಬ ಕೌತುಕ
ಮಮರ್ದಿರೆ ನಡೆತಂದು ಪಾರ್ಶ್ವದೊಳ್ ಕುಳ್ಳಿರ್ದಳ್ ॥ ೧೦೮ ॥

ಅಂತು ಸೀತೆಯ ಸಮೀಪದೊಳ್ ಕುಳ್ಳಿರ್ಪುದುಮಾಸಮಯದೊಳ್—

ಉ ॥ ಆ ನಗೆಗಣ್ಗಳಾ ನಿಮಿರ್ದ ಪುರ್ವುಗಳಾ ನಳಿತೋಳ್ಗಳಾ ಸರೋ ।
ಜಾನನವಾ ಮದಾಳಿ ಕುಳ ಕುಂತಳವಾ ಕಳಹಂಸ ಯಾನವಾ ॥
ಪೀನ ಕುಚಂಗಳಾ ಕ್ಷಣದೊಳೀಕ್ಷಣಮುಂ ಸೆಱೆಗೆಯ್ಯೆ ಕೃಷ್ಣನಾ ।
ಮಾನಿನಿಗಿತ್ತು ತನ್ನಮನಮುಂ ಮರವಾನಸನಂತೆ ತೋಱಿದಂ ॥ ೧೦೯ ॥

ಆ ಸಮಯದೊಳ್ ದಾಶರಥಿ ಪುರುಷ ವೇಷಮಿಾ ಕನ್ನೆಗೇಕಾರಣವಾದುದೆನೆ ಜಗಜ್ಜನಕಂಗೆ ತಜ್ಜನನಿ ಕೈಗಳಂ ಮುಗಿದೀ ಕುರವಕಪುರಮನಾಳ್ವಂ ವಾಲಖಿಲ್ಯ ನೆಂಬನೆಮ್ಮರಸನಾತನ ಮೇಲೆ ವಿಂಧ್ಯಾಟವಿಯೊಳಿರ್ಪನವಂಧ್ಯಕೋಪಂ ರೌದ್ರಭೂತಿ ಯೆಂಬಂ ಮ್ಲೇಚ್ಛರಾಜನಸಂಖ್ಯಾತ ಕಿರಾತ ಬಲಂಬೆರಸೆತ್ತಿ ಬಂದು ನಾಡುಂಬೀಡು ಮನಿಱಿದು ಸೂಱೆಗೊಂಡೆಮ್ಮರಸನಂ ಸೆಱೆವಿಡಿದುಯ್ದನದನವಂತೀ ವಲ್ಲಭಂ ಸಿಂಹೋದರಂ ಕೇಳ್ದೆಮ್ಮರಸನ=ಪುತ್ರಕನೆಂದು ತಾನೀದೇಶಮಂ ಸ್ವೀಕರಿಸಲ್ಬಗೆದೊ ಡೆಮ್ಮಮಂತ್ರಿಮುಖ್ಯಂ ವಾಲಖಿಲ್ಯನರಸಿ ಗರ್ಭಿಣಿಯೆಂದು ಬಿನ್ನವಿಸುವುದುಮದನಾತ ನವಧಾರಿಸಿ ಸಂತೋಷಂಬಟ್ಟು ಗರ್ಭದ ಕೂಸು ಗಂಡುಗೂಸಾದೊಡಾತನೆ ನೆಲ ಕ್ಕೊಡೆಯನೆಂದೊಡಂಬಡುವುದುಮಾತನುಂ ಕೆಲವಾನುಂದಿವಸದಿಂದೀಕನ್ನಿಕೆಯಂ ಪಡೆಯೆ ಮಂತ್ರಿಮುಖ್ಯಂ ಅರಸಿ ಮಗಂಬಡೆದಳೆಂದೊಸಗೆಯಂ ಮಾಡಿ ಕಲ್ಯಾಣ ಮಾಲನೆಂದು ಪೆಸರನಿಟ್ಟು ನಡಪುತ್ತಿರ್ಪಿನಮೊಂದುದಿವಸಂ [1]ದಿವ್ಯಜ್ಞಾನಿಗಳಂ ಕಂಡು ವಾಲಖಿಲ್ಯಂಗೆ ಬಂಧನಮೋಕ್ಷಮಾರಿಂದಕ್ಕುಮೆಂದು ಬೆಸಗೊಳ್ವುದುಮವ ರಿಂತೆಂದರ್—

ಚ ॥ ಅಳವಡೆ ಕೊಂಡ ಗಂಡವರಿಜಂ ಬಗೆಗೊಂಡಿರೆ ನೋಡಿ ನೋಡಿದಾ ।
ಗಳೆ ವಧುವೆಂದು ನಿಶ್ಚಯಿಸಿ ಕೈವಿಡಿದಾತನೆ ನಿಮ್ಮ ಖೇದಮಂ ॥

---

1. ಅವಧಿಜ್ಞಾನಿಗಳಪ್ಪವರಂ. ಚ.

ಕಳಿದು ನಿರಾಕುಲಂ ಬಿಡಿಸುಗುಂ ಸೆಱೆಯಂ ಪೆಱತೇನೊ ಕಾಣ್ಬಿರಾ ।
ಬಳಯುತನಂ ಪುರೋಪವನ ಷಂಡ ಸಮೀಪ ಸರೋಜ ಷಂಡದೊಳ್ ॥೧೧೦॥

ಎಂದಱಿಪುವುದುಮಂದಿಂದಿತ್ತಲೀ ಸರೋವರಕ್ಕೆ ಕಾಪಂ ಪೇೞ್ದಿಲ್ಲಿಯೆ ಬೀಡಾಗಿರ್ದೆವೆಮ್ಮ ಪುಣ್ಯೋದಯದಿಂ ನೀವು ಮಿಲ್ಲಿಗೆ ಬಿಜಯಂಗೆಯ್ದಿರೆಂದು ಶೋಕಗದ್ಗದ ಕಂಠೆ ಕಣ್ಣ ನೀರಂ ಸುರಿಯೆ, ಸೀತೆ ಸಂತೈಸೆ ಲಕ್ಷ್ಮಣಂ ಜಾನಕಿಗೆ ಕೈಗಳಂ ಮುಗಿದು—

ಕಂ ॥ ಈಕೆಯ ತಾಯ್ಗುಪಶಮಿಸುಗೆ
ಶೋಕಂ ರಾಘವನ ಕಣೆಗೆ ಮಣಿಗುಂ ರಣದೊಳ್ ॥
ಲೋಕತ್ರಯಮೆನೆ ಶಬರ
ಪತಾಕಿನಿ ಪೆಱತೆಗೆಯದೆಡಱ ಬಿಲ್ದೆಗೆದಪುದೇ ॥ ೧೧೧ ॥

ಅನ್ನೆವರಿಮೀ ತನೂದರಿ
ಮುನ್ನಿನ ತೆಱದಿಂದಮಿರ್ಕೆ ಬೇಡರ ಪಡೆಯಂ ॥
ಬೆನ್ನಟ್ಟಿ ಬಿಡಿಸಿ ಸೆಱೆಯಂ
ಕನ್ನೆಯನಾಂ ಮದುವೆನಿಲ್ವೆನೆಂದನುಪೇಂದ್ರಂ ॥ ೧೧೨ ॥

ಎಂದು ನುಡಿದವರನೊಡಂಬಡಿಸಿ ಬಲಂಬೆರಸು ನಟ್ಟಿರುಳೆೞ್ದು ಪೋಗಿ ಮೇಖಲಾತರಂಗಿಣಿಯನುತ್ತರಿಸಿ ತರದಿನೆಡೆಯೆಡೆಯ ನಾಡುಗಳಂ ಕಳಿದು ಪೋಗೆಪೋಗೆ—

ಕಂ ॥ ಸರಳ ಲತಾ ಲಾಸ್ಯ ನಟಂ
ಹರಿಣೀ ರೋಮಂಥ ಬಂಧುರಂ ಲವಲೀ ಮ ॥
ರ್ಮರ ಮುಖರಂ ಕರಿ ಕರ ಶೀ
ಕರ ಶೀತಳಮೆಸಗಿದತ್ತರಣ್ಯ ಸಮೀರಂ ॥ ೧೧೩ ॥

ತಾಂಗಿದುದು ಗಾಳಿಯಂ ದೆಸೆ
ಯಂ ಗವಸಣಿಸಿದುದು ಮೇಗೆ [1]ಮೊಗೆದಾಗಸಮಂ ॥
ನುಂಗಿದುದೆನೆ ಕಟ್ಟಲಿಸಿ ಕ
ಱಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ ॥ ೧೧೪ ॥

ಅಂತಗುರ್ವುವೆತ್ತ ವಿಪಿನಮಂ ಪುಗುವಸಮಯದೊಳ್—

---

1. ನೆಗೆದ. ಕ. ಖ. ಗ. ಘ.

ಉ ॥ ತೊಂಡಿನೊಳೆಮ್ಮ ಪೇರಡವಿಯಂ ಪುಗುತಂದಪರೆಂದು ಲುಬ್ಧಕರ್ ।
ತಂಡದೆ ಸುತ್ತಿ ಮುತ್ತಿ ಗೊಲೆಗೊತ್ತಿದನೇ ಧನುವಂ ಸರಲ್ಗಳಂ ॥
ಕೊಂಡನೆ ದಿವ್ಯಬಾಣಧಿಯಿನಸ್ಖಲಿತಂ ನಸುನಕ್ಕು ತನ್ನ ಕೋ ।
ದಂಡ ಕೃತಾಂತ ದಂಡದೊಳೆ ಮೋದಿದನೋಡಿಸಿದಂ ಜನಾರ್ದನಂ ॥೧೧೫॥

ಅಂತು ತಮ್ಮ ಕೈಯ ಬಿಲ್ಗಳಿಂ ಬೀಟೆಪೊಯ್ಯೆ ಬೇಡವಡೆ ಬೆಗಡುಗೊಂಡೋಡಿ ಪೋಗಿ ತಮ್ಮಾಳ್ದಂಗವರಳವಿಗಟಿದಳವನಱಿಯೆ ಪೇಟ್ವುದುಮಾತನತಿಪ್ರಬಲ ಕಿರಾತ ಬಲ ಸಮೇತಂ ಮೇಲೆತ್ತಿ ಬರ್ಪುದುಮದಂ ಕಂಡು ಕಡುಮುಳಿದು ಸೌಮಿತ್ರಿ ಲಯ ಸಮಯದ ಕಾಳರಾತ್ರಿಯಂತೆ ಸಾಗರಾವರ್ತಮಂ ಜೇವೊಡೆಯೆ ಸಂವರ್ತ ಸಾಗರಾವರ್ತ ಗಂಭೀರ ಘೋಷದಂತೆ ಚಾಪ ಟಂಕಾರ ಘೋಷಮೊದವೆ ಕೇಳ್ದು ರೌದ್ರಭೂತಿ ಸಾಮಾನ್ಯಭೂತರಲ್ಲಿವರ್ ಕಾರಣಪುರುಷರೆಂದು ಭಯ ಚಕಿತ ಚಿತ್ತನಾಗಿ—

ಕಂ ॥ ಆಗ್ರಹಮೊಪ್ಪದಿದೆನಗೆ ಸ
ಮಗ್ರರೊಳನಿವಾರ್ಯ ವೀರ್ಯರಚಲಿತ ಧೈರ್ಯರ್ ॥
ವಿಗ್ರಹಮನುಟಿವೆನಿವರೊಳ
ನುಗ್ರಹಮಂ ಪಡೆವೆನೆಂದು ರಥದಿಂದಿಟಿದಂ ॥ ೧೧೬ ॥

ಅಂತಳವಟಿದು ರಥದಿಂದಿಟಿದುಬಂದು ಬಲಾಚ್ಯುತರ ಮುಂದೆ ನಿಂದು ಕೈಗಳಂ ಮುಗಿದು ಮುನ್ನಮೆನ್ನಱಿಯಮೆಯಿಂದಿನ್ನೆವರಮನ್ನೆಯಮನಾಚರಿಸಿದೆನಿನ್ನಿಮ್ಮ ಬೆಸಸಿದಂದದೊಳೆ ನೆಗಟ್ವೆನೆಂದು ಸರ್ವಾಂಗ ಪ್ರಣತನಾಗಿರ್ಪುದುಂ, ಲಕ್ಷ್ಮಣ ಕುಮಾರನಂಜದಿರೆಂದಭಯ ವಚನದಿಂದವನ ಮನದ ಭಯಮಂ ಕಳೆದು ಬಟಿಯಂ ನೀಂ ಸೆಱೆವಿಡಿದಿರ್ದ ವಾಲಖಿಲ್ಯನಂ ತಡೆಯದೊಡಗೊಂಡು ಬಾಯೆಂಬುದುಂ, ಮಹಾಪ್ರಸಾದವೆಂದಾಕ್ಷಣದೊಳೆ ಪೋಗಿ ತರ್ಪುದುಮಾತನತಿತ್ವರಿತಗತಿಯಿಂ ಬಂದು—

ಮ ॥ ಬಲನಾರಾಯಣ ದೇಹದೀಪ್ತಿ ತನುವಂ ತಟಿಸ್ಕೈಸೆ ಪಾದಾನತಂ ।
ಪಲಕಾಲಂ ಸೆಱೆವೋಗಿ ಬೇಡರೊಡನೊಂದಾಗಿರ್ದ ತದ್ದೋಷ ಪಂ ॥
ಕಿಲತಾ ಕ್ಷಾಲನ ತತ್ಪರಂ ಸುರಸರಿತ್ಕಲ್ಲೋಲಮಂ ಯಾಮುನಾ ।
ಜಲಮಂ ಪೊಕ್ಕಘಮರ್ಷಣಂ ಮುಳಿಗಿದಂತಿರ್ದಂ ಪುರೋಭಾಗದೊಳ್ ॥

ಅಂತು ವಿನತನಾಗಿ ರಾಮ ಪ್ರೇಮ ವಚನಾಮೃತ ವರ್ಷದಿಂ ಹರ್ಷಮಂ ತಾಳ್ದಿ ಮುಕುಲಿತಾಂಜಲಿಪುಟಂ ಮುಂದೆ ನಿಂದಿಂತೆಂದಂ—

ಕಂ ॥ ಅಪರಿಮಿತ ಸೈನಿಕಂ ಸಿಂ
ಹಪರಾಕ್ರಮನೆತ್ತಿ ಬಂದು ಸಿಂಹೋದರನೆ ॥

ನ್ನ ಪರಾಭವಮಂ ಪಿಂಗಿಸ
ದೆ ಪಿಂಗಿದಂ ರೌದ್ರಭೂತಿಗಿದಿರಾಂಪವರಾರ್ ॥ ೧೧೮ ॥

ಕಂ ॥ ದ್ಯುಮಣಿಗೆ ಕಟ್ಟಿಲೆ ಶರಭ
ಕ್ಕೆ ಮೃಗೇಂದ್ರಂ ಸಡೆವ ಮಾಟ್ಕೆಯಿಂ ಸೆಡೆದನಿವಂ ॥
ನಿಮಗೆ ಸಮರಕ್ಕೆ ಮಿಕ್ಕರ
ಸುಮಕ್ಕಳಂ ರೌದ್ರಭೂತಿ ಲೆಕ್ಕಂಗೊಳ್ಳಂ ॥ ೧೧೯ ॥

ಜ್ಯಾ ತಾಡನ ಟಂಕಾರದೆ
ಭೀತಿಯನೀತಂಗೆ ಪಡೆದು ಪುರ್ವಿನ ಜರ್ವಿಂ ॥
ಪೋ ತೆಗೆವರೆ ನೀವಲ್ಲದ
ರೀತನಕೈಯೆಂಬ ಜವನ ಬಾಯಿಂದೆನ್ನಂ ॥ ೧೨೦ ॥

ಶಾ ॥ ನಿಮ್ಮಿಂದಾದುದು ಬಂಧಮೋಕ್ಷಮೆನಗೀಗಳ್ ವೃತ್ತಿಯೊಳ್ ಜಾತಿಯೊಳ್।
ನಿಮ್ಮಿಂ ನಿಂದೆನಪಾರ ದುಃಖ ಭರಮಂ ನಿಮ್ಮಿಂದಮಾಂ ನೀಗಿದೆಂ ॥
ನಿಮ್ಮಂ ಕಂಡು ಕೃತಾರ್ಥನಾದೆನಿಳೆಯೊಳ್ ಮುನ್ನಾದರಿನ್ನಪ್ಪವರ್ ।
ನಿಮ್ಮನ್ನರ್ ಪೆಱರಾರುದಾತ್ತಚರಿತರ್ ದುರ್ವಾರ ಬಾಹಾಬಲರ್ ॥ ೧೨೧ ॥

ಎಂದು ಬಿನ್ನವಿಸಿ ನೀಮೆನ್ನ ಪುರಾಕೃತ ಪುಣ್ಯಮೆ ರೂಪುಗೊಂಡು ಬರ್ಪಂತೆ ಬಂದಿರೇನಿಮಿತ್ತಮೆನಗಿನಿವಿರಿದುಪಕಾರಮನೊಡರ್ಚಿದಿರೆಂಬುದುಂ, ಲಕ್ಷ್ಮಣನದೆಲ್ಲ ಮಂ ನಿನ್ನ ಪೊಟಿಲ್ಗೆ ಪೋಗಲೊಡಂ ನೀನೆತಿಳಿದಪ್ಪೆಯೆಂದು ರೌದ್ರಭೂತಿಯಂ ನೋಡಿ ವಾಲಖಿಲ್ಯನಂ ಮುಂದಿಟ್ಟುಯ್ದು ಪೊಟಿಲಂ ಪುಗಿಸಿ ನೀನೀತನ ಪೇಟ್ದುದಂ ಗೆಯ್ದು ಸುಖದಿನಿರಲ್ಲದೊಡೆ ಕಡುಮುಳಿವೆನೆಂದು ನಿಯಮಿಸಿ ಕಟಿಪುವುದುಂ, ರೌದ್ರಭೂತಿ ಮಹಾವಿಭೂತಿಯಿಂ ಪೊಟಿಲಂ ಪುಗಿಸೆ ವಾಲಖಿಲ್ಯಂ ರಾಮಲಕ್ಷ್ಮಣರ ಸಾಹಸಮಂ ಸನಾಭಿಜನ ಪರಿಜನ ಪುರಜನಕ್ಕೆ ಸಹಸ್ರಮುಖದಿಂ ಸ್ತುತಿಯಿಸುತ್ತುಂ ಶುಭಮುಹೂರ್ತದೊಳ್ ಲಕ್ಷ್ಮಣಕುಮಾರಂಗೆ ನಿಜಕನ್ನೆಯೊಳ್ ಮಹೋತ್ಸಾಹದಿಂ ವಿವಾಹಮನೊಡರ್ಚಿ ಸುಖದಿನರಸುಗೆಯ್ಯುತ್ತಿರ್ದನನ್ನೆಗಮಿತ್ತ ರಾಮಲಕ್ಷ್ಮಣರ್ ದಕ್ಷಿಣಾಭಿಮುಖರಾಗಿ ವಿಪಿನದೊಳಗನೆ ನಡೆಯೆ ನಡೆಯೆ—

ಮ ॥ ಭ್ರಮಿತಾಷ್ಟಾಪದಮುಗ್ರ ಖಡ್ಗಮೃಗ ಸಂಛನ್ನಂ ಜರದ್ದಂದಶೂ ।
ಕ ಮುಖ ಶ್ವಾಸ ವಿಷಾಗ್ನಿ ದಗ್ಧ ವಿಪಿನಂ ಮತ್ತೇಭ ವಿಕ್ರೀಡಿತಂ ॥
ತಮದೊಡ್ಡೆಂಬಿನೆಗಂ ಕಱಂಗಿ ನಭಮಂ ನುಂಗಿತ್ತು ಪಾಪರ್ಧಿ ಸಂ ।
ಭ್ರಮ ಕೋಲಾಹಲ ಲುಬ್ಧಕಂ ಕಲುಷಿತಾಂತಸ್ಸಿಂಧು ವಿಂಧ್ಯಾಚಲಂ ॥ ೧೨೨ ॥

ಮ॥ ಸ್ರ॥ನೆಲನಿಲ್ಲಿಂದಿತ್ತಲಿಲ್ಲೆಂಬಿನಮನಿತೆ ದಿಶಾಘಾಟಮೆಂಬನ್ನೆಗಂ ಕ।
ಟ್ಟಲೆ ಚಂದ್ರಾದಿತ್ಯ ತೇಜಕ್ಕದಿರದಿದಿರನೊಡ್ಡಿರ್ದುದೆಂಬನ್ನೆಗಂ ಕ॥
ಟ್ಟಲಿಸುತ್ತಿರ್ದತ್ತು ಕಾಡಾನೆಯ ಕಡುಪುಗಳಿಂ ಸಿಂಹಸಂಘಾತದಿಂ ಪೆ।
ರ್ಚಲಿವಿಂದಿಂ ಕಣ್ಗೆಗುರ್ವಂ ಪಡೆದು ಕುಲನಗಸ್ಪರ್ಧಿ ವಿಂಧ್ಯಾಚಲೇಂದ್ರಂ॥

ಆ ನಗೋಪತ್ಯಕದೊಳ್—

ಕಂ॥ ಮಲಯರುಹ ಗಂಧಿ ಮೃಗಮದ
ತಿಲಕೆ ತಮಾಲ ಪ್ರವಾಳ ಕುಂತಲೆ ಪುಳಿನ॥
ಸ್ಥಲ ವಿಪುಲ ಜಘನೆ ಮದಗಜ
ವಿಲಾಸವತಿ ವನಲತಾಂಗಿ ಕಣ್ಗೆಸೆದಿರ್ದಳ್ ॥ ೧೨೪ ॥

ಆ ವಿಂಧ್ಯನಗಮಂ ದಾಂಟಿ ಪೋಗಿ [1]ತಾಪಿಯೆಂಬ ತೊಱೆಯಂ ಪಾಯ್ದುರುಣಿಯೆಂಬಗ್ರಹಾರಮಂ ಪೊಕ್ಕದೊಂದು ಗೃಹಮಂ ಪುಗುವುದುಮಾಗಳಾಗೃಹದ ವಿಪ್ರವಧು—

ಕಂ॥ ಆದೇಯ ರೂಪರಂ ಕಂ
ಡಾದರಿಸಿದಳೇಱಲಿಕ್ಕಿದಳ್ ಸೀತೆಗೆ ಶೀ॥
ತೋದಕದಿಂ ಗಮನ ಶ್ರಮ
ಖೇದಮನಾಱಿಸಿದಳೇನವಳ್ ಶುಭಮತಿಯೋ ॥ ೧೨೫ ॥

ಅನ್ನೆಗಮಾಕೆಯ ಭರ್ತಾರಂ ನಿಜಮಂದಿರಕ್ಕೆ ಬಂದವರಂ ಕಂಡಿವರನೇಕಿಲ್ಲಿ ಪುಗಲಿತ್ತೆಯೆಂದರ್ಘ್ಯ ಪಾನೀಯ ಪಲಾಶ ಕಾಂಡ ಕುಶ ಕುಸುಮ ಹಸ್ತನಪ್ರಶಸ್ತಂ ಕೆಡೆನುಡಿಯೆ—

ಚ॥ ಕಪಿಲನ ಕೈಪೆಮಾತು ಕಿವಿಗೆಯ್ತರೆ ಜಾನಕಿ ಪೋಗಿ ಬಿಚ್ಚತಂ।
ವಿಪಿನದೊಳಿರ್ಪಮಾಗೃಹದೊಳಿರ್ಪುದಱಿಂದೆನೆ ಕೇಳ್ದು ಲಕ್ಷ್ಮಣಂ॥
ಕುಪಿತಮನಂ ಕಟಾಕ್ಷಿಸುವುದುಂ ದ್ವಿಜನೀತನವಧ್ಯನಲ್ತೆ ಸೈ।
ರಿಪುದನುಜಾತ ನೀಂ ಮುಳಿಯಲಕ್ಕುಮೆ ದುರ್ಬಲರೇನನೆಂದೊಡಂ॥ ೧೨೬ ॥

ಎಂದು ರಘುವೀರನಲ್ಲಿಂತಳದುರ್ ಪೊಱಮೊಟಲಂ ಪೆಱಗಿಕ್ಕಿ ಪೆರ್ವಟ್ಟೆವಿಡಿದು ನಡೆಯುತ್ತುಂ—

---

1. ತಾರಿ. ಗ. ಘ.

ಉ ॥ ಮೂಲ ಸಟಾಳಿಯಿಂದಮುರಗಾಲಯಮಂ ಬಹುಶಾಖೆಯಿಂದವಿಂ ।
ದ್ರಾಲಯಮಂ ಪಳಂಚಿ ತಮಮಂ ಸೆಱಗೆಯ್ದು ಹಿಮಕ್ಕೆ ಕೊಂಬುಗೊ ॥
ಟ್ಟಾಲಮನಗ್ರ ಪಲ್ಲವ ಕರಾಗ್ರ ನಿರುದ್ಧ ಮರುತ್ತರಂಗಿಣೀ ।
ಕೂಲಮನೆಯ್ದಿದರ್ ವಿಜಿತ ಚಂಡಮರೀಚಿ ಮರೀಚಿ ಜಾಲಮಂ ॥ ೧೨೭ ॥

ಅಂತೆಯ್ದೆವರ್ಪುದುಮಾ ವಟ ನಿವಾಸಿಯಪ್ಪಿಭಕರ್ಣದೇವನ ವರಪುಣ್ಯ ಪ್ರಭಾವಕ್ಕೆ ಬೆರ್ಚಿ ಬೆಗಡುಗೊಂಡೋಡಿಪೋಗಿ ವಿಂಧ್ಯಾಟವಿಯೊಳಿರ್ಪ ಯಕ್ಷರಾಜಂ ಕ್ರೀಡಾಪೂತನೆಂಬಂಗೆ ಚಂಡ ಕೋದಂಡ ಧರರಿರ್ವರೆನ್ನಾವಾಸಮಂ ಕೈಕೊಂಡೊಡಾನವರ ದೇಹ ದೀಪ್ತಿಗಲ್ಲಿ ನಿಲಲಳ್ಕಿ ಬಳ್ಕುತ್ತುಂ ನಿಮಗಱಪಲ್ ಬಂದೆನೆಂಬುದುಮವಧಿಯಿನವರೀಕಾಲದ ಬಲದೇವ ವಾಸುದೇವರೆಂಬುದುಮನವರ ಬಂದ ತೆಱನುಮನಱದವರ್ಗೆ ಸತ್ಕಾರಮನೊಡರ್ಚಲೆಂದು—

ಕಂ ॥ ಕ್ರೀಡಾಪೂತಂ ಪುರಮಂ
ಮಾಡಿದನಳಕಾಪುರಕ್ಕಮಮರಾವತಿಗಂ ॥
ನಾಡೆಯುಮಧಿಕಮೆನಲ್ ಮಣಿ
[1]ಮಾಡ ಪ್ರಾಕಾರ ಗೋಪುರಾಟ್ಟಾಳಕಮಂ ॥ ೧೨೮ ॥

ಪುರದ ಬಹಿಃಪುರದಂತಃ
ಪುರದರಮನೆಯವನಿಪತಿಯ ಮಾಡದ ಹಯಮಂ ॥
ದಿರದಾನೆಸಾಲೆಯಂದಂ
ಬರೆಯಲ್ ಕಂಡರಿಸಲರಿದು ಮಾಂಡವ್ಯಂಗಂ ॥ ೧೨೯ ॥

ಮಱಗಾಲಂ ಬರೆಯುಂ ಪೆ
ರ್ಚಱುವಿನೊಳಂ ಯಕ್ಷವಿಕ್ರಿಯಾ ಜನಿತಮದೇಂ ॥
ಪೊಱಲಾದುದೊ ರಘುರಾಮನ
ಪಱುಗಱದ ಪೊಗಟ್ಟೆವೆತ್ತ ಪುಣ್ಯೋದಯದಿಂ ॥ ೧೩೦ ॥

ಅಂತಪೂರ್ವಮೆನೆ ಪುರಮಂ ವಿಗುರ್ವಿಸಿ—

ಮಂದಾಕ್ರಾಂತ॥ ಕಿಂಕುರ್ವಾಣ ಪ್ರವಣರರೆಬರ್ ಬರ್ಪಿನಂ ಕಾದು ತನ್ನಂ ।
ಬಿಂಕಂ ಪೊಂಕಂ ಗಿಡಿಸೆ ನನೆವಿಲ್ಲಾತನಂ ತೊಟ್ಟ ದಿವ್ಯಾ ॥
ಲಂಕಾರಂಗಳ್ ನಯನ ಸುಖಮಂ ನೀಡೆ ಬಂದರ್ಘ್ಯಮಂ ಯ ।
ಕ್ಷಂ ಕೊಟ್ಟಂ ರಾಘವನ ಚರಣಕ್ಕಿನ್ನರಾರ್ ಧನ್ಯಜನ್ಮರ್ ॥೧೩೧॥

1. ನೀಡ. ಚ.

ಅಂತರ್ಘ್ಯಪಾದ್ಯಮಂ ಕೊಟ್ಟು ಕೈಗಳಂ ಮುಗಿದು—

೨೦ ॥ ಆಸನ್ನಂ ಮಱೆಗಾಲಮೆನ್ನ ಪುರದೊಳ್ ನೀಮನ್ನೆಗಂ ದಿಗ್ಜಯ ।
ವ್ಯಾಸಂಗಾರ್ಥಿಗಳಾಗದಿರ್ದು ಚರಿತಾರ್ಥಂಮಾಱ್ಪುದೆನ್ನಂ ಪರಾ ॥
ರ್ಥಾಸೀನಂ ನಿಜವೃತ್ತಮೆಂದು ನುಡಿದೆಂತಾನುಂ ಪ್ರಿಯ ಪ್ರಾರ್ಥನಾ ।
ವ್ಯಾಸಂಗಾರ್ಥಿ ನರೇಂದ್ರನಂ ನಿಲಿಸಿದಂ ಯಕ್ಷಂ ಪರಾರ್ಥಪ್ರಿಯಂ ॥ ೧೩೨ ॥

ಅಂತೆಂತಾನುಂ ನಿಲಿಸಿ ತನ್ನ ವಿಗುರ್ವಿಸಿದ ಪುರಕ್ಕುಯ್ದು—

ಕಂ ॥ ಅರಮನೆಯೊಳ್ ಬಹುವಿಧ ಪರಿ
ಕರ ಪೂರ್ಣದೊಳಿರಿಸಿ ಮಾಡಿದಂ ಯಕ್ಷಂ ದಿ ॥
ಕ್ಕರಿ ಕರ್ಣ ಕುಹರವಂ ಪಟ
ಹರವಂ ತಳ್ಪೊಯ್ಯೆ ರಘುಸುತಂಗಭಿಷವಮಂ ॥ ೧೩೩ ॥

ಅಂತು ರಾಜ್ಯಾಭಿಷೇಕಂಗೆಯ್ದು—

ಕಂ ॥ ಬೇಡದೆ ಬೇಟ್ಪನಿತುಮನೆಡೆ
ಮಾಡದೆ ಪದನಱಿದು ತೀರ್ಚಿ ಪರ್ಯಾಪ್ತಿಯಲಂ ॥
ಪೋಡದೆ ರಾಮುಂಗೊಳ್ಪಂ
ಮಾಡಿದನುಚಿತೋಪಚಾರ ದಕ್ಷಂ ಯಕ್ಷಂ ॥ ೧೩೪ ॥

ಮತ್ತಿತ್ತಲಾ ಕಪಿಲನೆಂದಿನಂದದ್ನಿಂದ.ವಿಪಿನದೊಳ್ ತೊಳಲುತ್ತುಂ—

ಕಂ ॥ ಎನಗಾಡುಂಬೊಲನೀ ಕಾ(ಕ)
ನನವಿದಱೊಳಗಿನ್ನೆವರೆಗಮೊಂ ಕಾಣೆಂ ಲೋ ॥
ಚನ ಹೃದಯ ಹಾರಿ ಪುರಮೊಂ
ದನಿದಂ ಕಂಡೆಂ ದಲೆಂದು ವಿಸ್ಮಿತನಾದಂ ॥ ೧೩೫ ॥

ಆ ಸಮಯದೊಳ್ [1]ಸಮಯಾಭಿಧಾನ ಯಕ್ಷಿ ಪ್ರತ್ಯಕ್ಷಮಾಗೆ ಪುರೋಭಾಗಕ್ಕೆ ಬರೆ ಕಪಿಲಂ ಕಂಡಬ್ಬಾ! ಪೇೞೀಪುರಕ್ಕೆ ಪೆಸರಾವುದಿದರ್ಕಧಿಪತಿಯಾರೆಂಬುದುಂ—

ಕಂ ॥ ರಾಮುಪುರಮೆಂಬುದಿದು ರಘು
ರಾಮಂ ಪುರದೊಡೆಯನಖಿಲ ವಸುಧೆಗೆ ಕಲ್ಪಾ ॥
ರಾಮುಮೆನೆ ಕೊಟ್ಟಪಂ ವಸು
ಧಾಮರ ನೀಂ ಪೋಗಿ ಬೇಡಿಕೊಳ್ ಕಸವರಮಂ ॥ ೧೩೬ ॥

1. ಸುಮನಸಾಭಿಧಾನೆ. ಚ.

ಎನೆ ಕಪಿಲಂ ವಿಷಣ್ಣನಪ್ಪುದಱಿಂ ದೇವತೆಗೆ ಕೈಗಳಂ ಮುಗಿದು—

ಚ ॥ ಎನಗವನೀಶ ದರ್ಶನದುಪಾಯಮನಂಬಿಕೆ ಪೇೞಿಮೆಂಬುದುಂ ।
ಜಿನಗೃಹಮಿರ್ದುದೀ ಪುರದ ಪೂರ್ವವಿಭಾಗದೊಳಿರ್ದರಲ್ಲಿ ಸ ॥
ನ್ಮುನಿಪರುಪಾಸಕ ಕ್ರಮದಿನಲ್ಲಿ ದೃಢವ್ರತನಾಗಿ ಪೋದೊಡಾ ।
ಮುನಿವರರಾಜ್ಞೆಗಡ್ಡವಿಸರಲ್ಲಿಯ ಕಾಪಿನ ಯಕ್ಷರಾಕ್ಷಸರ್ ॥ ೧೩೭ ॥

ಎಂಬುದುಮಾಯಕ್ಷಿ ಬೆಸಸಿದಂದದೊಳೆ ಬಸದಿಗೆ ಬಂದು ಜಿನಮುನಿಗಳಂ ಕಂಡು ಧರ್ಮಮಂ ಬೆಸಗೊಂಡು ಲಘುಕರ್ಮಿಯಪ್ಪುದಱಿಂದೆ ದರ್ಶನ ಶುದ್ಧನು ಮಣುವ್ರತ ಧಾರಿಯುಮಾಗೆ ಋಷಿನಿವೇದಕನೊಡನೆ ಪೋಗಿ ಗಂಧೋದಕಮನುಯ್ದು ಕೊಟ್ಟು ರಘುವೀರಂಗಿಚ್ಛಾಕಾರಪೂರ್ವಕಂ ಸರ್ವಾಂಗಪ್ರಣತನಾಗಿ ಕಾಣ್ಬುದು ಮಾತಂ ವ್ರತಕ್ಕೆ ಬಂದುದರ್ಕೆ ಮೆಚ್ಚುಗೊಟ್ಟು ಕೞಿಪಿ—

ಚ ॥ ಎಱಗದೆ ಬಾೞ್ತೆಗೆಟ್ಟೆಡೆಗೆ ಪೊಮ್ಮುೞಿಯಂ ಧರೆಗಾವ ಕಾಲಮುಂ ।
ಕಱಿದು ಪರಾರ್ಥವೃತ್ತಿಯೊಳೆ ಪಾವನಮಾಗಿರೆ ತನ್ನ ಜೀವನಂ ॥
ತೊಱೆದು ಕಳಂಕ ಪಂಕಿಲತೆಯಂ ಮೞೆಗಾಲದ ಸೊಂಪನೇಳಿಸಲ್ ।
ನೆಱೆದನುಬಂಧಮಂ ಮೆಱೆದನಚ್ಚರಿ ಲಾಂಗಲಪಾಣಿ ಸೀತೆಯೊಳ್ ॥೧೩೮॥

ಅಂತು ರಾಮಲಕ್ಷ್ಮಣರಾ ಯಕ್ಷನ ವಿನಯೋಪಚಾರದಿಂ ಸಮಾಹಿತ ಮನಸ್ಕರಲ್ಲಿರ್ಪುದುಂ—

ಚ ॥ ಮುಗುಳ ತೊಡಂಬೆ ಗಂಟೊಡೆಯೆ ಮಾಂ ಬೆಳ್ಸಳಿ ಪುಟ್ಟಿ ಪುಟ್ಟಿ ಕೇ ।
ದಗೆಗಳ ಸೊರ್ಕು ಚೇತರಿಸೆ ಚಾದಗೆಗಂ—ಚಿರಮಾಗೆ ರಾಗಮಂ ॥
ಚಿಗೆ ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸುವುಟ್ಟೆ ಬೆಟ್ಟವೇ ।
ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಣ್ಣನೆ ಪಶ್ಚಿಮಾನಿಲಂ ॥ ೧೩೯ ॥

ಕಂ ॥ ಪರಿತಾಪಂ ಕಿಡೆ ಪುಳಕಾಂ
ಕುರಮೊದವೆ ಲತಾಂಗದೊಳ್ ನದೀ ಲೋಚನೆಗು ॥
ರ್ವರೆಗಾನಂದಾಶ್ರುಗಳು
ಬ್ಬರಮಾದುವು ಪಶ್ಚಿಮಾನಿಲಂ ಸೋಂಕಲೊಡಂ ॥ ೧೪೦ ॥

ಪಸುರ್ಗವಿಲನಾದ ನೀಪದ
ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರ ॥
ಪ್ರಸವಮುಮಂ ಸೂಱ್ಸೂಱೊಳ್
ಪಸವಟ್ಟಂದದೊಳೆ ಮುಸುಱಿ ಮುತ್ತಿದುವಳಿಗಳ್ ॥ ೧೪೧ ॥

ಅಂತು ಘನಸಮಯ ಪ್ರವೇಶಮಖಿಲ ಜನ ಮನೋವಿಕಾಸಕ್ಕವಕಾಶಮಾಗೆ—

ಮ॥ಸ್ರ॥ಅಪರಾಂಭೋರಾಶಿ ವೇಳಾ ವನಮಮರ ಪುರೋದ್ಯಾನಮಂ ನೋಡಲೇಟ್ತಿಂ।
ದಪುದೋ ನೀಲಾಚಲಂಗಳ್ ಕುಲ ಪರಿಭವಮಂ ಪಿಂಗಿಸಲ್ ನಾಕಲೋಕಾ॥
ಧಿಪನೊಳ್ ಮೇಲೆತ್ತಿ ಕಾದಲ್ ನೆರೆದುವೊ ಬಡಬಾಭೀತಿಯಿಂ ಮೇಣ್ ಶರಣ್ಬೊ।
ಕ್ಕಪುದೋ ನೀರಾಕರಂ ವ್ಯೋಮಮನೆನೆ ನೆಗೆದತ್ತಂದು ನೀಲಾಭ್ರಜಾಲಂ
॥ ೧೪೨ ॥

ಕಂ ॥ ಪಡುವಣ ಕಡಲಿಂದೊಗೆದುದು
ಬಡಬಾಗ್ನಿಯ ಪೊಗೆ ಪೊದಟ್ಟು ಕಿಡಿವೆರಸೆನಲೇಂ ॥
ಕುಡಿಮಿಂಚುವೆರಸು ಗಗನವು
ನಡರ್ದುದೊ ನೀರಂಧ್ರ ನೀಲ ನೀರದ ನಿವಹಂ ॥ ೧೪೩ ॥

ಪೊತ್ತುವ ಬಡಬಾಗ್ನಿಯ ಪೊಗೆ
ಸುತ್ತಿದೊಡುಮ್ಮಳಿಸಿ ಕಟ್ಗಿ ಪಡುವಣ ಕಡಲೊಳ್ ॥
ನಿತ್ತರಿಸದೆ ನಡೆದುವು ಜಲ
ಮತ್ತ ದ್ವಿಪ ಘಟೆಗಳೆನಿಸಿದುವು ಘನ ಘಟೆಗಳ್ ॥ ೧೪೪ ॥

ಮ॥ಸ್ರ॥ಇದವೋಘಂ ಮೇಘಕಾಲಂ ಬರೆ ಗಗನ ಗೃಹ ದ್ವಾರದೊಳ್ ತೋರಣಂ ಕ।
ಟ್ಟಿದುದೋ ಮೇಣ್ ಪಂಚರತ್ನಾವಳಿ ವಿಲಸಿತಮಂ ಕಂಠಿಕಾಮಾಲೆಯಂ ತಾ॥
ಳ್ದಿದಳೋ ದಿಗ್ದೇವಿ ಮೇಣ್ ರನ್ನದ ಪ್ಪೊರಜೆ ನವಾಂಭೋದ ಮಾದ್ಯದ್ಗಜಕ್ಕಿ।
ಕ್ಕಿದುದೋ ಪೇಟಿಂಬಿನಂ ಕಣ್ಗೆಸೆಯದು ಶಬಲಚ್ಛಾಯೆಯಿಂ ಶಕ್ರಚಾಪಂ॥

ಅನಂತರಂ—

ಮ ॥ ವಸುಧಾವಲ್ಲಭೆ ಮೇಘಕಾಲ ವಿಟನೊಳ್ ಸಂಭೋಗಮಂ ಮಾಡೆ ಬ।
ಣ್ಣಸರಂ ಪೋರ್ಕುಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆತ್ತಣಿಂ ॥
ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗಿಂಬಾದುವೆಂಬಂತದೇ।
ನೆಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ ॥ ೧೪೬ ॥

ಉ ॥ ತೀಡುವ ಪಶ್ಚಿಮಾನಿಲನ ತೀಟದೊಳುತ್ಕಟಮಾಗೆ ರಾಗಮಿ।
ರ್ಪೋಡಿದ ಚಂಚುವಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ॥
ನೀಡಿ ವಿಯತ್ತಲಕ್ಕೊಗೆದು ಕಾರ ಮುಗಿಲ್ವನಿಯುಂ ಮನಂ ಕುಳಿ।
ರ್ಕೋಡುವಿನಂ ಕರ್ದುಂಕಿ ನಲಿವಾಱಿದುವಾಱಿದುವಂದು ಚಾತಕಂ।

ಉ ॥ ರಾಗದ ಬಳ್ಳಿ ಚಾದಗೆಗೆ ಕಾಂಚನ ಚಂಚಲ ಲಾಸ್ಯ ತರ್ಜನಂ।
ಸೋಗೆನವಿಲ್ಗೆ ಮೇಖಲೆ ಘನಾಘನಲಕ್ಷ್ಮಿಗೆ ದೀಪಮಾಲೆ ಜಾ ॥
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ।
[1]ಭಾಗಮನೆಯ್ದೆ ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆಯಂ ॥ ೧೪೮ ॥

ಕಂ ॥ ಬಿಡೆ ಕೆಮ್ಮನೆ ಗರ್ಜಿಪ ತ
ಕ್ಕೆಡೆ ತಗದೆಡೆಯೆನ್ನದೆಱಗುವಸ್ಥಿರನಪ್ಪಾ ॥
ಜಡನಚಿರಪ್ರಭೆ ನಿಮಿಷದೊ
ಳಡಂಗುಗುಂ ಬೆಳಗದೆಂತುಮದು ಸತ್ಪಥಮಂ ॥ ೧೪೯ ॥

ಮ॥ಸ್ರ॥ ಘನಗರ್ಭಾಶಾ ವಧೂ ಪುಂಸವನದೆಸೆವ ತೂರ್ಯಸ್ವನಂ ಚೂಳಿಕಾ ವ।
ರ್ಧನ ಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯ ಘೋಷಂ ವಿದೂರಾ॥
ವನಿಯೊಳ್ ವೈಡೂರ್ಯರತ್ನಂ ಜನಿಯಿಸೆ ನೆಗಟ್ದಾನಂದಭೇರೀ ರವಂ ತಾನೆನೆ।
ರೋದೋಭಾಗದೊಳ್ ಘೂರ್ಣಿಸಿದುದಭಿನವಾಂಭೋದ ಗಂಭೀರ ನಾದಂ ॥

ಕಂ ॥ ಘನನಿನದಂ ಭಯರಸಮಂ
ಜನಿಯಿಸೆ ನೆನೆಯಿಸಿದರಂದು ಕಳಹಂಸ ಕುಟುಂ ॥
ಬಿನಿಯಂ ಪ್ರಿಯ ವಿರಹಾಲಂ
ಬಿನಿಯರ್ ಮೃದುವೆನಿಪ ಮನದೊಳಂ ಗಮನದೊಳಂ ॥ ೧೫೧ ॥

ಮ ॥ ಉಗುಳುತ್ತುಂ ಸಿಡಿಲೆಂಬ ತೋರಕಿಡಿಯಂ ಕಾಲೂಱಿ ಭೂಭಾಗದೊಳ್।
ಗಗನಾಭೋಗಮನೆಯ್ದೆ ನೀಳ್ದ ಘನವೇಣೀ ಬಂಧಮಂ ಬಿರ್ಚಿ ಮಿಂ ॥
ಚುಗಳೆಂಬುಳ್ಕುವದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ।
ಸಗೆಯಂ ಬೆರ್ಚಿಸಿ ಗರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ ॥ ೧೫೨ ॥

ಚ ॥ ಮದ ಮದಿರಾ ಪ್ರಮತ್ತ ಜನತಾಶಯದಂತೆ ಜಡಾಶಯಂ ಕಲಂ।
ಕಿದುದು ಮನೋಜ ದೀಪ ಕಳಿಕಾನನದಂತಿರೆ ಕಾನನಂ ಕಱಂ ॥
ಗಿದುದು ವಿರೋಧಿ ವಾಹಿನಿಗಳಂತಿರೆ ವಾಹಿನಿಗಳ್ ಕಡಂಗಿ ಮಿಾ।
ಱಿದುವನುಕೂಲಮಾರ್ಗಮನಿದೇಂ ಮುಟಿಗಾಲಮುಳುಂಬಮಾದುದೋ ॥

ನವವಿಧಮಪ್ಪ ಕಣ್ಬೊಳೆಪು ರಂಜಿಸೆ ಸಂಚಳಿತಾಂಗ ಹಾರದಿಂ।
ವಿವಿಧ ಘನಸ್ವನಕ್ಕೆ ನವಿಲಾಡೆ ಘನಾಘನಲಕ್ಷ್ಮಿ ಕೇತಕೀ ॥
ಧವಳ ಕಟಾಕ್ಷ ಕಂಡು ರಸಮುಗ್ನತೆಯಿಂ ಪುಳಕಾಂಕುರಂಗಳ।
ತ್ಯವಿರಳಮಾಗೆ ಕೊಟ್ಟಳಚಿರಪ್ರಭೆಯೆಂಬ ಸುವರ್ಣ ಮಾಲೆಯಂ ॥ ೧೫೪ ॥

---

1. ಭಾಗದೊಳಂದು. ಕ. ಘ. ಚ.

ಕಂ ॥ [1]ಇಂದೊವರೆನಿಸಿದ ತನಿರಸ
ದಿಂದೊದವಿದ ನೀಲ ಪಾಟಲಚ್ಛವಿಯಿಂ ನು ॥
ಣ್ಪೆಂದೆಸೆವರನೇರಿಲ ಪ
ಣ್ಣಿಂದರಗಿಳಿಗಾವ್ರುದೊಲವನೇಂ ತೊಲಗಿಸಿತೋ ॥ ೧೫೫ ॥

ಶಾ ॥ ಮಾಕಂದಂ ಫಲಹೀನಮಾದ ಪದದೊಳ್ ಜಂಬೂರಸಾಸ್ವಾದನ ।
ಸ್ವೀಕಾರೋತ್ಸವದಿಂದದಂ ಮಱೆದು ಕೀರಂ ಪ್ರೌಢಿಯಂ ತಾಳ್ದಿದ ॥
ತ್ತೇಕಗ್ರಾಹಿ ಕನಲ್ದು ಚೂತಕಳಿಕಾಸ್ವಾದ ವ್ಯವಚ್ಛೇದದಿಂ ।
ಮೂಕೀಭಾವಮನಪ್ಪುಕೆಯ್ದುದು ವಿವೇಕ ವ್ಯಾಕುಲಂ ಕೋಕಿಲಂ ॥ ೧೫೬ ॥

ಮ॥ಸ್ರ॥ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳವೊಡಲಿಂಬಿಲ್ಲೆನಲ್ ಕೊರ್ವಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬಿಱೆವಿಡೆ ಮೊಲೆಯಿಂ ವತ್ಸ ಪೀತಾವಶೇಷಂ ॥
ಪೊಸಗಾರೊಳ್ತಾರಲೊಳ್ ಕಣ್ಣರೆಮುಗಿದಿರೆ ಸೃಕ್ವಂಗಳಿಂ ಸೂಸೆ ಫೇನ ।
ಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀ ವೃಂದಮಾನಂದದಿಂದಂ ॥

ಕಂ ॥ ಸುರಿವ ಮಱೆಗಳ್ಕಿ ಗಿರಿ ಕಂ
ದರದೊಳ್ ಮಡಗಿಟ್ಟ ತಮ್ಮ ಶಾಬ ಕದಂಬ ॥
ಕ್ಕರೆಗರ್ಚಿ ಹರಿತ ದೂರ್ವಾಂ
ಕುರಮಂ ಕೊಂಡುಯ್ದುದಂದು ಹರಿಣೀಯೂಥಂ ॥ ೧೫೮ ॥

ಭೋರೆಂದೆಱಗುವ ಜಲಧರ
ಧಾರಾ ಪುಷ್ಕರದಿನಾತ್ಮಕರ ಪುಷ್ಕರಮಂ ॥
ಪೂರಿಸಿ ಸಿಂಪಿಣಿಯುಂ ಕಾಂ
ತಾರದೊಳಾಡಿದುವು ಕರಿಗಳುಂ ಕರಿಣಿಗಳುಂ ॥ ೧೫೯ ॥

ಮಾರಂ ಬಿರಯಿಗೊಡರ್ಚಿದ
ಮಾರಣ ಹೋಮಾಗ್ನಿಧೂಮ ಪಟಲಂಗಳವೋಲ್ ॥
ಕಾರ ಮುಗಿಲ್ ನೆಗೆದುವು ರತಿ
ನೀರೆಜೆದೋವಿದ ತಮಾಲ ಷಂಡಂಗಳವೋಲ್ ॥ ೧೬೦ ॥

ಪೋಗಿಂ ಪೋಗಿಂ ಮೊಲ್ಲೆಯ
ಪೂಗಣೆದೊಟ್ಟಂ ಮನೋಭವಂ ಬಿರಯಿಗಳೊಂ ॥
ದಾಗಿರಿಮೆಂದೊದಱುವವೋಲ್
ಸೋಗೆಗಳಂ ಕೆದಱೆ ಸೋಗೆ ಕೇಗಿದುವಾಗಳ್ ॥ ೧೬೧ ॥

1. ಈಂದೊವ. ಚ.

ಕಂ ॥ ಓವದೆ ಕುಡುಮಿಂಚಿನ ಕೈ
ದೀವಿಗೆಗಳನಱಸಿ ಮನ್ಮಥಂ ಬಿರಯಿಗಳಂ ॥
ತೀವಿ ತೆಗೆನೆಱಿದ ಕೇದಗೆ
ಪೂವಿನ [1]ಕೊನೆಗಱಿಯ ಸಲಗಿನಂಬಿನೊಳಿಸುವಂ ॥ ೧೬೨ ॥

ಒಲ್ಲದೆ ಬಿಸತಂತು ಜ್ಯಾ
ವಲ್ಲರಿಯಂ ಕುಸುಮಬಾಣಮಂ ಕರ್ವಿನ ಬ ॥
ಲ್ವಿಲ್ಲಂ ಕಾಮಂ ಕಾಮನ
ಬಿಲ್ಗೊಳಿ ಬಿರಯಿಗಳನಟ್ಟಿ ಪೋದಿದನಾಗಳ್ ॥ ೧೬೩ ॥

ಅಂತತಿಪ್ರಬಲಮಾದ ಘನಸಮಯಮತಿಕ್ರಮಿಸೆ ಪೊಲ್ಲೆಯ ಪೂಗುಡಿ ಪಲ್ಲಟಿಸೆಯುಂ, ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ, ಕಡವು ಪೊಗರಾಗಂಗಿಡೆಯುಂ, ಚಾದಗೆ ನವೋದಕ ಕಣ ಭಕ್ಷಣ ವ್ರತಮನುಜ್ಝಿಸೆಯುಂ, ಸೋಗೆನವಿಲ ಪಿಂಡು ತಾಂಡವಕ್ಕಲಸೆಯುಂ, ಹಂಸಮಂಡಲಿ ಮೃಣಾಳ ಕಾಂಡಮಂ ಸವಿದು ಸೊರ್ಕೆಯುಂ, ಗಿರಿ ದರಿ ವನಕ್ಕೆ ನಿರ್ಝರ ಜಲಾಭಿಷವಣಮನೊಡರ್ಚೆಯುಂ, ಪೊನ್ನೆಪೊಸನನೆಯ ಪಸದನದಿನೆಸೆಯೆಯುಂ, ಪೊಂದಾವರೆಯಮಂದ ಮಕರಂದಮನಳಿಗೆ ಬಱಿಯಟ್ಟೆಯುಂ, ಅತಿಪ್ರಕಾಶಮಾದ ಶರತ್ಪ್ರವೇಶದೊಳ್—

ಕಂ ॥ ಪೆರೆಯಿಕ್ಕಿ ಪೋದುವಚಿರಾಂ
ಶು ರಸನ ಘನಕಾಲ ವಿಷಧರಂಗಳ್ ಗಗನೋ ॥
ದರ ಗಹ್ವರದೊಳಿನಲ್ ತರ
ತರದಿಂ ಪಸರಿಸಿದುವಂದು ಬಿಳಿಯ ಮುಗಿಲ್ಗಳ್ ॥ ೧೬೪ ॥

ಇರುಳಿಂದುವಿನೊಡವೋಗದೆ
ಶರದದ ಬೆಳ್ದಿಂ[2]ಗಳಹಿಮಕರ ಕರ ತಪ್ತಂ ॥
ತೆರಳೆ ಕೆನೆಗಟ್ಟಿದಂತಿರೆ
ಪೊರೆವೊರೆಗೊಂಡಿರೆ ಮುಗಿಲ್ ಪಗಿಲ್ತುವು ನಭದೊಳ್ ॥ ೧೬೫ ॥

ಉ ॥ ಓವದೆ ಮೀನ ಮೇಷ ವೃಷಭಾದಿಗಳಂ ಕ್ರಮದಿಂ ದಿನಾಧಿಪಂ ।
ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಿ ॥
ನ್ನಾವುದು ಕಜ್ಜಮೆಂದು ತೊಲೆಯಂ ಜನರಂಜನೆಗೇಱಿ[3] ರಾಗಮಂ ।
ಭೂವಲಯಕ್ಕೆ ಬೀಱಿದನದೇಂ ಪ್ರಭುಮಾಡಿದ ಮಾಯೆ ಸಲ್ಲದೇ ॥ ೧೬೬ ॥

---

1. ಗಱಿಯಸಿಯಲಗಂಬಿನೊ. ಚ. 2. ಗಳಂದಹಿಮಕರ ತಪ್ತಂ. ಕ. ಚ. 3. ತೇಜ. ಗ. ಘ.

ಕಂ ॥ ಈಙ್ಗಡಲೊಳಗೋಲಾಡುವ
ಮಿಾಙ್ಗಳ ಬಳಗಂಗಳೆಂಬಿನಂ ಶರದದ ಬೆ ॥
ಳ್ದಿಙ್ಗಳೊಳಾಡಿದುವು ಚಕೋ
ರಙ್ಗಳ್ ಚಂದ್ರಾಂಶು ಪೂರ್ಣ ಚಂಚು ಪುಟಂಗಳ್ ॥ ೧೬೭ ॥

ಬಳಸಿ ಸುಟಿದಾಡಿ ಕಾಲ್ವಿಡಿ
ದೆಳಸಿ ಕಲಾಲಾಪವೊದವೆ ಜನನಿಯ ಮೊಲೆವಾ ॥
ಲ್ಗಳನುಣ್ಬ ಶಿಶುಗಳಂತಿರೆ
ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ ॥ ೧೬೮ ॥

ದೂರದೊಳೀಕ್ಷಿಸಿ ತುಂಗಾ
ಕಾರದೊಳೊಂದಿದ ಋಜುತ್ವಮಂ ಪದೆದೆಳಸಿ ॥
ತ್ತಾರಯ್ದು ನೋಡದಂತ
ಸ್ಸಾರತೆಯಂ ಕಾಶ ಕಣಿಶಮಂ ಶುಕಶಾಬಂ ॥ ೧೬೯ ॥

ಆ ಶರತ್ಸಮಯದೊಳ್—

ಮ॥ಸ್ರ॥ ತನಗತ್ಯುತ್ಸಾಹದಿಂ ಯಕ್ಷನ ನೆಗಟ್ದುಚಿತಾಚಾರಮುಂ ಬೇಟ್ಪುದಂ ಸ।
ಮ್ಮನದಿಂದಂ ಮಾಟ್ಪ ಸಂಪ್ರೀತಿಯುಮನವರತಂ ಹರ್ಷಮಂ ಮಾಡೆ ಸಾಹಿ॥
ತ್ಯ ನಟೀ ಶೈಲೂಷನತ್ಯೂರ್ಜಿತ ಶುಭಚರಿತಂ ಸಜ್ಜನಾಧಾರನಿರ್ದಂ।
ದ್ಯುನದೀ ಫೇನ ಪ್ರತಾನ ಪ್ರಥಿತ ಪೃಥುಯಶಂ ಭಾರತೀ ಕರ್ಣಪೂರಂ॥ ೧೭೦ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖಕಿರಣ ಚಂದ್ರಿಕಾಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಶರದ್ವರ್ಣನಂ
—ಸಪ್ತಮಾಶ್ವಾಸಂ—

## ಅಷ್ಟಮಾಶ್ವಾಸಂ

ಕಂ ॥ ಶ್ರೀನಿಲಯನಿಷ್ಟ ವಿಷಯ ಸು
ಖಾನುಭವಂ ಬಡೆದು ದೇವ ನಿರ್ಮಿತಮೆನಿಸಿ॥
ದರ್ಾ ನಗರಿಯೊಳಪ್ರಾಕೃತ
ಮಾನಧನಂ ಸುಖದಿನಿರ್ದನಭಿನವ ಪಂಪಂ ॥ ೧ ॥

ಆ ಶರತ್ಸಮಯ ಸಮನಂತರಂ ಗಮನೋತ್ಸುಕ ಚಿತ್ತನಾದ ರಾಮುಂಗಮೂಲ್ಯ ಮುಕ್ತಾದಾಮಮುಮಂ ಲಕ್ಷ್ಮಣಂಗೆ ಮಣಿಕುಂಡಲಮುಮಂ ಸೀತಾದೇವಿಗೆ ಚೂಡಾರತ್ನಮುಮಂ ವೀಣಾರತ್ನಮುಮನೋಲಗಿಸಿ, ವಿಷಮಮಾದೆಡೆಗೆನ್ನಂ ನೆನೆವುದೆಂದು ವಿನಯಮುಂ ನುಡಿದು ಕಿಱಿದೆಡೆಯಂ ಕಟುಪಿ ಬೀಟ್ಕೊಂಡು ಬಂದು, ಯಕ್ಷಂ ವೈಕುರ್ವಣಪುರಮನದೃಶ್ಯಂಮಾಡಿ ನಿಜ ನಿವಾಸಕ್ಕೆ ಪೋದನಿತ್ತಲಾ ರಾಮ ಲಕ್ಷ್ಮಣರ್ ಸಿಚ್ಚವಯಣಂಗಳಿಂ ವಿಜಯಪುರದ ಬಹಿರುದ್ಯಾನಮನೆಯ್ದಿ ವರ್ಪ ಸಮಯದೊಳ್—

ಉ ॥ ಮುನ್ನಿನ ಕಾಯ್ಪುಗೆಟ್ಟು ದಶದಿಙ್ಮುಖದಿಂ ಪೆಡಮೆಟ್ಟೆ ರಶ್ಮಿಗಳ್ ।
ತನ್ನೊಳಡಂಗೆ ಚಂಡಕಿರಣಂ ವರುಣಾನಿಯ ಕೈಯ ಕೆಂಬರ ॥
ಲ್ಗನ್ನಡಿಯಂತೆ ದಿಟ್ಟಿಗಳವಟ್ಟರೆ ಪೊರ್ದಿದನಬ್ಜಷಂಡ ಸಂ ।
ಛನ್ನಮುನುತ್ಕ ಹಂಸ ಮಧುರಸ್ವನಮುಂ ಬನಮುಂ ರಘೂದ್ವಹಂ ॥ ೨ ॥

ಅಂತತಿಶಯಮಪ್ಪ ವನವಿಲಾಸಮಂ ಸೀತೆಗೆ ತೋಱುತ್ತುಂ ಬಂದದೊಂದು ತಿಳಿಗೊಳದ ತಡಿಯ ತಮಾಲವನ ಲತಾಗೃಹದೊಳ್ ವಿಶ್ರಮಿಸಿರ್ಪುದುಂ—

ಕಂ ॥ ಲತೆವನೆಯೊಳಗಣ ತಣ್ಬುಱ
ಲ ತಾಣದೊಳ್ ಕುಸುಮದೆಸಳ ಪಸೆಯಂ ಸೀತಾ ॥
ಪತಿಗೆ ಸಮೆದಂ ಸುಮಿತ್ರಾ
ಸುತಂ ಸಹೋದರರೊಳಿಂತತಿಸ್ನೇಹಿತರಾರ್ ॥ ೩ ॥

ಸೌಮಿತ್ರಿಯ ನಿರತಿಶಯ
ಪ್ರೇಮಮುನದನಂತುಟೆಂತುಟೆಂಬಂತುಟೆ ನಿ ॥
ದ್ರಾ ಮುದ್ರಿತ ಲೋಚನನಿರೆ
ರಾಮಂ ರಕ್ಷಾನಿಮಿತ್ತಮೆಚ್ಚತ್ತಿರ್ದಂ ॥ ೪ ॥

ಅಂತನತಿದೂರದೊಳನತಿಶಯಮಪ್ಪುದೊಂದು ಮಾಕಂದ ನಂದನದ ಪೊದ ಱೊಳುಪೇಂದ್ರನಿರ್ಪುದುಮತ್ತಲಾ ಪುರದಧಿಪತಿಯಪ್ಪ ಪೃಥ್ವೀಧರಮಹಾರಾಜಂಗ ಮಾತನ ಮಹಾದೇವಿಯಪ್ಪಿಂದ್ರಾಣಿಗಂ ಪುಟ್ಟಿದ ವನಮಾಲೆಯೆಂಬ ಬಾಲೆ—

ಶಾ ॥ ಗಂಡರ್ ಚೆನ್ನಿಗರನ್ನರಿಲ್ಲ [1]ಕಲಿಬಿಲ್ಲಾಳನ್ನನಿಲ್ಲೆಂದು ಮುಂ ।
ಕಂಡರ್ ಬಣ್ಣಿಸೆ ಕೇಳ್ದುಕೇಳ್ದು ಕಿವಿವೇಟಂಗೊಂಡು ಲಕ್ಷ್ಮೀಧರಂ ॥
ಗಂಡಂ ಪೋ ಮೊಱೆಯಲ್ಲರನ್ಯರೆನಗೆಂಬೀ ಪೂಣ್ಕೆಯಂ ಕನ್ನೆ ಕೈ ।
ಕೊಂಡಳ್ ಗಾಡಿಯನೆಯ್ದೆ ನೋಡಿದವರಾರಾತಂಗೆ ಕಣ್ಸೋಲದರ್ ॥ ೫ ॥

ಅಂತು ವನಮಾಲೆ ಬಗೆಯೊಳೊಡಂಬಟ್ಟಂತಾಕೆಯ ಮಾತಾಪಿತೃಗಳುಂ ಲಕ್ಷ್ಮ ಣಂಗೆ ಕುಡುವಮೆಂದು ನಿಶ್ಚಯಂಗೆಯ್ದು ದಶರಥಂ ತಪಂಬಟ್ಟುದುಮಂ ರಾಮ ಲಕ್ಷ್ಮಣರ್ ಪಱವಟ್ಟುದುಮಂ ಚರವಚನದಿನಱಿದಿಂದ್ರಪುರಮನಾಳ್ವ ಸುಂದರಕು ಮಾರಂಗೆ ತನ್ನಂ ಕುಡಲೆಂದಿರ್ಪುದುಮದಂ ಕೇಳ್ದು ವನದೇವತೆಯನರ್ಚಿಸುವೆನೆಂಬ ನೆವದಿನುಪವಾಸಮಿರ್ದು ಕತಿಪಯ ಪರಿಜನಂಬೆರಸು ಮಹಾವಿಭೂತಿಯಿಂ ಬನ ದೊಳಗೆ ಲಕ್ಷ್ಮಣನಿರ್ದ ದೆಸೆಗೆ ಪುಣ್ಯ ಪ್ರೇರಣೆಯಿಂ ಪೋಗಿ ವನದೇವತೆಯನರ್ಚಿಸಿ ಜಾಗರಮಿರ್ದೆಲ್ಲರುಂ ನಿದ್ರಾವಶ ಗತರಾಗೆ ನಿರ್ವೇಗಪರೆ ಶಯ್ಯಾತಲದಿನೆಟ್ಟು—

ಮ ॥ ತನುಗಂಧಂ ಬನಮೆಲ್ಲಮಂ ಬಳಸೆ ನೇತ್ರಜ್ಯೋತ್ಸ್ನೆಯುಂ ರತ್ನಮಂ ।
ಡನ ಬಾಲಾತಪಮುಂ ತಮಕ್ಕೆ ತವಿಲಂ ತರ್ಪನ್ನಮೇೞ್ತರ್ಪಳಂ ॥
ವನಲಕ್ಷ್ಮೀವಧುವೋ ಸುರಪ್ರಮದೆಯೋ ವಿದ್ಯಾಧರಸ್ತ್ರೀಯೊ ಪೇ ।
ೞೆನುತುಂ ಕಣ್ಣೆಮೆಯಿಕ್ಕದೀಕ್ಷಿಸಿದನಾ ಸ್ತ್ರೀರತ್ನಮಂ ಲಕ್ಷ್ಮಣಂ ॥ ೬ ॥

ಅಂತು ನೀಡುಂ ಭಾವಿಸಿ ನೋಡಿ—

ಮ॥ಸ್ರ॥ ಬನಮೆತ್ತಲ್ ಬಾಲೆಯೆತ್ತಲ್ ನಡುವಿರುಳೊಡನಿಲ್ಲೊರ್ವರುಂ ಭೀತಿಗೆಟ್ಟಾ ।
ವ ನಿಮಿತ್ತಂ ಬಂದಳೆಂಬೀ ತೆಱನನಱಿವೆನಾನೆಂದು ಲಕ್ಷ್ಮೀಧರಂ ಬೆ ॥
ನ್ನನೆ ಪೋದಂ ಪೊಕ್ಕಳಾ ಕನ್ನೆಯುಮವನಿ ತಲಾಲಿಂಗಿತಾನೇಕ ಶಾಖಾ ।
ಜನಿತ ಧ್ವಾಂತಾಂತರಾಲ ಪ್ರಬಲ ವಟಮನೇಗೆಯ್ಯದುದ್ವೇಗ ವೇಗಂ ॥ ೭ ॥

ಅಂತಾ ಮರದಡಿಯೊಳಾಕೆ ನಿಂದು ರಾಮಾನುಜನಪ್ಪ ಲಕ್ಷ್ಮಣಕುಮಾರ ನೆತ್ತಾನುಮೀ ಬನಕ್ಕೆ ವಿನೋದದಿಂ ಬಂದನಪ್ಪೊಡೀ ವಟ ನಿವಾಸಿನಿಯರಪ್ಪ ದೇವತೆ ಯರಾರಾನುಮುಳ್ಳೊಡೆ ಲಕ್ಷ್ಮಣಕುಮಾರ! ವನಮಾಲೆ ನಿನಗಲ್ಲದೆ ವಧುವಾಗೆನೆಂದು ನೇಲ್ದು ಸತ್ತಳೆಂಬಿದಂ ಮಱೆಯದಱಿಪುವುದೆಂದು ಕರುಣವಾಗೆ ನುಡಿದು—

---

1. ಕಲಿಗಳ್ ಬಿಲ್ಲಾಳ್ಗಳಿಲ್ಲೆಂದು. ಗ.

ಚ ॥ ವ್ರತಿಗಿನಿಸಪ್ಪೊಡಂ ಸೆಡೆಯದೀ ಭವದೊಳ್ ದೊರೆಕೊಂಡುದಿಲ್ಲ ದು ।
ಷ್ಕೃತದೊದವಿಂ ಮನಃಪ್ರಿಯ ಕರಗ್ರಹಣಂ ಮಱುಮೆಯ್ಯೊಳಾದೊಡಂ ॥
ಪತಿಯೆನಗಕ್ಕೆ ಲಕ್ಷ್ಮಣನೆನುತ್ತುಮವಳ್ ಕೊರಲೊಳ್ ತೊಡರ್ಚಿದಳ್ ।
ಲತೆಯನಿದೇವೊಗಳ್ವುದೆರಡಿಲ್ಲದ ನಲ್ಮೆಯನಾ ಲತಾಂಗಿಯಾ ॥ ೮ ॥

ಅನಂತರಂ—

ಕಂ ॥ ಬೇಗಂ ಬಂದಾ ವಧು ನೇ
ಲ್ವಾಗಳ್ ನೀನಜಸುವಾತನಾನುಟಿ ಮರಣೋ ॥
ದ್ಯೋಗಮನೆಂದು ಘನಧ್ವನಿ
ಸೋಗೆಯ ಕಿವಿಸಾರ್ದುದೆನಿಸಿ ಕೃಷ್ಣಂ ನುಡಿದಂ ॥ ೯ ॥

ಅಂತು ನುಡಿದು—

ಕಂ ॥ ವನಮಾಲಾ ಮಂಡನನಾ
ವನಮಾಲೆಯುನಟ್ಟಿಱಿಂದೆ ತಟ್ಟೈಸಿದನ ॥
ಬ್ಜಿನಿಯಂ ಕರಂಗಳಿಂದ
ಬ್ಜಿನೀಪ್ರಿಯಂ ಚಂಡಭಾನು ತಟ್ಟೈಸುವವೋಲ್ ॥ ೧೦ ॥

ಅಂತು ನೇಲ್ವಾಕೆಯುಂ ತಟ್ಟೈಸಿ ನೆಗಪಿ—

ಕಂ ॥ ಓಪಳ ಕೊರಲೊಳ್ ಕೋದ ಲ
ತಾ ಪಾಶಮನಂಬುಜೋದರಂ ಕಳೆದು ಸಮು ॥
ದ್ದೀಪಿತ ರಾಗಂ ಮೋಹ ಲ
ತಾ ಪಾಶಮನೊಡನೆ ತನ್ನ ಕೊರಲೊಳ್ ಕೋದಂ ॥ ೧೧ ॥

ಆಗಳತಿ ಸಂಭ್ರಮಮನಪ್ಪುಕೆಯ್ದು—

ಮ ॥ ಹರಿನೀಲಚ್ಛವಿ ಪುಂಡರೀಕ ನಯನಂ ವಿಸ್ತೀರ್ಣ ವಕ್ಷಸ್ಸ್ಥಲಂ ।
ಪರಿವೃತ್ತಾಯತ ಬಾಹು ಪೀವರ ನಿತಂಬಂ ಗಂಡರೊಳ್ ನೀಱನೆಂ ॥
ಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು ಕಣ್ಣಾರ್ವಿನಂ ।
ಹರಿಯಂ ನೋಡಿದಳಾಕೆ ತನ್ನ ಕಡೆಗಣ್ಗಳ್ ಬೀಱೆ ಬೆಳ್ದಿಂಗಳಂ ॥ ೧೨ ॥

ಕಂ ॥ ಬೆಮರ್ವನಿ ಕೈವಿಗೆ ಲಜ್ಜಾ
ನಮಿತಾನನೆ ನಿಮಿರ್ದ ಸುಯ್ಗಳೊಡನೆ ಕಟಾಕ್ಷಂ ॥

ನಿಮಿರ್ದೆಸೆಯೆ ನೋಡಿದಳ್ ಸಂ
ಭ್ರಮದಿಂ ವನಮಾಲೆ ಬಾಲೆ ಪೀತಾಂಬರನಂ ॥ ೧೩ ॥

ಆ ಸಮಯದೊಳ್ ಲಕ್ಷ್ಮಣಕುಮಾರನುಮಾಕೆಯಂ ನೋಡದಂತು ನೋಡೆ—

ಕಂ ॥ ಪಲ್ಲಟಿಸದೆ ಕಣ್ಗಳ್ ನಿಂ
ದಲ್ಲಿಯೆ ನಿಲೆ ತಮ್ಮೊಳೆಳಸಿ ನೋಡುವ ಪದದೊಳ್ ॥
ಫುಲ್ಲಶರಂ ಕೆಳವಾಡಿಯ
ಬಿಲ್ಲಂತಿರ್ದೆಸಗದರಲ ಸರಲಂ ಸುರಿದಂ ॥ ೧೪ ॥

ಚ ॥ ನಡುವಿರುಳಾರುಮಿಲ್ಲದೆಡೆಯೊಳ್ ಕೊರಲೊಳ್ ವಧು ಕೋದು ಬಳ್ಳಿಯಂ ।
ಮಡಿಯಲೊಡರ್ಚೆ ಲಕ್ಷ್ಮಣನಿಮಿತ್ತದಿ[1]ನಾತನೆ ದೈವದೊಂದೊಡಂ ॥
ಬಡಿಕೆಯಿನಾಗಳಾ ಯಿರುಳೊಳಲ್ಲಿಗೆ ತಾಂ ಪಱವಟ್ಟು ಬಂದು ಕ ।
ಯ್ವಿಡಿದೊಡೆ ಸಾವು ಮಾಣ್ದುದೆನೆ ಸಾಯದರಂ ಕೊಲಲಾರುಮಾರ್ಪರೇ ॥೧೫॥

ಅನಂತರಮಾ ಕಾಂತೆವೆರಸು ಲಕ್ಷ್ಮಣಂ ನಿಜಾಗ್ರಜನಿರ್ದ ಲತಾಗೃಹಕ್ಕೆ ಪೋದನಿತ್ತಲಾ ವನಮಾಲೆಯ ಕೆಳದಿಯರುಮಾಕೆಯಂ ಶಯ್ಯಾತಲದೊಳ್ ಕಾಣದೆ ಬೆಗಡುಗೊಂಡಾ ಬನದೊಳ್ ತೊಳಲ್ದಱಸುತ್ತುಂ ಬಂದಲ್ಲಿರ್ದಳಂ ಕಂಡಲ್ಲಿರ್ದ ಮಹಾನುಭಾವರಂ ರಾಮಲಕ್ಷ್ಮಣರೆಂದಱಿದು ವೈಗಾಪಿನವರ್ ಪರಿತಂದು ತನಗಱಿಪುವುದುಂ ಪೃಥ್ವೀಧರ ಮಹಾರಾಜಂ ಕೇಳ್ದು ಪುರದೊಳಷ್ಟಶೋಭೆಯಂ ಮಾಡಿಸಿ ಚತುರಂಗಬಲಂಬೆರಸು ಬೇಗಮಿದಿರ್ವೋಗಿ ರಾಜಭವನಕ್ಕುಯ್ದು ಭ್ಯಾಗತ ಪ್ರತಿಪತ್ತಿಯಿಂ ಮನ್ನಿಸಿ ಶುಭದಿನ ಮುಹೂರ್ತದೊಳ್—

ಕಂ ॥ ಉತ್ತಮ ಕನ್ಯಾರತ್ನಮ
ನಿತ್ತಂ ಪೃಥ್ವೀಧರಂ ನರೇಂದ್ರೋತ್ತಮನ ॥
ತ್ಯುತ್ತಮ ವರನೆನಿಸಿದ ಪುರು
ಷೋತ್ತಮ ದೇವಂಗೆ ಕೂಸುಗುಡಲಾರ್ಪಡೆವರ್ ॥ ೧೬ ॥

ಅಂತು ವನಮಾಲೆಗಂ ಚಕ್ರಪಾಣಿಗಂ ಪಾಣಿಗ್ರಹಣಮಪ್ಪುದುಮಾ ಸಮಯದೊಳೊರ್ವಂ ನಂದ್ಯಾವರ್ತಪುರಮನಾಳ್ವತಿವೀರ್ಯನ ದೂತಂ ಬಂದು ದೂರಾವನತ ಮಸ್ತಕಂ ಸಮಸ್ತ ರಾಜಲೋಕಮನೇಕಾಕ್ಷೌಹಿಣೀಬಲಂ ಬೆರಸು ತನ್ನೊಳ್ ಕೂಡೆ ಭರತನ ಮೇಲೆ ನಡೆಯಲೆಂದೆಮ್ಮರಸಂ ನಿಮಗೆ ಬಱಿಯಟ್ಟಿದ ರಾಜಾದೇಶಮೆಂದು ಪೃಥ್ವೀಧರಂಗೆ ಬಿನ್ನವಿಸೆ ಕೇಳ್ದು—

---

1. ನಾಕೆಯ. ಗ. ಚ.

ಕಂ ॥ ಮುಳಿಸೆಂಬ ವಿಷದ ಬಳ್ಳಿಯ
ತಳಿರೆನೆ ಪೊಳೆವಧರ ಮಣಿಯ ಮೇಲೆ ಮುಗುಳ್ವ ॥
ಜ್ವಳಿಪಂತೆ ಮುಗುಳ್ನಗೆ ಪ
ಜ್ವಳಿಸುವಿನಂ ಚಕ್ರಿ ನೋಡಿ ದೂತನ ಮೊಗಮಂ ॥ ೧೭ ॥

ಭರತನುದ್ಯೋಗಮೇನೆಂಬುದುಮಾತನತಿವೀರ್ಯವಲ್ಲಭನಟ್ಟಿದ ದೂತಂ ವಿನೀತಾಪುರಮಂ ಪೊಕ್ಕು ಭರತನಂ ಕಂಡು ನಿಮ್ಮನೆಮ್ಮರಸಂ ತನಗಾಳಾಗಿ ಸುಖಮಿರ್ಪುದೆಂದು ಬೆಸಸಿಯಟ್ಟಿದನಿದು ನಿಮಗುೞುವ ಕಜ್ಜಮದೆಂತೆನೆ—

ಚ ॥ ಬಗೆಯದೆ ಕಾಳೆಗಕ್ಕೆ ಬಗೆದಪ್ಪೊಡೆ ನಿಮ್ಮಳವಲ್ಲ ವಂಕದಾ ।
ನೆಗೆ ತುರಗಕ್ಕೆ ತೇರ್ಗೆ ಪವಣಿಲ್ಲ ಪದಾತಿಗೆ ಮೇಱೆಯಿಲ್ಲದಂ ॥
ಬಗೆದುಱದಿರ್ಪ ಗಾಂಪನುಟಿದಾಳ್ವಿಸಗೆಯ್ವುದು ಬಾಳ್ವ ಬಟ್ಟೆಯಂ ।
ಬಗೆವುದು ಕೇಱ ಮಿಾಱುವವರಾರತಿವೀರ್ಯನ ಬಾಹುವೀರ್ಯಮಂ ॥ ೧೮ ॥

ಎಂದು ಗದಱ ಗರ್ಜಿಸಿದ ದೂತನ ಮಾತಿಂಗೆ ಶತ್ರುಘ್ನಂ ಮುಳಿದು—

ಚ ॥ ಕನಸಿನೊಳಪ್ಪೊಡಂ ಭಯದ ಲೋಭದ ಮಾತು ಮನು ಪ್ರಸೂತರೊಳ್ ।
ಜನಿಯಿಸದಲ್ಪವೀರ್ಯನತಿವೀರ್ಯವೆಸರ್ ತನಗೇವುದಾಹವ ॥
ಕ್ಕೆನಗಿದಿರಾಗಿ ನಿಲ್ವನಿತು ದೋರ್ಬಲಮುಳ್ಳೊಡೆ ತಂದು ಕಾದಿಸಾ ।
ತನನೆಲೆ ದೂತ ಬಿಲ್ವಿಡಿಯಲೀವೆನೆ ಪುಲ್ವಿಡಿವಂತು ಮಾಡುವೆಂ ॥ ೧೯ ॥

ಎಂದೊದಱ ದೂತನಂ ಪರಿಭವಿಸಿ ಕಳೆವುದುಂ—

ಕಂ ॥ ಭರತನೊಳತಿವೀರ್ಯಂ ಸಂ
ಗರಕ್ಕೆ ಮೇಲೆತ್ತಿ ಬಂದನೆಂಬಪವಾದಂ ॥
ಪರೆದಂದು ರಘುಕುಲಕ್ಕದೆ
ಪರಾಭವಂ ಪರಿಭವಕ್ಕೆ ಕೋಡೆರಡೊಳವೇ ॥ ೨೦ ॥

ಎಂದು ಮನದೊಳ್ ನಿಶ್ಚಯಿಸಿ ಭರತಂ ಶತ್ರುಘ್ನಂಬೆರಸು ಚತುರಂಗಬಲಸಮೇತನಾಗಿ ನಂದ್ಯಾವರ್ತಪುರಕ್ಕೆತ್ತುವುದುಮಾಸಮಯದೊಳ್ ಮಿಥಿಲೆಯನಾಳ್ವ ಕನಕನುಮುಜ್ಜೆಣಿಯನಾಳ್ವ ಸಿಂಹೋದರನುಮಸಂಖ್ಯಾತಬಲಂಬೆರಸು ತಮ್ಮೊಳ್ ಬಂದುಕೂಡಿದರಿತ್ತ ಪರಿಭವಂಬೆತ್ತುಬಂದ ಚರನ ವಚನಮನತಿವೀರ್ಯಂ ಕೇಳ್ದು ಘನಗರ್ಜನೆಯಂ ಕೇಳ್ದ ಸಿಂಹದಂತೆ ಮುಳಿದು ಭರತಂಗಿದಿರೆತ್ತಿ ನಡೆಯಲೊಡರಿಸಿದನೆಂಬವಾರ್ತೆಯಂ ವಾಯುಗತಿವೆಸರ ದೂತನಱಪೆ ಪೃಥ್ವೀಧರಂ ದೂತನಂ ಮನ್ನಿಸಿ ಕಱಪಿ ರಾಘವನ ಮೊಗಮಂ ನೋಡಿ ಕಾಳೆಗಮನಾಂ ಪೋಗಿ ಮಾಣಿಸುವೆ

ನೆಂಬುದುಂ ಲಕ್ಷ್ಮಣನದರ್ಕಾನೆ ಸಾಲ್ವೆನೆಂದು ಮನಃಪವನ ಜವಮುಳ್ಳ ವಾಜಿಗಳಂ ಪೂಡಿದ ರಥಮಂ ತರಿಸಿ ಮೂವರುಮೇಱಿ ಪೋಗಿ ನಂದ್ಯಾವರ್ತ ನಗರದ ಪೊಱ ವೊಟಲೊಳ್ ಬೀಡಂ ಬಿಟ್ಟಿರ್ದ ಸಮಯದೊಳ್—

ಕಂ ॥ ಅತಿವೀರ್ಯನ ಶೌರ್ಯಮನ
ಪ್ರತಿಹತಮಂ ಭರತನಾರ್ ಕುಮಾಱಿಂ ಗೆಲಲು ॥
ದ್ಧತನಂ ಮುನ್ನಮೆ ರಣದೊಳ್
ಹತಪ್ರಭಂ ಮಾಡಿ ಗೆಲ್ವ ಬಗೆಯಂ ಬಗೆಯಿಂ ॥ ೨೧ ॥

ಎನೆ ಜನಕಜೆಗೆ ಮುಕುಲಿತ ಕರ ಸರೋಜನಾಗಿ—

ಕಂ ॥ ಜನನಿ ಬಱುಗಯ್ಯೊಳವನಂ
ಮನೆದೊಟ್ಟಿಂ ಪಿಡಿದು ತರ್ಪ ತೆಱದಿಂ ತಂದ ॥
ಣ್ಣನ ಕಾಲ್ಗೆಱಗಿಸುವೆಂ ಬಗೆ
ವಸಿತುವರಮುದಾವ ಗಹನವೆಂದನುಪೇಂದ್ರಂ ॥ ೨೨ ॥

ಎನೆ ರಾಘವಂ ಕೇಳ್ದು ಭರತಂಗತಿವೀರ್ಯನಂ ನಿಯಮಿಸುವುದಾವ ಗಹನ ಮೆನೆ ಲಕ್ಷ್ಮಣನೆತ್ತಾನುಂ ಭರತನುಂ ಸೋಲ್ತನಪ್ಪೊಡೆ ನಮಗೆ ಕುಲಪರಿಭವ ಮಕ್ಕುಮೆಂಬುದುಂ ರಾಘವನೆಂದನಿಂದಿಂಗೆ ಮೂಱನೆಯ ದಿವಸದಂದು ಶತ್ರುಘ್ನಂ ನಂದ್ಯಾವರ್ತಪುರಕ್ಕೆ ಪರಿಯಿಟ್ಟು ಪಲಬರರಸುಮಕ್ಕಳಂ ಕೊಂದು ಪೊಱವೊಟ ಲೊಳಿರ್ದೇೞ್ನೂಱಾನೆಯುಮನಱುವತ್ತು ಸಾಸಿರ ಕುದುರೆಯುಮಂ ಪಿಡಿದುಯ್ದ ನೆಂದು ಪೇೞ್ವುದುಂ ಮಱುದೆವಸಂ ಪುರಮಂ ಪೊಕ್ಕೊಂದು ಜಿನಮಂದಿರದೊಳಾಯುಧ ಸಮೇತಂ ಸೀತೆಯುಮಂ ರಘುವೀರನುಮನಿರಿಸಿ ಬಂದು—

ಚ ॥ ಅದಟನತಿಪ್ರಚಂಡ ಬಲನೆನ್ನದೆ ದುರ್ಧರ ದೋಸ್ಸಹಾಯದಿಂ ।
ಕದನ ಧುರೀಣನೊಲ್ಲದೆ ಧನುರ್ಲತೆಯಂ ನಿಜ ದಿವ್ಯ ಬಾಣಮಂ ॥
ಗದೆಯನದೇನುದಾತ್ತನೊ ಜನಾರ್ದನನೊರ್ವನೆ ಪಾಶ ದಂಡಮಿ ।
ಲ್ಲದ ಜವನಂತೆ ನಿಂದನತಿವೀರ್ಯನ ರಾಜಗೃಹೋಪಕಂಠದೊಳ್ ॥ ೨೩ ॥

ಆಗಳಬ್ಜೋದರನಿದಿರ್ಗೆ ಬಂದಾಗಮನ ವೃತ್ತಾಂತಮನಱಿದು—

ಕಂ ॥ ಪಡಿಯಱನೊರ್ವಂ ಬಂದಾ
ಗಡೆ ಭರತನ ದೂತನಿರ್ದಪಂ ಬಾಗಿಲೊಳೆಂ ॥
ದೊಡೆ ಬರವೇೞೆಂದಂ ಬಱಿ
ಸಿಡಿಲಂ ಬೞಿಯಟ್ಟಿ ಬರಿಸುವಂತತಿವೀರ್ಯಂ ॥ ೨೪ ॥

ಅನಂತರಂ ಬಂದು—

ಕಂ॥ ಎಱಗದೆ ವಜ್ರಸ್ತಂಭದ
ತೆಱದಿಂದಿರೆ ಮುಳಿಸು ಕಣ್ಣ ಕಿಸುಸೆರೆಯಿಂ ಕ॥
ಣ್ದೆಱೆಯೆ ನಡೆ ನೋಡಿ ಬಂದುದ
ನಱಪೆನೆ ದುಂದುಭಿ ಗಭೀರ ರವನಿಂತೆಂದಂ ॥ ೨೫ ॥

ಉ॥ ಎತ್ತಿ ಬರುತ್ತುಮಿರ್ದ ನಿದಿರಾಂತವರಾರ್ ಭರತೇಶ್ವರಂಗೆ ಭೂ।
ಪೋತ್ತಮನಾಜ್ಞೆಯಂ ತಲೆಯೊಳಾಂತು ಪದಾನತನಾಗಿ ಕಪ್ಪಮಂ॥
ತೆತ್ತುಱ ಗಂಡುಗೆಯ್ಯದಿಱವಿಟ್ಟಗೆ [1]ಜಟ್ಟಿಗನಾಗಿ ಬಾಲ್ವುದ।
ತ್ಯುತ್ತಮ ಪಕ್ಷಮಾಂತೊಡಪವರ್ತಿಸುಗುಂ ಕ್ಷಣದಿಂ ನಿಷೇಕಮಂ ॥ ೨೬ ॥

ಕಂ॥ ಆಳಾಗಿ ಬರ್ದುಂಕದೆ ಬಿ
ಲ್ಲಾಳಾಗಿ ಬರ್ದುಂಕಲೊಡರಿಪೊಡೆ ಭರತನ ಕೂ॥
ರ್ವಾಳ ನಸುಮುಸೆಗೆ ಬಾಲಮೃ
ಣಾಳಂ ರಿಪುನೃಪರ ಕಂಠನಾಳಂ ಧುರದೊಳ್ ॥ ೨೭ ॥

ಎಂಬುದುಂ ಕಡುಮುಳಿದು—

ಕಂ॥ ಸಿಡಿಲ ದನಿಗೇಳ್ದ ಸಿಂಹಂ
ಸಿಡಿಲ್ದು ನೆಗೆವಂತೆ ಗಜರಿ ಗರ್ಜಿಸಿ ಬಾಳಂ॥
ಜಡಿದೆಯ್ದಿ ಪೊಯ್ವ ಕೈಯುಂ
ಪಿಡಿದಾತನ ಬೀರಸಿರಿಯುಮಂ ಕೈವಿಡಿದಂ ॥ ೨೮ ॥

ಶಾ॥ ಮುಂಗಯ್ಯಂ ಪಿಡಿದೊತ್ತಿ ಕೈಯ ಕರವಾಳ್ ಬೀೞ್ತರ್ಪಿನಂ ವಕ್ತ್ರರಂ।
ಧ್ರಂಗಳ್ ಕಾಱುವಿನಂ ಕದುಷ್ಣ ರುಧಿರಾಂಭಃಪೂರಮಂ ಪೊಯ್ದು ಪೊ॥
ಯ್ದಂಗಯ್ಯಿಂ ಮೊಗಮಂ ಮುಸುಂಬು ಬಿಱುಬಿದ್ದಂಬೋಗೆ ವೀರಂಗೆ ದೋ।
ರ್ಭಂಗಂಮಾಡಿದನೇನಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ ॥ ೨೯ ॥

ಅಂತು ಪರಿಭವಿಸಿ—

ಕಂ॥ ಭರತನೊಳಿದಿರ್ಚಿ ಕಾದುವ
ಭರವಶದಿಂ ಬಂದ ಕಲಿಗಳಿರ್ದೆಡೆಯಿಂ ಸಂ॥
ಚರಿಸಿದೊಡೆ ಮೆಟ್ಟಿ [2]ಕೀೞ್ವಿಂ
ಶಿರಮಂ ಕೀೞ್ವಂತೆ ವನ್ಯಗಜಮಂಬುಜಮಂ ॥ ೩೦ ॥

---

1. ಬಿಟ್ಟಿಗ. ಚ. 2. ಸೀಳ್ವಿಂ. ಚ.

ಎಂದು ಗಜಱಿ ಗರ್ಜಿಸುವುದುಮತಿವೀರ್ಯನೊಳ್ ಕೂಡಿ ಭರತನೊಳ್ ಕಾದಲೆಂದು ಬಂದನ್ಯರಾಜನ್ಯಕದೊಳ್ ವಿಜಯನಿವನಜೇಯನೆಂದು ಮನಂಗುಂದೆಯುಂ, ಶಾರ್ದೂಲಂ ಶಾರ್ದೂಲನಂ ಕಂಡ ತೋಳನಂತೊಳಸೋರ್ದು ಸಮರಮುಖ ವಿಮುಖನಾಗೆಯುಂ, ಮೃಗಧ್ವಜಂ ಮೃಗಧ್ವಜನೆನಿಸೆಯುಂ, ರಣೋರ್ಮಿ ಭಯರಸೋರ್ಮಿಯಂ ನೂರ್ಮುಡಿಸೆಯುಂ, ಕಲಭಂ ಕುಸುಮಿತ ಚಂಪಕಾನೋಕಹಮಂ ಕಂಡಳಿಕಲಭದಂತೆ ಮೊಗಂ[1]ದಿರಿಪೆಯುಂ, ಕೇಸರಿ ಕೇಸರಿಯಂ ಕಂಡ ಕಾಡಾನೆಯಂತೋಸರಿಸೆಯುಂ, ವಜ್ರಧರನಧರನಾಗೆಯುಂ, ಭದ್ರಂ ಭದ್ರಗಜದ ಕಣ್ಮುಟ್ಟಿನೊಳಿರ್ದ ಫಣಿಯಂತೆ ಮಣಿಯೆಯುಂ, ಸುಭದ್ರನಭದ್ರನೆನಿಸೆಯುಂ, ನಂದನಂ ರಣರಸಾಸ್ವಾದನಾನಂದನಮನುಟಿಯೆಯುಂ, ಅವಾರ್ಯವೀರ್ಯಂ ಶೌರ್ಯಂಗಿಡೆಯುಂ, ಮಾರಿದತ್ತನನುದಾತ್ತನೆನಿಸೆಯುಂ, ಲಂಬೋಷ್ಠಂ ರಕ್ಷರಕ್ಷ ರವ ಮುಕ್ತೋಷ್ಠನಾಗೆಯುಂ, ಪ್ರೋಷ್ಠಿಲಂ ಪ್ರತಿಷ್ಠೆಗಿಡೆಯುಂ, ಮತ್ತಂ ಪೆಱರುಮಱಿಕೆಯ ನರೇಂದ್ರನಂದನರ್ ಪಾವಡರ್ದ ಪಂದೆಯಂತೆವೆಮಿಡುಕದಿರೆಯುಂ—

ಮ ॥ ಅತಿವೀರ್ಯಂ ಹತವೀರ್ಯನಾದನಿವನಂ ಕೊಂಡುಯ್ದಪೆಂ ದೋಷ ದೂ ।
ಷಿತನಂ ದೋರ್ಬಲಮುಳ್ಳರುಳ್ಳೊಡೆನಗಡ್ಡಂಬರ್ಪುದೆಂದಭ್ರ ಗ॥
ರ್ಜಿತಮೆಂಬಂತಿರೆ ಗರ್ಜಿಸುತ್ತುಮೆಟಿದುಯ್ದಂ ಲಕ್ಷ್ಮಣಂ ಹಸ್ತ ಪಾ ।
ದ ತಲೋದ್ಘಟ್ಟನದಿಂ ಪಡಲ್ವಡಿಸುತುಂ ಮಾಱಾಂತ ಸಾಮಂತರಂ ॥ ೩೧ ॥

ಕಡುಕೆಯ್ವಂ ಭರತಂಗಿವಂ ಗಡ ರಣಕ್ರೀಡಾ ರಸಕ್ಕಟ್ಟಿಗಂ ।
ಗಡ ಸಾಕೇತ ಪುರಾಧಿರಾಜ ಪದಮಂ ಕೈಕೊಳ್ವೆನೆಂದೆತ್ತುವಂ ॥
ಗಡ ದುರ್ಲೇಖಮನಟ್ಟುವಂ ಗಡೆನುತುಂ ಱೋಡಾಡಿ ಪುಲ್ಗೋಡನಂ ।
ಪಿಡಿದುಯ್ವಂತೆವೊಲುಯ್ದನಪ್ರತಿಹತಂ ಸೌಮಿತ್ರಿ ಶತ್ರುಂಜಯಂ ॥ ೩೨ ॥

ಅಂತತಿವೀರ್ಯನನಂತವೀರ್ಯನೆಟಿದು ತಂದೊಪ್ಪಿಸುವುದುಂ—

ಶಾ ॥ ಏವೇಟ್ವೆಂ ಬಲನಿಂ ಕೃಪಾಳು ಪೆಱರಾರಾದ್ರೋಹನಂ ಕಂಡು ರೋ ।
ಷಾವೇಶಂ ತನಗಾದುದೇ ಭರತನಂ ಶತ್ರುಘ್ನನಂ ಕಂಡು ನಂ ॥
ದ್ಯಾವರ್ತಕ್ಕಧಿರಾಜನಾಗಿ ಸುಖದಿಂ ನೀನಿರ್ಪುದೆಂದಂ ಪರಾ ।
ರ್ಥಾವಷ್ಟಂಭಮನಪ್ಪುಕೆಯ್ದವರ್ಗೆ ಮೈತ್ರೀಭಾವಮಾಶ್ಚರ್ಯಮೋ ॥ ೩೩ ॥

ಕಂ ॥ ಅರಸುತನದಟ್ಟಿ ಪಿಂಗಿದು
ದು ರಾಜ್ಯಮುಂ ನಿಮ್ಮ ಮೆಚ್ಚಿದವರ್ಗೀವುದಿದಂ ॥
ಪರಿಹರಿಸಿದೆನಾನಿನ್ನೆಂ
ದು ರಾಮಲಕ್ಷ್ಮಣರನಾ ನೃಪಂ ಕ್ಷಮೆಗೊಂಡಂ ॥ ೩೪ ॥

---

1. ದಿರಿಯೆಯುಂ. ಚ.

ಅಂತು ನಿಶ್ಶಲ್ಯನಾಗಿ ಪೋಗಿ ಶ್ರುತಧಾರಣ ಭಟ್ಟಾರಕರ ಪದಪಾರ್ಶ್ವ ದೊಳ್—

ಕಂ॥ ಬೆರ್ಚಿಸೆ ತನ್ನಂ ಕೃಷ್ಣಂ
ಬೆರ್ಚಿಸಿದಂ ಕೃಷ್ಣತನಯನಂ ಜಿನರೂಪಿಂ॥
ಕೆರ್ಚೇರಿದ ವೈರಾಗ್ಯದ
ಪೆರ್ಚಿಂ ಮುಯ್ಯಂ ಮಗುಳ್ಚುವಂತತಿವೀರ್ಯಂ ॥ ೩೫ ॥

ಚ॥ ನಿಜಭುಜ ವೀರ್ಯ ಹಾನಿಗೆ ತಪಂಬಡೆ ತಂದೆ ಮಗಂಗೆ ರಾಜ್ಯಮಂ।
ವಿಜಯರಥಂಗೆ ರಾಮನೊಸೆದೀವುದುಮಾತನ ತಂಗೆಯೊಳ್ ಜಗ॥
ದ್ವಿಜಯಿಗೆ ಲಕ್ಷ್ಮಣಂಗೆ ರತಿಮಾಲೆಯೊಳಾಯ್ತು ವಿವಾಹಮುತ್ಸವ।
ಧ್ವಜ ಮಣಿತೋರಣಂ ತುಱುಗೆ ಘೂರ್ಣಿಸೆ ಮಂಗಲತೂರ್ಯ ನಿಸ್ವನಂ॥ ೩೬ ॥

ಆ ವಿವಾಹ ವಿಧಾನಾನಂತರಂ ನಂದ್ಯಾವರ್ತ ನಗರಮನಗಲ್ದು ನಿಚ್ಚವಯಣಂಗಳಿಂ ಕ್ಷೇಮಾಂಜಲಿ ಪುರಕ್ಕೆ ಬಂದಾ ಪೊಟಿಲ ಪೊಱವೊಟಿಲ ಮನೋಹರೋದ್ಯಾನ ದೊಳ್ ದಾಶರಥಿಯುಂ ವೈದೇಹಿಯುಂ ವಿಶ್ರಮಿಸಿರ್ಪುದುಂ, ತತ್ಪುರ ನಿರೀಕ್ಷಣ ನಿಮಿತ್ತಂ ಲಕ್ಷ್ಮಣಂ ರಾಜವೀಥಿಯೊಳಗನೆ ಬರುತ್ತುಮಿರೆ ಪಲರುಮೊಂದೆಡೆಯೊಳಿರ್ದು ಜಿತಪದ್ಮೆಯ ಪಡೆಮಾತಂ ನುಡಿಯುತ್ತುಮಿರೆ ಕೇಳ್ದು ಲಕ್ಷ್ಮಣಂ ಜಿತಪದ್ಮೆಯೆಂಬಳಾರ್ಗೆಂಬುದುಮಾತನ ಸಮುದ್ರಘೋಷಮನಜನಿಸುವ ಗಂಭೀರ ಸ್ವರದೊಳಂ ಭದ್ರಾಕಾರದೊಳಮಿಾತಂ ಕಾರಣಪುರುಷನಾಗಲೆವೇಟ್ಕುಮೆಂದು ನಿಶ್ಚಯಿಸಿ ಪುರಾಣ ಪುರುಷನೊರ್ವನಿಂತೆಂದಂ—

ಕಂ॥ ಜನಪತಿ ಶತ್ರುಂದಮನಾ
ತನರಸಿ ಕನಕಾಭೆ ತತ್ತನೂಜೆ ಸರೋಜಾ॥
ನನೆ ಮಸೆದ ಕುಸುಮ ಸಾಯಕ
ಮೆನಿಪಳ್ ಜಿತಪದ್ಮೆ ಪೆಸರೊಳಂ ರೂಪಿನೊಳಂ ॥ ೩೭ ॥

ಆ ಕನ್ಯಾರತ್ನಂ ಪುಟ್ಟಲೊಡನತ್ತ ಶಸ್ತ್ರಶಾಲೆಯೊಳೊಂದು ಶಕ್ತಿ ಪುಟ್ಟಿದುದಾ ಸಮಯದೊಳೊಂದಾಕಾಶವಚನಮಿಂತೆಂದುದೀ ದೇವತಾಧಿಷ್ಠಿತಮಪ್ಪ ಶಕ್ತಿಯಿಂ ಶತ್ರುಂದಮನಿಡುವುದುಮದಂ ಸಂಚಲಿಸದೆ ಬಂಚಿಸಿ ಪಿಡಿದ ಮಹಾಸತ್ವನೀ ರಮಣಿಗಂ ದಕ್ಷಿಣ ಭರತ ಧರಣೀ ರಮಣಿಗಂ ರಮಣನಕ್ಕುಮೆಂಬ ದೇವತಾದೇಶಮಂ ಕೇಳ್ದಾತನಾ ತೆಱದಿನಲ್ಲದೆ ಕಲ್ಯಾಣೋತ್ಸವಮಂ ಮಾಡೆನೆಂದಿರೆ ಕನ್ಯಾಲೋಭದಿನನೇಕ ರಾಜಸುತರ್ ಬಂದೀಶಕ್ತಿ ಪ್ರಹಾರದಿಂ ಯಮಾಗಾರಮನೆಯ್ದಿದರೆಂದುಪೇೞೆ ಲಕ್ಷ್ಮಣಂ ಕೇಳ್ದದಂ ಗಹನಂಗೆಯ್ಯದಾತನರಮನೆಯ ಬಾಗಿಲ್ಗೆ ಬಂದು ಪಾರ್ಥಿವ

ಪುತ್ರನೊರ್ವಂ ಕನ್ಯಾರ್ಥಿ ಬಂದನೆಂದು ನಿಮ್ಮರಸಂಗಱಿಪೆಂದು ಪಡಿಯಱನ ನಟ್ಟುವುದುಮವಂ ಬಂದು ಬಿನ್ನವಿಸೆ ಬರವೇೞ್ಕೆಂಬುದುಂ—

ಕಂ ॥ ಸಿರಿಯ ಹರಿನೀಲ ವೇದಿಯ
ನುರಸ್ಥಲಂ ಬೀರಸಿರಿಯ ಮರಕತ ಮಣಿವಿ ॥
ಷ್ಟರಮಂ ಭುಜದ್ವಯಂ ಪೋ
ಲ್ತಿರೆ ಪೊಕ್ಕಂ ರಾಜಸಭೆಯನಭಯನುಪೇಂದ್ರಂ ॥ ೩೮ ॥

ಅಂತಂಜನ ದಿಕ್ಕುಂಜರದಂತೆ ಬರುತಿರ್ಪುದುಂ—

ಚ ॥ ತನು ಶುಭಲಕ್ಷಣಕ್ಕೆ ತವರಾದುದು ನೀಱನೆ ಕಂತುರಾಜನೀ ।
ತನ ತೇಜದಿಂದಮಿಾತನೆ ಪೊಡರ್ಪಿನ ಶಕ್ತಿಗೆ ದರ್ಪಭಂಗಮುಂ ॥
ಜನಿಯಿಸಲಾರ್ಪನೆನ್ನಸುತೆಗೀತನೆ ವಲ್ಲಭನಕ್ಕುಮೆಂದು ಕ ।
ಣ್ಮನದೊಡನೆಕ್ಕೆಯಿಂ ಪರಿಯೆ ನೋಡಿದನಾ ನೃಪನಬ್ಜನಾಭನಂ ॥ ೩೯ ॥

ಅಂತು ಬಂದು ನೃಪನ ಕೆಲದೊಳಿರ್ದ ಕನ್ಯಾರತ್ನಕ್ಕೆ ಮನಮೆಱಗೆಯು ಮಾತಂಗೆಱಗದೆ ತನಗಿಕ್ಕಿದ ಮಣಿಮಯಾಸನದೊಳ್ ಕುಳ್ಳಿರ್ಪುದುಂ ಕುಮಾರನ ನಿರುಪಮಾಕಾರಮಂ ನೋಡಿ ಕನ್ನೆ ಕಣ್ವೇಟಂಗೊಂಡು—

ಕಂ ॥ ಜಿತಪದ್ಮೆ ಕಂತುಶರ ಪೀ
ಡಿತ ಚೇತಃಪದ್ಮೆ ಜನಕ ಶಸ್ತ್ರಾಹತಿಯಿಂ ॥
ಹತನಾದೊ[1]ಡೀತನೀತನ
ಗತಿ ಗತಿಯೆನಗೆಂದು ಚಿತ್ತದೊಳ್ ತಱಸಂದಳ್ ॥ ॥ ೪೦ ॥

ಆ ಸಮಯದೊಳ್ ಶತ್ರುಂದಮಂ ಸೌಮಿತ್ರಿಗಿಂತೆಂದಂ:—ನಿನ್ನಸಕಲಭುವನಾದೇಯಮಪ್ಪ ರೂಪಂ ನೋಡಿ ಮೊಗಂ ನೋಡದಮೋಘಶಕ್ತಿಯಿಂದಿಡಲೆನಗೆ ಬಗೆ ಬಂದಪುದಿಲ್ಲ; ನೀನೀ ಕನ್ನೆಯಾಸೆಯನುೞಿದು ಮಗುೞ್ದ ಬಿಜಯಂಗೆಯ್ವುದೆನೆ—

ಕಂ ॥ ನಿನ್ನಿಡುವ ಶಕ್ತಿಯಳವುಮ
ನೆನ್ನಳವುಮನೀಗಳಿಂತೆ ತೋರ್ಪೆಂ ಬೇಗಂ ॥
ತನ್ನಿಮೆನೆ ದೃಷ್ಟಿ ವಿಷಫಣಿ
ಸನ್ನಿಭಮಂ ಶಸ್ತ್ರಶಾಲೆಯಿಂದಂ ತಂದರ್ ॥ ೪೧ ॥

ಅಂತು ತಂದು ವಿವಿಧಾರ್ಚನೆಯಿನರ್ಚಿಸಿ ಮಂತ್ರಪೂತಂ ಮಾಡಿ ಶಸ್ತ್ರಮಂ ಪಿಡಿದು ಸಮಾಹಿತಮತಿಯಾಗೆಂದನತಿದೂರದೊಳಿರಿಸಿ ಸರ್ವಶಕ್ತಿಯಿನಿಡುವುದುಂ—

---

1. ಡೀತನಲ್ಲದೆ ಗತಿಯಿಲ್ಲೆನಗೆಂದು. ಫ.

ಕಂ ॥ ಕಡೆಗಾಲದ ಸಿಡಿಲಂತಿರೆ
ಕಿಡಿಯಂ ಕಾಱುತ್ತೆ ಕೇಱಿ ಬರೆ ಬಂಚಿಸಿ ತ ॥
ನ್ನೆಡಗೈಯಿಂ ಶಕ್ತಿ ಬಲಂ
ಗಿಡೆ ಪಿಡಿದಿಟ್ಟವನ ಶಕ್ತಿಯಂ ತಲೆವಿಡಿದಂ ॥ ೪೨ ॥

ಆ ಸಮಯದೊಳ್—

ಕಂ ॥ ಪೂಮಟಿಗೆಗಳ್ ಕಱಿದುವು ಕುಸು
ಮಾಮೋದಂ ಬಳಸೆ ಭೃಂಗ ರವದೊಡನೆ ದಿಶಾ ॥
ವ್ಯೋಮಾಂತರಮಂ ಸುರ ಭೇ
ರೀ ಮಂದ್ರ ಧ್ವಾನ ಘನರವಂ ಪುದಿವಿನೆಗಂ ॥ ೪೩ ॥

ಪರಿಕಿಸವೇೞ್ಪುದೆ ಲಕ್ಷ್ಮೀ
ಧರನಳವನವಾರ್ಯ ವೀರ್ಯನಾತಂಗೀ ದು ॥
ರ್ಧರ ಶಕ್ತಿ ಗ್ರಹಣಮುದಾ
ವರಿದಾಯ್ತೆಂದಮರ ಸಮಿತಿ ಪೊಗೞ್ದಿತ್ತಾಗಳ್ ॥ ೪೪ ॥

ಅಂತು ಪೊಗೞ್ದ ದಿವ್ಯಧ್ವನಿಯಿಂ ಲಕ್ಷ್ಮಣನೆಂದಱಿದು—

ಕಂ ॥ ಕ್ಷಮಿಯಿಸುವುದೆನ್ನ ಗೆಯ್ದಱಿ
ಯಮೆಗೊರ್ಮಿಂಗೆಂದು ಚಕಿತ ಚಿತ್ತಂ ಶತ್ರುಂ ॥
ದಮನಾಗಳ್ ಸೌಮಿತ್ರಿ
ಕ್ರಮಕ್ಕೆ ವಿಕ್ರಮಮನುೞಿದು ವಿನಮಿತನಾದಂ ॥ ೪೫ ॥

ಅನಂತರಂ ಸೌಮಿತ್ರಿಯುಂ ವಿಚಿತ್ರ ವಸ್ತ್ರಾಭರಣಂಗಳಿಂದರ್ಚಿಸಿ, ಬಹಿರುದ್ಯಾನದೊಳುದಾತ್ತ ರಾಘವನಿರ್ದುದಂ ಲಕ್ಷ್ಮಣಂ ಪೇೞೆ ಕೇಳ್ದು ಕಿಱಿದಾನುಂ ಬಲಂಬೆರಸು ಪಾದಮಾರ್ಗದಿಂ ರಾಮಸ್ವಾಮಿಯಲ್ಲಿಗೆ ಬಂದುಪಾಯನಪುರಸ್ಸರಂ ಸರ್ವಾಂಗಪ್ರಣತನಾಗಿ ಸೀತಾದೇವಿಗಂ ತುೞಿಲ್ಗೆಯ್ದು ವಂದನಮಾಲಾ ಮನೋಹರಮುಂ ಧ್ವಜರಾಜಿ ವಿರಾಜಿತಮುಂ ಮಂಗಲಾನಕ ಧ್ವಾನ ಭರಿತ ಭುವನಾಂತರಾಲಮುಮುಪಹಾರ ಕುಸುಮ ಮತ್ತ ಮಧುಕರ ಝಂಕಾರ ಮುಖರಮುಮಪ್ಪ ಪುರಮನರಮನೆಯುಮನತಿವಿಭೂತಿಯಿಂ ಪುಗಿಸಿ ಸಮಯೋಚಿತ ವಿವಿಧೋಪಚಾರ ಪರಿಚರ್ಯಾಚಾತುರ್ಯಮಂ ಮೆಱೆದು ಶುಭದಿನಮುಹೂರ್ತದೊಳ್—

ಕಂ ॥ ಪರಿಣಯನಮಾಗೆ ಪದ್ಮೋ
ದರಂಗೆ ಜಿತಪದ್ಮೆಯೊಡನೆ ಮಂಗಲ ಗೀತ ॥
ಸ್ವರದೊಡನೆ ಮಂಗಲಾನಕ
ವಿರುತಿ ಪಳಂಚಿದುದು ಗಗನ ದಿಗವನಿತಲಮಂ ॥ ೪೬ ॥

ಅಂತಲ್ಲಿ ಕತಿಪಯ ದಿನದಿಂದಾ ಮೂವರುಂ ಪೂರ್ವಾಭಿಮುಖದಿಂ ಪಯಣಂ ಬೋಗಿ ವಂಶಸ್ಥಲಮೆಂಬ ಪೊೞಲನೆಯ್ದಿ ತತ್ಸಮೀಪದ ವಂಶಸ್ಥಲ ಗಿರಿದರೀ ದೇಶಮಂ ದಿವಸಾವಸಾನ ಸಮಯದೊಳೆಯ್ದಿ ದೆಸೆಗೆಟ್ಟೋಡುವ ಪೌರಜನಮಂ ರಘುವೀರಂ ಕಂಡಿದೇಕಾರಣಮೋಡಿದಪುದೆಂದು ಬೆಸಗೊಳ್ವುದುಮಿಂದಿಂಗೆ ಮೂಱುದಿನಂ ಮೊದಲ್ಗೊಂಡು ರಾತ್ರಿಸಮಯದೊಳೀ ಶಿಖರಿ ಶಿಖರದೊಳತಿಭಯಂಕರಮುಮತ್ಯದ್ಭುತಮುಮಾಗೆ ಪಲವು ಸಿಡಿಲ ದನಿಗಳೊಂದಾದಂತಶ್ರುತಮಪ್ಪದೊಂದು ರೌದ್ರ ಧ್ವನಿಯಂ ಕೇಳ್ದಂಜಿ ಪೊೞಲೆಲ್ಲಂ ಯಥಾಯಥಮಾಗೋಡಿದಪ್ಪುದೆಂದು ಪೇೞ್ವುದುಮಾ ಧ್ವನಿಗೆಯ್ವರಾರೆಂಬುದನಾರಯ್ವೆಮೆಂದಾನಗಮನೇಱೆ ನೋೞ್ಪಾಗಳಲ್ಲಿ ಚತುರ್ಮುಖ ಪ್ರತಿಮಾ ಯೋಗದೊಳ್ ನಿಂದು ಶುಭಧ್ಯಾನಮನಪ್ಪುಕೆಯ್ದು ಮಹರ್ಷಿಯರಂ ಕಂಡೆಯ್ದೆವರ್ಪುದುಮುವರಂ ಸುತ್ತಿ ಸುಯ್ಯುತ್ತಿರ್ದ ವಿಷಮ ವಿಷೋರಗಂಗಳುಮಾಪಾದಮಸ್ತಕಂಬರಮೆಡೆವಱಿಯದೆ ಮುಸುರಿ ಮುತ್ತಿರ್ದ ವಿಷಮವೃಶ್ಚಿಕಂಗಳುಂ ರಾಮಲಕ್ಷ್ಮಣರ ಪುಣ್ಯಪ್ರಭಾವದಿನದೃಶ್ಯಮಪ್ಪುದುಮಾ ಪರ್ವತದ ಸುಗಂಧ ಕುಸುಮಂಗಳಿಂದಮವರನರ್ಚಿಸುತ್ತುಮಿರೆ ನೇಸರ್ಪಡುವುದುಮತಿ ರೌದ್ರಮಪ್ಪ ಭೂತ ಬೇತಾಳ ಸಮೂಹಮುಮನತಿಭಯಂಕರಮಾಗೆ ಗಜಱಿ ಗರ್ಜಿಸುವ ಸಿಂಹ ಶರಭ ಶಾರ್ದೂಲಂಗಳುಮನತ್ಯದ್ಭುತಮುಮುಗುರ್ವುಮಾಗೆ ಮಿಂಚುಂ ಮೊೞಗುಂ ಬೆರಸು ಸುರಿವ ಬಿಸುನೆತ್ತರ ಮೞೆಯುಮಂ ವಿಗುರ್ವಿಸೆ—

ಕಂ ॥ ಪರಮ ಜಿನಮುನಿಗೆ ಯೋಗಾಂ
ತರಾಯಮುಮರೋಪಸರ್ಗದಿಂದಕ್ಕುಮೆ ನಿ ॥
ಷ್ಠುರ ಮಾರುತ ಹತಿಯಿಂದಂ
ತರು ಸಂಚಲಿಪಂತೆ ಮೇರು ಸಂಚಲಿಸುಗುಮೇ ॥ ೪೭ ॥

ಅಂತಾ ಮುನಿಗೆ ಮಹೋಪಸರ್ಗಮಂ ಮಾೞ್ಪ ದೇವನ ಮಹಾರೌದ್ರಾನುಭಾವಮಂ ಕಿಡಿಸಲೆಂದು ತಮ್ಮ ದೇವತಾಧಿಷ್ಠಿತ ಧನುರ್ಯುಗಳಮನೇಱಿಸಿ—

ಚ ॥ ಕೆಡೆದುದೊ ಮಂದರಂ ಧರೆಗೆ ಬಿೞ್ದುದೊ ಭಾನುರಥಂ ನಭಸ್ಸ್ಥಲಂ ।
ಪಿಡಿಸಿದುದೋ ಧರಿತ್ರಿ ಮೊೞಗಿತ್ತೊ ಮಹಾಪ್ರಲಯಾನಲಾರ್ಚಿಯಿಂ ॥
ದೊಡೆದುದೊ ವಜ್ರವೇದಿಕೆಯೆನಲ್ ನಭಮಂ ಪುದಿದತ್ತು ನೀವಿ ಜೇ ।
ವೊಡೆಯೆ ಬಲಾಚ್ಯುತರ್ ತ್ರಿಭುವನೈಕಭಯಂ ಕೃತ ಚಾಪ ಟಂಕೃತಂ ॥ ೪೮ ॥

ಆರೌದ್ರಧ್ವನಿ ಕರ್ಣಲಗ್ನಮಾಗೆ ಭಗ್ನಾಶಯನಗ್ನಿಪ್ರಭಂ ಹತಪ್ರಭನಾಗಿ ವಿಭಂಗ ಜ್ಞಾನದಿನಿವರೆಂಟನೆಯ ಬಲದೇವ ವಾಸುದೇವರೆಂದಱಿದು ನಿಜ ಜ್ಯೋತಿರ್ಲೋಕಮನೋಡಿ ಪೊಕ್ಕನಿತ್ತಲ್—

ಕಂ॥ ತ್ರಿದಶೋಪಸರ್ಗಮುಂ ಬಗೆ
ಯದೆ ಕುಲನಗದಂತೆ ದೇಶಭೂಷಣ ಮುನಿಪರ್ ॥
ಸದಮಲ ಶುಕ್ಲಧ್ಯಾನದೊ
ಳುದಾತ್ತರಿರೆ ಘಾತಿಗಾಯ್ತು ಕದಳೀಘಾತಂ ॥ ೪೯ ॥

ಅಂತು ವಿಗತ ಘಾತಿಚತುಷ್ಟಯರನಂತ[1]ಜ್ಞಾನಾದಿ ನವ ಕೇವಲಲಬ್ಧಿವಡೆವುದುಂ—

ಕಂ॥ ದುಂದುಭಿ ನಿನಾದ ಮುಖರಂ
ಮಂದಾರ ನಮೇರು ವಿಕಚ ಕುಸುಮಾಸಾರಂ ॥
ಸಂದಿಸೆ ಕೇವಲಿ ಪೂಜೆಗೆ
ಬಂದತ್ತು ಚತುರ್ನಿಕಾಯ ದೇವನಿಕಾಯಂ ॥ ೫೦ ॥

ಅಂತು ಬಂದು ಪೂಜಿಸುವುದುಮುದಾತ್ತರಾಘವಂ ಕಿಂಚಿದುನ್ನಮಿತ ಕಂಧರಂ ಮುಕುಲಿತಾಂಜಲಿ ಪುಟಂ ನಿಮಗುಪಸರ್ಗಮಾದ ಮಾರ್ಗಮುಂ ಬೆಸಸಿಮೆನೆ ದೇಶಭೂಷಣ ಕೇವಲಿಗಳಿಂತೆಂದು ಬೆಸಸಿದರ್:— ಪದ್ಮಪುರಮನಾಳ್ವ ವಿಜಯಪರ್ವತ ಕ್ಷಿತಿಪತಿಯ ಚರ[2]ನಮೃತಸ್ವರನೆಂಬನಾತನ ಕುಲಾಂಗನೆಗೆ ತನಯರುದಿತನುಮನುದಿತನುಮೆಂಬರಾದರಾಕೆಯೊಡನಾಪುರದ ವಸುಭೂತಿವೆಸರ ವಸುಧಾಮರಂ ಮಱಿವಾಱುತ್ತುಮಿರಲುಪಭೋಗ ರಾಗ ವೇಗದಿಂ ವಿವೇಕ ವಿಕಲೆಯಾಗಿ ಮುಂದಱಿಯದೊಂದುದಿವಸಂ ತನ್ನವರನಮೃತಸ್ವರನಿರೆ ನಮಗೆ ಮೆಚ್ಚದಂತೆ ನೆಗಱಲ್ಬಾರದೆಂಬುದುಮಾಪಾಣ್ಬನಮೃತಸ್ವರನಂ ದುರಿತ ಭೀರುವಾಗದಾರುಮಱಿಯದಂತೆ ಕೊಲ್ವುದುಂ—

ಕಂ॥ ಅಪವಾದಕ್ಕಗಿಯದೆ ನರ
ಕ ಪಾತಮುಂ ಬಗೆಯದಾ ಮಹಾಪಾತಕಿ ಮು ॥
ನ್ನುಪಪತಿಯಿಂ ಪತಿಯುಂ ಕೊಲಿ
ಸಿ ಪುತ್ರವಧೆಗಂ ಬಱಿಕ್ಕೆ ಬಗೆಯಂ ತಂದಳ್ ॥ ೫೧ ॥

ಸ್ವೈರಿಣಿ ಬಗೆಬಂದಾಗಳೆ
ಮಾರಕ್ರೀಡೆಯನೊಡರ್ಚಲೆಂದುಪಪತಿಯುಂ
ದಾರಕನಂ ಕೊಲವೇಟ್ಟಳ್
ದಾರುಣ ಕರ್ಮಕ್ಕೆ ಕಾಮುಕರ್ ಪೇಸುವರೇ ॥ ೫೨ ॥

---

1. ಜ್ಞಾನದಿಂ ನವ ಕೇವಲಲಬ್ಧಿಗಳಂ ಪಡೆವುದುಂ. ಗ. ಘ.
2. ನಮೃತೇಶ್ವರ. ಚ.

ಅಂತು ಪೇೞ್ವುದುಮಾಮಾತನಾಕೆಯ ಸೊಸೆ ಕೇಳ್ದು ತನ್ನ ಪುರುಷನಪ್ಪುದಿತಂಗೆ ಪೇೞೆ ವಸುಭೂತಿಯ ಪೆಂಡತಿಯಪ್ಪ ರತಿಕಾರಿಣಿಯುಮೀರ್ಷ್ಯೆಯಿಂದದನೆ ಪಿಸುಣ್ಪೇೞೆ ಕೇಳ್ದುದಿತನುಮನುದಿತನುಂ ವಿದಿತ ವೃತ್ತಾಂತರಾಗಿ ವಸುಭೂತಿಗುಪಾಯದಿನಪಾಯಮಂ ಮಾಡ್ವುದುಮವಂ ಸತ್ತು ಶಾರ್ದೂಲಾಸ್ಯಮೆಂಬ ಮಹಾಗಹನದೊಳ್ ಕಾಲಜಂಘನೆಂಬ ಶಬರನಾಗಿ ಪುಟ್ಟಿದನೆಂದು ಪೇೞ್ದು ಮತ್ತಮಿಂತೆಂದು ಬೆಸಸಿದರಾ ಪದ್ಮಪುರದುದ್ಯಾನದೊಳ್ ಸುಮತಿವರ್ಧನರೆಂಬಾಚಾರ್ಯರ್ ಬಂದಿರ್ದರೆಂದು ಋಷಿನಿವೇದಕನಱಪೆ ವಿಜಯಪರ್ವತ ಮಹಾರಾಜಂ ಪೂಜೆವೆರಸು ಬಂದರ್ಚಿಸಿ ಪೊಡೆವಟ್ಟು ಕುಳ್ಳಿರ್ದು ಧರ್ಮಮಂ ಕೇಳ್ದು ವೈರಾಗ್ಯಪರನಾಗಿ ದೀಕ್ಷೆಗೊಳ್ವಂದೊಡನೆ ಸಹೋದರರಪ್ಪುದಿತನುಮನುದಿತನುಂ ದೀಕ್ಷೆಗೊಂಡು ತೀರ್ಥವಂದನಾರ್ಥಂ ಸಮ್ಮೇದಶೈಲಕ್ಕೆ ಪೋಗುತ್ತಿರ್ಪ ಸಮಯದೊಳಾ ಮುನಿ ಯುಗಳಮಂ ಕಂಡು ಭವ ಬದ್ಧ ಕ್ರೋಧದಿಂ ಕಾಲಜಂಘಂ ಕೊಲಲತಿಜಂಘಾಲನಾಗಿ ಮುಟ್ಟೆವರ್ಪುದುಮವರವನ ಧೂರ್ತ ಚೇಷ್ಟೆಯನಱದು—

ಕಂ ॥ ಉಪಸರ್ಗಂ ಪಱಪಡುವಿನ
ಮುಪಘನಮಾಹಾರಮೆಂಬಿವಂ ತೊಱೆದು ಸಮಂ ॥
ತುಪಶಾಂತರ್ ಕೈಯಿಕ್ಕಿರೆ
ಕೃಪಾಳು ತತ್ಪತಿ ದುರಾತ್ಮನಂ ಬಾರಿಸಿದಂ ॥ ೫೩ ॥

ಎಂದು ಬೆಸಸೆ—

ಕಂ ॥ ಅನಿತು ದಯಾಪರತೆ ಕಿರಾ
ತ ನಾಯಕಂಗಾದುದಾವ ಕಾರಣದಿನದಂ ॥
ಮುನಿಮುಖ್ಯ ಬೆಸಸಿಮೆನೆ ದಿ
ವ್ಯನಾದದಿಂ ದಿವ್ಯಯೋಗಿ ಹಲಿಗಿಂತೆಂದಂ ॥ ॥ ೫೪ ॥

ಯಕ್ಷನಾಮ ಗ್ರಾಮವಾಸಿಗಳೇಕೋದರರ್ ಸುರೂಪನುಂ ಕರುಷನುಮೆಂಬರಲ್ಲಿಗೊರ್ವಂ ವ್ಯಾಧನೊಂದು ಪಕ್ಕಿಯುಂ ಪಿಡಿತರೆ ಕರುಣಿಸಿ ಬೇಡಂಗೆ ಬೆಲೆಗುಡಿಸಿ ಬಿಡಿಸಿದೊಡಾ ಪಕ್ಷಿಯುಪಶಮುಕ್ಕೆ ಪಕ್ಕುಗೊಟ್ಟಸುವಂ ಬಿಟ್ಟು ಬೇಡವಟ್ಟಗೊಡೆಯನಾದುದಾ ಸುರೂಪನುಂ ಕರುಷನುಂ ಕೞದುದಿತನುಮನುದಿತನುಮಾಗಿ ಪುಟ್ಟಿದರಾತನುಂ ಮುನ್ನಿನುಪಕಾರಂ ಕಾರಣಮಾಗೆ ಕೊಲಲೀಯದೆ ನಿಯಮಿಸಿದನೆಂದು ಬೆಸಸಿ ಮತ್ತಮಿಂತೆಂದರ್—

ಕಂ ॥ ಸದಮಲ ಚರಿತಂತಮ್ಮಿಂ
ದುದಿತೋದಿತಮಾದುದೆನಿಸಿ ಸಂನ್ಯಸನದೆ ಸ ॥
ತ್ತುದಿತಾನುದಿತ ಮುನೀಶ್ವರ
ರುದಾತ್ತರುತ್ಕೃಷ್ಟ ದೇವಗತಿಯಂ ಪಡೆದರ್ ॥ ೫೫ ॥

ಮತ್ತಿತ್ತಲವರ್ಗಪಾಯಮುಂ ಬಗೆದ ಬೇಡಂ ವಿಗತಾಸು ದುರಂತ ದುರ್ಗತಿಯೊಳ್ ತೊೞಲ್ದಿಂತಾನುಂ ಮನುಷ್ಯಗತಿವೆತ್ತು ತಾಪಸನಾಗಿ ಸತ್ತಾತಂ ಜ್ಯೋತಿರ್ಲೋಕದೊಳಗ್ನಿಪ್ರಭನೆಂಬ ದೇವನಾದನಿತ್ತ ಭರತಕ್ಷೇತ್ರದರಿಷ್ಟಪುರಮನಾಳ್ವ ಪ್ರಿಯವ್ರತಮಹೀಭುಜಂಗೆ ಪದ್ಮಾವತಿಯುಂ ಕನಕಾಭೆಯುಮೆಂಬರಿರ್ವರರಸಿಯರಾದರಲ್ಲಿ ಪದ್ಮಾವತಿಗೆ ಮುನ್ನಮುಮರಗತಿವಡೆದುದಿತಾನುದಿತರಿರ್ವರುಂ ಬಂದು ರತ್ನರಥ ವಿಚಿತ್ರರಥರೆಂಬ ತನಯರಾದರಾ ಜ್ಯೋತಿಷ್ಕನಲ್ಲಿಂ ಬಂದು ಕನಕಾಭೆಗೆ ತನೂಭವನನುಂದರನೆಂಬನಾದನಾ ಪ್ರಿಯವ್ರತನುಂ ತನ್ನ ಮಕ್ಕಳ್ಗರಸುತನಮಂ ಕೊಟ್ಟು ತೊಱೆದಾಱುದಿವಸಂ ಸಂನ್ಯಸನಂಗೆಯ್ದು ಸಮಾಧಿಮರಣದಿಂ ಸ್ವರ್ಗಕ್ಕೆ ಪೋದನಿತ್ತಲರಸುಮಗನೊರ್ವಂ ನಿಜತನೂಭವೆಯಂ ಶ್ರೀಪ್ರಭೆಯಂ ರತ್ನರಥಂಗೆ ಮದುವೆಮಾಟ್ಪೆನೆಂದಿರ್ಪುದುಮಾಕೆಯನನುಂದರಂ ತನಗೆ ಬೇಡಿ ಪಡೆಯದೆ ಕೂಸುಗುಡದಾತನಮೇಲೆತ್ತಿ ಬರ್ಪುದುಂ ರತ್ನರಥನುಂ ವಿಚಿತ್ರರಥನುಂ ಕೇಳ್ದು ಮುಳಿದು ದಾೞಿಯಿಟ್ಟು ಸುತ್ತಿ ಮುತ್ತಿ—

ಕಂ ॥ ಪಿಡಿದು ಪರಿಭವಿಸಿ ಕೊಲ್ಲದೆ
ಕಡಂಗಿ ಪೊಱಮಡಿಸಿ ಕಳೆದು ನಾಡಿಂ ದೈನ್ಯಂ ॥
ಬಡಿಸಿದೊಡನುಂದರಂ [1]ಬ
ಲ್ಪಿಡಿದೇವದಿನುಗ್ರಕೋಪಿ ತಾಪಸನಾದಂ ॥ ೫೬ ॥

ಇತ್ತಲಾ ರತ್ನರಥ ವಿಚಿತ್ರರಥರ್ ಚಿರಕಾಲಮರಸುಗೆಯ್ಯುತ್ತಿರ್ದು ವೈರಾಗ್ಯದಿಂ ತೊಱೆದು ತಪಂಗೆಯ್ದು ಶರೀರಭಾರಮನಿೞಿಪಿ ನಾಕಲೋಕ ಸುಖಮನನುಭವಿಸಿ ಬಂದು ಸಿದ್ಧಾರ್ಥನಗರಮನಾಳ್ವ ಕ್ಷೇಮಂಕರ ನರೇಂದ್ರಂಗಂ ವಿಮಲಾದೇವಿಗಂ ದೇಶಭೂಷಣ ಕುಲಭೂಷಣರೆಂಬ ತನಯರಾಗಿರ್ಪುದುಮೆಮ್ಮನೆಮ್ಮ ತಂದೆ ವಿದ್ಯಾಭ್ಯಾಸ ನಿಮಿತ್ತಂ ಮತ್ತೊಂದು ಪುರದೊಳಿರಿಸೆ ಸಕಲವಿದ್ಯೆಗಳುಮಂ ಸಾಗರಘೋಷರೆಂಬುಪಾಧ್ಯಾಯರ್ ಕಲಿಸೆ ಕಲ್ತು ಗುರುಗೃಹಾಗಮನ ಪೂಜಾನಂತರಂ ಮಹಾವಿಭೂತಿಯಿನೆಮ್ಮ ಪುರಮಂ ಪುಗುವ ಸಮಯದೊಳ್ ಕೈಗೆಯ್ದು ಕರುಮಾಡದ ಮೇಲಿರ್ದ ಕನ್ನೆಯಂ ಕಂಡೆಮಗೆ ಪರಿಣಯನಕ್ಕೆ ತಂದರಸುಮಗಳೆಂದು ಬಗೆದು ಬಯಸಿ ನೋಡುತ್ತರಮನೆಯಂ ಪೊಕ್ಕೆಮ್ಮೊಡವುಟ್ಟಿದಳೆಂದಱಿದು ಪೊಲ್ಲದಂ ಬಗೆದೆವೆಂದು ಅದುವೆ ನಿರ್ವೇಗ ನಿಮಿತ್ತಮಾಗೆ ತೊಱೆದು ತಪಂಬಟ್ಟು ಚಾರಣ ಋದ್ಧಿವಡೆದು ಪೋಗಲೊಡಮೆಮಗೆ ಮೂಱುಂಜನ್ಮದೊಳಂ ಜನಕನಾದ ನಿರತಿಶಯ ಪ್ರೇಮಾನುಬಂಧದಿಂ ಕ್ಷೇಮಂಕರ ಮಹಾರಾಜನೆಮ್ಮಗಲ್ಕೆಗೆ ಸೈರಿಸಲಾರದೆ

---

1. ಬಲ್ಪಿಡಿದೇವಮನುಗ್ರಕೋಪಿ. ಘ. ; ಬಲ್ಪಿಡಿದೇವನುದಗ್ರ. ಗ., ಬಲ್ಪಿಡಿದಿವಮನುಜಗ್ರ. ಚ.

ಆಹಾರ ಶರೀರ ನಿವೃತ್ತಿಗೆಯ್ದು ಮುಡಿಪಿ [1]ಗರುಡಾಧಿಪನಾಗಿ ಮಹಾಲೋಚನಾಭಿಧಾನಮಂ ಪಡೆದೀಗಳೆಮ್ಮ ಕೇವಲ ಪ್ರಾಪ್ತಿಯನಱಿದು ಪೂಜಿಸಲ್ ಬಂದನೆಂದು ಬೆಸಸಿ—

ಕಂ ॥ ತಾಪಸ ರೂಪಂವಿಗತಾ
ಲಾಪಂ ಮುಂ ಪೇಟ್ದಸುಂದರಂ ಕೌಮುದಿಯೆಂ ॥
ಬಾಪುರಮನಗಲದಿರ್ಪಂ
ಕೌಪೀನಧರಂ ಜಟಾಧರಂ ದಂಡಧರಂ ॥ ॥ ೫೭ ॥

ಆ ಪುರಪತಿ ಪೊಗೞ್ವುದುಮಾ
ತಾಪಸನಂ ಮದನ ವೇಗೆ ತತ್ಪತಿಗೆ ಮರು ॥
ಚ್ಚಾಪದೊಳಮಧಿಪ ಮಿಥ್ಯಾ
[2]ರೂಪದೊಳಂ ಮಾಡದಿರ್ ಗುಣಾರೋಪಣಮಂ ॥ ೫೮ ॥

ಎನೆ ಸುಮುಖಂ ವಿಮುಖನಾಗೆ—

ಸ್ವಾಗತ ॥ ಕೆಮ್ಮನುಮ್ಮಳಿಸಿ ಕೋಪಿಸದಿರ್ ಮಾಣ್ ।
ನಿಮ್ಮನುಜ್ಞೆ ದೊರೆಕೊಂಡೊಡೆ ಸಾಲ್ಗುಂ ॥
ನಿಮ್ಮ ನಚ್ಚಿನ ತಪೋಧನನಂ ತಂ ।
ದೆಮ್ಮ ಕಾಲ್ಗೆಱಗುವಂತಿರೆ ಮಾಟ್ಪೆಂ ॥ ೫೯ ॥

ಎಂದೊಡಂಬಡಿಸಿ ನಿಜ ತನೂಜೆಯನೇಕಾಂತಕ್ಕೆ ಕರೆದು ತಾಪಸನ ತಪಮಂ ಕಿಡಿಸುವುಪಾಯಮಂ ಕಲಿಸಿ ಕಟಿಪುವುದುಂ—

ಕಂ ॥ ಜನನಿಯ ಬೆಸದಿಂ ಸಮ್ಮೋ
ಹನ ವಿದ್ಯೆಯೆ ಮೂರ್ತಿಗೊಂಡು ಬರ್ಪಂತೆವೊಲಾ ॥
ಮುನಿಯಿರ್ದೆಡೆಗೊರ್ವಳೆ ಪೂ
ವಿನ ಪೊಟ್ಟಱೊಳಾರುಮಿಲ್ಲದೆಡೆಯೊಳ್ ಬಂದಳ್ ॥ ೬೦ ॥

ಆ ಸಮಯದೊಳ್ ಸೂಕ್ತಮಂ ಜಪಿಯಿಸುತಿರ್ದಾಕೆಯ ಕಾಲ ಪಳಂಚಿ ನುಂಗುರದಿಂಚರಮತನುಚಾಪ ಟಂಕಾರದಂತೆ ಕಿವಿಯಂ ಪಳಂಚೆ ಜಪಮಂ ಮಱೆದು ಕಣ್ಣಂ ತೆಱೆದು ನೋಡಿ ಘನ ಸ್ತನಾದ್ಯವಯವಂಗಳ ಭಂಗಿ ತಪೋಭಂಗಮಂ ಮಾಡೆ—

1. ಗರುಡವಾಹನಾಭಿಧಾನಮಂ. ಕ. ಖ. ಚ. 2. ಲಾಪ. ಕ. ಫ.

ಕಂ ॥ ಸ್ಮರ ರಾಗಂ ಮನದೊಳ್ ಬೇ
ರ್ವರಿವಿನೆಗಂ ಬ್ರಹ್ಮಚರ್ಯ ನಿಷ್ಠಾಗರಿಮಂ ॥
ಕರಗುವಿನಮೆಳಸೆ ಕಣ್ಗಳ್
ವರಾಕ ಭಿಕ್ಷಾಕನಾಕೆಗಂದಿಂತೆಂದಂ ॥ ೬೧ ॥

ನೀನೀ ಸಂಜೆಯೊಳಂಜದೆ ನೆರಮಿಲ್ಲದೆ ಬಂದ ಬರವಾವುದೆಂಬುದುಮೆಮ್ಮಬ್ಬೆ ನೆವಮಿಲ್ಲದೆನಗೆ ಮುನಿದು ಜಡಿದು ನುಡಿಯೆ ಬಂದು ನಿಮ್ಮಂ ಕಂಡು ಸಂತೋಷ ದಂತನೆಯ್ದಿದೆನೆನಗೆ ನಿಮ್ಮ ದೀಕ್ಷೆಯಂ ಕುಡುವುದೆನೆ ದಿಟಮೆಂದು ಬಗೆದಿದಾವ ಗಹನಮಿಾಗಳೆ ಕೈಕೊಳ್ಳೆಂಬುದುಮಾಕೆ ನಾಂ ಕುಡಗೂಸಪ್ಪೆನದು ಕಾರಣದಿನೆಮ್ಮ ತಾಯಲ್ಲಿಗೆ ಪೋಗಿ ಬೇಡಿಮೆನೆ ಪೆತ್ತ ಮಗಳನೆಮಗೆ ಕುಡಲಱಿಯರೆಂಬುದುಮಾನರಸಿ ನಡಪಿದ ಕುಡಗೂಸೆನೆನ್ನಂ ಕುಡುವರೆಂಬುದುಂ ತಾಪಸಂ [1]ಮದನ ಸಂತಾಪನ ಶರಪಾತಕ್ಕೆ ಸುಗಿದು ಕೈವಿಡಿಯ[2]ಲಡಹಡಿಸುವುದುಂ ನೀಮೇಕೆ ತುಱಿಪಂಗೆಯ್ವಿರೆ ಮ್ಮರಸಿಯಂ ಪ್ರಾರ್ಥಿಸಿ ಪೊಡೆವಟ್ಟು ಬೇಡಿಕೊಂಡು ವಿಧಿಪೂರ್ವಕಂ ಮದುವೆನಿಲ್ಪು ದೆಂದೊಡಂಬಡೆ ನುಡಿದೊಡಗೊಂಡು ಪೋಪುದುಂ—

ಕಂ ॥ ಕನ್ನೆಯ ಬಱಸಂದಿನನೆಂ
ಬನ್ನಂ ಮನಸಿಜನ ಪೂವಿನಂಬಿನ ಮೞೆಯೊಳ್ ॥
ಕನ್ನೆಯ ಬಱಸಂದಂ ಮುನಿ
ತನ್ನ ತಪಸ್ತೇಜದೆಸಕಮೊಳಸೋರ್ವಿನೆಗಂ ॥ ೬೨ ॥

ಅಂತು ರಾತ್ರಿಸಮಯದೊಳ್ ರಾಜಪುತ್ರಿಯ ಬಱವಿಡಿದು ಬಂದು ರಾಜ ಸದನಮಂ ಪೊಕ್ಕು ಮದನವೇಗೆಗೆ ಕೈಗಳಂ ಮುಗಿದು ನಿಮ್ಮ ನಡಪಿದ ಮಗಳಪ್ಪ ನಾಗದತ್ತೆಯನೆಮಗಿತ್ತು ಕನ್ಯಾದಾನ ಫಲಮಂ ಪಡೆವುದೆಂದು ಸರ್ವಾಂಗ ಪ್ರಣತ ನಾಗಿರ್ಪುದುಮಾ ಸಮಯದೊಳರಸನರಸಿಯಲ್ಲಿಗೆ ಬಂದು ಗೊರವನಿರವಂ ಕಂಡು ಕಡುಮುಳಿದು ಪಲತೆಱದಿಂ ಪರಿಭವಿಸೆ ಪೊಱಮಡಿಸಿ ಕಳೆಯೆ—

ಕಂ ॥ ಪರಿಭವಮಂ ಪೊರ್ದಿದ ದು
ಷ್ಪರಿಣತಿಯಿಂ ಕೞಪಿ ಕಾಲಮಂ ದುರ್ಗತಿಯೊಳ್ ॥
ತಿರಿತಂದು ಮನುಜ ಗತಿಯೊಳ್
ದುರಂತ ದುಷ್ಕರ್ಮ ಫಲಮನನುಭವಿಸುತ್ತುಂ ॥ ೬೩ ॥

---

1. ಮದನ ಸಂತಾಪನ ಸಮ್ಮೋಹನ ಶರ ತಾಪಕ್ಕೆ. ಘ.
2. ಲಡಹರಿ. ಚ.

ಮತ್ತಂ ತಾಪಸ ರೂಪಂ ಕಳೆದು ಕಾಯ ಕ್ಲೇಶದ ಫಲದಿಂ ಜ್ಯೋತಿರ್ಲ್ಲೋಕ ದೊಳಗ್ನಿಪ್ರಭನೆಂಬ ದೇವನಾದನಿತ್ತಲನಂತವೀರ್ಯ ಕೇವಲಿಗಳ ಪೂಜೆಗೆ ಬಂದ ದೇವ ಸಭೆಯೊ[1]ಳೊರ್ವ ದೇವಂ ಮುನಿಸುವ್ರತ ತೀರ್ಥಕರ ಭಟ್ಟಾರಕರ ತೀರ್ಥ ಸಂತಾನ ದೊಳ್ ನಿಮ್ಮಂತೆ ಕೇವಲಿಗಳಾಗಿ ಧರ್ಮ್ಮೋಪದೇಶಂಗೆಯ್ವರಾರೆಂದು ಬೆಸಗೊಳ್ವುದುಂ–

ಕಂ ॥ ಜಲಜಲಿಸೆ ದಶನ ಕಿರಣಾ
ವಲಿ ಮೃದು ಮಧುರ ಪ್ರಣಾದದಿಂ ಕೇವಲಿ ಕೇ ॥
ವಲಲಬ್ಧಿ ದೇಶಭೂಷಣ
ಕುಲಭೂಷಣ ದಿವ್ಯಮುನಿ ಯುಗಕ್ಕಕ್ಕುಮೆನಲ್ ॥ ೬೪ ॥

ಅದನಾ ಸಭೆಯೊಳಿರ್ದಗ್ನಿಪ್ರಭದೇವಂ ಕೇಳ್ದಿಮ್ಮೊಳಾದ ಜನ್ಮಾಂತರ ವೈರಮುಂ ವಿಭಂಗಜ್ಞಾನದಿಂದಱಿದೀಗಳಿಮಗೆ ಯೋಗ ವಿಘ್ನೋದ್ಯೋಗದೊಳಿರ್ದು ನೀಂ ಪುಣ್ಯ ಪುರುಷನುಂ ಚರಮದೇಹಧಾರಿಯುಮಪ್ಪುದಱಿಂದೀತಂ ನಿನ್ನ ಮುಳಿಸಿಂಗೆ ಭೀತ ನಾಗಿ ಮುನ್ನಿನ ತನ್ನ ಮುಳಿಸನುೞಿದುಪಶಾಂತ ಸ್ವಾಂತನೀ ಸಭೆಗೆ ಬಂದಿರ್ದ ನೆಂಬು ರಾಘವಂಗೆ ಬೆಸಸುವುದುಮದೆಲ್ಲಮುಂ ಗರುಡಾಧಿಪಂ ಕೇಳ್ದು ಸಂತೋಷ ದಂತಮನೆಯ್ದಿ—

ಉ ॥ ಮತ್ತನಯೋಪಸರ್ಗಮನದಿರ್ಪಿದ ನಿನ್ನ ಗುಣಪ್ರತಿಷ್ಠೆ ಲೋ ।
ಕೋತ್ತರಮಾಯ್ತು ನಿನ್ನ ಸಮಯ ಪ್ರತಿಪಾಲನ ಶೀಲ ಶಕ್ತಿ ಸಂ ॥
ಪತ್ತಿಗೆ ಮೆಚ್ಚಿದೆಂ ನೆನೆವುದುಂ ನೆನೆದಾಗಳೆ ಬರ್ಪೆನೆಂದು ಮೆ ।
ಚ್ಚಿತ್ತನಿದೇನಮಾನುಷಮೊ ರಾಘವ ಸಂಚಿತ ಪುಣ್ಯಸಂಚಯಂ ॥ ೬೫ ॥

ಮ॥ಸ್ರ॥ನರನಾಥಂಗಿತ್ತು ತನ್ನಂ ನೆನೆದ ಸಮಯದೊಳ್ ಬರ್ಪೆನಾನೆಂದು ಮೆಚ್ಚಂ।
ಚರಿತಾರ್ಥಂ ಭಕ್ತಿ ಭಾರಾನತ ಮಣಿಮುಕುಟಂ ಹರ್ಷ ಬಾಷ್ಪಾಂಬುವರ್ಷಂ ॥
ಗರುಡಂ ಬೀೞ್ಕೊಂಡು ತತ್ಕೇವಲಿಯ ಪದಪಯೋಜಂಗಳಂ ತನ್ನ ತೊಟ್ಟಾ।
ಭರಣ [2]ಪ್ರದ್ಯೋತಿಯಿಂದಸ್ಖಲಿತಮೆನೆ ನಭಂ ತನ್ನ ಲೋಕಕ್ಕೆ ಪೋದಂ॥ ೬೬ ॥

ಕಂ ॥ ಭೂವಂದ್ಯ ದೇಶ ಭೂಷಣ
ಕೇವಲಿಗಳ ಸಮವಸೃತಿ ವಿಹಾರಿಸಿದುದು ಭ ॥
ವ್ಯಾವಲಿಗಳನಾರ್ಯ್ಯಾಖಂ
ಡಾವನಿಯೊಳ್ ತಣಿಪಲೆಂದು ಧರ್ಮಾಮೃತದಿಂ ॥ ೬೭ ॥

---

1. ಳೊರ್ವಂದೇವ ಮುನಿ ಸುವ್ರತಮುನಿ ಭಟ್ಟಾರಕರ. ಗ.
2. ಪ್ರದ್ಯೋತಿ ವಂಶಸ್ಖಳಿತಮೆನೆ ನಭಚರಂ. ಚ.

ತದನಂತರಂ ವಂಶಸ್ಥಲಪುರಮನಾಳ್ವ ಸುಪ್ರಭನರೇಂದ್ರಂ ಬಂದು ರಾಮ ಲಕ್ಷ್ಮಣರಂ ಪೂಜಿಸಿ ವಂಶಸ್ಥಲ ನಗೋಪರಿಮ ತಲದೊಳ್ ವಿಚಿತ್ರ ಚೈತ್ಯ ಭವನಂ ಗಳಿಂ ಬಹು ಪ್ರಾಕಾರ ಪ್ರಾಸಾದ ಪಜ್ಕ್ತಿಗಳನೇಕಾಂತ ಕಮನೀಯಮಪ್ಪಂತು ಪೊಟಲಂ ಮಾಡಿಸಿ ರಾಮಲಕ್ಷ್ಮಣರನಾ ಪೊಳಲೊಳಿರಿಸಿ ಬೆಸಕೆಯ್ಯುತ್ತಿರೆ ವಂಶ ಸ್ಥಲ ಗಿರಿಗೆ ರಾಮಗಿರಿಯೆಂಬ ಪೆಸರಾಯ್ತು; ಮತ್ತಮವರಲ್ಲಿಂ ತಳರ್ದು ತೆಂಕ ಮೊಗದೆ ನಿಚ್ಚವಯಣಂಗಳಿಂ ಬಂದು ಪೆರ್ವಟುವಂ ಪೊಕ್ಕು ಕರ್ಣರವೆಯೆಂಬ ತೊಱೆಯಂ ಪಾಯ್ದುದಱ ತೆಂಕಣತಡಿಯೊಳೊಂದು ರಮ್ಯಪ್ರದೇಶದೊಳ್ ವಿಶ್ರಮಿ ಸಿರ್ಪುದುಮಲ್ಲಿಗೆ [1]ಸುಗುಪ್ತಿ ಗುಪ್ತರೆಂಬ ಗಗನ ಚಾರಣ ಯುಗಲಂ ಗಗನ ತಲದಿ ನವನಿತಲಕ್ಕವತರಿಸಿ ಮಾಸೋಪವಾಸದ ಪಾರಣೆಯೊಳ್ ಕಾಂತಾರ ಚರ್ಯೆಗೆಬರ್ಪುದು ಮವರಂ ದೂರದೊಳ್ ಕಂಡು—

ಮ॥ಸ್ರ॥ ದೆಸೆಯಂ ಭೂಷಾಂಶುಗಳ್ ಚಿತ್ರಿಸೆ ಪದತಲಮಾತ್ಮೀಯ ಶೋಣಾಂಶುವಿಂದ।
ರ್ಚಿಸೆ ಧಾತ್ರೀ ದೇವಿಯಂ ಸಂಭ್ರಮ ರಸವಶನೇೞ್ತಂದು ಸದ್ಭಕ್ತಿಯಿಂ ವಂ॥
ದಿಸಿ ರಾಗೋತ್ಕಂಠನುಚ್ಚಾಸನದೊಳಿರಿಸಿ ದಿವ್ಯಾರ್ಚನಾ ದ್ರವ್ಯದಿಂದ।
ರ್ಚಿಸಿದಂ ಸಾಹಿತ್ಯ ವಿದ್ಯಾಧರನಮಲಯಶಂ ಭಾರತೀ ಕರ್ಣಪೂರಂ ॥ ೬೮ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖ ಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಚಾರಣ ಯುಗಲ ದರ್ಶನವರ್ಣನಂ
ಅಷ್ಟಮಾಶ್ವಾಸಂ

ಕಂ ॥ ಶ್ರೀ ಪದಮುನೀವ ಮುನಿಪ
ಶ್ರೀಪದಮಂ [1]ಪರಮಭಕ್ತಿಯಿಂದರ್ಚಿಸಿ ಪು ॥
ಣ್ಯೋಪಾರ್ಜನಮಂ ತಳೆದನಿ
ಳಾಪೂಜಿತ ಚಾರು ಚರಿತನಭಿನವಪಂಪಂ ॥ ೧ ॥

ಅಂತರ್ಚಿಸಿ ವಿಧಿಪೂರ್ವಕಂ ನಿರವದ್ಯಾಹಾರಮಂ ಕುಡುವುದುಮವರ್ ಸಂಯಮ ಸಂರಕ್ಷಣಾರ್ಥಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ ಕೈಯೆತ್ತಿಕೊಂ [2]ಡಕ್ಷಯಂ ದಾನವೆಂಬುದುಂ—

ಕಂ ॥ ಏನೆಸೆದುದೊ ರೈವೃಷ್ಟಿ ಹಿ
ಮಾನಿಲನಳಿ ಮಿಲಿತ ಕುಸುಮವರ್ಷಂ ಸುರ ಭೇ ॥
ರೀನಿನದಂ ದಿವಿಜರಹೋ
ದಾನಶ್ರುತಿ ನೆಗೞೆ ನೆಗೞ್ದು ಪಂಚಾಶ್ಚರ್ಯಂ ॥ ೨ ॥

ಆಗಳವರ ತಪಸ್ಸಾಮರ್ಥ್ಯಕ್ಕೆ ರಾಮಾದಿಗಳ್ ರೋಮಾಂಚ ಕಂಚುಕಿತ ದೇಹರಾಗಿ ಧರ್ಮಕಥಾ ಶ್ರವಣ ಪ್ರಸಂಗದೊಳಿರ್ಪುದುಮವರಿದಿರೊಳಿರ್ದ ವಿಶಾಲ ಸಾಲದ್ರುಮ ಶಾಖಾರೂಢನಾಗಿರ್ದು—

ಉ ॥ ಪೋದ ಭವ ಪ್ರಪಂಚದಱಿತಂ ಮುನಿ ದರ್ಶನಮಾತ್ರದಿಂ ಮನ ।
ಕ್ಕಾದೊಡೆ ಪಾಪ ಸಂಚಯಮನಿನ್ನಪವರ್ತಿಪೆನೆಂದು ಬಂದು ಪಾ ॥
ದೋದಕದೊಳ್ ಪೊರಳ್ದು ಕನಕಪ್ರಭೆವೆತ್ತು ಪದೋಪಕಂಠ ಲ ।
ಗ್ನೋದರ ಮಸ್ತಕಂ ವಿನತಮಿರ್ದುದು ಪರ್ದುಪಶಾಂತ ಚೇತಸಂ ॥ ೩ ॥

ಆಗಳದಂ ಕಂಡು ರಾಘವಂ ಅವರ ತಪಸ್ಸಮೃದ್ಧಿಯಂ ಸೀತಗಂ ಸೌಮಿತ್ರಿಗ ಮಭಿವರ್ಣಿಸಿ ಮುನಿಗೆ ಮುಗಿದ ಕೈವೆರಸು ಹಿತಾಹಿತ ವಿವೇಕ ವಿಕಲಮುಂ ವಿಜಾತಿಯುಮಪ್ಪ ವಿಹಂಗಮುಪಶಮಕ್ಕೆ ಬಂದ ಕಾರಣಮೇನೆಂಬುದುಂ, ಚಾರಣ ಋಷಿಯರಿಂತೆಂದು ಬೆಸಸಿದರೀ ಮಹಾಗಹನಂ ಮುನ್ನಂ ಕರ್ಣಕುಂಡಲ ಪ್ರಮುಖ ನಿಖಿಲಗ್ರಾಮಾಕೀರ್ಣಮದನಾಳ್ವಂ ದಂಡಕನೆಂಬರಸನಾತನ ಪೆಂಡತಿ ದುರ್ಮನಸ್ಕೆ ಮಸ್ಕರಿ ಸಮಯಮಂ ಪಿಡಿದಿರ್ಪಳಾ ದಂಡಕನುಮೊರ್ಮೆ ಪುರಬಹಿಃಪುರದೊಳ್

1. ಪಂಚ ಮುಷ್ಟಿಯಿಂ ವಂದಿಸಿ. ಕ. ಚ.
2. ಡಕ್ಷಯ ದಾನಮಸ್ತೆಂಬುದುಂ. ಗ. ಘ.

ಕಲ್ಮೆಲೆನಿಂದ ಮಹಾಋಷಿಯರಂ. ನೋಡುತ್ತುಂ ಪೋಗಿ ಬೇಂಟೆವಡೆಯದೆ ಬಂದ ವಿವೇಕಿಯಪ್ಪುದಱಿಂದವರ‌ಕೊರಲೊಳೊಂದು ಸತ್ತ ಪಾವಂ ಸುತ್ತಿ ಪೋದೊಡ ವರುಪಸರ್ಗಂ ಪಿಂಗುವಿನಂ ಕೈಯೆತ್ತೆವೆಂದಿರೆ ಮತ್ತೊಂದು ದಿವಸಮಾ ದೆಸೆಯನೆ ಮೃಗಯಾ ನಿಮಿತ್ತಂ ದಂಡಕಂ ಪೋಗುತ್ತುಮೊರ್ವನವರಕೊರಲೊಳಿರ್ದ ಕಾಳೋ ರಗನ ಕಳೇಬರಮಂ ಕಳೆವುದಂ ಕಂಡಱಿಯದಂತಿದೇನೆಂದು ಬೆಸಗೊಳ್ವುದುಂ—

ಕಂ ॥ ಆರೆಂದುಮಱಿಯೆನೊರ್ವಂ
ಕ್ರೂರಾತ್ಮಂ ದಿವ್ಯ ಮುನಿಗಿದಂ ಮಾಡಿ ದುರಾ ॥
ಚಾರಂ ನರಕಾಯುಷ್ಯ
ಕ್ಕಾರಂಬಿಗನಾದನೆಂದು ಬೆಬ್ಬಳಿಸಿ ನುಡಿದಂ ॥ ೪ ॥

ದಂಡಕನಾ ನುಡಿಗೆ ಭಯಂ
ಗೊಂಡಂ ಯತಿಪತಿಯ ಧೈರ್ಯಮುಂ ಕಂಡು ಗುಣಂ ॥
ಗೊಂಡಂ ಪದಾನತಂ ಕ್ಷಮೆ
ಗೊಂಡಂ ಭವ್ಯಂಗೆ ಸಹಜಮುಪಶಮಭಾವಂ ॥ ೫ ॥

ಕ್ಷಮಿಯಿಸುವುದೆನ್ನ ಗೆಯ್ದಱಿ
ಯಮೆಗೆಂದಡಿಗೆಱಗೆ ದಂಡಕಂ ಮುನಿ ನುಡಿದಂ ॥
ಕ್ಷಮಿಯಿಸುವುದೆ ಮುಖ್ಯಂ ಸಂ
ಯಮಕ್ಕೆ ನಿಶ್ಶಲ್ಯನಲ್ಲದಂ ಸಂಯಮಿಯೇ ॥ ೬ ॥

ಚ ॥ ಎಡಪಿದ ಕಲ್ಗೆ ತಾಗಿದ ಮರಕ್ಕೆನಿಸಂ ಮುನಿಸಂ ಮನಕ್ಕೆ ತ ।
ರ್ಪೊಡೆ ತರಲಕ್ಕುಮನ್ಯರೊಳಮನ್ಯಭವಂಗಳೊಳಾರ್ತ ರೌದ್ರದಿಂ ॥
ದೊಡರಿಸಿದಾತ್ಮಕರ್ಮಫಲಮಂ ತವಿಪಲ್ಲಿ ಸಹಾಯ ವೃತ್ತಿಯಂ ।
ಪಡೆವ ಸುಹೃಜ್ಜನಕ್ಕೆ ಮುನಿಪಂ ಮುನಿದಂದು ಕೃತಘ್ನನಲ್ಲನೇ ॥ ೭ ॥

ಎಂದಹಿಂಸಾ ರೂಪಮಪ್ಪ ಧರ್ಮಮನುಪದೇಶಂಗೆಯ್ಯೆ ದಂಡಕನದಂ ಕೈಕೊಂಡಾ ಕ್ರಮದೊಳ್ ನಡೆಯುತ್ತುಮಿರೆ—

ಕಂ ॥ ಅರಸಿಯುಮಮಾತ್ಯನುಂ ಪಾ
ಪ ರತರ್ ಮಧು ಮದ್ಯ ಮಾಂಸ ಸೇವಾಸಕ್ತರ್ ॥
ನಿರವದ್ಯಮನರಸನ ಸ
ಚ್ಚರಿತ್ರಮಂ ಕಿಡಿ[1]ಸಲೆಂದು ಮಂತಣಮಿರ್ದರ್ ॥ ೮ ॥

---

1. ಸುವಂತು. ಚ.

ಅಂತು ತಮಗಪಾಯಮನೊಡರ್ಚುವುಪಾಯಮಂ ಚಿಂತಿಸಿ—

ಕಂ ॥ ಕಳವಂ [1]ಮಿಥ್ಯೆಯನೇಱಿಸಿ
ಕಳತ್ರದೊಳ್ ಪೊಲ್ಲಕೆಯ್ದರೆಂದಿಲ್ಲದುದಂ ॥
ಗೞಪಿದೊಡೆ ದಂಡಕಂ ಕಡು
ಮುಳಿದಂ ಋಷಿಯರ್ಗೆ ಮಾಯೆ ಮೋಹಿಸದಾರಂ ॥ ೯ ॥

ಪಱಿಗಂಜದೆ ಕರ್ಣೇಜಪ
ರಱನುಡಿ ದಿಟಮೆಂದೆ ಡಂಗುರಂಬಡಿಯಿಸಿ ಕಾ ॥
ಪಱಿಯೆ ಪೊಱಮಡಿಸಿ ಕಳೆದಂ
ಪೊೞಲಿಂದವಿಚಾರಿ ಜೈನಮುನಿ ಸಂಕುಲಮಂ ॥ ೧೦ ॥

ಅಂತು ಋಷಿರೂಪನೂರಂ ಪೊಕ್ಕೊಡೆ ಕೊಲ್ವೆನೆಂದಾಣತಿಯಿಟ್ಟು ಪೊಱಮಡಿಸಿ ಕಳೆವುದುಂ—

ಕಂ ॥ ಅಱಿಯದೆ ಪೊೞಲಂ ಪುಗೆ ಕೆಲ
ರ[2]ಱುಗುಲಿ ಋಷಿಯರ್ಗೆ ಮುನಿದು ತನ್ನಾಜ್ಞೆಗೆ ಬೆ॥
ೞ್ಕುಱರೆಂದು ಕೊಂದು ಪಾತಕಿ
ತೆಱೆದಂ ಪುಗಲೆಂದು ನಿರಯದರರೀ ಪುಟಮಂ ॥ ೧೧ ॥

ಅಂತು ಋಷಿವಧೆಗೆಯ್ದುತ್ಕಟಮಪ್ಪ ಪಾಪಮಂ ಸದ್ಯಃಫಲರೂಪಮಂ ದಂಡಕನುಪಾರ್ಜಿಸುವುದುಮಿತ್ತ ಮತ್ತೊಂದು ದಿವಸಮಾಪುರಕ್ಕೆ ಮಹಾತಪೋಧನರೇಕವಿಹಾರಿಗಳ್ ಬರುತ್ತುಮಿರೆ ಮಾರ್ಬಟ್ಟೆಯೊಳೊರ್ವಂ ಕಂಡು ಮಗುೞೆ ಬಿಜಯಂಗೆಯ್ಯಿಮೆನಲದೇಕಾರಣಮೆಂಬುದುಮೀಪೊೞಲನಾಳ್ವ ನೃಪಂ ನಿಷ್ಕಾರಣಮನೇಕಋಷಿಸಂಘಾತಮಂ ಘಾತಿಸಿದನೆಂಬುದುಮಾನುಡಿಯೊಳೊಗೆದ ಕರುಣಾರಸಮೆ ಕಲುಷ ಕಿಂಪಾಕ ಬೀಜಮನಂಕುರಿತಂಮಾಡೆ—

ಮ ॥ ಅರಸಾಂ ಬಾರಿಪರೆನ್ನನಾರೆನಗೆ ಚಾತುರ್ದಂತಮುಂಟೆನ್ನ ದೋಃ ।
ಪರಿಘಂ ದುರ್ಧರಮೆಂದು ಸಾಧುಜನಮಂ ನಿಷ್ಕಾರಣಂ ಕೊಂದನೇ ॥
ದುರಿತಕ್ಕಂಜನೆ ದುರ್ಯಶಕ್ಕಗಿಯನೇ ಪೇೞೆಂದು ಕಣ್ಕೆಂಕಮಾ ।
ಗಿರೆ ಪುರ್ವರ್ವೆ ಪೊದೞ್ದುದಾಮುನಿಗೆ ಸರ್ವಗ್ರಾಸಿ ಕೋಪಾನಲಂ ॥ ೧೨ ॥

---

1. ಮಿಥ್ಯೆಯಿ. ಚ 2. ಱ. ಗ.

ಕಂ ॥ ಅರಸನನರಸಿಯ ನೂರಂ
ಪರಿಜನಮುಂ ನಾಡನಡವಿಯುಂ ಬೆಟ್ಟೊಳಗಾ ॥
ಗಿರೆ ಮುನಿ ತೇಜೋವೃದ್ಧಿಯಿ
ನುರಿಪಿದನಣಕಕ್ಕೆ ಸವಣನುಂ ಸೈರಿಪನೇ ॥ ೧೩ ॥

ಮ ॥ ಸಕಲತ್ರಂ ಕ್ಷಣಮಾತ್ರದಿಂ ವಿಲಯ ವಹ್ನಿ ಜ್ವಾಲೆವೋಲ್ ಸುಟ್ಟ ದಂ ॥
ಡಕನಂ ನಂದಿದುದಿಲ್ಲ ಪೇೞ್ ಪೆಸರಿಲ್ಲೆಂಬನ್ನೆಗಂ ವಂಶ ರಾ ॥
ಜಕಮುಂ ವಾಮಭುಜಾಗ್ರದೊಳ್ ಮುನಿಯ ತೇಜೋವೃದ್ಧಿಯಿಂದಾದ ಪಾ ।
ವಕನಾಸ್ವಾದಿಸಿದತ್ತಿದೇವಿರಿದೊ ಪೇೞಾ ಪಾತಕಂಗೆಂಬಿನಂ ॥ ೧೪ ॥

ಕಂ ॥ ಸುಡುವುದು ಕಿರ್ಚಲ್ಲದೆ ಗತಿ
ಗಿಡಿಸದು ಕೋಪಾಗ್ನಿ ಸುಟ್ಟುವೊಡಲಂ ಗತಿಯುಂ ॥
ಗಿಡಿಸಿದುದಾ ಯತಿಗೆನಲೇಂ
ಪಡೆಮಾತಱಿವುಳ್ಳನುೞಿಯದಿರ್ಪನೆ ಮುಳಿಸಂ ॥ ೧೫ ॥

ಅಂತು ಸಾಧುಸಂಘ ವಧೆಗೆಯಿಸಿದ ವಧುವುಮಮಾತ್ಯನುಂ ವಧಕನಪ್ಪ ದಂಡಕನುಂ ಕ್ರೋಧಕ್ಕೆ ಸಂದ ತಪೋಧನನುಮಧೋಗತಿಗೆ ಸಂದರಾ ದಂಡಕಂ ನರಕ ದಂಡನೆಗೊಳಗಾಗಿ ಬೞಿಯಂ ದುರ್ಗತಿಗಳೊಳ್ ತೊೞಲ್ದೀಗಳ್ ಪರ್ದಾಗಿರ್ದನೆನೆ ಕೇಳ್ದದರ್ಕ್ಕೆ ಖಗಂ ಖೇದಿಸೆ ನೀಂ ಮುನ್ನಮಱಿವುನೆಱೆಯದೆ ನರಕಾದಿ ದುಃಖಮನನುಭವಿಸಿದೆ; ನೀನೀಗಳೆಮ್ಮಂ ಕಂಡ ದೂಸಱಿಂ ಕರ್ಮಬಂಧಂ ಶಿಥಿಲವಾದುದೆಂದದಱ ಮನೋವಿಷಾದಮುಂ ಕಳೆದದರ್ಕೆ ಲಬ್ಧಿ ದೊರೆಕೊಂಡುದೆಂದಱಿದು ಸಮ್ಯಗ್ದರ್ಶನ ಪೂರ್ವಕಮಣುವ್ರತಮುಂ ಕೊಟ್ಟು ರಾಮಲಕ್ಷ್ಮಣರುಮಂ ಸೀತೆಯುಮಂ ಪರಸಿ ಗಗನಚಾರಣರ್ ಪೋಪುದುಂ—

ಚ ॥ ಎನಗಿದು ಕಂದನೆಂದು ಗಳ ಕಂದಳದೊಳ್ ಚರಣದ್ವಯಂಗಳೊಳ್ ॥
ಜನಕಜೆ ಕಂಠಿಕಾ ವಲಯಮುಂ ಮಣಿ ನೂಪುರಮುಂ ತೊಡರ್ಚೆ ಮುಂ ॥
ಡನದ ಮಯೂಖ ಲೇಖೆ ಜಡೆಗೊಂಡು ಮಡಲ್ತು ಕವಲ್ತುಲರ್ಚೆ ದೃ ।
ಗ್ವನರುಹಮುಂ ಜಟಾಯುವೆಸರಾದುದದರ್ಕ್ಕೆ ರಘು ಪ್ರವೀರರಿಂ ॥ ೧೬ ॥

ಅಂತು ರಾಮಲಕ್ಷ್ಮಣರ್ ಸುಗುಪ್ತ ಗುಪ್ತ ಗಗನಚಾರಣರ ತಪಸ್ಸಾಮರ್ಥ್ಯ ದರ್ಶನ ಬಲದಿಂ ಕೃತಾರ್ಥರಾಗಿ ಮಱುದಿವಸಂ ದಂಡಕಾರಣ್ಯದೊಳಗನೆ ದಕ್ಷಿಣಾಭಿಮುಖರಾಗಿ ನಡೆದು ಚಲ ವೀಚೀ ಸಂಚಯಮುಂ ಕ್ರೌಂಚ ನದಿಯನುತ್ತರಿಸಿ ಸರಿತ್ತಟ ವನ ಲತಾ ಗೃಹದೊಳ್ ಸೀತೆ ಬೞಲ್ದಳೆಂದು ವಿಶ್ರಮಿಸಿ ಸುಖಮಿರ್ಪುದು ಮಾನದಿಯ ಸಮೀಪದ ಸರ್ವರತ್ನ ಗರ್ಭಮಪ್ಪ ದಂಡಕ ಗಿರಿಯ ಗುಹಾ ಗೇಹದೊ

ಳೊಂದು ಯೋಜನದೆಂಟನೆಯ ಭಾಗಂ ಖಾತವಾದಲ್ಲಿ ಪಾತಾಳಲಂಕೆಯೆಂಬ ಪುರ ಮಿರ್ಪುದದನಾಳ್ವಂ ಖರನೆಂಬನಾತನರಸಿ ರಾವಣನ ತಂಗೆ ಚಂದ್ರನಖಿಯೆಂಬಳವರ್ಗೆ ಶಂಭುಕನುಂ ಸುಂದರನುಮೆಂಬರಿರ್ವರ್ ತನಯರಾದರಲ್ಲಿ ಪಿರಿಯಮಗಂ ಶಂಭುಕಂ ಪೆಱಗೆ ಪನ್ನೆರಡು ವರ್ಷಂ ಮೊದಲ್ಗೊಂಡು ಸೂರ್ಯಹಾಸಾಸಿಯಂ ಸಾಧಿಸುತ್ತಿರ್ಪುದು ಮಾತಂಗಾಬಾಳನಿತ್ತು ಬೆಸಕೆಯ್ಯಲೆಂದು ಬಂದ ಯಕ್ಷಾಮರ ಸಹಸ್ರಮಾ ಖಡ್ಗರತ್ನ ಮನವನಿರ್ದ ಬಿದಿರ ಪೊದಱ ಮೊದಲೊಳಿರಿಸಿ [1]ಮೇರು ಮಂದಾರ ಸುಮನೋ ಮಂಜರಿಯಿನರ್ಚಿಸುತಿರ್ಪುದುಮಿತ್ತ ಲಕ್ಷ್ಮಣಂ ವನ ವಿಲಾಸ ನಿರೀಕ್ಷಣ ಕುತೂಹಲ ನಾಗಿ—

ಕಂ॥ ಸುೞಿವೆಡೆಗೆ ಖಡ್ಗಸಿದ್ಧಿಗೆ
ಬೞಿಯಟ್ಟಿದ ಪುಣ್ಯ ದೇವತಾ ದೂತನವೋಲ್॥
ಸುೞಿಗಾಳಿಯೊಡನೆ ಹರ್ಷದ
ಮುೞಿಶೆ ಬರೆ ಬಂದತ್ತದೊಂದು ದಿವ್ಯಾಮೋದಂ ॥ ೧೭ ॥

ಇದು ಮನುಜ ಲೋಕ ವನ ಕುಸು
ಮದ ಸೌರಭಮಲ್ತು ದಿವಿಜ ಲೋಕದ ಮಂದಾ॥
ರದ ಕುಸುಮ ಸೌರಭಂ ಬಂ
ದುದೆತ್ತಣಿಂದೆಂದು ಲಕ್ಷ್ಮಣಂ ಬೞಿಸಂದಂ॥ ॥ ೧೮ ॥

ತನಿಗಂಪಿನ ಬೞಿವೞಿಯಿಂ
ಜನಾರ್ದನಂ ಭೃಂಗದಂತೆ ಸುಮನೋರಾಗಂ॥
ಜನಿಯಿಸೆ ತಮಾಲ ಪಲ್ಲವ
ತನುರುಚಿ ಪೆರ್ವಿದಿರ ಪೊದಱನಂದ್ಯೈತಂದಂ ॥ ೧೯ ॥

ಸ್ಥಲ ರಕ್ತ ಕಮಲಮಂ ಕೋ
ಮಲ ಪದ ತಳಪದ್ಮರಾಗರುಚಿಯಿಂ ವಂಶ॥
ಸ್ಥಲಮುಂ ತನುಪ್ರಭಾಮುಂ
ಡಲದಿಂದೆಂಟನೆಯ ಕೇಶವಂ ದ್ವಿಗುಣಿಸಿದಂ ॥ ೨೦ ॥

ಅಂತು ಬಂದು ಬಿದಿರ ಪೊದಱ ಮೊದಲೊಳಮರ ತರು ಸುಮನೋಮಾಲೆ ಯೊಳಮನರ್ಘ ರತ್ನಮಾಲೆಯೊಳಮರ್ಚಿಸಿರ್ದ ಸೂರ್ಯಹಾಸಾಸಿಗೆ ಕೈಯಂ ನೀಡು ವುದುಂ—

---

1. ನಮೇರು. ಕ. ಖ. ಘ.

ಕಂ॥ ಜಯಲಕ್ಷ್ಮಿಯ ನಯನೋತ್ಪಲ
ಮಯೂಖಮೆನೆ ತಾನೆ ಬಂದು ಕರ ಕಿಸಲಯ ಕಾಂ॥
ತಿಯಿನೇಂ ರಾಗಂಬೆತ್ತುದೊ
ಜಯಾಸಿ ಪೊಗರಿಟುಸೆ ಕಿಸುರ ಮಸಿಯಕ್ಕರಮಂ ॥ ೨೧ ॥

ಕಾಳಾಹಿಯೆನಿಪ ಕೃಷ್ಣನ
ತೋಳೊಳ್ ನಿಶ್ವಾಸ ಧೂಮ ಲೇಖಾಕೃತಿಯಿಂ॥
ಬಾಳಾಯತ[1]ಮಿರೆ ಜಡಿದಂ
ಬಾಳೊಡನಲ್ಲಾಡೆ ನೆಟಿಲ ನೆವದಿಂ ದಿನಪಂ ॥ ೨೨ ॥

ಅಂತು ಜಡಿದು ಕರವಾಳ ಕೂರ್ಪಂ ನೋಡಲೆಂದು—

ಕಂ॥ ಬಾಯ್ದಾರೆ ನಿಲೆ ಕುಮಾರಂ
ಪೊಯ್ದೊಡೆ ಕೈಯುಳವಿದಾರ ಕೈಯುಳವಿಯೆನಲ್॥
ನೆಯ್ದಿಲ ಕಾವಿನ ಪೊದೆಯುಂ
ಪೊಯ್ದಂತೊರ್ಮೊದಲೆ ಪಱಿದುದಾ ವಂಶವನಂ ॥ ೨೩ ॥

ಆ ವಂಶವನದೊಡನೆ—

ಕಂ॥ ತಲೆ ಪಱಿದು ಪಾಱೆ ಪಾಱುವ
ತಲೆವರವೆಡೆವಱಿಯುದಟ್ಟೆಯಿಂದುಣ್ಮುವಸೃ॥
ಗ್ಜಲಧಾರೆ ನಾಳಮೆನೆ ಪಂ
ದಲೆ ಪೋಲ್ತುದು ನಭದೊಳಲರ್ದ ಕೆಂದಾವರೆಯಂ ॥ ೨೪ ॥

ಆಗಳದಂ ಕಂಡು ನಿರಪರಾಧನಂ ಕೊಂದೆನೆಂದು ಮನದೊಳ್ ಲಕ್ಷ್ಮಣಂ ಕಟ್ಟುಕಡೆದು—

ಕಂ॥ ವೇಧಸ್ಸಂಕಲ್ಪಂ ದು
ರ್ಬೋಧಮಿವಂ ನಿಟ್ಟೆಯಿಂ ನಿರೋಧಿಸಿ ತನುವಂ॥
ಸಾಧಿಸಿದೊಡೀ ಕೃಪಾಣಮೆ
ಬಾಧಾಕರಮಾಯ್ತು ಜಾ ಕೃಪಾಣೀಯದವೋಲ್ ॥ ೨೫ ॥

ಎಂದು ಕಾರುಣ್ಯಪರನಾಗಿರ್ಪುದುಂ ತತ್ಕೌಕ್ಷೇಯಕಮಂ ರಕ್ಷಿಸುವ ಯಕ್ಷಾಮರ ಸಹಸ್ರಮಿನ್ನೆಮಗೆ ನೀನೆ ಪತಿಯೆಂದು ಪೊಡೆವಟ್ಟು ಪೂಜಿಸಿ ಪೋಪುದುಂ, ನಿಜಾಗ್ರಜನ ಸಮೀಪಕ್ಕೆ ಬಂದು ಕರವಾಳ ವೃತ್ತಾಂತಮಂ ವಿದಿತಂ ಮಾಡಿ—

---

1. ಮೆನೆ. ಗ. ಘ. ಚ.

ಕಂ ॥ ಜಳರುಹನಾಭಂ ಕಣ್ಣೊಳ್
ಪೊಳೆದುಳ್ಳುವ ಸೂರ್ಯಹಾಸಮಂ ಕುಡೆ ಕೈಯೊಳ್ ॥
ಹಳಧರನ ದೇಹರುಚಿ ಮೂ
ವಳಸುವುದುಂ ಚಂದ್ರಹಾಸಮೆನಿಸಿತ್ತಾಗಳ್ ॥ ೨೬ ॥

ಅನ್ನೆಗಮಿತ್ತಲ್—

ಕಂ ॥ ವಿವಿಧಾರ್ಚನೆವೆರಸು ತನೂ
ಭವನಿಂದು ಕೃಪಾಣ ಸಿದ್ಧಿವಡೆದಪನೆಂಬು ॥
ತ್ಸವದಿಂದುಳ್ಕಾಪಾತಮ
ನವಳಂಗಪ್ರಭೆಯಿನಿೞಿಸಿ ನಭದಿಂದಿೞಿದಳ್ ॥ ೨೭ ॥

ಅಂತು ನಭದಿಂದಿೞಿದು—

ಕಂ ॥ ತನಯುನ ತಲೆಯೊಂದೆಸೆಯೊಳ್
ತನುವೊಂದೆಸೆಯೊಳ್ ಸಿಡಿಲ್ದು ಕೆಡೆದಿರೆ ಕಂಡಾ ॥
ವನಿತೆ ಭಯರಸದಿನೆರ್ದೆ ಪೌ
ವನೆ ಪಾಱೆ ವಿಷಾದ ವಹ್ನಿಗಿಂಧನಮಾದಳ್ ॥ ೨೮ ॥

ಖರ ನಂದನನಂ ದಶಕಂ
ಧರನಳಿಯನನೆನ್ನ ಶಂಭು ಕುವರನನಾರ್ ಕೊಂ ॥
ದರೆನುತ್ತೆ ವೋದಿಕೊಂಡಳ್
ಕರದಿಂದಡಿಗಡಿಗೆ ಚಂದ್ರನಖಿ ತೆಳ್ವಸಿಱಂ ॥ ೨೯ ॥

ಚ ॥ ಬಱಬಱಬತ್ತೆ ಬಾಯ್ ಬೆರಲ ಬಾಸುಳ ಪದ್ಧತಿ ಮಧ್ಯದೊಳ್ ಪಗಂ ।
ಡಿಱಿದಿರೆ ಕಣ್ಣ ನೀರ್ಗಳ ಪೊನಲ್ ಕರೆಗಣ್ಮೆ ಕಪೋಲದೊಳ್ ಬಯ ॥
ಲ್ಗೊಱೆಯನೊಡರ್ಚೆ ಚಂದ್ರನಖಿ ಶೋಕರಸಾಕುಳ ಚಿತ್ತೆಯಾಗಿ ಮೆ ।
ಯ್ಯಱಿಯಳೆ ಚಿತ್ರಮಲ್ತು ನಿಜಪುತ್ರ ವಿಯೋಗಮನಾರೊ ಸೈರಿಪರ್॥ ೩೦ ॥

ಅನಂತರಮೆಂತಾನುಂ ಮೂರ್ಛೆಯಿಂದೆೞ್ಚತ್ತು—

ಕಂ ॥ ತನ್ನಂ ದಂಡಿಸಿ ಬಾಳಂ
ಪನ್ನೆರಡಬ್ದಕ್ಕೆ ಪಡೆದ ಬಾಲಕನಂ ಕೊಂ ॥
ದೆನ್ನೊಳೆಡಱಿದನ ಬೇರೊಳ್
ಬೆನ್ನೀರಂ ಪೊಯ್ವೆನೆಂದು ಬೇಗದಿನೆೞ್ದಳ್ ॥ ೩೧ ॥

ಕಂ ॥ ಒಡನೊಡನೆ ಶೋಕರಸಮುಂ
ಕಡುಮುಳಿಸುಂ ತಿಣ್ಣಮಾಗೆ ಖೇಚರಿ ಮೊಟಗಂ ॥
ಸಿಡಿಲಂ ಕೆದಱುವ ಕಲ್ಪದ
ಕಡೆಗಾಲದ ಕೆಂಡವಱೆಯ ಮುಗಿಲವೊಲಿರ್ದಳ್ ॥ ೩೨ ॥

ರೋದನದಿಂ ಸುತನ ಶಿರ
ಚ್ಛೇದನದಱಲಾಱದಾಱುಗುಂ ರಿಪುರುಧಿರಾ ॥
ಸ್ವಾದನದಿನೆಂದು ವಿಲಯೋ
ತ್ಪಾದನ ಭೈರವಿಯ ಮುಸಕಮಂ ಕೈಕೊಂಡಳ್ ॥ ೩೩ ॥

ಅಂತು ಮುಳಿದೆಟ್ಟಿ ಪಜ್ಜೆವಿಡಿದು ನಡೆದು ರಾಮಲಕ್ಷ್ಮಣರಂ ಕಂಡು—

ಚ ॥ ಬಗೆವವರಾರಿದಂ ಖಚರಕಾಮಿನಿ ಪುತ್ರವಿಯೋಗವೇಗಮಂ ।
ಬಗೆಯದೆ ಕಂದನಂ ಬಱಿದೆ ಕೊಂದವನಂ ಕೊಲಲೆಂದು ಪೂಣ್ದುದಂ ॥
ಬಗೆಯದೆ ನೋಡಿ ಲಕ್ಷ್ಮಣನ ಗಾಡಿಗೆ ಸೋಲ್ತೊಡಗೂಡುವಾಸೆಯಂ ।
ಬಗೆದಳ[1]ದಂತೆ ದಲ್ ಬಗೆವರೇ ವಿಷಯಾಸವಮತ್ತರೇನುಮಂ ॥ ೩೪ ॥

ಅಂತು ಕಂತು ಸಂತಾಪದಿನಾವರ್ತನ ಪರಿವರ್ತನಂ ಬಂದು—

ಕಂ ॥ ರೂಪ ಪರಾವರ್ತನ ವಿ
ದ್ಯಾಪರಿಣತಿಯಿಂ ವಿಯಚ್ಚರಾಂಗನೆ ಕನ್ಯಾ ॥
ರೂಪಮನೇಂ ತಳೆದಳೊ ತಾ
ರಾಪತಿ ತಾರುಣ್ಯಲಕ್ಷ್ಮಿಯಂ ತಾಳ್ದಿದವೋಲ್ ॥ ೩೫ ॥

ನನೆಗಣೆಯಧಿದೇವತೆಯೆಂ
ಬಿನೆಗಂ ಸಾರ್ತಂದು ಕೃತಕಶೋಕರಸಾಲಂ ॥
ಬಿನಿ ನೆಯ್ದಿಲೆಸಳೊಳಮರ್ದಿನ
ಪನಿ ಬಂದವುದೆನಿಸಿ ಕಣ್ಣ ನೀರಂ ತಂದಳ್ ॥ ೩೬ ॥

ಆ ರಮಣಿ ಕೃತಕಶೋಕಾ
ಸಾರದ ಪೊನಲೊಳಗೆ ಬೆಂಡು ನೆಗೆದಿರ್ದುಮದೇಂ ॥
ರಾರಾಜಿಸಲಾರ್ತಳೊ ತಿಳಿ
ನೀರೊಳಗಣ ಚಂದ್ರಕಲೆಯ ನೆಟಿಲೆಂಬಿನೆಗಂ ॥ ೩೭ ॥

---

1. ದಂತೆನಲ್. ಚ.

ಅಂತು ಶೋಕಿಸುವಳಂ ಕಂಡು--

ಕಂ ॥ ತನಗೆ ಕರುಣಾ ರಸಂ ಸಂ
ಜನಿಯಿಸೆ ಸಾರಣ್ಗೆ ಕರೆದು ಕುಳ್ಳಿರಿಸಿ ಲತಾ ॥
ತನು ಕಣ್ಬನಿಯಂ ತೊಡೆದಳ್
ಜನಕಾತ್ಮಜೆ ಕನ್ನೆ ಕಪಟಿಯೆಂದೆತ್ತಱಿವಳ್ ॥ ೩೮ ।

ಆಗಳಾ ಕನ್ನೆಯಂ ಕರುಣಾರಸ ಪ್ರಸನ್ನ ದೃಷ್ಟಿಯಿಂ ರಘುವೀರಂ ನೋಡಿ—

ಮ ॥ ಸ್ರ ॥ ಬಿಸಿಲುಂ ಬೆಳ್ದಿಂಗಳುಂ ಗಾಳಿಯುಮೊಳಪುಗದತ್ಯುಗ್ರ ಸತ್ವಂಗಳಿಂದ ।
ರ್ವಿಸುವೀ ದುರ್ವಾರ ಕಾಂತಾರಮನಬಲೆಯೆ ನಿಶ್ಯಂಕೆಯಿಂದೆಂತು ಪೊಕ್ಕೈ ॥
ಬಿಸವಂದಂ ಕನ್ನೆ ನಿನ್ನಂದಮನೆಮಗಱಿಪೆಂದಾಜಿರಂಗ ಪ್ರಚಂಡಂ ।
ಬೆಸಗೊಂಡಂ ಬೀಱಿ ದಂತದ್ಯುತಿ ಶರದದ ಬೆಳ್ದಿಂಗಳಂ ರಾಮಚಂದ್ರಂ ॥ ೩೯ ॥

ಅಂತು ಬೆಸಗೊಳ್ವುದುಂ ಮುಕುಳೀಕೃತಾಂಜಲಿಪುಟಿ ಕೃತಕಿ ಕೃತಾಂತ ನೆನ್ನ ಮಾತಾಪಿತೃಗಳನೊರ್ವೋದಲೊಳ್ ಮುರಿದುಯ್ಯೆ ನಿಸ್ಸಹಾಯ ವೃತ್ತಿಯಿಂ ನಿತ್ತರಿಸಲಾಱದಾನುಮೆನ್ನಂ ಪರಿಚ್ಛೇದಿಸಿ ಪಟುವಂ ಪೊಕ್ಕು ಸಾವೆನೆಂದು ಬರುತ್ತುಂ ನಿಮ್ಮನೆನ್ನ ಪುಣ್ಯೋದಯದಿಂ ಕಂಡೆನೆನ್ನನಿರ್ವರೊಳೊರ್ವರ್ ಗಂಧರ್ವ ವಿವಾಹ ವಿಧಿಯಿಂ ಕೈಕೊಳ್ವುದೆನೆ ಜನಕಜೆ ರಾಮಲಕ್ಷ್ಮಣರ ಮೊಗಮಂ ನೋಡಿ ಮುಗುಳ್ನಗೆ ನಗುವುದುಮದರ್ಕೆ ಸಿಗ್ಗಾಗಿ—

ಕಂ ॥ ಮಗನಳಿದಟಿಲಂ ಪಾತಕಿ
ಬಗೆಯುದೆ ಪರಪುರುಷ ಸೇವೆಗಱಿಪುವ ಬಗೆಯಂ ॥
ಬಗೆದಾ ಬಗೆ ಕೂಡದೊಡು
ಬ್ಬೆಗಮಿರ್ಮಡಿಸಿತ್ತು ಖಚರ ವಧುಗಾಕ್ಷಣದೊಳ್ ॥ ೪೦ ॥

ಅಂತು ಮನದೊಳುಮ್ಮಳಿಸಿ—

ಕಂ ॥ ಅವಳಿವರ್ಗೆ ತಕ್ಕುದಂ ಮಾ
ಡುವೆನೆಂಬಾಗ್ರಹದಿನವರ ಕಣ್ಬೊಲನಂ ದಾಂ ॥
ಟುವಿನಂ ನಡೆದು ತಟಿಲ್ಲತೆ
ಯವೊಲಾಕಾಶಕ್ಕೆ ನೆಗೆದು ಪಾಱಿದಳಾಗಳ್ ॥ ೪೧ ॥

ಅಂತು ಮನೋವೇಗದಿಂ ಪೋಗಿ ಪೊಟಲುಮನರಮನೆಯುಮಂ ಪೊಕ್ಕು—

ಹರಿಣಿ ॥ ಪರಿದ ಕಚಮುಂ ಕಣ್ಣಿಂ ಕಯ್ಗಣ್ಮುವಶ್ರು ಜಲಂಗಳುಂ ।
ಬೆರಸು ಬಸಿಱಿಂ ತಿಣ್ಣಂ ಮೋದುತ್ತುಮಾತ್ಮಜ ಶೋಕದಿಂ ॥
ಖರನ ಚರಣೋಪಾಂತ ಕ್ಷೋಣೀಪ್ರದೇಶದೊಳಾ ತನೂ ।
ದರಿ ತನುವನಂದೊಕ್ಕಳ್ ಹಾಹಾ ರವಂ ನೆಗಳ್ವಿನ್ನೆಗಂ ॥ ೪೨ ॥

ಅಂತು ಶೋಕ ವಿಕಲೆಯಾದ ಚಂದ್ರನಖಿಯುಂ ಕಂಡು ಖರನಿದೇನೆಂದು ಬೆಸಗೊಳ್ವುದುಂ—

ಮ ॥ ಬಗೆಗಿಂದುಮ್ಮಳಮಾಗೆ ತಲ್ಲಳಿಸಿ ಬಾಳಂ ಸಾಧಿಸುತ್ತಿರ್ದ ಪೆ ।
ರ್ಮಗನಂ ನೋಡುವೆನೆಂದು ಪೋಗಿ ತಲೆ ಬೇಱಾಗಟ್ಟಿ ಬೇಱಾಗೆ ಧಾ ॥
ತ್ರಿಗೆ ಬಿಬ್ದಿರ್ದೊಡೆ ಕಂಡುಭೋಂಕನೆರ್ದೆ ಬಾಳಂ ಬೀಸಿದಂತಾಗೆ ಮೂ ।
ರ್ಛೆಗೆ ಸಂದೆಂ ಸುಡೆ ಸುತ್ತಿ ಶೋಕದಹನಂ ಜ್ವಾಲಾ ಸಹಸ್ರಂಗಳಿಂ ॥ ೪೩ ॥

ಅಂತು ಮೂರ್ಛೆವೋಗಿ ಕಿಱಿದಾನುಂ ಬೇಗದಿಂ—

ಕಂ ॥ ಚೇತರಿಸಿ ತನಯನಂ ಕೊಂ
ದಾತನ ಬಟ್ಟೆವಿಡಿದು ಪೋಗಿ ಬಾಳಂ ಕೊಳಲೆಂ ॥
ದಾತನ ಮೇಲ್ವಾಯ್ದೊಡೆ ಪಡೆ
ಮಾತೇಂ ಪರಿಭವಿಸಿ ಕಳೆದನುದ್ಧತನೆನ್ನಂ ॥ ೪೪ ॥

ನಿನಗೆಸತಿಯಾಗಿಯುಂ ತ್ರಿಭು
ವನ ವಿಜಯಿ ದಶಾಸ್ಯನೊಡನೆ ಪುಟ್ಟಿಯುಮಾದ ॥
ತ್ತೆನಗೆ ಪರಿಭವಮೆನಲ್ಕು
ನ್ನಿನ ಜನ್ಮದ ಕರ್ಮಬಂಧಮಂ [1]ಮಿಾಱುವರಾರ್ ॥ ೪೫ ॥

ಮ ॥ ಕವಚಂದೊಟ್ಟು ಶರಾಸನಂಬಿಡಿದು ತೂಣೀರಂಗಳಂ ತಾಳ್ದಿ ಮಿಾ ।
ಱುವರಾರೆಮ್ಮುಮನೆಂಬ ದೋರ್ಬಲದಗುರ್ವಿಂ [2]ನಿರ್ಭರಾನಂದದಿಂ ॥
ದವರಿರ್ವರ್ ಮನುಜರ್ ತನೂಭವನುಮಂ ಕೊಂದೆನ್ನನಾದಂ ಪರಾ ।
ಭವಮಂ ಪೊರ್ದಿಸಿ ನಿರ್ದಯರ್ ಬಗೆಯದಿರ್ದರ್ ದಂಡಕಾರಣ್ಯದೊಳ್ ॥

ಎನಲೊಡಂ ಶ್ರವಣ ವಿವರದೊಳ್ ತಪ್ತಾಯಸಮಂ ಪೊಯ್ದಂತೆ ದಾರಕ ವಿದಾರಣಮುಂ ದಾರ ಪರಾಭವಮುಂ ತನಗಟಲನೆರ್ದೆವಟಲುಮನೊದವಿಸೆ—

---

1. ಕಟಿಂಪವರಾರ್. ಚ. ಗ.
2. ದಿರ್ಪರಾನಂದದಿಂ ಜವನಿ. ಕ. ಖ. ಗ. ಘ. ಚ.

ಕಂ ॥ ಬೀಜದಿನೊಗೆವ ವಿಷಾಂಕುರ
ದೋಜೆಯೆನಲ್ ಖರನ ಶೋಕ ಬೀಜದಿನೊಗೆದು ॥
ತ್ತೇಜಿಸಿದುದು ಕೋಪಾಗ್ನಿ ಶಿ
ಖಾಜಾಲಂ ಕೆದಱಿ ಕಿಡಿಯುಮಂ ಕೆಂಡಮುಮಂ ॥ ೪೭ ॥

ಶಾ ॥ ಇವೆ ಕೋಪಾನಲ ಧೂಮ ಲೇಖೆಯೆನೆ ಪುರ್ವುರ್ವೆಟ್ಟು ಜರ್ವಲ್ ತಗು ।
ಳ್ದುವು ಕಣ್ಗಳ್ ಪೊಱವಾಯ್ದು ಕೋಪಶಿಖಿ ಪೊಣ್ಮಿತ್ತೆಂಬಿನಂ ಕೆಂಕಮಾ॥
ದುವು ಕೋಪಾನಲ ತಾಪದಿಂ ರಣ ರಸಂ ದಳ್ಳೆಂದು ಕಾಯ್ದುಕ್ಕುವಂ ।
ತೆವೊಲಾಗಳ್ ಬೆಮರ್ಗಳ್ ಕಪೋಲತಲದೊಳ್ ತಳ್ಪೊಯ್ದುವಾ ದೈತ್ಯನಾ॥

ಅಂತು ರೋಷ ಗ್ರಹಾವೇಶಮನಪ್ಪುಕೆಯ್ದು—

ಕಂ ॥ ತಡೆವುದು ಪಾಟಿಯೆ ಸುತನಂ
ಮಡಿಪಿದನಂ ಸತಿಗೆ ಭಂಗಮಂ ಮಾಡಿದನಂ ॥
ಕಡುಕೆಯ್ದು ಕಾದಿ ರಣದೊಳ್
ಪೆಡತಲೆಯಂ ಮೆಟ್ಟಿ ಕಿಟ್ತುಕೊಳ್ವೆಂ ತಲೆಯಂ ॥ ೪೯ ॥

ಅನಿಮಿಷರುಂ ದಾನವರುಂ
ಮೊನೆಗೆನಗಿದಿರಲ್ಲರೆಂದೊಡಿದಿರಾಂಪವರೇ ॥
ಮನುಜರವಂದಿರನಾನೊ
ರ್ವನೆ ದೆಸೆಬಲಿಗುಡುವೆನೆಂದು ಬಿಡೆ ಗರ್ಜಿಸಿದಂ ॥ ೫೦ ॥

ಅಂತು ಗರ್ಜಿಸಿ ಕರವಾಳ್ಗೆ ಕೈಯಂ ನೀಡುವುದುಂ ಮಂತ್ರಿಮಂಡಲಮದಂ ಮಾರ್ಕೊಂಡು—

ಕಂ ॥ ಸಾಧಾರಣರಲ್ಲರ್ ವಿ
ದ್ಯಾಧರ ವಲ್ಲಭ ವಿಚಾರಿಸವರುನ್ನತಿಯಂ ॥
ಸಾಧಿಸದೆ ಸೂರ್ಯಹಾಸಂ
[1]ಸಾಧನವಾಯ್ತೆಂದೊಡೇನವರ್ ಮಾನವರೇ ॥ ೫೧ ॥

ಅದಱಿನವರನೇಳಿಸದೆ ಸಕಲ ಸಾಮಂತರಂ ಬರಿಸಿ ಸಮರ ಸನ್ನದ್ಧನಾಗಿ ನಡೆವುದೆ ನಯಮದೆಂತೆನೆ ಸಕಲ ಚಕ್ರವರ್ತಿಗಳುಮರ್ಧಚಕ್ರವರ್ತಿಗಳುಂ ಮನುಷ್ಯರಾಗಿಯುಮೇಕಾಂಗದೊಳಜೇಯರೆಂಬುದು ಸರ್ವಜನ ಸುಪ್ರಸಿದ್ಧಮೆಂದು ಬಿನ್ನವಿಸೆ

1. ಸಾಧನೆವೋಯ್ತೆಂ. ಚ.

ಮನದೆ ಕೊಂಡಾಸ್ವರೂಪಮಂ ದಶಕಂಧರಂಗೆ ಬಿನ್ನಪಂಗೆಯ್ವುದೆಂದು ದೂತರನಟ್ಟಿ ಸಮಸ್ತ ಸಾಮಗ್ರೀಸಹಿತನಾಗಿ—

ಕಂ ॥ ಕನಕಾಚಲ ಚೂಳಿಕೆಯಿಂ
ಕನಲ್ದು ಗರ್ಜಿಸುತುಮೆಟ್ದಿ ಸಿಂಗದವೋಲ್ ಕಾಂ ॥
ಚನ ಪೀಠದಿಂ ಖರಂ ಖ
ಡ್ಗ ನಖರನುತ್ತಂಸ ಕಿರಣ ಕೇಸರನೆಟ್ದಿಂ ॥ ೫೨ ॥

ಪದಿನಾಲ್ ಸಾಸಿರ ನಾಯಕ
ರುದಂಶು ಮಣಿ ಮಕುಟ ಕಿರಣವೊಡನಂಬರಮಂ ॥
ಪುದಿವಿನವೊಡನೆಟ್ದರ್ ಬಿಂ
ಜದಡವಿಯಂ ಬೇಗೆ ಬಳಸಿದತ್ತೆಂಬಿನೆಗಂ ॥ ೫೩ ॥

ಅಂತಸಂಖ್ಯಾತ ಖಚರ ಸಾಮಂತ ಸೇನೆವೆರಸು ಖರದೂಷಣರ್ ಗಾಳಿಗಿದಿರಂ ನಡೆವ ಮುಗಿಲೊಡ್ಡಿನಂತೆ ಗಗನವೀಧಿವಿಡಿದು ರಾಮಲಕ್ಷ್ಮಣರನಱಸಿ ಬರ್ಪ ಸಮಯದೊಳ್ ಸಮುದ್ರ ಘೋಷಮನಜನಿಸುವ ಪಟು ಪಟಹ ಶಂಖ ಕಹಳಾ ರವಂಭೋರೆನೆ ಕೇಳ್ದಿದೇನೆಂದು ಸೀತೆ ಬೆರ್ಚಿ ಬಾರಿಸಿ—

ಕಂ ॥ ದೊರೆಕೊಂಡ ಬಾಳ ಕೂರ್ಪಂ
ಪರಿಕಿಸಲೆಂದಿಱಿಯೆ ಲಕ್ಷ್ಮಣಂ ವಂಶವನಾಂ ॥
ತರಿತನೆನಿಸಿರ್ದು ಸತ್ತನ
ಪರಿಗ್ರಹಂ ಕಾಳೆಗಕ್ಕೆ ಬಂದಪುದಕ್ಕುಂ ॥ ೫೪ ॥

ಎಂದು ಮನದೊಳವಧಾರಿಸಿ—

ಚ ॥ ಗಗನಚರ ಪ್ರಚಂಡ ಬಲಮೆತ್ತಿ ಬರುತ್ತಿರೆ ಕಾಳೆಗಕ್ಕದಂ ।
ಬಗೆದನೆ ಜಾನಕೀಮುಖ ಸರೋರುಹದೊಳ್ ನೆಲಸಿರ್ದ ದೃಷ್ಟಿಯಂ ॥
ತೆಗೆದನೆ ಕಾಲದಂಡಮುಮನೇಳಿಪ ತನ್ನ ಶರಾಸನಕ್ಕೆ ಮೆ ।
ಲ್ಲಗೆ ಕರಶಾಖೆಯಂ ರಘುತನೂಭವನುಯ್ದನಿದೇನುದಾತ್ತನೋ ॥ ೫೫ ॥

ಅಂತು ದಾಶರಥಿ ದಿವ್ಯ ಚಾಪಕ್ಕೆ ಕೈಯನುಯ್ಯೆ ಲಕ್ಷ್ಮಣನಿಂತೆಂದಂ—

ಶಾ ॥ ದೇವರ್ ಬಿಲ್ವಿಡಿವಂತು ಬಲ್ವಡೆಯೆ ವಜ್ರಾವರ್ತ ಚಾಪಕ್ಕೆ ಮೇಣ್ ।
ದೇವೇಂದ್ರಂ ಧರಣೇಂದ್ರ[1]ನಲ್ಲದುಱಿದರ್ ಬಿಲ್ಗೊಯ್ವು ನಿಲ್ವನ್ನರಾರ್ ॥

1. ನಲ್ಲನುಱಿ. ಚ.

ದೇವರ್ ಕಾವೊಡಮೆನ್ನ ಕೂರ್ಗಣೆಗಳಿಂ ಮೆಯ್ವೆರ್ಚಿ ಮೇಲೆತ್ತಿ ಬಂ।
ದೀ ವಿದ್ಯಾಧರ ಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ ॥ ೫೬ ॥

ಎಂದು ಬೆಸನಂ ಪಡೆದು ಮದೀಯ ಮಾತೆಯುಂ ಸೀತಾದೇವಿಯುನಪಾಯ ಬಹುಳಮಪ್ಪ ಗಹನದೊಳಗಲದಿರ್ಪುದೆತ್ತಾನುಮೆನಗೆ ಧುರಂ ದುರ್ಧರಮಾಗೆ ಸಿಂಹ ನಾದಂಗೆಯ್ಯೆ ಬರ್ಪುದೆಂದು ವಿನಯ ವಚನಮಂ ನುಡಿದು ವಿನಯ ವಿನಮಿತ ನಗ್ರಜನಂ ಬೀಱ್ಕೊಂಡು.

ಕಂ॥ ಕವಚಮನಾಳಿಸಿ ಪೆಗಲೊಳ್
ತವದೊಣೆಯಂ ಬಿಗಿದು ಬಿಲ್ಲನೇಱಿಸಿ ಟಂಕಾ॥
ರವಗುರ್ವುವಡೆಯೆ ಜೇವೊಡೆ
ದು ವಿಯಚ್ಚರ ಸೇನೆಗದಿರದಿದಿರಂ ನಡೆದಂ ॥ ೫೭ ॥

ಪೊಕ್ಕಿಸೆ ಮಾರ್ಗಣಮಂ ಮಱು
ವಕ್ಕದ ನಾಯಕರನಾಜಿಯೊಳ್ಕಂ[1]ಡಿನಿಸುಂ ॥
ತಕ್ಕಱಿದನೆ ಬಗೆಯೊಳ್ [2]ಬಿ
ಳ್ಪಕ್ಕಿಯ ಪಿಂಡಿಂಗವಂದಿರಂ ಸರಿಗಂಡಂ ॥ ೫೮ ॥

ಉರ್ವರೆಯೊಳಿರ್ದಖಂಡಿತ
ದೋರ್ವಲನಂಬಿಕ್ಕೆ ನಭದೊಳಿರ್ದನಿಬರುಮಾ॥
ದೋರ್ವನನಿಸೆ ಮುಂಜಿನ ಮಱಿ
ಪರ್ವತಮಂ ಪರ್ವಿದಂತೆ ಕವಿದುವು ಕಣೆಗಳ್ ॥ ೫೯ ॥

ಗಗನಮೆಡೆನೆಱೆ[3]ಯುದೆನಿಸಿದ
ಗಗನೇಚರ ಸೈನ್ಯಮಿಸುವ ಪೊಸಮಸೆಯ ಸರಲ್ ॥
ನಗಧರನ ಮೇಲೆ ಪಾಯ್ದುವು
ನೆಗೆದಗ್ನಿ ಮುಖಕ್ಕೆ ಪಾಯ್ವ ಶಲಭಂಗಳವೋಲ್ ॥ ೬೦ ॥

ಎಡೆಯುಡುಗದೆ ಖಚರರ ಬಿ
ಲ್ವಡೆ ಕಡುಕೆಯ್ದುಸುವ ಕಣೆಗಳರ್ಕನ ತೇಜಂ॥
ಕಿಡೆ ಹರಿಯುಮೇಲೆ ಸುರಿದುವು
ಬಡಬಾಗ್ನಿಯುಮೇಲೆ ಸುರಿವ ಸರಿವಱೆಗಳವೋಲ್ ॥ ೬೧ ॥

---

1. ಡನಿಸಂ. ಚ. 2. ಬೆಳ್ಪಕ್ಕಿ. ಕ. ಘ. ಚ; ಪೇಳ್ಪಕ್ಕಿ. ಗ. 3. ದಂತಿರೆ. ಗ.

ಕಂ ॥ ತಱಿದೊಟ್ಟೆ ಸೂರ್ಪ್ಪಹಾಸದ
ಮಱುವಕ್ಕದ ಪುದಿದು ಪೆಣೆದ ಶರಪಂಜರದಿಂ ॥
ಪೊಱಮಟ್ಟು ಬಿದಿರ ಪೊದಱಿಂ
ಪೊಱಮಟ್ಟ ಮೃಗೇಂದ್ರನಂತಿರಿರ್ದನುಪೇಂದ್ರಂ ॥ ೬೨ ॥

ಅಂತು ಪೊಱಮಟ್ಟು ಪರಿವೇಷಂಗೊಂಡ ಚಂಡಕಿರಣನಂತೆ ಕುಂಡಲಿತ ಕೋದಂಡನಾಗಿ—

ಕಂ ॥ ತೋಡಂ ಬೀಡಂ ಕಾಣ್ಬುದು
ನಾಡೆಯುಮರಿದೆನಿಸಿ ಕೃಷ್ಣನಾರ್ದಿಸೆ ದೆಸೆಗೆ ॥
ಟ್ಟೋಡಿದುದಲ್ಲಾಡಿದುದ
ಳ್ಳಾಡಿದುದೊರ್ವೋದಲೆ ಖರನ ಬಲವೆನಿತನಿತುಂ ॥ ೬೩ ॥

ಪತ್ತಿ ಜವನಂತೆ ರಿಪು ಬಲ
ಪತ್ತಿಯನಿಸೆ ಲಕ್ಷ್ಮಣಂ ವಿಯಚ್ಚರ ಸೈನ್ಯಂ ॥
ಸತ್ತುದು ಪುಣ್ಬೆತ್ತುದು ಬೆ
ನ್ನಿತ್ತುದು ಪೂಣ್ದಿಱಿವುದರಿದು ಗರುಡಧ್ವಜನೊಳ್ ॥ ೬೪ ॥

ಇವೆ [1]ದೃಷ್ಟಿ ವಿಷಾಹಿಗಳೀ
ಕವಿತರ್ಪುವೆ ಜವನ ಬೆಸದಿನೆನೆ ನಿಮಿಷಕ್ಕೇಂ ॥
ತವೆ ಪೀರ್ದುವೊ ಖಚರ ಪ್ರಾ
ಣವಾಯುವಂ ಕೃಷ್ಣನೆಚ್ಚ ನಾರಾಚಂಗಳ್ ॥ ೬೫ ॥

ಇರ್ವೆಯ್ಗಾಣ್ಬಿನಮಾಂತರ
ನೊರ್ವೋದಲೊಳೆ ಕಣೆಗಳುರ್ಚೆ ಪೆಣನಂ ಬಿತ್ತಲ್ ॥
[2]ಕಾರ್ಮುಗಂಚಿದಂತೆ ನೆತ್ತರ
ಪೆರ್ಮಟಿ [3]ಕಱಿದತ್ತುಪೇಂದ್ರನಿಂ ಧುರಧರೆಯೊಳ್ ॥ ೬೬ ॥

ಆವೆಡೆಯಂ ನಟ್ಟುವು ಬಾ
ಣಾವಳಿ ನಟ್ಟೆಡೆಯೆ ತಮಗೆ ನೆಱನೆನೆ ಕೆಡೆದರ್ ॥
ಭೂವಳಯಕ್ಕೆ ವಿಯಚ್ಚರ
ರಾವುದೊ ಲಕ್ಷ್ಮಣನ ಕಣೆಗೆ ಮಣಿಯದ ಸೈನ್ಯಂ ॥ ೬೭ ॥

---

1. ದುಷ್ಟ. ಘ. 2. ಕಾರ್ಮುಗಚ್ಚಿದಂತೆ. ಚ. 3. ಕೊಂಡತ್ತು. ಗ.

ಶಾ ॥ ಆರೇಸಾಡಿದರಾವ ದಿಙ್ಮುಖದಿನೀ ಕೂರಂಬುಗಳ್ ಬಂದುವೆಂ ।
ದಾರುಂ ಕಾಣ್ಬವರಿಲ್ಲ ನಟ್ಟುದನೆ ಕಾಣ್ಬರ್ ಮಾಯದಂ॒ಬಲ್ಲದಂ ॥
ದಾರಾನುಂ ಪೊಱಗಾಗರೇ ಕಣೆಯ ಕೋಳ್ಗಿಂಬಂತು ತನ್ನಂಬು ಸಂ ।
ಹಾರಂಮಾಡೆ ವಿಪಕ್ಷ ಸೈನಿಕಮನಂಭೋಜಾಕ್ಷನೇಸಾಡಿದಂ ॥ ೧೮ ॥

ಮ ॥ ಮೊನೆಯುಂಬಲ್ಲಿವು ನಂಜಿನಂಬುಗಳಿನಲ್ [1]ಕೂರಂಬು ಮಾಱಾಂತರಂ ।
ಮನದಿಂ ಬೇಗದಿನುರ್ಚಿ ಪೋಗೆ ಪೆಣನಂ ಸಾಲಿಟ್ಟವೋಲಾಗೆ ಮೇ ॥
ದಿನಿಯೊಳ್ ಖೇಚರ ಸೇನೆ ಬೀೞೆ ಬಯಲಾದತ್ತಾಗಸಂ ಕೃಷ್ಣನಂ ।
ಬಿನ ಕೃಷ್ಣಾಹಿಯ ಕೋಳ್ಗೆ ಬೆರ್ಚದಿದಿರೊಳ್ ಮೆಯ್ವಾರ್ಚಿ ಬಾೞ್ವನ್ನರಾರ್ ॥

ಕಂ ॥ ಸಿಡಿಲ ಕಡುಗಾಯ್ಪು ಸಿಂಗದ
ಪೊಡರ್ಪು ಭೈರವನ ಬಲ್ಪು ಮಾರಿಯ ಮುಸಕಂ ॥
ಕಡೆಗಾಲದ ಜವನೆಟ್ಟರ
ಮೊಡರಿಸೆ ಲಕ್ಷ್ಮಣನಡುರ್ತು ಕಾದುತ್ತಿರ್ದಂ ॥ ೨೦ ॥

ಅನ್ನೆಗಮತ್ತ ರಾವಣಂ ಖರದೂಷಣರಟ್ಟಿದ ಸುದ್ದಿಯಂ ಕೇಳ್ದು ಶಂಭುಕನ ಸಾವಿಂಗಟಲ್ದು ಕಡು ಮುಳಿದು—

ಚ ॥ ಬೆದಱಿಸಿದತ್ತು ಕಾರಿರುಳನುರ್ವಿದ ಪುರ್ವಿನ ಗಂಟಿನೊಳ್ ಕಱಂ ।
ಗಿದ ಮೊಗಮಂಜಿಸಿತ್ತು ಕಿಸುಸಂಜೆಯನಾಸುರಮಾಗೆ ಕೆಂಪುವೇ ॥
ಱಿದ ಬಿಡುಗಣ್ಣ ಬಣ್ಣವಱಿಯಟ್ಟಿದುದಟ್ಟುಜೞೆ ಕಣ್ಣೊಳುಳ್ಳುವು ।
ಳ್ಕದ ತೆಱನಂ ಸಕಂಪವಧರಂ ದಶಕಂಧರ ಚಕ್ರವರ್ತಿಯಾ ॥ ೨೧ ॥

ಅಂತು ಸಂವರ್ತ ಸಮಯದ ಸಮುದ್ರದಂತೆ ಕದಡಿ—

ಚ ॥ ನಿಯಮದಿನಿರ್ದನಂ ನಿರಪರಾಧನನನ್ನೆಯದಿಂದಮೆನ್ನ ತಂ ।
ಗೆಯ ಮಗನಂ ವಿದಾರಿಸಿದನಂ ತಱಿದಾತನ ಮೆಯ್ಯ ರಕ್ತ ವಾ ॥
ರಿಯನೆಱೆದಾಱಿಪೆಂ ಖರನ ಶೋಕ ಕೃಶಾನುವನೆಂದು ಕಾಯ್ದು ದು ।
ರ್ಜಯನಸುರಾಧಿಪಂ ಜಡಿದನಾಸುರಮಂ ನಿಜ ಚಂದ್ರಹಾಸಮಂ ॥ ೨೨ ॥

ಚ ॥ ಒದವಿದ ಕೋಪ ವಹ್ನಿಯುರಿಯುಂ ಪೊಗೆಯುಂ ನೆಗೆವಂತೆ ಪದ್ಮ ರಾ ।
ಗದ ಹರಿನೀಲದುನ್ಮುಖ ವಿಭೂಷಣ ರಶ್ಮಿ ಪಗಂಡುಗೊಳ್ವಿನಂ ॥
ಕದನ ಮದೋದ್ಧತಂ ಖಚರನಾಯಕರಂ ಬರವೇಟ್ದು ಸಿಂಹ ಪೀ ।
ಠದಿನಿರದೆಟ್ದನಸ್ತಮಿತ ಪುಣ್ಯ ದಶಾನನನಾ ದಶಾನನಂ ॥ ೨೩ ॥

---

1. ತೂಱಂಬು . ಗ. ಚ.

ಅಂತು ಸಿಂಹಾಸನದಿಂದೆಟ್ಟಿ—

ಚ ॥ ಸೆಡೆಯೆ ಹಿಮಪ್ರಭಂ ನಿಜ ಯಶಃಪ್ರಭೆಯಿಂದಿನನಂಶು ಮಾಲೆ ಕೇ ।
ಳ್ವಡೆ ಬಲಗೈಯ ಬಾಳ ಪೊಳೆಪಿಂ ಕಡುಗತ್ತಲೆ ದೇಹ ದೀಪ್ತಿಯಿಂ ॥
ದೊಡರಿಸೆ ರಾಹು ತನ್ನ ಹರಿನೀಲ ವಿಮಾನಮನೇಱುವಂತಿರಾ ।
ಗಡೆ ಕಡುಕೆಯ್ದು ಪುಷ್ಪಕ ವಿಮಾನಮನೇಱಿದನಿಂದ್ರ ವಿದ್ವಿಷಂ ॥ ೭೪ ॥

ಅನಂತರಂ—

ಮ ॥ ಪ್ರತಿಕೂಲಾನಿಲನಿಂ ಪತಾಕೆ ಮಗುೞ್ಚೆಂಬಂತಾಗೆ ಕೈಸನ್ನೆಯಿಂ ।
ಶ್ರುತಿಯಂ ಸಾರ್ತರೆ ಪೋಪುದಲ್ತು ನಯಮೆಂಬಂತಾಗಿ ಘಂಟಾ ರಣ ॥
ತ್ಕೃತಿ ಸಾರ್ತಂದುದು ಪುಣ್ಯದೇವತೆಯ ಕಣ್ಣೀರೆಂಬಿನಂ ಮೇಘ ಸಂ ।
ಹತಿಯಿಂದಲ್ಲುಗೆ ಮುತ್ತು ಪುಷ್ಪಕ ವಿಮಾನಂ ದಂಡಕಾರಣ್ಯಮಂ ॥ ೭೫ ॥

ಆ ಸಮಯದೊಳ್ ದಶಾಸ್ಯನೊಂದು ತಣ್ಬುೞಿಲ ತಾಣದೊಳ್ ಬಱಸಿಡಿಲ ಬೞಿವಿಡಿದು ಪೊಳೆವ ಕುಡುಮಿಂಚಿನಂತೆ ಬಲಭದ್ರನ ಕೆಲದೊಳಿರ್ದ ಸೀತೆಯಂ ಕಂಡು—

ಕಂ ॥ ಬಲಿ ದೃಷ್ಟಿಗೆ ವಜ್ರದ ಸಂ
ಕಲೆ ಹೃದಯಕ್ಕೆ ನಿಪ ರೂಪವತಿ ಜಾನಕಿ ಕ ॥
ಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ ॥ ೭೬ ॥

ಎನಗಾಲೋಕನಮಾತ್ರದಿ
ನನುರಾಗಮನಿತ್ತು ತಮ್ಮ ನೀಲಚ್ಛವಿಯಿಂ ॥
ಮನಮಂ ಋಜುಮಾಡಿದುವೀ
ವನಿತೆಯ ಕೊಂಕಿದ ಕುರುಳ್ಗಳಿದು ಬಿಸವಂದಂ ॥ ೭೭ ॥

ಮೃಗ ಲೋಚನಂಗಳಿರ್ದುವು
ಮೃಗಮಿಲ್ಲಿರ್ದಪುದು ವಟ ಫಲಂ ವಟಮಿಲ್ಲೀ ॥
ಪಗಲುಮೆಸೆವಿಂದುವೆತ್ತಣಿ
ನೊಗೆದುದೊ ಪೇೞೆಂದು ನೋಡಿದಂ ನಗೆಮೊಗಮಂ ॥ ೭೮ ॥

ತಳತಳಿಸಿ ಪೊಳೆಯೆ ಸೀತೆಯ
ಚಳ ನಯನಂ ಖಚರ ಚಕ್ರವರ್ತಿಯ ಚಿತ್ತಂ ॥

ಕೊಳದೊಳಗೆಳವಾಳೆ ತೆಱಂ
ಬೊಳೆವಂತೆ ಕಲಂಕಿ ಕದಡಿದತ್ತಾ ಕ್ಷಣದೊಳ್ ॥ ೭೯ ॥

ಕಂ॥ ಸಿರಿಸದ ಬಾಸಿಗದೊಳ್ ನಲಿ
ವರಿದಾಡುವ ತುಂಬಿಯಂತೆ ಪಾಣ್ಬನ ಕಣ್ಗಳ್ ॥
ಪರಿಮುಱಿಯಾಡಿದುವು ತನೂ
ದರಿಯ ತನುವ ಪಾಶಮೆನಿಪ ದೋರ್ವಲ್ಲರಿಯೊಳ್ ॥ ೮೦ ॥

ಸುೞಿಗೊಂಡ ನಾಭಿಕೂಪದ
ಸುೞಿಯಿಂ ಪೊಱಮಡದೆ ಸುೞಿವ ನಯನಂಗಳ ಬೆಂ ॥
ಬೞಿವಿಡಿದು ಪರಿದು ಸುೞಿದುದು
ಸುೞಿಯೊಳಗಣ [1]ಪಱಿಗುಲಂತೆ ಪಾತಕನ ಮನಂ ॥ ೮೧ ॥

ಉ॥ ಹಾರ ಮರೀಚಿ ಮಂಜರಿ ಸುಧಾರಸ ಧಾರೆ ಸುಧಾಂಶು ಲೇಖೆ ಕ।
ರ್ಪೂರ ಶಲಾಕೆ ನೇತ್ರಸುಖ ದಾಯಕಮೀದೊರೆತಲ್ಲವೀಕೆ ಶೃಂ॥
ಗಾರ ಸಮುದ್ರಮಂ ಕಡೆಯೆ ಹೃದ್ಭವನುದ್ಭವೆಯಾದಳೆಂದು ಕ।
ಣ್ಣಾರೆ ದಶಾಸ್ಯನೀಕ್ಷಿಸಿದನೀಕ್ಷಿಸಿ ಕಣ್ಣಱಿದಾರೆ ಮನ್ಮಥಂ ॥ ೮೨ ॥

ಮ॥ಸ್ರ॥ ಪಲರುಂ ವಿದ್ಯಾಧರಸ್ತ್ರೀಯರುಮಮರಿಯರುಂ [2]ಮಾನವ ಸ್ತ್ರೀಯರುಂ ತ।
ಮ್ಮೊಲವಿಂ ಮೇಲ್ವಾಯ್ದೊಡಂ ಮುಂಬಗೆಯದ ಬಗೆಯೇನಾದುದೆಂದುದ್ಧ
ತಂ ಮೂ॥
ದಲಿಸುತ್ತುಂ ರೂಪಿನೊಳ್ ಮಚ್ಚರಿಸುವನೆನಗೆಂದಂಬನಂಬಟ್ಟುವನ್ನುಂ।
ಪಲಕಾಲಕ್ಕೇಸುವೆತ್ತುಂ ದಶಮುಖನೆನುತುಂ ಮನ್ಮಥಂ ಮಾಣದೆಚ್ಚಂ ॥ ೮೩ ॥

ಸ್ರ॥ ಸ್ವಾಂತಂ ಪಂಚೇಷುವಿಂ [3]ದಂತಗೆವುಲವೊಲಪ್ಪಂತು ಕಂದರ್ಪನೆಚ್ಚೆ।
ಚ್ಚೆಂತುಂ ಕೈವಾರದಟ್ಟಾಸುರವೆನೆ ಮುಳಿದೆಚ್ಚೆಚ್ಚು ಕೋದಂಡದಿಂ ಪೊ॥
ಯ್ದೆಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ।
ಕಾಂತಾ ರತ್ನಕ್ಕೆ ವೈದೇಹಿಗೆ ಮಕುಟ ಹಟದ್ರತ್ನದಿಂದರ್ಘ್ಯಮಿತ್ತಂ ॥ ೮೪ ॥

[4]ಅಂತು ಬಸದಾಗಿ—

---

1. ಪಱುಗಲಂತೆ. ಕ. ಖ; ಪಲುಗೊಲಂತೆ. ಚ.
2. ಕೂರ್ತುರ್ ಬಂದೀಶ್ವರ್ಯಯಿಂ. ಚ.
3. ಜಂತಗೆವ್ವುಗಿಲವೊಲ್. ಚ.
4. ಅಂತು ವ್ಯಸನವಶ ಗತನಾಗಿ. ಗ. ಘ.

ಚ ॥ ನಡೆ ನಡುಗೋಲ್ವರಂ ದಶಮುಖಂ ಮನಮಂ ಸುಮನಶ್ಶಿಲೀಮುಖಂ ।
ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇ ॥
ರ್ಪಡುಗಿಡೆ ಸತ್ಯ ಶೌಚ ಗುಣ ಸಂಪದವೇಳಿದನಾದನೆನ್ನರುಂ ।
ಕಿಡಿಮುಸಿಯಾದವೋಲ್ ವಿಷಯ ಲೋಭದಿನೇಳಿದರಾಗದಿರ್ಪರೇ ॥ ೮೫ ॥

ಮ ॥ ವಿಹಿತಾಚಾರಮನನ್ವಯಾಗತ ಗುಣ ಪ್ರಖ್ಯಾತಿಯಂ ದುಷ್ಟ ನಿ ।
ಗ್ರಹ ಶಿಷ್ಟ ಪ್ರತಿಪಾಲನ ಕ್ಷಮತೆಯಂ ಕೈಗಾಯದನ್ಯಾಂಗನಾ ॥
ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ ।
ವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ ॥ ೮೬ ॥

ಅಂತು ಮನವೆಳದುವರಿಯೆ—

ಕಂ ॥ ಮದ ಕರಿಯ ದಾನ ಲೇಖೆಗೆ
ಪದೆವ ಮಧುವ್ರತದ ಮಾಟಕ್ಕಿಯಿಂ ದಶವದನಂ ॥
ಪದೆದಂ ರಘುವೀರನ ಪಾ
ರ್ಶ್ವದ ಸುದತಿಗೆ ವಿಷಯಿ ತನ್ನ ಕೇಡಂ ನೋಡಂ ॥ ॥ ೮೭ ॥

ಅವಿವೇಕಿ ದಶಮುಖಂ ದೃ
ಷ್ಟಿ ವಿಷಾಹಿಯ ಪೆಡೆಯ ಮಣಿಶಲಾಕೆಗೆ ಕೈ ನೀ ॥
ಡುವ ಗಾಂಪನಂತೆ ರಘುವೀ
ರ ವಧೂ ಜನಕಜೆಗೆ ಮನದೊಳಟಿಪಂ ತಂದಂ ॥ ೮೮ ॥

ಚ ॥ ಪರವಧುಗಾಸೆಗೆಯ್ವಧಿಕ ಪಾತಕವೊಂದು ರಘುಪ್ರವೀರನೊಳ್ ।
ಧುರದೊಳಿದಿರ್ಚದೋಸರಿಸಿ ವಂಚಿಸಿ ಸೀತೆಯನುಯ್ವ ಭೀತಿಯೊಂ ॥
ದೆರಡಱೊಳಂ ಜಸಂ ಮಸುಳೆ ತನ್ನವಲೋಕಿನಿಯಂ ದಶಾನನಂ ।
ಸ್ಮರಿಸಿದನಾತ್ಮಸತ್ವ ಗುಣ ಹಾನಿಯೆ ಸೂಚಿಸದೇ ವಿನಾಶಮಂ ॥ ೮೯ ॥

ಅಂತು ನೆನೆಯಲೊಡಮವಲೋಕಿನೀವಿದ್ಯೆ [1]ಮನದೊಡನೆ ಬಂದು ಬೆಸನಾವುದೆನೆ ದಶಮುಖನಿವರಾರೆಂಬುದುಮಯೋಧ್ಯಾ ಸಿಂಹಾಸನಕ್ಕಧಿಪತಿಯುಮಿಕ್ಷ್ವಾಕು ವಂಶ ಸಂಭವನುಮಪ್ಪನರಣ್ಯ ತನೂಭವಂ ದಶರಥ ನರನಾಥಂ ತದಪತ್ಯರಿವರೀಕಾಲದ ಬಲದೇವ ವಾಸುದೇವರ್ ದೇವತಾಧಿಷ್ಠಿತಂಗಳಪ್ಪ ವಜ್ರಾವರ್ತ ಸಾಗರಾವರ್ತ ಚಾಪ ರತ್ನಂಗಳನಪ್ರಯತ್ನದಿಂ ಪಡೆದ ರಾಮಲಕ್ಷ್ಮಣರೆಂಬರ್, ಮಹಾಬಲ

---

1. ನಮನ. ಚ.

ಪರಾಕ್ರಮರೀಕೆ ರಾಮನ ಮಹಾದೇವಿ ಮಿಥಿಲಾಪುರವರೇಶ್ವರನಪ್ಪ ಹರಿವಂಶದ ಜನಕನ ತನೂಭವೆ ರಥನೂಪುರಚಕ್ರವಾಳಪುರಮನಾಳ್ವ ಚಂಡಬಲ ಪರಾಕ್ರಮನಪ್ಪ ಪ್ರಭಾಮಂಡಲನ ತಂಗೆ ಸೀತಾದೇವಿಯೆಂಬಳೆಂಬುದುಮಾಕೆಯನೀತನಿಂದಗಲ್ಚು ವುಪಾಯಮಾವುದೆನೆ ದೇವತೆ ಭಯಚಕಿತ ಚಿತ್ತೆಯಾಗಿ—

ಕಂ ॥ ಆರಯ್ಯೆ ವಿರೋಧಂ ಸಾ
ಧಾರಣ ಪುರುಷರೊಳಮುಚಿತಮಲ್ತಧಿಕ ಬಲರ್ ॥
ಕಾರಣಪುರುಷರಿವರ್ ನಿ
ಷ್ಕಾರಣಮಿವರೊಳ್ ವಿರೋಧಮಂ ಮಾಡುವುದೇ ॥ ೯೦ ॥

ಕಾವ ಬೆಸಂ ನಿನ್ನದು ಸಕ
ಲಾವನಿಯನಧರ್ಮನಿರತರಂ ನಿಯಮಿಸಿ ನೀ ॥
ನೀವಿಷಯಕ್ಕೆಳಗುವುದುಂ
ಕ್ಕಾವರೆ ಕಣೆಗೊಂಡರೆಂಬ ನುಡಿಗೆಡೆಯಕ್ಕುಂ ॥ ೯೧ ॥

ಅನ್ನೆಯದಿಂ ನಡೆವವರಂ
ನೀನ್ನಿಯಮಿಸುವೈ ದಶಾಸ್ಯ ಪೆಱನಾವಂ ನಿ ॥
ನ್ನನ್ನಿಯಮಿಸುವಂ ಮುನ್ನೀರ್
ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ ॥ ೯೨ ॥

ಮ ॥ ಪದಿನಾಲ್ಸಾಸಿರ ಮುಖ್ಯ ನಾಯಕರಸಂಖ್ಯಾತಂ ಬಲಂ ಖೇದದಿಂ ।
ದಿದಿರಾದರ್ ಖರ ದೂಷಣರ್ ಬಗೆದನಿಲ್ಲತ್ತಲ್ ಭರಂಗೆಯ್ದು ಕಾ ॥
ದಿದಪಂ ಲಕ್ಷ್ಮಣನಿತ್ತಲೀಕೆಯೊಡನೀತಂ ವೀತ ಶಂಕಂ ವಿನೋ ।
ದದೊಳಿರ್ದಂ ರಘುವೀರ[1]ರಿನ್ನರಿವರೊಳ್ ವಿದ್ವೇಷಣಂ ದೂಷಣಂ ॥ ೯೩ ॥

ಎಂದು ತೆಱೆಯೆ ನುಡಿದುದರ್ಕೆ ಕಡುಮುಳಿದು—

ಕಂ ॥ ಮದನ ಯಶಃಪಟಹ ಧ್ವನಿ
ಪುದಿಯೆ ವಿಯಚ್ಚರನ ಕರ್ಣಮಂ ಹೃದಯ ॥
ಕ್ಕೆಯ್ದಿದುದಿಲ್ಲ ದಿವ್ಯ ವಚನಂ
ಬಿದಿಯಂ ಮಿಱುಗುಮೆ ಪೆಱರ ಪೇಟ್ದುಪದೇಶಂ ॥ ೯೪ ॥

ಕಂ ॥ ಆನೊಂದಂ ಬೆಸಗೊಂಡೊಡೆ
ನೀನೊಂದನಿದೇಕೆ ಪೇಟ್ದೆ ಪೇಟ್ದಿದನೇಗೊ ॥

---

1 ನಿನ್ನಿವರೊಳಂ. ಗ ಘ.

ಳ್ಳೇನೆಂದು ಕೇಱಿ ನುಡಿವ್ಯೆ
ಮಾನವರಾಂತಪರೆ ಮರುಳೆ ಲಂಕಾಪತಿಯುಂ ॥ ೯೫ ॥

ಎಂಬುದುಂ ವಿದ್ಯಾದೇವತೆ ಕನಲ್ದು—

ಕಂ ॥ ಜನಕಜೆಯನುಯ್ಯೆ ದಶರಥ
ತನೂಜರಿಂ ಮರಣಮಾಗಲೆಂದಿರ್ದಪುದೀ ॥
ತನ ಕೈಯಳವಲ್ತು ಪುರಾ
ತನ ಕರ್ಮ್ಮಾಯತ್ತಮಲ್ತೆ ದೇಹಿಗಳೆಸಕಂ ॥ ೯೬ ॥

ಗೆಲಲೆನಗೆ ರಿಪುಬಲಂ ಬ
ಲ್ವಲಮಾದೊಡೆ ಸಿಂಹನಾದಮಂ ಮಾಳ್ಪೆಂ ಬೆಂ ॥
ಬಲವಾಗಿ ಬರ್ಪುದೆಂದೀ
ಬಲದೇವಂಗಱಿಪಿ ವಾಸುದೇವಂ ಪೋದಂ ॥ ೯೭ ॥

ಎಂದು ರಾವಣಂಗೆ ಪೇೞ್ವುದುಮವಂ ರಣಕ್ಷೋಣಿಗೆ ಪೋಗಿ ಲಕ್ಷ್ಮಣಂ ಕೇಳದಂತು ವೈಕುರ್ವಣ ಶಕ್ತಿಯಿಂ ಸಿಂಹನಾದಂಗೆಯ್ಯೆಂಬುದುಂ, ಅಂತೆಗೆಯ್ವೆನೆಂದು ವಿದ್ಯಾದೇವತೆ ಪೋಗಿ ಸಿಂಹನಾದಂಗೆಯ್ವುದುಮಾ ಧ್ವನಿಯಂ ಕೇಳ್ದು—

ಮ ॥ ಧುರದೊಳ್ ದುರ್ಜಯನಾರ್ಗಮೆನ್ನನುಜನೆಂಬೀ ನಿಶ್ಚಯಂಗೆಟ್ಟು ಸಿಂ ।
ಹ ರವಂದೋಱಿದನಾಹವಂ ವಿಷಮಮೆಂಬೀ ವಿಸ್ಮಯಂ ಚಿತ್ತದೊಳ್ ॥
ದೊರೆಕೊಂಡತ್ತು ರಘೂದ್ವಹಂಗಮುಱಿದಂದೆಂತಕ್ಕುಮೋ ಜಾನಕೀ ।
ಹರಣಂ ಕರ್ಮ ವಿಪಾಕಮಾರಬಗೆಗಂ ವೈಕಲ್ಯಮಂ ತಾರದೇ ॥ ೯೮ ॥

ಕಂ ॥ ಕಾಪಂ ಪೇೞ್ದು ಜಟಾಯುವ
ನೋಪಳನಿರವೇೞ್ದು ವೈರಿಬಲಮಂ ತವಿಸಲ್ ॥
ಪೋಪಂತಿರೆ ದಂಡಧರಂ
ಚಾಪಧರಂ ಬಲನವಂಧ್ಯ ಕೋಪಂ ಪೋದಂ ॥ ೯೯ ॥

ಅನ್ನೆಗಮಿತ್ತಲ್—

ಕಂ ॥ ಅಱಿಪಿ ಪರವಧುಗಧೋಗತಿ
ಗಿಱಿವುದನಭಿನಯಿಸುವಂತೆ ಸೀತೆಯ ಸಾರ ॥
ಣ್ಗೆಱಿದಂ ನಭದಿಂ ಖಚರಂ
ಪೞಿಗಂ ಪಾಪಕ್ಕಮಂಜದವರೇಗೆಯ್ಯರ್ ॥ ೧೦೦ ॥

ಕಂ ॥ ದೋಷಿ ಪಿಡಿವಂತೆ ದಿವ್ಯದ
ಕಾಸಿದ ಕುಟುವಂ ಕಡಂಗಿ ಕಾಳೋರಗನಂ ॥
ಕೂಸು ಪಿಡಿವಂತೆ ಪಿಡಿದಂ
ಸಾಸಿಗನವಿವೇಕಿ ಸೀತೆಯಂ ದಶಕಂಠಂ ॥ ೧೦೧ ॥

ಅಂತು ಪಿಡಿದು ನಿಜವಿಮಾನದೊಳಿಟ್ಟು—

ಕಂ ॥ ದಶಮುಖನುನ್ಮುಖನಟಿಪಿಂ
ಶಶಿಮುಖಿಯಂ ಜನಕಸುತೆಯನಾವರಿಸೆ ಚತು ॥
ರ್ದಶ ಭುವನಮನಪವಾದಂ
ಶಶಿಕಲೆಯಂ ಸ್ಯೆಂಹಿಕೇಯನುಯ್ವಂತುಯ್ದಂ ॥ ೧೦೨ ॥

ಆಗಳದಂ ಜಾತಿಸ್ಮರನಪ್ಪ ಜಟಾಯು ಕಂಡು ಕೋಪಾನಲ ವಿಸ್ಫುಲಿಂಗದಂ ತಾರಕ್ತಂಗಳಾದ ಕಣ್ಗಳಿಂ ನುಂಗುವಂತೆ ನೋಡಿ—

ಕಂ ॥ ಪತಿ ಕಾಪುವೇಟ್ಟು ಪೋದಂ
ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡು ॥
ದ್ಧತನಂ ಮದೀಯ ತುಂಡಾ
ಹತಿಯಿಂ ಶತ ಖಂಡಮಾಗೆ ಮಾಟ್ಪೆನೆನುತ್ತುಂ ॥ ೧೦೩ ॥

ಚ ॥ ಖರ ನಖರಂಗಳಿಂ ನಿಶಿತ ಚಂಚುಗಳಿಂದಿಱಿಯಲ್ಕರುತ್ತು ಸಾ ।
ರ್ತರೆ ನಸು ನಕ್ಕು ಪೊಯ್ಯೆ ಕರದಿಂ ಗಮನೋತ್ಸುಕನಿಂದ್ರವೈರಿ ತ ॥
ನ್ನೆರಡುಮೆಱಂಕೆಗಳ್ ಮುಱಿದಿಳಾತಳದೊಳ್ ಕೆಡೆದತ್ತು ವಜ್ರದಿಂ ।
ಸುರಪತಿ ಪೊಯ್ಯೆ ಬೆಟ್ಟು ಕೆಡೆದಂತೆ ಜಟಾಯು ನಭೋವಿಭಾಗದಿಂ ॥೧೦೪॥

ಕಂ ॥ ಪಕ್ಕಿ ಮೊದಲಾಗಿ ಪತಿ ಕಾ
ರ್ಯಕ್ಕನುವಶಮಾಗಿ ತಾಗಿ ರಾವಣನೊಳಡು ॥
ರ್ತಕ್ಕತುಳಮಿಱಿದುದೆಂದೊಡೆ
ತಕ್ಕಂ ಪತಿಕಾರ್ಯದೆಡೆಯೊಳೋಸರಿಸುವನೇ ॥ ೧೦೫ ॥

ಉ ॥ ಭೂಮಿಗೆ ಬಿಟ್ಟೆಱಂಕೆ ಮುಱಿದಿರ್ದ ವಿಪತ್ತಿಗೆ ನೊಂದುದಿಲ್ಲಣಂ ।
ರಾಮನಗಲ್ಕೆಯಿಂ ಜನನಿಗೇದೊರೆತಕ್ಕುಮೊ ದುಃಖವೇಗಮೆಂ ॥
ಬೀ ಮನದುಮ್ಮಳಂ ತನಗೆ ತಿಣ್ಣಮೆನಲ್ ತೊಱಿದಂತದಂ ಖಗ ।
ಗ್ರಾಮಣಿ ಚಿತ್ತದೊಳ್ ಕಳೆದುದಂಚಿತ ಪಂಚ ಪದಾಕ್ಷರಂಗಳಂ ॥ ೧೦೬ ॥

ಅಂತು ಬಿಟ್ಟು ಜಟಾಯು ಕಂಠಗತ ವಾಯುವಾಗೆ ದಶಕಂಠನುಯ್ವ ಸಮಯದೊಳ್—

ಉ ॥ ಸಿಂಗದ ಕೈಗೆ ಬಿಟ್ಟ ಹರಿಣಾಂಗನೆವೋಲಿರ್ದಗೆಟ್ಟು ರಾಮಚಂ ।
ದ್ರಾಂಗನೆ ನೀಳ್ದ ಕಣ್ಮಲರ್ಗಳಿಂದುಗೆ ಕಣ್ಬನಿಗಳ್ ಮಡಲ್ತ ಪ ॥
ಕ್ಷ್ಮಂಗಳನೊತ್ತಿ ಕಾರ ಮುಗಿಲಿಂದುಗುತರ್ಪ ನವೋದ ಬಿಂದು ಜಾ ।
ಲಂಗಳಿನಲ್ ಬೆಮರ್ತಳಿನಸುಂ ತನುವಲ್ಲಿ ಮುಗುಳ್ತುದೆಂಬಿನಂ ॥ ೧೦೭ ॥

ಚ ॥ ಮನಮೆಳದಾಗೆ ಮನ್ಯು ಮಿಗೆ ತಳ್ತಿಮೆಯಿಂ ಕರೆಗಣ್ಮಿ ಸೂಸೆ ಕ ।
ಣ್ಬನಿ ಗಳ ಕಂದಳಂ ಬಿಗಿಯೆ ಗದ್ಗದ ನಿಸ್ವನಮುಣ್ಮೆ ಹಾರವಂ ॥
ಜನಿಯಿಸೆ ಸೀತೆ ಭೀತೆ ದೆಸೆಗೆಟ್ಟಿರ್ದಗೆಟ್ಟಟಿ ಪೊಣ್ಮಿದತ್ತು ಮಾ ।
ರ್ದನಿ ದೆಸೆಯೊಳ್ ದಿಗಂಗನೆಯರುಂ ಬಿಡದಂದೊಡನಟ್ಟಿ ಮಾಟ್ಕೆಯಿಂ ॥

ಉ ॥ ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕವಾ ।
ತಂಕವೊಡರ್ಚೆ ಪುಷ್ಪಕ ವಿಮಾನದ ರತ್ನ ವಿಚಿತ್ರ ಪುತ್ರಿಕಾ ॥
ಸಂಕುಲಮುಟ್ಟೊಡಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವಾಗಳಾ ।
ಲಂಕೆಯ ಸೂಡನುನ್ನತಿಯ ಕೇಡನವಂಗೆ ನಿವೇದಿಪಂತೆವೋಲ್ ॥ ೧೦೯ ॥

ಕಂ ॥ ಸ್ತನಮಂಡಲಕ್ಕೆ ಪೊಸಮು
ತ್ತಿನ ಹಾರಮನಿತ್ತು ತೋರಕಣ್ಬನಿಯಿಂ ಲೋ ॥
ಚನ ಯುಗಲಮರುಣ ಮಣಿ ಮಂ
ಡನಮಂ ಕಿವಿಗಿತ್ತುವರುಣರುಚಿ ಮಂಜರಿಯಿಂ ॥ ೧೧೦ ॥

ಚ ॥ ಬಲೆಗೊಳಗಾದ ಸೋಗೆನವಿಲಂತೆ ಭಯಾಕುಳೆ ತನ್ನ ಚಿತ್ತದೊಳ್ ।
ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯ ದರ್ಶನ ॥
ಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸು ಮುಚ್ಚಿವೋಗಿ ತ ।
ಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ ಮುಗುಳ್ದುಂ ಪೊಱಪೊಣ್ಮೆ ಹಾರವಂ ॥

ಉ ॥ [1]ನೇಸಱ ಸಾರೆ ನಿಬ್ಬರಿಸುವುತ್ಪಲಮಾಲೆಯೆನಿಪ್ಪ ದೃಷ್ಟಿ ವಿ ।
ನ್ಯಾಸಮನೊಯ್ಯನೋಸರಿಸಿ ನಮ್ರ ಶಿರೋಧರೆ ಸೀತೆ ಲೋಕ ಸಂ ॥
ತ್ರಾಸಿಯ ರೂಪು ಪಾದ ನಖ ದರ್ಪಣದೊಳ್ ಪಲವಾಗಿ ತೋಱೆ ಕಂ ।
ಡಾಸತಿ ಬೆರ್ಚಿಮುಚ್ಚಿದಳೆರಲ್ಕರದಿಂ ತರಲೇಕ್ಷಣಂಗಳಂ ॥ ೧೧೨ ॥

---

1. ನೇಸಱು. ಕ ಖ.

ಕಂ ॥ ಕ್ರೂರಾತ್ಮಂ ವಂಚಕನವಿ
ಚಾರಿ ದುರಾಚಾರಿ ಬಗೆಯದುಯ್ವುಪನೆನ್ನಂ ॥
ಹಾ ರಾಮಾ ಹಾ ರಾಮಾ
ಬಾರಿಪರಾರೆಂದು ಸೀತೆ ಶೋಕಂಗೆಯ್ದಳ್ ॥ ೧೧೩ ॥

ಅಂತು ಶೋಕಂಗೆಯ್ವ ಸೀತೆಯುಂ ದಶಾಸ್ಯನನಂತವೀರ್ಯ ಕೇವಲಿಗಳ ಚರಣೋಪಾಂತದೊಳ್ ಕೈಕೊಂಡ ಪರಾಂಗನಾ ವಿರತಿ ವ್ರತದ ಭಂಗಮಂ ಬಗೆಯದುಯ್ವುನನ್ನೆಗಮಿತ್ತಲ್—

ಕಂ ॥ ದೇವೇಂದ್ರನ ವಜ್ರಮನೆ
ನ್ನೀ ವಜ್ರಾವರ್ತ ಚಾಪಮಂ ಮಿಸಾಜುವನಿ ॥
ನ್ನಾವನೆನುತ್ತುಂ ಸಂಗ್ರಾ
ಮಾವನಿಗನುಜನ ಕೆಲಕ್ಕೆ ರಾಮಂ ಬಂದಂ ॥ ೧೧೪ ॥

ಅಂತು ಬರ್ಪುದುಂ ಲಕ್ಷ್ಮಣನಪಾಯ ಬಹುಳಮಪ್ಪ ಗಹನದೊಳ್ ದೇವ! ಸೀತಾದೇವಿಯನಗಲ್ದೇಕೆ ಬಿಜಯಂಗೆಯ್ದಿರೆಂಬುದುಂ, ನಿನ್ನ ಸಿಂಹನಾದಮಂ ಕೇಳ್ದು ಬಂದೆನೆನೆ ಭವದೀಯ [1]ಪ್ರಸಾದದಿನೆನಗೆ ಬಲ್ಲಿತಪ್ಪ ಬವರಮಿಲ್ಲದಾವನಾನುಮೊರ್ವಂ ಮಾಯಾವಿಯ ಮಾಟಮಕ್ಕುಮದು ಕಾರಣಂ ಬೇಗಂ ಬಿಜಯಂಗೆಯುದಾನೀ ಬವರಮಂ ತೀರ್ಚಿ ನಿಮ್ಮ ಬೆನ್ನನೆ ಬಂದಪ್ಪೆನೆಂದು ಬಿನ್ನವಿಸೆ—

ಉ ॥ ತೋಱದನಿಲ್ಲಿ ಸಿಂಹ ರವಮಂ ಗಡ ಲಕ್ಷ್ಮಣನೆನ್ನ ಚಿತ್ತದೊಳ್ ।
ತೋಱುದುದಿಲ್ಲ ಬಿಟ್ಟು ಬರಲಾಗದು ಸೀತೆಯನೆಂಬ ನಿರ್ಣಯಂ ॥
ಬೇಱೆ ಕಡಂಗಿ ಕೆತ್ತಿದಪುದೆನ್ನೆಡಗಣ್ ತಡವಿಲ್ಲದಚ್ಚಿಗಂ ।
ತೋಱದೆ ಮಾಣದಿಂತಿದೆನುತುಂ ಮಗುೞ್ದಂ ಮನುವಂಶ ಮಂಡನಂ ॥ ೧೧೫॥

ಅಂತು ಮಗುೞ್ದು ಬಂದು ಮುನ್ನಮಿರ್ದ ಲತಾಭವನದೊಳ್ ಮನೋವಲ್ಲಭೆಯಂ ಕಾಣದೆ ಶಿಖಿಮುಖಕ್ಕೆ ವಂದ ಪಾದರಸದಂತೆ ನಿಜ ನಿಸರ್ಗ ಧೈರ್ಯಗುಣಮದೃಶ್ಯಮಾಗೆ—

ಕಂ ॥ ಹಾಹಾ ಜನಕಸುತೇ ವೈ
ದೇಹೀ ವೈದೇಹಿಯೆಂದು ಪುದಿದಿರೆ ಮನಮಂ ॥
ಮೋಹತಮಂ ದೀಪಂ ವಾ
ತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ ॥ ೧೧೬ ॥

1 ಪ್ರಭಾವ. ಚ.

ಅಂತು ಮೂರ್ಛೆವೋಗಿ ಕಿಱಿದಾನುಂ ಬೇಗದಿಂ—

ಚ॥ ನಸು ಬಿಸುಪೇಱೆ ಮೆಯ್ ಮಗುಱೆ ಕೆತ್ತುವ ತಾಣಮೆ ಕೆತ್ತೆ ಮಂದಮಾ ।
ದುಸಿರ್ಗಳೆ ನಾಸಿಕಾ ಮುಕುಲದಿಂದಿಸಿಸುಂ ಪೊಱಪೊಣ್ಮೆ ತಳ್ತು ಸಂ॥
ದಿಸಿದೆಮೆ ಬಿರ್ಚೆ ಕಣ್ಮಲರ್ಗಳುಳ್ಳಲರುತ್ತಿರೆ ಜಾನಕೀ ಯೆನು ।
ತ್ತುಸಿರ್ದುಸಿರ್ದೆೞ್ದನಾ ರಘುಕುಲಾಂಬರ ಚಂಡಮರೀಚಿ ಮೂರ್ಛೆಯಿಂ॥೧೧೭॥

ಅಂತು ಮೂರ್ಛೆಯಿಂದೆೞ್ಚೆತ್ತು ಸುತ್ತಲುಂ ತೊೞಲ್ದಱಸುತ್ತುಮಡವಿಯೊಳಗನೆ ಬರುತ್ತುಮಿರ್ಪಾಗಳೊಂದೆಡೆಯೊಳಸು ವಿಯೋಗ ಸಂಕಟದಿಂ ಸರಂಗೆಯ್ವ ಜಟಾಯುವಂ ಕಂಡು ಸೀತಾಪಹರಣಮಿದರ್ಕೆ ಮರಣನಿಮಿತ್ತಮಾದುದೆಂದುಬ್ಬೆಗಂಬಟ್ಟು ಸಂಸಾರವಿಷಮ ವಿಷಾಪಹಾರಮಂ ಪಂಚ ನಮಸ್ಕಾರಮನದರ್ಕೆ ಪೇೞ್ದು ಸುರಗತಿಯನೆಯ್ದಿಸಿ ವೈದೇಹಿಯನಾ ವನಾಂತರದೊಳೆಲ್ಲಿಯುಮಱಸಿ ಕಾಣದೆ—

ಮ॥ ಕಳಹಂಸಾಲಸ ಯಾನೆಯಂ ಮೃಗಮದಾಮೋದಾಸ್ಯ ನಿಶ್ವಾಸೆಯಂ ।
ತಳಿರೋ ತಾವರೆಯೋ ಮದಾಳಿಕುಲಮೋ ಕನ್ನೆಯ್ದಿಲೋ ಮತ್ತಕೋ ॥
ಕಿಳಿಯೋ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗ ಕುಂ ।
ತಳೆಯಂ ಕೈರವ ನೇತ್ರೆಯಂ ಪಿಕ ರವ ಪ್ರಖ್ಯಾತೆಯಂ ಸೀತೆಯಂ ॥ ೧೧೮ ॥

ಚ॥ ಮಲಯಜ ಗಂಧ ಬಂಧುರ ಸರೋರುಹಮಂ ದರಹಾಸ ಚಂದ್ರಿಕಾ ।
ವಿಲಸಿತ ಚಂದ್ರ ಮಂಡಲಮನಾ ರಮಣೀ ರಮಣೀಯ ಲೋಚನೋ ॥
ತ್ಪಲ ಸಹಜ ಪ್ರಸನ್ನ ಕಮಲಾಕರಮಂ ಸ್ಮರರಾಜ ರಾಜ್ಯ ಮಂ ।
ಗಲ ಮಣಿದರ್ಪಣೋಪಮಮನೋಪಳ ವಕ್ತ್ರಮನೆಲ್ಲಿ ಕಾಣ್ಬೆನೋ ॥ ೧೧೯ ॥

ಕಳರುತಿ ಮತ್ತಕೋಕಿಲಮನೀಕ್ಷಣಮುತ್ಪಲಮಂ ವಿನೀಲ ಕುಂ ।
ತಳಮಳಿ ಮಾಲೆಯಂ ಕಚಭರಂ ನವಿಲಂ ನಡೆ ಹಂಸಿಯಂ ತಳಂ ॥
ತಳಿರ್ಗಳನಾನನಂ ಕಮಲಮಂ ನಳಿತೋಳ್ ಲತೆಯಂ ಲತಾಂತ ಕೋ ।
ಮಳೆ ಮಱಿಗೊಂಡು ಮೆಯ್ಗರೆಮ ಕಾಡುವ ಕಾರಣಮೇನೊ ಜಾನಕೀ ॥೧೨೦॥

ಎಂದು ಮತ್ತಮಾ ಮದಗಜ ಗಮನೆ ವನ್ಯಗಜ ಬೃಂಹಿತಕ್ಕೆ ತಲ್ಲಳಿಸಿ ತನ್ನಂ ತೞ್ಕೈಸಿದ ಸಲ್ಲಕೀ ನಿಕುಂಜಮುಮನಾ ಚಕೋರ ಲೋಲ ಲೋಚನೆ ವಿಲೋಚನ ಚಂದ್ರಿಕೆಯಿನೊಸರ್ವ ಚಂದ್ರಕಾಂತ ಪರ್ಯ್ಯಾತಳದ ತಳಿರ್ವಾಸನುದಾಸೀನಂಗೆಯ್ದು ಸಮೆದ ಬಯಲ್ವಾವರೆಯೆಸಳ ಪಸೆಯನೆಸೆವ ತಮಾಲ ವನಮಾಲೆಯುಮನಾ ಹೇಮ ತಾಮರಸ ಮುಖಿ ಮುಖಸಮೀರ ಸೌರಭಕ್ಕೆಳಸಿ ಬಳಸುವಳಿಮಾಲೆಗೆ ಸುಗಿದು ಸುಯ್ಯನೋಸರಿಸಿದ ಸಪ್ತಚ್ಛದ ಷಂಡಮುಮನಾ ಪೃಥುನಿತಂಬೆ ನಿತಂಬ ಭರ

ಪರಿಸ್ಖಲಿತ ಪದ ವಿನ್ಯಾಸದಿಂದಂಚೆಯಂ ಪಳಂಚಲೆದ ತಣ್ಬುೞಲ ತಾಣಮುಮನಾ ಲಾವಣ್ಯ ರಸ ತರಂಗಿಣಿ ತಾವರೆಯ ತಳಿರೆಲೆಯ ಪತ್ರಭಂಗದಿನುತ್ತುಂಗ ಪಯೋಧರ ಮಂ ಪಸಪಸಂಗೊಳಿಸಿದ ತಿಳಿಗೊಳದ ತಡಿಯುಮನಾ ಮದಾಳಿ ಪಟಲ ಕುಟಿಲ ಕುಂತಳೆ ಚೆನ್ನೆಯ್ದಿಲೆಸಳ ಚೆನ್ನಪೂಗಳಿಂ ತನ್ನ ತೋರ ಗುರುಳ್ಗಳನಲಂಕರಿಸಿದ ಕಾಸಾರ ತೀರಮುಮನಾ ಸುವರ್ಣಕೇತಕೀ ಸುಗಂಧಿ ಸಹಜ ಸೌರಭದಿಂ ಮೃಗನಾಭಿ ಯನಭಿನಯಿಸಿದ ಲವಂಗ ವನ ವೀಧಿಯುಮನಾ ಶಿರೀಷ ದಾಮ ಕೋಮಲೆ ಸುಮ ನೋವಿಭೂಷಣ ವಿನೋದದಿಂ ಬಿರಿಮುಗುಳನಾಯ್ದ ವನತರು ಲತಾ ವಿತಾನಮು ಮನಾ ಸಂಕಲ್ಪಜನ್ಮ ಜಂಗಮ ಲತಾಂಗಿ ಸಂಭೋಗ ಲೋಭದಿ[1]ನಡಂಗುಱುಚಾಡಿ ಕಾಡಿದ ಚಂದನಲತಾ ಮಂದಿರಮುಮನಾ ಕನಕ ಕದಳೀದಳಶ್ಯಾಮೆ ಕದಳೀದಳ ವ್ಯಜನದ ತಣ್ಗಾಳಿಯಿನನಂಗ ಕೇಳೀ ಪರಿಶ್ರಮಮನಾಱಿಸಿದ ಸಂಪಗೆಯ ಬೊಂಪ ಮುಮಂ ವಿಯೋಗ ಶೋಕಾಕುಳ ಚಿತ್ತನವಲೋಕಿಸುತ್ತುಂ—

ಮ ॥ ಎನಿತಾನುಂ ತೆಱದಿಂ ಪಲುಂಬಿ ಪಲವಾಡುತ್ತುಂ ಮನಸ್ತಾಪದಿಂ ।
ತನು ಸಂತಾಪಮನಪ್ಪುಕೆಯ್ಯೆ ಬೞಲುತ್ತುಂ ಕಂತು ಸಂತಾಪದಿಂ ॥
ದೊಸಲುತ್ತುಂ ಕನಲುತ್ತುಮಂದವಿರಳ ಪ್ರಸ್ಯಂದಿ ಬಾಷ್ಪೋದಕಾ ।
ಸನನಾ ಕಾನನದೊಳ್ ತೊೞಲ್ದು ರಘುರಾಮಂ ಸೇದೆವಟ್ಟಿರ್ದಿನಂ ॥ ೧೨೧ ॥

ಅನ್ನೆಗಮಿತ್ತಲ್—

ಮ ॥ ಎರಡುಂ ತೋಳ್ ನೆರಪೊಂದೆ ಬಿಲ್ನೆರವಸಂಖ್ಯಾತಂ ದ್ವಿಷತ್ಸೇನೆ ಪೇ ।
ಚರರಂ ಭೂಚರನೊಂದೆಮೆಯ್ಯೊಳೆ ಕೊಲುತ್ತಿರ್ದಪ್ಪನಾಸೀತನಂ ॥
ಶರಣಾಗೆಂದು ಕುಲಕ್ರಮಾಗತದೊಳಸ್ಮದ್ವೃತ್ತಿಯೊಳ್ ಸಿಲ್ಕಿಸೀ ।
ಶರಣಾಯಾತ ಶರಣ್ಯನಿಂದೆನಗೆ ಕೈಸಾರ್ಗುಂ ಮನೋವಾಂಛಿತಂ ॥ ೧೨೨ ॥

ಎಂದು ತಱಿಸಂದು ಸಂಗ್ರಾಮ ಭೂಮಿಗೆ ಬಂದು

ಕಂ ॥ ದೇವ ಭವಚ್ಚರಣಾಂಬುಜ
ಸೇವೆಯೆ ಶರಣೆಂದು ಬಂದೆನೇವೆಸನಂ ಪೇ ॥
ನೀವುದೆನಗೆಂದು ಲಕ್ಷ್ಮಣ
ದೇವಂಗೊಳ್ಗಲಿ ವಿರಾಧಿತಂ ನತನಾದಂ ॥ ॥ ೧೨೩ ॥

ಅಂತು ಬೆಸನಂ ಬೇಡಿಕೊಂಡು ಬೀೞ್ಕೊಂಡು ನೆಲಮುಕ್ಕಿನಂತೆ ನಭಕ್ಕೆ ನೆಗೆದು ಖರನಂ ಸೆರಗಿಲ್ಲದೆ ಮುಟ್ಟಿವಂದು ಮದೀಯ ಜನಕನಂ ಕೊಂದಿಂದು

1. ನಡಂಗಿ ಕೊಱಚಾಡಿ. ಗ ಘ.

ವರಂ ಪಾತಾಳ ಲಂಕೆಯುಂ ಪೊಱಮಡದೆ ಬರ್ದುಂಕಿದೆ ಪಲಕಾಲಕ್ಕೆಂತಾನುಂ ಬಯಲ ಬವರಕ್ಕೊಳಗಾದೆ ನೀನಿನ್ನೆತ್ತವೋದಪೆಯೆಂದು ಮೂದಲಿಸಿ ಕಾದುತ್ತುಮಿರೆ -

ಮ ॥ ಮೊರೆಯುತ್ತುಂ ಪರಿಯುತ್ತುಮಿರ್ಪ ರುಧಿರ ಸ್ರೋತಂಗಳಿಂ ಸುತ್ತಲುಂ ।
ನರಲುತ್ತುಂ ಪೊರಳುತ್ತುಮಿರ್ಪ ಭಟರಿಂ ಪಿಟ್ಟಾದ ಪೀಱಾದ ಸಿಂ ॥
ಧುರದಿಂ [1]ತಱ್ಗಿದ ಮುಱ್ಗಿದಶ್ವರಥದಿಂ ಕಣ್ಗಂ ಮನಕ್ಕಂ ಭಯಂ ।
ಕರಮಾದಾಜಿಯೊಳಟ್ಟಿ ತಿಂಬ ಜವನೆಂಬಂತಿರ್ದನಬ್ಜೋದರಂ ॥ ೧೨೪ ॥

ಆ ಸಮಯದೊಳ್ ಲಕ್ಷ್ಮಣನಂ ಕಂಡು ವಿರಾಧಿತನಂ ಲೆಕ್ಕಂಗೊಳ್ಳದೆ ಮಾಮುಸಕಂಗೊಂಡು—

ಉ ॥ ಪೆಂಡತಿಯಂ ಪರಾಭವಿಸಿದಂ ಸುತನಂ ವಧೆಗೆಯ್ದನೆನ್ನೊಳಂ ।
ಗಂಡಗುಣಕ್ಕೆ ಮುಚ್ಚರಿಸಿ ಮಾರ್ಮಲೆದಿರ್ದಪನೆಂದು ಬಿಟ್ಟು ಕಣ್ ॥
ಕೆಂಡದ ತಂಡಮುಂ ಕೆದಱೆ ಕೋಪದಿನಂದುರಿದೆಱ್ದು ಕೊಂಡು ಕೋ ।
ದಂಡಮುನಸ್ತ್ರಸುತ್ತೊದಱಿದಂ ಗಗನೇಚರ ಶೇಖರಂ ಖರಂ ॥ ೧೨೫ ॥

ಕಂ ॥ ಕವಚಂ ಮಿಂಚಂ ಕಣ್ಣ
ಳ್ಕುವ ಸಿಡಿಲಂ ಚಾಪ ಟಂಕೃತಂ ಮೊಱಗಂ ಬೀ ॥
ಱುವಿನಂ ಕಱೆದಂ ಖರನ
ಸ್ತ್ರವರ್ಷಮಂ ನೀಲಘನ ವಿಶಾಲಾಪಘನಂ ॥ ೧೨೬ ॥

ಆಗಳಾತನಿಸುವ ನಿಶಿತ ವಿಶಿಖಂಗಳಂ ಮಂಡಲಾಗ್ರದಿಂ ಖಂಡಿಸಿ—

ಮ ॥ ಮೊನೆಯೊಳ್ ಭೈರವನಂತಗುರ್ವವಡೆದಂ ರಾಮಾನುಜಂ ಬೀಱೆ ಬಿ ।
ಚ್ಚನೆ ಬಿಟ್ಟಕ್ಷಿಯುಗಂ ತೃತೀಯ ನಯನಕ್ಕಾಕ್ಷೇಪಮಂ ಕೃಷ್ಣ ಸ ॥
ರ್ಪನಗುರ್ವಂ ತಿರುವಾಯೊಳಟ್ಟಿ ವಿಶಿಖಂ ಕೇಱಲ್ಮಾಡೆ ಕಾಲಾಗ್ನಿ ರು ।
ದ್ರನ ಗಂಟಿಕ್ಕಿದ ಪುರ್ವನಂಡಲೆಯೆ ಕೋದಂಡಂ ಭುಜಾದಂಡದೊಳ್ ॥೧೨೭॥

ಉಡಿಯೆಚ್ಚಂ ಧನುವಂ ಸಿಡಿಲ್ಪನೆಗನೆಚ್ಚಂ ಕೇತುವಂ ಸೂತನಂ ।
ಮುಡಿಯೆಚ್ಚಂ ಕಡಿಖಂಡಮಾಗೆ ಮುರಿಯೆಚ್ಚಂ ತೇರನಶ್ವಂಗಳಂ ॥
ಕೆಡೆಯೆಚ್ಚಂ ಬೞಿಯುಂ ಖರಂ ಮುಳಿದು ಕೊಂಡುಗ್ರಾಸಿಯುಂ ಮೇಲೆ ಪಾ ।
ಯ್ದೊಡೆ ಪೊಯ್ದಂ ತಲೆ ಪಾಱೆ ಬೀೞೆ ರಘುವೀರಂ ಸೂರ್ಯಹಾಸಾಸಿಯಿಂ ॥

1. ದಱ್ಗಿದ ತಱ್ಗಿದ. ಚ

ಕಂ॥ ಸೌಮಿತ್ರಿಯ ಕೋಪಾಗ್ನಿಶಿ
ಖಾ ಮಾಲೆಗೆ ಸುಗಿದು ಖರನ ವಿಜಯಶ್ರೀ ಸಂ॥
ಗ್ರಾಮದೊಳಾಶ್ರಯಿಸಿದಳಾ
ರಾಮಾನುಜ ಭುಜ ಕೃಪಾಣ ಧಾರಾ ಗೃಹಮಂ ॥ ೧೨೯ ॥

ಅನಂತರಂ—

ಕಂ॥ ಅಗ್ರಜನ ಮರಣ ದುಃಖದೊ
ಳಾಗ್ರಹದಿಂ ಮೇಲೆವಾಯ್ದ ದೂಷಣನಂ ವೀ॥
ರಾಗ್ರೇಸರನಸಿಯಿಂದ
ಗ್ರ ಗ್ರಾಸಂ ಮಾಡಿದಂ ಜವಂಗಾಹವದೊಳ್ ॥ ೧೩೦ ॥

ಆ ಸಮಯದೊಳ್‌-

ಕಂ॥ ಸಮನಿಸಿದತ್ತು ಜಯಶ್ರೀ
ರಮಣಿಗೆ ಪರಿಣಯನಮಪ್ಪುದುಂ ಲಕ್ಷ್ಮಣನೊಳ್ ॥
ಸುಮನೋವರ್ಷ ಸಮನ್ವಿತ
ಮುಮರಾನಕ ನಿನದಮುಮರ ಜಯಜಯ ನಿನದಂ ॥ ೧೩೧ ॥

ಅಂತು ಗೆಲ್ಲಂಗೊಂಡು ಕೈಮುವಿಕ್ಕಿ ಶರಣೆಂದು ಬಂದ ವಿರೋಧಿ ವಾಹಿನಿಯಂ ವಿರಾಧಿತಂಗೆ ಬೆಸಕೆಯ್ದು ಬಾಳ್ವಂತುಮಪರನವರ ಪೂರ್ವ ವೃತ್ತಿಯೊಳ್ ನಿಲಿಸು ವಂತುಂ ನಿಯಮಿಸಿ ಬರುತ್ತುಂ-

ಚ॥ ಮದಜಲ ಧಾರೆಯಿಲ್ಲದ ದಿಶಾಗಜದಂತೆ ಸುಧಾಂಶುಲೇಖೆ ಯಿ।
ಲ್ಲದ ನಭದಂತೆ ಕಲ್ಪಲತೆಯಿಲ್ಲದ ನಂದನದಂತೆ ವೇಲೆಯಿ॥
ಲ್ಲದ ಕಡಲಂತೆ ಕೇಸರಿಣಿಯಿಲ್ಲದ ಕೇಸರಿಯಂತೆ ಸೀತೆಯಿ।
ಲ್ಲದ ರಘುವಂಶರಾಮನಿರೆ ನೋಡಿದನಾಕುಲನಾಗಿ ಲಕ್ಷ್ಮಣಂ ॥ ೧೩೨ ॥

ಅಂತು ಮನದೊಳಳ್ಳಾಡುತ್ತುಮೆಯ್ದೆ ವಂದು ಚರಣಾರವಿಂದ ರಜೋಲಲಾಮ ಲಕ್ಷಿತ ಲಲಾಟನಪ್ಪುದುಮತಿವಿಷಮ ರಣಾಂಗಣದೊಳವ್ರಣ ಕಾಯನುಮಜೇಯನು ಮೆನಿಸಿ ವಿಜಯಶ್ರೀಯೊಡಗೂಡಿದುದರ್ಕೆ ಮನದೊಳೆ ಮೆಚ್ಚಿ ಮುಹುರ್ಮುಹು ರಾಶೀರ್ವಾದ ಮುಖರ ಮುಖನಾದ ರಾಮದೇವನಂ ಲಕ್ಷ್ಮಣಂ ಮದಂಬಿಕೆಯಂ ಕಂಡೆನಿಲ್ಲೆತ್ತಲಿರ್ದಪಳೆಂಬುದುಮಾಂ ನಿನ್ನಲ್ಲಿಗೆ ಬಂದ ಪಿಂದೆ ಸಿಂಹಶರಭಾದಿ ರೌದ್ರ ವನಚರಂಗಳುಯ್ದು ವೆಂದಱಿಯೆನಾವನಾನುಮೊರ್ವಂ ಮಾಯಾವಿ ಕಳ್ದುಯ್ದನೆಂ ದಱಿಯೆನಿನ್ನೆವರಮರಣ್ಯದೊಳ್ ತೊಳಲ್ದೆಲ್ಲಿಯುಮಱಿಸಿ ಕಂಡೆನಿಲ್ಲೆಂದು ನೊಂದು ನುಡಿವುದುಮದರ್ಕೆ ಲಕ್ಷ್ಮಣಂ ವಿಷಣ್ಣ ಹೃದಯನುದ್ದೀಪಿತ ಕೋಪಶಿಖಿ ಶಿಖಾ ಕಲಾಪನಿಂತೆಂದಂ—

ಉ ॥ ಧಾರಿಣಿಯಂ ಮುಗುಳ್ಚಿ ಕುಲಪರ್ವತಮಂ ನೆಲೆಯಿಂ ತೆರಳ್ಚಿ ನಿ ।
ರ್ನೀರಮೆನಲ್ಕುಳುಂಕಿ ಲವಣಾರ್ಣವಮಂ ದಿವಮಂ ನೆಲಕ್ಕೆ ತಂ ॥
ದಾರಿದಿರಾಂತೊಡಂ ಜವನ ಬಾರಿಗೆ ಸೋವತಮಾಗಿರೆ ಮಾಳ್ಪೆನಿ ।
ನ್ನಾರೊ ಮದೀಶ ಜಾನಕಿಯನುಯ್ವವರಿಂ ಪೊಱಗೆಲ್ಲಿ ಬಯ್ತಪರ್ ॥ ೧೩೩ ॥

ಎಂದೊದಱು ನುಡಿವನ್ನೆಗಮಿದಿರಾಗಿ ಬರ್ಪ ಬಲಮನೇಕಕುಂಡಲಂ ಕಂಡಿದಾರ ಬಲಮೆನೆ ಲಕ್ಷ್ಮೀಧರನಿದು ವಿರಾಧಿತನೆಂಬ ವಿದ್ಯಾಧರಂ ಧುರದೊಳೆನಗೆ ಕದನ ಸಹಾಯನಾಗಿ ಪಾಱಿಯುಂ ಪಾಳಿಸಿದನೀಗಳ್ ದೇವ ನಿಜ ಚರಣ ಸೇವಾಸಕ್ತ ಚಿತ್ತನಾಗಿ ಬರುತ್ತಿರ್ದಪನಾತನ ಬಲಮೆಂದಱುಪುವನ್ನೆಗಮೆಯ್ದೆ ವಂದು ರಾಘವನ ಪಾದೋಪಾಂತ ಪ್ರದೇಶದೊಳ್ ಮೆಯ್ಯನಿಕ್ಕಿ ನಿಜ ವೃತ್ತಾಂತಮನಿಂತೆಂದು ಬಿನ್ನವಿಸಿದನತಿಪ್ರಚಂಡ ನಿಜಾನುಜ ಭುಜಾದಂಡ ಮಂಡಲಾಗ್ರ ಧಾರಾಹತಿಯಿಂದಮರ ಕಾಮಿನೀ ಪರ್ಯಂಕ ಶೇಖರನಾದ ಖರಂ ಪಾತಾಳ ಲಂಕಾಧಿಪತಿಯಪ್ಪಮದೀಯ ಜನಕನಂ ಚಂದ್ರೋದರ ವಿಯಚ್ಚರೇಂದ್ರನನುಪಾಂಶು ವಧೆಗೆಯ್ದುದುಮೆಮ್ಮ ಪರಿಜನನೋಡಿಪೋಗಿ ದುರ್ಗಮಮಪ್ಪೀ ವನದುರ್ಗ ಪ್ರದೇಶದೊಳಾವಾಸಮಂ ಮಾಡಿಕೊಂಡಿರ್ಪುದುಂ ವಿರಾಧಿತ ನಾಮಧೇಯನಪ್ಪಾನುಮಿಲ್ಲಿಯೆ ಬಳೆದು ಕೆಲವು ಕಾಲದಿಂ ಸಾಧಿತ ಸಕಲ ವಿದ್ಯನಾಗಿ ಪಗೆಯಂ ಸಾಧಿಸುವುಪಾಯಮಾವುದೆಂ ದುಮ್ಮಳಿಸುತುಮಿರ್ದೊಂದು ದಿವಸಮೊರ್ವರಂ ದಿವ್ಯಜ್ಞಾನಿಗಳಂ ಕಂಡೆಮ್ಮ ಪೂರ್ವ ವೃತ್ತಿಯೊಳ್ ನಿಲ್ಪುದಕ್ಕುಮಾಗದೆಂಬುದಂ ಬೆಸಸಿಮೆನಲವರಿಂತೆಂದರ್—

ಕಂ ॥ ಸಂಶಯಮೇಂ ನಿಲ್ಪಯ್ ನಿಜ
ವಂಶಾಗತಮಪ್ಪ ವೃತ್ತಿಯೊಳ್ ಕರವಾಳಿಂ ॥
ವಂಶಚ್ಛೇದಮುಮಂ ಖರ
ವಂಶಚ್ಛೇದಮುಮನೊಡನೆ ಪಡೆದತಿಬಳನಿಂ ॥ ೧೩೪ ॥

ಎಂದು ಬೆಸಸುವುದುಮಾನಂ
ದಿಂದಿರ್ತಲ್ ನಿಮ್ಮ ಬರ್ಪುದಂ ಪಾರ್ದಿರೆ ನೀ ॥
ಮಿಂದೆನ್ನ ಪುಣ್ಯದಿಂದೇ
ಬ್ದಿಂದಿರ್ ತೀರ್ದಂದುದೆನ್ನ ಪಗೆಯುಂ ಬಗೆಯುಂ ॥ ೧೩೫ ॥

ಆಳ್ದೆಸನನೆನಗೆ ದೇವರ್
ಪೇೞ್ವುದು ಕಾರುಣ್ಯದೃಷ್ಟಿಯಿಂದೆನ್ನಂ ಕೈ ॥
ಕೊಳ್ವುದು ಬಿನ್ನಪಮಂ ಬಗೆ
ಗೊಳ್ವುದು ಚರಿತಾರ್ಥನಾಗೆ ಮಾಡುವುದೆನ್ನಂ ॥ ೧೩೬ ॥

ಎಂದು ಬಿನ್ನವಿಸಿ ರಾಮದೇವನ ಚರಣ ಸೇವಾ ಲಾಭದಿನಮೃತ ಸೇವೆವಡೆದಂತೆ ಪರಿತೃಪ್ತನಾದ ವಿರಾಧಿತಂಗೆ ಲಕ್ಷ್ಮೀಧರನೆಂದನೆಮ್ಮಣ್ಣನೆನ್ನ ಕದನ ಕೇಳೀ ವಿಲೋಕನ ಕುತೂಹಲದಿನೆನ್ನಲ್ಲಿಗೆ ವಂದ ಪಿಂದೆ ಜಗನ್ಮಾತೆಯಂ ಸೀತಾದೇವಿಯನಾವನಾನುಮೊರ್ವಂ ಮಾಯಾವಿ ಕಳ್ದುಯ್ದಾ ಕಾನನದೊಳಿರ್ದಪನಾದೆಸೆಗಗ್ರಜಂ ವ್ಯಗ್ರನಾಗಿರ್ದಪನದಱಿನಿಲ್ಲಿಗೆ ತಕ್ಕ ಪುರುಷರನಱಸಲಟ್ಟುವುದೆನೆ ವಿರಾಧಿತಂ ಕೇಳ್ದು ಕಟ್ಟುಕಡೆದು ಕಾರ್ಯ ಧುರಂಧರರಪ್ಪ ವಿದ್ಯಾಧರರಂ ಬೆಸಸುವುದುಂ—

ಮ॥ ಲತಿಕಾ ಕುಂಜಂಗಳೊಳ್ ಭೂವಿವರ ಕುಹರದೊಳ್ ಘೋರ ಕಾಂತಾರದೊಳ್ ಪ।
ಸ್ರ॥
ರ್ವತ ಸಾನೂದ್ಯಾನದೊಳ್ ನಿರ್ಝರ ಸರಿದುಪಕಂಠಂಗಳೊಳ್ ಸಾರ ಕಾಸಾ॥
ರ ತಟೀದೇಶಂಗಳೊಳ್ ಪೂಗೊಳದ ತಡಿಗಳೊಳ್ ದಂಡಕಾರಣ್ಯದೊಳ್ ಕೂ।
ಡೆ ತೊಳಲ್ದರ್ ಕಂಡರಿಲ್ಲಂಬಿಕೆಯನಱಸಿ ವಿದ್ಯಾಧರಾಧೀಶ ಮುಖ್ಯರ್॥೧೩೭॥

ಅಂತವರ್ ಮನೋವೇಗದಿಂ ಪೋಗಿ ಬಂದು ಜಾತಸ್ವರೂಪಮಂ ಬಿನ್ನವಿಸೆ ಖಿನ್ನನಾಗಿರ್ದ ರಾಮಂಗೆ ವಿರಾಧಿತನೆಂದಂ—ಮತ್ಕುಲಾಗತಮುಂ ನಿಸರ್ಗ ದುರ್ಗಮಮುಮಪ್ಪ ಪಾತಾಳಲಂಕಾಪುರದೊಳಿರ್ದು ಸೀತಾದೇವಿಯರ ಪಿರಿಯಣ್ಣನಪ್ಪ ಪ್ರಭಾಮಂಡಲನಂ ಬರಿಸಿ ಬೞಿಕ್ಕೆ ತಕ್ಕುದಂ ನೆಗೞಲಕ್ಕುಮದಕ್ಕಾನೆ ಸಾಲ್ವೆನಲ್ಲಿಗೆ ಬಿಜಯಂಗೆಯ್ವುದೆಂದು ರಾಮಲಕ್ಷ್ಮಣರಂ ರಥಮನೇರಿಸಿಕೊಂಡು ಚತುರಂಗ ಬಲಸಹಿತಂ ನಿತ್ಯಾಲಂಕಾರೋದಯಮಪ್ಪ ಪಾತಾಳಲಂಕಾಪುರಮಂ ಪುಗುವ ಸಮಯದೊಳ್—

ಕಂ॥ ಪುರಮಂ ಪುಗಲೀಯದೆ ಸುಂ
ದರನೆಂಬ ಖರ ತನೂಭವಂ ತನ್ನ ಬಲಂ॥
ಬೆರಸಡ್ಡಂಬರೆ ಮೆಯ್ಗಲಿ
ವಿರಾಧಿತಂ ಜವನ ಮುಸಕಮಂ ಕೈಕೊಂಡಂ ॥ ೧೩೮ ॥

ದೆಸೆ ಮುಸುಳೆ ಭಾನುಬಿಂಬಂ
ಮುಸುಳೆ ವಿರಾಧಿತನ ಚಾಪ ವಿಲಯಾಂಬುದದಿಂ॥
ಪಸರಿಸಿ ಸುಂದರನೊಳ್ ಭಯ
ರಸ ವರ್ಷಂ ಪೆರ್ಚೆ ಪೆರ್ಚಿದುದು ಶರವರ್ಷಂ ॥ ೧೩೯ ॥

ಖರ ದೂಷಣರವೊಲಂತಕ
ಪುರಮಂ ಪುಗುವಂತು ಸುಂದರಂ ಗಾಂಪನೆ ಬೆ॥
ಳ್ದೆರಲೆಗೆ ಗಱು ಮೂಡಿದವೋಲ್
ಭರವಶದಿಂ ಪೊಕ್ಕನೋಡಿ ಲಂಕಾಪುರಮಂ ॥ ೧೪೦ ॥

ಅಂತವನನವಯವದಿಂದೋಡಿಸಿ ಮಹಾವಿಭೂತಿಯಿಂ ಪುರಮಂ ಪೊಕ್ಕರನ್ನೆಗ ವಿತ್ತಲಸುರನಾಗಸದೊಳರ್ಣವದ ಮೇಗೆ ಮನೋವೇಗದಿಂ ಪೋಗುತ್ತುವಿರೆ—

ಶಾ ॥ ಖೇದಂ ಕೈಗಱಿವಾಗೆ ದಿಗ್ವಿವರಮಂ ಹಾಹಾ ರವಂ ತೀವೆ ಬಾ ।
ಷ್ಪೋದ ಸ್ವೇದ ಜಲಂಗಳಿಂ ಕರಗಿ ನೀರಾಗುಕ್ಕುವಂತಾಗೆ ಮೆಯ್ ॥
ಮೋದುತ್ತುಂ ಬಸಿಱಂ ಪರಾಂಗನೆಯನೆನ್ನಂ ಕಳ್ದುಕೊಂಡೀ ಖಳಂ ।
ಪೋದಪ್ಪಂ ಶರಣಪ್ಪುದಾರ್ಪರೆನುತುಂ ವೈದೇಹಿ ಪುಯ್ಯಲ್ಚಿದಳ್ ॥ ೧೪೧ ॥

ಮ ॥ ಭವನಾವಾಸ ನಿವಾಸಿಗಳ್ ಸಕಲ ವಾನವ್ಯಂತರಾವಾಸ ಸಂ ।
ಭವರತ್ಯುಗ್ರ ನವಗ್ರಹಾದಿ ವಿಷಮ ಜ್ಯೋತಿಷ್ಕರಿಂದ್ರಾದಿ ಕ ॥
ಲ್ಪ ವಿಮಾನ ಸ್ಥಿತರೀ ದುರಾಚರಿತನಂ ಮಾರ್ಕೊಳ್ವುದನ್ಯಾಂಗನಾ ।
ವಿವಶಂ ದಾಶರಥಿ ಪ್ರಿಯಪ್ರಮದೆಯಂ ಕೊಂಡುಯ್ದಪಂ ಸೀತೆಯಂ ॥ ೧೪೨ ॥

ಧರಣೀ ರಕ್ಷಣ ದಕ್ಷ ದಕ್ಷಿಣ ಭುಜಂ ಲಕ್ಷ್ಮೀಧರಂ ಮೈದುನಂ ।
ಹರಿವಂಶಂ ಜನಕಂ ಮದೀಯ ಜನಕಂ ವೀರಂ ಪ್ರಭಾಮಂಡಲಂ ॥
ಸಿರಿಯಣ್ಣಂ ರಘುರಾಮನಂಗನೆಯನೆನ್ನಂ ಸೀತೆಯಂ ಪಾತಕಂ ।
ಜೊರಿಗೆಟ್ಟುಯ್ದಪನೇವೆನೆಂದು ಸತಿ ಹಾಹಾಕ್ರಂದನಂ ಮಾಡಿದಳ್ ॥ ೧೪೩ ॥

ಅಂತು ಮುಹುರ್ಮುಹುರುದೀರಿತ ರವಮನರ್ಕಜಟಿಯ ಮಗನಪ್ಪ ರತ್ನಜಟಿ ಕೇಳ್ದು—

ಮ ॥ ಸತಿ ಪುಯ್ಯಲ್ಚಿದಪಳ್ ರಘೂದ್ವಹ ಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ ।
ಶ್ರುತಿ ಕಯ್ಕೊಂಡುದು ಕೇಳ್ದಿವಂ ತೆವಳೆಗಂಡಂದೆನ್ನ ವಿಖ್ಯಾತಿ ದೂ ॥
ಷಿತಮಕ್ಕುಂ ಸೆಱೆಗೊಂಡನಂ ಕದನದೊಳ್ ಜಿಂಕೊಂಡು ಬಾಹಾಬಲೋ ।
ನ್ನತಿಯಂ ಬೀಱುವೆನೆಂದು[1]ಘೂರ್ಮಿಸಿದನೇಂ ಗಂಡಂ ಪರಿಚ್ಛೇದಿಯೋ ॥೧೪೪॥

ಅಂತು ಪರಿಚ್ಛೇದಿಸಿ ರತ್ನಜಟಿ ಬದ್ಧಭ್ರುಕುಟಿ ದಶಾನನ ವಿಮಾನಕ್ಕಡ್ಡಂ ಬಂದು—

ಕಂ ॥ ಪರಿಹರಿಸಿ ಪಾಱಿಯಂ ಭೂ
ಚರ ಖೇಚರ ಚಕ್ರವರ್ತಿ ರಾವಣ ನೀನೀ ॥
ಪರವಧುಗಱಿಪುವುದುಮಿಹಂ
ಪರವಱಿಗುಂ ನಿನ್ನಮಹಿಮೆಗಿದು ನಡೆವಳಿಯೇ ॥ ೧೪೫ ॥

---

1. ಪೂಣಿಸಿದ. ಜ. ಗ. ಘ.

ಎಂದು ಮರ್ಮೋದ್ಘಾಟನಂ ಗೆಯ್ದು—

ಕಂ ॥ ಮೂದಲಿಸಿ ಮುಟ್ಟಿವರ್ಪುದು
ಮಾ ದಾನವಸರ್ಕಜಟಿಯುನಣ್ಪಿಂಗವನೊಳ್ ॥
ಕಾದದೆ ಕರುಣಿಸಿ ವಿದ್ಯಾ
ಚ್ಛೇದಂ ಗೆಯ್ದಂ ನಿರಂಕುಶಂ ದಶಕಂಠಂ ॥ ೧೪೬ ॥

ಅಂತು ವಿದ್ಯಾಚ್ಛೇದಂ ಗೆಯ್ವುದುಂ—

ಕಂ ॥ ಅಂಬರದಿನಾತ್ಮವಿದ್ಯಾ
ಡಂಬರಮಸ್ತಮಿಸೆ ಬಿಟ್ಟು ಮೂರ್ಛಾಪನ್ನಂ ॥
ಕಂಬು ದ್ವೀಪದೊಳಳವಱಿ
ದಂಬರಚರನೆಱಕೆಮುಱಿದ ಪಕ್ಕಿವೊಲಿರ್ದಂ ॥ ೧೪೭ ॥

ಅನ್ನೆಗಮಿತ್ತ ದಶಮುಖಂ ಲಂಕೆಗಭಿಮುಖನಾಗಿ ಪೋಗುತ್ತುಂ—

ಮ ॥ ಬಗೆ ಸಂಭೋಗ ಸುಖಕ್ಕೆ ಕಾತರಿಸೆ ಕಣ್ಗಳ್ ಕೀಱಿ ಸರ್ವಾಂಗಮುಂ ।
ತೆಗೆದಾಲಿಂಗಿಸೆ ಮಾತುಗಳ್ ಮದನರಾಗೋನ್ಮಾದಮಂ ಬೀಱಿ ಬಾ ॥
ಹುಗಳಾಲಿಂಗನ ಲಾಲಸಂಗಳಿನೆ ಧೈರ್ಯಂಗೆಟ್ಟು ಮೇಲ್ವಾಯ್ದು ಚೇ ।
ಷ್ಟೆಗೆ ಪೌಲಸ್ತ್ಯನುಮೊತ್ತುಗೊಟ್ಟನೆನಲಾರಂ ದರ್ಪಕಂ ದಂಡಿಸಂ ॥ ೧೪೮ ॥

ಆಗಳವನಱಿಪಿನಱಿಗೆಯ್ತಕ್ಕೆ ಸೀತೆ ಸ್ಮರಿಸದೆ ನೀನೆನ್ನ ನೋಂಕಿದೊಡ ನಾಲಗೆ ಗಿಟ್ಟು ಸಾವೆನೆಂದು ಪರಿಚ್ಛೇದಿಸಿ ನುಡಿಯೆ ದಶಾಸ್ಯನೋಸರಿಸಿ ಮಹಾಸತಿಯು ಶೀಲ ದಳವನಱಿಯನಪ್ಪುದಱಿನನಂತವೀರ್ಯ ಕೇವಲಿಗಳಿತ್ತ ಪರವಧೂ ವಿರತಿ ವ್ರತ ಪರಿ ಪಾಲನವೆನಗರಿದಾದುದೆನೆ ನಿಸರ್ಗ ರಾಗಿಗಳಪ್ಪ ಪೆಂಡಿರ ಪರಿಣಾಮುವೆಲ್ಲಿವರಂ ನಡ ದಪ್ಪುದೀಕೆಯನಾವ ತೆಱದೊಳವೊಡಂಬಡಿಸುವುದಾವ ಗಹನವೆಂದು ತನ್ನಂ ತಾನೆ ಸಂತಯಿಸುತ್ತುಂ ಪೋಪ ಸಮಯದೊಳ್—

ಚ ॥ ಅನುವರದೊಳ್ ಪಲಾಯನಪರರ್ ಗಱಿಸೋಂಕದೆ ಹಸ್ತನುಂ ಪ್ರಹ ।
ಸ್ತನುಮತಿವೇಗದಿಂ ಬರುತುಮಾಗಸದೊಳ್ ದಶಕಂಠನಂ ವಿಲೋ ॥
ಚನ ಪಥ ಪರ್ತಿಯುಂ ಜಯಜಯಧ್ವನಿ ಕೈಮಿಗೆ ಮುಟ್ಟಿವಂದವರ್ ।
ವಿನಮಿತ ಮಸ್ತಕರ್ ಮುಕುಳಿತಾಂಜಲಿಗಳ್ ಪೊಡೆವಟ್ಟು ಪೋಪುದುಂ ॥೧೪೯॥

ಆಗಳದಂ ಸೀತೆ ಕಂಡೀತಂ ರಾವಣನೆಂದಱಿದು—

ಕಂ ॥ ಅನಶನಮಂ ಕೈಕೊಂಡಳ್
ಮನದೊಳ್ ಸತಿ ಪತಿಯ ಕುಶಲವಾರ್ತೆಯನಾಂ ಕೇ ॥
ಳ್ವಿನಮುಣ್ಣೆನೆಂದು ನೃಪ ಮಾ
ನಿನಿಯರ್ ಸಜ್ಜನಿಕೆಗಿಂತು [1]ನೋಂತರುಮೊಳರೇ ॥ ೧೫೦ ॥

ಅಂತು ರಾವಣಂ ಲಂಕೆಯನೆಯ್ದುವಂದು ಗೀರ್ವಾಣರಮಣಮೆಂಬ ನಿಜ ವಿನೋದ ವನಮಂ ಪುಗುವಾಗಳ್—

ಕಂ ॥ ಪುಗದಿರ್ ವನಮಂ ಪೊಕ್ಕೀ
ಮೃಗಾಕ್ಷಿಯಂ ಮಡಗೆ ರಾಮದೂತನಿನೆಮಗ ॥
ಚ್ಚಿಗಮಕ್ಕುಮೆಂದು ಕೈಸ
ನ್ನೆಗೆಯ್ವವೋಲ್ ತಳಿರ ತೊಂಗಲಲುಗಿದುದೆಲರಿಂ ॥ ೧೫೧ ॥

ಅಂತಾ ವನಮಂ ಪೊಕ್ಕಲ್ಲಿಯ ವಿಚಿತ್ರ ಮಣಿಮಯ ಗೇಹದೊಳ್ ವೈದೇಹಿಯ ನಿರಿಸಿ ತಾನುಂ ತನ್ನರಮನೆಯ ಕರುಮಾಡಮಂ ಪೊಕ್ಕಿರ್ಪುದುಮಾ ಸಮಯ ದೊಳ್ ಖರದೂಷಣರ ಮರಣವಾರ್ತೆಯಂ ಚಂದ್ರನಖಿ ಚರವಚನದಿಂ ಕೇಳ್ದು—

ಕಂ ॥ ಸುತನಂ ಕೊಂದವನಂ ಕೊ
ಲ್ವ ತಕ್ಕನಿಂ ಪೋಗಿ ನಿಜ ಪರಿಗ್ರಹ ಸಹಿತಂ ॥
ಪತಿಯುಂ ಮೈದುನನುಂ ಪರಿ
ಹೃತ ಜೀವಿತರಾಗೆ ಶೋಕ ವಿಹ್ವಲೆಯಾದಳ್ ॥ ೧೫೨ ॥

ಚ ॥ ಅವಿರಲ ವಾರಿಹಾರ್ಯ ರುತಿ ಶೋಕ ರುತಿ ಪ್ರತಿಬದ್ಧವಾಗೆ ಪ ।
ಲ್ಲವ ಪರಿಶೋಭಿ ಪಾಣಿತಲದಿಂ ಬಸಿಱಂ ಬಿಡೆ ನೋದಿಕೊಳ್ವುದುಂ ॥
ತಿವಳಿಗಳನ್ನವಾಗೆ ಬೆರಲಚ್ಚಿಱಿದಂತಿರೆ ಕಣ್ಣ ನೀರ್ಪೊನಲ್ ।
ಕವಿತರೆ ಬಂದು ಚಂದ್ರನಖಿ ಪೊರ್ದಿದಳಗ್ರಜ ಪಾದ ಮೂಲಮಂ ॥ ೧೫೩ ॥

ಅಂತು ಚಂದ್ರನಖಿ ನಿಖಿಲಾಂತಃಪುರಮುಂ ಮಂಡೋದರಿಯುಂ ಬೆರಸು ಬಂದು ಮುಂದೆ ಮಹಾಶೋಕಂಗೆಯ್ವುದುಮಾಕೆಗೆ ಸಂಸಾರ ಸ್ವರೂಪಮಂ ತಿಳಿಪಿ ಖರದೂಷಣರಂ ಕೊಂದನನಮೋಘಂ ಕೊಲ್ವೆನೆಂದಟ್ಟೆಯಂ ಬಾರಿಸಿ ಭಗವದರ್ಹ ದ್ಭವನಂಗಳೊಳ್ ಮಹಾಪೂಜೆಗಳಂ ಮಾಡಿಸಿ ರಾಜಭವನಕ್ಕೆ ಬಂದು ಶಯ್ಯಾ ಸದನಮಂ ಪೊಕ್ಕು—

---

1. ಸೈದರು. ಚ

ಚ ॥ ತಡೆವುದು ತಕ್ಕುದಲ್ತು ಖರದೂಷಣರಂ ಕಡುಕೆಯ್ದು ಕೊಂದನಂ ।
ಮಡಿವುವೆನೆಂಬ ತಕ್ಕುಬೀದು ಸೀತೆಯನೇತೆಱದಿಂದಮೆಂತೊಡಂ ॥
ಬಡಿಸುವೆನೆಂತು ಮೇಳಿಸುವೆನೆಂತು ಮದೀಯ ಮನೋಜ ತಾಪಮಂ ।
ಕಿಡಿಸುವೆನೆಂದು ಪಂಬಲಿಸಿದಂ ಪಲವಂ ಮನದೊಳ್ ದಶಾನನಂ ॥೧೫೪॥

ಉ ॥ ಏತಱ ಸೋಂಕುಮಾವುದಱ ಗಾಡಿಯುಮೊಂದಱ ಕಂಪುಮನ್ನರೊ ।
ಳ್ಳಾತುಮದೆಂತುಟಪ್ಪ ರಸಮುಂ ತನಗೆಂತುಮಸಹ್ಯಮಾಗೆ ಪ್ರ ॥
ಜ್ಞಾತನ ಮಾಯೆ ಮೋಹಿಸುವುದುಂ ಬಗೆಯಂ ವಿಗತಾನ್ಯ ಚಿಂತನಾ ।
ಸೀತೆಯ ಚಿಂತೆಯಿಂ ದಶಮುಖಂ ಮರವಾನಸನಂತೆ ತೋಱಿದಂ ॥೧೫೫॥

ಅಂತು ಚಿಂತಾಕ್ರಾಂತನಾದ ನಿಜಮನೋವಲ್ಲಭನಂ ಮಂಡೋದರಿ ಕಂಡು—

ಚ ॥ ಖರನ ವಿಪತ್ತಿಯೊಳ್ ವಿಕಲನಾದನೆ ಗೆತ್ತಿನಿತೇಕೆ ಪೆಂಡಿರಂ ।
ತಿರೆ ಬಹು ಶೋಕಮೀತೆಱದಿನಿರ್ದೊಡೆ ಗಂಡಗುಣಕ್ಕೆ ನಾಡೆಯುಂ ॥
ಪರಿಭವಮೊಂದಳೆತ್ತಲಱಿವಳ್ ಗಗನೇಚರ ಚಕ್ರಿ ಜಾನಕೀ ।
ವಿರಹ ಕೃಶಾನು ಸುತ್ತಿಸುಡೆ ಚಿತ್ತಮನಾಕುಲನಾದನೆಂಬಿದಂ ॥ ೧೫೬ ॥

ಎನೆ ದಶಗ್ರೀವನೆನ್ನ ಬೇವಸಕ್ಕಿದು ನಿಮಿತ್ತಮಲ್ತು . ನಿನಗೆನ್ನತೆಱನಱಿ
ಯಲಾಗದೆಂದು--

ಕಂ ॥ ಬೆಂಡಾಗೆ ಮನಂ ಮೌನಂ
ಗೊಂಡಿರೆ ವಲ್ಲಭನ ಮನಮನಱಿವಾಗ್ರಹದಿಂ ॥
ಮಂಡೋದರಿ ಮಾಣದೆ ಬೆಸ
ಗೊಂಡಳ್ ಕೌತುಕಮಿದೇಂ ನಿಮಿತ್ತಮೆನುತ್ತುಂ ॥ ೧೫೭ ॥

ಅಂತು ಬೆಸಗೊಳ್ವುದುಂ ಮಱುಮಾತುಗುಡದೆ ಲಜ್ಜಾರಸ ನಿಮಗ್ನಾನನಂ
ದಶಾನನನಿರೆ---

ಉ ॥ ಗಂಡುಡೆಯುಟ್ಟು ಕೈದುವಿಡಿದುಮ್ಮಳಮಂ ನಿನಗುಂಟುಮಾಳ್ಪ ಬ ।
ಳ್ಗಂಡಿನ ದೇವ ಮಾನವ ವಿಯಚ್ಚರರೊರ್ವರುಮಿಲ್ಲ ನಿನ್ನದೋ ॥
ರ್ಮಂಡಲಮೀ ತ್ರಿಖಂಡಮುಮನಾಕ್ರಮಿಸಿತ್ತಿದು ಪುಷ್ಪ ಕಾಂಡ ಕೋ ।
ದಂಡನ ಗೊಡ್ಡಮುರ್ಚಿರುವೆ [1]ತೋಱವೆಯಾತನ ಪೂವಿನಂಬುಗಳ್ ॥೧೫೮॥

1. ತ್ರಾರಪರಾ. ಚ.

ಕಂ ॥ ಸ್ಮರನಂ ಮೆಚ್ಚದ ನಿನ್ನೀ
ಪರಿಜಂ ಕಡೆಗಣಿಸಿ ನಿನಗವಿನಿ[1]ತಚ್ಚಿಗವುಂ ॥
ತರಲಾರ್ತ ನೀಜ್ ಲೆಪ್ಪದ
ಬರಿಪದ ಕಂಡರಣೆಪೆಸದ ಪೆಣ್ಣಕ್ಕುಮವಳ್ ॥ ೧೫೯ ॥

ಎಂಪಜ್ದು [2]ಮುಜ್ಯುದಂತೆ ತೆಜ್ಯು ನುಡಿಯೆ ಮನದೆ ಕೊಂಡು ಮಂಡೋದರಿಯ ಮೊಗವುಂ ನೋಡಿ—

ಚ ॥ ಅಜ್ಪುವ ವಾರ್ತೆಯಲ್ತು ನಿನಗೆನ್ನ ನೆಗಚ್ಚಿಯ ವಾರ್ತೆ ನೀನೆ ಮು।
ನ್ನಜ್ದ ಬಜ್ಕ್ಕದಂ ನಿನಗೆ ವಂಚಿಸಲಾಗದು ತಂದೆ ನಿಂದು ಮುಂ ॥
ದಜ್ಯುದೆ ಸೀತೆಯಂ ಮದನನಾಕೆಯ ದೂಸಜ್ನೆನ್ನನೆಚ್ಚಪಂ।
ನೆಜ್ಗೊಳೆ ಪೂವಿನಂಬಲಗಿನಂಬುಗಳಂಬಿನಮ್ಮಂಬುಜಾನನೇ ॥ ೧೬೦ ॥

ಎಂದು ಮತ್ತಮಿಂತೆಂದನಿಂದು ಪುಷ್ಪಕ ವಿಮಾನದೊಳ್ ಜಾನಕಿಯನುಜ್ಸೆಜ್ವಿಡಿದು ಒರುತ್ತುವಾಕೆಯ ಪಜುಗಜ್ದ ಗಾಡಿಯಂ ನೋಡಿ ಮನದೊಳಿನ ಗಜ್ಪು ಕೈಗಜ್ವಾಗೆ ಸ್ಪರಿಸದೆ ಪೊರ್ದಲ್ಬರೆ ಸೀನೆನ್ನಂ ಪೊರ್ದಿದೊಡೆ ನಾಲಗೆ ಗಿಪ್ತು ಸಾವೆನೆಂದು ಜಡಿದು ನುಡಿಯೆ ಸೆಡೆದು ಲಂಕೆಗೆ ತಂದು ಗೀರ್ವಾಣ ರಮಣೋದ್ಯಾನದೊಳಿರಿಸಿ ಬಂದೆನಾ ಕುಂದ ವಳ ಧವಳ ಲೋಚನೆಯ ಲಾವಣ್ಯ ಸುಧಾ ಸೇವೆ ಸಮನಿಸದಿರೆ ಸಾವು ಸಮನಿಸುಗುಮೆನೆ ದಶಾನನನ ದಶಾವಸ್ಥೆಯಂ ಕಂಡು ಮಂಡೋದರಿ ಭಯಂಗೊಂಡು—

ಕಂ ॥ ಅಚಿರ ಪ್ರಭೆಯುಂ ಪೆಂಡಿರ
ರುಚಿತ್ವಮುಂ ಕ್ಷಣದಿನಗ್ಗಳಂ ನಿಲ್ವುವೆ ಪೇಟ್ ॥
ಖಚರೇಂದ್ರ ನಿಜಾಕೃತಿ ಚಿ
ತ್ತ ಚಮತ್ಕೃತಿ ಕಂಡಿದರ್ಕೆ ಸೋಲದರೊಳರೇ ॥ ೧೬೧ ॥

ಎಂದು ಸಂತಸಂಬಡೆ ನುಡಿದಾಕೆಯನೊಡಂಬಡಿಸಲಾನೆ ಸಾಲ್ವೆನೆಂದು ಸಮಸ್ತಾಂತಃಪುರ ಸೀಮಂತಿನಿಯರ್ವೆರಸು ಸೀತೆಯ ಸವಿಾಪಕ್ಕೆ ಸಂದು—

ಕಂ ॥ ವನಿತೆಯರ ನಯನ ರುಚಿಯಿಂ
ತನು ರುಚಿಯಿಂ ರತ್ನಭೂಷಣಂಗಳ ರುಚಿಯಿಂ ॥
ದಿನಲಕ್ಷ್ಮಿಗೆ ಕೊರ್ವುರ್ವಿದು
ದೆನೆ ಮಂಡೋದರಿ ವಿಲಾಸದಿಂ ಕುಳ್ಳಿರ್ದಳ್ ॥ ೧೬೨ ॥

---

1. ತಚ್ಚಿಗ. ಗ. 2. ಮುಜ್ಯುದಂತೆ, ಕ. ಖ. ಎಂದು ಮನಸನುಜ್ದು ತೆಜ್ಯು, ಗ. ಘ.

ಅಂತು ಕುಳ್ಳಿರ್ಪುದುಂ—

ಕಂ ॥ ಅನಿಬರರಸಿಯರ ರೂಪುಂ
ಮನಕ್ಕೆ ಸೊಗಯಿಸಿದುದಿಲ್ಲ ಸೀತೆಯ ಕೆಲದೊಳ್ ॥
ದಿನಲಕ್ಷ್ಮಿಯ ಕೆಲದೊಳ್ ಲೋ
ಚನ ಸುಖಮಂ ಪಡೆಯದಂತೆ ತಾರಾವಿಭವಂ ॥ ॥ ೧೬೩ ॥

ಅನಂತರಮಾ ಖಚರಕಾಂತೆ ಜಾನಕಿಯ ಮುಖಸರೋಜಮಂ ನೋಡಿ—

ಉ ॥ ಪಂಕಜ ಸಂಭವಂ ನಿನಗೆ ಪಾಸಟಿಯಲ್ಲದ ರಾಘವಂಗೆ ನಿ ।
ಸ್ಸಂಕುಡೆ ಕಂಡುಸ್ಯೆರಿಸದೆ ಚಿತ್ತಭವಂ ದಶಕಂಧರಂಗೆ ಕೊ ॥
ಟ್ಟಂ ಕಡುನೀಜಳ್ ನಿನ್ನನನುರೂಪ ವರಂಗೊಡಗೂಡಿ ಲೀಲೆಯಿಂ ॥
ಲಂಕೆಯನಾಳ್ದು ತಾಳ್ದರಸಿವಟ್ಟಮನಾತ್ಮ ಲಲಾಟ ಪಟ್ಟದೊಳ್ ॥ ೧೬೪ ॥

ಈ ನವ ಯೌವನೋದಯಮನೀ ನಯನೋತ್ಸವಮಪ್ಪ ರೂಪಿನು ।
ದ್ದಾನಿಯನೀ ತನುಚ್ಛವಿಯನೇ[1]ನೊಗಳ್ದಪ್ಪುದೊ ನೋಲ್ತು ಬಂದೊಡಂ ॥
ಮೇನಕೆ ಬಾಳ್ತಿಗೆಯ್ಯದ ದಶಾನನನುಂ ಬಸದಾದನೆಂದೊಡಾರ್ ।
ಜಾನಕಿ ನಿನ್ನವೋಲುಱಿದ ಮಾನಿನಿಯರ್ ಕಡು ಗಾಡಿಕಾರ್ತಿಯರ್ ॥ ೧೬೫ ॥

ಕಂ ॥ ಪದವಿಲ್ಲಂ ನನೆಯಂಬಿನ
ಪೊದೆಯಂ ಪಿಡಿದಿರದ ಪದದೊಳಾನೋರ್ಡಿದೊಡಂ ॥
ಮದನಂಗಂ ಮಾನಿನಿ ದಶ
ವದನಂಗಂ ರೂಪ ಭೇದಮೇನಾದಪುದೇ ॥ ೧೬೬ ॥

ಚ ॥ ಇಸುವೆಸಕ್ಕೆಸು ಖೇಚರ ಪುರಂಧ್ರಿಯರಂ ಭರತ ತ್ರಿಖಂಡದೊಳ್ ।
ಪಸರಿಸು ನಿನ್ನ ಗೋಸಣೆಯನಾಣೆಯನೀ ಖಚರೇಂದ್ರ ವಕ್ಷದೊಳ್ ॥
ಪಸಿಯಿಸು ಲಕ್ಷ್ಮಿವೋಲ್ ವಿಜಯಲಕ್ಷ್ಮಿವೊಲೀತನ ತೋಳ ತಟ್ಟಿನೊಳ್ ॥
ಪೊಸಯಿಸು ನಲ್ಮೆಯಿಂ ದಿವಸ ಲಕ್ಷ್ಮಿಯ[3]ನೇಕೆಗೆ ಬಂಜೆಮಾಡುವೈ ॥ ೧೬೭ ॥

ಜನಕಜೆ ನಿನ್ನ ಪೀವರ ಪಯೋಧರ ಮಂಡಲಮಂ ಮನೋಜ ರಾ ।
ಜನ ವಿಜಯಾಭಿಷೇಕ ಸವನೋತ್ಸವ ಪೂರ್ಣ ಸುವರ್ಣ ಕುಂಭಮಂ ॥
ನೆನೆಯಿಸುವಂತು ಮಾಡು ಖಚರೇಂದ್ರನ ಕಾತರ ದೃಷ್ಟಿ ಪಾತ ಚಂ ।
ದನ ಘನಸಾರ ಕರ್ದಮ ವಿಲೇಪನದಿಂ ಕರ ಪಲ್ಲವಂಗಳಿಂ ॥ ೧೬೮ ॥

1. ನೀಂ ತಳೆದಪ್ಪುದೆ. ಚ. 2. ತಿಂ. ಚ. 3. ನೇಕೆಯೊ. ಕ. ಖ. ಗ. ಘ.

ಎನೆ ಜಾನಕಿ ಮಂಡೋದರಿಗೆ ಮನದೊಳೆ ಕನಲ್ದು—

ಮ॥ ಇದು ಮತ್ತೋನ್ಮತ್ತ ಜಲ್ಪಂ ಕುಲವಧುವರ ಮಾತಲ್ತು ನಿಮ್ಮೊಂದಿಗರ್ ಪಂ।
ಸ್ರ॥ ಪದ ಕೇಡಂ ನೋಡದೊಳ್ಪಂ ಬಗೆಯದೆ ಪೞಿಗಂ ಪಾತಕಕ್ಕಂ ಭಯಂ ಗೊ।
ಳ್ಳದೆ ಪೇೞರ್ ಪೊಲ್ಲ ಮಾತಂ ನುಡಿವಿರಿದು ಮನಂ ನೋಯ್ಪ ಸಂಕಲ್ಪ ಜಲ್ಪಂ।
ಮದಧೀಶಂ ರಾಮಚಂದ್ರಂ ಪೊಱಗೆನೆ ಪೆಱರೇನಾತೊ ಜಾತಾನುಜಾತರ್॥

ಕಂ॥ ತನಗೆ ಪತಿವ್ರತಮಿಲ್ಲದ
ವನಿತೆ ಕುಲಸ್ತ್ರೀಯೆ ಭಿನ್ನ ಭಾಜನಮಿಂತ॥
ಪ್ಪನುಚಿತಮಂ ಹರಿವಂಶದ
ವನಿತೆಯರೊಳ್ ನುಡಿಯಲಕ್ಕುಮೇ ನಿಮ್ಮನ್ನರ್ ॥ ೧೭೦ ॥

ಎಂದು ಮಂಡೋದರಿಯುಂ ಬಿಡೆನುಡಿವುದುಮಾ ಸಮಯದೊಳ್—

ಮ॥ಸ್ರ॥ ಜಡಿಯುತ್ತುಂ ಚಂದ್ರಹಾಸಾಸಿಯನೆಳಸೆ ತದಾಸ್ಥಾನಮಂ ದಿವ್ಯ ಗಂಧಂ।
ಕುಡುಮಿಂಚಂ ಬೀಱೆ ವಜ್ರಾಭರಣ ಕಿರಣಮಿಂದ್ರಂಗೆ ಸೌಂದರ್ಯದಿಂ ನೂ॥
ರ್ಮಡಿ ಮೇಲೆಂಬನ್ನೆಗಂ ಭೋಂಕನೆ ಜನಕ ಸುತಾಲೋಕನೋತ್ಕಂಠ ಚಿತ್ತಂ।
ನಡೆತಂದಂ ದಾನವೇಂದ್ರಂ ಸುರತರು ಸುಮನೋಮಂಜರೀ ಕರ್ಣಪೂರಂ॥

ಅಂತು ಬರಲೊಡಂ—

ಕಂ॥ ಪರಿನೀರೊಳಗಣ ನೆೞಲಂ
ತಿರೆ ತನ್ನಂ ನೋಡಿ ನಡುಗೆ ಜಾನಕಿ ದಶಕಂ॥
ಧರನಂಜಲೆನುತ್ತಂತಃ
ಪುರಮಂ ಕಣ್ಸನ್ನೆಯಿಂದಮಲ್ಲಿಂ ಕಳೆದಂ ॥ ೧೭೨ ॥

ಅನಂತರಂ ಜಾನಕೀವದನ ವಿನ್ಯಸ್ತ ವಿಲೋಚನಂ ಕಮಲಿನಿಯನೆಳಸುವ ಹಿಮಕರ ಕಿರಣದಂತೆ ದಂತಕಾಂತಿ ಪಸರಿಸೆ ಪೌಲಸ್ತ್ಯನಿಂತೆಂದಂ-

ಉ॥ ನೂಪುರಮಂ ಪದಕ್ಕೆ ಮಣಿಮೇಖಲೆಯಂ ಜಘನಕ್ಕೆ ಕುಂಕುಮಾ।
ಲೇಪನಮಂ ಕುಚಕ್ಕೆ ಪಸುರ್ಗಂಕಣಮಂ ನಳಿತೋಳ್ಗೆ ಪತ್ರ ಲೇ॥
ಖಾ ಪರಿಶೋಭೆಯಂ ನಿಜ ಕಪೋಲ ತಳಕ್ಕೆ ಕುಡಲ್ ಮನೋಜ ಸಂ।
ತಾಪನ ತಪ್ತಮಾತುರಿಸಿದಪ್ಪುದು ಮನ್ಮನಮಂಬುಜಾನನೇ ॥ ೧೭೩ ॥

ಆನೆಯ ಮೇಲೆ ಬೆಳ್ಗೊಡೆಯ ತಣ್ಣೆೞಲೊಳ್ ನೆಲಸಿರ್ದಲೇ ಸರೋ।
ಜಾನನೆ ಪಂಡವಾಸದ ವಿಳಾಸಿನಿಯರ್ ಬಳಿ ನಿನ್ನ ಸುತ್ತಲುಂ॥

ಜಾನಕಿ ನೋಡ ನಿನ್ನನಗೆಗಣ್[1] ಪರಿತುಷ್ಟಿಯನಪ್ಪುಕೆಯ್ಗೆ ಲಂ ।
ಕಾನಗರೀ ಬಹಿಃಪುರ ನವೇರು ವಿಲಾಸ ವನಂಗಳೇೞುವುಂ ॥ ೧೭೪ ॥

ಚ ॥ ಕುಲನದಿಯುಂ ಕುಲಾದ್ರಿ ಶಿಖರಂಗಳ ದಿವ್ಯ ಸರೋವರಂಗಳುಂ ।
ಮಲಯ ಗಿರೀಂದ್ರ ಸಾನು ವನಮುಂ ಲವಣಾರ್ಣವ ವಜ್ರ ವೇದಿಕಾ ॥
ವಿಲಸನಮುಂ ವಿಲೋಚನ ಪಥಾತಿಥಿಮಾಡು ವಿಯದ್ವಿಲಾಸಿನೀ ।
ತಿಲಕ ಮೆನಿಪ್ಪ ಪುಷ್ಪಕ ವಿಮಾನಮನೆನ್ನೊಡನೇಱು ಜಾನಕೀ ॥ ೧೭೫ ॥

ಶಾ ॥ ಎನ್ನೊಳ್ ಪೋರ್ದುಱಿದಿಂದ್ರ ಸಿಂಧುರದ ಕೋಡಿಂದಾದ ಪಲ್ಯಂಕದೊಳ್ ।
ಮುನ್ನಂ ಪದ್ಮಜನಂಜೆಯುಂ ತಱಿದು ತುಪ್ಪುೞ್ಗೊಂಡು ದಿಕ್ಪಾಲಕರ್ ॥
ಬೆನ್ನಿತ್ತಿಕ್ಕಿದ ಚೀಲದಿಂ ಸಮೆದ ಕೇಳೀತಲ್ಪದೊಳ್ ನಿದ್ರೆಗೆಯ್ ।
ನಿನ್ನಂ ನಿದ್ರೆಯಿನೆೞ್ಬುವನ್ನಮಮರೀ ಮಾಂಗಲ್ಯ ಗೀತ ಸ್ವನಂ ॥ ೧೭೬ ॥

ಮ ॥ ಅಸಿರತ್ನಂ ಚಕ್ರರತ್ನಂ ನವನಿಧಿ ಪಲವುಂ ವಿದ್ಯೆ ಕೈಸಾರ್ದುವುಳ್ಳಂ ।
ಜಸಿದೆಂ ದಿಕ್ಪಾಲರಂ ಕಟ್ಟಿದೆನುಱದಿದಿರಾದಿಂದ್ರನಂ ಲೀಲೆಯಿಂ ಚಾ ॥
ೞಿಸಿದೆಂ ಕೈಲಾಸಮುಂ ದಕ್ಷಿಣ ಭರತ ಧರಾಚಕ್ರಮುಂ ಚಕ್ರದಿಂ ಸಾ ।
ಧಿಸಿದೆಂ ಪೌಲಸ್ತ್ಯನಂ ಮಾಱುವರೆ ಸಮರದೊಳ್ ಮಾನವರ್ ಮೀನನೇತ್ರೇ ॥

ಶಾ ॥ ಕಾಡಂ ಕೂಡೆ ತೊೞಲ್ದು ಕಾಡೊಡಮೆಯಿಂ ಭೋಗೋಪಭೋಗಂಗಳೊಳ್ ।
ನೀಡುಂ ತೃಪ್ತಿಯನೀವ ರಾಘವನೊಳೇಂ ವೈದೇಹಿ ವಿದ್ಯಾಧರ ॥
ಕ್ರೀಡಾಸದ್ಮದೊಳಂಗರಾಗ ವಸನಾದಿ ದ್ರವ್ಯದಿಂ ಮನ್ಮಥ ।
ಕ್ರೀಡಾಸೌಖ್ಯಮನಪ್ಪುಕೆಯ್ಯು ಮೆಱೆ ನೀಂ ನಾನಾವಿನೋದಂಗಳಂ ॥ ೧೭೮ ॥

ಎಂದು ಪರನಿಂದಾಪರನುಮಾತ್ಮ ಸ್ತವನ ತತ್ಪರನುಮಾಗಿ—

ಕಂ ॥ ಅನುನಯ ಶತಂಗಳಂ ನುಡಿ
ದನುವಶೆ ಮಾಡಲ್ ವಿಯಚ್ಚರೇಂದ್ರನುಮೇನಾ ॥
ರ್ತನೆ ಜನಕಜೆಯುಂ ಗಗನವು
ನನುಲೇಪಂಗೆಯ್ದೊಡಲ್ಲಿ ಮಸಿ ಪತ್ತುಗುಮೇ ॥ ೧೭೯ ॥

ಸಿರಿಯಂ ಮೆಯ್ಸಿರಿಯಂ ಮೆಱೆ
ದು ರಾವಣಂ ಸತಿಯನೆಱಗಿಸಲ್ ನೆಱೆದನೆ ಪೊ ॥
ನ್ನೊರೆಗನ್ನ ದೀಪಮೆಱಪಂ
ತಿರೆ ಮಾಣಿಕ್ಯ ಪ್ರದೀಪಮೇನೆಱಗುಗುಮೇ ॥ ೧೮೦ ॥

---

1. ಪರಿತೃಪ್ತಿ. ಗ. ಘ.

ಅಂತಾ ದುರಾತ್ಮನ ದುರುಕ್ತಿಗೆ ಜನಕಸುತೆ ಕಡು[1]ಮುಳಿದು ಮುನಿಸಂ ಮೊಗಕ್ಕೆ ತಾರದೆ—

ಮ ॥ ನುಡಿಯಲ್ ತಕ್ಕುದೆ ಪಾಱಿದಪ್ಪಿ ಪಱಿಗಂ ಪಾಪಕ್ಕಮುಳ್ಳಳ್ಳುದೀ ।
ನುಡಿಯಂ ಚೀ ಪರದಾರವನ್ಯ ಶಯನ ಸ್ಥಾನಂ ಪೆಱರ್ ಮಿಂದ ನೀರ್ ॥
ಮುಡಿದುತ್ಸೃಷ್ಟ ಕದಂಬಕಂ [2]ತೊಡೆದ ಕಾಶ್ಮೀರಾಂಗರಾಗಾದಿಕಂ ।
ಮಡೆಗೂೞ್ ಬೀೞುಡೆ ಬಾಯ ತಂಬುಲಮಿವಸ್ಪೃಶ್ಯಂಗಳೇನಲ್ಲವೇ ॥೧೮೧॥

ಕಂ ॥ ಗುಣಹಾನಿಯಿಂದಧೋಗತಿ
ಗುಣದಿಂ ಸ್ವರ್ಗಾಪವರ್ಗ ಸುಖಮಕ್ಕುಮೆನಲ್ ॥
ಗುಣ ಹೀನನ ಸಿರಿಯಿಂದಂ
ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ ॥ ೧೮೨ ॥

ಮ ॥ ಅಱುನೀರಾಗಿರೆ ತಾಯ್ಮಳಲ್ವರೆಗಮಾ ವಾರಾಶಿಯಂ ತುಳ್ಕಲುಂ ।
ತಿಱುಕಲ್ಲಾಡಲುಮಾ ತ್ರಿಕೂಟ ಗಿರಿಯಂ ತತ್ಸೂರ್ಯಹಾಸಾಸಿಯಿಂ ॥
ದಿಱಿದಳ್ಳಾಡಿಸಲುಂ ದ್ವಿಷನ್ನೃಪರನೇಕಾಕ್ಷೋಹಿಣೀ ಸೇನೆಯಾ ।
ನೆಱೆವಂ ದೋರ್ಬಲ ದೃಪ್ತನಪ್ರತಿಹತಂ ರಾಮಾನುಜಂ ಲಕ್ಷ್ಮಣಂ ॥೧೮೩॥

ಉ ॥ ರಾಮನನಂತವೀರ್ಯನಿದಿರೊಳ್ ಭುವನ ತ್ರಯಮಾಂತೊಡಂ ನೃಪ ।
ಗ್ರಾಮಣಿ ದೋಸ್ಸಹಾಯದೊಳೆ ಗೆಲ್ವನಮೋಘಮುದಾತ್ತ ರಾಘವಂ ॥
ದ್ದಾಮ ಶಿಲೀಮುಖಂ ರಣದೊಳನ್ಯ ಸಹಾಯಮನಾಸೆಗೆಯ್ವ ಶಂ ।
ಕಾಮಯ ಪೀಡ್ಯಮಾನರಧಿರಾಜನೊಳೆಕ್ಕತುಳಕ್ಕೆ ವರ್ಪರೇ ॥ ೧೮೪ ॥

ಆಹವ ದೋಹಳಂ ಮಸುೞ್ತೆ ಮತ್ಪತಿಯಿಂದಮುಗಳ್ತೆ ತಂದೆ ಪೈ ।
ದೇಹಿಯನೆನ್ನನುಕ್ಕೆವದಿನಲ್ಲದೊಡೇಂ ದಶಕಂಠ ರಾಮ ಬಾ ॥
ಣಾಹತಿಯಿಂ ನಭಂಬರೆಗಮಂಬಿಱಿವಿಟ್ಟ ಮಡಲ್ತ ವಿದ್ವಿಷ ।
ಶ್ಲೋಹಿತದಿಂದಕಾಂಡ ಲಯ ಕಾಲದ ಸಂಜೆಮುಗಿಲ್ಗಳಾಗವೇ ॥ ೧೮೫ ॥

ಎಂದು ಪಱುಮಾತಿಂಗೆಡೆಯಿಲ್ಲದಂತು—

ಕಂ ॥ ಬಿಡೆನುಡಿಯೆ ಸೀತೆ ಮುಳಿಸಿನ
ಪಡೆಮಾತಂತಿರ್ಕೆ ರಾವಣಂಗೊಲವು ಪದಿ ॥
ರ್ಮಡಿಸಿತ್ತಪ್ರಾಪ್ತಿ ರಸಂ ॥
ಬಡೆಗುಂ ವೈಷಯಿಕಸುಖದೊಳಿದು ವಿಸ್ಮಯಮೇ ॥ ೧೮೬ ॥

---

1 ಮುಳಿದು ಸನ್ಮೊಗಕ್ಕೆ ಪೊಗದಾರದೆ. ಚ 2. ತೊಱೆದ. ಖ. ಗ.

ಅಂತು ದಶಕಂಠನಾ ಕಂಬುಕಂಠಿಯ ಕನಲ್ದೊನಲ್ದು ನುಡಿವ ವಚನಮೆ ಸುಗ್ಗಿಯ ಕಳಕಂಠಿಯ ಪುಗಲೆಂಬ ವಕ್ರವಚನದಂತೆ ತನಗೆ ಮದನರಾಗ ಹೇತುವಾಗೆ—

ಕಂ ॥ ನಯದಿಂದವಿಾ ಸರೋರುಹ
ನಯನೆಯನಳವಡಿಸಲಾರ್ತೆನಿಲ್ಲಳವಡಿಪೆಂ ॥
ಭಯದಿಂದಮೊಂದು ವಿದ್ಯಾ
ದಯಿತಂ ಪಡೆದಂ ವಿಕುರ್ವಣಾವೈಭವಮಂ ॥ ೧೮೭ ॥

ಆ ಸಮಯದೊಳ್—

ಕಂ ॥ ರಾಗಾವಿಲರಾಪದ್ಗತ
ರಾಗದರಾರೆಂದು ದಶಮುಖಂಗಱಿಪುವವೋಲ್ ॥
ಆಗಸದಿನಪರ ಸಂಧ್ಯಾ
ರಾಗಾವಿಲನರ್ಕನಪರ ವಾರಿಧಿಗಿೞಿದಂ ॥ ೧೮೮ ॥

ಅಂತು ನೇಸರ್ ಪಡಲೊಡಂ—

ಉ ॥ ತೋರ ವೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತಿರಲ್ ।
ಕ್ರೂರ ಮೃಗಂಗಳವ್ವಳಿಸಿ ಗರ್ಜಿಸಿ ನುಂಗಲೊಡರ್ಚುವಂತು ಭೋ ॥
ರ್ಭೋರೆನೆ ರಕ್ತವೃಷ್ಟಿ ಕಱಿವಂತು ಸಿಡಿಲ್ ಪೊಡೆವಂತು ಸುತ್ತಲುಂ ।
ವಾರಿಧಿ ಮೇಱಿದಪ್ಪಿ ಕವಿವಂತು ಬಿಗುರ್ವಿಸಿದಂ ದಶಾನನಂ ॥ ೧೮೯ ॥

ಅಂತು ಬಿಗುರ್ವಿಸುವುದುಂ —

ಕಂ ॥ ಬಗೆಯೊಳ್ ಜೈನ ಪದಂ ನಾ
ಲಗೆಯೊಳ್ ಪಂಚಪದಮುಗಲದಿರೆ ರನ್ನದ ದೀ ॥
ವಿಗೆ ಪರುಷ ಪವನ ಹತಿಯಂ
ಬಗೆಯದವೊಲ್ ಸೀತೆ ಬಗೆದಳಿಲ್ಲುಪಹತಿಯಂ ॥ ೧೯೦ ॥

ಆ ಸಮಯದೊಳ್ ಸವಿತೃಮಂಡಲಮುದಯಾಚಲ ಶಿಖಂಡ ಮಾಣಿಕ್ಯ ಮಂಡನಮೆನಿಸೆ ವಿಭೀಷಣ ಪ್ರಮುಖ ಮುಖ್ಯಪುರುಷರ್ ಪೌಲಸ್ತ್ಯನ ಕೆಲಕ್ಕೆ ವಂದು ಖರ ದೂಷಣ ಮರಣ ಶೋಕ ವಿಷಣ್ಣ ಮನರಾಗಿರ್ಪುದುಮನ್ನೆಗಮಿತ್ತ ಕನ್ನೆಮಾಡದ ಮಱಿಯೊಳಿರ್ದ ಸೀತೆ ಶೋಕಂಗೆಯ್ವ ಸರಮಂ ವಿಭೀಷಣಂ ಕೇಳ್ದು ಪುರುಷ ವಿರಹದಿನತಿಪ್ರಲಾಪಂಗೆಯ್ವರಾರೆಂಬುದುಮಾ ಮಾತಂ ಕೇಳ್ದು ಸೀತೆಯಿಂತೆಂದಳ್—

ಚ ॥ ತನಗಿದಿರಾದ ಪೆರ್ವಲಮುನೊರ್ವನೆ ಲಕ್ಷ್ಮಣನಾಂತು ಕಾದೆ ತ ।
ಮ್ಮನ ರಣಮುಂ ನಿರೀಕ್ಷಿಸಲಪೇಕ್ಷಿಸಿ ಪೋಗೆ ಪರೋಕ್ಷದೊಳ್ ದಶಾ ॥
ನನನೆಱೆತಂದನಾಂ ಜನಕನಂದನೆಯುಂ ರಘುವೀರನಪ್ಪ ರಾ ।
ಮನ ವಧು ಸೀತೆಯೆಂ ಪತಿವಿಯೋಗ ಕೃಶಾನು ಸುಡಲ್ಕೆ ಬೆಂದಪೆಂ ॥ ೯೧ ॥

ಎನೆ ವಿಭೀಷಣಂ ನೈಮಿತ್ತಿಕಾದೇಶಮುಂ ನೆನೆದು ಭಯ ಚಕಿತ ಚಿತ್ತನಾಗಿ—

ಕಂ ॥ ಪರ ಪರಿಗೃಹೀತೆಗಱಪಂ
ತರೆ ಪುರುಷಂ ಪುರುಷ ಧರ್ಮಮೞಗುಂ ಪೞಗುಂ ॥
ಧರೆ ದುರ್ಗತಿ ಸಮನಿಸುಗುಂ
ಪರಿಹರಿಸುವುದಾರುಮದಱನೀ ದುರ್ಣಯಮುಂ ॥ ೯೨ ॥

ಎಂದು ಬಿನ್ನವಿಸೆ ಮಾರೀಚನುಮದನೆ ನುಡಿಯೆ—

ಕಂ ॥ ಸ್ತ್ರೀರತ್ನಕ್ಕಾಸಿರೆ ಪೆಱ
ರಾರೊಡೆಯರ್ ಮಿಱುವನ್ನರಾರೆನ್ನೀ ದು ॥
ರ್ವಾರ ಭುಜ ಬಲಮನೆಂದವಿ
ಚಾರಿ ದಶಗ್ರೀವನವರ ನೇಳಿಸಿ ನುಡಿದಂ ॥ ೯೩ ॥

ಅಂತು ನುಡಿದು ದಾನವಂ ತ್ರಿಜಗದ್ಭೂಷಣ ದಾನಗಜಮನೇಱ ಜಾನಕಿಯಂ ಪುಷ್ಪಕ ವಿಮಾನಮನೇಱಸಿ ನಿಖಿಲ ಸಾಮಂತ ಸೇನೆ ಮುಂದೆ ಪರಿಯೆ ಪುರ ಶ್ರೀ ವಿಲಾಸಮುಂ ತನಗೆ ತೋರ್ಪುದುಂ—

ಉ ॥ ಜಾನಕಿ ಜೀವಿತೇಶ್ವರನಗಲ್ಕೆಯೊಳಗ್ಗಳಮಾದ ಖೇದದಿಂ ।
ದೇನುಮಸಹ್ಯಮಾಗೆ ಪುರಮುಂ ಪುರ ಗೋಪುರಮುಂ ಬಹಿಃಪುರೋ ॥
ದ್ಯಾನಮನೀಕ್ಷಿಸಲ್ ಬಗೆ ವಿರೂಕ್ಷಿಸೆ ಕನ್ನಡಿಸಲ್ಕೆ ಸಾಲ್ದಳ ।
ಬ್ಜಾನನೆ ದುಃಖಿತೇ ಮನಸಿ ಸರ್ವಮಸಹ್ಯಮೆನಿಪ್ಪ ವಾಕ್ಯಮುಂ ॥ ೯೪ ॥

ಅಂತು ರಾಮಸೀಮಂತಿನಿಯುಂ ಪ್ರಮದ ಮಂದಿರಾ ಪ್ರಮತ್ತಂ ಪ್ರಮದವನದೊಳ್ ಸೆಱೆಗೆಯ್ದು ವಿರಹ ವಿಕಲನಾಗಿರ್ಪುದುಮಾತನ ಕೇಡಂ ವಿಭೀಷಣಂ ಕಂಡು ಭಯಂಗೊಂಡು ಮಂತಣಮಿರ್ದ ಸಮಯದೊಳ್ ಸಂಭಿನ್ನಮೆಸರ ಮಂತ್ರಿಮುಖ್ಯಂ ದಿಗ್ಗಜದ ನಿಗ್ಗವಮನುಡಿವಂತೆ ವಿಯಚ್ಚರ ಪತಿಯ ನಚ್ಚಿನ ಖರ ದೂಷಣರಂ ಕೊಂದು ತದಪತ್ಯನಪ್ಪ ಸುಂದರನಂ ಪಾತಾಳಲಂಕೆಯಿಂ ಸೋದು ಕಳೆದು ತದ್ವಿರೋಧಿಯಪ್ಪ ವಿರಾಧಿತನನನ್ವಯಾಗತ ರಾಜ್ಯಲಕ್ಷ್ಮಿಯೊಳ್ ನಿಲಿಸಿ ರಾಮಲಕ್ಷ್ಮಣರ್ ವೈದೇಹಿಯ ಪೋದ ದೆಸೆಯನಱಯದುಸಿಕನಿರ್ದರಲ್ಲದೆಯುಂ ವಿಗ್ರಹ ಸಮಗ್ರನಪ್ಪ ಸುಗ್ರೀವಂ

ನಮ್ಮೊಳಾದನುಬಂಧದೊಳ್ ಶಿಥಿಲನಾಗಿರ್ಕುಮಾತನೊಳನುಬಂಧ ಮುಳ್ಳುದಱಿಂ ಹನುಮನುಮೆಮಗಲ್ಲನೆಂಬುದುಮಾ ನುಡಿಗೆ ದಶಮುಖಂ ಪರಿಹಾಸ ಮುಖರಮುಖ ನಾಗಿ—

ಚ ॥ ಕಡಲೊಳಗೊಂದೆರಟಿ ಜಲಕಣಂ ಪವನಾಹತಿಯಿಂ ವಿನಷ್ಟಮಾ।
ದೊಡೆ ಜಲರಾಶಿ ಕುಂದುಗುಮೆ ಮೇಱೆಗೆ ದೂರಮೆನಿಪ್ಪ ನಮ್ಮ ಪೆ॥
ರ್ವಡೆ ಖರ ದೂಷಣರ್ ಕಱೆಯೆ ಕುಂದುಗುಮೇ ಕಪಿ ಚಿಹ್ನರಿಲ್ಲದೇಂ।
ಕಿಡುವುದೊ ಭೂಚರರ್ ಧುರದೊಳಾಂಪರೆ ಖೇಚರ ಚಕ್ರವರ್ತಿಯಂ॥ ೧೯೫॥

ಎಂಬುದುಮಾ ನುಡಿಯನವಕರ್ಣಿಸಿ ನಿಶಿತ ಪ್ರಜ್ಞನುಮನಾಗತಜ್ಞನುಮಪ್ಪ ಸಹಸ್ರಮತಿ ವಿದ್ಯಾಬಲದೊಳಂ ಭುಜಬಲದೊಳಂ ಷಡಂಗಬಲದೊಳಮತ್ಯಧಿಕನಪ್ಪಶ್ವ ಗ್ರೀವ ಖೇಚರನಂ ಭೂಚರಂ ತ್ರಿಪಿಷ್ಟನಶ್ರಮದೊಳೆ ಕೊಂದಂ ಭೂಚರರಸಂಖ್ಯಾತ ಖೇಚರರಂ ಕಾದಿ ವಿಧೇಯರಂ ಮಾಡಿಕೊಂಡರೆಂಬುದಾಬಾಲ ಗೋಪಾಲ ಪ್ರಸಿದ್ಧ ಮದಱಿನವರನೇಳಿಸುವುದುಚಿತಮಲ್ತು ಸುಗ್ರೀವಾದಿಗಳುಮಂ ದಾನ ಸನ್ಮಾನಂಗಳಿಂ ದೆಮಗೆ ಮಾಳ್ಪುದು ಲಂಕೆಗಭೇದ್ಯಮಾಗೆ ವಿದ್ಯಾಪ್ರಾಕಾರಮಂ ಮಾಳ್ಪುದಿಂತು ಬಲಿ ದಿರ್ಪುದುಂ ವೈದೇಹಿಯ ವಿರಹದಿಂ ರಾಮಂ ವಿಗತದೇಹನಕ್ಕುಮಂತಾಗೆ ಲಕ್ಷ್ಮಣಂ ಗಂ ಪ್ರಾಣ ಪರಿತ್ಯಾಗಮಕ್ಕುಮೆಂದು ನಿಶ್ಚಯಿಸಿ ನುಡಿಯೆ ವಿಭೀಷಣನಾ ಪ್ರಕಾರದಿಂ ಪ್ರಯತ್ನಪರನಾಗಿರ್ಪುದುಮನ್ನೆಗಮಿತ್ತಲ್—

ಕಂ ॥ ಖರ ದೂಷಣರಿಂ ಪಗೆಯುಂ
ಪರಿಭವಮುಂ ತೀರ್ಗುಮವರ್ಗೆ ಪೇಱ್ವೆನೆನುತ್ತುಂ॥
ಬರುತಂ ಕಾನನದೊಳ್ ವಾ
ನರ ಚಿಹ್ನಂ ಕಂಡನೊಂದು ರಣ ಮಂಡಲಮಂ ॥ ೧೯೬ ॥

ಚತುರಂಗ ಸೇನೆಯುಂ ಜವ
ನತಿಕಾಂಕ್ಷೆಯಿನುಂಡು ಕಾಱಿದಂತಿರ್ದ ರಣ॥
ಕ್ಷಿತಿ ತಲಮಂ ಕಂಡಂ ನಿಜ
ಸತೀ ವಿಯೋಗಾರ್ತ ಚೇತಸಂ ಸುಗ್ರೀವಂ ॥ ೧೯೭ ॥

ಕಂಡಿದೇನೆಂದು ಬೆಸಗೊಳ್ವುದುಮದನಱಿವನೊರ್ವನಿಂತೆಂದಂ ಬಲಾಚ್ಯುತರ್ ಬಂದು—

ಕಂ ॥ ಶಂಬುಕನಂ ಕೊಂದಸಿರ
ತ್ನಂ ಬಡೆದರ್ [1]ಚಂದ್ರನಖಿಯ ಪುಯ್ಯಲ್ಗಿತ್ತಾ॥

1. ಶೂರ್ಪನಖಿಯು. ಚ.

ಡಂಬರದಿನೆತ್ತಿ ಬಂದುದ
ನಂಬರಚರ ಬಲಮನೊಂದೆಮೆಯ್ಯೊಳ್ ಕೊಂದರ್ ॥ ೧೯೮ ॥

ಖರ ದೂಷಣರಂ ಕೊಂದರ್
ವಿರಾಧಿತಂಗವನ ಪೂರ್ವವೃತ್ತಿಯನಿತ್ತರ್ ॥
ಸೆರಗಿಲ್ಲದವರ್ ಕಾರಣ
ಪುರುಷರ್ ಪಾತಾಳಲಂಕೆಯೊಳ್ ಬಂದಿರ್ದರ್ ॥ ೧೯೯ ॥

ಅನುಜಂ ಲಕ್ಷ್ಮಣನಗ್ರಜ
ನನಂತ ಬಲನಪ್ಪ ರಾಮಚಂದ್ರಂ ಸಕಲಾ ॥
ವನಿ ಪತಿ ತತ್ಪದ ಸೇವೆಯಿ
ನನಾಕುಲಂ ತೀರ್ಗುಮಾರ ಪಗೆಯುಂ ಬಗೆಯುಂ ॥ ೨೦೦ ॥

ಮ ॥ ಗರಲಗ್ರೀವನಹೀಂದ್ರಸಿಂದು ಮೃಗಲಕ್ಷ್ಮಂ ಶಂಕರಂ ನೀಲಕಂ ।
ಧರನೆಂದೇಳಿಸೆ ತನ್ನ ನಿರ್ಮಲ ಯಶಂ ದಿಕ್ಕಾಮಿನೀ ಮೌಕ್ತಿಕಾ ॥
ಭರಣಂ ಕಾಯಲುಮಿಾಯಲುಂ ನೆಱೆವ ಪುಣ್ಯಾತ್ಮಂ ಪರಾರ್ಥ ಪ್ರಿಯಂ ।
ಪುರುಷಾರ್ಥಾಯತನೈಕ ರತ್ನ ಕಲಶಂ ಸಾಹಿತ್ಯ ವಿದ್ಯಾಧರಂ ॥ ೨೦೧ ॥

ಇದು ಪರಮ ಜಿನಸಮಯ ಕುಮುದಿನೀಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖ ಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಸೀತಾಹರಣ ವರ್ಣನಂ
ನವಮಾಶ್ವಾಸಂ.

# ದಶಮಾಶ್ವಾಸಂ

ಕಂ ॥ ಶ್ರೀ ಲಲನಾ ಸ್ತನಭರ ನಿಬಿ
ಡಾಲಿಂಗನ ಕುಂಕುಮಾಂಕಿತೋರಸ್ಸ್ಥಲನು ॥
ರ್ವೀಲೋಕ ಮಂಡನಂ ಮಹಿ
ಮಾಲಂಬನ ಚಾರು ಚರಿತನಭಿನವಪಂಪಂ ॥ ॥ ೧ ॥

ಎನೆ ಮನದೆ ಕೊಂಡು ಸುಗ್ರೀವನೀ ಮಹಾನುಭಾವರಪ್ಪ ರಾಮಲಕ್ಷ್ಮಣರಿನೆನ್ನ ಪಗೆಯುಂ ಬಗೆಯುಂ ತೀರ್ಗುಮೆಂದು ನಿಶ್ಚಯಂಗೆಯ್ದು ನಿಜಾಗಮನಮಂ ವಿದಿತಂಮಾಳ್ಪಿಂತು ಮುಂದೆ ವಿರಾಧಿತನಲ್ಲಿಗೆ ದೂತನಂ ಕಟುಪಿ—

ಕಂ ॥ ಬಲ ಸಹಿತಂ ಸುಗ್ರೀವಂ
ಬಲ ನಾರಾಯಣರ ಬಲದೊಳಭಿಮತಮಂ ತೀ ॥
ರ್ಚಲೊಡರ್ಚಿ ವಿಯನ್ಮುಖಮಂ
ವಲಿಮುಖ ಜಯ ವೈಜಯಂತಿ ಚುಂಬಿಸೆ ಬಂದಂ ॥ ೨ ॥

ಅಂತು ಬಂದು ಪುರಮಂ ಪುಗುವ ಸಮಯದೊಳ್ ಲಕ್ಷ್ಮಣಸೀತನಾರ್ಗೆನೆ ವಿರಾಧಿತನೆಂದಂ ಕಿಷ್ಕಿಂಧ ನಗರಾಧಿನಾಥನುಂ ಕಪಿಧ್ವಜ ಕುಲಧ್ವಜನುಂ ಸೂರ್ಯಂ ಜಯ ಪ್ರಿಯತನೂಜನುಂ ವಾಲಿ ಭಟ್ಟಾರಕರಿಂ ನೇರ್ಗಿಱಿಯನುಮಂಗದನ ಜನಕನುಮಪ್ಪ ಸುಗ್ರೀವಂ ನಿಮ್ಮನೋಲಗಿಸಲ್ ಬಂದನೆಂದು ಬಿನ್ನವಿಸುವನ್ನೆಗಂ—

ಕಂ ॥ ಅವಿಚಲಿತ ಧೈರ್ಯನುತ್ತುಂ
ಗ ವಂಶನಪ್ರತಿಮ ಸಹಜ ಸತ್ವಂ ಕಪಿ ಕೇ ॥
ತುವುದಾತ್ತಂ ಬಂದಂ ನಡೆ
ವ ವರ್ಷಧರ ಶೈಲಮೆಂಬಿನಂ ಸುಗ್ರೀವಂ ॥ ೩ ॥

ಅಂತು ಬಂದು ರಾಮಲಕ್ಷ್ಮಣರ ಚರಣಕಮಲಕ್ಕೆಱಗಿದನಂತರಂ ತನಗೆಱಗಿದ ವಿರಾಧಿತನಂ ಪರಸಿ ಸುಗ್ರೀವಂ ನಿಯಮಿತಾಸನದೊಳಿರ್ಪುದುಮುದಾತ್ತ ರಾಘವಂ—

ಕಂ॥ ಕುಶಲಮೆ ನಿಮಗೆನೆ ನಿಜ ಪದ
ಕುಶೇಶಯಕ್ಕೆಱಗುವಂತು ಸೈಪಾಯ್ತೆನಗಿಂ॥
ಕುಶಲಮೆ ನರೇಂದ್ರ ಪೆಱರಿಂ
ಕುಶಲಂ [1]ವಿಪದುಪಹತಂಗೆ ಸಮನಿಸಿದಪುದೇ ॥ ೪ ॥

ಎಂಬುದುಂ ಲಕ್ಷ್ಮೀಧರನಿವರೇನಿಮಿತ್ತಂ ಬಂದರೆನೆ ಜಾಂಬವಂ ಮುಕುಳಿತ ಕರ ಸರೋಜನಿಂತೆಂದಂ—

ಕಂ॥ ಸುಗ್ರೀವನ ಕುಲವಧು ಕಂ
ಬುಗ್ರೀವೆ ಸುತಾರೆಯೆಂಬಳಾ ಸತಿಯೊಳ್ ತೊ॥
ಟ್ಟಾಗ್ರಹದಿಂದರಮನೆಯುಂ
ಸುಗ್ರೀವನ ರೂಪುಗೊಂಡು ಖಳನೊಳಪೊಕ್ಕಂ ॥ ೫ ॥

ಒಳಗಣ ಪೊಱಗಣ ಕಾಪಿನ
ಕುಲ ವೃದ್ಧರುಮಂಗರಕ್ಷರುಂ ಪಡಿಯಱರುಂ॥
ಖಳನಂ ಸುಗ್ರೀವನೆಗೆ
ತ್ತೊಳಪುಗಲಿತ್ತರ್ ವಿಚಿತ್ರಮವನ ಚರಿತ್ರಂ ॥ ೬ ॥

ಒಂದಚ್ಚಿನೊಳೊತ್ತಿದ ತೆಱ
ದಿಂದಿರ್ದೊಡಮವನ ಗೆಯ್ತುಮಂ ಕಂಡು ಲತಾ॥
ಸುಂದರಿ ಮಾಯಾವಿಯು ರೂ
ಪೆಂದಱಿದಳ್ ಸತಿಯು ಸೈಪನದನೇವೇಟ್ಟಿಂ ॥ ೭ ॥

ಎಱೆಯನ ಕುಱುಪುಗಳಂ ತ
ನ್ನಱಿವನ್ನವನವನ ತನುವಿನೊಳ್ ಕಾಣದಿವಂ॥
ಪೆಱನೆಂದಱಿದವನೆರ್ದೆ ಪಡಿ
ದೆಱೆವಿನಮೋವರಿಯು ಪಡಿಯನಾಸತಿ ಕೆತ್ತಳ್ ॥ ೮ ॥

ಹರಿಣಾಕ್ಷಿ ಸೆಜ್ಜೆವನೆಯೋ
ವರಿಯೊಳ್ ಮೊಯ್ಗರೆಯೆ ಬಗೆಯೊಳೊಗೆದುಮ್ಮಳದಿಂ॥
ದೆರೆದಪ್ಪಲ್ ಪಡೆಯದೆ ಖಳ
ನೆರೆದಪ್ಪಿದ ದಂದಶೂಕನಂದದಿನಿರ್ದಂ ॥ ೯ ॥

1. ದ್ವಿಷದುಪ ಕ. ಗ. ಘ

ಕಂ ॥ ಆ ಸಮಯದೊಳುದ್ಯಾನದಿ
ನೀ ಸುಗ್ರೀವಂ ಸ್ವಕೀಯ ಭವನಕ್ಕೇೞ್ತಂ ॥
ದಾ ಸುಗ್ರೀವನ ಗೊಡ್ಡ
ಕ್ಕಾಸುರಮೆನೆ ಮಸಗಿ ಕಾದಲುದ್ಯತನಾದಂ ॥ ೧೦ ॥

ಅವನುಂ ಜವರಕ್ಕೊಡರಿಸಿ
ದವಸರದೊಳ್ ದಿಟದ ಪುಸಿಯ ಸುಗ್ರೀವನ ಭೇ ॥
ದವನಱಿಯದೆ ಬಾರಿಸಿದರ್
ಬವರಮನಾಪ್ತ ಪ್ರಧಾನ ಸೇನಾ ಮುಖ್ಯರ್ ॥ ೧೧ ॥

ಮೂವತ್ತಕ್ಷೌಹಿಣಿವೆರ
ಸಾ ವಧುವಂ ಕಾದು ವಾಲಿ ದೇವ ಸುತಂ ರಾ ॥
ಜಾವಸಥದೊಳಿರ್ದಂ ಶೌ
ರ್ಯಾವಸಥಂ ಚಂದ್ರರಶ್ಮಿ ದೋರ್ಬಲ ದೃಪ್ತಂ ॥ ೧೨ ॥

ಆ ಕ್ಷಣದೊಳೀಱಕ್ಷೌಹಿಣೀಬಲಂಬೆರಸಂಗದಕುಮಾರಂ ಮಾಯಾ ಸುಗ್ರೀವನಂ ತಂದೆಯೆಂಬ ಸಂದೆಗದಿಂ ಸ್ವೀಕರಿಸಿ ನಳನನಸಿತೆ ಬಲಂಬೆರಸು ಸುಗ್ರೀವನಂ ಪೊಱವೊಱಲೊಳ್ ಸೆಱಗೆಯ್ದಿರೆಂದು ನಿಯಮಿಸಿ ಬೇಱೆವೇಱೆ ಬಲಿದಿರ್ಪುದುಮಾ ಸುಗ್ರೀವಂ ಹನುಮನಲ್ಲಿಗೆ ಪೋಗಿ ನಿಜವೃತ್ತಾಂತಮಂ ನೀವೇದಿಸುವುದುಂ—

ಕಂ ॥ ಹನುಮಂ ಮಾಯಾ ಸುಗ್ರೀ
ವನನಿಕ್ಕುವೆನೆಂದು ಬಂದು ಭಾವಿಸಿ ಸುಗ್ರೀ ॥
ವನದಾವನೆಂದುಮಱಿಯದೆ
ಮುನಿದಿಱಿಯದೆ ಮಗುೞೆ ಪೋದನೇಳಿದನಾದಂ ॥ ೧೩ ॥

ಅಂತಾತಂ ಪೋಪುದುಮಾ ಸುಗ್ರೀವಂ ನಿಮ್ಮ ದೋರ್ವಲದಗುರ್ವುಮನನ್ಯವಹಿತ ಪರಹಿತ ವ್ಯಸನಮುಮಂ ಕೇಳ್ದು ಸುತಾರಾ ವಿರಹದಿಂ ಚಂಡಕಿರಣ ಕಿರಣಮನಾಸೆಗೆಯ್ದಿರುಳ ಚಕ್ರವಾಕದಂತೆ ನಿಮ್ಮ ಚರಣಮೇ ಶರಣೆಂದು ಬಂದನೆಂಬುದುಮುದಾತ್ತರಾಘವಂ ಲಕ್ಷ್ಮಣನ ಮೊಗಮಂ ನೋಡಿ —

ಕಂ ॥ [1]ಎನ್ಮೊಂದಿಗನೀತನ ಮನ
ದುಮ್ಮಳಮಂ ಕಳೆವುದೆಂದು ಕಾರುಣ್ಯ ಪರಂ ॥
ತಮ್ಮಂಗೆ ನುಡಿದನರ್ಥಿಗ
ಳಮ್ಮನ್ನಿಸುವಟ್ಟಿ ರಾಘವಂಗೆ ನಿಸರ್ಗಂ ॥ ೧೪ ॥

1. ಎಮ್ಮೊಂದಿಗ. ಚ

ಕಂ ॥ ಈ ದೊರೆಯನುಮಂ ಕಾಡಿದ
ನಾ ದೊರೆಯಂ ಹನುಮನಳ್ಕಿ ಕಾದದೆ ನೆವದಿಂ ॥
ಪೋದನವನಧಿಕನೆನ್ನದೆ
ಕಾದಿ ಕೊಲಲ್ ಬಗೆದನೇನುದಾತ್ತನೊ ರಘುಜಂ ॥ ೧೫ ॥

ಎನೆ ರಾಮಚಂದ್ರನನುಗ್ರಹಕ್ಕೆ ಸುಗ್ರೀವಂ ಸಮಾಹಿತ ಚಿತ್ತನಾಗಿ ವಿರಾಧಿ ತನ ಮೊಗಮಂ ನೋಡಿ—

ಮ ॥ ವಿರಹ ವ್ಯಾಕುಲರಂತೆ ದೇವರುಸಿರ್ದೀ ವೃತ್ತಾಂತಮೇನೆಂದು ವಾ ।
ನರ ಚಿಹ್ನಂಗೆ ವಿರಾಧಿತಂ ತಿಳಿಪಿದಂ ಕಾಂತಾರದೊಳ್ ಜಾನಕೀ ॥
ಹರಣಂ ವಂಚನೆಯಿಂದಮಾದತೆಜಿನಂ ಸಂಗ್ರಾಮಮಾದಂದಮಂ ।
ಖರನುಂ ದೂಷಣನುಂ ಜನಾರ್ದನನ ಕೈಯೊಳ್ ಕಾದಿ ಸತ್ತಂದಮಂ ॥೧೬॥

ಕಂ ॥ ಆರುಯ್ದರೆಂದುಮಱಿಯದೆ
ನಾರಾಯಣನಿರ್ದನಱಿದೊಡುಯ್ದನ ಕರುಳಿಂ ॥
ವೀರಶ್ರೀಗೆ ಭುಜಾಸಿಯ
ಧಾರಾ ಗೃಹದಲ್ಲಿ ತೋರಣಂಗಟ್ಟದಿರಂ ॥ ೧೭ ॥

ಎನೆ ಸುಗ್ರೀವನವಸರಂಬಡೆದು ಸಪ್ತ ದಿವಸಕ್ಕೆ ದೇವಿಯರ ಸುದ್ದಿಯಂ ತರ್ಪೆನೆಂದತಿಪ್ರತಿಜ್ಞೆಗೆಯ್ದು ಬಿನ್ನವಿಸಿ ಮೆಚ್ಚಿ ನಿಚ್ಚ ಪಯಣದಿಂ ಬಲನುಮಚ್ಯು ತನುಂ ವಿರಾಧಿತನುಂ ಬೆರಸು ಕಿಷ್ಕಿಂಧಪುರಮನೆಯ್ದಿ ದೂತನನಟ್ಟುವುದುಮಾತಂ ಯಮದೂತನಂತೆ ಬಂದು ಸಾಹಸ ಗತಿಯಂ ಕಂಡು—

ಶಾ ॥ ದೇವರ್ ಕಾವೊಡಮಿಂದು ನಿನ್ನ ಪಗೆಯಂ ಸುಗ್ರೀವ ಕೊಂದೀವೆನೆಂ ।
ದಾ ವೀರಾಗ್ರಣಿ ವಿಗ್ರಹ ವ್ಯಸನದಿಂದೇೞ್ತಂದನಿಂ ಪ್ರಾಣಮಂ ॥
ಕಾವುದ್ಯೋಗಮಿದೊಂದೆ ಮತ್ಪತಿಯ ಪಾದಾಂಭೋಜಮಂ ಬಂದು ಕಾಣ್ ।
ಜೀವಾಕರ್ಷಣ ವಿದ್ಯೆಯಂ ಮೆಱೆಯದನ್ನಂ ರಾಮ ರೌದ್ರೇಷುಗಳ್ ॥ ೧೮ ॥

ಎಂದು ಗಜಱಿ ಗರ್ಜಿಸಿದ ದೂತನ ಮಾತಿಂಗೆ ಮುಳಿಸು ಮುಳಿಸಂ ಮೊಗ ಕ್ಕೆ ತಾರದೆ—

ಕಂ ॥ ಸೆರಗಂ ಬೆರಗಂ ಬಗೆಯದೆ
ಪುರಮಂ ಪೊಱಮಟ್ಟು ಕೃತಕ ಸುಗ್ರೀವಂ ಕೇ ॥
ಸರಿಯಂತೆ ಗರ್ಜಿಸುತ್ತುಂ
ನಿರಂಕುಶಂ ಮುಟ್ಟಿವಂದನಿದಿರೊಡ್ಡಣಮಂ ॥ ೧೯ ॥

ಕಂ ॥ ಆಜಿಗಿದಿರೆತ್ತಿ ಬರೆ ಮಾ
ಯಾ ಜೀವಿಯನಂದು ಕಂಡು ವಾನರಚಿಹ್ನಂ ॥
ಸ್ತ್ರೀಜಂ ಕೋಪಾನಲನು
ತ್ತೇಜಿಸೆ ಕಾಱಿರ್ಚು ನೆಗೆದ ನಗದಂತಿರ್ದಂ ॥ ೨೦ ॥

ಉ ॥ ಆ ಕ್ಷಣದೊಳ್ ಪರಸ್ಪರ ನಿರೀಕ್ಷಣದಿಂ ಮುಳಿಸುಣ್ಮೆ ಪೊಣ್ಮೆ ರ।
ೂಕ್ಷಣರಾತ್ಮಶಕ್ತಿಗೆ ಶರೀರ ಬಲಕ್ಕನುರೂಪಮಪ್ಪುವಂ ॥
ಲಕ್ಷಣಯುಕ್ತಮಪ್ಪ ಗದೆಯಂ ತಳೆದಿರ್ವರುಮಿರ್ವಲಂ ಬಿಗು।
ರ್ತೀಕ್ಷಿಸೆ ಮಿಱಿದರ್ ವಿಕಟ ಶೃಂಗ ಸಮಗ್ರ ಕುಲಾಚಲಂಗಳಂ ॥ ೨೧ ॥

ಅಂತು ಗದಾಯುಧ ಸನ್ನದ್ಧರ್ ಪಂಚವಿಧ ಸ್ಥಾನಕದೊಳಮಷ್ಟವಿಧ ಚಾರಣೆಯೊಳಮತಿಚಟುಲರಾಗಿ--

ಕಂ ॥ ನಡೆವ ನಡೆ ಪೊಯ್ವ ಗದೆಯಂ
ಬಿಡೆ ಬೀಸುವ ಪೊಯ್ಲನೊಡನೆ ಕಟ್ಟುವ ಕಡುಪುಂ ॥
ಕಡುವಿನ್ನಣಮುಂ ತಮಗಳ
ವಡೆ ತಾಗಿದರಿಳೆಯುಮಾಗಸಂ ತಾಗುವವೋಲ್[1] ॥ ೨೨ ॥

ಉರವಣೆಯಿಂ ಬಾಹ್ಯಾಭ್ಯಂ
ತರಂಗಳಂ ವಾಮ ದಕ್ಷಿಣಂಗಳನಱಿದೊ ॥
ರ್ವರನೊರ್ವರ್ ಪೊಯ್ಯೆ ಗದಾ
ಪರಿಹರಣಂ ಪಡೆದುದಿರ್ಬಲಕ್ಕಂ ಭಯಮಂ ॥ ೨೩ ॥

ಭರದಿಂ ಪೊಯ್ವುದುಮೋರೊ
ರ್ವರ ಗದೆಯೊಳ್ ಗದೆ ಪಳಂಚೆ ಕಿಡಿ ಸೂಸೆ ರಣಾ ॥
ಜಿರದೊಳಕಾಂಡದ ಕೆಂಡದ
ಸರಿ ಸುರಿವವೊಲಾದುದವರಪೇನತಿಬಲರೋ ॥ ೨೪ ॥

ಓರನ್ನರ್ ತಮ್ಮೊಳಗಾ
ಕಾರದಿನಿಸಿತಲ್ತು ಸತ್ವದಿಂ ಸಾಹಸದಿಂ ॥
ದೋರನ್ನರ್ ಬಿನ್ನಣದಿಂ
ಬೀರದಿನೋರನ್ನರನ್ನೃತ ಖುತ ಸುಗ್ರೀವರ್ ॥ ೨೫ ॥

---

1. ಯೊಳಾಗಸಂ. ಘ.

ಆ ಸಮಯದೊಳ್ '·ಸಂವರ್ತ ಸಮಯದ ಕೃತಾಂತನಂತೆ ಮಾಮಸಕಂ ಮಸಗಿ—

ಸ್ರ॥ ಬೀಸುತ್ತುಂ ಕಾಲದಂಡ ಪ್ರತಿಮ ಘನಗದಾ ದಂಡಮಂ ಕಣ್ಗಳಿಂದಂ।
ಸೂಸುತ್ತುಂ ಕೆಂಡಮಂ ಮೇಳಿಸೆ ಜಯವಧು ತನ್ನುಚ್ಚ ದೋರ್ದಂಡಮಂ ಸಂ॥
ತ್ರಾಸಂ ಸೇನಾಪ್ವಯಕ್ಕಂ ಸಮನಿಸೆ ತೆಜಪಂ ಪಾರ್ದು ಸುಗ್ರೀವನಂ ಮಾ।
ಯಾ ಸುಗ್ರೀವಂ ಗದಾದಂಡದಿನಡಸಿ ಸಿಡಿಲ್ ಪೊಯ್ವವೋಲ್ ಕಾಯ್ದು
[ಪೊಯ್ವಂ ॥ ೨೬ ॥

ಅಂತು ಬಸವಟಿದು ಬೀಟಿತೆ ಪೊಯ್ಸುದುಂ ಮೂರ್ಛೆವೋದನಂ ಗತಪ್ರಾಣನೆ ಗೆತ್ತು ಮಾಯಾವಿ ಮಗುಟಿತೆ ಪೋಪುದುಂ ಜಾಂಬವಾದಿಗಳ ಮಾಟ್ಪಿ ಶಿಶಿರೋಪಚಾರದಿಂದೆಂತಾನುಂ ಮೂರ್ಛೆಯಿಂದೆಟ್ಚಿತ್ತ ಸುಗ್ರೀವನ ಮೊಗಮನುದಾತ್ತ ರಾಘವಂ ನೋಡಿ—

ಕಂ॥ ತನುವಂ ಭಾವಿಸಿ ನಿನಗಂ
ತನಗಂ ಸಾದೃಶ್ಯನಾದೊಡಕ್ಕುಮುಪಾಯಂ॥
ನಿನಗೆಂದು ಬೆರ್ಚದೆಂ ತೀ
ರ್ಚನೆ ಮೊನೆಯೊಳ್ ನಾಳೆ ನಿನ್ನ ಪಗೆಯುಂ ಬಗೆಯುಂ ॥ ೨೭ ॥

ಎಂದು ನುಡಿದು ಮಱು ದೆವಸಂ ರಣಭೂಮಿಗೆ ವಂದು ಮಾಯಾ ಸುಗ್ರೀವನಂ ಕಂಡು—

ಕಂ॥ ಕಡುಮುಳಿಸಿಂ ಕಟ್ಟಿದಿರೊಳ್।
ನಡೆವೆಡೆಯೊಳ್ ರಾಮನಾತನಂ ಲಕ್ಷ್ಮಣಸಿಂ॥
ಪಿಡಿಯಿಸಿದಂ ಮೊನೆಯೊಳ್ ಮಾ
ರ್ಪಡೆಗಂಡೊಡೆ ಸೆಡೆವ ಗಂಡನೇ ಸುಗ್ರೀವಂ ॥ ೨೮ ॥

ಆ ಸಮಯದೊಳ್—

ಮ॥ ಸ್ರ॥ ಮೊನೆಯೊಳ್ ಮಾಱಾಂತ ಚಾತುರ್ಬಲಮನಳಱತೆ ಬೆಂಕೊಂಡು [1]ಕೈ
[ಕೊಂಡು ಸುಗ್ರೀ।
ವನನಾವಂ ಕಾವೊಡಂ ಕೊಂದಪೆನೆನಗಿದಿರಾರೆಂದು ಮೆಯ್ಸೆರ್ಚಿದುದ್ವೃ॥
ತ್ತನನತ್ತಿತ್ತಲ್ ಮಗುಳ್ಪೋಗದಿರೆನೆ ರಘುಜಂ ಕೇಳ್ದು ಪೊಯ್ಸೆತ್ತ ಪಂಚಾ।
ನನದಂತೆಯ್ತಂದನಾ ಸಾಹಸಗತಿವರೆಗಂ ಗಂಡರೊಳ್ ಗಂಡನಾವಂ॥ ೨೯ ॥

1. ಮಾರ್ಕೊಂಡು ಕ. ಘ. ಚ.

ಅಂತೆಯ್ದುವರ್ಪುದುಂ

ಕಂ ॥ ಆ ರಾಮುನಿದಿರೊಳಾ ವಿ
ದ್ಯಾರೂಪಂ ಪಿಂಗಿ ಪೋಗೆ ಸಾಹಸಗತಿ ತ ॥
ಪ್ತಾರಕ್ತಾಯಸ ಪಿಂಡಂ
ನೀರೊಳಗಟ್ಟಿಂತೆ ತನ್ನ ತೇಜಂಗೆಟ್ಟಂ ॥ ೩೦ ॥

ಪರಿಹರಿಸಿ ಪೋಗೆ ಮಾಯಾ ।
ಸ್ವರೂಪಮುಳವಱಿದನಿಲ್ಲ ಖೇಚರಪತಿ ಭೀ ॥
ಕರ ರೂಪಂ ನಿಜದಿಂದಂ
ಪೆರೆಯಿಕ್ಕಿದ ಕೃಷ್ಣಸರ್ಪನಿರ್ಪಂತಿರ್ದಂ ॥ ೩೧ ॥

ಆಗಳಂಗದನವಂ ಕಂಡು ನಿಜ ಬಲ ಸಹಿತಂ ಸುಗ್ರೀವನಂ ಬಂದು ಕೂಡೆ ಲಕ್ಷ್ಮಣದೇವನೆಲವೊ ಸುಗ್ರೀವನಂ ಶರಣ್ಬೊಕ್ಕು ಜೀವಿಸೆನೆ ಮುಸಿದು ಸಾಹಸಗತಿ ರಘುವೀರನಂ ಮುಟ್ಟಿವಂದು—

ಕಂ ॥ ಎಂತುಪೆಱಗಿಕ್ಕಿ ಪಗೆಯುಂ
ಮುಂತಾದಂತಣ್ಮೆನುತ್ತುಮಿಸೆ ನಗೆ ರಾಮಂ ॥
ದಂತಾಂಶು ನಿಮಿರ್ದುವವನಸು
ವಂ ತೆಗೆಯಲ್ ನಿಮಿರ್ದ ಕಾಲ ಪಾಶಂಗಳವೋಲ್ ॥ ೩೨ ॥

ಅಂತು ನಸುನಕ್ಕು—

ಮ ॥ ತೆಗೆದಂಬಂ ದೊಣೆಯಿಂ ತೊಡರ್ಚಿ ತಿರುವಾಯೊಳ್ ಕರ್ಣಮೂಲಂಬರಂ ।
ತೆಗೆದೇಸಾಡೆ ಬಲಂ ಜಿತಾಹಿತಬಲಂ ತತ್ಸಾಯಕಂ ದೈವಿಕಂ ॥
ತೆಗೆದತ್ತಾತನ ತೋಳೊಳಿರ್ದ ವಿಜಯಶ್ರೀ ಕಾಂತೆಯುಂ ಪ್ರಾಣ ವಾ ।
ಯುಗಳಂ ನೊಯ್ದೆಗೆವಂತು ವಾನರಪತಾಕ ಸ್ವಾಂತ ಚಿಂತಾಜ್ವರಂ ॥ ೩೩ ॥

ಅಂತು ಸಾಹಸಗತಿ ಗತಪ್ರಾಣನಾಗೆ—

ಉ ॥ ನೋಡಿದೊಡೋಡಿಪೋಯ್ತುವನ ನಚ್ಚಿನ ವಿದ್ಯೆ ರಘುಪ್ರವೀರನೇ ।
ಸಾಡಿದೊಡೊಂದೆ ಬಾಣಮುವನಂ ನಡೆ ನೋಡಿ ನೆಲಕ್ಕೆ ಸೋವತಂ ॥
ಮಾಡಿದುದೆಂದು ತೂಗಿ ತಲೆಯಂ ಪೊಗಟ್ಟಂ ತನಗಿಷ್ಟ ಸಿದ್ಧಿಯುಂ ।
ಮಾಡಿದ ದೃಷ್ಟಿಪಾತ ಶರಪಾತ ಚಮತ್ಕೃತಿಯುಂ ಕಪಿಧ್ವಜಂ ॥ ೩೪ ॥

ಆಗಳಖಿಳ ಜಯಜಯ ಧ್ವಾನನೊದವೆ ರಾಘವನವೋಘ ಶರಾಸನಮಂ ಪೂಜಿಸಿ ಕರಸರೋಜಮಂ ಮುಗಿದು—

ಕಂ॥ ದೇವರ್ ಬಿಜಯಂಗೆಯ್ದು ಮ
ದಾವಸಥಕ್ಕೆನಗೆ ರಾಗಮಂ ಕೇಸಡಿ ಕೆಂ॥
ದಾವರೆವೂವಿಂದೀವುದು
ಸೇವಾಪದವಿಯೊಳೆ ನಿಲಿಪುದೆನ್ನನ್ವಯಮಂ ॥ ೩೫ ॥

ಎಂದು ಬಿನ್ನವಿಸಿ ಕಪಿಧ್ವಜಂ ರಘುಕುಲ ಧ್ವಜರಪ್ಪ ರಾಮಲಕ್ಷ್ಮಣರಂ ಮುಂದಿಟ್ಟು ವಂದನ ಮಾಲಾ ಮನೋಹರಮಂ ಕಿಷ್ಕಿಂಧಪುರಮಂ ಪುಗುವ ಸಮಯದೊಳ್

ಶಾ॥ ಆ ಮುಕ್ತಾಫಲ ಕಾಂತಿಯೊಳ್ ಸೆಣಸುವಂಗಚ್ಛಾಯೆಯಿಂ ರಾಜಿಪಂ।
ರಾಮಂ ಲಕ್ಷ್ಮಣನಾ ಹರಿನ್ಮಣಿ ಮಯೂಖ ಶ್ಯಾಮನೆಂದೀಕ್ಷ ಣ॥
ಪ್ರೇಮಂ ಕೈಮಿಗೆ ನೋಳ್ಪ ಕಾಮಿನಿಯರಂ ಸಮ್ಮೋಹನಾಸ್ತ್ರಂಗಳಿಂ।
ಕಾಮಂ ಕರ್ವಿನ ಬಿಲ್ಲೊಳೆಚ್ಚು ಮೆಱೆದಂ ಚಾಪಾಗಮ ಪ್ರೌಢಿಯಂ ॥ ೩೬ ॥

ಅಂತು ಪುರಮಂ ಪೊಕ್ಕರಮನೆಗೆ ಬಿಜಯಂಗೆಯ್ದು ಕರುಮಾಡದ ಮುಂದಣ ಮಣಿಮಂಟಪದೊಳಿಕ್ಕಿದ ಮಣಿಮಯಾಸನಮನಲಂಕರಿಸಿ ರಾಮಲಕ್ಷ್ಮಣರಿರ್ಪುದುಂ ಸುಗ್ರೀವಂ ಮಧುಪರ್ಕ ಪೂರ್ವಕಮಪೂರ್ವ ವಸ್ತು ವಾಹನಂಗಳಂ ನೋಲಗಿಸಿ—

ಚ॥ ಪರಿಭವ ಭಾರಮಂ ಕಳೆದು ಬಾಂಧವ ಪುತ್ರ ಕಲತ್ರ ಮಿತ್ರರೊಳ್।
ನೆರಪಿ ಮದನ್ವಯಾಗತ ಪದ ಸ್ಥಿತಿಯಂ ದಯಗೆಯ್ದೆ ದೇವ ದೇ॥
ವರ ದಯೆಗೆನ್ನ ವಂಶಮನಿತುಂ ಬೆರಸಾಳ್ಪೆಸಗೆಯ್ದು ಬಾಳ್ವೆನಿ।
ನ್ನೆರಡನವೋಘಮಾಂ ನುಡಿದೊಡುನ್ನತ ರಾಮ ಕೃತಘ್ನನಲ್ಲನೇ ॥ ೩೭ ॥

ಎಂದು ರಾಘವನ ಪದಪಯೋಜ ಸೇವಾ ಪರಮ ಲಾಭಮಂ ಪಡೆದು—

ಕಂ॥ ದಿನನಾಥಂಗಲ್ಲದೆ ಪ
ದ್ಮಿನಿಗಳ್ ಮೊಗಮಿಾಯದಂತೆ ನಿನಗಲ್ಲದೆ ಸ॥
ಜ್ಜನವಾಗೆವೆಂದು ರಘುನಂ
ದನ ಕನ್ಯಾವ್ರತದೊಳೆನ್ನ ತನುಜೆಯರಿರ್ದರ್ ॥ ೩೮ ॥

ಎಂದು ಶುಭದಿನ ಮುಹೂರ್ತದೊಳುತ್ಸವಾನಕ ಧ್ವಾನನೊದವೆ—

ಕಂ ॥ ವನಧಿಗೆ ಕುಲಾಚಲಂ ವಾ
ಹಿನಿಗಳನೀವಂತೆ ಮೀನ ನಯನದ ನಿಜ ನಂ ॥
ದನೆಯರನಿತ್ತಂ ರಘುನಂ
ದನಂಗೆ ರಾಜೀವ ಮುಖಿಯರಂ ಸುಗ್ರೀವಂ ॥ ೩೯ ॥

ಅಂತು ಪನ್ನಿರ್ವರ್ ಖೇಚರ ಕನ್ನೆಯರಂ ಮದುವೆನಿಂದು—

ಕಂ ॥ ನಸು ಸೋಂಕಿಂ ಬಾಲೆಯರಂ
ಬಸದಾಗಿಸಿ ನೆನೆದು ಸೀತೆಯಂ ರಾಮಂ ದೂ ॥
ರಿಸಿದಂ ಚಂದ್ರಿಕೆಯಂ ಸೇ
ವಿಸಿದ ಚಕೋರಕ್ಕೆ ಬಾಚ್ಚಿಯೇ ತುಹಿನ ಕಣಂ ॥ ೪೦ ॥

ಚ ॥ ತನು ಲತೆಯುಂ ಮರಾಳ ಗತಿಯುಂ ಪಿಕ ನಿಸ್ವನಮುಂ ವಿಯಚ್ಚರಾಂ ।
ಗನೆಯರ ಲೋಚನೋತ್ಪಲಮುಮಾನನ ಹೇಮ ಸರೋಜಮುಂ ಘನ ॥
ಸ್ತನಯುಗ ಕೋಕಮುಂ ಬಗೆಗೆ ಮಾಡದೆ ಖೇದಮನೇಕೆ ಮಾಡುಗುಂ ।
ಜನಕ ಸುತಾ ವಿಯೋಗ ವಿಧುರಂಗೆ ರಘುಪ್ರವರಂಗೆ ರಾಗಮಂ ॥ ೪೧ ॥

ಕಂ ॥ ಜನಕ ತನೂಜೆಯ ಘನಕಚ
ಘನಕುಚ ಘನಜಘನ ಭಾರದಿಂ ಬಳ್ಕುವ ರಾ ॥
ಮನ ಚಿತ್ತಮಿತರ ವನಿತಾ
ಜನದತ್ತಡಿಯೆತ್ತದಿರವಿದೇನಚ್ಚರಿಯೇ ॥ ೪೨ ॥

ಅನುರಾಗಂ ಖಚರಿಯರಿಂ
ಜನಿಯಿಸದಿರೆ ಜನಕರಾಜ ಸುತೆಯಂ ರಾಮಂ ॥
ನೆನೆದಂ ರಾಗೋತ್ಕಂಠಂ
ನೆನೆವಂತಿರೆ ಚೂತ ಕಲಿಕೆಯಂ ಕಲಕಂಠಂ ॥ ೪೩ ॥

ಅಂಬರ ಚರನುಂ ತಾರಾ
ಬಿಂಬಾಧರ ಮಧುರ ಮಧುವನಾಸ್ವಾದಿಸಿ ಚಿ ॥
ತ್ತಂ ಬೆಂಡು ನೆಗೆಯೆ ರಾಗ ರ
ಸಾಂಬುಧಿಯೊಳ್ ಕೂಡೆ ಮೂಡಿ ಮುಳುಗುತ್ತಿರ್ದಂ ॥ ೪೪ ॥

ಅನುರಕ್ತಂ ನಲ್ಲಳನೆಳ
ಸಿ ನಿರ್ದಯಾಲಿಂಗನೋನ್ಮುಖಂ ಸಮರತ ಸಂ ॥
ಜನಿತ ಸುಖಂ ದಿನಮುಖದ
ಧ್ವನಿಗೆಳಸಿದ ಮಧುಕರಂಗೆ ಕಿಂಕರನಾದಂ ॥ ೪೫ ॥

ಅಂತಿಷ್ಟವಿಷಯ ಸುಖ ಸಂತುಷ್ಟನಾಗಿ—

ಕಂ ॥ ಹಿಮಕಿರಣಂ ಸಂಧ್ಯಾರಾ
ಗಮನುೞಿವಂತಾಗಳಂತೆ ಸುಗ್ರೀವಂ ರಾ ॥
ಗಮನುೞಿದು ರಘುಜನುಪಕಾ
ರಮನಾತ್ಮೀಯ ಪ್ರತಿಜ್ಞೆಯಂ ಸ್ಮರಿಯಿಸಿದಂ ॥ ೪೬ ॥

ಕೃತಮಱಿಯದನೆಂಬೀ ದು
ಶ್ಶ್ರುತಿ ಪರೆಗುಮಸತ್ಯ ದೋಷಮಕ್ಕುಂ ಮುಳಿಗುಂ ॥
ಪ್ರತಿಪನ್ನಿಕೆಗಿಡೆ ದಶರಥ
ಸುತನಾ ವಿಭು ಮುಳಿದವಂಗೆ ಜವನುಂ ಮುಳಿಗುಂ ॥ ೪೭ ॥

ಎಂದು ಮನದೊಳೆ ಮಂತಣಮಿರ್ದು—

ಉ ॥ ಚಂಡಬಲಂ ಬಲಾಚ್ಯುತರ ಸೀತೆಯ ಸುದ್ದಿಯನಟ್ಟಿ ಪುಂ ಪ್ರಭಾ ।
ಮಂಡಲನಲ್ಲಿಗಂಬಿಕೆಯ ಸುದ್ದಿಗೆ ಸಾಧಿತ ವಿಶ್ವವಿದ್ಯರಂ ॥
ತಂಡದಿನಟ್ಟಿ ಗುಪ್ತಚರರಂ ಕೆಲರಂ ತಱಿಸಂದು ತಾನುಮಾ ।
ಖಂಡಲ ದಿಙ್ಮುಖಂ ಕತಿಪಯಾನುಚರಂ ತಳರ್ದಂ ವಿಯಚ್ಚರಂ ॥ ೪೮ ॥

ಅಂತು ಗದಾಯುಧ ಹಲಾಯುಧರಂ ಬೀೞ್ಕೊಂಡು ಮನಃಪವನವೇಗದಿಂ ಪೋಗುತ್ತುಮಿರೆ—

ಕಂ ॥ ಅನುಕೂಲ ಮಾರುತಾಂದೋ
ಲನದಿಂ ಕೈಸನ್ನೆಗೆಯ್ವವೋಲ್ ಗಿರಿಶಿಖರಾ ॥
ವನಿಯೊಳ್ ಮಿಳ್ಳಿಸಿದುದು ಕೇ
ತನ ಪಲ್ಲವಮೊಂದಶೋಕ ಪಲ್ಲವ ಶೋಣಂ ॥ ೪೯ ॥

ನಗ ಸಾನು ತಲಂ ಮನುಜ
ರ್ಗಗೋಚರಂ ಕಟ್ಟಿ ಗುಡಿಯನಿರ್ದಪರಾರಿ ॥
ಲ್ಲಿಗೆ ಪೋಗಿ ನೋೞ್ಪೆನೆಂಬೀ
ಬಗೆಯಿಂ ಸುಗ್ರೀವನೆಯ್ದಿ ವರ್ಪವಸರದೊಳ್ ॥ ೫೦ ॥

ವಲಿಮುಖ ಕೇತನನಂ ಚಕಿ
ತ ಲೋಚನಂ ರತ್ನಜಟಿ ನಿಜಪ್ರಾಣ ಭಯಾ ॥
ಕುಲಚಿತ್ತಂ ಪೌಲಸ್ತ್ಯಂ
ಕೊಲಲಟ್ಟಿದ ತೀಕ್ಷ್ಣಪುರುಷನೆಂದೀಕ್ಷಿಸಿದಂ ॥ ೫೧ ॥

ಆಗಳಾತನಂ ಸುಗ್ರೀವನೆಯ್ದೆ ವಂದು ನಿನಗಿನಿವಿರಿದವಸ್ಥಾಂತರಮೇಕಾದುದೆಂದು ಬೆಸಗೊಂಡೊಡದಂ ಸವಿಸ್ತರಮಱಿಯೆ ಪೇೞೆ ಕೇಳ್ದು—

ಕಂ ॥ ವಾನರ ಚಿಹ್ನಂ ತನ್ನಭಿ
ಮಾನಂ ನಿಂದತ್ತು ಪೂಣ್ಕೆ ಸಂದತ್ತೆನಗೆಂ ॥
ದೇನೊಸೆದನೊ ದಶವದನಂ
ಜಾನಕಿಯಂ ಲಂಕೆಗುಯ್ವುನೆಂವಱಿಪಲೊಡಂ ॥ ೫೨ ॥

ಅಂತು ಸಂತೋಷದಂತನೆಯ್ದೆ—

ಕಂ ॥ ಇಡಿದಿರೆ ಸೀತಾವಿರಹದ
ಕಡುಗಟ್ಟಲೆ ದಾಶರಥಿಯ ಮಾನಸದೊಳದಂ ॥
ಕಿಡಿಸುವ ಬಗೆಯಿಂ ರತ್ನದ
ಸೊಡರಂ ತರ್ಪಂತೆ ರತ್ನಜಟಿಯಂ ತಂದಂ ॥ ೫೩ ॥

ಅಂತು ತಂದು ಕಾಣಿಸುವುದುಂ—

ಕಂ ॥ ನಿಟಲ ತಟ ಘಟಿತ ಕರ ಸಂ
ಪುಟಂ ಹಟನ್ಮಣಿಕಿರೀಟ ಮಂಜರಿಯಿಂದಂ ॥
ಜಟಿಲಿತಮೆನೆ ಪದಪೀಠ
ತಟಂ ನರೇಂದ್ರಂಗೆ ರತ್ನಜಟಿ ನತನಾದಂ ॥ ೫೪ ॥

ಅನಂತರಂ ಜನಾರ್ದನನೀತನಾರ್ಗೆನೆ ಸುಗ್ರೀವನಿಂತೆಂದಂ—

ಕಂ ॥ ಅರ್ಕಜಟಿವೆಸರ ಖಚರ ಕು
ಲಾರ್ಕನ ಸುತನಪ್ಪ ರತ್ನಜಟಿ ರಣಕೇಳೀ ॥
ಕರ್ಕಶನಾತನ್ನಾಂಬಿಕೆಯುಸ
ವರ್ಕ್ರೆತವದುಯ್ದರೆಂದು ಬಿನ್ನಪಿಸಿದಪಂ ॥ ೫೫ ॥

ಎಂಬುದುಮುದಂ ಕೇಳ್ದು—

ಮ ॥ ಬಿದಿ ಕಣ್ಣಿಟ್ಟವನಾವನಾವನಸುವಂ ಕಾಲಂ ಕಬಳ್ಸಲ್ ಕಡಂ ।
ಗಿದನಾವಂ ಯಮಪಾಶದೊಳ್ ತೊಡರ್ದನಾವಂ ದೇವಿಯಂ ಮುಂದುಗಾ॥
ಣದೆ ಕಳ್ದುಯ್ದುವನೆಂದು ರತ್ನಜಟಿಯಂ ರೋಷಗ್ರಹಾವೇಶ ಗ ।
ದ್ಗದ ಕಂಠಂ ಬೆಸಗೊಂಡನುತ್ತರಲಿತಾರಕ್ತೇಕ್ಷಣಂ ಲಕ್ಷ್ಮಣಂ ॥ ೫೬ ॥

ಅಂತು ಬೆಸಗೊಳ್ವುದುಂ ರತ್ನಜಟಿ ಕೈಗಳಂ ಮುಗಿದು—

ಕಂ ॥ ಸ್ವೈರದಿನಾಂ ಪೋಗುತ್ತಿರೆ
ತಾರಾಪಥದೊಳ್ ಪಳಂಚಿದುದು ಕಿವಿಯಂ ಹಾ ॥
ಹಾರವಮುರಿಯೆಣ್ಣೆಯವೋಲ್
ದೂರಿಸೆ ಬಗೆ ಬಗೆಯೊಳೊಗೆಯೆ ಕಾರುಣ್ಯ ರಸಂ ॥ ೫೭ ॥

ಸ್ರ ॥ ಕಾಮಾಂಧಂ ಕಳ್ದುಕೊಂಡುಯ್ದಪನಿದುವೆ ಪದಂ ತೋರ್ಪುದಣ್ಮುಳ್ಳವರ್ [ಸಂ।
ಗ್ರಾಮಾವಷ್ಟಂಭಮಂ ಹಾ ಜನಕ ಜನಕ ಹಾ ಲಕ್ಷ್ಮಣಾ ಲಕ್ಷ್ಮಣಾ ಹಾ ॥
ರಾಮಾ ರಾಮಾಯೆನುತ್ತುಂ ಜನಕಜೆ ಬಸಿಱಂ ಮೋದಿ ಪುಯ್ಯಲ್ಚೆ ಕೇಳ್ದಾ।
ನಾಮುಕ್ಕಾನೆಯ್ದಿದೆಂ ರಾವಣನೊಳಿಱಿವ ತಕ್ಕಿಂದಮುಣ್ಮಣ್ಮೆನುತ್ತುಂ ॥ ೫೮ ॥

ಅಂತು ಮೂದಲಿಸಿ ಮುಟ್ಟಿವರ್ಪುದುಂ ಮದೀಯ ಜನಕನೊಳಾದನುಬಂಧಂ ಕಾರಣಮಾಗೆನ್ನೊಳಿಱಿಯದೆ ವಿದ್ಯಾಚ್ಛೇದನಂಗೆಯ್ದು ರಾವಣಂ ಸೀತೆಯಂ ಲಂಕೆಗುಯ್ದನೆಂದು ಬಿನ್ನವಿಸೆ—

ಕಂ ॥ ರಾವಣನುಯ್ದಂ ಸೀತಾ
ದೇವಿಯನೆನೆ ಕೇಳ್ದು ಮನದೊಳುಮ್ಮಳಿಸಿದನಿ ॥
ಲ್ಲಾ ವಾರ್ತೆವೇಟ್ದವಂಗೆ ಮ
ಹೀವಲ್ಲಭನಿತ್ತನಾತನಭಿವಾಂಛಿತಮಂ ॥ ೫೯ ॥

ಮೆಱೆದಂ ಸೀತೆಯ ಸುದ್ದಿಯ
ನಱಿಪಿದ ಖೇಚರನನನ್ವಯಾಗತ ಪದದೊಳ್ ॥
ನಿಱಿಸಿ ಭುಜಬಲದ ಮೆಚ್ಚಿನ
ನೆಱನಂ ರಾಘವನ ವೈವಮೆಗಿದು ವಿಸ್ಮಯಮೇ ॥ ೬೦ ॥

ಅಂತು ರತ್ನಜಟಿಯ ಸಪತ್ನರಂ ಪೊಱಮಡಿಸಿ ಕಳೆದು ದೇವೋಪನೀತಪುರಶ್ಕರಸುಮಾಡಿ ಕಿಷ್ಕಿಂಧಪುರಕ್ಕೆ ಬಂದು—

ಮ ॥ ನಳ ನೀಲಾಂಗದ ಜಾಂಬವತ್ಪ್ರಮುಖ ಸೇನಾನಾಥರುಂ ಮಂತ್ರಿ ಮುಂ।
ಡಲಮುಂ ಬಂಧುಜನಂಗಳುಂ ಬೆರಸು ಸುಗ್ರೀವಂ ನಿಜಾಸ್ಥಾನಮಂ ॥
ಡಲದೊಳ್ ಕಿಂಕರ ಭಾವದಿಂದಿರೆ ಮೃಗೇಂದ್ರೋತ್ತುಂಗ ಪೀಠಂಗಳೊಳ್ ।
ಬಲನಾರಾಯಣರಿರ್ದರಪ್ರತಿಹತರ್ ಚಂದ್ರಾರ್ಕರಿರ್ಪಂದದಿಂ ॥ ೬೧ ॥

ಆ ಸಮಯದೊಳ್ ಸೌಮಿತ್ರಿ ಸುಗ್ರೀವನ ಮೊಗಮಂ ನೋಡಿ—

ಚ ॥ ಅರಸಿಯ ಸುದ್ದಿಗೇಳ್ದುಸಿರದಿರ್ಪುದು ಪಾಟಿಯೆ ಪಾರದೆನ್ನ ತೋ।
ಳ್ಕಿರವಲಮಂ ವಿರೋಧಿಬಲಮುಂ ತವೆ ಕೊಲ್ವೆಡೆಗಾನೆ ಸಾಲ್ವೆನಿಂ॥
ಶರನಿಧಿ ತಾಯ್ಮೊಳಲ್ವರೆಗಮಾನಿಸೆ ಬತ್ತದೆ ಲಂಕೆಗೆತ್ತದಿಂ।
ತಿರೆ ಸೆರಗೆಂದನೇನಧಟನೋ ರಣಲಂಪಟನೋ ಜನಾರ್ದನಂ ॥ ೬೨ ॥

ಉ ॥ ಲಂಕೆಯನೊಕ್ಕಲಿಕ್ಕುವವೊಲಟ್ಟುಜಿ ಲಂಕೆಯನೊಕ್ಕಲಿಕ್ಕಿ ಕೇ।
ಟ್ಟಿಂ ಕಡುಪಿಂ ತ್ರಿಕೂಟಗಿರಿಯಂ ದಶಕಂಠನ ಕಂಠನಾಳಮಂ॥
ಭೋಂಕೆನಲೆಚ್ಚು ಪಾಯ್ವ ಬಿಸುನೆತ್ತರ ಸೇಕದಿನೆನ್ನ ತೋಳ ತೀ।
ನಂ ಕಳೆವೆಂ ವಿಳಂಬಿಸಿದೊಡೆನ್ನ ನೆಗಟ್ತೆಗೆ ಬನ್ನಮಾಗದೇ ॥ ೬೩ ॥

ಎಂದು ತಱಿಸಂದು ಲಕ್ಷ್ಮಣಂ ನುಡಿಯೆ—

ಕಂ ॥ ಕಿಸುಸಂಜೆವೊರೆದ ಚಂದ್ರಿಕೆ
ಪಸರಿಸಿದಪುದೆನಿಸಿ ರಾಮಚಂದ್ರಂ ಸಭೆಯೊಳ್ ॥
ಪಸರಿಸಿ ನಯನಪ್ರಭೆ ರಂ
ಜಿಸೆ ಜಾಂಬೂನದನ ವದನಮಂ ವೀಕ್ಷಿಸಿದಂ ॥ ೬೪ ॥

ಅಂತು ನೋಡಿ—

ಕಂ ॥ ಜೈನಾಗಮ ಕೋವಿದನಂ ಜಾಂ
ಬೂನದನಂ ಮಧುರ ನಿನದನಂ ಬೆಸಗೊಂಡಂ ॥
ದಾನವನ ವಂಶಮಂ ಲಂ
ಕಾನಗರದ ತೆಱನನತ್ಯುದಾತ್ತಂ ರಘುಜಂ ॥ ೬೫ ॥

ಅಂತು ಬೆಸಗೊಳ್ವುದುಂ ಮುಕುಳಿತಾಂಜಲಿ ಪುಟನಾಗಿ—

ಕಂ ॥ ವಿಪುಲಮತಿ ಸಕಲ ವಿದ್ಯಾ
ನಿಪುಣಂ ಗಣಧರ ನಿರೂಪಿತ ಕ್ರಮದಿಂ ದೈ ॥
ತ್ಯಪತಿ ಪ್ರಪಂಚಮಂ ಶ್ರವ
ಣ ಪಥಾತಿಥಿಮಾಡಲಾಗಳುದ್ಯತನಾದಂ ॥ ೬೬ ॥

ಶ್ರವಣಕ್ಕಮರ್ದಿನ ಸರಿ ಸುರಿ
ವವೊಲಾಗೆ ವಚೋವಿಲಾಸವಾ ಸಭೆಗತ್ಯು ॥
ತ್ಸವಮಂ ಕುಡೆ ನೇರ್ಪಡೆ ಬಿ
ನ್ನವಿಸಿದನಾವರಿಸೆ ದಂತರುಚಿ ತತ್ಸಭೆಯಂ ॥ ೬೭ ॥

ಅದೆಂತೆಂದೊಡೆ ದೇವ ಜಗತ್ತ್ರಿತಯನಾಥನಪ್ಪ ಪುರುಪರಮೇಶ್ವರನ ಧರ್ಮ ತೀರ್ಥ ಪ್ರವರ್ತನಾನಂತರಂ—

ಕಂ ॥ ಪಲಕಾಲಂ ಪೋಪುದುಮಾ
ಕುಲದೊಳ್ ಕೇಯೂರದಂತೆ ರಂಜಿಸೆ ದೋರ್ನ್ನುಂ ॥
ಡಲದೊಳ್ ತಳೆದಂ ಭೂಮಂ
ಡಲಮಂ ತ್ರಿದಶಂಜಯಂ ಜಯಶ್ರೀ ರಮಣಂ ॥ ೬೮ ॥

ಕಡುನೀಱ್ ಕಳಾವಿಭವಂ
ಬಡೆದಾ ಭೂಭುಜನೊಳಗ್ರ ಮಹಿಷೀ ಪದಮಂ ॥
ಪಡೆದು ಗುಣಾಬ್ಧಿಗೆ ಪೆರ್ಚಿಂ
ಪಡೆದಿಳೆಯೊಳ್ ಚಂದ್ರಲೇಖೆವೆಸರಂ ಪಡೆದಳ್ ॥ ೬೯ ॥

ಜಿತಶತ್ರು ವಿಜಯಸಾಗರ
ಸುತರ್ಕಳಂ ಚಂದ್ರಲೇಖೆ ಚಂದ್ರಾದಿತ್ಯ ॥
ಪ್ರತಿಮರನೈಂದ್ರಿಯವೋಲ
ಪ್ರತಿಮ ಪ್ರಭರಂ ಪ್ರಸಿದ್ಧರಂ ವಧು ಪಡೆದಳ್ ॥ ೭೦ ॥

ಆ ಸುತರ್ಗನುಕ್ರಮದಿಂ ಪೌದನಪುರಪರೇಶ್ವರನಪ್ಪ—

ಕಂ ॥ ಭುಜಸಖನಾ ನಂದ ಮಹೀ
ಭುಜಂಗಮಂಭೋಜಮಾಲೆಗಂ ಪುಟ್ಟಿದವರ್ ॥
ವಿಜಯೆ ಸುಮಂಗಳೆಯೆಂಬರ್
ವಿಜಿತಾಮರ ಕನ್ಯೆಯರ್ಕಳರಸಿಯರಾದರ್ ॥ ೭೧ ॥

ಆ ತ್ರಿದಶಂಜಯ ಮಹೀಭುಜಂ ಪಲಕಾಲಮರಸುಗೆಯ್ದು ವಿಷಯ ವೈರಾಗ್ಯ ಪರನಾಗಿ—

ಮ ॥ ನಿಜಪುತ್ರಂ ಜಿತಶತ್ರುಗಪ್ರತಿಮಮಂ ಸಾಮ್ರಾಜ್ಯಮಂ ಕೊಟ್ಟು ಭೂ ।
ಭುಜ ರತ್ನಂ ತ್ರಿದಶಂಜಯಂ ತಳೆದಿಳಾಪೂಜ್ಯಂ ತಪೋರಾಜ್ಯಮಂ ॥
ನಿಜಕರ್ಮಾರಿಗಳಂ ಕುಬೇರಗಿರಿಯೊಳ್ ಬೆಂಕೊಂಡು ಮುಕ್ತ್ಯಂಗನಾ ।
ಭುಜ ಪಾಶಕ್ಕೊಳಗಾಗಿ ಪೀರ್ದನೊಲವಿಂ ತದ್ವಕ್ತ್ರ ಪೀಯೂಷಮಂ ॥ ೭೨ ॥

ಶಾ ॥ ಮತ್ತಿತ್ತಲ್ ಜಿತಶತ್ರುವೆಂಬ ಪೆಸರಾಯ್ತನ್ವರ್ಥಮೆಂಬನ್ನಮು ।
ದ್ವೃತ್ತಾರಾತಿಗಳಂ ಭಯಂಗೊಳಿಸಿ ಕಪ್ಪಂಗೊಂಡು ಕೈಯಾಂತವ ॥
ಗೆತ್ತಂ ಬೇಟ್ಪುದನಿತ್ತು ಮಾಣ್ಪನೆ ಭುಜೋತ್ಖಾತಾಸಿ ಧಾರಾಂಬುವಿಂ ।
ದಿತ್ತಂ ಶ್ರೀವಧುಗಂ ಜಯಪ್ರಮದೆಗಂ ವಾಮಾನುಷೀ ಜನ್ಮಮಂ ॥ ೭೩ ॥

ಕಂ ॥ ವಿಜಿಗೀಷುವೆನಿಸಿದಾ ಭೂ
ಭುಜ ವಲ್ಲಭೆ ಮೇರುಮೇಖಲಾ ಲಕ್ಷ್ಮಿ ಮರು ॥
ತ್ಕುಜಮಂ ಪಡೆದುದೊ ಪೇೞ್ವೆನೆ
ವಿಜಯಾಂಬಿಕೆ ಪಡೆದಳಜಿತ ಭಟ್ಟಾರಕರಂ ॥ ೭೪ ॥

ಆ ವನಿತಾನುಜೆ ರೂಪ ಕ
ಲಾ ವಿಭವ ಖ್ಯಾತೆ ವಿಜಯಸಾಗರನ ಮಹಾ ॥
ದೇವಿ ಸುಮಂಗಲೆ ಪೆತ್ತಳ್
ಳಾವಲ್ಲಭನಪ್ಪ ಸಗರ ಚಕ್ರೇಶ್ವರನಂ ॥ ೭೫ ॥

ಜಿನಪತಿಯನೊರ್ವಳೊರ್ವಳ್
ಜನಪತಿಯಂ ಪಡೆದಳೆಂದೊಡಾರ್ ದೊರೆ ವಿಜಯಾಂ ॥
ಗನೆಗೆ ಸುಮಂಗಲೆಗೆ ವೃಥಾ
ಸ್ತನಭರಮಂ ಪೊತ್ತು ಕುಸಿವ ರಾಜಾಂಗನೆಯರ್ ॥ ೭೬ ॥

ಚತುರುದಧಿ ಮೇಖಲಾಲಂ
ಕೃತ ವಸುಧೆಯನಾಳ್ದು ಪಡೆದು ಸುತರಿನ್ನರನಾ ॥
ಜಿತಶತ್ರು ವಿಜಯಸಾಗರ
ರತರ್ಕ್ಯ ಭುಜವೀರ್ಯರರಸುಗೆಯ್ಯುತ್ತಿರ್ದರ್ ॥ ೭೭ ॥

ಆ ಕಾಲದೊಳಜಿತನಾಥ ತೀರ್ಥಾವತಾರಮುಖಿಲ ಪುಣ್ಯ ದಶಾವತಾರಮಾದು ದಂದು ವಿಜಯಾರ್ಧದ ರಥನೂಪುರಚಕ್ರವಾಳಪುರದ ಪೂರ್ಣಘನ ವಿಯಚ್ಚರಂಗೆ ತೋಯದವಾಹನನೆಂಬ ತನೂಜನಾದನತ್ತಲುತ್ತರ ಶ್ರೇಣಿಯೊಳಂಬರತಿಲಕಮೆಂಬ ಪುರದ ಸುಲೋಚನಂಗೆ ಸಹಸ್ರಲೋಚನನಿಂ ಕಿಱಿಯಳುತ್ಪಲನೇತ್ರೆಯೆಂಬ ತನುಜೆ ಯಾದಳಾಕೆಯಂ ಪೂರ್ಣಘನಂ ತೋಯದವಾಹನಂಗೆ ಬೇಡಿಯಟ್ಟಿದೊಡೆ ಚಕ್ರವರ್ತಿಯಪ್ಪ ಸಗರಂಗಗ್ರಮಹಿಷಿಯಕ್ಕುಮೆಂದು ನೈಮಿತ್ತಿಕಾದೇಶದಿಂ ಕುಡ ಲೊಲ್ಲದಿರೆ ಕಡುಮುಳಿದು ಪೂರ್ಣಘನಂ ಲಯಸಮಯದ ಘನಾಘನದಂತೆತ್ತಿಬಂ ದಂಬರತಿಲಕಮಂ ಮುತ್ತೆ ಪುತ್ರನಂ ಪುತ್ರಿಯುಮಂ ವಿದ್ಯೆಯಿಂ ಪತತ್ರಿಮಾಡಿ ಪೊಱ ಮಡಿಸಿ ಪೊಱಮಟ್ಟು ಕಾದಿ ಸುಲೋಚನನಮರೀ ವಿಲೋಚನಾತಿಥಿಯಪ್ಪುದುಂ ಪೂರ್ಣಘನನಂಬರತಿಳಕಮಂ ಪೊಕ್ಕು ಕನ್ನೆಯನಱಸಿ ಕಾಣದೆ ತನ್ನ ಪೊೞಲ್ಗೆ ಪೋದನಿತ್ತಲಾ ಸಹಸ್ರಲೋಚನನುಮುತ್ಪಲನೇತ್ರೆಯುಂ ಶರಭಾಟವಿಯಂ ಪೊಕ್ಕು ವೇತ್ರಾವತೀ ತೀರದೊಳಿರ್ದರನ್ನೆಗಂ ಸಗರನಂ ದುಷ್ಟಾಶ್ವಮೆೞೆದು ತಂದಾ ಪೞುವಿ ನೊಳಿೞಿಪಿಪೋಗೆ ತೊೞಲುತ್ತುಂ ಬಂದು—

ಮ ॥ ಮೃಗರಾಜಂಗಗಿದೋಡುವಾನೆಗಡುಪಂ ಮತ್ತದ್ವಿಪಂಗೆತ್ತು ಶಾ ।
ರ್ದೂಲಗಿಲೊಳ್ ಪೋರ್ವ ಗಜಂಗಳಂ ಶರಭಮುಂ ಬೆಂಕೊಳ್ವ ಭೇರುಂಡವ ॥
ಕ್ಕಿಗಳಂ ನೋಡಿದ ನೋಟದಾಸಱುಗಿವನ್ನಂ ಕಂಡನಾಸನ್ನದೊಳ್ ।
ಸಗರಂ ಕನ್ನೆಯುಮಂ ತದಗ್ರಜನುಮಂ ವೇತ್ರಾವತೀ ತೀರದೊಳ್ ॥ ೭೮ ॥

ಚಂ ॥ ನವ ಶಶಿಲೇಖೆಯುಂ ನವ ದಿನೇಶನುಮಿಲ್ಲಿಗೆ ರಾಹುಗಳ್ಕಿ ಬಂ ।
ದುವೊ ದಿಟವೆಂದು ಸಂದೆಗದಿನಿರ್ವರುಮಂ ನಡೆನೋಟ್ಪ ಭೂಭುಜ ॥
ಪ್ರವರನ ಚಿತ್ತಮಂ ಸೆಱೆಗೆ ತಂದುವು ಸೋಲಿಪ ತಮ್ಮ ಲೀಲೆಯಿಂ ।
ಕುವಲಯ ಮಾಲೆಯಂ ನಗುವ ಬಾಲೆಯ ಲೋಲ ವಿಲೋಚನಾಂಶುಗಳ್ ॥

ಅಲೆಯದೆಲರ್ ದಿನೇಶ ಕಿರಣಂ ಪುಗದೆಂಬಿನೆಗಂ ಕಱಂಗಿ ಕ ।
ತ್ತಲಿಸುವ ಕಾನನಾಂತರದೊಳಂಗಜ ಜಂಗಮ ದೀಪಮಾಲೆವೋಲ್ ॥
ಜಲಜಲಿಸುತ್ತುಮಿರ್ಪ ಖಚರೇಶ್ವರ ಕನ್ಯೆಯನಾಗಳೆಯ್ದಿದಂ ।
ತೊಲಗದೆ ದಿಟ್ಟಿ ನಟ್ಟುನಿಲೆ ಕಣ್ಬೊಳಪಿಂದಮುರ್ದಪ್ಪಿಕೊಳ್ವವೋಲ್ ॥ ೮೦ ॥

ಕಿಡಿಸಿದನೇಕೆ ತಾವರೆಯನೀ ಮೊಗಮಂ ಪಡೆದೇಕೆ ನೆಯ್ದಿಲಂ ।
ಕಿಡಿಸಿದನೀ ತೆಱಂಬೊಳೆವ ಕಣ್ಮಲರಂ ಪಡೆದೇಕೆ ತುಂಬಿಯಂ ॥
ಕಿಡಿಸಿದನೀ ವಿನೀಲ ಕುಟಿಲಾಲಕಮಂ ಪಡೆದೇಕೆ ಪದ್ಮಜಂ ।
ಕಿಡಿಸಿದನೀಕೆಯಂ ಪಡೆದು ಜಂಗಮ ಕಲ್ಪಲತಾ ವಿಲಾಸಮಂ ॥ ೮೧ ॥

ಎಂದು ನೀಡುಂ ಭಾವಿಸಿ ನೋಡುತ್ತುಮಿರೆ---

ಕಂ ॥ ಎಳಲತೆಯನುಱದು ತಾವರೆ
ಗೆಳಸುವ ಮರಿದುಂಬಿಯಂದದಿಂದೆಱಗಿದುದಾ ॥
ಚಳನಯನೆಯ ತನುಲತೆಯಿಂ
ತಳರ್ದರಸನ ಕಣ್ ಕುಮಾರಮುಖ ಸರಸಿಜದೊಳ್ ॥ ೮೨ ॥

ಅಂತು ನೋಡಿ—

ಉ ॥ ಬಾಲೆ ಶಿರೀಷ ಮಾಲೆಯವೊಲೀಕೆ ಕರಂ ಸುಕುಮಾರೆ ನೀಂ ಕರಂ ।
ಬಾಲನೆ ಕಾನನಂ ಮನುಜ ಖೇಚರ ಗೋಚರಮಲ್ತು ಋಕ್ಷ ಶಾ ॥
ರ್ದೂಲ ಮದೇಭ ಸಿಂಹ ಶರಭಾಕುಲಮಿಲ್ಲಿಗೆವರ್ಪ ದುಷ್ಕೃತೋ ।
ನ್ಮೀಲನಮಾವಕಾರಣದಿನಾದುದದಂ ತಿಳಿಪೆಂದನಾ ನೃಪಂ ॥ ೮೩ ॥

ಅಂತು ಬೆಸಗೊಳ್ವುದುಂ ಸಹಸ್ರಲೋಚನಂ ನಿಜವೃತ್ತಾಂತಮಂ ತಿಳಿಪಿ—

ಶಾ ॥ ಈ ನಿನ್ನಾಕೃತಿ ನಿನ್ನ ದುಂದುಭಿ ಗಭೀರ ಧ್ವಾನವಿಾ ನಿನ್ನ ನೇ ।
ತ್ರಾನಂದೋದಯ ಭದ್ರಲಕ್ಷಣ ಗಣಂ ಪೇೞ್ದಿಪ್ಪುವೀತಂ ಧರಿ ॥
ತ್ರೀನಾಥಂ ಪೆಱನಲ್ಲನೆಂಬಿನಿತನೀ ಭೀಮಾಟವೀ ದುರ್ಗಮ ।
ಸ್ಥಾನಂಬೊಕ್ಕು ತೊೞಲ್ವುದಂ ಬೆಸಸಿದಂ ಲೋಕೈಕ ರಕ್ಷಾಮಣೀ ॥ ೮೪ ॥

ಎಂಬುದುಮಾತನಯೋಧ್ಯಾಪತಿಯಂ ಸಗರನೆಂಬೆನೆಂದು ತನ್ನ ಬಂದ ತೆಱನ ನಱಿಯೆ ತಿಳಿಪೆ ಸಹಸ್ರಲೋಚನಂ ವಿಸ್ಮಯ ಸ್ತಿಮಿತ ಲೋಚನನಾಗಿ—

ಕಂ ॥ ಪಗೆ ತೀರ್ವುದು ಬಗೆ ತೀರ್ವುದು
ಸಗರನನಾಶ್ರಯಿ[1]ಸಿಮೆಂದು ಪಿತೃ ಬೆಸಸಿದನ ॥
ಚ್ಚಿಗಮಾಯ್ತು ನಿಮಗಮೆಂದು
ಬ್ಬೆಗಮುಬ್ಬರಮಾಗೆ ಖಚರತನಯಂ ನುಡಿದಂ ॥ ೮೫ ॥

ಆ ನುಡಿಯನವಧಾರಿಸಿ---

ಶಾ ॥ ಖೇದಂ ಮಾಣ್ಗೆ ಶುಭೋದಯಂ ಸಮನಿಕುಂ ಸಂಸಾರಿಗಳ್ಗಿಂತಿದೇ ।
ನಾದಂ ಚೋದ್ಯಮೆ ನಚ್ಚಿ ನಿಮ್ಮ ಜನಕಂ ಪೇೞ್ದಿಂತುಟಂ ಮಾೞ್ಪಿನಾ ॥
ಹ್ಲಾದಂಬೆತ್ತಿರಿಮೆಂದು ಸಂವರಿಸಿ ಮುನ್ನಂ ತನ್ನನೊಟ್ಟೈಸಿ ಬಂ ।
ದಾ ದುಷ್ಟಾಶ್ವದ ಪಜ್ಜೆಗೊಂಡು ನಡೆದಂ ಪಿಂತಿಕ್ಕಿ ಕಾಂತಾರಮಂ ॥ ೮೬ ॥

ಅಂತು ಬರುತಿರ್ಪಿನಂ—

ಕಂ ॥ ಕರೆವಂತಾದುದು ಹಸ್ತ್ಯ
ಶ್ವ ರಥ ಪದಾತಿಗಳ ಕಳಕಳಂ ಧರೆ ನಿಂದಾ ॥
ಧರಣೀಶನಿರ್ದ ದೆಸೆಯಂ
ನಿರೀಕ್ಷಿಪಂತಾದುದೊಗೆದ ಧೂಳೀಜಾಲಂ ॥ ೮೭ ॥

ಅಂತು ನಿಜ ಚತುರ್ಬಲಂ ಬಂದು ಕೂಡಲೊಡಂ ವಿಜಯವಾರಣ ಮಣಿ [2]ಶಾರಿಕೆಯೊಳ್ ಸಹಸ್ರಲೋಚನನುಮುತ್ಪಲನೇತ್ರೆಯುಮುಭಯ ಪಾರ್ಶ್ವಮನಳಂ ಕರಿಸಿರೆ—

ಚ ॥ ಪುರ ವನಿತಾಜನಂ ಕುಡುವ ಪೂವಿನ ಮಾಲೆಯುಮಂ ಪುರಾಂಗನಾ ।
ತರಳ ಕಟಾಕ್ಷ ಮಾಲೆಯುಮನಾಂತು ದುಕೂಲ ಪಟೀ ಪತಾಕೆಯಿಂ ॥
ಮರಕತ ರತ್ನತೋರಣದಿನೊಪ್ಪುವುದಂ ಪುಗುತಂದನುತ್ಸವಾ ।
ಕರಮನಯೋಧ್ಯೆಯಂ ದಿವಿಜ ನಾಯಕನಂತೆ ಧರಾಧಿನಾಯಕಂ ॥ ೮೮ ॥

1. ಸಲೆಂದು. ಚ. 2. ಸಾರಣಿ. ಚ.

ಅಂತಾಪುರವಮಂ ಪೊಕ್ಕುತ್ಪಲನೇತ್ರೆಯುಂ ಮದುವೆನಿಂದು—

ಕಂ ॥ ನಿಜವಕ್ಷದೊಳಾ ವಧುವಂ
ಭುಜದೊಳ್ ಭೂವಧುವನಿರಿಸಿ ಷಟ್ಖಂಡ ಮಹೀ ॥
ಭುಜ ಪೂಜ್ಯನಮಲ ಕೀರ್ತಿ
ಧ್ವಜಮಂ ದಿಗ್ದಂತಿ ದಂತದೊಳ್ ತೆತ್ತಿಸಿದಂ ॥ ೮೯ ॥

ಪರಚಕ್ರ ಕಾಲಚಕ್ರಂ
ನಿರಸ್ತ ದಿನಕರ ಸಹಸ್ರಕರ ಚಕ್ರಂ ಭಾ ॥
ಸುರ ಚಕ್ರರತ್ನಮೊಗೆದುದು
ಧರಣೀವಲ್ಲಭನ ಶಸ್ತ್ರಶಾಲೋದರದೊಳ್ ॥ ೯೦ ॥

ಬಲವಾಱುಂ ನವನಿಧಿಯುಂ
ಪಲವುಂ ಚಿಹ್ನಂಗಳುಂ ಚತುರ್ದಶ ರತ್ನಾ ॥
ವಲಿಯುಂ ಜನಿಯಿಸೆ ಸಗರಂ
ನೆಲನಂ ಷಟ್ಖಂಡ ಭರತಮಂ ಸಾಧಿಸಿದಂ ॥ ೯೧ ॥

ಅಂತು ಸಿದ್ಧದಿಗ್ವಿಜಯಂ ವಿದ್ಯಾಧರಲೋಕಮಂ ತನಗೆ ಕುಡೆ ಸಹಸ್ರ ಲೋಚನಂ ನಿಜ ಜನಕನಂ ಕೊಂದವನಂ ಕೊಂದಲ್ಲದೆ ಮಾಣೆನೆಂದಸಂಖ್ಯಾತ ಬಲಸಮೇತಂ ಬಂದು ರಥನೂಪುರಚಕ್ರವಾಳಪುರಮಂ ಮೂವಳಸಾಗಿ ಮುತ್ತೆ ಸಹಸ್ರಲೋಚನಂ ಸಮರಸಾಧ್ಯನಲ್ಲನೆಂದು ತಱಿಸಂದು ಪೂರ್ಣಘನಂ ನಿಜ ತನೂಜನಪ್ಪ ತೋಯದವಾಹನನಂ ವಿದ್ಯೆಯಿಂದೆ ಹಂಸನಂ ಮಾಡಿ ಕಳಿಪಿ ಮಹಾ ಯುದ್ಧಂಗೆಯ್ದು ಕಱಿಯೆ ಸಹಸ್ರಲೋಚನಂ ತೋಯದವಾಹನನ ಬಱಿಯುಂ ಗಳಿವಱಿಯ ಪಾವಿನಂತೆ ತಗುಳುತ್ತುಂ ಬಂದು—

ಕಂ ॥ ಅಟ್ಟುವನ ಮುಳಿಸುಮೋಡುವ
ನಿಟ್ಟೆಳಮೆನಿಸಿರ್ದ ಭಯಮುಮೊರ್ವೊದಲೊಳ್ ಪಿಂ ॥
ಮೆಟ್ಟಿದುವು ಬಗೆಯೊಳಚ್ಚರಿ
ಪುಟ್ಟುವಿನಂ ಸಮವಸರಣಮಂ ಮುಟ್ಟಲೊಡಂ ॥ ೯೨ ॥

ಅಂತಪಗತ ಕಲುಷರಿರ್ವರುಂ ಭಗವದಜಿತಭಟ್ಟಾರಕರ ಸಮವಸರಣ ಭೂಮಿಯಂ ಪೊಕ್ಕು ವಸ್ತುಸ್ತವ ರೂಪಸ್ತವ ಗುಣಸ್ತವಾನಂತರಂ ಮಾನವ ಸಭಾಸದ ನಾಗಿರ್ದ ಸಗರಚಕ್ರವರ್ತಿಯ ಸಮೀಪವರ್ತಿಗಳಾಗೆ ಗಣಧರ ಮುಖಕಮಲ ದತ್ತ ಲೋಚನಂ ಸಹಸ್ರಲೋಚನಂ—

ಕಂ ॥ ಶ್ರೀಯೋನಿಧಿ ಮತ್ಪಿತೃಗಂ
ತೋಯದವಾಹನನ ಪಿತೃಗವಿಾ ಮುಳಿಸೀ ಜ ॥
ನ್ಮಾಯತ್ತಮೊ ಮೇಣ್ ಪೂರ್ವಭ
ವಾಯತ್ತಮೊ ನೆಜೆಯೆ ಬೆಸಸಿಮೆನಗಾ ತೆಱನಂ ॥ ೯೩ ॥

ಎನೆ ಗಣಧರಾಚಾರ್ಯರಿಂತೆಂದು ಬೆಸಸಿದರೀ ಭರತಾರ್ಯಾಖಂಡದ ಷಡರ್ತುಕ ಮೆಂಬ ಪುರದ ಪರದಂ ಭಾವನನೆಂಬನಾತಂ ಹರಿದಾಸನೆಂಬ ತನ್ನ ಮಗಂಗೆ ನಾಲ್ಕುಕೋಟಿ ಕಸವರಮಂ ಕೊಟ್ಟು ಪರದೇಶಕ್ಕೆ ಪರದುವೋಪುದುಂ ಹರಿದಾಸ ನಾಧನಮಂ ಕಿಡಿಸಿ ನಿಜಭವನದಿಂ ರಾಜಭವನಕ್ಕೆ ಕನ್ನಮಂ ಸಮೆದು ತದುಪಾರ್ಜ ನಮೆ ಜೀವಿತಮಾಗಿರ್ದನನ್ನೆಗಂ ಕೆಲವುಕಾಲದಿನಾತನ ತಂದೆಯಪ್ಪ ಭಾವನ ನನೂನ ಧನಮಂ ಪಡೆದು ರಾತ್ರಿಸಮಯದೊಳ್ ಮನೆಗೆ ಬಂದು ಮಗನ ವಾರ್ತೆ ಯಂ ಕೇಳ್ದು ಮಗುಟ್ಚಿ ತರಲೆಂದು ಕನ್ನಮಂ ಪುಗುವುದುಮಾ ಸಮಯದೊಳ್ ಹರಿದಾಸಂ ತನ್ನಂ ಕೊಲಲರಸನಟ್ಟಿದ ತೀಕ್ಷ್ಣಪುರುಷಂ ಬಂದನೆಂದು ಕಯ್ದು ಗೆಯ್ದು ತಮ್ಮೊಳಿಱಿದು ಸತ್ತು ಪರಸ್ಪರ ವಿರೋಧಿಗಳಪ್ಪ ತಿರ್ಯಗ್ಜಾತಿಗಳಾಗಿ ತಮ್ಮೊ ಳೋರೊರ್ವರಂ ಕೊಂದು ತಿಂದು ದುಃಖಪರಂಪರೆಯನೆಯ್ದಿ ಪೆಱತೊಂದು ಜನ್ಮ ದೊಳ್ ಪೂರ್ವವಿದೇಹದ ಪುಂಡರೀಕಿಣೀಪುರದೊಳುತ್ತರನುಮನುತ್ತರನುಮೆಂಬ ಸಹೋದರರಾಗಿ ತಪಂಗೆಯ್ದು ಶತಾರಕಲ್ಪದೊಳ್ ಪುಟ್ಟಿ ಬಂದೀಗಳಾಭಾವನನುಂ ಪೂರ್ಣಘನನಾದಂ ಹರಿದಾಸನುಂ ಸುಲೋಚನನಾದನಂದಿನ ವಿರೋಧಂ ಕಾರಣ ಮಾಗೆ ಸುಲೋಚನಂ ಪೂರ್ಣಘನನ ಕೈಯೊಳ್ ಸತ್ತನೆಂದಿಂತು ತಿಳಿಯೆ ಪೇಟ್ಟು—

ಚ ॥ ಪೊಲೆ ಮುಳಿಸೆಂಬುದಾ ಮುಳಿಸು ಪುಟ್ಟಿದ ಪೊಟ್ಟಿಱೊಳಾವನಾದೊಡಂ ।
ಪೊಲೆಯನೆ ಪಾಪಹೇತು ಮುಳಿಸಲ್ಲದೆ ಪೇೞ್ ಪೆಱತುಂಟೆ ಕೋಪದಿಂ ॥
ಕೊಲೆ ದೊರೆಕೊಳ್ಗುಮಾ ಕೊಲೆಯೆ ಪಾತಕಮೆಂಬುದು ಪುಣ್ಯಮೆಂಬುದಾ ।
ಕೊಲೆ ಪೊಲೆ ಪೊರ್ದದಿರ್ಪಿರವೆ ನೀಮದಱಿಂ ತೊಱೆಯಿಂ ವಿರೋಧಮಂ ॥೯೪॥

ಎಂದು ತಿಳಿಪೆ ತದನಂತರಂ—

ಕಂ ॥ ಒಲವೆನಗಿನಿತೇಕೆ ಸಹ
ಸ್ರಲೋಚನನೊಳಾದುದೆಂದು ಬೆಸಗೊಂಡಂ ಚ ॥
ಕ್ರಲಲಾಮಂ ಸಗರಂ ಭವ
ಜಲನಿಧಿ ತಾರಕರನಜಿತ ಭಟ್ಟಾರಕರಂ ॥ ೯೫ ॥

ಅಂತು ಬೆಸಗೊಳ್ವುದುಮಶೇಷ ಭಾಷಾತ್ಮಕಮಪ್ಪ ದಿವ್ಯ ಭಾಷೆಯೊಳಿಂತೆಂದು ಬೆಸಸಿದರೀ ಭರತವಿಷಯದ ಪದ್ಮಪುರದೊಳಾರಂಭಿಕನೆಂಬನೊರ್ವಂ ಪಾರ್ಶ್ವನಾತಂಗೆ

ಬಲಿ ಶಿಖಿಗಳೆಂಬಿರ್ವರಂತೇವಾಸಿಗಳಾದರವರ್ ವಿದ್ಯಾಮತ್ಸರಮೆ ತಮಗೆ ವೈರಕಾರಣ ಮಾಗೆ ವರ್ತಿಸುತ್ತಿರ್ದು ಮತ್ತೊಂದು ದೆವಸಂ ಧೇನುವಿಕ್ರಯನಿಮಿತ್ತಮೋರೊರ್ವರನಿಱಿದು ಸತ್ತು—

ಕಂ ॥ ಕಲುಷಮತಿ ಶಬರನಾದಂ
ಬಲಿ ಶಿಖಿಯುಂ ವೃಷಭನಾಗಿ ಶಬರಂ ತನ್ನಂ ॥
ಕೊಲೆ ಮೂಷಕನಾದಂ ಕಱಿ
ದು ಲುಬ್ಧಕಂ ಬದ್ಧರೋಷದಿಂ ಬೆಕ್ಕಾದಂ ॥ ೯೬ ॥

ಅಂತು ಪರಸ್ಪರೋಪಘಾತ [1]ಪರಿಣತಿಯಿಂ—

ಕಂ ॥ ಅನುಭವಿಸಿ ಪಲವು ಕಾಲಮ
ನನಂತ ಭವದೊಳ್ ದುರಂತ ದುಷ್ಕೃತ ಫಲಮಂ ॥
ಜಿನದೇವ ದಿತಂಗಾದರ್
ತನೂಜರವರೊರ್ವೆ ವಾರಣಾಸೀಪುರದೊಳ್ ॥ ೯೭ ॥

ಅನಂತರಂ ವ್ಯಂತರಗತಿಯೊಳ್ ಸುರೂಪ ಸುಂದರವೆಸರಂ ಪಡೆದಲ್ಲಿಂ ಬಂದು ಸೋಮಪುರದೊಳ್ ಕುಲಂಧರ ಪುಷ್ಯಭೂತಿಗಳೆಂಬರಾಗಿ ಜನಿಯಿಸಿ ಜಾಯಾ ನಿಮಿತ್ತಂ ವೈರ ವೈರಸ್ಯ ಮನಸ್ಕರಾಗಿ ಸಲುತ್ತು ಮೊರ್ವೆ ಪುಣ್ಯಾವಶದಿನಗಣ್ಯ ಪುಣ್ಯ ಧನರಂ ತಪೋಧನರಂ ಕಂಡುಪಶಾಂತ ಸ್ವಾಂತರಾಗಿ ತೊಱೆದು ಸತ್ತು ಸನತ್ಕು ಮಾರಕಲ್ಪದುಪಪಾತ ಕಲ್ಪದೊಳ್ ಪುಟ್ಟಿ ನಾಕಲೋಕ ಸುಖಮನನುಭವಿಸಿ ಬಂದು ಧಾತಕೀ ಷಂಡದಪರವಿದೇಹದ ವಿಜಯಾವತೀವಿಷಯದ ವಿಜಯಪುರದೊಳ್ ಒಡ ವುಟ್ಟಿದ ಕ್ರೂರಧರನುಮುಮುರಧರನುಮೆಂಬರಾದರಾ ಪುರಮನಾಳ್ವ ಸಹಸ್ರಶೀರ್ಷ ನೆಂಬನೊಂದು ದಿವಸಮಾನೆವೇಂಟೆಗಡವಿಯಂ ಪೊಕ್ಕು ಪರಸ್ಪರೋಪದ್ರವಕಾರಿ ಗಳಪ್ಪ ಕ್ರೂರಮೃಗಂಗಳುಪಶಮಭಾವದಿಂದಿರೆ ಕಂಡು ಕೌತುಕಂಬಟ್ಟು ತೊೞ ಲುತ್ತುಮಲ್ಲಿ ವಿನಯಂಧರ ಕೇವಲಿಗಳಂ ಕಂಡು ತಚ್ಚರಣ ಸಮಕ್ಷದೊಳ್ ದೀಕ್ಷೆ ಯಂ ಕೊಂಡು ಮೋಕ್ಷಕ್ಕೆ ವೋದನಿತ್ತಲಾ ಕ್ರೂರಧರನುಮುಮುರಧರನುಮಾ ಕೇವಲಿಗಳ ಪಾದಪಾರ್ಶ್ವದೊಳ್ ತಪಂಗೆಯ್ದು ಶರೀರಮಂ ತೊಱೆದು ಶತಾರಕಲ್ಪ ದೊಳನಲ್ಪ ಸುಖಮನನುಭವಿಸಿ ಬಂದಾ ಬಲಿಯುಂ ಶಿಖಿಯುಂ ಸಹಸ್ರಲೋಚನನುಂ ತೋಯದವಾಹನನುಮಾದರೆಂದು ಬೆಸಸಿ—

---

1. ಪರಿಣಾಮ ಪರಿಣತಿಯಿಂ. ಕ, ಘ, ಚ.

ಕಂ || ಪರಿಷಜ್ಜನ ಹೃತ್ಕೈರವ
ಮರಲ್ದಿನಂ ದಿವ್ಯವಚನ ಪರಿಪೂರ್ಣ ಸುಧಾ ||
ಕರ ರುಚಿ ಪಸರಿಸೆ ಮತ್ತಂ
ನರೇಶ್ವರಂಗಜಿತತೀರ್ಥಕರರಿಂತೆಂದರ್ || || ೯೮ ||

ಅಂದಿನಾರಂಭಿಕಂ ಋಷಿಯಗ್ರಾಹಾರ ದಾನಮುಂ ಕೊಟ್ಟು ಭೋಗಭೂಮಿಯೊಳ್ ಪುಟ್ಟಿ ಬಟಿಯಂ ದಿವಕ್ಕೆ ಸಂದು ದಿವ್ಯಸುಖಮನನುಭವಿಸಿ ಬಂದು ಧಾತಕೀಷಂಡದಪರವಿದೇಹದ ವಿಜಯಾವತೀವಿಷಯದೊಳ್ ಚಕ್ರಪುರಮನಾಳ್ವ ಹರಿವರ್ಮಂಗಂ ಗಾಂಧಾರಿಗಂ ಶ್ರುತಕೀರ್ತಿವೆಸರ ಸುತನಾಗಿ ತಪಂಗೆಯ್ದು ಕಟಿದು ಸ್ವರ್ಗದೊಳ್ ಪುಟ್ಟಿ ಬಂದು ಪೂರ್ವವಿದೇಹದ ರತ್ನಸಂಚಯಪುರಮನಾಳ್ವಭಯಘೋಷಂಗಂ ಚಂದ್ರಾಯಣೆಗಂ ಪಯೋಬಲನೆಂಬ ಪುತ್ರನಾಗಿ ಪವಿತ್ರ ಚಾರಿತ್ರ ನಪಗತಪ್ರಾಣಂ ಪ್ರಾಣತಪ್ರಾಪ್ತನಾಗಿ ಮಗುಟಿ ಬಂದು ಪೃಥ್ವೀಧರಪುರಮನಾಳ್ವ ಜಯಂಧರಂಗಂ ವಿಜಯೆಗಂ ಜಯಕೀರ್ತಿವೆಸರ ಮಗನಾಗಿ ರಾಜ್ಯಂಗೆಯ್ದು ಜನಕ ಸೂರಿ ಪಾರ್ಶ್ವದೊಳ್ ಪರಿವ್ರಾಜಕನಾಗಿ ಸವಾಥಿಪೆತ್ತುಸುತ್ತರೆಗೆ ಪೋಗಿ ಬಂದು ನೀನೀಗಳೆರಡನೆಯ ಚಕ್ರವರ್ತಿ ಸಗರನಾದೆ ನಿನಗಾರಂಭಿಕನಾದಂದಿನನುಬಂಧಂ ಕಾರಣಮಾಗೆ ಸಹಸ್ರಲೋಚನನೊಳತಿಪ್ರೀತಿ ಸಮನಿಸಿದುದೆಂದು ಬೆಸಸೆ---

ಕಂ || ಜಿನವಚನಮನಾಲಿಸಿ ಭೀ
ಮನೆಂಬ ರಾಕ್ಷಸಕುಲಾಧಿಪಂ ತೋಯದವಾ ||
ಹನನ ಪುರಾತನ ಜನ್ಮದ
ಜನಕಂ ಪ್ರೇಮಾನುಬಂಧದಿಂದಿಂತೆಂದಂ || ೯೯ ||

ಮಗನೆ ವಿಜಯಾರ್ಧನಗದೊಳ್
ಪಗೆವರತಿ ಪ್ರಬಲರವರ ನಡುವಿರೆ ನಿನಗ ||
ಜ್ಜಿಗಮುಕ್ಕುಂ ಪಾವಿನೊಳಂ
ಪಗೆಯೊಳವೊಂದಾಗಿ ಜೀವಿಸಲ್ ಬಂದಪುದೇ || ೧೦೦ ||

ಪಲವುಂ ದ್ವೀಪಂಗಳ್ ಕ
ಲ್ಪಾಂತರಂ ಸೆಱಿಗೆಯ್ದು ಕಿನ್ನರಾದ್ಯಷ್ಟ ಮರು ||
ತ್ಕುಲ ನಿಲಯಂಗಳ್ ದಕ್ಷಿಣ
ಜಲಧಿಯೊಳಿರ್ಪುವು ನಿಕಾಮ ಕಮನೀಯಂಗಳ್ || ೧೦೧ ||

ಆ ದ್ವೀಪಂಗಳೊಳಗೆ ರಾಕ್ಷಸದ್ವೀಪಮೆಂಬುದು ಸಪ್ತಶತ ಯೋಜನ ಪ್ರಮಿತ ಮದಱ ನಡುವೆ—

ಮ॥ಸ್ರ॥ಕನಕ ಪ್ರಾಕಾರವೇಟಿಂ ಬಳಸಿರೆ ವಿಳಸದ್ಗೋಪುರಾಟ್ಟಾಳಕಂ ನಂ।
ದನವೇಟಿಂ ಲೋಚನಾನಂದಮನೊದವಿಸೆ ಸಾರ್ವರ್ತುಕಂ ರಂಜಿಕುಂ ಯೋ॥
ಜನವೊಂಬತ್ತುದ್ದಮಯ್ವತ್ತಗಲಮೆನೆ ಶಿರೋಭೂಷಣಾಕಾರಮುದ್ಯ।
ಜ್ಜಿನ ಗೇಹಂ ಸುತ್ತಲುಂ ತಳ್ತಿರೆ ವಿಕಟ ಹಟದ್ರತ್ನ ಕೂಟಂ ತ್ರಿಕೂಟಂ ॥೧೦೨॥

ಆ ತ್ರಿಕೂಟಾಚಲದ ಶಿಖರ ಮಂಡಲದೊಳ್—

ಕಂ ॥ ತ್ರಿಂಶದ್ಯೋಜನ ವಿಸ್ತಾ
ರಂ ಶರದಂಬುಧರ ಧವಲ ಹಾರಂ ಮಣಿ ಹ ॥
ರ್ಮ್ಯಾಂಶು ಸ್ಥಗಿತ ವಿಯಚ್ಚ
ಕ್ರಂ ಶೋಭಾ ಜನ್ಮಭೂಮಿ ಲಂಕಾನಗರಂ ॥ ೧೦೩ ॥

ಆ ನಿರಾತಂಕಮಪ್ಪ ಲಂಕೆಯೊಳ್ ಸುಖದಿನರಸುಗೆಯ್ಯೆಂದು ಭೀಮರಾಕ್ಷಸಂ ಭವಾಂತರ ಸ್ನೇಹದಿಂ ತೋಯದವಾಹನನಂ ತನ್ನ ಪೊಱಲ್ಗೊಯ್ದು ರಾಜ್ಯಾಭಿಷೇಕಂಗೆಯ್ದು ಪಟ್ಟಮಂ ಕಟ್ಟಿ ರಾಕ್ಷಸವಿದ್ಯೆ ಮೊದಲಾಗೆ ಪಲವುಂ ವಿದ್ಯೆಗಳುಮಂ ನವ ಮುಖಾಭರಣ ಪ್ರಮುಖಾನೇಕ ದಿವ್ಯಾಭರಣಂಗಳುಮಂ ನವನಿಧಿವೆರಸುಪಾತಾಳ ಲಂಕೆಯುಮನಿತ್ತು ನಿನಗೆ ರಾಕ್ಷಸಕುಲಮೆ ಕುಲಮಕ್ಕೆಂದು ನಿಯಮಿಸಿ ನಿಜ ಪರಿಗ್ರಹಂಬೆರಸು ದ್ವೀಪಾಂತರಕ್ಕೆ ಪೋದನಿತ್ತ ತೋಯದವಾಹನಂ ನಿಜ ಪರಿಜನಂ ಬೆರಸು ಲಂಕೆಯೊಳರಸುಗೆಯ್ಯುತ್ತು೧ ವಿಜಯಾರ್ಧದ ಕಿನ್ನರಪುರಮನಾಳ್ವ ರತಿಮಯೂಖಂಗಮನುಮತಿಗಂ ಪುಟ್ಟಿದ ಸುಪ್ರಭೆಯಂ ಮದುವೆನಿಂದು ಕೆಲವು ಕಾಲದಿಂ ವೈರಾಗ್ಯಪರನಾಗಿ ನಿಜಾಗ್ರ ತನಯನಪ್ಪ ಮಹಾರಾಕ್ಷಸಂಗೆ ರಾಜ್ಯಮನಿತ್ತು ದೀಕ್ಷೆಗೊಂಡು ಮೋಕ್ಷಕ್ಕೆ ಪೋಪುದುಮಿತ್ತಲ್—

ಕಂ ॥ ರಕ್ಷಿಸಿ ವಸುಮತಿಯಂ ಪರ
ಪಕ್ಷಮನಾಕ್ರಮಿಸಿ ವಿಭವದೊಳ್ ತನಗೆ ಸಹ ॥
ಸ್ರಾಕ್ಷಂ ಸಮನೆನಿಸಿ ಮಹಾ
ರಾಕ್ಷಸನಧಿರಾಜನೆನಿಸಿ ಲಂಕೆಯೊಳಿರ್ದಂ ॥ ೧೦೪ ॥

ಆತಂಗೆ ತನಯರಮರರಾಕ್ಷಸನುಂ ಭಾನುರಾಕ್ಷಸನುಮೆಂಬರಾದರ್ ಆ ಮಹಾರಾಕ್ಷಸನೊಂದುದಿವಸಂ ಕ್ರೀಡಾವನಕ್ಕೆ ಬಂದಮಂದ ಮಕರಂದ ಲೋಭದಿಂ ದಿರುಳ್ ಮುಗಿದ ಕಮಲ ಕೋಶದಿಂ ಪೊಱಮಡಲಱಿಯದುಸಿರ್ಪಿಂಗಿದ ಭೃಂಗನಂ ಕಂಡು—

ಕಂ ॥ ಮರಣಮನೆಯ್ದಿದುದೀ ಷ
ಟ್ಚರಣಂ ಘ್ರಾಣೇಂದ್ರಿಯಕ್ಕೆ ಸೋಲ್ತೆನಲಯ್ದುಂ ॥

ಕರಣದನುಸರಣಮಿಂ ಸಂ
ಸರಣ ವಿಪತ್ಕರಣಮಪ್ಪುದೊಂದಚ್ಚರಿಯೇ ॥ ೧೦೫ ॥

ಎಂದು ಸಂಸಾರ ವೈರಾಗ್ಯಪರನವಧಿಬೋಧರಂ ಶ್ರುತಸಾಗರ ಚಾರಣ ಋಷಿಯರಂ ಕಂಡು ನಿಜವಿಭವ ಕಾರಣಮಂ ಬೆಸಗೊಳ್ವುದುಮವರಿಂತೆಂದು ಬೆಸಸಿದರ್ ಪೌದನಪುರಾಧಿಪಂ ಕನಕರಥಂ ಜಿನಪೂಜೆಯಂ ಮಾಡೆ ನೋಡಿ ನಲಿದು ನರ್ತಿಸಿ ತತ್ಫಲದಿಂ ಕಡೆಯೊಳಪರವಿದೇಹದ ಕಾಂಚನಪುರದೊಳ್ ಯಕ್ಷನಾಗಿ ಸಾಧು ಸಂಘಕ್ಕೆ ಸಮನಿಸಿದುಪಸರ್ಗಮನಪಹರಿಸಿ ತಟಿಲ್ಲಂಘನೆಂಬ ಖೇಚರಂಗಂ ಶ್ರೀಪ್ರಭೆಗಮುದಿತನೆಂಬ ಮಗನಾಗಿ ವೈರಾಗ್ಯದಿಂ ತೊಱೆದು ಜಿನಚರಣ ವಂದನಾನಂದದಿಂ ಬಂದ ವಿಕ್ರಮನೆಂಬ ವಿದ್ಯಾಧರನ ವಿಭೂತಿಯಂ ನೋಡಿ ಮನವೆಳಸಿ [1]ವಿಧಾನಂಗೆಯ್ದು ಜೀವಿತಾವಸಾನದೊಳೀಶಾನಕಲ್ಪಕ್ಕೆ ಪೋಗಿ ಬಂದು ಮಹಾರಾಕ್ಷಸನಾದೊಡೀ ಮಹಾಮಹಿಮೆ ನಿನಗಾದುದೆಂದು ಪೇೞೆ ಕೇಳ್ದು ನಿಜತನೂಜನಪ್ಪಮರರಾಕ್ಷಸಂಗೆ ಲಂಕೆಯಂ ಕೊಟ್ಟು ವಿದ್ಯೆಗಳಂ ವಿಸರ್ಜಿಸಿ ತಪಂಗೆಯ್ದಪವರ್ಗ ಪ್ರಾಪ್ತನಾದನಿತ್ತಲ್—

ಕಂ ॥ ಕರವಾಳ ಕೂರ್ಪಿನಿಂದಮ
ರರಾಕ್ಷಸಂ ಕೂರ್ಪುಗಿಡಿಸಿ ತನಗೆಡಱುವ ಖೇ ॥
ಚರ ವಲ್ಲಭರಂ ಲಂಕಾ
ಪುರದೊಳ್ ನಿಶ್ಯಂಕನರಸುಗೆಯ್ಯುತ್ತಿರ್ದಂ ॥ ೧೦೬ ॥

ಆ ವಿಪಕ್ಷ ರಾಕ್ಷಸನೆನಿಪ್ಪಮರರಾಕ್ಷಸಂಗಂ ತದನುಜನಪ್ಪ ಭಾನುರಾಕ್ಷಸಂಗಂ ಪ್ರತ್ಯೇಕಂ ಪದಿಂಬರ್ ತನಯರಪ್ಪುದುಮವರ ನೋರೊಂದೆ ಪೊೞಲ್ಗರಸುಮಾಡಿ ನಿಸರ್ಗ ವೈರಾಗ್ಯದಿಂ ತೊಱೆದಿರ್ವರುಂ ನಿರ್ವಾಣಕ್ಕೆ ಸಂದಿಂಬೞಿಯುಮಾ ಸಂತಾನದೊಳನೇಕರರಸುಗಳತಿಕ್ರಾಂತರಪ್ಪುದುಂ—

ಕಂ ॥ ಘನ ರುತಿಗೆ ರಾಜಹಂಸಂ
ಮನಮುೞಿವಂತನ್ಯರಾಜಕಂ ಬೆರ್ಚುವಿನಂ ॥
ಘನ ತೇಜಃಪ್ರಭೆಗಾಳ್ದಂ
ಘನಪ್ರಭಂ ಪ್ರಥಿತಕೀರ್ತಿ ಲಂಕಾಪುರಮಂ ॥ ೧೦೭ ॥

ತದಪತ್ಯಂ—

---

1. ನಿದಾನಂ. ಗ; ನಿಧಾನಂ. ಚ.

ಕಂ ॥ ಧವಲಚ್ಛತ್ರಚ್ಛಾಯೆಯಿ
ನವನೀ ಚಕ್ರಕ್ಕೆ ಚಂಡಕರ ತಾಪಂ ಸಂ ॥
ಭವಿಸದೆನೆ ತನ್ನ ಜಸದಿಂ
ಧವಳಿಸಿದಂ ಧವಳಕೀರ್ತಿ ದಿಗ್ಭಿತ್ತಿಗಳಂ ॥ ೧೦೮ ॥

ಅಂತಾತಂ ಲಂಕೆಯನಾಳುತ್ತುಮಿರೆ ಮತ್ತಿತ್ತ ವಿಜಯಾರ್ಧಗಿರಿಯ ದಕ್ಷಿಣ ಶ್ರೇಣಿಯ ಮೇಘಪುರದ ವಿಯಚ್ಚರೇಂದ್ರನತೀಂದ್ರನೆಂಬಂ ನಿಜ ತನೂಜನಪ್ಪ ಶ್ರೀಕಂಠ ಕುಮಾರನಿಂ ಕಿಱಿಯಳ್ ದೇವಿಲೆಯಂ ರತ್ನಪುರದ ಪೂರ್ಶ್ಪೋತ್ತರಂ ತನ್ನ ಮಗಂ ಪುಷ್ಪೋತ್ತರಂಗೆ ಬೇಡೆ ಕುಡದೆ—

ಕಂ ॥ ದೇವಿಲೆಯಂ ಲಾವಣ್ಯಾ ರ
ಸಾವಿಲೆಯಂ ಧವಳಕೀರ್ತಿಗುತ್ಸವ ತೂರ್ಯಾ ॥
ರಾವಂ ಗಗನೋದರಮಂ
ತೀವುವಿನಂ ಚಂದ್ರಮುಖಿಯನಿತ್ತನತೀಂದ್ರಂ ॥ ೧೦೯ ॥

ಆತನ ತನೂಭವಂ ಶ್ರೀಕಂಠಕುಮಾರನೊರ್ಮೆ ಮಂದರ ಕಂದರಕ್ಕೆ ಜಿನ ವಂದನಾನಿಮಿತ್ತಂ ಪೋಗಿ ರತ್ನಪುರದ ಮೇಗನೆ ಮೇಘಪುರಕ್ಕೆ ಬರ್ಪ ಸಮಯದೊಳ್ ಪುಷ್ಪೋತ್ತರನ ತಂಗೆ ಪದ್ಮೋತ್ತರೆ ತನ್ನ ಚೆಂಬೊನ್ನ ಕನ್ನೆವಾಡದೊಳ್ ಸುಸ್ವರದಿಂ ಪಾಡುತ್ತುಮಿರ್ಪುದುಂ—

ಮ॥ ಸ್ರ॥ ಜಿತ ಭೃಂಗೀಝುಂಕೃತಂ ನಿರ್ಜಿತ ಮದನ ಧನುರ್ಜ್ಯಾಲತಾ ಟಂಕೃತಂ ತ।
ರ್ಜಿತ ವೀಣಾ ಶಿಂಜಿತಂ ಭಂಜಿತ ರತಿರಮಣೀ ರತ್ನಕಾಂಚೀ ಪ್ರಣಾದಂ ॥
ಶ್ರುತಿಯಂ ತಟ್ಟಿಕ್ಕೈಸೆ ರೋಮೋದ್ಗತಿಯೊಡನೆ ಗತಿಸ್ತಂಭಮಂ ಖೇಚರಾಧೀ।
ಶ ತನೂಜಂಗಿತ್ತುದಾ ಕನ್ನಿಕೆಯ ಮಧುರ ಸಪ್ತಸ್ವರೋತ್ಥಾನ ಗಾನಂ ॥ ೧೧೦ ॥

ಕಂ ॥ ಸ್ವರ ಮಂತ್ರ ದೇವತಾ ನೂ
ಪುರ ರವಮೆನೆ ಕಿವಿಯನೆಯ್ದೆ ಕನ್ಯಾ ಕಲಕಂ ॥
ಠ ರವಂ ಶ್ರೀಕಂಠಂ ರಾ
ಗ ರಸೋತ್ಕಂಠಂ ಪ್ರತಿಷ್ಠೆಯೊಳ್ ಪಾಡಱಿದಂ ॥ ೧೧೧ ॥

ಅಂತಾತಂ ಗೋರಿಯ ಮೃಗದಂತೆಳಸಿ ಬರ್ಪುದುಂ—

ಕಂ ॥ ನೋಡಲೊಡಮಾ ಕುಮಾರನ
ಗಾಡಿಗೆ ಕಣ್ಸೋಲ್ತ ಕನ್ನೆಯುಂ ಮನಸಿಜನೇ ॥

ಸಾಡಿದನೆಡೆ[1]ವಡೆದೆನೆ ಪರ
ಪೀಡಾಕರರೇಕೆ ಬಾಧೆವಡಿಸದೆ ಮಾಣ್ಬರ್ ॥ ೧೧೨ ॥

ಅಂತು ಪಶವಾದ ಕನ್ನೆಯುನಶಂಕಿತಂ ಲಂಕೆಗುಯ್ದು ಧವಳಕೀರ್ತಿಯ ಕೆಲದೊಳಿರ್ಪುದುಮುದಂ ಪುಷ್ಪೋತ್ತರನಱಿದು—

ಚ ॥ ಎರೆದೊಡೆ ಕನ್ನೆಯುಂ ಕುಡದೆ ಮುನ್ನೆನಗೆನ್ನನುಜಾತೆಯುಂ ಕುಲಾ ।
ಚರಣಮನೇನುಮಂ ಬಗೆಯದೆನ್ನುಮನೇಳಿಸಿಕೊಂಡು ಪೋದನೆಂ ॥
ಬೆರಡಱೊಳಂ ಮನಕ್ಕೆ ಮುಸಿಸಿರ್ಮಡಿದಳ್ಳಿಸೆ ಲಂಕೆಗೆತ್ತಿದಂ ।
ಧರೆ ಕಿಱಿದೀ ವರೂಥಿಸಿಗೆನಲ್ ವಿಲಯಾಂತಕನಂತೆ ಖೇಚರಂ ॥ ೧೧೩ ॥

ಅಂತು ಮೇಲೆತ್ತಿಬರ್ಪುದುಂ ಧವಳಕೀರ್ತಿ ನಯಾನುವರ್ತಿ ಮುನ್ನಂ ಸಾಮಮನೊಡರ್ಚವೆಂದು ನಿಜಮಹತ್ತರರಂ ಪುಷ್ಪೋತ್ತರನಲ್ಲಿಗಟ್ಟುವುದುಮವರ್ ಬಂದು ಕಂಡುಪಾಯನಪುರಸ್ಸರಮಿಂತೆಂದರ್—

ಮ॥ ಸ್ರ॥ ಅನುರೂಪಂ ಕನ್ನೆಗೀತಂ ಕುಲ ಭುಜಬಲ ವಿದ್ಯಾಬಲ ಖ್ಯಾತ ನಿನ್ನಂ ।
ಗೆ ನಿರಾಲೋಚಂ ಕುಡಲ್ವೇೞ್ಪುದು ಯುವತಿಯನನ್ಯೋನ್ಯ ಸಂಪ್ರೀತಿಯಿಂದಾ॥
ಯ್ತನುಬಂಧಂ ರಾಗದಿಂದಿನ್ನಿವರ್ಗೆ ಮದುವೆಯುಂ ಮಾೞ್ಪುದೆಂದಟ್ಟಿದಂ ನಿ।
ಮ್ಮನುಜನ್ಮಂ ನಿಮ್ಮನಣ್ಪಂ ಬಯಸಿ ಪದೆಪಿನಿಂದೆಮ್ಮವಿದ್ಯಾಧರೇಂದ್ರಂ ॥೧೧೪॥

ಎನೆ ಮನದೆ ಕೊಂಡು ನಿರುತ್ತರಂ ಪುಷ್ಪೋತ್ತರನೊಡಂಬಟ್ಟು ಮಗುೞ್ದು ಪೋಪುದುಂ ಶುಭದಿನ ಮುಹೂರ್ತದೊಳ್ ಪದ್ಮೋತ್ತರೆಯುಂ ಶ್ರೀಕಂಠಂಗೆ ಮದುವೆ ಮಾಡಿ ಮತ್ತೊಂದು ದಿನಂ ಶ್ರೀಕಂಠನಂ ನಿನಗೆ ವಿಜಯಾರ್ಧ ಮಹೀಧರದೊಳ ಹಿತರೊಡಗೂಡಿರ್ಪುದು ನೀತಿಯಲ್ತದಱಿನನೇಕ ದ್ವೀಪ ಮುಖ್ಯಮಪ್ಪ ವಾನರದ್ವೀಪದೊಳಿನ್ನ ಸಮೀಪದೊಳಿರ್ಪುದೆನೆ ಮನದೆ ಕೊಂಡು ತದ್ದ್ವೀಪನಿರೀಕ್ಷಣನಿಮಿತ್ತಂ ಬರುತ್ತುಮೊಂದೆಡೆಯೊಳ್ ವಾನರಂಗಳಂ ಕಂಡವಂ ತರಿಸಿಕೊಂಡು ಕಿಷ್ಕಿಂಧಗಿರಿಯುಮೇಲೆ ಪದಿನಾಲ್ಕುಂ ಯೋಜನದ ವಿಸ್ತಾರದ ಪೊಟಲಂ ಮಾಡಿ ಕಿಷ್ಕಿಂಧಪುರಮೆಂದು ಪೆಸರನಿಟ್ಟು ಆ ಪುರದೊಳ್ ಪಲಕಾಲಂ ರಾಜ್ಯಂಗೆಯ್ಯುತ್ತುಮಿರ್ದೊಂದು ದಿವಸಂ ನಂದೀಶ್ವರಪೂಜೆಗಚ್ಯುತೇಂದ್ರನೊಡನೆ ಪೋಗುತ್ತುಂ ಮಾನುಷೋತ್ತರದ್ವೀಪದಿನತ್ತ ಮನುಷ್ಯರ್ಗೆ ಸಲವಿಲ್ಲಪ್ಪುದಱಿಂ ನಿಜವಿಮಾನಂ ಪೋಗದಿರೆ ಮಗುೞ್ದು ಬಂದದುವೆ ನಿರ್ವೇಗಕಾರಣಮಾಗೆ ತನ್ನ ಮಗಂ ವಜ್ರಕಂಠಂಗೆ ರಾಜ್ಯಮುಂ ಕೊಟ್ಟು ತಪಂಬಟ್ಟು—

---

1. ಯುಡುಗಡೆ. ಗ.

ಕಂ ॥ ನಾಕಾನೋಕಹ ಸುಮನ
ಶ್ರೀಕಂಠಾಭರಣಮಾಗೆ ಗಗನಶ್ರೀಗಾ ॥
ಶ್ರೀಕಂಠಯೋಗಿ ಮುಕ್ತಿ
ಶ್ರೀಕಂಠಾಭರಣಮಾದನನವಧಿಬೋಧಂ ॥ ೧೧೫ ॥

ತತ್ತನಯಂ—

ಕಂ ॥ ಪರಿಪಾಲಿಸಿದಂ ವಾನರ
ಪುರಮಂ ಚಿರಕಾಲಮುಚಿತ ಕಂಠ ಗ್ರಹಣಾ ॥
ತುರ ಕರಕೃಪಾಣನಾಹವ
ನಿರಂಕುಶಂ ವಜ್ರಕಂಠನುದ್ಧತ ಕಂಠಂ ॥ ೧೧೬ ॥

ಆತನೊಂದುದಿವಸಂ ತ್ರಿಕಾಲದರ್ಶಿಮಹರ್ಷಿಯರಂ ಕಂಡು ಪೂಜಿಸಿ ಪೊಡೆವಟ್ಟು ಧರ್ಮಶ್ರವಣಾನಂತರಂ ಮದೀಯಜನಕಂಗಚ್ಯುತೇಂದ್ರನೊಳತಿಪ್ರೀತಿ ಸಮನಿಸಿದ ಕಾರಣಮೇನೆಂಬುದುಂ ಮುನೀಂದ್ರರಿಂತೆಂದು ಬೆಸಸಿದರ್ ವೀತಶೋಕಪುರದ ಪರದನರ್ಹದ್ದತ್ತನೆಂಬನಾತನ ತನಯರ್ ಧನದತ್ತ ವಸುದತ್ತರೆಂಬರ್ ತಮ್ಮ ತಂದೆ ತಪಸ್ಸ್ಥನಪ್ಪುದುಂ ಸ್ತ್ರೀನಿಮಿತ್ತಂ ತಮ್ಮೊಳಗೆ ಮುಳಿದು ಗುರೂಪದೇಶದಿಂ ಮುಳಿಸನುೞಿದು ತಪಂಗೆಯ್ದು ಣ್ಣನಚ್ಯುತೇಂದ್ರನಾದನನುಜನುಮಮರಗತಿವಡೆದು ನಾಕಚ್ಯುತಂ ಶ್ರೀಕಂಠನಾಗಿ ತದಚ್ಯುತೇಂದ್ರ ದರ್ಶನ ಜನಿತ ಜಾತಿಸ್ಮರಂ ವಂದನಾಭಕ್ತಿಯಿನೊಡನೆ ಪೋಗುತ್ತುಂ ಮನುಷ್ಯಕ್ಷೇತ್ರದಿಂದತ್ತಲ್ ತನಗೆ ಸಲವಿಲ್ಲದೊಡದುವೆ ವೈರಾಗ್ಯಕಾರಣಮಾಗೆ ನಿನಗರಸುತನಮನಿತ್ತು ತಪಂಬಟ್ಟನೆಂಬುದುಮದಂ ಕೇಳ್ದು ತಾನುಂ ನಿರ್ವೇಗಪರಾಯಣನಾಗಿ ವಜ್ರಕಂಠಂ ನಿಜತನೂಜನಪ್ಪಿಂದ್ರಾಯುಧಂಗರಸುತನಮನಿತ್ತು ತಪಂಗೆಯ್ದು ಸುಗತಿಪ್ರಾಪ್ತನಾದಂ ದಿಂಬೞಿಯಂ—

ಕಂ ॥ ಅಪರಿಮಿತ ಭುಜಬಲರ್ ವಾ
ಸುಪೂಜ್ಯ ಜಿನ ವೃಷಭ ಸಮವಸರಣಂಬರಮಾ ॥
ಕಪಿಕುಲದೊಳ್ ಕಿಷ್ಕಿಂಧಾ
ಧಿಪರಿಂದ್ರಾಯುಧನಿನಾದರಿತ್ತಲನೇಕರ್ ॥ ೧೧೭ ॥

ಅಲ್ಲಿಂಬೞಿಯಮಾ ಕುಲದೊಳಪ್ರತಿಹತ ಪ್ರಭನಮರಪ್ರಭನೆಂಬನಾದನತ್ತ ಲಂಕೆಗೆ ಧವಳಕೀರ್ತಿಯ ಕುಲದೊಳ್ ಪಲರುಮವಿಶ್ರಾಂತ ವಿಕ್ರಾಂತರತಿಕ್ರಾಂತರಪ್ಪುದುಮಲ್ಲಿಂಬೞಿಯಂ ತ್ರಿಕೂಟನೆಂಬನೊಡೆಯನಾದನಾತನ ಸುತೆ ಗುಣವತಿಯನಮರಪ್ರಭಂಗೆ ಮದುವೆಮಾಡಲೆಂದು ಕಿಷ್ಕಿಂಧಪುರಕ್ಕುಯ್ವುದುಮಾಕೆ ವಿವಾಹ

ವೇದಿಕೆಯೊಳ್ ಪಂಚರತ್ನ ವರ್ಣಚೂರ್ಣದಿಂ ಬರೆದ ಲತೆಗಳೊಳಗೆ ವಾನರಂಗಳಂ ಕಂಡು ಬೆರ್ಚುವುದುಮಮರಪ್ರಭನಿವಂ ಬರೆದರಾರೆನೆ ಗೃಹಮಹತ್ತರನಿವಂ ನಿಮ್ಮ ಪೂರ್ವಜನಪ್ಪ ಶ್ರೀಕಂಠಂ ಕೊಂಡಾಡಿದನಪ್ಪುದಱಿಂ ನಿಮ್ಮ ಕುಲದವರುತ್ಸವಂಗ ಳೊಳಿಂತೆ ಬರೆವರೆನೆ ಮುನಿಸಂ ತೊಱೆದಂತಾದೊಡಿವಂ ಮೆಟ್ಟುವೆಡೆಯೊಳೇಕೆ ಬರೆವಿ ರೆಂದು ಪತಾಕೆಗಳೊಳಂ ಮಕುಟಂಗಳೊಳಂ ಮಣಿ ಕನಕ ವಿರಚಿತಂಗಳಂ ಕೀಲಿಸಿ ಕೊಂಡಾಡಿ ವಾನರಧ್ವಜರುಂ ವಾನರಕುಲರುಮೆಂಬ ರೂಢಿಯಂ ಮಾಡಿ—

ಕಂ ॥ ಅಮರಪ್ರಭ ಖಚರಂ ತ
ನ್ನ ಮಗಂ ಕಪಿಕೇತುಗಿತ್ತು ಸಿರಿಯಂ ಸಂನ್ಯಾ ॥
ಸಮನಪ್ಪುಕೆಯ್ದು ಮುಕ್ತಿ
ಪ್ರಮದಾಪ್ರೇಮಾವಲೋಕನಕ್ಕೊಳಗಾದಂ ॥ ೧೧೮ ॥

ಆ ತೆಱದಿಂ ತೊಱೆದು ಪಲರುಮಾ ಕುಲದೊಳಂಬರಚರರ್ ಮುಕ್ತರಾದಿಂ ಬೞಿಕ್ಕೆ ಲಂಕೆಗೆ ವಿದ್ಯುತ್ಕೇಶನೆಂಬನಧೀಶನಾದನಾತನ ಮಹಾದೇವಿ ಶ್ರೀಚಂದ್ರೆಗೆ ಸುತಂ ಸುಕೇಶನೆಂಬನಾದನತ್ತಲಾ ವಾನರಧ್ವಜಕುಲದೊಳ್ ಮಹೋದಧಿಯೆಂಬ ನಾದನಾತಂಗಂ ವಿದ್ಯುತ್ಕೇಶಂಗಮತಿ ಪ್ರೀತಿ ಸಮನಿಸಿದುದಾ ವಿದ್ಯುತ್ಕೇಶನೊರ್ಮೆ ವನಕೇಳಿಯೊಳಿರ್ಪುದುಮೊಂದು ವಾನರಂ ಶ್ರೀಚಂದ್ರೆಗಂಗಭಂಗಮಂ ಮಾಡಿ ವಿದ್ಯು ತ್ಕೇಶನಿಂದೇಸುವೆತ್ತು ಚಾರಣಋಷಿಯರ ಚರಣೋಪಾಂತಮಂ ಸಾರ್ದಾರಾ ಧನಾವಿಧಿಯಿಂ ದೇಹಮಂ ಬಿಟ್ಟು ದೇವಗತಿವಡೆದವಧಿಯಂ ಪ್ರಯೋಗಿಸಿ ಬಂದು ಶರೀರಪೂಜೆಗೆಯ್ವ ಸಮಯದೊಳ್ ವಿದ್ಯುತ್ಕೇಶನುೞಿದ ಕಪಿಕುಲಕ್ಕಪಾಯಮ ನೊಡರ್ಚೆ ಕಂಡು ಕಡುಮುಳಿದು ಪರ್ವತಾಕಾರದ ವಾನರಂಗಳನಗುರ್ವು ಪರ್ವೆ ವಿಗುರ್ವಿಸುವುದುಂ—

ಮ ॥ ಮರನಂ ಕಿೞ್ತು ನಗಂಗಳಂ ನೆಗಪಿ ರೌದ್ರಾಕಾರದಿಂ ಬರ್ಪ ವಾ ।
ನರರಂ ಕಂಡು ವಿಮುಕ್ತ ಕೇಶಭರ ವಿದ್ಯುತ್ಕೇಶ ವಿದ್ಯಾಧರಂ ॥
ತ್ವರಿತ ಪ್ರಸ್ಖಲಿತ ಪ್ರಯಾಣ ರಭಸಂ ಶುದ್ಧಾಂತ ಕಾಂತಾಜನಂ ।
ಬೆರಸುತ್ಕಂಪಿತನೋಡಿ ದಿವ್ಯಮುನಿ ಪಾದಾಂಭೋಜಮಂ ಪೊರ್ದಿದಂ ॥೧೧೯॥

ಅನ್ನೆಗಂ ಬೆಂಬೞಿಯನುೞಿಯದೆ ಮುಟ್ಟಿವಂದೀ ಮುಟ್ಟುಗೆಟ್ಟ ದುರಾತ್ಮ ನಂ ವಿದಾರಿಸುವೆನೆಂದಾ ವಾನರಚರಾಮರಂಗೆ ಮುಳಿಸನುೞಿವಂತು ಧರ್ಮೋಪ ದೇಶಂಗೆಯ್ದು ವಿದ್ಯುತ್ಕೇಶನಂ ನೋಡಿ ನೀಮಿರ್ವರನೇಕಭವದೊಳೋರೊರ್ವರಂ ವಧಿಯಿಸುತ್ತುಂ ಬಂದೆಂತಾನುಂ ಮನುಷ್ಯಾಯುಷ್ಯ ಬಂಧಮಂ ಪಡೆದು ಶ್ರಾವಸ್ತಿ ಪುರದೊಳ್ ನೀಂ ಯಶೋದತ್ತನಾಗಿ ಪುಟ್ಟಿ ಕರ್ಮೋಪಶಮದಿಂ ಜಿನದೀಕ್ಷೆಯಂ

ಕೈಕೊಂಡುಗ್ರೋಗ್ರ ತಪಂಗೆಯ್ಯುತ್ತುಂ ಕಾಶೀವಿಷಯದೊಳ್ ಧರಣೀಭೂಷಣವೆಂಬ ಪರ್ವತದ ಮೇಗೆ ಪ್ರತಿಮಾಯೋಗದೊಳಿರ್ಪುದುಮಂದು ಬೇಡನಾಗಿ ಪುಟ್ಟಿದೀ ದೇವನುಂ ಮೃಗಯಾನಿಮಿತ್ತಂ ತೊಳಲುತ್ತುಂ ಬಂದ ನಿಮಿತ್ತದಿಂ ನಿನ್ನಂ ಬಯ್ದು ನುಡಿವುದುಂ ನೀನುಂ ಮಾನಕಷಾಯದಿಂ ಕೞಿದು ಜ್ಯೋತಿರಮರಗತಿವಡೆದಲ್ಲಿಂ ಬಂದುವಿದ್ಯುತ್ಕೇಶನಾದೆ ಬೇಡನುಂ ಕೞಿದು ಕೋಡಗನಾಗಿ ಮುನಿಪ್ರಸಾದದಿಂ ಮಹೋದಧಿವೆಸರ ದೇವನಾದನೆಂಬುದುಂ—

ಕಂ ॥ ದೇಶಿಕರಿಂ ಪೂರ್ವಭವ
ಕ್ಲೇಶಂಗಳನಱಿದು ಕೊಟ್ಟು ತೊಱೆದಂ ವಿದ್ಯು ॥
ತ್ಕೇಶಂ ನಿಜ ತನಯಂಗೆ ಸು
ಕೇಶಂಗರಸಂ ದಿವಕ್ಕೆ ಸಂದಂ ಕಡೆಯೊಳ್ ॥ ೧೨೦ ॥

ಮತ್ತಿತ್ತ ವಾನರದ್ವೀಪಾಧಿಪತಿ ಚಿರಕಾಲಮರಸುಗೆಯ್ದು—

ನವ ನಳಿನ ॥ ಅವಚಱನಿಂದ್ರಿಯ ಸೌಖ್ಯಮಿಾಯೆ ವಿರಕ್ತಿಯಿಂ ।
ದವನಿಯನಿತ್ತು ನಿಜಾತ್ಮಜಂ ಪ್ರತಿಬಿಂದುಗ ॥
ವ್ಯವಹಿತ ಸೌಖ್ಯಮನೀವುದಂ ಜವನಂ ಪರಾ ।
ಭವಿಸಿ ಭವೋದಧಿಯಂ ಮಹೋದಧಿ ದಾಂಟಿದಂ ॥ ೧೨೧ ॥

ತದಪತ್ಯಂ ತನ್ನ ಮಕ್ಕಳಪ್ಪ ಕಿಷ್ಕಿಂಧಂಗಮಂಧ್ರಕಂಗಂ ಜರಾಪರಿಚಯದಿಂ ಸಿರಿಯನವಜ್ಞೆಗೆಯ್ದು ಕೊಟ್ಟು—

ಕಂ ॥ ಪ್ರತಿಬಿಂದು ಜರಾಬಿಂದುಗ
ಳತರ್ಕ್ಯಬಲ ಕಾಲಪುರುಷ[1]ನಿಂ ಸಮನಿಸೆ ಸಂ ॥
ಸೃತಿಯಂ ನಿರ್ಮೂಲಿಸಿ ನಿ
ರ್ವೃತಿಲಕ್ಷ್ಮೀ ವಕ್ತ್ರತಿಲಕ ಬಿಂದುವನಾಂತಂ ॥ ೧೨೨ ॥

ಮತ್ತಿತ್ತ ವಿಜಯಾರ್ಧನಗೋಪತ್ಯಕದಾದಿತ್ಯನಗರಮನಾಳ್ವ—

ಕಂ ॥ ಮಂದರಮಾಲಿ ವಿಯಚ್ಚರ
ನಂದನೆ ಕಡುನೀಱೆ ಮಿಾಱೆ ಶಕ್ರನ ಶಚಿಯಂ ॥
ಕಂದರ್ಪನ ರತಿಯಂ ತ
ನ್ನಂದಂ ಶ್ರೀಮಾಲೆ ಮಿಾಱಿದಳ್ ಶೈಶವಮಂ ॥ ೧೨೩ ॥

1. ಸೊಳ್. ಕ. ಖ. ಗ. ಘ. ಚ.

ಆ ಖಚರಕನ್ಯಾ ಸ್ವಯಂವರಕ್ಕೆ ದಕ್ಷಿಣೋತ್ತರ ಶ್ರೇಣಿಯ ಖಚರಕುಮಾರರುಂ ವಿದ್ಯಾಧರ ಚಕ್ರವರ್ತಿಯಪ್ಪಶನಿವೇಗ ತನೂಭವಂ ವಿಜಯಸಿಂಹನುಂ ಕಪಿಕೇತುಗಳಪ್ಪ ಕಿಷ್ಕಿಂಧಾಂಧ್ರಕರುಂ ಲಂಕಾಧಿಪನಪ್ಪ ಸುಕೇಶನುಂ ಮೊದಲಾಗೆ ಪಲಂಬರಂಬರಚರಾಧಿರಾಜರ್ ಬಂದು ಪಂಚರತ್ನ ಖಚಿತ ಕಾಂಚನ ಮಂಚದೊಳ್ ಮಹಾ ವಿಭೂತಿಯಿಂದಮಿರೆ—

ಕಂ ॥ ಶ್ರೀಮಾಲೆ ಮಾಲೆ ಸೂಡಿದ
ಳಾ ಮನ್ಮಥರೂಪನಪ್ಪ ಕಿಷ್ಕಿಂಧ ವಿಯ ॥
ದ್ಧಾಮಿಗೆಡಱಿದನದರ್ಕೆ
ದ್ದಾಮ ಭುಜಂ ವಿಜಯಸಿಂಹನಾಹವಸಿಂಹಂ ॥ ೧೨೪ ॥

ನೆರೆದ ವಿಯಚ್ಚರರಿರ್ದಂ
ತಿರೆ ತಾನೆ ಕಡಂಗಿ ಪೊಂಗಿ ಮುಂದಱಿಯದೆ ಕಾ ॥
ತರನೀಟ್ಟಿ ಕೊಳ್ವೆನೆಂದಾ
ಹರಿಣಾಕ್ಷಿಯನಿರದೆ ಕಾಳೆಗಕ್ಕೊಡರಿಸಿದಂ ॥ ೧೨೫ ॥

ಆಗಳಂಧ್ರಕ ಸುಕೇಶರ್ ಕೀನಾಶರಂತೆ ದೆಸೆದೆಸೆಗೆ ಮಸಗಿ ಕಿಷ್ಕಿಂಧನುಮಂ ಶ್ರೀಮಾಲೆಯುಮಂ ಕಿಷ್ಕಿಂಧಪುರಕ್ಕೆ ಕಳಿಪಿ ಕಡುಕೆಯ್ದು ಕಾದುವಾಗಳ್—

ಕಂ ॥ ಅಂಧ್ರಕನಾಕಾಶಂ ನೀ
ರಂಧ್ರಮೆನಲ್ ಸುರಿದು ಸರಲ ಸರಿಯಂ ಜವನೀ ॥
ತಂ ಧ್ರುವಮೆಂಬಿನಮುಮರಪು
ರಂಧ್ರಿಯರಂ ವಿಜಯಿ ವಿಜಯಸಿಂಹಂಗಿತ್ತಂ ॥ ೧೨೬ ॥

ಅಂತು ಕಾಳೆಗಮುಂ ಗೆಲ್ದು ಸುಕೇಶನುಂ ತಾನುಂ ಕಿಷ್ಕಿಂಧಪುರಮಂ ಪೊಕ್ಕು ಸಮರ ಸನ್ನದ್ಧರಾಗಿರ್ಪುದುಮಿತ್ತಲಶನಿವೇಗಂ ಸುತನ ಸಾವಂ ಕೇಳ್ದು ಶೋಕ ವೇಗದಿಂ ಕ್ರೋಧವೇಗಮತ್ಯಧಿಕಮಾಗೆ ಗಗನವೀಧಿಯೊಳ್ ಬಂದು ಕಿಷ್ಕಿಂಧಪುರಮಂ ಮೂವಳಸಾಗೆ ಮುತ್ತೆ ಪೊಱಮಟ್ಟು ಕಾದಿ ಯಮಮುಖಮನಂಧ್ರಕಂ ಪುಗುವುದುಂ ಕಿಷ್ಕಿಂಧ ಸುಕೇಶರತಿಚಕಿತಚಿತ್ತರಾಗಿ ಪೋಗಿ ಪಾತಾಳಲಂಕೆಯಂ ಪೊಕ್ಕಿರ್ಪುದುಮಶನಿವೇಗಂ ಸುಕೇಶನ ರಾಜಧಾನಿಯಪ್ಪ ಲಂಕೆಯಂ ನಿರ್ಘಾತಂಗೆ ಕೊಟ್ಟು ನಿಜ ರಾಜಧಾನಿಗೆ ಪೋಗಿ ಕತಿಪಯದಿನದೊಳೊರ್ಮೆ ಹರ್ಮ್ಯಾಗ್ರಭೂಮಿಯೊಳಿರ್ದು ನೆಗೆದ ಮುಗಿಲಂ ನೋಡುತ್ತುಮಿರ್ಪುದುಂ—

ಪೃಥ್ವಿ॥ ಘನಂ ಕರಗೆ ಕಂಡು ಕಂಡಶನಿವೇಗ ವಿದ್ಯಾಧರಂ।
ಘನೋಪಲದ ಮಾಟ್ಕೆಯಿಂ ಕರಗೆ ತೃಷ್ಣೆ ಸಾಮ್ರಾಜ್ಯದೊಳ್॥
ಮನಸ್ವಿ ನಿಲವೇೞ್ದು ತನ್ನ ಸುತನಂ ಸಹಸ್ರಾರನಂ।
ಜಿನೇಂದ್ರ ಮುನಿರೂಪಮುಂ ತಳೆದನಸ್ತ ಸಂತಾಪಮಂ ॥ ೧೨೭ ॥

ಅಂತಾತಂ ಜಾತರೂಪಧರನಪ್ಪುದುಮಿತ್ತ ಕಿಷ್ಕಿಂಧನುಂ ಮಧುಪರ್ವತದ ಮೇಳೆ ಪುರಮಂ ಮಾಡಿ ಶ್ರೀಮಾಲೆಯೊಳ್ ಕೂಡಿ ಸುಖಮಿರ್ಪುದುಂ—

ಕಂ॥ ಆ ಕ್ಷೋಣೀಶ್ವರ ವಲ್ಲಭೆ
ಋಕ್ಷಜ ಸೂರ್ಯಜ ತನೂಜರಂ ಪಡೆದು ಸರೋ॥
ಜಾಕ್ಷಿಯನನಂತರಂ ಶುಭ
ಲಕ್ಷಣೆಯಂ ಸೂರ್ಯಮಾಲೆಯಂ ಸತಿ ಪಡೆದಳ್ ॥ ೧೨೮ ॥

ಆಕೆಯಂ ಮೇಘಪುರಮನಾಳ್ವ ಮೇರುಸುತನಪ್ಪ ಸಿಂಹಮರ್ದನಂಗೆ ಕೊಟ್ಟೊಡಾತಂ ಕರ್ಣಪರ್ವತದೊಳ್ ಕರ್ಣಕುಂಡಲಮೆಂಬ ಪುರಮಂ ಮಾಡಿ ಮನೋರಾಗದಿನಿರ್ಪುದುಮಿತ್ತಲ್—

ಕಂ॥ ಗಗನೇಚರ ಕೈರವ ಕುಲ
ಮೃಗಧರನೆನಿಸಿದ ಸುಕೇಶನಂಗನೆಗಾದರ್॥
ಪಗೆಯನಗೆಯೆತ್ತಲಿಂದ್ರಾ
ಣಿಗೆ ಮಾಲಿ ಸುಮಾಲಿ ಮಾಲ್ಯವಂತ ಸುತರ್ಕಳ್ ॥ ೧೨೯ ॥

ಅಂತವರ್ ನವ ಯೌವನ ಪ್ರಾಪ್ತರುಂ ಸಾಧಿತ ಸಕಲ ವಿದ್ಯರುಮುದಾರ್ಯ ವೀರ್ಯರುಮಪ್ಪುದಱಿಂ ಮೆಚ್ಚಿದ ದೆಸೆಯೊಳ್ ಮೆಚ್ಚಿದಂತೆ ಬಿಚ್ಚತಂ ಕ್ರೀಡಿಸುತ್ತುಮಿರೆ ಸುಕೇಶನವರಂ ಕರೆದು ದಕ್ಷಿಣ ಸಮುದ್ರಕ್ಕೆ ಪೋಗದಿರಿಮೆಂಬುದುಮುವರದೇಕಾರಣಮೆನೆ ಸುಕೇಶನಿಂತೆಂದಂ ತೋಯದವಾಹನನಿಂ ತೊಡಗಿ ನಮ್ಮನ್ವಯಾಗತಮಪ್ಪ ಲಂಕಾಪುರಮನಶನಿವೇಗನೆೞೆದುಕೊಂಡು ನಿರ್ಘಾತಂಗೆ ಕೊಟ್ಟೊಡವನನೇಕವಿದ್ಯೆಗಳಿನಾರ್ಗಂ ದುಷ್ಪ್ರವೇಶಮೆನೆ ಕಾಪಂಮಾಡಿ ಬಲಿಷ್ಠನಾಗಿರ್ದನಾತಂ ನಿಮ್ಮಂ ಕಂಡೊಡೆ ಕೊಲ್ಗುಮೆಂದು ಬಾರಿಸಿದೆನೆಂಬುದುಮುವರದರ್ಕೆ ಮನದೊಳೆ ಕನಲ್ದು—

ಕಂ॥ ಇನ್ನೆವರಂ ಕುಲ ಪರಿಭವ
ಮನ್ನಿಮ್ಮಡಿ ಪೇೞದಿರ್ದಿರಾಲಿಸಿ ತಡೆದಂ॥
ದುನ್ನತಿ ಪಿಂಗುಗುಮೆಂದು
ತ್ತನ್ನ ಕ್ರೋಧರ್ ದವಾಗ್ನಿಯಂತುರಿದೆೞ್ದರ್ ॥ ೧೩೦ ॥

ಅಂತು ಕಲುಷ ವಶಗತರಸಂಖ್ಯಾತ ಬಲ ಸಮೇತರಾಗಿ ಪಾತಾಳಲಂಕೆಯಂ ಪೊಱಮಟ್ಟು ಮರುನ್ಮಾರ್ಗದಿಂ ಬಂದಶಂಕಿತರ್ ಲಂಕೆಯಂ ಮುತ್ತುವುದುಂ—

ಕಂ ॥ ಸೆರಗಂ ಬೆರಗಂ ಬಗೆಯದೆ
ಪುರಮಂ ಪೊಱಮಟ್ಟು ಕಾದಿ ಮಾಲಿಯ ಬಾಹಾ ॥
ಪರಿಘ ನಿಶಿತಾಸ್ತ್ರ ಹತಿಯಿಂ
ಸುರಲೋಕ ಪ್ರಾಪ್ತನಾದನಾ ಸಿರ್ಘಾತಂ ॥ ೧೩೧ ॥

ಘಾತಿಸಿ ರಣಮುಖದೊಳ್ ನಿ
ರ್ಘಾತನನವರೀಟ್ಟು ಕೊಂಡು ಲಂಕಾಪುರಮಂ ॥
ಪಾತಾಳಲಂಕೆಯಿಂ ಪಿತೃ
ಮಾತೃಗಳಂ ಬರಿಸಿ ರಾಜ್ಯಸುಖದಿಂದಿರ್ದರ್ ॥ ೧೩೨ ॥

ಅಂತು ಪಗೆಯನಗೆಯೆತ್ತಿ ಕಳೆದು ಕುಲಪರಿಭವಮಂ ಪಿಂಗಿಸಿ—

ಕಂ ॥ ಉಭಯ ಶ್ರೇಣಿಯ ಖಚರ
ಪ್ರಭುಗಳ[1]ನದಟಲೆದು ಕಪ್ಪಮಂ ಕೊಂಡು ಮಹಾ ॥
ವಿಭವಮನೊಳಕೊಂಡರ್ ಪು
ಣ್ಯಭಾಗಿಗಳ್ ಬಾಹುವೀರ್ಯಮನಿವಾರ್ಯಮೆನಲ್ ॥ ೧೩೩ ॥

ಅಂತು ಕೆಲವುಕಾಲಂ ಪೋಪುದುಮವರ ತಂದೆ ಸುಕೇಶನಧಿರಾಜ ಯುವ ರಾಜಪಟ್ಟಮನವರ್ಗೆ ಕಟ್ಟಿ ಕಿಷ್ಕಿಂಧಂಬೆರಸು ತಪಸ್ಸ್ಥನಪ್ಪುದುಂ ಮತ್ತಿತ್ತಲ್ ರಥ ನೂಪುರಚಕ್ರವಾಳಪುರಮನಾಳ್ವ ಸಹಸ್ರಾರ ಖಚರವಲ್ಲಭಂ ನಿಜಮಹಾದೇವಿಗೆಳವಸಿ ಱೊಳಿಂದ್ರನ ವಿಭೂತಿಯಂ ನೋಳ್ಪ ಬಯಕೆ ಸಮನಿಸುವುದುಂ ವಿದ್ಯೆಯಿಂ ತದ್ವಿ ಭೂತಿಯಂ ತೋಱಿ ಬಯಕೆಯಂ ತೀರ್ಚೆ ನವಮಾಸಮಪ್ಪುದುಂ—

ಕಂ ॥ ಜನಿಯಿಸೆ ತನಯಂ ಬಾಂಧವ
ಜನಮಿಂದ್ರ ವಿಭೂತಿಯಂ ತದಂಬಿಕೆ ಮುನ್ನಂ ॥
ಮನದೊಳ್ ಬಯಸಿದುದಱಿನಿಂ
ದ್ರನೆಂದು ಬಿತ್ತರಿಸೆ ನಾಮಕರಣೋತ್ಸವಮಂ ॥ ೧೩೪ ॥

ಆತನನುಕ್ರಮದಿಂ ಬಳೆದು ನವ ಯೌವನ ಪ್ರಾಪ್ತನಾಗಿ ಸಾಧಿತ ಸಕಲ ವಿದ್ಯ ನುಭಯಶ್ರೇಣಿಯಂ ಬಾಯ್ಕೇಳಿಸಿ ಸಕಲ ಚಕ್ರವರ್ತಿ ಪದಮಂ ಪಡೆದು ತನ್ನ ವಿಜ

---

1. ನಾಟಂದು. ಗ. ಚ.

ಯಾರ್ಧನಗಮಮಂ ನಾಕಮೆಂದು ತನ್ನ ಖಚರ ಕಾಂತೆಯರ ನೂರ್ವಶಿ ರಂಭೆ ಸುಕೇಶಿ ಯರೆಂಬ ದೇವಕಾಂತೆಯರೆಂದು ತನ್ನ ವಾರಣಮನೈರಾವಣಮೆಂದು ತನ್ನಶ್ವಮ ನುಚ್ಚೈಶ್ಶ್ರವಮೆಂದು ತನ್ನನುಚರನಂ ಹರಿಣಕೇಸರಿವೆಸರ ಪಡೆವಳನೆಂದು ತನ್ನ ಗಾಯಕರಂ ತುಂಬುರು ನಾರದರೆಂದು ತನ್ನ ಮುಖ್ಯಪುರುಷರಂ ಲೋಕಪಾಲಕ ರೆಂದು ತನ್ನ ಸಭೆಯಂ ಸುಧರ್ಮೆಯೆಂದು ತನ್ನ ಸೇನೆಯಂ ದೇವಸೇನೆಯೆಂದು ತನ್ನ ಸಾಮಾನ್ಯಾಯುಧಮಂ ಕುಲಿಶಾಯುಧಮೆಂದು ತನ್ನ ವಿಮಾನಮಂ ಋತು ವಿಮಾನಮೆಂದು ತನ್ನ ಪುರೋಹಿತರನಶ್ವಿನ್ಯಾದ್ಯಷ್ಟವಸುಗಳೆಂದು ತನ್ನ ಕಿನ್ನರ ಪುರದವರ್ಗಳಂ ಕಿನ್ನರರೆಂದು ತನ್ನ ಗಂಧರ್ವಪುರದವರ್ಗಳಂ ಗಂಧರ್ವರೆಂದು ತನ್ನ ಯಕ್ಷಪುರದವರ್ಗಳಂ ಯಕ್ಷರೆಂದು ತನ್ನ ಮಂತ್ರಿಮುಖ್ಯನಂ ಬೃಹಸ್ಪತಿ ಯೆಂದು ತಾನಿಂದ್ರನಲ್ಲದೆಯುಂ ತನ್ನನಿಂದ್ರನಾಗೆ ಬಗೆದು ನಾಲ್ವತ್ತೆಣ್ಬಾಸಿರಮಂತಃ ಪುರಕ್ಕಧಿಪನಾಗಿ ಪುರಾಕೃತ ಪುಣ್ಯದಿಂ ಸುಖಮನನುಭವಿಸುತ್ತಿರೆ—

ಉ ॥ ಮಾಲಿಗೆ ಕಪ್ಪಮೀವ ಖಚರರ್ ಪಿಡಿದಿಂದ್ರನ[1]ನೀಯದಾಜ್ಞೆಯಂ ।
ಪಾಲಿಸಲೊಲ್ಲದೇಳಿಸುವುದುಂ ಚರರಿಂದಱಿದುಗ್ರ ಕೋಪಮು ॥
ನ್ಮೀಲಿಸೆ ಮೇಱೆದಪ್ಪಿದ ಬಲಂಬೆರಸಿಂದ್ರನನಾಗಳುಂತೆ ನಿ ।
ರ್ಮೂಲಿಸಲೆಂದು ಕೇಱೆ ನಡೆದೆಯ್ದಿದನಾ ವಿಜಯಾರ್ಧಶೈಲಮಂ ॥ ೧೩೫ ॥

ಅಂತು ತನ್ನೊಡವುಟ್ಟಿದ ಸುಮಾಲಿ ಮಾಲ್ಯವಂತರುಂ ಕಿಷ್ಕಿಂಧನ ಮಕ್ಕ ಳಪ್ಪ ಋಕ್ಷಜ ಸೂರ್ಯಜರುಂ ಪೆಱರಱೆಯ ನಾಯಕರುಂ ಬೆರಸಸಂಖ್ಯಾತ ಸೇನಾಸಮನ್ವಿತನೆತ್ತಿ ಬರ್ಪುದನಿಂದ್ರಂ ಕೇಳ್ದು ರಥನೂಪುರಚಕ್ರವಾಳಪುರದಿಂದಿದಿರೆತ್ತಿ ಬಂದೈರಾವಣಾರೂಢಂ ಲೋಕಪಾಲ ಪುರಸ್ಸರಂ ಮಹಾಯುದ್ಧಂಗೆಯ್ವುದುಂ—

ಕಂ ॥ ಮಾಲಿ ಮುಳಿಸಿಂದಮಿಂದ್ರನ
ಮೇಲೆ ನಿಶಾತಾಸ್ತ್ರ ವರ್ಷಮಂ ಕಱೆವುದುಮಾ ॥
ಮಾಲಿಯನಿಂದ್ರಂ ದಿವ್ಯ ಶ
ರಾಲಿಯಿನೆಚ್ಚಂತಕಂಗೆ ಬಾಣಸು ಗೆಯ್ದಂ ॥ ೧೩೬ ॥

ಅದಂ ಕಂಡು ಸುಮಾಲಿ ಮಾಲ್ಯವಂತರುಂ ಋಕ್ಷಜ ಸೂರ್ಯಜರುಂ ಪೆಱರು ಮಱೆಯ ನಾಯಕರುಂ ಬಿಱೆತೋಡಿಪೋಗಿ ಪಾತಾಳಲಂಕೆಯಂ ಪೊಕ್ಕರಾಗ ಳಪಹಾರ ತೂರ್ಯಮಂ ಪೊಯಿಸಿ—

---

1. ನಾತನಾಜ್ಞೆಯಂ. ಗ. ಘ

ಕಂ ॥ ಪ್ರಥಿತ ಪೃಥುಭುಜ ಸಹಾಯಂ
ಮಥಿಯಿಸಿ ರಿಪುಬಲಮನಾಜಿಯೊಳ್ ಪೂರ್ಣಮನೋ ॥
ರಥನಿದಿರ್ಗೊಳೆ ಪೌರಜನಂ
ರಥನೂಪುರಚಕ್ರವಾಳಪುರಮಂ ಪೊಕ್ಕಂ ॥ ೧೩೭ ॥

ಅಂತು ಗೆಲ್ಲಂಗೊಂಡು ಯಕ್ಷಪುರಮನಾಳ್ವ ವಿಶ್ವಾವಸುಗಂ ರೋಹಿಣಿಗಂ ಪುಟ್ಟಿದ ವೈಶ್ರವಣಂಗೆ ಲೋಕಪಾಲವೆಸರ ಪಟ್ಟಮಂ ಕಟ್ಟಿ ಲಂಕೆಯಂ ಕೊಟ್ಟು ಯಮಧರನೆಂಬ ವಿದ್ಯಾಧರಂಗೆ ಲೋಕಪಾಲವೆಸರನಿತ್ತು ಕಿಷ್ಕಿಂಧಪುರಮಂ ಕೊಟ್ಟು ಮತ್ತಂ ತನ್ನನಿಂದ್ರನಾಗಿ ಭಾವಿಸಿ ಸುಖಮಿರ್ಪುದುಮಿತ್ತಲ್—

ಕಂ ॥ ಪಾತಾಳಲಂಕೆಯೊಳ್ ಸಂ
ಪ್ರೀತಿ ಪೊದಟ್ದಿರೆ ಸುಮಾಲಿ ಖೇಚರಪತಿಗಂ ॥
ಪ್ರೀತಿಮತಿಗಂ ಜಗದ್ವಿ
ಖ್ಯಾತಂ ರತ್ನಶ್ರವಂ ತನೂಭವನಾದಂ ॥ ೧೩೮ ॥

ಆತನತಿಪ್ರಖ್ಯಾತನಾಗಿ ಪುಷ್ಪೋತ್ತರಮೆಂಬ ಮಹಾಗಹನದೊಳ್ ವಿದ್ಯೆಗಳಂ ಸಾಧಿಸಿ ಸಿದ್ಧಪರಮೇಷ್ಠಿಗಳಂ ಸ್ತುತಿಯಿಸುತ್ತಿರ್ಪ ಸಮಯದೊಳ್ ಕೌತುಕಮಂಗಳ ಪುರಮನಾಳ್ವಂ ವ್ಯೋಮಭಾನುವೆಂಬಂ ವ್ಯೋಮಚರಂ ನಿಜ ತನೂಜೆಯಪ್ಪ ಕೈಕಸಿ ಯೆಂಬ ಕನ್ಯಾರತ್ನಮಂ ದಿವ್ಯಮುನಿಮುಖ್ಯರಾದೇಶದಿಂ ತನಗೆ ತಂದು ಕುಡು ವುದುಮಲ್ಲಿಯೆ ವಿದ್ಯೆಯಿಂ ಪುಷ್ಪೋತ್ತರಮೆಂಬ ಪೊೞಲಂ ಮಾಡಿಸಿ ಪಿತೃಮಾತೃ ಗಳಂ ಬರಿಸಿ ಶುಭದಿನ ಮುಹೂರ್ತದೊಳಾಕೆಯಂ ಮದುವೆನಿಂದು ನಿರಂತರೋತ್ಸವ ದಿನಿರ್ಪುದುಮೊಂದು ದಿವಸಮಾ ಕೈಕಸಿ ಚತುರ್ಥಸ್ನಾನಾನಂತರಂ ನಿಜಮನೋ ವಲ್ಲಭನ ಸೂೞ್ಗೆ ವಂದು—

ಕಂ ॥ ಹರಿಯಂ ಹಿಮಕರನಂ ಖರ
ಕರನಂ ಬೆಳಗಪ್ಪ ಜಾವದೊಳ್ ಕನಸಿನೊಳಾ ॥
ಹರಿಣಾಕ್ಷಿ ಕಂಡು ಗೃಹವನ
ಮರಾಳ ಸಾರಸ ರವಂಗಳಿಂದೆೞ್ಚತ್ತಳ್ ॥ ೧೩೯ ॥

ಅಂತುಪ್ಪವಡಿಸಿ ತನ್ನ ಕಂಡ ಕನಸುಗಳನನುಕ್ರಮಂದಪ್ಪದಱಿಪುವುದುಂ—

ಮ ॥ ಭರತಾರ್ಧಕ್ಕಧಿರಾಜನಪ್ಪ ಸುತನಂ ಪೆತ್ತಪ್ಪೆ ತನ್ವಂಗಿ ಕೇ ।
ಸರಿಯಂ ಕಂಡುದರಿಂ ಕಲಾಕುಶಲನಂ ತತ್ವಜ್ಞನಂ ಪೆತ್ತಪೈ ॥
ಹರಿಣೀಲೋಚನೆ ನಿಶ್ಚಯಂ ಕನಸಿನೊಳ್ ಶೀತಾಂಶುವಂ ಬಾಲಭಾ ।
ಸ್ಕರನಂ ಕಂಡುದಱಿಂದಮೆಂದಱಿಯೆ ಪೇೞ್ದಂ ತತ್ಫಲಪ್ರಾಪ್ತಿಯಂ ॥ ೧೪೦ ॥

ಅಂತು ರತ್ನಶ್ರವಂ ಶುಭಸ್ವಪ್ನ ಫಲನಿರೂಪಣಂ ಮಾಳ್ಪುದುಮಾ ನಿತಂಬಿನಿ ನಿರವಧಿ ಪ್ರಮೋದಮಂ ತಳೆದು ಯಥಾಕ್ರಮದಿನನುದಿನಂ ಗರ್ಭಂ ಬಳೆಯೆ ವಳೆಯೆ—

ಕಂ ॥ ಅಲಸುವುದಿಲ್ಲಾಗುಳಿಕೆಯು
ಪೊಲಸಿಲ್ಲ ಬೞಲ್ವುದಿಲ್ಲ ಕೃಶತೆಯು ದೆಸೆಯಿಂ ॥
ಲ್ಲಲಘುಪರಾಕ್ರಮಿ ಬಸಿಱೊಳ್
ನೆಲಸಿದ ಮೆಯ್ಗಲಿ ತನೂಜನೆಂದಱಿಪುವವೋಲ್ ॥ ॥ ೧೪೧ ॥

ಹೂಂಕಾರ ಪೂರ್ವಕಂ ಕ
ಣ್ಣಿಂ ಕೆಚ್ಚನೆ ಗೆಯ್ದು ದೆಸೆಗಳಂ ನೋಳ್ಪಳ್ ಮ ॥
ತ್ತಂ ಕೂರಸಿಯೊಳ್ ನಿಜಮುಖ
ಪಂಕಜಮಂ ಸುತನ ದರ್ಪಮಂ ಸೂಚಿಪವೋಲ್ ॥ ೧೪೨ ॥

ಭರತ ತ್ರಿಖಂಡ ಮಂಡಲ
ಪರಿರಕ್ಷಣ ದಕ್ಷನೀ ತನೂಭವನೆಂಬೀ ॥
ಪರಮೋತ್ಸವಮಂ ಪೇೞ್ವಂ
ತಿರೆ ಪುರದೊಳ್ ಕುಸುಮವೃಷ್ಟಿ ಕಱೆದುದು ನಿಚ್ಚಂ ॥ ೧೪೩ ॥

ಚ ॥ ರಣ ರಸಿಕಂ ಜಗದ್ವಿಜಯಿ ಖೇಚರ ಕಾಂತೆಯ ಗರ್ಭದರ್ಭಕಂ ।
ರಣದೊಳನೇಕ ವೈರಿನೃಪರಂ ತವೆ ಕೊಂದು ತದೀಯ ಮಾಂಸದಿಂ ॥
ತಣಿಪುಗುಮೆಮ್ಮನೆಂದು ಪರಮೋತ್ಸವದಿಂ ಪಱಿಗುಟ್ಟಿ ಬಿಚ್ಚತಂ ।
ಕುಣಿದುವು ಭೂತಕೋಟಿ ಗಗನೇಚರ ವಲ್ಲಭ ರಾಜಧಾನಿಯೊಳ್ ॥ ೧೪೪ ॥

ಇಂತಿವಱ ತೋರ್ಕೆಯಿಂ ಗರ್ಭದರ್ಭಕನಳುರ್ಕೆಯುಮುದಟುಮಖಿಲ ಜನ ಪ್ರತೀತಮಾಗೆ ನವಮಾಸಂ ನೆಱೆಯೆ ಕೂಸಂ ಪೆತ್ತು ದಶಮ ದಿನದೊಳ್ ಭೀಮನೆಂಬ ರಾಕ್ಷಸಂ ಕೊಟ್ಟ ನವ ಮುಖ ರತ್ನ ಭೂಷಣದ ಮಾಣಿಕಂಗಳೊಳಾತನ ಮುಖಂ ಪ್ರತಿಬಿಂಬಿಸೆ ದಶಮುಖನೆಂದು ಪೆಸರನಿಟ್ಟು ಮತ್ತಂ ಭಾನುಕರ್ಣನುಂ ಚಂದ್ರನಖಿಯುಂ ವಿಭೀಷಣನುಮೆಂಬ ಮಕ್ಕಳನನುಕ್ರಮದಿಂ ಪೆತ್ತೊಡವರ್ ಬಳೆದು ಶೈಶವಮನತಿಕ್ರಮಿಸಿ ಪ್ರಭು ಮಂತ್ರೋತ್ಸಾಹ ಶಕ್ತಿತ್ರಯಮೆ ಮೂರ್ತಿಗೊಂಡಂತೆ ಮೂವರುಮಖಿಲಶಾಸ್ತ್ರ ಪಾರಾವಾರ ಪಾರಗರೊಂದುದಿವಸಮಾಸ್ಥಾಯಿಕಾ ಮಧ್ಯ ನಾಯಕ ರತ್ನಂಗಳಂತಿರ್ದ ಸಮಯದೊಳ್—

ಮ ॥ ಶ್ರವಣಾನಂದಮನುಂಟುಮಾಡೆ ಮಣಿಘಂಟಾ ನಿಸ್ವನಂ ಕೇತು ಪ ।
ಲ್ಲವ ಹಸ್ತಾಭಿನಯಂಗಳಂ ಮಣಿ ವಿಮಾನಶ್ರೇಣಿಗಳ್ ಬೀಱೆ ವೈ ॥
ಶ್ರವಣಂ ಕಾಮನ ಬಿಲ್ಗಳಂ ಕೆದಱೆ ಭೂಷಾ ಪಂಚರತ್ನಾಂಶುಗಳ್ ।
ದಿವಿಜೇಂದ್ರಂ ಖಚರೇಂದ್ರನಲ್ಲನೆನೆ ಪೋಗುತ್ತಿರ್ದನಾಕಾಶದೊಳ್ ॥ ೧೪೫ ॥

ಅಂತಾತಂ ತೃಣೀಕೃತ ತ್ರಿಭುವನನಾಗಿ ಪೋಗುತಿರ್ಪುದುಂ ದಶಗ್ರೀವನುದ್ಗ್ರೀವನಾಗಿ ಪೋಗುತ್ತಿರ್ಪನೀತನೆತ್ತಣಾತನೆಂಬುದುಂ ಕೈಕಸಿ ದಶಮುಖಂಗಿಂತೆಂದಳೀತನೆಮ್ಮಕ್ಕನ ಮಗಂ ವೈಶ್ರವಣನೆಂಬನುಭಯ ಶ್ರೇಣಿಗರಸನಪ್ಪಿಂದ್ರನೆಂಬ ವಿದ್ಯಾಧರಚಕ್ರವರ್ತಿ ನಿಮ್ಮ ಪಿರಿಯ ಮುತ್ತಮ್ಮನಪ್ಪ ಮಾಲಿಯಂ ಕೊಂದು ನಮ್ಮನ್ವಯದಿಂ ಬಂದ ಲಂಕೆಯಂ ಕೊಟ್ಟೊಡೀತನದನಾಳುತ್ತಿರ್ಪನಾಮುಮಾತಂಗೆ ಭೀತರಾಗಿರ್ಪೆವೆಂದು ದುಃಖಂಗೆಯ್ಯೆ ವಿಭೀಷಣಂ ಬಾರಿಸಿ ನಿಮ್ಮ ಪಗೆಯಂ ಬಗೆದಂತೆ ತೀರ್ಚಿ ದಶವದನಂ ನಿಮಗೆ ಸಂತೋಷಮಂ ಮಾಡಲಾರ್ಕುಮನ್ನೆಗಂ ನಮ್ಮ ಕುಲಕ್ಕೆ ತಕ್ಕ ವಿದ್ಯೆಗಳಂ ಸಾಧಿಸುವೆವೆಂದು ತಾಯ್ಗೆ ಬಿನ್ನವಿಸಿ ಶುಭದಿನ ಮುಹೂರ್ತದೊಳ್—

ಕಂ ॥ ಪಿತೃ ಮಾತೃ ಪಿತಾಮಹರ್ಗಾ
ನತರಾಗಿ ಪಿಶಾಚ ಭೂತ ಕೋಟಿಯಿನತ್ಯ ॥
ದ್ಭುತಮನರಣ್ಯಮನಪ್ರತಿ
ಹತ ಶೌರ್ಯರ್ ಬಂದು ಪೊಕ್ಕರಚಲಿತ ಧೈರ್ಯರ್ ॥ ೧೪೬ ॥

ಆ ಸಾಹಸಿಕರ್ ತತ್ತ್ವಾ
ಭ್ಯಾಸಮನೊಡರಿಸುವ ಮುನಿಯವೋಲ್ ಪೂಣ್ಬನ್ಯ ॥
ವ್ಯಾಸಂಗಂ ಕಿಡೆ ಪಲ್ಯಂ
ಕಾಸನದೊಳ್ ಮೂವರುಂ ಯಥಾಕ್ರಮಮಿರ್ದರ್ ॥ ೧೪೭ ॥

ಅಂತು ದಶಕೋಟಿ ಮಂತ್ರದೊಳ್ ಕೂಡಿದ ಷೋಡಶಾಕ್ಷರ ಮಹಾವಿದ್ಯೆಯಂ ಸಾಧಿಸುತ್ತಿರ್ಪುದುಂ ಜಂಬೂದ್ವೀಪಾಧಿಪತಿಯಪ್ಪನಾದೃತನೆಂಬ ದೇವಂ ಭೌಮ ವಿಹಾರದಿಂ ಬಂದವರಂ ಕಂಡು ವಿದ್ಯಾಸಾಧನೆಗೆ ವಿಘ್ನ ಹೇತುಗಳಪ್ಪನೇಕ ವಿಧ ವಿಕುರ್ವಣೆಯಂ ವಿಗುರ್ವಿಸೆಯುಮವರ್ ಮಂದರದಂತಚಲಿತ ಧೈರ್ಯರಾಗಿರ್ದು ವಿದ್ಯೆಗಳಂ ಸಾಧಿಸಿ ಸಿದ್ಧವಿದ್ಯರ್ ಪಂಚ ಪರಮೇಷ್ಠಿಗಳಂ ಪೂಜಿಸಿದಿಂಬೞಿಯಂ-

ಕಂ ॥ ಆವಿಷ್ಕೃತ ನಿಯಮಂ ತ್ರಿದಿ
ನಾವಧಿಯೊಳಗಣ್ಯ ಪುಣ್ಯ ನಿಲಯಂ ವಿದ್ವಿ ॥
ಡ್ಜೀವಾಕರ್ಷಣ ಪಟುವಂ
ರಾವಣನುಗ್ರಾಸಿ ರತ್ನಮಂ ಸಾಧಿಸಿದಂ ॥ ೧೪೮ ॥

ಅಂತು ಚಂದ್ರಹಾಸಮಂ ಸಾಧಿಸಿ ವಿದ್ಯೆಯಿಂ ಸ್ವಯಂಪ್ರಭವೆಂಬ ಪೊಲಲಂ ಮಾಡಿ ನಿಜ ಪರಿಜನಂಬೆರಸು ಬಂಧುಜನಮುಂ ಬರಿಸಿ—

ಕಂ ॥ ಪಲವುಂವಿದ್ಯೆಯೊಳಂ ಭುಜ
ಬಲದೊಳವಿಾ ದೊರೆಯುರಾರುಮಿಲ್ಲೆನಿಸಿ ಸುಹೃ ॥
ತ್ಕುಲಮಂ ಪಾಲಿಸುವಸುಹೃ
ತ್ಕುಲಮಂ ಸಾಧಿಸುವ ಮನದಳುರ್ಕೆಯಿನಿರ್ದಂ ॥ ೧೪೯ ॥

ಅಂತಿರ್ಪುದುಮಿತ್ತ ಸುರಸಂಗೀತಕಪುರ ಪ್ರಧಾನಂ ಮಯಂ ತನ್ನ ಮಗಳಪ್ಪ ಮಂಡೋದರಿಯುಂ ನೈಮಿತ್ತಿಕಾದೇಶದಿಂ ವಿಮಾನಮನೇಱಿಸಿಕೊಂಡು ಚರ ನಿರೂಪಿತಮಪ್ಪ ಸ್ವಯಂಪ್ರಭ ನಗರಕ್ಕೆ ವಂದು ದಶವದನಂಗೆ ಮಹಾವಿಭೂತಿಯಿಂ ಮದುವೆಯಂ ಮಾಳ್ಪುದುಮನಂತರಂ ಮಯ ಮಾರೀಚಾದಿಗಳಂ ಮನ್ನಿಸಿ ಕಳಿಪಿ ಬೞಿಯಂ ತನ್ನ ವಿದ್ಯೆಗಳಂ ವಿಗುರ್ವಿಸಿ ನೋಡಿ ಹರ್ಷದೊಳ್ ಕೂಡಿ ಭ್ರಾಮ ವಿಹಾರಕ್ಕೆ ಪೋಗುತ್ತುಂ ಮೇಘಶೃಂಗವೆಂಬ ನಗ ನಿತಂಬದಂಬುಜ ಷಂಡದೊಳ್ ಪದ್ಮೆಯುಂ ವಿದ್ಯುತ್ಪ್ರಭೆಯುಮಶೋಕಲತೆಯುಂ ಮೊದಲಾದಱುಸಾಸಿರ್ವರ್ ಕನ್ನೆಯರ್ ನೀರಾಟಮನಾಡುವುದಂ ಕಂಡು ಮನಂಗೊಂಡಾಕೆಗಳಂ ಗಾಂಧರ್ವ ವಿವಾಹದಿಂ ಸ್ವೀಕರಿಸಲ್ಬಗೆವುದುಂ ಕನ್ನೆಯರಿನಾ ವಾರ್ತೆಯನವರಯ್ಯನಪ್ಪ ಸುರ ಸುಂದರಂ ಕೇಳ್ದು ಕನಕಮಾಲಂಬೆರಸು ಮೇಲೆತ್ತಿಬರ್ಪುದುಂ ಕಾದಿ ನಾಗಪಾಶದಿಂ ಕಟ್ಟಿ ಕೊಲಲೊಲ್ಲದೆ ಬಿಟ್ಟು ಕಳೆದುದರ್ಕೆ ಮೆಚ್ಚಿ—

ಕಂ ॥ ಅನಿಬರ್ ಕನ್ನೆಯುರುಮನಾ
ಜನಪತಿ ಪರಿಣಯನ ವಿಭವದಿಂದೀಯೆ ದಶಾ ॥
ನನನೊಸೆದು ಮದುವೆನಿಂದಾ
ತ್ಮ ನಗರಮಂ ಬಂದು ಪೊಕ್ಕನತ್ಯುತ್ಸವದಿಂ ॥ ೧೫೦ ॥

ಅಂತು ಸ್ವಯಂಪ್ರಭ ನಗರಕ್ಕೆ ವಂದು ಕುಂಭಪುರದ ಮಹೋದರಂಗಂ ಸುರೂಪೆಗಂ ಪುಟ್ಟಿದ ವಿದ್ಯುದ್ವೇಗೆಯುಂ ಭಾನುಕರ್ಣಂಗೆ ಮದುವೆಮಾಳ್ಪುದು ಮಾತನಾಕೆಗತಿ ಸ್ನೇಹಿತನಾಗಿ ಕುಂಭಪುರದ ಮಾತುಗಳನಾಗಳುಂ ಮೆಚ್ಚಿ ಕೇಳುತ್ತು ಮಿರ್ದೊಡಾತಂಗೆ ಕುಂಭಕರ್ಣಾಭಿಧಾನಮಾಯ್ತು ಮತ್ತಂ ಜ್ಯೋತಿಃಪ್ರಭ ಪುರಮನಾಳ್ವ ಶುದ್ಧಕಮಲಂಗಮಾನಂದಮಾಲೆಗಂ ಪುಟ್ಟಿದ ರಾಜೀವಸರಸೆಯೆಂಬ ಕನ್ನೆಯಂ ವಿಭೀಷಣಂಗೆ ಮದುವೆಮಾಡಿ ಸುಖದಿನಿರೆ—

ಕಂ ॥ ಮಂಡೋದರಿ ಪಡೆದಳ್ ಮು
ನ್ನಿಂದಗಿಯಂ ಬೞಿಕೆ ಮೇಘವಾಹನನಂ ಶ ॥

ತ್ರುಂದಮರನಮಿತ ಬಲರಂ
ನಂದನರಂ ಖೇಚರಾನ್ವಯಾನಂದನರಂ ॥ ೧೫೧ ॥

ಅಪರಾಶಾ ದಂತಿಗೆ ನಿ
ಗ್ಗವಂಗಳಾದಂತೆ ತನಗೆ ನೆರವಾಗೆ ಮಹೋ ॥
ತ್ಸವಮನದೇಂ ತಳೆದನೊ ಖಚ
ರ ವಲ್ಲಭಂ ಕಳೆಯಲೆಂದು ಕುಲ ಪರಿಭವಮಂ ॥ ೧೫೨ ॥

ಉ ॥ ಲಂಕೆಯನನ್ವಯಾಗತಮನೆಮ್ಮ ಪಿತಾಮಹನಪ್ಪ ಮಾಲಿಯಂ ।
ಮುಂ ಕಡುಕೆಯ್ದು ಕೊಂದೆಟಿದುಕೊಂಡನನಿಕ್ಕಿದೊಡೆನ್ನ ಬಾಹುವೀ ॥
ರ್ಯಂ ಕಡು ನೊಚ್ಚಿತಕ್ಕುಮೆನುತುಂ ಮನದುಮ್ಮಳದಿಂ ಕನಲ್ದು ವೀ ।
ತಾಂಕುಶನೆತ್ತಿದಂ ಮುಳಿದು ಲಂಕೆಗನೂನ ಬಲಂ ದಶಾನನಂ ॥ ೧೫೩ ॥

ಅಂತು ಮಹಾಬಲ ಸಹಿತನಾಗಿ ಲಂಕೆಗೆತ್ತುವುದುಂ ವೈಶ್ರವಣನದಂ ಕೇಳ್ದು ತಾನುಮಿದಿರೆತ್ತಿ ಬಂದುಭಯಬಲಮುಂ ತಾಗಿ ಕಾದುತ್ತುಮಿರೆ ಧನದಃ ದಶವದನನಂ ಮುಟ್ಟೆವಂದು ನೀಂ ಮದೀಯ ಜನನಿಯನುಜೆಯ ತನುಜನಪ್ಪುದರಿಂ ನಿನ್ನೊಳೆನಗೆ ಕಾಳೆಗಮುಚಿತಮಲ್ತು ತೊಲಗಿ ಪೋಗೆಂಬುದುಂ ದಶವದನಂ ನಸುನಕ್ಕು ಕಲಹಕ್ಕೆ ವಂದು ನಣ್ಪುದೋರ್ಪೊಡವಸರಮಲ್ತು ಕೈದುಗೆಯ್ಯೆಂದು ಕಡುಕೆಯ್ದು ನಿಲ್ವುದುಂ—

ಕಂ ॥ ಮುನಿಸಿಂದಿಸೆ ವೈಶ್ರವಣಂ
ದನುಜನದಂ ಕಡಿದು ಕಳೆದು ನಿಶಿತಾಸ್ತ್ರದಿನಾ ॥
ತನ ತಲೆಯುಮನಿರ್ಬಗಿಯ
ಪ್ಪಿನಮೆಚ್ಚಂ ಮೂರ್ಛೆವೋಗಿ ಬೀೞ್ತಿರ್ಪಿನೆಗಂ ॥ ೧೫೪ ॥

ಅಂತು ಮೂರ್ಛೆವೋದನಂ ವಿಯಚ್ಚರಾನುಚರರ್ ವಿಮಾನದೊಳಿಟ್ಟು ವಿಜಯಾರ್ಧನಗಕ್ಕುಯ್ವುದುಂ ದಶಾನನಂ ಪುಷ್ಪಕ ವಿಮಾನಮಂ ಕಳೆದುಕೊಂಡು ಜಯಪತಾಕೆಯನೆತ್ತಿಸಿ ನಿಜ ಸ್ವಯಂಪ್ರಭಪುರಕ್ಕೆ ಪೋಪುದುಮಿತ್ತಲ್—

ಕಂ ॥ ಸೇನಾಮುಖದೊಳ್ ಭಂಗಮ
ನಾನೆಯ್ದಿದೆನೆಂದು ವಿಶ್ರುತಂ ವೈಶ್ರವಣಂ ॥
ಮಾನಧನಂ ವೈರಾಗ್ಯಾ
ಧೀನ ಮನಂ ಜೈನದೀಕ್ಷೆಯಂ ಕೈಕೊಂಡಂ ॥ ೧೫೫ ॥

ಅಂತು ನಿಶ್ಶಲ್ಯನಾಗಿ ವಿನಯಂಧರ ಚಾರಣರ ಸಮೀಪದೊಳ್ ತಪಂಗೆಯ್ದು ಪವರ್ಗಶ್ರೀಯನಾಲಿಂಗಿಸಿದನಿತ್ತ ದಕ್ಷಿಣಸಮುದ್ರ ವೇಳಾ ನಿವಾಸಿಗಳಪ್ಪ ಇಂದ್ರನ ಸಾಮಂತರೆಲ್ಲರುಮಂ ಬಾಯ್ಕೇಳಿಸಿ ಮತ್ತಮೊರ್ವೆ ಹಸ್ತ ಪ್ರಹಸ್ತ ಸುಮಾಲಿ ಮಾಲ್ಯವಂತ ಪ್ರಮುಖ ಸಹಿತಂ ಪುಷ್ಪಕ ವಿಮಾನಾರೂಢನಾಗಿ ಮಹಾಬಲಂಬೆಗಸು ಗಗನಮಾರ್ಗದಿಂ ನಡೆದು—

ಕಂ ॥ ಬಡಗಣ ದೆಸೆಯುಂ ಸಾಧಿಸ
ಲೊಡರಿಸಿ ಭೂಚರ ವಿಯಚ್ಚರೇಶ್ವರರಂ ತ ॥
ನ್ನಡಿಗೆರಗಿಸಿ ದಶಕಂಠಂ
ಪಡೆದಂ ದೆಸೆವೆಣ್ಗೆ ಕೀರ್ತಿ ಮಣಿಕಂಠಿಕೆಯಂ ॥ ೧೫೬ ॥

ಅಂತು ನಿಖಿಲ ರಾಜಕಮನದಿರ್ಪಿ ಕಪ್ಪಂಗೊಂಡು ಕೈಲಾಸನಗದ ಸಮ್ಮೇದ ಗಿರಿಯ ನಡುವಣ ಸುರದಾರು ವನೋಪಕಂಠದೊಳ್ ಬೀಡಂ ಬಿಟ್ಟಿರ್ಪ್ಪುದುಂ—

ಕಂ ॥ ದೆಸೆ ಕಿವುಡುವೀಟ್ಟಿನಂ ತೆರೆ
ಮಸಗಿದ ಮುನ್ನೀರ ಪೆರ್ಚಿದುಳ್ಳೊಳಮಂ ಬೆ ॥
ರ್ಚಿಸಿ ಕಾರಮುಗಿಲ ಮೊಳಗಂ
ಮಸುಳಿಸಿ ಪೊಣ್ಮಿತ್ತು ಬೃಂಹಿತಂ ಕಾನನದೊಳ್ ॥ ೧೫೭ ॥

ಆ ನಿನದಂ ಕಿವಿಗೆಯ್ತರೆ
ದಾನವಪತಿ ಭದ್ರಗಜದ ಬೃಂಹಿತಮೆಂದಾ ॥
ಕಾನನಮಂ ಪುಗುತಂದು ಮ
ದಾನೇಕಪದೊಂದು ಪಿರಿಯ ಕಡುಪಂ ಕಂಡಂ ॥ ೧೫೮ ॥

ಆ ಕಾಡಾನೆಯ ಕಡುಪಿನ ನಡುವೆ—

ಚ ॥ ಬೆದಱಿ ಮನಂ ವನಸ್ಥಲದೊಳೊಂದಿಭಮಿರ್ದುದು ಮೂರ್ಧ ಪಿಂಡಮ ।
ಲ್ಲಿದು ಶಿಖರಸ್ಥಲಂ ನಿಟಿಲವಲ್ಲಿದು ಪಾಸಱಿ ಕರ್ಣತಾಳಮ ॥
ಲ್ಲಿದು ಚಲ ಪಕ್ಷಸಂಹತಿ ಮದಪ್ಲವಮಲ್ಲಿದು ನಿರ್ಝರ ಪ್ಲವಂ ।
ಮದಗಜವಲ್ಲಿದಿಂದ್ರನೊಳಿದಿರ್ಚಿದ ನೀಲ ನಗೇಂದ್ರಮೆಂಬಿನಂ ॥ ೧೫೯ ॥

ಅಂತಿರ್ದ ಸಕಲ ಶುಭಲಕ್ಷಣಾಕಾರಮುಮತ್ಯಾಯತ ಕರಮುಮಿಂದ್ರನೀಲ ಚ್ಛಾಯಮುಂ ಮಹಾಕಾಯಮುಮಪ್ಪ ಭದ್ರಗಜಮಂ ಕಂಡು ಮನದೆ ಕೊಂಡೆ ನಗೆ ಪಟ್ಟವರ್ಧನಮಾಗಲಿದುವೆ ತಕ್ಕುದೆಂದು ಮುನ್ನಮಿಂದ್ರಂಗಂ ಪಿಡಿಯಲೀಯ ದಶಿವರ್ತಿಯಂ ದಾನವ ಚಕ್ರವರ್ತಿ ವಿದ್ಯೆಯಿನಶ್ರಮದೊಳೆ ಪಿಡಿದಾ ಮಹಾಗಜ

ಮಂ ತ್ರಿಜಗದ್ಭೂಷಣ ನಾಮಧೇಯಂಮಾಡಿ ಬೀಡಿಂಗೆ ಮಗುೞ್ಬರ್ಪುದುಮಾ ಸಮಯದೊಳ್—

ಕಂ ॥ ನೆತ್ತರ ಪನಿಗಳ್ ಮೆಯ್ಯೊಳ್
ಪತ್ತಿರೆ ಭೋರೆಂದು ಬಂದು ಗಗನಸ್ಥಲದಿಂ ॥
ಮತ್ತೊರ್ವಂ ದೂತಂ ಚಲ
ಚಿತ್ತಂ ಸರ್ವಾಂಗ ವಿನಯ ವಿನಮಿತನಾದಂ ॥ ೧೬೦ ॥

ಆಗಿ ದೇವ ಶಾಖಾಬಲಿಯೆಂಬೆನಾಂ ವಾನರಧ್ವಜಾನುಚರನೆಂ ಸೂರ್ಯಜನುಂ ಋಕ್ಷಜನುಂ ನಿನ್ನಾಜ್ಞೆಯಂ ನೆರಂಬಡೆದು ಪಾತಾಳಲಂಕೆಯಿಂದೆತ್ತಿ ಪೋಗಿ ನಿಜಾನ್ವಯಾಗತಮಪ್ಪ ಕಿಷ್ಕಿಂಧಪುರಮಂ ಕೊಳಲೆಂದು ಪರಿದು ಮುತ್ತಿಕೊಳ್ವುದುಂ ಪೊಱಮಟ್ಟು ಕಾದಿ —

ಕಂ ॥ ವಿಜಿಗೀಷು ಬಲ್ಪಿನಿಂ ಋ
ಕ್ಷಜನಂ ಸೆಱೆವಿಡಿಯೆ ಕಂಡು ಕಾಯ್ದೊಡಱಿದ ಸೂ ॥
ರ್ಯಜನಂ ಪುಣ್ಬಡಿಸಿದನೇ
ನಜೇಯ ಭುಜಬಲನೊ ಸಮರದೊಳ್ ಯಮರಾಜಂ ॥ ೧೬೧ ॥

ಆ ಸಮಯದೊಳ್ ಸೂರ್ಯಜನಂ ನಮ್ಮವರ್ ಮಗುೞೆಯುಮ್ಮನಗರಕ್ಕೆ ನೆಗಪಿ ಕೊಂಡು ಪೋದರಾನುಮೀ ತೆಱನಂ ನಿಮ್ಮಡಿಗಱಪಲ್ ಬಂದೆನೆಂದು ಬಿನ್ನವಿಸೆ—

ಉ ॥ ಆ ನುಡಿಗೇಳ್ದು ಸೈರಿಸದೆ ಕಾಲಿಡಲಾಗಸವೆಯ್ದದೀ ಮಹಾ ।
ಸೇನೆಗೆನಲ್ ಜವಂಗಿಡಿಸಲಾ ಜವ[illegible] ಪರಿಯಿಟ್ಟು ಮುತ್ತಿದಂ ॥
ಪೋ ನಿಮಿಷಕ್ಕೆ ಕಿಷ್ಕಿಪುರ ಗೋಪುರಮಂ ಬಿಡೆ ಸುತ್ತಿಮುತ್ತೆ ನಾ ।
ನಾನಕ ನಿಸ್ವನಂ ದಶ ದಿಶಾನನಮಂ ಮುಳಿಸಿಂ ದಶಾನನಂ ॥ ೧೬೨ ॥

ಅದಂ ಕೇಡು ಮಾಮಸಕಂಗೊಂಡು ಜವನ ನಾಯಕಂ ಸಾಟೋಪನೆಂಬನಾಟೋಪಂಗಿಡದೆ ಪೊಱಮಟ್ಟು ನೆರೆದು ನಿಲ್ವುದುಮವಂಗೆ ಭಂಗಮುಂ ಖರದೂಷಣರ್ ಪಡೆವುದುಮದಂ ಯಮಂ ಕಂಡು ಸಮರ ಸನ್ನದ್ಧನಾಗಿ ಪೊಱಮಟ್ಟು ತಾಗಿ ದಶಮುಖನ ಶಿಳೀಮುಖಕ್ಕೆ ಸುಗಿದು ಸಮರಮುಖ ಪರಾಙ್ಮುಖನಾಗಿ—

ಕಂ ॥ ಅತಿ ಜಂಘಾಲಂ ಭಯ ಕಂ
ಪಿತ ತನು ನಿಜಪತಿಯನಿಂದ್ರನಂ ಕಂಡು ಪದಾ ॥
ನತನೆಂದಂ ದಶಮುಖನ
ಪ್ರತಿಮಂ ಬವರದೊಳಿದಿರ್ಚುವವರಾರವನಂ ॥ ೧೬೩ ॥

ಕಂ ॥ ಎನೆ ಮುಳಿದಿಂದ್ರಂ ದಶವದ
ನನ ಮೇಲೇೞ್ತರ್ಪ ಮಸಕದಿಂದೇೞ್ವುದುಮಾ ॥
ತನ ಮಂತ್ರಿಮುಖ್ಯರೆಂದರ್
ನಿನಗಿದು ಪದನಲ್ತು ನೆರೆದು ಕಾದುವುದವನೊಳ್ ॥ ೧೬೪ ॥

ಎಂದವರ್ ನಯಮಂ ನುಡಿಯೆ ಮಾಣ್ದೊಡಂಬಟ್ಟು ಯಮಂಗೆ ಸುರ ಸಂಗೀತಕ ಪುರಮಂ ಕೊಟ್ಟು ವಿಷಯಾಸಕ್ತ ಚಿತ್ತನಪ್ಪುದಱಿನಂತಃಪುರಮಂ ಪೊಕ್ಕು ಮೆಯ್ಮಱೆದಿರ್ದನಿತ್ತ ದಶಮುಖಂ ಋಕ್ಷಜ ಸೂರ್ಯಜರ್ಗೆ ಕಿಷ್ಕಿಂಧಪುರಮಂ ಕೊಟ್ಟು ನಿಜಾನ್ವಯಾಗತಮಪ್ಪ ಲಂಕೆಯಂ ಮಾತಾ ಪಿತೃ ಪಿತಾಮಹ ಸಹಿತಂ ಪುಷ್ಪಕ ವಿಮಾನಾರೂಢನತಿಶಯ ವಿಭೂತಿಯಿಂ ಪೊಕ್ಕು ಸುಖದಿಂದಿರೆ ಕೆಲವು ದಿವಸಕ್ಕೆ—

ಕಂ ॥ ನಿರುಪಮ ಚರಿತ್ರೆ ಸೂರ್ಯಜ
ನರಸಿಯೆನಿಪ್ಪಿಂದುಮಾಲೆ ಪೆತ್ತಳ್ ಲೋಕೋ ॥
ತ್ತರರೆನಿಪ ವಾಲಿ ಸುಗ್ರೀ
ವರುಮಂ ಶ್ರೀಪ್ರಭೆಯುಮಂ ಯಥಾಕ್ರಮದಿಂದಂ ॥ ೧೬೫ ॥

ಅಲಘು ಭುಜರೆನಿಪ ಖೇಚರ
ಕುಲ ತಿಲಕರನಖಿಲ ಶಸ್ತ್ರ ವಿದ್ಯಾವಿದರಂ ॥
ಬಲಯುತರೆನಿಪ್ಪ ಋಕ್ಷಜ
ಕುಲವಧು ನಳ ನೀಳರೆಂಬ ಸುತರಂ ಪಡೆದಳ್ ॥ ೧೬೬ ॥

ಅಂತು ಕೆಲವುಕಾಲಂ ಪೋಪುದುಂ ವಾಲಿ ಸುಗ್ರೀವರನಧಿರಾಜ ಯುವರಾಜ ಪದವಿಯೊಳ್ ನಿಲಿಸಿ ಸೂರ್ಯಜಂ ಪಿಹಿತಾಸ್ರವ ಭಟ್ಟಾರಕರ ಸಮಕ್ಷದೊಳ್ ದೀಕ್ಷೆ ಯಂ ಕೈಕೊಂಡು ಮೋಕ್ಷಕ್ಕೆ ಪೋದನಿತ್ತಲ್—

ಕಂ ॥ ಪರಿಣಯನ ನಿಮಿತ್ತಂ ದಶ
ಶಿರನತ್ತಲ್ ಪೋಗೆ ತೆಱಪುಮಾರ್ದಿರ್ದದಟಂ ॥
ಖರನಿರದುಯ್ದಂ ಲಂಕಾ
ಪುರದಿಂದಂ ಚಂದ್ರನಖಿಯನಂಬುಜಮುಖಿಯಂ ॥ ೧೬೭ ॥

ಅಂತು ಕಳ್ದುಯ್ದು ದಶಾನನಂಗಾನತನಲ್ಲದ ಚಂದ್ರೋದರನಂ ಯಮೋದರ ಮಂ ಪುಗಿಸಿ ಪಾತಾಳಲಂಕೆಯಂ ಸ್ವೀಕರಿಸಿ ಸುಖದಿನಿರೆಯಿತ್ತ ದಶಾನನಂ ಮದುವೆನಿಂದು ಮಗುೞ್ದು ವಂದು—

ಚ ॥ ಎನಗಿನಿಸಳ್ಕದೆನ್ನನುಜೆಯಂ ಪಿಡಿದುಯ್ದನವಂಗೆ ತಕ್ಕುದಂ ।
ಜನಿಯಿಪೆನೆಂದು ಗರ್ಜಿಸೆ ದಶಾನನನಾತನ ಕಾಂತೆ ನಿನ್ನ ಮೆ ॥
ಯ್ದುನನನುರಕ್ತನಾಕೆಗನುರೂಪನಿದಾವುದು ಪೊಲ್ಲಗೆಯ್ದನೀ ।
ಮುನಿಸವಿವೇಕಮೆಂದು ನುಡಿದಳ್ ಮಯ ನಂದನೆ ತದ್ದಶಾಸ್ಯನಂ ॥ ೧೬೮ ॥

ಅದಲ್ಲದೆಯುಂ ನಿನಗೆ ವಿಧೇಯನಲ್ಲದ ಚಂದ್ರೋದರನಂ ಕೊಂದು ನಿಷ್ಕಂಟಕಂ ಮಾಡಿದನಾತನಂ ಮುಳಿದು ನೀಂ ಕೊಂದು ನಿನ್ನನುಜಾತೆಗೆ ವೈಧವ್ಯ ದೀಕ್ಷೆಯಂ ಕುಡುವುದು ಚದುರಲ್ಲೆಂದು ಕಲುಷಮಂ ಕಳೆದಳಿತ್ತ ಚಂದ್ರೋದರನ ಪತ್ನಿಯು ಮಂತರ್ವತ್ನಿಯುಮಪ್ಪನುರಾಧೆ ಪರಿಜನಂಬೆರಸು ಪೋಗಿ ನವಮಾಸಂ ತೀವೆ ಕೂಸುವೆತ್ತೀತಂ ಗರ್ಭದೊಳಿರೆ ಪಗೆಪರಿಂ ಸೇದೆವಟ್ಟೆನೆಂದಾತಂಗೆ ವಿರಾಧಿತನೆಂದು ಪೆಸರನಿಡುವುದುಮಾತನನುಕ್ರಮದಿಂ ಬಳೆದು ಪಗೆಯಂ ಸಾಧಿಸುವುಪಾಯಮಂ ಬಗೆಯುತ್ತಿರ್ಪಿನಮಿತ್ತಲ್—

ಉ ॥ ಮಾನಧನಂ ವಿವೇಕನಿಧಿ ವಾಲಿ ಜಿನಾಗಮ ಕೋವಿದಂ ಪೆಱಂ ।
ಗಾನತನಾಗೆ ದರ್ಶನವಿಶುದ್ಧಿಗೆ ದೂಷಣಮಕ್ಕುಮಂತಱಿಂ ॥
ಜೈನಪದಕ್ಕೆ ಜೈನಮುನಿಗಲ್ಲದೆ ಕೈಮುಗಿಯೆಂ ದಲೆಂದು ಧ ।
ರ್ಮಾನುಗನಪ್ರಮತ್ತ ಚರಿತ ಪ್ರಿಯನಾದನಿದೇನುದಾತ್ತನೋ ॥ ೧೬೯ ॥

ಅನಂತವೀರ್ಯನುಂ ಚರಮದೇಹ ಧಾರಿಯುಮವಕ್ರ ವಿಕ್ರಮನುಮಪ್ಪ ವಾಲಿ ನಿಯಮಸ್ಥನಾಗಿ ಸುಖದಿನಿರ್ಪುದುಮೊಂದು ದಿವಸಮಾತನನುಜೆಯಂ ಶ್ರೀಪ್ರಭೆಯಂ ಬೇಡಿ ದಶಮುಖಂ ಮುಖ್ಯ ಪುರುಷರ ಕಯ್ಯೊಳೋಲೆಯನಟ್ಟುವುದುಮದಂ ತಿಳಿದು ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮು ಮನಾಪ್ತ ಪರಿಜನಮುಮಂ ಬರಿಸಿ—

ಕಂ ॥ ತಗದೆನಗುನ್ಮಾರ್ಗಿಗೆ ಕೂ
ಸುಗುಡಲ್ ದಶಕಂಧರಂ ಮದಾಂಧಂ ಧರ್ಮಾ ॥
ನುಗನಲ್ಲನನುಜೆಯಂ ಕುಡೆ
ತೆಗಱಿಹದೊಳ್ ಪರದೊಳೆನಗೆ ಪಾತಕಮಕ್ಕುಂ ॥ ೧೭೦ ॥

ಕುಡೆ ಕೂಸನುದ್ಧತಂಗಾಂ
ಪೊಡೆವಡುವನಿತಕ್ಕುಮಾದೊಡೆನ್ನ ಚರಿತ್ರಂ ॥
ಕಿಡುಗುಂ ವ್ರತಮಂ ಕೈಕೊಂ
ಡೆಡೆಯೊಳ್ ಬಿಟ್ಟವನೆ ಭಿನ್ನ ಭಾಜನಮಲ್ತೇ ॥ ೧೭೧ ॥

ಕಂ ॥ ಅದಱಿಂದಾತಂಗಾನೀ
ಯದೆ ಕೂಸಂ ಕಾಳೆಗಕ್ಕೆ ಮೆಯ್ದುರೆ ಪಲ ಕಾ ॥
ಲದ ರಾಕ್ಷಸ ವಾನರ ವಂ
ಶದ ನಣ್ಪೆನ್ನಿಂದಮುಱಿದುದೆಂಬುದು ಲೋಕಂ ॥ ೧೭೨ ॥

ಅರಸುತನಂಗೆಯ್ವಱಿಪಿಂ
ಧುರದೊಳ್ ಮೂಱುಂತರೆಲ್ಲರಂ ಮುೞ್ಗಿಪುದುಂ ॥
ದೊರೆಕೊಳ್ಗುಂ ಪಾತಕಮಾ
ಸಿರಿಯುಂ ಚಿರಮಲ್ತು ನೀರ ಬೊಬ್ಬುಳಿಕೆಯವೋಲ್ ॥ ೧೭೩ ॥

ಅದಱಿಂ ಪಾಪಕ್ಕಂ ಪೞಿಗಮೆಡೆಗುಡದ ತಪಮನಪ್ಪುಕೆಯ್ದೊಡೆನ್ನ ಕುಲಮುಂ ಚಲಮುಂ ವ್ರತಮುಂ ಕಿಡದೆ ನಡೆಗುಮೆಂದು ತಱಿಸಂದು ಸುಗ್ರೀವಂಗೆ ರಾಜ್ಯಮಂ ಕೊಟ್ಟು ಪರಿಜನಕ್ಕೆ ನಿಶ್ಶಲ್ಯನಾಗಿ [1]ಸದ್ದರ್ಶನಗಗನಚಂದ್ರರೆಂಬ ಚಾರಣರ ಪಕ್ಕದೊಳ್ ತೊಱೆದು ತಪಂಬಟ್ಟು ಘೋರ ವೀರತಪದಿಂ ಋದ್ಧಿಪ್ರಾಪ್ತನಾದಂ—

ಕಂ ॥ ಸುಗ್ರೀವನುಮಿತ್ತಲ್ ಖಚ
ರಾಗ್ರಣಿ ತನ್ನನುಜೆಯಂ ನಯೋಪಾಯಂ ಪಾ ॥
ಣಿಗ್ರಹಣ ಸಹಿತಮಿತ್ತು ದ
ಶಗ್ರೀವಂಗಾತ್ಮಪದವಿಯೊಳ್ ಸುಖಮಿರ್ದಂ ॥ ೧೭೪ ॥

ಅಂತು ದಶವದನಂ ಶ್ರೀಪ್ರಭೆಯಂ ಮದುವೆನಿಂದು ಮತ್ತೊಮ್ಮೆ ನಿತ್ಯಾಲೋಕಪುರಮನಾಳ್ವ ನಿತ್ಯಾಲೋಕನೆಂಬ ವಿದ್ಯಾಧರಂಗಂ ಶ್ರೀದೇವಿಗಂ ಪುಟ್ಟಿದ ರತ್ನಾವಳಿಯಂ ಮದುವೆನಿಂದು ಮಗುೞ್ದು ಬರ್ಪ ಸಮಯದೊಳ್ ಕೈಲಾಸನಗ ನಿತಂಬಸ್ಥಲದೊಳಿರ್ದ ಮಹಾಮುನಿಯ ಮೇಲೆ ವಿಮಾನಂ ನಡೆಯದೆ ನಿಲ್ವುದುಂ ವಿಸ್ಮಿತ ಮನನಿದೇನೆಂದು ನಿಂದವಲೋಕಿನೀವಿದ್ಯೆಯಿಂ ವಾಲಿದೇವನಪ್ಪುದನಱಿದಿನ್ನುಮೆನ್ನ ಮೇಲಣ ಮುನಿಸನುೞಿಯದೆ ವಿಮಾನಮಂ ಸ್ತಂಭಿಸಿದೊಡೇನಾದುದೀ ನಗಂಬೆರಸೀಗಳ್ ಕಿೞ್ತುಯ್ದು ಸಮುದ್ರದೊಳಿಕ್ಕುವೆನೆಂದು ಪುಷ್ಪಕವಿಮಾನದಿನವನೀತಲಕ್ಕವತರಿಸಿ ಘನಾಪಘನಮುಮಂ ಬಹುಬಾಹುಗಳುಮಂ ವಿಕುರ್ವಿಸಿ ರಸಾತಲಕ್ಕಿೞಿದು ಧನದಾಚಲದಧಸ್ಥಲಮನೆಯ್ದಿ—

ಉ ॥ ಸಾಸಿರವಿದ್ಯೆಗಳ್ಬೆರಸು ತೋಳ್ಗಳ ತೆರ್ಕೆಗಳಿಂದಳುರ್ಕೆವೆ ।
ತ್ತಾ ಸುರವೈರಿ ಬೆಳ್ಮುಗಿಲನೆತ್ತುವ ಘೋರ ಸಮೀರನಂತೆ ಕೈ ।
ಲಾಸಮನೆತ್ತೆ ಕಾವ ಬಗೆಯಿಂ ಬಹು ರತ್ನಮಯಂಗಳಂ ಜಿನಾ ।
ವಾಸಮನಂದು ವಾಲಿಮುನಿಪುಂಗವನುಂಗುಟದಿಂದಮೊತ್ತಿದಂ ॥ ೧೭೫ ॥

1. ಗಗನಚಾರಣರೆಂಬ. ಚ.

ಅಂತು ಶುಭಪರಿಣಾಮದಿಂ ದಶಮುಖನೊಳಪ್ಪ ಕಲುಷಮಿಲ್ಲದೆ ಕೈಲಾಸ ಶಿಖರಮಂ ಮೆಲ್ಲನೊತ್ತಿ ಪುಯ್ಯಲಿಡುವ ಸರಮಂ ಕೇಳ್ದು—

ಕಂ ॥ ಪರಿಜನ ಸಹಿತಂ ಮಂಡೋ
ದರಿ ಬಂದು ಮುನೀಂದ್ರ ರಕ್ಷಿಸೆಂದೆಱಗುವುದುಂ ॥
ಚರಣಾಂಗುಷ್ಠಮನೊಯ್ಯನೆ
ಕರುಣಾರಸ ಸಹಿತನೆತ್ತಿದಂ ಮುನಿಮಹಿತಂ ॥ ೧೭೬ ॥

ಆಗಳಾ ಪುಯ್ಯಲ್ವುವ ರವಮೇ ಕಾರಣಮಾಗೆ ದಶಮುಖಂಗಂದಿಂದಿತ್ತ ರಾವಣನೆಂಬ ಪೆಸರಾಯ್ತನಂತರಮಾತಂ ರಸಾತಲದಿಂ ಪೊಱಮಟ್ಟು ವಾಲಿಭಟ್ಟಾರ ಕರಂ ಪೂಜಿಸಿ ಪೊಡೆವಟ್ಟು ತನ್ನ ಪೊಲ್ಲಮೆಯುಂ ಕ್ಷಮೆಗೊಂಡು ಕಳೆದು—

ಚ ॥ ಕೆಲದ ಜಿನೇಶ್ವರಾವಸಥಮಂ ಬಲಗೊಂಡೊಳಪೊಕ್ಕು ದೇವನಂ ।
ವಿಲಸಿತ ರತ್ನರಾಶಿಗಳಿನರ್ಚಿಸಿ ಬಾಜಿಸಿದಂ ಲಯತ್ರಯಂ ॥
ಸುಲಲಿತಮಾಗೆ ವಸ್ತು ಗುಣ ರೂಪ ಜಿನಸ್ತವನಾಂಕ ಮಾಲೆಯಂ ।
ಪಲತೆಱದಿಂ ರಸಂಬಡೆಯೆ ರಾವಣ ಹಸ್ತದಿನಂದು ರಾವಣಂ ॥ ೧೭೭ ॥

ಅಂತು ನಿರ್ಭರಭಕ್ತಿಯಿಂ ಬಾಜಿಪಾಗಳ್—

ಉ ॥ ಆಸನ ಕಂಪಮಾಗೆ ಫಣಿಪಂ ಫಣಿಲೋಕದಿನಂದು ಬಂದು ಕೈ ।
ಲಾಸ ನಗಕ್ಕೆ ರಾವಣನ ದೇವರೊಳಾದತಿಭಕ್ತಿ ಹರ್ಷಮಂ ॥
ಮಾಸರಮುಂಟುಮಾಡೆ ತನಗಿತ್ತನಿದಿರ್ಚಲೊಡಂ ಸಮಸ್ತ ದೇ ।
ವಾಸುರ ಮುಖ್ಯನಾಯಕರ್ಗೆ ಜೀವ ವಿಮುಕ್ತಿಯನೀವ ಶಕ್ತಿಯಂ ॥ ೧೭೮ ॥

ಅಂತು ಫಣೀಂದ್ರನೀಯೆ ದಿವ್ಯಶಕ್ತಿಯಂ ಪಡೆದು ಪೋದನಿತ್ತಲಪಕೃತಿಯಂ ಗುರುಗಳೊಡನಾಲೋಚಿಸಿ—

ಕಂ ॥ ಪ್ರಾಯಶ್ಚಿತ್ತಂಗೊಂಡ
ಶ್ರೇಯಮನಪಹರಿಸಿ ವಾಲಿಮುನಿ ಶುಕ್ಲಧ್ಯಾ ॥
ನಾಯತ್ತನಾಗಿ ಮುಕ್ತಿ
ಶ್ರೀ ಯುವತಿಯ ನಿಬಿಡಕುಚಮನಾಲಿಂಗಿಸಿದಂ ॥ ೧೭೯ ॥

ಮತ್ತಿತ್ತ ರಾವಣಂ ನಂದ್ಯಕಾ ಸುವೇಲಾದಿ ದ್ವೀಪಂಗಳನಾಳ್ವ ಮಹಾಬಲ ವಿಜ್ಞಾನಧರರಂ ಬಾಯ್ಕೇಳಿಸಿ ಕುಂಭಕರ್ಣ ವಿಭೀಷಣರುಮಿಂದಗಿ ಮೇಘವಾಹನರುಂ ಖರ ಮರೀಚಿ ಸುಗ್ರೀವಾಂಗದ ಮರ್ಕಟಧ್ವಜ ಪ್ರಮುಖ ನಿಖಿಲ ವಿದ್ಯಾಧರ ಪರಮೇ

ಶ್ವರರುಂ ಬಳಸಿ ಬರೆ ವಿವಿಧವಾಹನ ವಿಚಿತ್ರಾತಪತ್ರ ಪಾಳಿ ಕೇತನಂಬೆರಸುತ್ತರಾಭಿ ಮುಖಮಿಂದ್ರನಮೇಲೆ ನಿಚ್ಚವಯಣದಿಂ ಬರುತ್ತುಂ ರೈವತ ನದೀ ತೀರದೊಳ್ ಬೀಡಂ ಬಿಟ್ಟಾತೊಱೆಯ ಸೈಕತಸ್ಥಳದೊಳ್ ರತ್ನಮಂಟಪಮನೆತ್ತಿಸಿ ಸಿಂಹಾಸನದ ಮೇಲೆ ಮಣಿಮಯ ಜಿನಪ್ರತಿಮೆಯಂ ನಿಲಿಸಿ ಪೂಜಿಸುವ ಸಮಯದೊಳ್—

ಕಂ ॥ ತೀವಿ ಬರೆ ಭೋಂಕನಾ ನದಿ
ರಾವಣನತಿ ಸಂಭ್ರಮಾಕುಲಂ ನೆಗೆದು ನಭ ॥
ಕ್ಕಾವುದು ಕಾರಣದಿಂದೀ
ರೈವತ ನದಿ ಬಂದುದೆಂದು ವಿಸ್ಮಿತನಾದಂ ॥ ೧೮೦ ॥

ಆಗಿ ಕಾಲಮಲ್ಲದ ಕಾಲದೊಳೀ ತೊಱೆ ಬಂದ ಕಾರಣಮನಾರಯ್ವುದೆಂದು ದೂತನನಟ್ಟುವುದುಮಾತನದೆಲ್ಲಮನಱಿದು ಬಂದು ಮಾಹಿಷ್ಮತೀಪುರಾಧೀಶ್ವರಂ ಸಹಸ್ರಬಾಹುವೀ ತೊಱೆಯಂ ಜಂತ್ರಂಗಳಿಂ ಕಟ್ಟಿ ನಿಜಾಂತಃಪುರಸಹಿತಂ ನೀರಾಟ ವಾಡಿ ಜಂತ್ರಂಗಳಂ ಕಳೆಯೆ ಪೊನಲ್ ಕವಿತಂದುದೆಂದು ಬಿನ್ನವಿಸೆ—

ಕಂ ॥ ತ್ರಿಜಗದ್ಭೂಷಣ ಮಾದ್ಯ
ದ್ಗಜಮಂ ಮುಳಿದೇಱಿ ರಾವಣಂ ನಡೆದಸುಹೃ ॥
ದ್ಧ್ವಜಿನಿಯನೋಡಿಸಿ ರಿಪು ಸಾ
ಮಜದೊಡನೆ ಸಹಸ್ರಬಾಹುವಂ ಸೆಱೆಗೆಯ್ದಂ ॥ ೧೮೧ ॥

ಅಂತಾತನಂ ಸೆಱೆಗೆಯ್ದು ನಿಜ ವಿಜಯಶಿಬಿರಕ್ಕೆ ತರ್ಪುದುಮಲ್ಲಿಗಾತನ ತಂದೆವಿರಪ್ಪ ಶತಬಾಹುಗಳೆಂಬ ಜಂಘಚಾರಣರ್ ಧರ್ಮವಾತ್ಸಲ್ಯದಿಂ ಬರ್ಪುದುಂ ದಶಮುಖನಿದಿರೆಟ್ಟು ಭಕ್ತಿಭರದಿಂ ವಂದಿಸಿ ಮಣಿಮಯಾಸನದೊಳಿರಿಸಿ ಕೈಗಳಂ ಮುಗಿದು ಬೆಸನಾವುದೆಂಬುದುಂ ನೀಂ ಸೆಱೆಗೆಯ್ದ ಸಮ್ಯಗ್ದೃಷ್ಟಿಯಪ್ಪ ಸಹಸ್ರ ಬಾಹುವಂ ಬಿಡುವುದೆನೆ ಮಹಾಪ್ರಸಾದವೆಂದಾತನಂ ಬರಿಸುವುದುಮಾತಂ ಬಂದು ದಿವ್ಯಮುನಿಗೆ ಪೊಡೆವಟ್ಟು ಕುಳ್ಳಿರ್ಪುದುಂ ಕರಗ್ರಹಣ ಪುರಸ್ಸರಂ ವಿನಯ ವಚನಂ ಗಳಂ ನುಡಿದು ನಿನ್ನ ರಾಜ್ಯದೊಳ್ ನಿಲ್ವುದೆನೆ ನಾಂ ತಪೋರಾಜ್ಯಮನಲ್ಲದೆ ರಾಜ್ಯ ಮನೊಲ್ಲೆನೆಂದು—

ಕಂ ॥ ನಿಜಸುತನಪ್ಪ ಸುಬಾಹುಗೆ
ನಿಜರಾಜ್ಯಮನಿತ್ತು ದೀಕ್ಷೆಯಂ ಕೈಕೊಂಡಂ ॥
ನಿಜ ಜನಕರಪ್ಪ ಶತಬಾ
ಹು ಜಂಘಚಾರಣರ ಕೈಯೊಳಾ ಧರಣೀಶಂ ॥ ೧೮೨ ॥

ಅಂತು ದೀಕ್ಷೆಯಂ ಕೈಕೊಂಡು ಸಹಸ್ರಬಾಹು ಮೋಕ್ಷಕ್ಕೆ ಪೋಪುದುಮಿತ್ತಲ್—

ಕಂ ॥ ಖೇಚರ ವಿಭು ತಾಂ ಮುನ್ನಂ
ಭೂಚರ ಭೂಭುಜರನೆಯ್ದೆ ಸಾಧಿಸಿ ಬಱಿಯಂ ॥
ಖೇಚರರಂ ಸಾಧಿಪೆನೆಂ
ಬೀ ಚಿತ್ತಂಬೆತ್ತು ವಿಜಯಯಾತ್ರೆಗೆ ತಳರ್ದಂ ॥ ೧೮೩ ॥

ಅಂತು ನಿಖಿಲ ರಾಜಕಮನೊತ್ತಿ ಕಪ್ಪಂಗೊಳುತ್ತುಂ ಧರ್ಮಮಂ ಪ್ರತಿಪಾಲಿಸುತ್ತುಂ ಬರುತ್ತುಮಿರೆ ರಾಜಪುರಮನಾಳ್ವ ಮರುತ್ತೆಂಬರಸಂ ಜೀವ ವಧೆಗೆಯ್ವ ಜನ್ನಮನೊಡರ್ಚೆ ಪೆಱರಾರ್ಗಂ ಪೊಡೆವಡದೆ ಪಲವುಂಪ್ರಾಣಿಗಳಂ ಕೊಂದಪ್ಪನೆಂದು ಕೇಳ್ದಲ್ಲಿಗೆ ಬಂದು ಯಾಗನಿಮಿತ್ತಂ ಯೂಪಸ್ತಂಭಂಗಳೊಳ್ ಕಟ್ಟಿ ಪಸುಗಳಂ ಗೋಳಿಡೆ ಕೊಂದು ಬೇಳ್ವುದಂ ಕಂಡು ಕೊಂಡಂಗಳನೊಡೆದು ಶಾಲೆಗಳಂ ಕೆಡಪಿ ಯೂಪಸ್ತಂಭಂಗಳಂ ಕಡಿದು ಸಂವರ್ತಕಂಮೊದಲಾಗೆ ಸಕಲ ಋತ್ವಿಜರಂ ಬಡಿದು ಕೊಲಲಿರ್ಪ ಸಮಯದೊಳ್ ಮರುತ್ತೆಂಬರಸನತಿಸಂಭ್ರಮದಿಂ ಪರಿತಂದು ರಾವಣನ ಕಾಲಮೇಲೆ ಬಿಟ್ಟು ಕ್ಷಮೆಗೊಂಡು—

ಕಂ ॥ ಕನಕಪ್ರಭೆಯಂ ನಿರ್ಜಿತ
ಕನಕ ಪ್ರಭೆಯಂ ಮರುನ್ನರೇಂದ್ರಂ ನಿಜನಂ ॥
ದನೆಯಂ ಖಚರ ಕುಲಾನಂ
ದನನೆನಿಪ ದಶಾನನಂಗೆ ನಲ್ಮೆಯಿನಿತ್ತಂ ॥ ೧೮೪ ॥

ಅಂತು ಮದುವೆನಿಂದು ಕನಕಪ್ರಭೆಗೆ ಪುಟ್ಟಿದ ತನ್ನ ಮಗಳಪ್ಪ ಸ್ವೀಕೃತ ಚಿತ್ತೆಯಂ ಮಧುರೆಯನಾಳ್ವ ಹರಿವಂಶನ ಮಗನಪ್ಪ ಮಧುವಿಂಗೆ ಕೊಟ್ಟು ದಶವದನಂ ಮಹಾಬಲ ಸಹಿತನಾಗಿ ಪದಿನೆಂಟು ವರ್ಷಕ್ಕೆ ವಿನೀತಾಖಂಡಮುಂ ಬಾಯ್ಕೇಳಿಸಿ ಕ್ರಮದಿಂ ಕೈಲಾಸಪರ್ವತಮನೆಯ್ದಿ ವಾಲಿದೇವರ ಸಾಮರ್ಥ್ಯಮುಂ ನೆನೆದು ಪೊಗಱುತ್ತುಮಾ ನಗದ ನಿತಂಬದೊಳ್ ಬೀಡುವಿಟ್ಟಿರ್ಪುದುಮಿತ್ತಲ್—

ಕಂ ॥ ಪರಿರಕ್ಷಿಸಿ ದೇವೇಂದ್ರನ
ಶರಧಿ ಶರಾಸನ ತನುತ್ರ ತತಿಯಂ ನಳಕೂ ॥
ಬರ ದಿಕ್ಪತಿ ದುರ್ಧರ ಭುಜ
ಪರಿಘಂ ದುರ್ಲಂಘ್ಯಪುರದೊಳತಿಬಲನಿರ್ದಂ ॥ ೧೮೫ ॥

ಅತಂ ರಾವಣಂ ಮೇಲೆತ್ತಿಬರ್ಪುದಂ ನಮ್ಮರಸಂಗಱಿಪೆಂದಟ್ಟಿದ ದೂತನ ವಚನದಿನಿಂದ್ರನದನಱಿದು—

ಶಾ ॥ ಏವಂ ರಾವಣನೆತ್ತಿಬಂದು ಬಲಿದಿರ್ಕಾ ಕಯ್ದುವಂ ಕಾದು ವಿ ।
ದ್ಯಾವಷ್ಟಂಭದಿನೆಂದು ಮಂದರ ಮಹೀಭೃನ್ಮೇಖಲಾನಂದನ ॥
ಕ್ಕಾ ವಿದ್ಯಾಧರಚಕ್ರವರ್ತಿ ಜಿನಪೂಜೋತ್ಸಾಹದಿಂ ಪೋದನು ।
ದ್ಗ್ರೀವಂ ದೋರ್ವಲ ಗರ್ವದಿಂ ಬಗೆದನಿಲ್ಲಿಂದ್ರಂ ದಶಗ್ರೀವನಂ ॥ ೧೮೬ ॥

ಮತ್ತಿತ್ತ ಚರ ವಚನದಿನಿಂದ್ರನ ಬೆಸಸಿದುದಂ ನಳಕೂಬರಂ ಕೇಳ್ದೊಂದು ಯೋಜನಾಂತರದೊಳಿರ್ದರಂ ನುಂಗುವಂತಪ್ಪ ಬೇತಾಳ ಯಂತ್ರಂಗಳಿಂ ದೂರದೇಶ ದೊಳಿರ್ದೆಬ್ಬಿಟ್ಟ ತಿಂಬಂತೆ ಫೂತ್ಕಾರ ಮುಖರಂಗಳಪ್ಪ ಮಹೋರಗಂಗಳಿನತಿದೂರ ದೊಳಟ್ಟಿ ಸುಡುವ ಕೇಸುರಿಯ ಪ್ರಾಕಾರಂಗಳಿಂ ಮತ್ತಮನಿತಾನುಂ ತೆಱದುಪದ್ರವ ಹೇತುಗಳಪ್ಪ ರೌದ್ರಮೃಗಂಗಳಿಂ ತುಱುಗಿ ಶತಯೋಜನೋತ್ಸೇಧಂಬಡೆದ ವಜ್ರ ಸಾಲಮೆಂಬ ಕೋಂಟೆಯಂ ವಿಗುರ್ವಿಸಿ ಪೊಟಲ್ಗೆ ದುರ್ಲಂಘ್ಯಪುರಮೆಂಬ ಪೆಸರ ನನ್ವರ್ಥಂಮಾಡಿ ಪೊಡಪುಗಿಡದಿರ್ಪುದುಂ—

ಕಂ ॥ ಅದಱ ತೆಱನಱಿಯದಱಿಯೆಂ
ದುದಾತ್ತಬಲನಂ ಪ್ರಹಸ್ತನಂ ಪೇೞ್ವುದುಮಂ ॥
ತದನಱಿದು ಬಂದವಂ ದಶ
ವದನಂಗಾದ್ಯಂತಮುದಱ[1]ಗುರ್ವಂ ಪೇೞ್ದಂ ॥ ೧೮೭ ॥

ಅಂತು ಪೇೞ್ದು ನಮ್ಮ ಪಡೆಗಲ್ಲಿಯ ಜಂತ್ರಂಗಳಿಂದುಪದ್ರವಮಾಗದಂತು ತೊಲಗಿ ಬಿಟ್ಟು ಬಱಿಕ್ಕದಂ ಕೊಳ್ವತೆಱನಂ ಬಗೆವುದೆಂಬುದುಂ ದಶವದನನಾ ನುಡಿಯನವಕರ್ಣಿಸಿ ಕೋಂಟೆಯಂ ಕೊಳ್ವುಪಾಯಮನೆ ಬಗೆಯುತ್ತುಮಿರ್ಪುದು ಮಿತ್ತಲ್—

ಕಂ ॥ ನಳಕೂಬರನ ಕುಲಾಂಗನೆ
ವಿಳಾಸವತಿ ರಾವಣಂಗೆ ಪಲಕಾಲಂ ಮು ॥
ನ್ನೆಳಸಿರ್ಪ ಕಾಮಕಾತರೆ
ಕೆಳದಿಗೆ ತಿಳಿವಂತು ತನ್ನ ತೆಱನಂ ಪೇೞ್ದಳ್ ॥ ೧೮೮ ॥

ಅಂತು ವಿದ್ಯಾಧರಪರಮೇಶ್ವರಿ ಚಿತ್ರಮಾಲೆಗೆ ನಿಜಾಭಿಪ್ರಾಯಮುಮಂ ಕಲಿಸಿ ರಾವಣನಲ್ಲಿಗಟ್ಟುವುದುಂ—

ಕಂ ॥ ನೀಲ ಪಟಚ್ಛದೆ ನಿಶೆಯೊಳ್
ಲೋಲೇಕ್ಷಣೆ ಗಗನಮಾರ್ಗದಿಂ ರಾವಣನಿ ॥

1. ತೆಱನಂ. ಗ. ಘ

ದರ್ಾಲಯಮುಮಂ ವಿಜಯಶ್ರೀ
ಲೀಲೆಯಿನಾ ಚಿತ್ರಮಾಲೆ ಬಂದೊಳಪೊಕ್ಕಳ್ ॥ ೮೮ ॥

ಅಂತು ಪೊಕ್ಕು ರಾವಣನ ಕೆಲಕ್ಕೆ ವಂದು—

ಕಂ ॥ ಉಪರಂಭೆಯೆಂಬಳೆಮ್ಮರ
ಸಿ ಪೋಲಿಪೊಡೆ ರಂಭೆಗಗ್ಗಳಂ ಚೆಲ್ವಿಂದಾ ॥
ರುಪಮೆಗೆ ಪೆಱರೆಸಿಪಳ್ ಪೀ
ನಪಯೋಧರೆ ನಿನ್ನ ಸಾರ್ಕೆಗಟ್ಟಿದಳೆನ್ನಂ ॥ ೮೯ ॥

ಪಲವುದಿನಂ ನಿನ್ನೊಳ್ ತೊ
ಟ್ಟ್ಯೊಲವಿಂದಾ ಚೆನ್ನೆ ನಿನ್ನನನವರತಂ ಪಂ ॥
ಬಲಿಸುತ್ತುಂ ಚಿತ್ತೋದ್ಭವ
ನಲರಂಬುಗಳುರ್ಚೆ ನಾಡೆ ಪಾಡೞಿದಿರ್ದಳ್ ॥ ೯೦ ॥

ಏಪೊಗಳ್ವೆನತನು ವಿದ್ಯಾ
ದೇವತೆ ನಿರತಿಶಯಮೆನಿಪ ರೂಪಿಂ ವಿದ್ಯಾ ॥
ದೇವತೆ ಸಾಮರ್ಥ್ಯದಿನೆನಿ
ಪಾ ವಧು ಬರೆ ದೇವ ನಿನಗೆ ತೀರದುದುಂಟೇ ॥ ೯೧ ॥

ಎನೆ ದಶಾನನಂ ಪೞಿಯುಂ ಪಾಪಮುಮಪ್ಪ ದುಶ್ಚರಿತ್ರಮನೇವೆನೆಂದು ಮನದೊಳ್ ನಿಶ್ಚಯಿಸಿ ವಿಭೀಷಣನಂ ಬರಿಸಿ ರಹಸ್ಯದೊಳದನಱಿಪುವುದುಮಾತಂ ವಿದ್ಯಾಪ್ರಾಕಾರಮಂ ಕಿಡಿಸುವಂತುಟಂ ಪ್ರತಿವಿದ್ಯೆಯನಾಕೆಯಂ ಬರಿಸಿ ಪುಸಿದು ನಂಬಿಸಿ ಕಲ್ತುಕೊಳ್ವುದೆನೆ ರಾವಣನಾ ದೂದವಿಗೆ ನಿನ್ನ ನುಡಿಗೊಡಂಬಟ್ಟೆನಾಕೆಯಂ ತಾಯೆಂದು ವಕ್ರೋಕ್ತಿಯಿಂ ನುಡಿವುದುಮಾಕ್ಷಣದೊಳ್ ಪೋಗಿ ಬೇಗಂ ತರ್ಪುದುಮುಪರಂಭೆಗೆ ಪುಸಿನಣ್ಪಿದೋಱ ನಿನಗಮೆನಗಂ ದುರ್ಲಂಘ್ಯಪುರದೊಳ್ ಕೂಟಮಪ್ಪಂತು ಮಾಡೆನೆ ಮನದೆ ಕೊಂಡಂತೆಗೆಯ್ವೆನೆಂದು ಸಾಲವಿದ್ಯಾಭೇದಿನಿಯಂ—

ಕಂ ॥ ಪ್ರತಿವಿದ್ಯೆಯನಾಕೆ ಕುಲ
ಕ್ಷತಿಯುಂ ಪತಿಗಪ್ಪ ಹಾನಿಯುಂ ಬಗೆಯದೆ ದು ॥
ರ್ಮತಿ ಕೊಟ್ಟಳದೆನ್ನರುಮಂ
ಮತಿಗಿಡುಪುದು ಚೋದ್ಯಮಲ್ತು ಮದನೋನ್ಮಾದಂ ॥ ೯೩ ॥

ಅಂತಾಕೆಯ ಕೈಯೊಳಾ ವಿದ್ಯೆಯಂ ಕೊಂಡು ಕಟಿಪಿ ಮರುದೆವಸಂ ಸಾಲ ವಿದ್ಯೆಯಂ ಪ್ರತಿವಿದ್ಯೆಯಿಂ ಕಿಡಿಸಿ ದುರ್ಲಂಘ್ಯಪುರಮಂ ರಾವಣಂ ಮುತ್ತು ವುದುಂ—

ಕಂ ॥ ಸೆರಗಂ ಬೆರಗಂ ಬಗೆಯದೆ
ಪುರಮಂ ಪೊಱಮಟ್ಟು ಕಾದುವಾಗಳ್ ನಳಕೂ ॥
ಬರನಂ ವಿಭೀಷಣಂ ಮದ
ಕರಿಯಂ ಮೃಗವೈರಿ ಪಿಡಿವ ತೆಱದಿಂ ಪಿಡಿದಂ ॥ ೧೯೪ ॥

ಆ ಸಮಯದೊಳ್—

ಕಂ ॥ ದನುಜಾಧೀಶ್ವರನ ಪುರಾ
ತನ ಪುಣ್ಯದ ಫಲದಿನಾಯುಧಾಗಾರದೊಳೇಂ ॥
ಜನಿಯಿಸಿದುದೊ ವಿದ್ವಿಷ್ಟಾ
ವನಿಪಾಲ ಪ್ರಳಯ ಕಾಲಚಕ್ರಂ ಚಕ್ರಂ ॥ ೧೯೫ ॥

ಅಂತು ಸುದರ್ಶನಚಕ್ರಂ ಪುಟ್ಟುವುದುಂ ರಾವಣಂ ಮಹೋತ್ಸವದಿಂ ಚಕ್ರ ಪೂಜೆಯಂ ಮಾಡಿ ರಹಸ್ಯದಿಂದಾಕೆಯಂ ಕರೆದು ನೀಂ ವಿಶುದ್ಧ ಕುಲದ ಕುಶ ಧ್ವಜಂಗಂ ಮಧುಕಾಂತೆಗಂ ಪುಟ್ಟಿದುದಱಿಂ ನಿಜಕುಲಾಚಾರಮಂ ಬಗೆದು ಶೀಲ ಪರಿಪಾಲನಂಮಾಳ್ಪುದಂತಲ್ಲದೆಯುಂ ನೀನೆನಗೆ ವಿದ್ಯೋಪದೇಶಂಗೆಯ್ದುದಱಿಂ ಗುರುವಾದೆ ಪೆಱತೇನುಮಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರೆಂ ದಾಕೆಯ ದುಷ್ಪರಿಣಾಮಮುಮಂ ಪತ್ತುವಿಡಿಸಿ—

ಕಂ ॥ ನಳಕೂಬರನುಮನಾ ಕ್ಷಣ
ದೊಳೆ ಬರಿಸಿ ನಿಜಾಗ್ರತನಯನಿಂದಗಿಯಿಂದ ॥
ಗ್ಗಳಮೆನೆ ಮನ್ನಿಸಿ ಭಯಮುಂ
ಕಳೆದಿತ್ತಂ ಭೃತ್ಯಪದವಿಯಂ ದಶವದನಂ ॥ ೧೯೬ ॥

ಅಂತಾತಂಬೆರಸು—

ಕಂ ॥ ವಿಜಯಾರ್ಧನಗಕ್ಕೆತ್ತಿದ
ನಜೇಯ ದೋಶ್ಶಾಲಿ ರಾವಣಂ ನಿಜ ವಿಜಯ ॥
ಧ್ವಜನಿಗಳಬ್ಧಿಗಳೇೞುಂ
ನಿಜ ಸೀಮಾ ವಜ್ರವೇದಿಯಿಂ ತಳರ್ದುವೆನಲ್ ॥ ೧೯೭ ॥

ಅಂತು ರಾವಣಂ ತನ್ನಮೇಲೆತ್ತಿಬಂದು ರಜತಗಿರಿ ನಿತಂಬದೊಳ್ ಬೀಡಂ ಬಿಟ್ಟನೆಂಬುದನಿಂದ್ರಂ ಕೇಳ್ದು ಸಮರಸನ್ನಾಹ ಭೇರಿಯಂ ಪೊಯಿಸುವುದುಂ—

ಕಂ ॥ ಚತುರಂಬುರಾಶಿಯಂ ಘೂ
ರ್ಣಿತಮೆನೆ ದಿಗ್ವಲಯಮುಮಂ ದಿಶಾ ದ್ವಿರದನ ಬೃಂ ॥
ಹಿತಮೆನೆ ನಭಮುಮಂ ಘನ ಗ
ರ್ಜಿತಮೆನೆ ಪುದಿದತ್ತು ಭೂರಿ ಭೇರೀನಿನದಂ ॥ ೧೯೮ ॥

ಚ ॥ ಕರಿಗಳ ವಾಜಿರಾಜಿಗಳ ತೇರ್ಗಳ ಖೇಚರರೊಡ್ಡಣಕ್ಕಣಂ ।
ಧರೆ ಕಿಱಿದಂಬರಂ ಕಿಱಿದು ಕೇತನಮಾಲಿಕೆಗೆಂಬಿನಂ ವಿಯ ॥
ಚ್ಚರ ಧರಣೀಶ ರತ್ನಮುಕುಟಪ್ರಭೆಯಿಂ ದಶದಿಙ್ಮುಖಂಗಳುಂ ।
ಭರಿತಮೆನಿಪ್ಪಿನಂ ನೆರೆದುದಾ ಧ್ವನಿಗಿಂದ್ರನ ರುಂದ್ರಸೈನಿಕಂ ॥ ೧೯೯ ॥

ಅಂತು ನೆರೆದು ರಣಭೂಮಿಯೊಳಿಂದ್ರನ ಬಲಂ ಬಲಿದೊಡ್ಡಿ ನಿಲ್ವುದುಂ ರಾವಣನ ಬಲಂ ರಣರಭಸದಿಂ ಬಂದು ತಾಗುವುದುಂ—

ಕಂ ॥ ಇರ್ಬಲದ ಚತುರ್ಬಲಮುಂ
ದೋರ್ಬಲಮಂ ಮೆಱೆದು ನೆರೆದು ಕಾದುವ ಪದದೊಳ್ ॥
ಮಾರ್ಬಲಮಂ ಸುರಸೈನಿಕ
ಮೆಟ್ಟಿಟ್ಟಿದುದಳ್ಕಿ ಬಳ್ಕಿ ಬೆಂಗುಡುವಿನೆಗಂ ॥ ೨೦೦ ॥

ಅಂತು ರಾಕ್ಷಸಬಲಮೆಲ್ಲಮೊಲ್ಲನುಲಿದೋಡುವುದುಂ ಕಂಡು ಮುಖ್ಯನಾಯಕರಪ್ಪ ವಜ್ರವೇಗನುಂ ಹಸ್ತನುಂ ಪ್ರಹಸ್ತನುಂ ಮಾರೀಚನುಂ ಉದ್ಭಟನುಮುಜ್ವಳನುಂ ವಜ್ರನುಂ ಮಹಾಜಲಧರನುಂ ಸಂಧ್ಯಾಭ್ರನುಂ ಕ್ರೂರನುಮೆಂದಿವರ್ ಮೊದಲಾಗೆ ಮಹಾಬಲಪರಾಕ್ರಮರ್ ತಂತಮ್ಮ ಬಲಮಂ ಪೆಱಗಿಕ್ಕಿ ದಿವಿಜಬಲಮನೆಲ್ಲಂ ಗೆಲೆ ಕಾದುವುದಂ ಕಂಡು ಮೇಘಬಲಿಯುಂ ತಟಿತ್ತುಂಗನುಮದ್ರಿಯುಂ ಸಂಜ್ವಲನುಂ ಪಾವಕನುಂ ಮೊದಲಾಗೆ—

ಕಂ ॥ ಸುರಬಲದ ನಾಯಕರ್ ಸಂ
ಗರದೊಳ್, ರಾವಣನ ಬಲದ ನಾಯಕರಂ ಸಂ ॥
ಹರಿಸೆ ಕೆಲರಂ ಕಪಿಧ್ವಜ
ರರೆಬರ್ ಕಾಲಾಗ್ನಿರುದ್ರನಂತುರಿದೆಟ್ಟಿದರ್ ॥ ೨೦೧ ॥

ಅಲ್ಲಿ ಮಹೋಗ್ರನಂದನಂ ಪ್ರಸನ್ನಕೀರ್ತಿಯುಂ ಮಾಲ್ಯವಂತ ತನೂಭವಂ ಶ್ರೀಮಾಲಿಯುಮೆಡೆವೊಕ್ಕು ದಿವಿಜಬಲಮುಂ ಹತ ವಿತತ ಕೋಲಾಹಲಮಂ ಮಾಡಿ

ಕಾದುವುದಂ ಕಂಡು ದಂಡಾಗ್ರನುಂ ಶಿಖಂಡವ್ಯಾಲಿಯುಂ ಶಿಖಂಡಿಯುಂ ಶಿಖಿಯುಂ ಕೇಸರಿಯುಂ ಕನಕನುಂ ಮೃಗಚಿಹ್ನನುಮೆಂಬಿಂದ್ರನಳಿಯಂದಿರ್ ಮೊದಲಾಗೆ ಪಲ ಬರ್ ಕುಮಾರರ್ ಮೂದಲಿಸಿ ಮುಸುಱಿ ಮುತ್ತುವುದುಂ—

ಕಂ ॥ ಶ್ರೀಮಾಲಿ ನೃಪಕುಮಾರ
ಸ್ತೋಮದ ತಲೆ ಪಱಿದು ಪಾಱಿ ಬೀೞ್ವಿನೆಗಂ ಸಂ ॥
ಗ್ರಾಮದೊಳೀಸಾಡಿದನಖಿ
ಲಾಮರರಾಗಸದೊಳೊಡನೆ ತಲೆದೂಗುವಿನಂ, ॥ ೨೦೨ ॥

ಅವರೞಿವುದನಿಂದ್ರತನೂ
ಭವನೀಕ್ಷಿಸಿ ಕಲುಷ ವಶಗತಂ ತಾಗಿ ರಣೋ ॥
ತ್ಸವದಿಂದೇಳಿಸಿ ಮೊನೆಯೊಳ್
ಜವನಂ ಶ್ರೀಮಾಲಿಯಸುಂ ಜಯಂತಂ ಕೊಂದಂ ॥ ೨೦೩ ॥

ಅಂತು ಶ್ರೀಮಾಲಿಯುಂ ಜಯಂತಂ ಕೊಂದು ವಿಜಯ ಪತಾಕೆಯನೆತ್ತಿ ಸುವುದುಮಿಂದ್ರಜಿತ್ಕುಮಾರನತಿ ಕುಪಿತನಾಗಿ ಬಂದು ಜಯಂತನೊಳ್ ಪೋಣರ್ವುದ ನಿಂದ್ರಂ ನೋಡಿ ಕಡುವೇಗದಿಂ—

ಮ ॥ ಮುಳಿದೈರಾವಣ ಗಂಧಸಿಂಧುರಮನಾಗಳ್ ನೂಂಕಿದಂ ವ್ಯೋಮ ಮಂ ।
ಡಳದೊಳ್ ಬೆಳ್ಗೊಡೆ ಚಂದ್ರಮಂಡಳದ ಚೆಲ್ವಂ ಬೀಱೆ ದಿಕ್ಪಾಲ ಮಂ ॥
ಡಳಿ ಸುತ್ತಂಬರೆ ಪಾಳಿಕೇತನ ಶತಂಗಳ್ ಮುಂದೆ ಮ ಂದೈಸೆ ಮಂ ।
ಗಳ ಭೇರೀರವಮುಣ್ಮಿ ಪೊಣ್ಮೆ ದೆಸೆಯುಂ ತಳ್ಪೊಯ್ಯೆ ಶಂಖಸ್ವನಂ ॥ ೨೦೪ ॥

ಅಂತಿಂದಗಿಯ ಮೊನೆಗೈರಾವಣಮನಣೆದು ನೂಂಕುವಿಂದ್ರನಂ ದನುಜೇಂದ್ರನ ಸಾರಥಿ ಸನ್ಮತಿ ಕಂಡಿಂತೆಂದಂ—

ಮ ॥ ನಿನಗಿಂದ್ರಂ ದೊರೆ ಸಂಗರಕ್ಕೆ ದೊರೆ ನೀನಿಂದ್ರಂಗೆ ಮತ್ತೊರ್ವರಾ ।
ತನನೇನಾಂಕೆಗೊಳಲ್ ಸಮರ್ಥರೆ ಕುಮಾರಂ ಬಾಲಕಂ ಯುದ್ಧಯೋ ॥
ಗ್ಯನೆ ಕೈಕೊಳ್ವುದು ದೇವರಿಂದಗಿಯಿನೆಂದಾಲೋಲ ಶುಂಡಾಲ ಕೇ ।
ತನವಂ ಚೋದಿಸಿದಂ ದಶಾಸ್ಯರಥಮಂ ಸೂತಂ ಮನೋವೇಗದಿಂ ॥ ೨೦೫ ॥

ಅಂತು ಮುಟ್ಟೆವಂದು ಮೂದಲಿಸಿ ತಾಗುವುದುಂ—

ಕಂ ॥ ಶರಸಂಧಾನದ ವೇಗಂ
ಪರಿಕಿಸಲರಿದೆನಿಸಿ ದಿವಿಜಪತಿಯುಂ ದಶಕಂ ॥

ಧರನುಂ ಕಾಯ್ದಿಸೆ ಪಾಯ್ದುದು
ಶರಮಯಮಾಯ್ತಖಿಲ ಭುವನಮೆನೆ ಶರನಿಕರಂ ॥ ೨೦೬ ॥

ಅಂತಚಿಂತ್ಯ ಯುದ್ಧಂಗೆಯ್ದು ದಾನವೇಂದ್ರನನಿಂದ್ರಂ ಸಾಧಾರಣಾಸ್ತ್ರದೊಳ್ ಗೆಲ್ವುದರಿದೆಂದು—

ಕಂ ॥ ಮುನಿದು ತಮದಂಬಿನಿಂದಿಂ
ದ್ರನಿಸುವುದುಂ ಬೆಳಗಿನಂಬಿನಿಂ ಗೆಲ್ದೊಡೆ ಕಂ ॥
ಡನಲಾಸ್ತ್ರದಿನಿಸೆ ದಿವಿಜಂ
ದನುಜೇಂದ್ರಂ ವಾರುಣಾಸ್ತ್ರದಿಂ ಖಂಡಿಸಿದಂ ॥ ೨೦೭ ॥

ಅಂತು ಖಂಡಿಸೆ ಮತ್ತಂ ಪಲ ತೆಱದ ದಿವ್ಯಶರಂಗಳಿಂದಿಂದ್ರನಿಸುವುದುಂ ದಶಕಂಧರನವಂ ಪ್ರತಿಶರಂಗಳಿಂದಭಿಭವಿಸೆ—

ಕಂ ॥ ದೇವರ್ ಕಾವೊಡಮಿವನಂ
ಸಾವೆಯ್ದಿಪೆನೆಂದು ಮನದೊಳೊದವಿದ ಮುಳಿಸಿಂ ॥
ರಾವಣನ ವರೂಥಕ್ಕೈ
ರಾವಣ ವಾರಣಮನಣೆದು ನೂಂಕಿದನಿಂದ್ರಂ ॥ ೨೦೮ ॥

ಅಂತು ನೂಂಕುವುದುಂ—

ಮ ॥ ನಿಜನೇತ್ರಾರ್ಧ್ವದೊಳಾಗಳಾಗಳದಟಂ ಶ್ರೀಮಾಲಿ ಸತ್ತೀಮಮುಂ ।
ನಿಜವಂಶ ಪ್ರಭುವಪ್ಪ ಮಾಲಿಯನಿವಂ ಮುಂಕೊಂದನೆಂಬೀಮಮುಂ ।
ನಿಜಕೋಪಾಗ್ನಿಗೆ ಕೊರ್ವನೀಯೆ ದೊರೆಕೊಂಡಂ ದ್ರೋಹನೆಂದೇಱದಂ ।
ತ್ರಿಜಗದ್ಭೂಷಣ ದಂತಿಯುಂ ರಿಪುಚಮೂ ವಿದ್ರಾವಣಂ ರಾವಣಂ ॥ ೨೦೯ ॥

ಅಂತಿರ್ವರುಮೋರೊರ್ವರಾನೆಯುಂ ಮುಟ್ಟೆ ನೂಂಕಿ ಮಹಾಯುದ್ಧಂಗೆಯ್ವಾಗಳ್ ರಾವಣಂ ನಿಜವಾರಣದಿನಿಂದ್ರನೈರಾವಣದಮೇಲೆ ಪಾಯ್ದು ಮುಂದಣಾಧೋರಣನಂ ಚರಣ ಪ್ರಹಾರದಿಂ ನೆಲಕಿಕ್ಕಿ ಮಾತಂಗದಮೇಲೆ ಪಾಯ್ವ ಸಿಂಹದಂತಿಂದ್ರನಮೇಲೆ ಪಾಯ್ದವನಂ ಮೇಲುದದಿ ಸೆಱಂಗಿನೊಳಡಸಿ ಕಟ್ಟಿ ಕೊಲ್ವನಲ್ಲೆನಂಜದಿರೆಂದಭಯಮನಿತ್ತು—

ಕಂ ॥ ಕರಿಯುಂ ಹರಿ ಕೇಸರಿಯುಂ
ಶರಭಂ ಶರಭಮನದೊಂದು ಭೇರುಂಡನಡು ॥
ತಿರರದುಯ್ವ ತೆಱದೆ ನಿಜಸಿಂ
ಧುರಕ್ಕೆ ಮಗುಟ್ಚುಯ್ದನಿಂದ್ರನಂ ದನುಜೇಂದ್ರಂ ॥ ೨೧೦ ॥

ಆ ಸಮಯದೊಳಿಂದ್ರನ ಮಗನಪ್ಪ ಜಯಂತನನಿಂದ್ರಜಿತ್ಕುಮಾರಂ ಬಾಳ್ದಲೆ ದಂದೀಯೆ ರಾವಣನಭಯ ಘೋಷಣೆಯುಂ ಮಾಡಿಸಿ ಮಹಾವಿಭವದಿಂ ಬಂದು ಲಂಕೆಯಂ ಪೊಕ್ಕು ಸುಖದಿನಿರೆ—

ಕಂ ॥ ಪರಿಜನಮುಮುಪಾಯನಮುಂ
ಬೆರಸು ಸಹಸ್ರಾರನಾತ್ಮತನಯನ ಮೋಹಂ ॥
ತರೆ ತನ್ನಂ ಬಂದಂ ದಶ
ಶಿರನಲ್ಲಿಗೆ ಮುಂದುಗಾಣ್ಬನೇ ಮೋಹಾಂಧಂ ॥ ೨೧೧ ॥

ಅಂತು ಬಂದು ಲಂಕಾಪುರಮಂ ಪುಗುವುದುಮುಚಿತ ಪ್ರತಿಪತ್ತಿಯಿಂ ಕಾಣಿಸಿ ಕೊಂಡು ಸಹಸ್ರಾರನಂ ನಿಜ ಜನಕನಿಂದಧಿಕವಾಗೆ ಮನ್ನಿಸಿ ಮಣಿಮಯಾಸನ ದೊಳಿರಿಸಿ ವಿನಯ ವಿನಮಿತಂ ಬೆಸನಾವುದೆನೆ ಸಹಸ್ರಾರನಿಂತೆಂದಂ—

ಕಂ ॥ ನಿನಗೆಡಱಿದಿಂದ್ರನಂ ಗೆ
ಲ್ದು ನಿನ್ನ ಭುಜಬಲದ ಮಹಿಮೆಯಂ ಬೀಱಿದೆ ಜೀ॥
ಯೆನಿಸಾತನ ಸೆಱೆಯಂ ಬಿ
ಟ್ಟು ನಿನ್ನ ತಕ್ಕುರ್ವೆ ಬಣ್ಣಿಸಲ್ ಬಾರದೆನಲ್ ॥ ೨೧೨ ॥

ಎನೆ ದಶಾನನಂ ಮಹಾಪ್ರಸಾದಮಂತೆಗೆಯ್ವೆನೆಂದಿಂದ್ರನಂ ಬರಿಸಿ ನಿಷ್ಕಷಾ ಯಂ ನಿನ್ನ ರಾಜ್ಯದೊಳ್ ಸುಖಮಿರೆಂದು ಕಳುಪುವುದುಂ ರಾವಣಂಗೆ ನಿಶ್ಶಲ್ಯ ನಾಗಿ ತನ್ನ ಪೊಳಲ್ಗೆವಂದು ಇಂದುವೆಂಬ ತನ್ನ ಪಿರಿಯಮಗಂಗೆ ರಾಜ್ಯಮಂ ಕೊಟ್ಟು ತನ್ನ ಮಗನಪ್ಪ ಜಯಂತನುಂ ತನ್ನ ಲೋಕಪಾಲರುಂ ಬೆರಸು ದೀಕ್ಷೆ ಗೊಂಡು ಮೋಕ್ಷಕ್ಕೆ ಪೋದನಿತ್ತಲಿಂದ್ರನಂ ಗೆಲ್ದು ವಿಯಚ್ಚರೇಂದ್ರಂ ವರುಣನ ಮೇಲೆ ನಡೆಯಲೆಂದು ಸಮಸ್ತ ಸಾಮಂತರಂ ಬರಿಸಿ [1]ಹನುಮರದ್ವೀಪಕ್ಕೆ ದೂತನ ನಟ್ಟುವುದುಮಾತಂ ಬಂದು ಪ್ರತಿಸೂರ್ಯನುಮಂ ಪವನಂಜಯನುಮಂ ಕಂಡು ನಿಜಾಗಮನ ವೃತ್ತಾಂತಮನರಿಪುವುದುಂ ಪವನಂಜಯನಾಂಜನೇಯನಂ ಬರಿಸಿ—

ಮ॥ ಸ್ರ॥ ವರುಣಂ ಬಾಯ್ಕೇಳನೆಂಬೀ ಮುನಿಸನುವಿಸೆ ಮೇಲೆತ್ತಲೆಂದೀಗಳೆಮ್ಮಂ ।
ಬರವೇಳ್ದಂ ದಾನವೇಂದ್ರಂ ತಡೆವುದು ಪದನಲ್ತೊಪ್ಪುಗೊಳ್ ರಾಜ್ಯರಕ್ಷಾ॥
ಭರಮಂ ನೀನೆಂಬುದುಂ ಮಾರುತಿ ಮುಕುಳಿತ ಹಸ್ತಾಂಬುಜಂ ವೀರಲಕ್ಷ್ಮೀ
ಪರಿರಂಭೋತ್ಸಾಹದಿಂದಾ ಬೆಸನನತಿಬಳಂ ತಂದೆಯಂ ಬೇಡಿಕೊಂಡಂ॥೨೧೩

ಅಂತು ಬೆಸನಂ ಬೇಡಿಕೊಂಡು ವಿಮಾನಾರೂಢನಸಂಖ್ಯಾತ ಬಲಸಮೇತಂ ಸಮುದ್ರಮಧ್ಯ ದ್ವೀಪಂಗಳುಮಂ ಪೊಳಲ್ಗಳುಮನಭೀಕ್ಷಿಸುತ್ತುಂ ಬರ್ಪ ಸಮಯ ದೊಳ್ ರಾವಣಂ ಗಗನ ಮಂಡಲದೊಳಿರ್ದು ಹನುಮನ ಬರವಂ ಕಂಡು—

1. ಹನುರುಹದ್ವೀಪಕ್ಕೆ ಕ ಬ.

ಚ ॥ ಇದಿರ್ವರೆ ತಾನುಮುತ್ಸುಕತೆಯಿಂದಿದಿರ್ವಂದು ಮರುತ್ಸುತಂ ಪದ ।
ಕ್ಕೊದವಿದ ಭಕ್ತಿಯಿಂ ಮಣಿಕಿರೀಟ ಮರೀಚಿಯಿನೀಯೆ ಪಾದ್ಯಮಂ ॥
ಪದೆಪಿನಳುರ್ಕೆಯಿಂ ತೆಗೆದು ತಟ್ಟಿಸೆ, ದಾನವ ಚಕ್ರವರ್ತಿಗಾ ।
ದುದು ರಿಪುಚಕ್ರಮಂ ತವಿಪುದಿನ್ನೆನಗಾವರಿದೆಂಬ ಸಂತಸಂ ॥ ೨೧೪ ॥

ಅಂತಾತನಂ ಕಾಣಿಸಿಕೊಂಡು—

ಕಂ ॥ ಆಗಸಮುಂ ದೆಸೆಯುಂ ಭೂ
ಭಾಗಮುಮೆಡೆನೆಱೆಯದೀ ಬಲಕ್ಕೆನೆ ನಡೆದಂ ॥
ಮೇಗಿಲ್ಲದ ಬಲ್ಲಾಳ್ ರಣ
ರಾಗರಸಂ ಕದನ ಕರ್ಕಶಂ ದಶವದನಂ ॥ ೨೧೫ ॥

ಅಂತು ನಡೆದು ಪಾತಾಳಪುಂಡರೀಕಪುರಮಂ ಮೂವಳಸಾಗೆ ಸುತ್ತಿ ಮುತ್ತೆ ವರುಣನತಿಕುಪಿತನಾಗಿ ಪೊಱಮಡುವುದುಮೊಡನೆ—

ಕಂ ॥ ಒರ್ವನೆ ಜವನೆಂಬುದು ಪುಸಿ
ನೂರ್ವರ್ ಜನಿಯಿಸಿದರೆನಿಸಿ ಖಚರಕುಮಾರರ್ ॥
ದೋರ್ವಲದೃಪ್ತರ್ ಪುರಮಂ
ನೂರ್ವರ್ ಸಂಗ್ರಾಮ ಲಂಪಟರ್ ಪೊಱಮಟ್ಟರ್ ॥ ೨೧೬ ॥

ಸಿಂಗದ ಜಂಗುಳಿಯಂತಿರ
ಸುಂಗೊಳಿ ಪೊಱಮಟ್ಟು ಕಾದೆ ವರುಣ ಕುಮಾರರ್ ॥
ಬೆಂಗೊಟ್ಟುದು ದಶಮುಖ ಚತು
ರಂಗಬಲಂ ಸಮರಮುಖದೊಳವರ್ಗಿದಿರುಂಟೇ ॥ ೨೧೭ ॥

ಅಂತು ಕಾದುತ್ತುಮಿರೆ ಹನುಮನೆಡೆವೊಕ್ಕು ತನ್ನ ಸೇನೆಯಿಂ ರಿಪುಸೇನೆಯಂ ಸುತ್ತಿಮುತ್ತಿ—

ಉ ॥ ವಾನರವಿದ್ಯೆ[1]ಯುಂ ತಳೆದು ವಾನರ ರೂಪುಮನಾಂತು ವಿದ್ವಿಷ ।
ಶ್ರೇಣಿಯೊಳಾನೆಯುಂ ಕುದುರೆಯುಂ ರಥಮುಂ ಪೃಥು ಗಂಡಶೈಲ ಸಂ ॥
ತಾನದಿನಿಟ್ಟು ಮೋದಿ ತರುರಾಜಿಗಳಿಂ ತವೆ ಕೊಂದನಾರ್ ಮರು ।
ತ್ಸೂನುಗೆ ಕಯ್ದುಗೆಯ್ದು ಕಡುಕೆಯ್ದು ಬರ್ದುಂಕುವರಾಜಿರಂಗದೊಳ್ ॥೨೧೮॥

---

1. ಯಿಂ ಗ.

ಅಂತು ಹನುಮನನುವರದೊಳಾಂತ ಬಲಮಂ ಕೃತಾಂತನಂತೆ ತವಿಸಿ ರಾಜೀವ ಪುಂಡರೀಕ ಪ್ರಮುಖ ನಿಜಕುಮಾರರ್ ನೂರ್ವರುಮಂ ಪಿಡಿದು ಕಟ್ಟುವುದುಂ ವರುಣಂ ಕಂಡತಿ ಕುಪಿತನಾಗಿ—

ಕಂ ॥ ನೆನೆಯದೆ ಕಲುಷವಶಂ ನ
ಚ್ಚಿನ ವಿದ್ಯೆಗಳಂ ಕಡಂಗಿ ಕಾದುವ ಪದದೊಳ್ ॥
ದನುಜೇಂದ್ರಂ ಪಿಡಿದಂ ವರು
ಣನನಾಮಂ ರಾವಣಂಗೆ ಕೂರ್ಪಂ ತೋರ್ಪಂ ॥ ೨೧೯ ॥

ಅಂತಾತನಂ ಪಿಡಿದು ಕುಂಭಕರ್ಣಂಗೆ ಸೆಱೆಯನೊಪ್ಪಿಸಿ ಭುವನೋನ್ಮಾದಮೆಂಬುದ್ಯಾನವನದೊಳ್ ಬೀಡಂಬಿಟ್ಟೋಲಗಂಗೊಟ್ಟಿರ್ದು ವರುಣನಂ ಬರಿಸಿ—

ಕಂ ॥ ಕಲಿ ನಾಮಂ ಪಿಡಿವಡೆವಂ
ಕಲಹದೊಳಿದು ಭಂಗಮಲ್ತು ನೀಂ ಮುನ್ನಿನವೋಲ್ ॥
ನೆಲಸಿರ್ಪುದು ನಿಜರಾಜ್ಯದೊ
ಳೊಲವಿಂದೆಂದೊಸೆದು ವರುಣನಂ ಮನ್ನಿಸಿದಂ ॥ ೨೨೦ ॥

ಅಂತು ಮನ್ನಿಸಿ ಕರಗ್ರಹಣಂಗೆಯ್ದು ಕಾರುಣ್ಯಮನಱಿಪುವುದುಂ ವರುಣಂ ಹನುಮನ ಸೆರಗಿಲ್ಲದ ಬಲ್ಲಾಳ್ತನಮಂ ಪೊಗೞ್ದು ಸತ್ಯವತಿಯೆಂಬ ತನ್ನ ಮಗಳಂ ರಾವಣಂಗೆ ಮಹಾವಿಭವದಿನಿತ್ತು ತನ್ನ ಪೊೞಲ್ಗೆವೋದನಿತ್ತ ರಾವಣಂ ಲಂಕೆಗೆ ವಂದು ಚಂದ್ರನಖಿಯ ಮಗಳಪ್ಪನಂಗಪುಷ್ಪೆಯುಂ ಶ್ರೀಶೈಲಂಗೆ ಪರಿಣಯನೋತ್ಸವದಿನಿತ್ತು ಕರ್ಣಕುಂಡಲಪುರಮನಾತಂಗೆ ರಾಜ್ಯಾಭಿಷೇಕಂಗೆಯ್ದು ಕುಡುವುದುಮಲ್ಲಿಯೆ ಸಹಸ್ರಾಂತಃಪುರ ಪುರಂಧ್ರಿಯರ್ಗೆ ವಲ್ಲಭನಾಗಿ ಸುಗ್ರೀವಂಗಂ ಸುತಾರೆಗಂ ಪುಟ್ಟಿದ ಪದ್ಮರಾಗೆಯುಂ ಮದುವೆನಿಂದು ಸುಖದಿನಿರ್ದನಿತ್ತಲ್—

ಕಂ ॥ ಭರತ ತ್ರಿಖಂಡಮಂ ದಶ
ಶಿರನಾಳ್ವಂ ಚಕ್ರರತ್ನಮನಿರತ್ನಂಗಳ್ ॥
ದೊರೆಕೊಂಡುವಖಿಳ ವಿದ್ಯಾ
ಧರ ವಲ್ಲಭರೆಲ್ಲರುಂ ಪದಾನತರಾದರ್ ॥ ೨೨೧ ॥

ಶಾ ॥ ಆ ಕ್ರೋಧೋದ್ಧತನಪ್ಪ ರಾವಣನೊಳಾಪಂ ಕಾದುವಂ ಯುದ್ಧದೊಳ್ ।
ಶಕ್ರಂಗಂ ತ್ರಿಜಗದ್ವಿಭೂಷಣ ಗಜಂ ಕೊಂದಿಕ್ಕಲೇಂ ನಾಲದೇ ॥
ಚಕ್ರಕ್ಕಂ ಪರಚಕ್ರಮುಂಟೆ ಸಕಲೋರ್ವೀಚಕ್ರದೊಳ್ ವಿದ್ವಿಷ ।
ಚ್ಚಕ್ರಂ ತೋರ್ಕುಮೆ ಚಂದ್ರಹಾಸದಿದಿರೊಳ್ ಮಾಜಾಂತು ವಿಕ್ರಾಂತಮಂ ॥ ೨೨೨ ॥

ಮ ॥ ನಿಖಿಲ ಕ್ಷತ್ರಕುಲಂ ವಿಯಚ್ಚರ ಕುಲಂ ಸಂಗ್ರಾಮ ಕೇಳೀ ಪರಾ ।
ಙ್ಮುಖವಾತ್ಮಪ್ರತಿಬಿಂಬದಂತೆ ಬಱಸಂದಾಜ್ಞಾವಿಧೇಯಂ ಗುಹಾ ॥
ಮುಖದಂತೆಂದುದನೆನ್ನದಂದು ನವರಕ್ತಾಸಕ್ತ ನಕ್ತಂಚರೀ ।
ಮುಖದೊಳ್ ಕೂಂಕುವುದಾಂತರಂ ದಶಮುಖೋತ್ಖಾತಾಸಿ ಧಾರಾ ಮುಖಂ
॥ ೨೨೩ ॥

ಮ ॥ ತ್ರಿಜಗದ್ಭೀಷಣ ನಾಮ ಸಾಮಜಮನೇಂ ಮಾಱಾಂಪುವೇ ಮಿಕ್ಕ ಸಾ ।
ಮಜಮಾ ಯಕ್ಷಸಹಸ್ರ ರಕ್ಷಿತಮನುದ್ಯಚ್ಚಕ್ರಮಂ ಚಂದ್ರಹಾ ॥
ಸ ಜಯೋಗ್ರಾಸಿಯನಾಂಪ ಕೈದುವೊಳವೇ ಕೈಲಾಸಮಂ ಕಿತ್ತ್ತ ।
ದ್ಭುಜಮಂ ಭೂಚರ ಖೇಚರರ್ಕಳ ಭು[1]ಜಂಗಳ್ ಪಿಂಗದೇನಾಂಪುವೇ ॥ ೨೨೪ ॥

ಮದಮಂ ಭದ್ರಗಜಕ್ಕೆ ರಾಜವೆಸರಂ ಚಂದ್ರಂಗೆ ತೀವ್ರ ಪ್ರತಾ ।
ಪದ ಪೆರ್ಚಂ ತಪನಂಗೆ ತೇಜದೊದವಂ ಸಪ್ತಾರ್ಚಿಗತ್ಯುಗ್ರ ಖ ॥
ಡ್ಗದಗುರ್ವಂ ಗಹನಕ್ಕೆಯುನ್ನತಿಯನೇಱಂ ಗೋತ್ರ ಭೂಭೃತ್ಕುಲ ।
ಕ್ಕದಟಂ ಸೈರಿಸುವಂ ಪೆಱಂಗೆ ಪೆಜತೇಂ ಲಂಕೇಶ್ವರಂ ಸೈರಿಸಂ ॥ ೨೨೫ ॥

ಕದನ ಕ್ಷೋಣಿಯೊಳೋಡಿದರ್ ಮಡಿದರೆಂಬೀ ವಾರ್ತೆಯಂ ಕಂಡರೆಂ ।
ದುದನೇಗೊಂಡರಿಳೇಶರೆಂಬ ನುಡಿಯಂ ಭೂಭಾಗದೊಳ್ ಕೇಳಲಾ ॥
ದುದು ಗೆಲ್ವರ್ ಸರಿಗಾದಿದರ್ ಪಗೆವರೆಂಬೀ ವಾರ್ತೆಯಂ ಕೇಳಲಾ ।
ಗದವಂ ವರ್ತಿಸಿದಿಂಬಱಕ್ಕೆಸೆ ಜಗದ್ವಿದ್ರಾವಣಂ ರಾವಣಂ ॥ ೨೨೬ ॥

ಕಂ ॥ ಆಯುಧವೆಸಿತೊಳವವು ದಿ
ವ್ಯಾಯುಧಮುವನಳವದಾರ ಕೈಯುಳವಾತಂ ॥
ಕಾಯಲ್ ಬರ್ದುಂಕುವರ್ ಕಯ್
ಗಾಯುದೊಡಾವಂಗಮೇಂ ನಿಲಲ್ಬಂದಪುದೇ ॥ ೨೨೭ ॥

ಭೀಷಣ ಬಲರಸುಹೃದ್ಬಲ
ಶೋಷಣದಕ್ಷರ್ ನೃಪಾಲ ಶರಣಾಗತ ಸಂ ॥
ತೋಷಕರ ಕುಂಭಕರ್ಣ ವಿ
ಭೀಷಣರೆಂಬರ್ ದಶಾಸ್ಯನೊಡವುಟ್ಟಿದವರ್ ॥ ೨೨೮ ॥

ಉ ॥ ಕಾಲಮನಾಸೆಗೆಯ್ವಸಿದಿರಿಕ್ಕುವನೆವ್ಮೊಳಗಾವನೆಂದವರ್ ।
ಕಾಲನನೇಳಿದಂ ಬಗೆವರೀ ನೆಲನಂ ವಿಜಿಗೀಷು ವೃತ್ತಿಯಿಂ ॥

---

1. ಜಾದಂಡಂಗಳೀ. ಜ.

ಪಾಲಿಸುವರ್ ಸುರಾಸುರ ವಿಯಚ್ಚರ ಸೇನೆಯೊಳಾರ್ಗವಾಜಿಯೊಳ್ ।
ಸೋಲದ ಮೇಘವಾಹನನುಮಿಂದಗಿಯುಂ ದನುಜೇಂದ್ರ ನಂದನರ್ ॥೨೨೯॥

ಕಂ ॥ ಅವನ ವಿಯಚ್ಚರ ಸೇನೆಯ
ಪವಣನದೇವೇಳ್ವೆ ಕಯ್ದುಗೆಯ್ಯದೊಡವುದಂ ॥
ತವೆ ಕೊಲ್ವುದರಿದು ದನುಜನ
ಬವರಂ ಕೈಸಾರೆಯಲ್ತು ಗೆಲ್ಲದ ಬವರಂ ॥ ೨೩೦ ॥

ಬಲದ ಭುಜಬಲದ ವಿದ್ಯಾ
ಬಲದ ಮನೋಬಲದ ಬಲ್ಪಿನಿಂ ನೃಪರಾರ್ಗಂ ॥
ಗೆಲಲರಿಯಂ ದಶಕಂಧರ
ನಲಂಘ್ಯ ವಿಕ್ರಾಂತ ತುಂಗನಮರೇಂದ್ರಂಗಂ ॥ ೨೩೧ ॥

ಎಂಬುದುಂ ಲಕ್ಷ್ಮಣಂ ಮುಳಿಸುವೆರಸಿದ ಮುಗುಳ್ನಗೆ ಪಸರಿಸೆ ಪರಿಹಾಸ ವಚೋವಿಳಾಸದಿನಿಂತೆಂದಂ---

ಮ ॥ ಅದಟಂ ರಾವಣನೆಂಬುದಂ ನುಡಿದು ತೋಱಲ್ವೇೞ್ಪುದೇ ಕಾದಲ ।
ಣ್ಮದೆ ಕಳ್ದುಯ್ದುದೆ ಪೇೞ್ಗುಮಂಬಿಕೆಯನಾತಂ ಭೀತನಿಕ್ಷ್ವಾಕು ವಂ ॥
ಶದರಂ ಗೆಲ್ಗುಮೆ ರಾಮರಾವಣರ ಬಲ್ಪಂ ಮೆಲ್ಪುಮಂ ಕಾಣಲ ।
ಪ್ಪುದು ಘಟ್ಟೋತ್ತಿಱುವಲ್ಲಿ ದಿಟ್ಟದೊಲೆಯಿಂ ತೂಗಿಂ ರಣಕ್ಷೋಣಿಯೊಳ್ [ ॥ ೨೩೨ ॥

ಚ ॥ ನಡೆವುದಿಳೇಶನೊಳ್ ತೊಡರದನ್ನೆಗಮಾತನ ಗಂಡಗರ್ವಮಿ ।
ನ್ನಡೆಗುಮೆ ರಾಮನಂಬು ನೆಱನಂ ನಡೆ ಕಾಲ್ನಡೆಗೆಟ್ಟು ನಿಲ್ಕುಮಿಾ ॥
ನುಡಿ ತಡಮಲ್ತು ನಾಳೆಯೆ ರಣಾಂಗಣದೊಳ್ ನಡೆ ನೋಡುವಿರ್ ಮರು ।
ಳ್ವಡೆಯೊಡಗೂಡೆ ತಾಂಡವಮನಾಡುವ ರಾವಣನಟ್ಟೆಯಾಟಮಂ ॥ ೨೩೩ ॥

ಕಂ ॥ ದನುಜೇಂದ್ರನಲ್ಪ ವೀರ್ಯಂ
ಮನುಜೇಂದ್ರನನಂತ ವೀರ್ಯನಣ್ಣಂಗಾವ ॥
ಣ್ಣನುಮಿದಿರೆ ಕರಿಗಳಂ ಗೆ
ಲ್ವನಿತಱೊಳಿಭವೈರಿ ಶರಭಮಂ ಗೆಲ್ವಪುದೇ ॥ ೨೩೪ ॥

ಕತ್ತಲೆ ಪಿರಿದಾದೊಡಮೇಂ
ಮಾರ್ತಲೆಯೆ ದಿನಾಧಿಪಂಗೆ ಪಿರಿದಾದೊಡಮೇ ॥
ನಾರ್ತಪುದೆ ವೈರಿ ಸೈನ್ಯಮ
ಡುರ್ತಿಱಿಯಲಜೇಯ ಬಾಹುಬಲನಂ ಬಲನಂ ॥ ೨೩೫ ॥

ಚ ॥ ಹಿತ ಮಿತ ವಾಕ್ಯನಸ್ಖಲಿತ ಧೈರ್ಯಗುಣಂ ಗುಣರತ್ನ ರೋಹಣ ।
ಕ್ಷಿತಿಧರನತ್ಯುದಾತ್ತ ಮಹಿಮಂ ಶರಣಾಗತ ವಜ್ರಪಂಜರಂ ॥
ನತ ನರಪಾಲ ಮೌಳಿ ಹರಿನೀಳಮಣಿ ಪ್ರಚಯ ದ್ವಿರೇಫ ಚುಂ ।
ಬಿತ ಚರಣಾರವಿಂದನವದಾತ ಯಶಂ ಕವಿತಾಮನೋಹರಂ ॥ ॥ ೨೩೬ ॥

ಇದು ಪರಮ ಜಿನಸಮಯ ಕುಮುದಿನೀಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖ ಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ದಶವದನ ವಂಶವರ್ಣನಂ
ದಶಮಾಶ್ವಾಸಂ.

## ಏಕಾದಶಾಶ್ವಾಸಂ

ಕಂ ॥ ಶ್ರೀವಧುಗೆ ಪೇರುರಂ ಜ
ನ್ಯಾವಾಸಂ ಕೀರ್ತಿವಧುಗೆ ಕೇಳೀಗೃಹಮಾ ॥
ಶಾವಲಯಮೆನೆ ಸಮಸ್ತ ಕ
ಲಾ ವಿಭವಮನಪ್ಪುಕೆಯ್ದನಭಿನವಪಂಪಂ ॥ ॥ ೧ ॥

ಎಂಬುದುಂ ಜಾಂಬವತ್ಪ್ರಮುಖ ಪ್ರಧಾನರಿಂತೆಂದರ್—

ಚ ॥ ಎಮಗಧಿರಾಜನಾಗಿ ಖಚರೋರ್ವಿಗೆ ವಲ್ಲಭನಾಗಿ ಖೇಚರ ।
ಪ್ರಮದೆಯರಿಂ ಮನಂಗೊಳಿಸಿ ರಾಜ್ಯವಿಲಾಸಮನಪ್ಪುಕೆಯ್ದನಂ ॥
ಕ್ರಮದೊಳೆ ದಂಡವೊಂದುಱಿಯೆ ಭೇದಿಸಿ ತರ್ಪುದು ದೇವಿಯಂ ಪರಾ ।
ಕ್ರಮದೆಡೆಯಲ್ತು ಪೊಲ್ಲದು ದುರಾಗ್ರಹಮಾತನೊಳಾಗ ವಿಗ್ರಹಂ ॥ ೨ ॥

ಅವರಿವರೆನ್ನದಾವ ನೃಪನಂದನರುಂ ದನುಜಂಗೆ ಭೀತಿಯಿಂ ।
ದವನತರಪ್ಪರಲ್ಲದೊಸೆದಾಳ್ವೆಸದಿಂ ನಡೆವನ್ನರಿಲ್ಲನಾ ॥
ಮವರನುಪಾಯದಿಂ ನಮಗೆ ಬೆಂಬಲಮಾಗಿರೆ ಮಾಡಿ ಕೂಡಿಕೊಂ ।
ಡವನೊಡನೆತ್ತಿ ಕಾದುವುದು ಕಾಲ ವಿಲಂಬನಮಾಗಲಾಗದೇ ॥ ೩ ॥

ಎಂಬುದುಂ ರಘುವೀರಸಿಂತೆಂದಂ—

ಕಂ ॥ ಆತಂಗೆ ನೆಱೆಯಲಾಜದ
ಭೀತರ ನೆರವೇವುದೆನಗೆ ಮೊನೆಯೊಳ್ ದನುಜಂ ॥
ಗಾತಂಕಮನೊಡರಿಸಲನು
ಜಾತ ಭುಜೋತ್ಖಾತ ಖಡ್ಗಮಿದೆ ನೆರಮಲ್ತೇ ॥ ೪ ॥

ಚ ॥ ಅಸದನುಶಾಸನಂ ರಘುಕುಲಕ್ಕೆ ಕುಲವ್ರತಮನ್ಯ ಕಾಂತೆಗಾ ।
ಟಿಸಿದ ದುರಾತ್ಮನಂ ರಣದೊಳಣ್ಮಿದನಪ್ಪೊಡಮೋಘ ಬಾಣದಿಂ ॥
ದೆಸೆವಲಿಗೆಯ್ವೆನಳ್ಕಿ ರಣಕೇಳಿಗೆ ಜಾನಕಿಯಂ ದಶಾಸ್ಯನೊ ।
ಪ್ಪಿಸಿದೊಡೆ ಕಾವೆನಿಲ್ಲಿ ನಿಮಗಂ ನಮಗಂ ಪದನಲ್ತು ಮಂತಣಂ ॥ ॥ ೫ ॥

ಎಂಬುದುಂ ಜಾಂಬೂನದಂ ತನ್ನೊಳಿಂತೆಂದಂ—

ಕಂ ॥ ತೃಣಪುರುಷನಾಗಿ ಕಲ್ಪಿಸಿ
ರಣ ರಭಸಮುನಪ್ಪುಕೆಯ್ದಪಂ ಬಗೆಯದೆ ರಾ ॥
ವಣನುಮನಿನ್ನುಂ ಮುನ್ನುಂ
ಗಣನಾತೀತ ಪ್ರತಾಪನೀ ರಘುರಾಮಂ ॥ ೬ ॥

ಮ ॥ ಸೆರಗಂ ಸಾರದುದಾತ್ತರಾಘವನ ಮಾತಂ ಕೇಳ್ದು ಜಾಂಬೂನದಂ ।
ಸಿರಿದುಂ ವಿಸ್ಮಯಮುತ್ತು ಕಾದಿ ರಣದೊಳ್ ಪೌಲಸ್ತ್ಯನಂ ಗೆಲ್ವ ದು ॥
ರ್ಧರ ಬಾಹಾಬಲಮಂ ಪರೀಕ್ಷಿಸುವೆನೆಂಬೀ ಚಿತ್ತದಿಂ ಪೇೞಲಾ ।
ತುರನಾದಂ ದನುಜಂಗೆ ದಿವ್ಯಮುನಿಗಳ್ ಮುಂ ಪೇೞ್ದ ವೃತ್ತಾಂತಮಂ॥ ೭ ॥

ಅಂತು ಬಗೆದು ರಘುವೀರನ ಮುಖಾರವಿಂದಮಂ ನೋಡಿ ಜಾಂಬೂನದಂ ಮುಕುಲಿತ ಕರಕಮಲನಿಂತೆಂದಂ ದೇವ ಮುನ್ನಮೊರ್ಮೆ ದಶಗ್ರೀವನನಂತವೀರ್ಯ ಕೇವಲಿಗಳ ಚರಣೋಪಾಂತದೊಳ್ ಧರ್ಮಮಂ ಕೇಳ್ದು ತದನಂತರಮೆನಗೆ ಪೆಱರ ಕೈಯೊಳ್ ಮರಣಮಕ್ಕುಮಾಗದೆಂಬುದಂ ಬೆಸಸಿಮೆನೆ ನಿನಗೆ ಸಿದ್ಧಶೈಲಮನೆತ್ತಿದನ ಕೈಯೊಳ್ ಮರಣಮಕ್ಕುಮೆನೆ ಸಿದ್ಧ ನಗಮನುದ್ಧರಿಸುವ ಮಹಾಸತ್ವನಾವನುಮಿಲ್ಲ ದುದಱೆನೆನಗೆ ಮರಣಮಿಲ್ಲೆಂದು ಹರ್ಷಿತಚಿತ್ತನಾದನೆಂಬುದುಂ ಲಕ್ಷ್ಮಣದೇವ ನಿಂತೆಂದಂ--

ಕಂ ॥ ಕುಲನಗಮಂ ನೆಗಪುವ ದೋ
ರ್ವಲಕ್ಕೆ ನಿರ್ವಾಣಶೈಲಮೇ ಗಹನಮದಂ ॥
ಚಲಿಯಿಸುವೆನಚಲ ವಚನಂ
ಪಲಾಲಮನ್ವರ್ಥನಾಮಮುಲ್ತೆಂಬಿನೆಗಂ ॥ ೮ ॥

ಎಂಬುದುಮಾ ಮಾತಂ ಮನದೇಗೊಂಡು ಜಾಂಬೂನದನುಂ ವಿಮಲಬುದ್ಧಿ ಸುಗ್ರೀವ ನಳ ನೀಲಾರ್ಕಮಾಲಿಗಳುಂ ರಹಸ್ಯದಿಂ ರಾಮಲಕ್ಷ್ಮಣರಂ ವಿಮಾನಮ ನೇಱಸಿಕೊಂಡು ವಿಯನ್ಮಾರ್ಗದೊಳೆ ಪೋಗಿ ನಿರ್ವಾಣನಗಮನೆಯ್ದಿ ಬಲವಂ ದರ್ಶಿಸೆ ತದನಂತರಂ ಸೌಮಿತ್ರಿ ಸಿದ್ಧಗುಣ ಸ್ತವನಂ ಮಾಡಿ—

ಮ ॥ ಪದ ಘಾತಕ್ಕೆ ಧರಿತ್ರಿ ಬಾಯ್ಬಿಡೆ ಭುಜಾದಂಡಂಗಳಂ ಸಾರ್ಚಿ ಬಿ ।
ರ್ಚಿದಿಳಾಸಂಧಿಗೆ ಮೆಯ್ಗೊಣರ್ಚಿ ನೆಲೆಯಿಂದಕ್ಷೂಣ ಸತ್ವಂ ತಳ ॥
ರ್ಚಿ ದಶಗ್ರೀವನ ಕಂಠಕಂದಳದ ಬೇರಂ ಕೀಳ್ವವೋಲ್ ಕಿೞ್ತನೆ ।
ತ್ತಿದನೊಟ್ಟೈಸಿದರಿನ್ನರಾರೆನಲುಪೇಂದ್ರಂ ಸಿದ್ಧ ಶೈಲೇಂದ್ರಮಂ ॥ ೯ ॥

ಉ ॥ ಆ ಕುತ್ಕೀಲಮನೊಂದೆ ದಕ್ಷಿಣಭುಜಂ ಪೊತ್ತೆತ್ತೆ ಬಾಹಾಬಲ ।
ಕ್ಕೇಕಚ್ಛತ್ರಮುದ್ರಾಯ್ತು ತತ್ಸಮಯದೊಳ್ ದೇವಾನಕ ಧ್ವಾನಮಾ ॥

ಶಾ ಕುಂಭೋದರ ವರ್ತಿಯಾಯ್ತು ಸುಮನೋವರ್ಷಂ ನದದ್ಭೃಂಗಮಾ ।
ಳಾಕೀರ್ಣಂ ಪೊಸತಾಯ್ತು ಸಾಹಸಧನಂ ಸೌಮಿತ್ರಿ ಸಾಮಾನ್ಯನೇ ॥ ೧೦ ॥

ಅಂತು ಸಿದ್ಧನಗಮನುದ್ಧರಿಸುವುದುಂ—

ಕಂ ॥ ಗಿರಿ ನಿರ್ಝರ ಪ್ರವಾಹಂ
ಸುರಿದುದು ಭರತತ್ರಿಖಂಡ ರಾಜ್ಯಾಭಿಷವಂ ॥
ದೊರೆಕೊಂಡಪ್ಪುದು ದಶಕಂ
ಧರ ವಧೆಯಿಂದೆಂದು ಮುಂದೆ ತೋರ್ಪಂತಾಗಳ್ ॥ ೧೧ ॥

ಹರಿಯ ಭುಜದಳವನೀಕ್ಷಿಪ
ಸುರ ಸಮಿತಿಗೆ ಬೆಳಗಿದಂತೆ ಕೈದೀವಿಗೆಯುಂ ॥
ಗಿರಿಗುಹೆಯಿಂ ಫಣಮಣಿ ಭಾ
ಸುರಂಗಳತಿ ಭಯದಿನುದ್ಗ ವೊಗೆದುವು ಫಣಿಗಳ್ ॥ ೧೨ ॥

ಪೂಮುಱಿಯಂತಲ್ಲೊಕ್ಕುವು
ಪೂಮರಗಳ ಪೂಗಳಚಲವೇಖುಳೆಯಿಂದಾ ॥
ಪೂಮುಱಿಯ ಮೊಱಗಿನಂತೆ ಗು
ಹಾ ಮುಖದಿಂದುಣ್ಮಿದತ್ತು ಸಿಂಹ ನಿನಾದಂ ॥ ೧೩ ॥

ಆ ಸಮಯದೊಳ್——

ಕಂ ॥ ಸುರ ಕುಸುಮವೃಷ್ಟಿ ಸುರ ತೂ
ರ್ಯ ರವಂ ಸುರ ಜಯಜಯ ಸ್ವನಂ ಕೈಮಿಗೆ ವಾ ॥
ನರಚಿಹ್ನ ಪ್ರಮುಖ ವಿಯ
ಚ್ಚರ ಪತಿಗಳ್ ತಮ್ಮ ಮನದೊಳಚ್ಚರಿವಟ್ಟರ್ ॥ ೧೪ ॥

ಅಂತವರತಿ ವಿಸ್ಮಯಂಬಟ್ಟು ರಾಮಲಕ್ಷ್ಮಣರಂ ಪೂಜಿಸಿ ಪೊಡೆವಟ್ಟು ಭರತ ತ್ರಿಖಂಡ ಮಂಡಲಮಂ ಬಲಗೊಂಡು ವೃಷಭಾದಿ ತೀರ್ಥವಂದನಾನಂದಮಂ ಮನದೇಗೊಂಡು ಮಗುಳೆ ಬಂದಾರಾತ್ರಿಯೊಳ್ ಕಿಷ್ಕಿಂಧಪುರಮಂ ಪೊಕ್ಕು ವಿಶ್ರಮಿಸಿ ಮಱುದಿವಸಂ—

ಕಂ ॥ ಅಮರರ್ ಪೂಜಿಸಿದ ಮಹ
ತ್ತ್ವಮುಮಂ ಲಕ್ಷ್ಮಣನ ಸಿದ್ಧ ಶೈಲೇಂದ್ರಮನ ॥
ಶ್ರಮದಿಂದೆತ್ತಿದ ಭುಜವೀ
ರ್ಯಮುಮಂ ಪೊಗಱುತ್ತುಮಿರ್ಪಿನಂ ಕೆಲರೆಂದರ್ ॥ ೧೫ ॥

ಆ ರಾವಣನುಂ ಮುನ್ನಂ
ತಾರಾದ್ರಿಯನೆತ್ತಿದಿರ್ದನೇ ಭುಜಬಲದಿಂ ॥
ದಾರಥಿಕರೆಂಬುದಂ ಸಮ
ರಾರಂಭದೊಳಲ್ಲದಱಿಯಲೇಂ ಬಂದಪುದೇ ॥ ೧೬ ॥

ಎಂಬುದುಂ—

ಕಂ ॥ ರಾವಣನಗಮುಂ ವಿದ್ಯಾ
ದೇವತೆಗಳ ಬಲದಿನೆತ್ತಿದಂ ಭುಜಬಲದಿಂ ॥
ದಾವನುಮೆತ್ತಿದನಿಲ್ಲೀ
ಭೂವಲ್ಲಭನಂದದಿಂದಮೆಂದರ್ ಕೆಲಬರ್ ॥ ೧೭ ॥

ಕೆಲರೀತಂ ರಾವಣನಂ
ಕಲಹದೊಳುಱದಿಕ್ಕಿ ಭರತ ಮಂಡಲಮುಂ ದೋ ॥
ರ್ವಲದಿಂದಮಾಳ್ವನೆಂದರ್
ಕೆಲರಾವಂ ರಾವಣಂಗಿದಿರ್ಚುವನೆಂದರ್ ॥ ೧೮ ॥

ಅಂತವರೋರೊರ್ವರೊಂದೊಂದಂ ನುಡಿಯುತ್ತುಮೊಡನೆ ವರೆ ಸುಗ್ರೀವಾದಿಗಳ್ ಬಂದು ಪೊಡೆವಟ್ಟು ಕುಳ್ಳಿರ್ಪುದುಂ ಪದ್ಮದೇವನವರ ಮುಖಪದ್ಮಮಂ ನೋಡಿ—

ಕಂ ॥ ಎಡೆಯುಱಯದಿನ್ನೆವರೆಗಂ
ತಡೆದನ್ನೆಯಮೊಂದೆ ಸಾಲದೇ ಜಾನಕಿಯಿ ॥
ರ್ದೆಡೆಯುಱಿದು ಲಂಕೆಗೆತ್ತಡೆ
ತಡೆಯೆ ಪರಾಕ್ರಮದ ಪೆರ್ಮೆ ಪಱೆಗೆಡೆಯಕ್ಕುಂ ॥ ೧೯ ॥

ಎನೆ ಜಾಂಬವನಿಂತೆಂದಂ—

ಕಂ ॥ ನಯಮುಂ ತಮಗಱಿಪಿದೊಡ
ನ್ನೆಯಮುಂ ಬಿಡದನ್ನರಿಲ್ಲ ರಾಗಾದಿಗಳೇಂ ॥
ನಿಯತಂಗಳೆ ಕನ್ನಡಿಯಂ
ಪ್ರಯತ್ನದಿಂ ಬೆಳಗೆ ಪತ್ತುವಿಡದೆ ಕಲುಂಬಂ ॥ ೨೦ ॥

ಅತಿವರ್ತಿಗಳ್ಕೆ ದಾನವ
ಪತಿಗಱಿಪುವರಿಲ್ಲ ತಕ್ಕುದಂ ಪರಿಜನದೊಳ್ ॥

ಹಿತನಂಜದೆ ಪೇಟ್ದು ಸುಭಾ
ಷಿತಮಂ ಕೈಕೊಳಿಸುಗುಂ ವಿಭೀಷಣನೆ ವಲಂ ॥ ೨೧ ॥

ಹರಿಣಿ ॥ ದನುಜನನುಜಂ ಶುದ್ಧಾಚಾರಂ ವಿಚಾರಪರಂ ಪರಾಂ ।
ಗನೆಯನವನೀನಾಥಂ ತಾಂಗಲ್ಕೆ ತಕ್ಕುದೆ ತಕ್ಕುದಂ ॥
ನೆನೆದು ಕಱಪೆಂದೊಳ್ಪಂ ಪೇಟ್ದಣ್ಣನಂ ಜಡಿದಟ್ಟುಗುಂ ।
ಜನಕಸುತೆಯಂ ಮಿಾಜಂ ದೈತ್ಯಂ ವಿಭೀಷಣನೆಂದುದಂ ॥ ೨೨ ॥

ಉ ॥ ಅಟ್ಟಲೆವೇಟ್ಟುದೊರ್ವಗೆ ವಿಭೀಷಣನಲ್ಲಿಗೆ ನಮ್ಮನಣ್ಪನ ।
ಟ್ಟಟ್ಟಿಯ ಮಾತನಟ್ಟಿದೊಡೆ ದೇವಿಯನಾತನ ಮಾತುಗೇಳ್ದು ಬಿ ॥
ಟ್ಟಟ್ಟುಗುಮುರ್ಕಿ ಸೊರ್ಕಿ ದಶಕಂಠನುದಂಚಿತ ಕಂಠನಾಗಿ ಬಿ ।
ಟ್ಟಟ್ಟದೆ ಬೆಟ್ಟವೆಟ್ಟನುಸಿರ್ದಟ್ಟಿದೊಡಿರ್ದಪುದಲ್ತೆ ಕಾಳೆಗಂ ॥ ೨೩ ॥

ಕಂ ॥ ದೂತನನಟ್ಟುವುದೆಂತುಂ
ನೀತಿಯೆ ನಿಜ ಕುಶಲವಾರ್ತೆಗೇಳದೊಡಕ್ಕುಂ ॥
ಸೀತಾದೇವಿಗೆ ಮರಣಮು
ದೇ ತೊದಳತಿದುಃಖ ವೇಗದಿಂದಾಗದುದೇಂ ॥ ೨೪ ॥

ಎಂಬುದುಮಾ ನುಡಿಗೆ ಮಹೋದಧಿಯಿಂತೆಂದಂ—

ಕಂ ॥ ಮಾರುತ ದಿನಕರ ಕರ ಸಂ
ಚಾರಕ್ಕಮಗಮ್ಯಮೆಂಬಿನಂ ವಿದ್ಯಾಪ್ರಾ ॥
ಕಾರಮನೀಗಳೊಡರ್ಚಿದ
ನಾ ರಾಕ್ಷಸಪತಿಯ ಪುರಮನಾವಂ ಪುಗುವಂ ॥ ೨೫ ॥

ಅದಱನೀಗಳಿಲ್ಲಿರ್ದ ವಿದ್ಯಾಧರರೊಳೊರ್ವರುಂ ಲಂಕೆಗೆ ಪೋಗಲುಂ ಪೋಗಿ ಕಾರ್ಯಮಂ ತೀರ್ಚಿ ಬರಲುಂ ಸಮರ್ಥರಿಲ್ಲಪೊರ್ವನತ್ತಲಿರ್ದಪನಜೇಯ ಬಲನಾಂಜನೇಯನದೆಂತೆನೆ—

ಮ ॥ ದನುಜಂ ಮನ್ನಿಸುವಂ ವಿಭೀಷಣನುಮಾತಂಗೊಳ್ಪಿದಂ ಲಂಕೆಯುಂ ।
ಘನ ಬಾಹಾಬಲದಿಂ ವಿಭೇದಿಸಿ ಪುಗಲ್ ಸಾಮರ್ಥ್ಯಮುಂಟಂಜನಾ ॥
ತನಯಂಗಾತನೆ ದೇವಿಯಂ ಬಿಡಿಸಿ ತರ್ಕುಂ ಕಾದಿ ತರ್ಕುಂ ದಶಾ ।
ನನನೊಟ್ಟೈಸಿದನಪ್ಪೊಡೀ ಕೆಲಸಮಾತಂಗಲ್ಲದೇಂ ಸಾಧ್ಯಮೋ ॥ ೨೬ ॥

ಎಂಬುದುಮಾ ನುಡಿಗೆ ಸಂತೋಷಂಬಟ್ಟು ಮಹೋದಧಿಗೆ ಮೆಚ್ಚುಗೊಟ್ಟು ಸುಗ್ರೀವಂ ಗೃಹಭೂತಿಯೆಂಬ ದೂತನಂ ಹನುಮನಲ್ಲಿಗಟ್ಟುವುದುಮಾತಂ ಗಗನ ಮಾರ್ಗದಿಂ ಪೋಗಿ ಹನುಮರ ದ್ವೀಪಮನೆಯ್ದಿ—

ಕಂ ॥ ನಭದಿಂದವಿೞಿದವಂ ರಾ
ಜ ಭವನಮಂ ಪೊಕ್ಕು ಪವನ ಸುತ ಪಾದ ನಖ ॥
ಪ್ರಭೆ ಪಸರಿಸಿ ತನಗೆ ಶಿರೋ
ವಿಭೂಷಣ ಶ್ರೀಯನೀಯೆ ವಿನಮಿತನಾದಂ ॥ ೨೭ ॥

ಆಗಿ ನಿಜಾಗಮನವೃತ್ತಾಂತಮನಿಂತೆಂದು ಬಿನ್ನವಿಸಿದಂ ರಾಮ ಲಕ್ಷ್ಮಣರ್ ದಂಡಕಾರಣ್ಯಕ್ಕೆ ವಂದು ಶಂಭುಕಂ ಸಾಧಿಸಿದ ಸೂರ್ಯಹಾಸಮಂ ಕೊಂಡಾತನಂ ಕೊಂದುದರ್ಕೆ ಪುಯ್ಯಲ್ಗೆವಂದ ಖರ ದೂಷಣರನವರಸೇನೆವೆರಸು ಕೊಂದು ಮಱಿಗೆ ವಂದ ವಿರಾಧಿತನಂ ಪಾತಾಳಲಂಕೆಯೊಳ್ ನಿಲಿಸಿದರೆಂಬುದಂ ಸುಗ್ರೀವಂ ಕೇಳ್ದು-

ಕಂ ॥ ಇವರತಿಬಲರಿವರಿಂದೆ
ನ್ನ ವಿಷಾದಂ ಕಿಡುಗುಮೆಂಬ ಭರವಶದಿಂ ಕಂ ॥
ಡವರಂ ಶರಣಾರ್ಥಿಯೆನೆ
ನ್ನವಸರಮಂ ತೀರ್ಚಿಮೆಂದು ಬಿನ್ನವಿಸುವುದುಂ ॥ ೨೮ ॥

ಶರಣಾಗತ ರಕ್ಷಣ ತ
ತ್ಪರರದನೇಗೊಂಡು ಕಾದಿ ಸಾಹಸ ಗತಿಯಂ ॥
ಶರಹತಿಯಿಸಿಕ್ಕಿ ಚಿಂತಾ
ಜ್ವರಮಂ ಸುಗ್ರೀವನಂಗದಿಂ ಪಿಂಗಿಸಿದರ್ ॥ ೨೯ ॥

ಅದಲ್ಲದೆಯುಂ—

ಕಂ ॥ ಉದ್ಧರಿಸಿದನಶ್ರಮದಿಂ
ಸಿದ್ಧ ಶಿಲೋಚ್ಚಯಮನೊಂದೆ ಕರತಲದಿಂದ ॥
ಘೊರ್ಯೋದ್ಧರಣ ಸಹಿತಮುಮರರ್
ಬದ್ಧಾಂಜಲಿಯಪ್ಪಿನಂ ಸುಮಿತ್ರಾಪುತ್ರಂ ॥ ೩೦ ॥

ಎಂದು ಬಿನ್ನವಿಸಿದ ದೂತನ ಮಾತಂ ಕೇಳ್ದು—

ಕಂ ॥ ಕೞಿದರ್ ಖರ ದೂಷಣರೆಂ
ಬೞಿಲಂ ಮಾಯಾವಿಯಪ್ಪ ಸಾಹಸ ಗತಿಗಾ ॥
ದೞಿವೞಿಯೆ ಬೇಗೆವೆಟ್ಟಂ
ಮುೞಿಯಿಂದಾಱಿದವೊಲಾಱಿದಂ ಪವನ ಸುತಂ ॥ ೩೧ ॥

ಎನಗಮರಿದಪ್ಪ ಸುಗ್ರೀ
ವನ ಪಗೆಯಂ ತೀರ್ಚಿ ಮಾಡಿದುಪಕಾರಕ್ಕೆ ॥
ನ್ನನೆ ರಾಮ ಲಕ್ಷ್ಮಣರ್ಗೀ
ವನೆಂದು ನಿಶ್ಚಯಿಸಿದಂ ಪ್ರಭಂಜನ ತನಯಂ ॥ ೩೨ ॥

ಆಗಳಾತನಂತಃಪುರ ಸೀಮಂತಿನೀ ಲಲಾಮೆಯಪ್ಪನಂಗಪುಷ್ಪ ಸಹೋದರ ಪಿತೃ ವಿಯೋಗೋದ್ವೇಗಮುಮನಾತನ ನಯನ ಪುತ್ರಿಕೆಗೆ ಪದ್ಮರಾಗ ಮಣಿ ದರ್ಪಣಮೆ ನಿಪ್ಪ ಪದ್ಮರಾಗೆ ನಿಜ ಜನಕನಪ್ಪ ಸುಗ್ರೀವನ ಸಂತೋಷದೊಳಾದ ಮನೋರಾಗ ಮುಮನಪ್ಪುಕೆಯ್ಯೆ ಮಱುದಿವಸಂ ಮಂಗಲಾಭರಣ ಭೂಷಿತಂ ಮಣಿಘಂಟಾ ವಿರಾಜಮಾನ ವಿಮಾನಮನೇಱಿ ಕಿಷ್ಕಿಂಧಪುರಾಭಿಮುಖನಾಗಿ ತಳರ್ವುದುಂ—

ಕಂ ॥ ಪವನಸುತ ಸೇನೆ ನಡೆದುದು
ಪವನಪಥಂ ನೆಱೆಯದೆಂಬಿನಂ ದೆಸೆಯೆಲ್ಲಂ ॥
ಕಿವಿ ಶಬ್ದಂಗಿಡೆ ಕಹಳಾ
ರವದಿಂ ಪಟು ಪಟಹ ಶಂಖ ಭೇರೀ ರವದಿಂ ॥ ೩೩ ॥

ಆ ಸಮಯದೊಳ್ ಮರುತ್ಸುತಾಗಮನೋತ್ಸವಕ್ಕೆ ಪುರದೊಳಪ್ಪಶೋಭೆಯಂ ಮಾಡಿ ಪರಿಜನ ಪುರಜನ ಪುರಸ್ಸರಂ ಸುಗ್ರೀವನಿದಿರ್ಗೊಂಡು ಯಥೋಚಿತ ಪ್ರತಿಪತ್ತಿಯಿಂ ಕಾಣಿಸಿಕೊಂಡು ರಘುತನೂಜ ರಾಜಮಂದಿರಕ್ಕೊಡಗೊಂಡುಯ್ವು ದುಂ—

ಕಂ ॥ ಅತಿ ವೃತ್ತಾಯತ ಕರನು
ನ್ನತ ವಂಶಂ ಭದ್ರಲಕ್ಷಣೋಪೇತಂ ಮಾ ॥
ರುತಿ ರಾಮನ ಸಭೆಗೈರಾ
ವತಮಿಂದ್ರನ ಸಭೆಗೆ ಬರ್ಪ ತೆರದಿಂ ಬಂದಂ ॥ ೩೪ ॥

ಅಂತು ಬಂದುಪಾಯನ ಪುರಸ್ಸರಂ ರಾಮ ಲಕ್ಷ್ಮಣರ ಚರಣ ಕಮಲಂಗ ಳ್ಗೆಱಗಿ ನಳ ನೀಳಾಂಗದ ವಿರಾಧಿತ ಪ್ರಮುಖರಂ ಪ್ರೇಮಾಲಿಂಗನ ಕ್ಷೇಮ ವಚನದಿಂ ಮನ್ನಿಸಿ ಮಣಿಮಯಾಸನದೊಳ್ ಕುಳ್ಳಿರ್ಪುದುಂ ಜಾಂಬವನಿಂತೆಂದಂ—

ಮ ॥ ಕಿರಣಂ ತೀಕ್ಷ್ಣಕರಂಗೆ ತೀಕ್ಷ್ಣನಖರಂ ಸಿಂಗಕ್ಕೆ ವಜ್ರಾಯುಧಂ ।
ಪುರುಹೂತಂಗುರಿಗಣ್ ಮೃಡಂಗೆ ರದನಂ ದಿಗ್ದಂತಿಗಾದಂದದಿಂ ॥
ನೆರವಾದಂ ಪವನಾತ್ಮಜಂ ಕದನಕೇಳೀ ಕರ್ಕಶಂ ರಾಮದೋಃ ।
ಪರಿಘಕ್ಕಿಂಡಿಗೆ ಸಾಧ್ಯಮಾದುದೆ ವಲಂ ಷಟ್ಖಂಡ ಭೂಮಂಡಲಂ ॥ ೩೫ ॥

ಕಂ ॥ ಈ ಬಲ್ಲಾಳ್ ಹನುಮನ ಬಾ
ಹಾ ಬಲದಿಂ ನಡೆದುದಿನ್ನೆಗಂ ದಶಕಂಠಂ ॥
ಗಾ ಬಿಂಕಮುಮಾ ಬೀರಮು
ಮಾ ಬಿರುದುಮವಂಗೆ ನಡೆಯಲಿನ್ನಱಿದಪುದೇ ॥ ೩೬ ॥

ಎಂಬುದುಮಾ ಸಮಯದೊಳ್ ಸುಗ್ರೀವಂ ಪವಮಾನಸೂನುಗಿಂತೆಂದಂ—

ಉ ॥ ಆನತನಲ್ಲದಂಗೆ ಪದುಳಂ ಸಿಲವಿಲ್ಲ ಸಿಜಾನ್ವಯಾಗತ ।
ಸ್ಥಾನದೊಳಾನತಂಗೆ ಭಯಮಿಲ್ಲ ಜಗತ್ತ್ರಯವಾಂತೊಡಂ ಜಯ ॥
ಶ್ರೀನಿಲಯರ್ ಸಹಾಯಮನಪೇಕ್ಷಿಸರಾರ್ಗಮಜೇಯರುದ್ಧತರ್ ।
ಮಾನಘನರ್ ಮಹಾಮಹಿಮರಿಂತಿವರಿರ್ಪ್ಪರೆ ರಾಮ ಲಕ್ಷ್ಮಣರ್ ॥ ೩೭ ॥

ಈ ಮಹಾನುಭಾವರಪ್ಪೊಡೆ ಮುನ್ನಂ ಸೀತಾಸ್ವಯಂವರದೊಳ್ ದೇವತಾಧಿಷ್ಠಿತಂಗಳಪ್ಪ ವಜ್ರಾವರ್ತಂ ಸಾಗರಾವರ್ತಮೆಂಬ ಚಾಪರತ್ನಂಗಳುಮಂ ಹಲಾಯುಧ ಗದಾಯುಧಂಗಳುಮಂ ನಾಗವಿದ್ಯೆಗಳ್ವೆರಸು ಕೊಂಡತಿ ಪ್ರಚಂಡರದಲ್ಲದೆಯುಂ—

ಕಂ ॥ ಕಾರಣ ಪುರುಷರಿವರಸಾ
ಧಾರಣ ರಣಮಲ್ಲರಿಕ್ಕಿ ಸಾಹಸ ಗತಿಯಂ ॥
ಮಾರುತಿ ಶರ ಹತಿಯಿನಸಾ ।
ಧಾರಣಮಪ್ಪೆನ್ನ ಬನ್ನಮಂ ಪಿಂಗಿಸಿದರ್ ॥ ೩೮ ॥

ಎಂಬುದುಮುದರ್ಕೆ ಹರ್ಷಿತಚಿತ್ತಂ ಮರುತ್ತನಯಂ ರಾಮಚಂದ್ರಂಗೆ ಮುಕುಲಿತಾಂಜಲಿಯಾಗಿ ದೇವ ಭವಜ್ಜನ್ಮಮಖಿಲ ಜಗದುಪಕಾರ ನಿಮಿತ್ತಮಾದುದುಕಾರಣದಿಂ—

ಕಂ ॥ ಎಮಗುಚಿತಂ ನಿಜಸೇವಾ
ಪ್ರಮೋದಮಧಿರಾಜ ಪಂಚಭೂತಂಗಳ್ಗಂ ॥
ನಿಮಗಂ ಪ್ರತ್ಯುಪಕಾರ
ಕ್ಷಮರಾರ್ ದೇಹಿಗಳೊಳಂಬಿಕಾ ಸ್ತನ್ಯಕ್ಕಂ ॥ ೩೯ ॥

ಎಂದು ಬಿನ್ನವಿಸೆ—

ಕಂ ॥ ಧೀರ ಪ್ರಕೃತಿಗೆ ಸೌಮ್ಯಾ
ಕಾರಕ್ಕನುಗುಣಮೆನಿಪ್ಪ ನಯ ವಿನಯ ವಚ ॥
ಸ್ಸಾರತೆಗೆ ಮೆಚ್ಚಿ ರಘುಕುಲ
ವೀರಂ ಕಾರುಣ್ಯ ದೃಷ್ಟಿಯಿಂದೀಕ್ಷಿಸಿದಂ ॥ ೪೦ ॥

ಅಪರಿಮಿತಮೆನಿಪ ಕಾರು
ಣ್ಯ ಪಯಸ್ಸಾಗರ ಸಮುದ್ಭವಂಗಳನಿತ್ತಂ ॥
ನೃಪರತ್ನಂ ಭಟರತ್ನಂ
ಗಪೂರ್ವಮಂ ರತ್ನ ಕರ್ಣಕುಂಡಲ ಯುಗಮಂ ॥ ೪೧ ॥

ಅಂತು ಮೆಚ್ಚುಗುಡುವುದುಮನಂತರಂ ಮಹೋದಧಿವೆಸರ ವಿದ್ಯಾಧರ ನಿಂತೆಂದಂ—

ಕಂ ॥ ನೀನಿಲ್ಲದಿನಿಬರುಂ ಲಂ
ಕಾ ನಗರಿಗೆ ಪೋಗಿ ನುಡಿದು ದಶಕಂಧರನೊಳ್ ॥
ಜಾನಕಿಯ ಶುದ್ಧಿಯುಂ ಪವ
ಮಾನಜ ತರ್ಪೆಸಕಮಿಲ್ಲದೋಸರಿಸಿರ್ದರ್ ॥ ೪೨ ॥

ಎನೆ ಮನದೆ ಕೊಂಡು ಮಾರುತಿ ಮೇಘರುತಿಯಿನುದಾತ್ತರಾಘವಂಗೆ ಮುಕು ಲಿತ ಕರ ಸರೋಜನಾಗಿ—

ಮ ॥ ನಯದಿಂ ತಂದಪೆನೆಂತುಮಾಯದೊಡೆ ಬಲ್ಪಿಂ ತಂದಪೆಂ ದೇವ ದೇ ।
ವಿಯನಂತಲ್ಲದೆ ನೋಡಿ ಬರ್ಪುದೆನೆ ಮಾಯಾರೂಪದಿಂ ಪೋಗಿ ಸು ॥
ದ್ಧಿಯನಾಂತರ್ಪವನಲ್ಲನಾನೆ ಕೊಳನಂ ಪೊಕ್ಕಂತೆವೋಲ್ ಮಾಡಿ ಲಂ ।
ಕೆಯುಮಂ ದೈತ್ಯನುಮಂ ಭಯಂಗೊಳಿಸಿ ತರ್ಪೆಂ ಜಾನಕೀಶುದ್ಧಿಯಂ ॥೪೩॥

ಮ॥ ಸ್ರ॥ ತ್ರಿದಶೇಂದ್ರಾರಾತಿ ದೈತ್ಯಂ ಧರೆಯುನೆ ರಸೆಗಂದುಯ್ಯೆ ಕೇಳ್ದಾದ ಕಾಯ್ಪಿಂ।
ಕದನ ಕ್ರೀಡಾನುರಕ್ತಂ ಮುರರಿಪು ಪಗೆಯಂ ಕೊಂದು ಭೂಕಾಂತೆಯಂ ಸ॥
ಮ್ಮದದಿಂ ತಂದಂತೆ ಲಂಕೇಶ್ವರನನಮರ ವಿದ್ವಿಷ್ಟನಂ ಕೋಪದಿಂದೋ ।
ವದೆ ಕೊಂದಾಂ ತಂದಪೆಂ ದೇವಿಯನೆನಗರಿದೇ ದೇವ ಪೇಟಿನ್ನನೀಗಳ್
[ ॥ ೪೪ ॥ *

ಎಂದು ಪೂಣ್ದು ನುಡಿದಂಜನಾಸುತಂಗೆ ರಘುವೀರನಿಂತೆಂದಂ—

ಕಂ ॥ ಜನಕಜೆಯ ಸುದ್ದಿಯಂ ತ
ರ್ಪ ನಿಯೋಗಂ ನಿನಗೆ ಮೊನೆಯೊಳಾಟಂದು ದಶಾ ॥
ಸ್ಯನನಿಕ್ಕಿ ದೇವಿಯಂ ತ
ರ್ಪ ನಿಯೋಗಂ ಲಕ್ಷ್ಮಣಂಗೆ ಪುದು ಪೆಱಗುಂಟೇ ॥ ೪೫ ॥

* ೪೪ನೆಯ ಪದ್ಯವು. ಗ. ಘ. ಗಳಲ್ಲಿ ಮಾತ್ರವಿದೆ.

ಎಂದು ನಿಯಮಿಸಿ ನುಡಿದು—

ಚ ॥ ಅಱಿಪುವರಿಲ್ಲ ತನ್ನ ಕೆಲದೊಳ್ ಮಱೆದಪ್ಪೊಡಮೆನ್ನಗಲ್ಕೆಗಂ ।
ಡಱಿಯುದವಳ್ ಭಯಾಕುಲತೆಯಿಂದಸುವಂ ಬಿಡುವಂತುಟಪ್ಪ ಜೇ ॥
ಸಱನೊಳಕೊಳ್ಗುಮಂತೆಸಗದಂತಿರೆ ಮಾಱ್ಪುದು ಸೀತೆ ದೇಹಮಂ ।
ತೊಱೆದ ಬೞಿಕ್ಕೆ ರಕ್ಕಸನನಿಕ್ಕಿದೊಡಿಕ್ಕಿದ ಲೆಕ್ಕಮಕ್ಕುಮೇ ॥ ೪೬ ॥

ಎಂದು ರಘುವೀರನಣುವಂಗೆ ಜಾನಕಿಯ ತನ್ನ ಕುಱುಪಿನ ವಿನ್ನಾಣಂಗಳ ನಱುಪಿ—

ಕಂ ॥ ಜನಕಜೆಯ ವದನ ಸರಸಿಜ
ಮನಲರ್ಚಲ್ ವಿರಹ ಖೇದ ತಮಮುಂ ಕಳೆಯಲ್ ॥
ಹನುಮನ ಕೈಯೊಳ್ ರಘುನಂ
ದನನಿತ್ತನುದಂಶುಮಾಲಿ ರವಿ ಮಂಡಲಮಂ ॥ ೪೭ ॥

ಅಂತಿತ್ತು ತನಗಾಕೆಯ ಚೂಡಾಮಣಿಯಂ ತರ್ಪುದೆಂದು ಬೆಸಸೆ ಮಹಾ ಪ್ರಸಾದಮೆಂದಾ ಕ್ಷಣದೊಳೆ ಬಲಾಚ್ಯುತರ ಪದಂಗಳಂ ಬೀೞ್ಕೊಂಡತಿ ಪ್ರಬಲಬಲ ಸಮನ್ವಿತಂ ವಿಮಾನಾರೂಢಂ ಪವಮಾನಸೂನು ಪವನಪಥಕ್ಕೆ ನೆಗೆದು ಪೋಗು ತ್ತುಂ ಮಹೇಂದ್ರಾಚಲ ಮಧ್ಯದೊಳನತಿಶಯಮಾಗಿರ್ದ ಪುರಮಂ ಕಂಡು—

ಕಂ ॥ ಈಕ್ಷಣ ಸುಖಮಯಮಿದು ಜ
ನ್ಮ ಕ್ಷೇತ್ರಂ ಗಡ ಮಹೇಂದ್ರ ಪುರಮೆನಗೀ ತುಂ ॥
ಗ ಕ್ಷೋಣೀಧರ ಸಾನು ಸ .
ಮಕ್ಷದ ಪಲ್ಯಂಕ ಗುಹೆಯೊಳೆಮ್ಮಬ್ಬೆ ಗಡಂ ॥ ೪೮ ॥

ಎನ್ನಂ ಪಡೆದಳ್ ಗಡ ತಾ
ಯನ್ನಡಪಿದರಮಿತ ಗತಿಗಳೆಂಬ ತಪಸ್ಸಂ ॥
ಪನ್ನರ್ ಚಾರಣ ಋಷಿಯರ್
ಮುನ್ನಱುಪಿದಳೆನಗೆ ಜನನಿ ಪರಿವಿಡಿಯಿಂದಂ ॥ ೪೯ ॥

ಈ ಮಹೇಂದ್ರಪುರಮನಾಳ್ವನೆಮ್ಮ ಮುತ್ತಮ್ಮಂ ಮದೀಯ ಮಾತೆಯ ಗರ್ಭ ದೊಳಾನಿರ್ಪುದುಮೆನ್ನ ತಾಯ್ವಿರತ್ತೆಯುಂ ಮಾವನುಂ—

ಕಂ ॥ ಇಲ್ಲದ ದೋಷಮನಿಟ್ಟಱಿ
ವಿಲ್ಲದೆ ಪೊಱಮಡಿಸಿ ಕಳೆಯೆ ಶರಣೆಲ್ಲದೆ ತ ॥

ನ್ನಲ್ಲಿಗೆ ಬರಿ ತಾನುಂ ಕೃಪೆ
ಯಿಲ್ಲದೆ ನಿರ್ಬುದ್ಧಿ ಪೊರ್ದಲೀಯದೆ ಕಳೆದಂ ॥ ೫೦ ॥

ಎಂದು ಕಡುಮುಳಿದು—

ಕಂ ॥ ರಣ ಪಟಹ ರವಂ ದಿಗ್ವಾ
ರಣ ಕರ್ಣಾಭ್ಯರ್ಣಮುಂ ಪಳಂಚಲೆಯೆ ಸವಿಾ ॥
ರಣ ತನಯನಪ್ರಮಿತ ಭೀ
ಷಣ ಸೈನ್ಯಂ ಸುತ್ತಿ ಮುತ್ತಿದಂ ತತ್ಪುರಮಂ ॥ ೫೧ ॥

ಆಗಳಾ ಕಳಕಳಂ ಶ್ರುತಿಪಥಮನೆಯ್ದೆ ಘನರವಕ್ಕೆ ಗರ್ಜಿಸಿ ಗುಹೆಯಿಂ ಪೊಱ ಮಡುವ ಮೃಗೇಂದ್ರನಂತೆ ಮಹೇಂದ್ರಂ ಪುರಮಂ ಪೊಱಮಟ್ಟು ಮಱುವಕ್ಕುವ ನಿಕ್ಕುವ ತಕ್ಕು ಮಿಕ್ಕು ಬರೆ ಕಡಂಗಿ ಕಾದುವಲ್ಲಿ ಮಾರುತಿಯ ವಾಹಿನಿಗೆ ಮಹೇಂದ್ರ ವಾಹಿನಿ ಬೇಸಗೆಯ ವಾಹಿನಿಯಂತೊಳಸೋರ್ವುದುಮುದಂ ಪ್ರಸನ್ನಕೀರ್ತಿ ಕಂಡು ಕದನಕೇಳಿಗತಿವರ್ತಿಯಾಗಿ ತಾಗುವುದುಂ—

ಕಂ ॥ ತೇರಚ್ಚಂ ಮುಱಿಯೆಚ್ಚಂ
ಕೂರಂಬಿಂ ಬಿಲ್ಲ ಗೊಣೆಯುಮಂ ಪಱಿಯೆಚ್ಚಂ ॥
ಸಾರಥಿಯಂ ಕೆಡೆಯೆಚ್ಚಂ
ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ ॥ ೫೨ ॥

ಅಂತು ವಿರಥನಾಗಿ ಮತ್ತಂ ಪ್ರಸನ್ನಕೀರ್ತಿ ಮಾನಗರ್ವದಿಂ ವಿಮಾನಾ ರೂಢಂ ರಣಕ್ರೀಡೆಗೊಡರಿಸುವುದುಂ ಶ್ರೀಶೈಳಂ ತದ್ವಿಮಾನಮುಂ ಛಾಯಾಗ್ರಹಣಂ ಗೆಯ್ಯೆ ನೆಲಕ್ಕೆ ವರ್ಪುದುಂ ಪ್ರಸನ್ನಕೀರ್ತಿಯಂ ಪಿಡಿಯೆ ಮಹೇಂದ್ರನುಮುದಂ ಕಂಡು ಕಡುಕೆಯ್ವ ಚಿಂತ್ಯಯುದ್ಧಂಗೆಯ್ದೊಡಾತನುಮಂ ಪಿಡಿದು ನಿಜ ವಿಜಯಶಿಬಿರಕ್ಕುಯ್ದು ಮನ್ನಿಸಿ—

ಕಂ ॥ ಪಿನಯದಿನೆಱಗಿ ಮೃಗೇಂದ್ರಾ
ಸನಮುಂ ಕೊಟ್ಟಮ್ಮ ನಿಮ್ಮ ಮೊಮ್ಮನೆ ನಾನಂ ॥
ಜನೆಗಂ ಪ್ರಭಂಜನಂಗಂ
ಜನಿಯಿಸಿದೆಂ ಹನುಮನೆಂಬೆನೆಂದಱಿಪುವುದುಂ ॥ ೫೩ ॥

ಅದಂ ಕೇಳ್ದಾನಂದಜಲಲುಳಿತ ಲೋಚನನತಿ ಪ್ರಮೋದ ಪುಳಕಮಂ ತಳೆದು ಮಹೇಂದ್ರನಿಂದ್ರ ಪದವಿ ದೊರೆಕೊಂಡಂತೆ ಸಂತುಷ್ಟ ಚಿತ್ತನಾಗಿ ಕಿಱಿದುಂ ಬೇಗ ಮಿರ್ದು ನಿನ್ನ ಪುರುಷಾಕಾರಮುಂ ಮನೋಹರಾಕಾರಮುಮುದಾರ್ಯ ವೀರ್ಯಮುಮಿ

ಸ್ನೈವರಂ ಶ್ರವಣ ಭೂಷಣಮಾಗಿರ್ದುವೀಗಳಿಮಗೆ ಪ್ರತ್ಯಕ್ಷಮಾದುವೆಂದು ಪೊಗೞ್ದು ಪಲತೆಱದಿಂ ಪರಸಿದ ಮಾತಾಮಹಂಗೆ ಮಾರುತಿ ಕೈಗಳಂ ಮುಗಿದು—

ಕಂ ॥ ಕಿಱುಗೂಸು ತನದೋಷಾಱಿಯ
ಸಱಿಯುಮೆಯಿಂದಾನೊಡರ್ಚಿದೆಂ ಕ್ಷಮಿಯಿಪುದೆಂ ॥
ದೆಱಗಿದನಣುವಂ ಗುಣಮಂ
ಮೆಱೆವಂಗದು ವಿನಯಮೊಂದೆ ಭೂಷಣಮಲ್ತೇ ॥ ೫೪ ॥

ಅಂತು ವಿನಯ ವಿನಮಿತನಾಗಿ ನಿಮ್ಮಡಿ ನಮ್ಮ ಕಪಿಧ್ವಜ ಕುಲಕ್ಕೆ ಪರಮೋಪಕಾರಮಂ ಮಾಡಿದ ರಘುವೀರನ ಬೆಸದಿಂ ಲಂಕೆಗೆ ಪೋದಪ್ಪೆನಾಂ ಬರ್ಪನ್ನಂ ನೀಮುಂ ಕಿಷ್ಕಿಂಧಪುರಕ್ಕೆ ಪೋಗಿ ರಾಮಲಕ್ಷ್ಮಣರ ಸೇವಾನುಗ್ರಹಮಂ ಪಡೆದು ಸುಗ್ರೀವಾದಿಗಳೊಳ್ ಕೂಡಿ ಸುಖಮಿರ್ಪುದೆಂದು ನಿಯಮಿಸಿ ಮಾರುತಿ ಮಾರುತವೇಗದಿಂ ಮಾರುತ ಪಥಕ್ಕೆ ನೆಗೆದು ತೆಂಕವೊಗವೆ ಪಯಣಂಬೋಪುದುಮಿತ್ತ ಮಹೇಂದ್ರಂ ಪ್ರಸನ್ನಕೀರ್ತಿವೆರಸು ಹನುಮರುದ್ವೀಪಕ್ಕೆ ಪೋಗಿ ಹನುಮನರಮನೆಯಂ ಪುಗುವುದುಂ—

ಕಂ ॥ ಅಂಜನೆಗಳುಂಬಮಾಯ್ತು ಮು
ದಂ ಜನನೀ ಜನಕ ಬಂಧುಜನ ದರ್ಶನದಿಂ ॥
ದಂಜನೆಯುಂ ಕಂಡತಿ ಹ
ರ್ಷಂ ಜನಿಯಿಸಿದತ್ತು ಮಾತೃ ಪಿತೃ ಬಂಧುಗಳೊಳ್ ॥ ೫೫ ॥

ಅಂತು ಪರಸ್ಪರ ಕ್ಷೇಮ ಕುಶಲ ಭಾಷಾ ಪುರಸ್ಸರಂ—

ಕಂ ॥ ಅಮರ್ದಪ್ಪೆ ಹರ್ಷ ಪುಳಕೋ
ದ್ಗಮಮುಮವರ್ಗಾದತ್ತು ಕಡವರಲ್ಪುದೆನಲ್ ಚಿ ॥
ತ್ರಮೆ ದೇಹಿಗಿಷ್ಟ ಸಂಯೋ
ಗಮನಿಷ್ಟ ವಿಯೋಗಮೆರಡೆ ಸುಖ ಜನಕಂಗಳ್ ॥ ೫೬ ॥

ಅಂತು ಸಂತುಷ್ಟರಾಗಿ ಮಹೇಂದ್ರ ಪ್ರಸನ್ನಕೀರ್ತಿಗಳ್ ಕಿಷ್ಕಿಂಧಪುರಕ್ಕೆ ಪೋಗಿ ಬಲ ನಾರಾಯಣರಂ ಕಂಡಾಪ್ತನಮಂ ಕೈಕೊಂಡು ಕಪಿಧ್ವಜರೊಳ್ ಕೂಡಿ ಸುಖದಿನಿರ್ದರಿತ್ತಲಾಕಾಶಮಾರ್ಗದೊಳ್ ಪೋಗುತ್ತುಂ—

ಕಂ ॥ ಅಧರಿತ ಕನಕಾಚಲಮಂ
ವಿಧು ರವಿ ಮಂಡಲ ವಿಚುಂಬಿ ಕೂಟಮನಾಶಾ ॥
ವಧಿ ವಿಶ್ರುತಮಂ ಭೋಂಕನೆ
ವಧಿಮುಖ ಪರ್ವತಮನಾಂಜನೇಯಂ ಕಂಡಂ ॥ ೫೭ ॥

ಮ ॥ ಪ್ರತಿಮಾ ಯೋಗ ನಿಯುಕ್ತರೆಂಟು ದಿವಸಂ ಕೈಯೆತ್ತಿವೆಂದಿರ್ದರ ।
ಪ್ರತಿಮರ್ ಚಾರಣರಾ ನಗೋಪರಿಮದೊಳ್ ತತ್ಪಾರ್ಶ್ವದೊಳ್ ಮೂವರ ॥
ಪ್ರತಿರೂಪಾನ್ವಿತೆಯರ್ ಸಿತಾಂಶುಕೆಯರಿರ್ದರ್ ಕನ್ನೆಯರ್ಕಳ್ ಮಧು ।
ವ್ರತ ಮಾಳಾಯತ ವೇಣಿಗಳ್ ಜಪಿಯಿಸುತ್ತುಂ ದಿವ್ಯ ಮಂತ್ರಂಗಳಂ ॥೫೮॥

ಆ ಸಮಯದೊಳ್ ಲಯ ಸಮಯದ ಕೇಸುರಿಯ ಮಸಕಮನಪ್ಪುಕೆಯ್ದು—

ಕಂ ॥ ಚಾರಣ ಯುಗಳಮುಮಂ ಕ
ನ್ಯಾರತ್ನಂಗಳುಮನಳುರ್ದು ಸುಡಲೊಡರಿಪುದಂ ॥
ದಾರುಣ ದಾವಾನಲನಂ
ಮಾರುತಿ ಜಲವರ್ಷ ವಿದ್ಯೆಯಿಂ ಮಟ್ಗಿಸಿದಂ ॥ ೫೯ ॥

ಆ ಮಹೋಪಸರ್ಗಮಂ ಪಿಂಗಿಸಿ—

ಮಾಲಿನಿ ॥ ಯತಿ ಪತಿಗಳ ಪಾದಾಂಭೋಜಮಂ ಭಕ್ತಿಯಿಂದಂ ।
ಸತತಗತಿ ತನೂಜಂ ಪೂಜಿಸುತ್ತಿರ್ದನಾಗಳ್ ॥
ಕೃತ ನಿಯಮ ನಿಯುಕ್ತಾ ಚಾರೆಯರ್ ದಿವ್ಯ ಯೋಗಿ ।
ದ್ವಿತಯ ಚರಣ ಪೂಜಾನಂತರಂ ಕನ್ನೆಯರ್ಕಳ್ ॥ ೬೦ ॥

ಮಾರುತಿಯ ಮುಖಾರವಿಂದಮಂ ನೋಡಿ ಮಹಾಮಹಿಮ ನೀಂ ಬಂದಿಮಗ ವಿಾ ಮಹಾ ತಪೋಧನರ್ಗಂ ಸಮನಿಸಿದುಪಸರ್ಗಮಂ ತೊಲಗಿಸಿ ಮಹೋಪಕಾರಮಂ ಮಾಡಿದೆಯೆಂದು ಸಂಸ್ತವನ ಪೂರ್ವಕಂ ಮುಕುಲಿತಾಂಜಲಿಗಳಾಗಿರ್ಪುದುಂ—

ಕಂ ॥ ಈ ರೌದ್ರಾಟವಿಯೊಳಿದೇ
ಕಾರಣದಿಂದಿರ್ದಿರೆಂದು ವಿಸ್ಮಯ ಚಿತ್ತಂ ॥
ಮಾರುತಿ ಬೆಸಗೊಂಡಂ ಕ
ನ್ಯಾ ರತ್ನಂಗಳನಪಾರ ಕಾರುಣ್ಯ ರಸಂ ॥ ೬೧ ॥

ಅಂತು ಬೆಸಗೊಳ್ವುದುಂ—

ಕಂ ॥ ಅನವದ್ಯ ಚರಿತನೆಂದಜ
ದನಿಬರ ಕಡೆವುಟ್ಟಿದಾಕೆ ಹನುಮಂಗಸ್ಮ ॥
ಜ್ಜನಕಂ ದಧಿಮುಖ ನಗರೀ
ಜನಪತಿ ಗಂಧರ್ವನೆಂಬನಂಬರ ಗಮನಂ ॥ ೬೨ ॥

ಎಂದೆಮ್ಮ ಪೆಸರ್ ಚಿತ್ರಲೇಖೆಯುಂ ವಿದ್ಯುತ್ಪ್ರಭೆಯುಂ ತರಂಗಮಾಲೆಯುಮೆಂಬುದೆಮ್ಮಂ ವಿಜಯಾರ್ಧನಗ ನಿವಾಸಿಗಳಪ್ಪ ವಿದ್ಯಾಧರರ್ ಮೊದಲಾಗೆ ಪಲಬರ್ ಬೇಡೆಯುಂ ಕುಡದಿರ್ಪುದುಮಂಗಾರವೇಗನೆಂಬ ವಿದ್ಯಾಧರನತ್ಯಾಗ್ರಹಂಗೆಯ್ದು ಬೇಡುವುದುಮಾತನುಮನುದಾಸೀನಂಗೆಯ್ದೊಂದು ಜಿನಭವನಕ್ಕೆ ವೋಗಿ—

ಕಂ ॥ ಅನುರೂಪನಪ್ಪ ವರನಾ
ವನಪ್ಪನಸ್ಮತ್ತನೂಜೆಯರ್ಗೆಂದಪ್ಪಂ ॥
ಗ ನಿಮಿತ್ತಮನಱಿವ ಮಹಾ
ಮುನಿಯಂ ಬೆಸಗೊಂಡನೆಮ್ಮ ಪಿತೃವೊಂದು ದಿನಂ ॥ ೬೩ ॥

ಅಂತು ಬೆಸಗೊಳ್ವುದುಮವರಿಂತೆಂದು ಬೆಸಸಿದರುತ್ತರ ಶ್ರೇಣಿಗೆ ಪ್ರಧಾನನಪ್ಪ ಸಾಹಸಗತಿಯುಂ ಕೊಂದಾತಂ ನಿಮ್ಮ ಮಕ್ಕಳ್ಗೆ ಭರ್ತಾರನಕ್ಕುಮೆನೆ ಮನದೇಗೊಂಡು ಸಂತೋಷಂಬಟ್ಟೊಸೆದಿರ್ದನಾಮುಮೀ ಮಹಾ ವಿಪಿನದೊಳ್ ಮನೋವೇಗವೆಂಬ ವಿದ್ಯೆಯಂ ಸಾಧಿಸುತ್ತುಂ ದ್ವಾದಶ ವರ್ಷಮಿಲ್ಲಿರ್ದು ಪೆಱಗಾಱು ವರ್ಷದಿಂದಾ ವಿದ್ಯೆಯಂ ಸಾಧಿಸಿದೆವೆಮ್ಮಂ ಬೇಡಿ ಪಡೆಯದಂದಿನಂಗಾರವೇಗನೀ ಮಹೋಪಸರ್ಗಮಂ ಮಾಡಿದನೆಂದು ಪೇೞೆ ಕೇಳ್ದು—

ಕಂ ॥ ಅತಿಬಲನನಿಕ್ಕಿ ಸಾಹಸ
ಗತಿಯಂ ಕಿಷ್ಕಿಂಧಪುರದೊಳಿರ್ದಪನತ್ಯೂ ॥
ರ್ಜಿತ ತೇಜಂ ರಾಘವನೆಂ
ದತರ್ಕ್ಯ ಬಲನಱಿಪಿ ಪವನ ತನಯಂ ಪೋದಂ ॥ ೬೪ ॥

ಇತ್ತ ಗಂಧರ್ವಂ ನಿಜ ತನೂಜೆಯರ್ ಸಿದ್ಧವಿದ್ಯೆಯರಾದುದನಱಿದು ಸಂತುಷ್ಟಚಿತ್ತನಾಗಿ ತಮ್ಮಲ್ಲಿಗೆ ಬರ್ಪುದಂ ಕನ್ನೆಯರ್ ಕಂಡಿದಿರ್ಗೊಂಡು—

ಕಂ ॥ ಚಲದಲಕ ತಮಾಲ ದಳಂ
ಚಲನಾಶೋಕ ಪ್ರವಾಳದೊಳ್ ಪುಂಜಿಸೆ ಕೋ ॥
ಮಲೆಯರ್ ವಿದ್ಯಾಧರ ಕುಲ
ತಿಲಕಂಗತಿ ಭಕ್ತಿ ಭರದಿನಾನತರಾದರ್ ॥ ೬೫ ॥

ಅಂತು ವಿನತರಾಗಿ—

ಮ ॥ ಸುತೆಯರ್ ಮಾರುತಿ ಪೇೞ್ದುದಂ ತನಗೆ ಪೇೞಲ್ ಕೇಳ್ದು ಗಂಧರ್ವ ರಾ ।
ಜ ತನೂಜಂ ನಿಜ ಸೈನಿಕಂಬೆರಸು ಕಿಷ್ಕಿಂಧಕ್ಕೆ ಬಂದಿತ್ತು ತ ॥

ತ್ಸನಿತೆಯುಮೂರ್ವರುಮಂ ಪ್ರಶಸ್ತ ದಿನದೊಳ್ ರಾಮಂಗೆ ಪೂಣ್ದಾಳ್ತನ ।
ಕ್ಕತಿಹರ್ಷಂ ಸುಖಮಿರ್ದನತ್ತಲಣುವಂ ಪೋದಂ ವಿಯನ್ಮಾರ್ಗದೊಳ್
॥ ೬೬ ॥

ಅಂತು ಪೋಗಿ ಲಂಕಾಪುರದ ಬಹಿಃಪುರದೊಳ್ ಬೀಡಂ ಬಿಟ್ಟು ಮಱು ದಿವಸಂ ಪುರಮಂ ಪುಗುವ ಸಮಯದೊಳ್—

ಮ ॥ ಗೆಲವಂತಿರ್ಕೆಮ ವಾಯುಪುತ್ರನ ಬಲಕ್ಕಂ ಕೋಂಟೆ ವಿದ್ಯಾತ್ಮಕಂ ।
ಸಲವಿಲ್ಲಾದುದಲೋಕದಂತದಱ ಮೇಲಿರ್ದುಗ್ರ ಕಾಲೋರಗಾ ॥
ವಲಿ ಭೂತಾವಲಿ ರೌದ್ರ ಸತ್ವ ನಿವಹಂ ಲೋಕಾದ್ಭುತಂ ನಾಡೆ ನೋ ।
ಡಲಗುರ್ವಾದುದು ತದ್ವಿಭೀಷಣ ಕೃತಂ ದುರ್ವಾರ ವೈಕುರ್ವಣಂ ॥ ೬೭ ॥

ಆಗಳದಱ ಸ್ವರೂಪಮೆಲ್ಲಮಂ ಪೃಥುಮತಿಯೆಸರ ಮಂತ್ರಿ ಬಿನ್ನವಿಸೆ ನೆಱೆಯೆ ಕೇಳ್ದು ಕಲುಷ ವಶಗತನಾಗಿ ವಿಮಾನದಿನವನಿಗವತರಿಸಿ—

ಕಂ ॥ ಎನಗೀ ಪ್ರಾಕಾರ ವಿಭೇ
ದನಮಾಪ್ಪುದೊ ಗಹನಮೆಂದು ಕೋಪಾರುಣ ಲೋ ॥
ಚನನನಿಲಸುತಂ ತೊಟ್ಟಂ
ತನುತ್ರಮಂ ವಜ್ರಮಯಮನಪ್ರತಿಹತಮಂ ॥ ೬೮ ॥

ಅಂತು ದಿವ್ಯ ವಜ್ರಕವಚಮಂ ತೊಟ್ಟು—

ಕಂ ॥ ವಿಧಿಪೂರ್ವಕಮಾತ್ಮ ಗದಾ
ಯುಧಮಂ ದೈವಿಕಮನೆತ್ತಿ ಹನುಮಂ ವಜ್ರಾ ॥
ಯುಧದಿಂ ದಿವಿಜೇಂದ್ರಂ ಕುಲ
ಕುಧರಂಗಳನಳಱೆ ಪೊಯ್ವ ತೆಱದಿಂ ಪೊಯ್ದಂ ॥ ೬೯ ॥

ಅಂತು ಪೊಯ್ದು ವಿದ್ಯಾಪ್ರಾಕಾರಮನೊಡೆವುದುಂ—

ಕಂ ॥ ದ್ವಾರ ನಿಯುಕ್ತಂ ರೌದ್ರಾ
ಕಾರಂ ವಜ್ರಮುಖನೆಂಬ ದನುಜಂ ಶೆರಗಂ ॥
ಪಾರದೆ ತಾಗಿದೊಡವನಂ
ಮಾರುತಿ ನಿಮಿಷಕ್ಕೆ ತೂಂತಿದಂ ಯಮಮುಖದೊಳ್ ॥ ೭೦ ॥

ಅದಂ ತದಾತ್ಮಜೆಯಪ್ಪ ಲಂಕಾಸುಂದರಿ ಭೋಂಕನೆ ಕಂಡು ಕಡುಮುಳಿದು—

ಚ ॥ ಜನಕನನಿಕ್ಕಿದುದ್ಧತನನಿಕ್ಕುವೆನೆಂದು ಕಡಂಗಿ ಬಂದು ಘೋಂ।
ಕನೆ ಚರಮಾಂಗನಂ ಪವನ ಸೂನುವನೀಕ್ಷಿಸಿ ಕಣ್ಣಸೋಲಮಾ ॥
ರ್ದನುವಿಸೆ ಶೋಕಮಂ ಮುಳಿಸುಮಂ ಮಱೆದೆನ್ನುಮನೆನ್ನ ವಿದ್ಯೆಯು।
ಳ್ಳನಿತುಮನೀವೆನೆಂದು ಪಟದೊಳ್ ಬರೆದೆಚ್ಚಳವಳ್ ಪತಾಕೆಯಂ ॥ ೭೧ ॥

ಅಂತಿಸುವುದುಂ—

ಕಂ ॥ ಬಾರಿಸಿ ಲೇಖಾರ್ಥಮನವ
ಧಾರಿಸಿ ತಾನುಂ ಮರುಳ್ವ ಕನ್ನೆಯ ಸೌಮ್ಯಾ ॥
ಕಾರಕ್ಕೆ ರಣಾಜಿರದೊಳ್
ವೀರಶ್ರೀವೆರಸು ಮದುವೆನಿಂದಂ ಹನುಮಂ ॥ ೭೨ ॥

ಅಂತು ನಿರತಿಶಯ ರೂಪ ಸಂಪನ್ನೆಯುಂ ಲಂಕೆಯೆಂಬ ಕನ್ನೆಯುಂ ಮದುವೆ ನಿಂದು—

ಕಂ ॥ ಪವಮಾನ ಸುತಂ ಸಂಭಿ
ನ್ನ ವಿದ್ಯೆಯಿಂ ಮಾಡಿ ಪೊಱಲನಾಗಸದೊಳ್ ತ ॥
ನ್ನ ವರೂಥಿನಿಯೆಲ್ಲಮನಿರಿ
ಸಿ ವಿಯಚ್ಚರ ಪತಿಯ ಕೆಲಕೆ ಪೋಗಲ್ಬಗೆದಂ ॥ ೭೩ ॥

ತತ್ಪ್ರಪಂಚಮೆಲ್ಲಮಂ ಲಂಕಾಸುಂದರಿ ತಿಳಿದೀ ಬರವಿದೇಕಾರಣಮೆನೆ ರಾಮ ದೇವನ ಬೆಸದಿಂ ಸೀತಾದೇವಿಯ ಸುದ್ದಿಯಂ ತರಲ್ಬಂದೆನೆಂಬುದುಮಾಕೆ ಹನುಮಂ ಗಿಂತೆಂದಳ್—

ಕಂ ॥ ನಿಮಗೆ ಪುಗಲೀಯುದಂತಿರೆ
ಸಮುಕಟ್ಟಿದನಿಂದ್ರವೈರಿ ವಿದ್ಯಾಪ್ರಾಕಾ ॥
ರಮನೊಡೆದು ನೀನಿದಂ ಪ
ಪ್ರಮುಖನುಮಂ ಕೊಂದೆ ಪುಗುವೆ ಲಂಕಾಪುರಮಂ ॥ ೭೪ ॥

ಪರಮ ದ್ರೋಹನೆ ದಶಕಂ
ಧರಂಗೆ ನೀಂ ಪಗೆವರೊಡನೆ ಕೂಡಿದೆ ಮುನ್ನಂ ॥
ನೆರೆದು ವಿಭೀಷಣನೊಳ್ ತ
ನ್ನಿರೂಪಿತ ಕ್ರಮದೆ ನೆಗಱ್ದುವಲ್ಲಿಂಬೞಿಯುಂ ॥ ೭೫ ॥

ಎಂಬುದುಂ—

ಕಂ ॥ ಏಗೊಂಡಾಕೆಯ ಪೇಳ್ದುದ
ನಾಗಡೆ ಕತಿಪಯ ವಿಯಚ್ಚರರ್ಬೆರಸು ಮಹಾ ॥
ಭೋಗಂ ಪೊಕ್ಕಂ ಪುರಮನ
ದೇ ಗಹನವೊ ಪವನಜಂಗೆ ದುರ್ಗಮವುಂಟೇ ॥ ೭೬ ॥

ಅಂತು ನಿಶ್ಶಂಕೆಯಿಂ ಲಂಕೆಯಂ ಪೊಕ್ಕು ವಿಭೀಷಣನಂ ಕಂಡು ಕ್ಷೇಮ ಕುಶಲ ವಾರ್ತಾನಂತರಂ—

ಮ ॥ ಕುಲಮಂ ಸತ್ವದ ಶೌಚದಗ್ಗಳಿಕೆಯಂ ಚಾರಿತ್ರಮಂ [1]ಚಾಗಮಂ ।
ಚಲಮಂ ದೋರ್ಬಲಮಂ ಕಲಾ ವಿಭವಮಂ ಕೊಂಡಾಡುವೀ ರಾವಣಂ ॥
ನೆಲನೆಲ್ಲಂ ಪಱಿವನ್ನಮನ್ಯ ವಧುವಂ ದುರ್ಮೋಹದಿಂ ಬಾಱಿಗೆ ।
ಯ್ಯಲದಂ ಬಾರಿಸದೊಯ್ಕನಿರ್ಪುದುಮುಪೇಕ್ಷಾ ದೋಷಮೇನಾಗದೇ ॥ ೭೭ ॥

ಚ ॥ ಎಣಿಸದೆ ತನ್ನ ಶೌಚಗುಣಮಂ ವ್ರತರಕ್ಷಣಮಂ ಪರಾಂಗನಾ ।
ಪ್ರಣಯಮನಪ್ಪುಕೆಯ್ಯೆ ಶರಣಾಗತ ರಕ್ಷಣ ದಕ್ಷನಪ್ಪ ದ ॥
ಕ್ಷಿಣ ಭರತ ತ್ರಿಖಂಡ ಧರಣೀಪತಿ ದಾನವ ಚಕ್ರವರ್ತಿ ರಾ ।
ವಣನಿದನಾಗದೆನ್ನದೊಡೆ ನಿನ್ನ ನೆಗಱ್ತೆಗೆ ಬನ್ನಮಾಗದೇ ॥ ೭೮ ॥

ಕಂ ॥ ಇನ್ನಾದೊಡಮೊಪ್ಪಿಸಿ ಸತಿ
ಯನ್ನಿಮ್ಮ ಕುಲಾಪವಾದಮಂ ಕಳೆವುದು ನಿ ॥
ಮ್ಮನ್ನರುಪೇಕ್ಷಿಸೆ ನೆಲನು
ಳ್ಳನ್ನೆವರಂ ದಶಮುಖಂಗೆ ದುರ್ಯಶಮುಕ್ಕುಂ ॥ ೭೯ ॥

ಎನೆ ವಿಭೀಷಣನಿಂತೆಂದಂ—

ಮ॥ಸ್ರ॥ ದನುಜೇಂದ್ರಂಗಾಗದೆಂದಾನಿದನಱಿಪದುದಾಸೀನದಿಂ ಮುನ್ನಮೇನಿ ।
ರ್ದೆನೆ ದೃಷ್ಟಾದೃಷ್ಟ ಬಾಧಾಕರಮಿದುವೆ ಪರಪ್ರೇಯಸೀ ಪ್ರೇಮವೆಂದಿಂ ॥
ತೆನಿತಾನುಂ ಹೇತು ದೃಷ್ಟಾಂತಮನಡಿಗಡಿಗಾಂ ತೋಱಿಯುಂ ಪೇೞ್ದುದಂ ಕೇ
ಳನೆ [2]ರಾಗೋದ್ವೇಗ ವೇಗಂ ಸಮನಿಸೆ ಹಿತಮಂ ಸೂಕ್ತಮಂ ಕೇಳ್ವನಾವಂ
॥ ೮೦ ॥

ಕಂ ॥ ಪನ್ನೊಂದು ದಿವಸಮಿಂದಿಂ
ಗನ್ನ ತ್ಯಾಗದೊಳೆ ದೇವಿ ಕುಲಮಂ ವ್ರತಮಂ ॥

1. ಚಾರಮಂ. ಚ.
2. ರಾಗದ್ವೇಷ. ಗ.

ತನ್ನುನ್ನತಿಯುಂ ಕಾದೊಡ
ಮಿನ್ನುಂ ವೈರಾಗ್ಯಮಾದುದಿಲ್ಲಗ್ರಜನೊಳ್ ॥ ೮೧ ॥

ಪ್ರಮದ ವನದೊಳಗೆ ಸೆಱೆಯಿ
ಟ್ಟು ಮತ್ತಮುಟ್ಟಟ್ಟಿಯಟ್ಟುತಿರ್ದಪನುಚಿತ ॥
ಕ್ರಮಮುಂ ಕಾಮುಕರಱಿವರೆ
ಸುಮನೋಬಾಣಂಗೆ ತಕ್ಕುಗಿಡದವನಾವಂ ॥ ೮೨ ॥

ಎಂದು ವಿಭೀಷಣಂ ನುಡಿಯೆ ಮರುತ್ಸುತಂ ಕೇಳ್ದು ಕರುಣಾರಸ ವಾಹಿನೀ ಪ್ರವಾಹಮೆಱೆದುಯ್ಯೆ ವಿಭೀಷಣನ ಭವನಮುಂ ಪೊರಮಟ್ಟದೃಶ್ಯನಾಗಿ ಪೋಗಿ ಸೀತಾದೇವಿಯಿರ್ದ ಬನಮುಂ ಪೊಕ್ಕು ಮಂಡೋದರಿವೆರಸು ಪಲಂಬರುಮಂಬರ ಚರ ನಿತಂಬಿನಿಯರ್ ಬಳಸಿ ದಿನಲಕ್ಷ್ಮಿಯುಂ ಬಳಸಿದ ದೀಪಮಾಲೆಯಂತೆ ಕಾಂತಿ ಗೆಟ್ಟರೆ ವಿರಹ ವಿಧುರೆಯಾಗಿಯುಂ ಲಾವಣ್ಯರಸ ತರಂಗಿಣೀ ತರಂಗ ಲೇಖೆಯುನನು ಕರಿಸಿ ತಳಿರ್ತಶೋಕ ತರು ತಳಮನಲಂಕರಿಸಿ—

ಕಂ ॥ ಪೊಗೆಗೊಂಡ ಚಿತ್ರಲತೆ ದೂ
ಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾ ॥
ರ್ಮುಗಿಲೊಳಕೊಂಡೆಳವೆಱೆಯೆನೆ
ಮೃಗಲೋಚನೆ ಸೀತೆ ನಾಡೆ ಪಾಡೞಿದಿರ್ದಳ್ ॥ ೮೩ ॥

ಉ ॥ ಶ್ರೀವಧು ಪದ್ಮಸದ್ಮದಿನಗಲ್ದೞಿದೇಕೆಯೊ ಪೇೞಿಮೇಕೆ ವಾ ।
ಕ್ಶ್ರೀವಧುವಂಚೆಯುಂ ತೊಱೆದಳೇಕೆಯೊ ಚಂದ್ರಿಕೆ ಚಂದ್ರಬಿಂಬದಿಂ ॥
ಭೂವಲಯಕ್ಕೆ ಬಂದಳೆನುತುಂ ಬಗೆಯೊಳ್ ಪೊಱಪೊಣ್ಮೆ ಸಂಶಯಂ ।
ಪಾವನಿ ವಿಸ್ಮಯ ಸ್ತಿಮಿತ ಲೋಚನನೀಕ್ಷಿಸಿದಂ ಮೃಗಾಕ್ಷಿಯಂ ॥ ೮೪ ॥

ಚ ॥ ನಿರುಪಮ ರೂಪೆಯರ್ ಸತಿಯರೀ ದೊರೆಯರ್ ಪೆಱರಾರುಮಿಲ್ಲ ಖೇ ।
ಚರಿಯರ ಸುತ್ತಿನೊಳ್ ಖಚರ ವೀರಭಟರ್ಕಳ ಕಾಪಿನೊಳ್ ಪೆಱರ್ ॥
ತರುಣಿಯರಿರ್ಪರಾರ್ ತ್ರಿಭುವನಾಂಬಿಕೆ ಜಾನಕಿ ತಪ್ಪದಪ್ಪಳಿಂ ।
ತಿರೆ ಕಡುನೀಱೆಯಲ್ಲದೊಡೆ ರಾಘವನಂತಿರೆ ಚಿತ್ತಮಾವನೇ ॥ ೮೫ ॥

ಎಂದು ನಿಶ್ಚಿತ ಮನನಾಗಿ—

ಕಂ ॥ ಜಾನಕಿ ಪೊಱಗಾಗಿರೆ ಪವ
ಮಾನಸುತಂ ಕಾಣದಂತು ಪೆಱರಾರುಮಶೋ ॥

ಕಾನೋಕಹ ಕಿಸಲಯ ಸಂ
ತಾನಮನಾಭರಣ ಕಿರಣವೊದವಿಸೆ ಬಂದಂ ॥ ೮೬ ॥

ಅಂತು ಸುಕೃತಮೆ ಮೂರ್ತಿಗೊಂಡಂತೆ ಕೆಲಕ್ಕೆ ವಂದು—

ಉ ॥ ಮುನ್ನಜೀವಂತುಟಂ ಪ್ರಿಯನ ಮುದ್ರಿಕೆಯುಂ ತನಗಿತ್ತು ವಾಯು ಪು।
ತ್ರನ್ನತನಾಗೆ ಕಂಡು ಮಣಿಮುದ್ರಿಕೆಗಂದಿದಿರ್ವಂದ ಮಾಟಕ್ಕೆಯಿಂ ॥
ದನ್ನಯನಾಂಬು ಹರ್ಷಪುಲಕಂ ಪ್ರೊಜಪ್ರೊಕ್ಕೆ ಮನೋವಿಕಾಸಮಂ।
ಕನ್ನಡಿಸಿತ್ತು ಸೀತೆಯ ಮುಖಾಂಬುರುಹಂ ದರಹಾಸ ಪೇಶಲಂ ॥ ೮೭ ॥

ಚ ॥ ಕಲಶ ಕುಚಂ ಕವಕ್ಕದಿಸೆ ಸುರ್ಕುಸಿರಿಂ ನಡುಗಿತ್ತು ಚಿತ್ತಮು।
ಳ್ಳಲರ್ದ ಮುಖಾರವಿಂದ ಮಕರಂದಮೆನಲ್ ಜಿಮುರ್ಗಳ್ ಕಪೋಲದೊಳ್ ॥
ನೆಲಸಿದುವಂಗ ಕಾಂತಿ ಕುಡಿಮಿಂಚಿನ ಗೊಂಚಲನೊಪ್ಪವಿಟ್ಟವೋಲ್।
ಜಲಜಲಿಸಿತ್ತು ಜಾನಕಿಗೆ ಮುದ್ರಿಕೆ ಕೊಟ್ಟುದನಂಗ ಮುದ್ರೆಯುಂ ॥ ೮೮ ॥

ಅಂತು ಹರ್ಷರಸ ತರಂಗಿತಾಂತರಂಗೆಯಾದ ಜಾನಕಿಯುಂ ಮಂಡೋದರಿ ಮೊದಲಾಗೆ ಕೆಲದೊಳಿರ್ದ ಖಚರ ಕಾಂತೆಯರ್ ರಾವಣನೊಳಪ್ಪನು[1]ಬಂಧಮ ನೊಡಂಬಟ್ಟು ಸಂತೋಷಂಬಟ್ಟಳೆಂಬುದುಮಳುಂಬಮೆನೆ ಮುನಿದು—

ಕಂ ॥ ತನಗೆ ಪತಿವ್ರತಮಿಲ್ಲದ
ವನಿತೆ ಕುಲಸ್ತ್ರೀಯೆ ಭಿನ್ನ ಭಾಜನಮಿಂತ ॥
ಪ್ಪನುಚಿತಮಂ ಹರಿವಂಶದ
ವನಿತೆಯರೊಳ್ ನುಡಿಯಲಕ್ಕುಮೇ ನಿಮ್ಮನ್ನರ್ ॥ ೮೯ ॥

ಎನಗೆ ಪರ ಪುರುಷರಸ್ಮ
ಜ್ಜನಕ ಸಹೋದರ ಸಮಾನರೆನಗನುರಾಗಂ ॥
ಜನಿಯಿಸಿದುದು ರಘುಕುಲ ತಿಲ
ಕನ ಬೆಸದಿಂ ಬಂದ ದೂತನಂ ಕಾಣಲೊಡಂ ॥ ೯೦ ॥

ಎನೆ ಮಂಡೋದರಿ ಕೇಳ್ದು—

ಉ ॥ ಅರ್ಣವ ಲಂಘನ ಕ್ಷಮರೆ ಮಾನವರಾರ್ಗಮಭೇದ್ಯಮಪ್ಪುದಂ।
ಸ್ವರ್ಣಿಲಯಂಬರಂ ನಿಮಿರ್ದ ವಜ್ರದ ಕೋಂಟೆಯನಾರೊ ಭೇದಿಪರ್ ॥
ನಿರ್ಣಯಮಾಗೆ ರಾಘವನ ಸುದ್ದಿಯನೀಕೆಗೆ ಪೇಟ್ದುದಾಗದೇ।
ಕರ್ಣ ಪಿಶಾಚಮಿಾ ವಿಕಲಭಾಷೆ ನಿರನ್ನ ವಿಕಾರಮಾಗದೇ ॥ ೯೧ ॥

1. ಭವ ಕ. ಖ ಚ.

ಎಂದು ಪೆಂಡವಾಸದ ವಿಲಾಸಿನಿಯರೊಡನೆ ನುಡಿಯುತ್ತಿರ್ಪುದುಮಗಣ್ಯ ಲಾವಣ್ಯವತಿ ವೈದೇಹಿ ಪುಣ್ಯಪುರುಷ ನೀನೆನ್ನಪಾರ ದುಃಖಭಾರದಿಂ ನವೆಯಲೀಯದೆ ಮದೀಯ ಶುಭವಾರ್ತೆಯುಂ ತಂದ ದೂಸಱಿಂದೆನಗೆ ನೀಂ ಪ್ರಭಾಮಂಡಲನಿಂದಗ್ಗಳವಪ್ಪ ಸಹೋದರನೈ ನಿನ್ನ ಕುಲ ಗೋತ್ರ ನಾಮಂಗಳನೆನಗೆ ತಿಳಿಯೆ ಪೇೞಿಸಲೊಡಂ

ಕಂ ॥ ಸೆರಗಕ್ಕುಂ ಪುಯ್ಗರೆದಾ
ನಿರಲೆಂತು ನಿಜಸ್ವರೂಪಮಂ ತೋಱುವುದಂ ॥
ಮರುದಾತ್ಮಜನಂತಃಪುರ ।
ಪುರಂಧ್ರಿಯರ್ ಸೆಡೆದು ಸೀತೆಯುಂ ಮಱೆಗೊಂಡರ್ ॥ ೯೨ ॥

ಅನಂತರಂ ಮರುತ್ತನೂಜಂ ಮುಕುಳಿತ ಕರಸರೋಜನಿಂತೆಂದಂ —

ಚ ॥ ಪಿತೃ ಪವನಂಜಯಂ ಖಚರವಲ್ಲಭನಂಜನೆ ಪೆತ್ತ ತಾಯ್ ಮಹಾ ।
ಸತಿ ಹನುಮಂತನೆಂ ಪೆಸರೊಳಾಂ ವಿಜಯಪ್ರಮದಾ ಪ್ರಿಯಂ ಜಗ ॥
ತ್ಪತಿ ಪತಿ ರಾಮನಾ ಸುಚರಿತಂ ಬೆಸವೇೞ್ದೊಡೆ ನಿಮ್ಮ ಸುದ್ದಿಗ ।
ಪ್ರತಿಮ ಪತಿವ್ರತಾಚರಣ ಭೂಷಣ ಭೂಷಿತೆ ಬಂದೆನಂಬಿಕೇ ॥ ೯೩ ॥

ಕಂ ॥ ಕಮಲಿನಿಯುಂ ಕಲಹಂಸಂ
ಸುಮನೋಮಂಜರಿಯುಮಳಿ ವನಾಂತ ಸ್ಥಲಿಯುಂ ॥
ಸಮುದೇಭಂ ನೆನೆವಂ[1]ತನು
ಪಮೆ ನಿಮ್ಮನೆ ನೆನೆವ ಪೂರಿಪಂ ರಘುವೀರಂ ॥ ೯೪ ॥

ಎಂದು ಬಿನ್ನವಿಸಿ ಮತ್ತಂ ಕೆಲವುಮವಿನ್ನಾಣಂಗಳನಿಂತೆಂದಂ —

ಕಂ ॥ ವಾರಿಜಮುಖಿ ಭೂಪಂ ಗಂ
ಭೀರಾ ವಾಹಿನಿಯ ತೀರದೊಳ್ ನಿಮ್ಮ ಮುಖಾಂ ॥
ಭೋರುಹದೊಳ್ ಪಡಿಯಿಟ್ಟಂ
ಭೋರುಹಮಂ ಮೆಚ್ಚಲೊಲ್ಲನಿಲ್ಲೊರ್ವ ಗಡಂ ॥ ೯೫ ॥

ಭರತಂ ಪಿಂದನೆ ಬಂದಂ
ದರಣ್ಯದೊಳ್ ರಾಜ್ಯಭರಮನೊಪ್ಪಿಸಿದೊಡೆ ಸಂ ॥
ಪರಿಸಿ ಪದಿನಾಲ್ಕು ವರ್ಷಂ
ಬರಮಿರ್ಪಂತಾಗೆ ರಾಘವಂ ನಿಯಮಿಸಿದಂ ॥ ೯೬ ॥

1. ತಿರೆ ರಸೆ

ಕಂ॥ ಸಲಿಲಾಹರಣಾರ್ಥಂ ಪೋ
ಗಿ ಲಕ್ಷ್ಮಣಂ ದೇವಿ ಗಂಡವರಿಜಿಂದಿದರ್ಾ॥
ಲಲನೆಯ ಕರಗದವಳ ಕೈ
ಯೊಳಟ್ಟಿದಂ ಗಡಮದೊರ್ವೆ ಶೀತಲ ಜಲಮಂ ॥ ೯೭ ॥

ಕ್ರೀಡಾಪೂತಂ ಪೊಜಲಂ
ಮಾಡಿ ಘನಾಗಮದೊಳಿರಿಸಿ ಯಕ್ಷಂ ಕೊಟ್ಟಂ॥
ಚೂಡಾಮಣಿಯಂ ಕದನ
ಕ್ರೀಡೆಗೆ ನೆನೆದಾಗಳಂತೆ ಬಂದಪೆನೆಂದಂ ॥ ೯೮ ॥

ಎಂಬುದುಮನುಭೂತಾರ್ಥಸ್ಮರಣೆಯಿಂ ಮನದ ಸಂಶಯಂ ಪಿಂಗೆ ಮ-ನಂಗೊಂಡು ಮಾನಿನಿ ಪವಮಾನ ಸೂನುಗಿಂತೆಂದಳ್—

ಸ್ವಾಗತಂ॥ ಎಂತು ದಾಂಟಿದೆ ಮಹಾರ್ಣವಮಂ ಬಂ।
ದೆಂತು ಪೊಕ್ಕೆ ಪುರಮಂ ರಘುವೀರಂ॥
ಗೆಂತು ನಿನ್ನೊಡನೆ ಕೂಟಮದಾಯ್ತಂ।
ಬಂತುಟಂ ತಿಳಿಪು ದೋರ್ಬಲಶಾಲೀ ॥ ೯೯ ॥

ಕಂ॥ ಒಡೆದೆಂ ವಜ್ರದ ಕೋಂಟೆಯ
ನೆಡೆವ-ಡಗದೆ ಬಂದು ವಜ್ರಮುಖನಾಂತಿಜ-ಯಲ್॥
ಕಡುಕೆಯ್ದೊಡೆ ಕೊಂದೆಂ ನಿ
ಮ್ಮಡಿ ಪುರಮಂ ಪೊಕ್ಕು ಬಂದು ಕಂಡೆಂ ನಿಮ್ಮಂ ॥ ೧೦೦ ॥

ಎಂದು ಬಿನ್ನವಿಸಿ ಮತ್ತಮಿಂತೆಂದನಂಬಿಕೆ ದಶಮುಖನ ತಂಗೆ ಚಂದ್ರನಖಿ ನಿಜ ತನೂಜನಪ್ಪ ಶಂಭುಕನಂ ಸೌಮಿತ್ರಿ ಕೊಂದು ಸೂರ್ಯಹಾಸಾಸಿಯಂ ಕೊಳ್ವುದುಮದಂ ಕಂಡಟಿಲ್ದು ತನ್ನ ಗಂಡನಪ್ಪ ಖರಂಗೆ ಪುಯ್ಯಲಿಡುವುದುಮತಿ ಕುಪಿತನಾತನಸಂಖ್ಯಾತ ಬಲಸಮೇತನೆತ್ತಿಬಂದು ಲಕ್ಷ್ಮಣನೊಳ್ ಕಾದುತ್ತುಮಿರೆ ದಶಾನನನುಮವರ ಬವರಮಂ ನೋಡಲೆಂದು ಬರುತುಂ ನಿಮ್ಮಂ ಕಂಡು ವಿಪರೀತ ಚಿತ್ತನಾಗಿ ಕೈದುಗೆಯ್ಯದೆ ಕೈತವದಿಂ ರಘುವೀರನನಗಲ್ಚಿ ನಿಮ್ಮನುಯ್ವುದುಮಾ ಕ್ಷಣದೊಳ್ ಲಕ್ಷ್ಮಣನಲ್ಲಿಗೆ ರಾಮದೇವರ್ ಬಿಜಯಂಗೆಯ್ಯೆ ದೇವ ಸೀತಾದೇವಿಯನಗಲ್ದು ಪೊಲ್ಲದುಗೆಯ್ದಿರಿವಂದಿರಂ ಕೊಲ್ವುದರ್ಕಾನೆ ಸಾಲ್ವೆಂ ಮಗುಟಿ ಬಿಜಯಂಗೆಯ್ಯಿಮೆನೆ ಬೇಗಂ ಬಂದು ಮುನ್ನಮಿರ್ದೆಡೆಯೊಳ್ ನಿಮ್ಮಂ ಕಾಣದೆ ಕಾನನದೊಳ್ ತೊಟಲ್ದುಜಿಸುತ್ತುಮಿರ್ಪನ್ನೆಗಂ ಖರ ದೂಷಣರಂ ಕೊಂದು ಲಕ್ಷ್ಮಣನೇಕಾಕಿಯಾಗಿರ್ದಣ್ಣನ ಕೆಲಕ್ಕೆ ಬಂದು ಮದಂಬಿಕೆಯೆಲ್ಲಿರ್ದಳೆಂದು ಬೆಸಗೊಳ್ವ

ದುಮಾಂ ನಿನ್ನಲ್ಲಿಗೆ ಬಂದ ಪಿಂದೆಯಾವನಾನುಮೊರ್ವಂ ಮಾಯಾವಿ ಕೊಂಡುಯ್ದ ನೊ ಕ್ರೂರ ಮೃಗಂಗಳುಯ್ದುವೊ ಎಂದಱಿಯ್ದು ನುಡಿವುದುಂ ಲಕ್ಷ್ಮಣಂ ವಿಷಣ್ಣ ಚಿತ್ತನಾಗಿರ್ಪುದುಮಾ ಸಮಯದೊಳ್ ಶರಣಾಗತಂ ವಿರಾಧಿತ ವಿಯಚ್ಚರಂ ನಿಮ್ಮ ಸುದ್ದಿಗೆ ಚೆಚ್ಚರಮನುಚರರನಟ್ಟಿ ರಾಮ ಲಕ್ಷ್ಮಣರಂ ಪಾತಾಳಲಂಕೆಗುಯ್ದು ಬೆಸಕೆಯ್ಯುತ್ತಿರ್ದಂ ಅನ್ನೆಗಮತ್ತ ಸುಗ್ರೀವಂ ಮಯಾಸುಗ್ರೀವನ ವ್ಯತಿಕರದೊಳ್ ಶರಣಾಗತ ಶರಣ್ಯನಪ್ಪ ರಾಮನಂ ಕಂಡು ತನ್ನ ವೃತ್ತಾಂತಮಂ ಬಿನ್ನವಿಸೆ ನಿನ್ನ ಪಗೆಯಂ ತೀರ್ಚಿದಪೆನೆಂದು ಕಿಷ್ಕಿಂಧ ಪುರಕ್ಕೆ ಬಂದ:—

ಕಂ ॥ ಸುಗ್ರೀವನ ಪಗೆ ಮಾಯಾ
ಸುಗ್ರೀವನನುತ್ತ್ರಚಂಡನಂ ಕೀನಾಶಂ॥
ಗಗ್ರ ಗ್ರಾಸಂಮಾಡಿ ನೃ
ಪಗ್ರಾಮಣಿ ಕಳೆದನೆಮ್ಮ ಕುಲ ಪರಿಭವಮಂ ॥ ೧೦೧ ॥

ಅದಱಿನೆಮ್ಮ ವಾನರ ಧ್ವಜರಪ್ಪ ವಿದ್ಯಾಧರರೆಲ್ಲಂ ಪ್ರತ್ಯುಪಕಾರ ತತ್ಪರತೆಯಿಂ ದಾಕ್ಷಿಣ್ಯಕ್ಕೆ ಪೂಣ್ದು ರತ್ನಜಟಿಯ ದೆಸೆಯಿಂ ನಿಮ್ಮ ಶುದ್ಧಿಯನಱಿದಿಂಬಱಿಯಂ ಸುಗ್ರೀವನೆನ್ನುಮಂ ಬರಿಸಿದೊಡಾನುಮುದಾತ್ತ ರಾಘವನ ಚರಣ ಸೇವೆಯೊಳ್ ನಿಂದೆ ನೀಗಳಖಿಳ ವಿದ್ಯಾಪರಮೇಶ್ವರರಪ್ಪ ವಿದ್ಯಾಧರರ್ ಪಲಂಬರುಮಂ ಮಾಡಿಕೊಂಡು ರಾಮ ಲಕ್ಷ್ಮಣರ್ ಕಿಷ್ಕಿಂಧ ಪುರದೊಳಿರ್ದರ್ಕ್ಷಿದೊಡೆ ರಾವಣನೊಳ್ ನುಡಿದು ನಿಮ್ಮ ಸೆಱೆಯಂ ಬಿಡಿಸಲ್ ಬಂದೆನಿದು ಮದೀಯ ವೃತ್ತಕಮೆನೆ ಸೀತೆ ಸಂತೋಷಂ ಬಟ್ಟು—

ಕಂ ॥ ಮರುದಾತ್ಮಜ ನಿಮ್ಮನ್ನರ್
ಧುರೀಣರೇಕಾಂಗ ವಿಜಯಿಗಳ್ ಬಹು ವಿದ್ಯಾ ॥
ಪರಮೇಶ್ವರರೆನಿಬರಿಳೇ
ಶ್ವರ ಪಾರ್ಶ್ವದೊಳೆಂದು ಜನಕಸುತೆ ಬೆಸಗೊಂಡಳ್ ॥ ೧೦೨ ॥

ಎನೆ ಮಯನ ಮಗಳ್ ಮಂಡೋದರಿ ಸೀತಾದೇವಿಗಿಂತೆಂದಳ್—

ಉ ॥ ನೂತನರೊಳ್ ಪುರಾತನರೊಳೀತನೊಳಾರ್ ದೊರೆ ನಾಕ ಲೋಕದೊಳ್ ।
ಭೂತಲದೊಳ್ ರಸಾತಲದೊಳೊರ್ವನೆ ದೋರ್ಬಲಶಾಲಿ ಲೋಕ ವಿ ॥
ಖ್ಯಾತನಶೇಷ ವಿದ್ಯೆಗಳೊಳಾತತ ಕೀರ್ತಿ ಮರುತ್ತನೂಜನ ।
ಬ್ಜಾತಮುಖೀ ಪವಣ್ಬಡಿಪೊಡೀತನನೀತನೆ ಪೋಲ್ವನಿನ್ನರಾರ್ ॥ ೧೦೩ ॥

ಈತನ ಪರಾಕ್ರಮದಳುರ್ಕೆಯಂ ಪೇೞ್ವೊಡೆ ಮುನ್ನಮೊರ್ಮೆ ದಶಮುಖಂಗೆ ರಣಮುಖದೊಳಿದಿರ್ಚಿದ ವರುಣನಂ ಪರಾಙ್ಮುಖಂಮಾಡಿ ಗೆಲ್ದು ಕುಡೆ ವಿಯಚ್ಚರ

ಪತಿ ಮೆಚ್ಚಿ ತನ್ನ ತಂಗೆಯಪ್ಪ ಚಂದ್ರನಖಿಯ ಮಗಳನನಂಗಪುಷ್ಪೆಯನೀತಂಗೆ ಮಹಾವಿಭೂತಿಯಿಂ ಮದುವೆಯಂ ಮಾಡಿ ಕೊಂಡಾಡಿ ತನ್ನೊಳೋರನ್ನಂ ಮಾಡಿ ಪೊರೆಯೆ ಪಾಱಗೆ ತಪ್ಪಿ—

ಚ ॥ ಬರಿವರಿ ಕರ್ವು ಕೊರ್ವಿ ಕರಮೋಳಿದಮಪ್ಪವೊಲೀತನುಂ ವಿಯ ।
ಚ್ಚರ ಪತಿಯಪ್ಪ ರಾವಣನಿರಲ್ ಕರಮೋಳಿದರಪ್ಪ ಭೂಮಿ ಗೋ ॥
ಚರರೊಳಸೇವ್ಯರೊಳ್ ತನಗೆ ಕಿಂಕರ ಭಾವಮನಪ್ಪುಕೆಯ್ವನೀ ।
ತರಳತೆಯೊಂದುಮಿಲ್ಲದೊಡೆ ಪೋಲ್ಪವರಾರ್ ಪವಮಾನ ಸೂನುವಂ ।೧೦೪॥

ಎನೆ ಹನುಮನೆಂದನುದಾತ್ತ ರಾಘವನ ಗೆಯ್ದುಪಕೃತಿಗೆ ಪ್ರತ್ಯುಪಕಾರಮಂ ಗೆಯ್ವೆನ್ನ ಪುರುಷಾಕಾರಮಂ ಮೆಱೆಯಲೆಂದು ಬಂದೆನೀ ಪೊಲ್ಲಮೆಯನೆಂತುಂ ಕಳೆಯಲಪ್ಪುದು ನಿಮಗೆ ಕುಲಮುೞಿಯೆ ನೆಲಂ ಪೞಿಯೆ ಮಾನಸಿಕೆಯನೊಕ್ಕು ಪರತ್ರೆಯುಂ ಬಗೆಯದೆ ಪರಕಲತ್ರಮನಾಸೆಗೆಯ್ವ ಪೊಲ್ಲಮೆಯುಂ ಕಳೆವಂದಮಾವು ದೆನೆ ಕನಲ್ದು ಮಂಡೋದರಿ ಬೆಟ್ಟವೆಟ್ಟನಿಂತೆಂದಳ್—

ಕಂ ॥ ಅನಿಲ ತನೂಭವ ಸುಗ್ರೀ
ವನುಮಂ ನಿನ್ನುಮನವಂಧ್ಯಕೋಪಂ ದಶಕಂ ॥
ಠನಮೋಘಂ ಕೊಲ್ಲದೆ ಮಾ
ಣ್ಬನೆ ಪೇೞೆನೆ ಸೀತೆ ಕಲುಷವಶ ಗತಿಯಾದಳ್ ॥ ೧೦೫ ॥

ಅಂತು ಮುಳಿದು—

ಕಂ ॥ ದಾಂಟಿ ಕಡಲಂ ಜಗತ್ತ್ರಯ
ಕಂಟಕನಂ ಕೊಂದು ರಾಮಲಕ್ಷ್ಮಣರಿರ್ಪ ॥
ತ್ತೆಂಟು ದಿವಸದೊಳೆ ನಿನಗಣ
ಮುಂಟಾಗಿಸುವರ್ ವಿಶೇಷಮಪ್ಪೆರ್ದೆವಬಲಂ ॥ ೧೦೬ ॥

ಎನೆ ಮಂಡೋದರಿ ಲಯ ಸಮಯದ ಚಂಡಿಕೆಯಂತೆ ಮಾನುಸಕಂಪ ಸಗಿ

ಉ ॥ ಕೇಸುರಿ ಸೂಸೆ ತನ್ನ ಮೊಗದಿಂ ಕಿಡಿ ಬೀೞ್ತರೆ ತನ್ನ ಕಣ್ಗಳಿಂ ।
ದಾಸುರಮಾಗೆ ದಾಡೆಗಳೊಡಲ್ ಬಳೆದಂಬರಮಂ ತಱುಂಬೆ ತ ॥
ನ್ನಾಸುಕರಂ [1]ಕರಂ ದೆಸೆಗಮುರ್ವಿಸೆ ಕೈಗಳನೆತ್ತಿ ಪೊಯ್ಯಲೆ ।
ೞ್ವಾ ಸಮಯಕ್ಕೆ ತೆಕ್ಕನೆಡೆವೊಕ್ಕನರಿಂಜಯನಂಜನಾ ಸುತಂ ॥ ೧೦೭ ॥

1. ಕರಂ ದೆಸೆಗಮುರ್ವಿಸೆ. ಘ : ನಳಿಂದೆಸೆ ವಿಗುರ್ವಿಸೆ. ಗ.

ಅದರ್ಕೆ ನಿತ್ತರಿಸದಾಕೆ ಸಭೆಯಿನೆೞ್ದು ರಾವಣನ ಕೆಲಕ್ಕೆ ಪೋದಳಿತ್ತ ಪವಮಾನಸೂನು ಜೋನವುಂ ತರಿಸೆ ಸಿದ್ಧಪ್ರತಿಜ್ಞೆಯಾಗಿ—

ಚ ॥ ಸತಿ ಸುಚರಿತ್ರೆ ಪಂಚ ಪರಮೇಷ್ಠಿಗಳಂ ಸ್ತುತಿಗೆಯ್ದು ಭಕ್ತಿಯಿಂ ।
ಯತಿವರರ್ಗನ್ನಮುಂ ಮನದೊಳಿತ್ತು ರಘೂದ್ವಹ ಪಾದಪಂಕಜ ॥
ದ್ವಿತಯಮನಿಟ್ಟು ಹೃತ್ಸರಸಿಯೊಳ್ ಜನಕಾತ್ಮಜೆ ದೇವತಾ ವಿನಿ ।
ರ್ಮಿತ ಮಣಿಕುಟ್ಟಿಮ ಸ್ಥಲದೊಳಿರ್ದಮೃತಾನ್ನಮನುಂಡನಂತರಂ ॥ ೧೦೮ ॥

ಕಂ ॥ ಹನುಮಂ ಕೈಮುಗಿದು ಜಗ
ಜ್ಜನನಿ ರಘುಪ್ರವರನಲ್ಲಿಗುಯ್ವೆಂ ನಿಮ್ಮಂ ॥
ಜನಕಾತ್ಮಜೆ ಬಿಜಯಂಗೆ
ಯ್ಯೆನಲದು ತಕ್ಕೊಮೆರ್ಯುಲ್ಲದೆಂದಿಂತೆಂದಳ್ ॥ ೧೦೯ ॥

ಮ ॥ ಧರಣೀ ವಲ್ಲಭನಾಜ್ಞೆಯಿಲ್ಲದೆನಗೆಂತುಂ ಬರ್ಪುದೌಚಿತ್ಯಮು ।
ಲ್ಲರಸಂಗೆನ್ನಿರವಂ ನಿವೇದಿಪುದು ಕಾಲಕ್ಷೇಪಮುಂ ಮಾಡಿ ನೀ ॥
ನಿರೆ ದೈತ್ಯೇಂದ್ರನಪಾಯಮುಂ ನಿನಗೆ ಮಾೞ್ಕುಂ ಪೋಪುದೆಂದಾ ತನೂ ।
ದರಿ ವೈದೇಹಿ ಮರುತ್ಸುತಂಗೆ ನಿಜ ಚೂಡಾರತ್ನಮುಂ ನೀಡಿದಳ್ ॥ ೧೧೦ ॥

ಅಂತು ಚೂಡಾಮಣಿಯನಿತ್ತು ಮತ್ತಂ ಕರ್ಣರಮೆಯೆಂಬ ತೋೞಿಯ ತಡಿಯೊಳ್ ಚಾರಣಯುಗಳಕ್ಕಾಹಾರ ದಾನಮುಂ ಕೊಟ್ಟು ಪಂಚಾಶ್ಚರ್ಯಂಬೆತ್ತುಮು ಮೊದಲಾಗೆ ಪಲವವಿಸ್ಮಾಣಂಗಳಂ ಪೇೞ್ದು ಮನ್ಯು ಗದ್ಗದ ಕಂಠೆಯುಮಶ್ರುಜಲ ಲುಲಿತ ಲೋಚನೆಯುಮಾದ ಜಾನಕಿಗೆ ಹನುಮನಿಂತೆಂದಂ—

ದ್ರುತವಿಲಂಬಿತ ॥ ಎನಗಪಾಯಮನಾವನೊಡರ್ಚುವಂ ।
ಮೊನೆಯೊಳೆನ್ನೊಡನಾವನಿದಿರ್ಚುವಂ ॥
ಜನನಿ ರಾಘವನಾಜ್ಞೆಯೆ ಕಾಮುದೀ ।
ತನನದಲ್ಲದೊಡೆಲ್ಲಿಯ ರಾವಣಂ ॥ ೧೧೧

ಉ ॥ ಸೀತೆಯ [1]ವಾರ್ತೆದರ್ಪನಿತೆ ಸಾಲ್ವುದು ದೈತ್ಯನ ರಕ್ತಪಾನದಿಂ ।
ಭೂತ ಗಣಂಗಳಂ ತಣಿಸಿ ತಂದಪೆನಾಕೆಯನಂತು ತಾರದಂ ॥
ದಾತತ ಕೀರ್ತಿ ಸಲ್ಲದೆನೆ ಭೂಭುಜನಾಜ್ಞೆಗೆ ಮಾರ್ಕೊನಲ್ಲದಂ ।
ದೇತೊವಳೀ ತ್ರಿಕೂಟ ಕುಧರಂಬೆರಸಂಬಿಕೆ ನಿಮ್ಮನುಯ್ಯೆನೇ ॥ ೧೧೨ ॥

1 ಸುಬ್ಬಿ. ಗ. ಘ.

ಎಂದು ಬಿನ್ನವಿಸಿ ಬೀಳ್ಕೊಂಡು ತನ್ನೊಳಿಂತೆಂದಂ—

ಮ ॥ ಬರವಂ ಪೋಗುಮನಾರುಮೆತ್ತಲಜೀವರ್ ಬಂದಂತೆ ಪೋದಂದು ದೋಃ।
ಪರಿಘಂ ದೂಷಿತಮಕ್ಕುಮಿಕ್ಕಿ ಖಲರಂ ಕಿೞ್ತೀ ಪುರೋದ್ಯಾನಮಂ ॥
ಪುರಮಂ ಸುಟ್ಟು ದಶಾಸ್ಯನೆನ್ನನಜೀವಂತಾಂ ಪೋಗಿ ರಾಮಾಂಘ್ರಿ ತಾ।
ಮರಸಕ್ಕಾನತನಪ್ಪೆನೆಂಬ ಮನಮಂ ತಂದಂ ಮರುನ್ನಂದನಂ ॥ ೧೧೩ ॥

ಎಂದು ಬಗೆಯುತ್ತುಮಿರ್ಪನ್ನೆಗಮತ್ತ ಮಂಡೋದರಿ ಖಚರವಲ್ಲಭನಲ್ಲಿಗೆ ಪೋಗಿ—

ಕಂ ॥ ದೇವ ರಘುರಾಮನಂ ಸು
ಗ್ರೀವಂ ಕೈಕೊಂಡು ಹನುಮನಂ ಬರಿಸಿ ದಶ ॥
ಗ್ರೀವ ಬೆಸವೇೞೆ ಕಂಬು
ಗ್ರೀವೆಯ ಜಾನಕಿಯ ಸುದ್ದಿಗಾತಂ ಬಂದಂ ॥ ೧೧೪ ॥

ಅಂತು ಬಂದು—

ಕಂ ॥ ಪ್ರಮದವನದೊಳಗೆ ಸೀತೆಯ
ಸಮೀಪದೊಳ್ ಹನುಮನಿರ್ದಪನೆಂದಱಿವುದುಂ ॥
ಬೆಮರ್ವನಿ ಗಂಡಸ್ಥಲದೊಳ್
ಸಮನಿಸೆ ಕಿಸುಗಣ್ಣೆ ಮಸಗಿದಂ ದಶಕಂಠಂ ॥ ೧೧೫ ॥

ಅಂತು ಮುಳಿದು ಕದನಕರ್ಕಶರಪ್ಪ ರಾಕ್ಷಸರಂ ಪೆಸರ್ವೆಸರೊಳೆ ಕರೆದು—

ಮ ॥ ಪ್ರಮದೋದ್ಯಾನದೊಳಾವನಿರ್ದನವನಂ ಕೊಂದಿಕ್ಕಿಮೆಂದಾಪನ।
ಕ್ಷಮರಂ ಪೇೞೆ ದಶಾನನಂ ದನುಜರುಂ ಸಾಮಾನ್ಯನೆಂದುದ್ಧತರ್ ॥
ಸಮರಕ್ರೀಡೆಗಪೇಕ್ಷೆಗೆಯ್ದು ಪರಿತಂದರ್ ತಂಡದಿಂ ಚಂಡವಿ।
ಕ್ರಮನೀತಂ ಹನುಮಂತನೆಂದಱಿದೊಡೇನಾರುಂ ಮನಂಗೆಯ್ವರೇ ॥ ೧೧೬ ॥

ಅಂತು ದೆಸೆದೆಸೆಗೆ ಮಸಗಿ ಕವಿತರ್ಪುದುಂ—

ಕಂ ॥ ಆ ದನುಜಬಲಮನಾ ವನ
ಪಾದಪಮಂ ಕಿೞ್ತು ಪೋದಿ ಕೊಲಲೊಡರಿಸಿದಂ ॥
ಕಾದುವ ಬನಮಂ ಕೀೞ್ವಿ ವಿ
ನೋದಂಗಳನೆರಡನೊಡನೆ ತೀ[1]ರ್ಚುವ ಬಗೆಯಿಂ ॥ ೧೧೭ ॥

1. ಚಿಂದನಣುವಂ. ಗ.

ಕಂ ॥ ಅಸುಗೆಯ ಪೆರ್ಮರನಂ ಕಿ
ೞ್ತಿಸಮಬಲಂ ಬೀೞೆಪೊಯ್ಯೆ ಪವಮಾನ ಸುತಂ।
ಬಿಸುನೆತ್ತರ್ ಕೆಂದಳಿರೆನೆ
ಪಸರಿಸೆ ದಾನವರಶೋಕವನಮೆನೆ ಕೆಡೆದರ್ ॥ ೧೧೮ ॥

ತಾಳ ವನಂಗಳುಮಂ ಹಿಂ
ತಾಳ ಕುಜಂಗಳುಮನೊಡನೆ ಕಿೞ್ತಿಡೆ ದನುಜರ್ ॥
ತಾಳುಂತಟ್ಟಿಂ ಕೆಡೆದರ್
[1]ತಾಳ ಕಳೇಬರರಿದೇನುದಾತ್ತನೊ ಹನುಮಂ ॥೧೧೯॥

ಬರ್ಕೆವಲಸುಗಳೊಳಸುರರ
ತೆರ್ಕೆಯನೆಟ್ಟೆಟ್ಟೆ ಪೊಯ್ವುದುಂ ಕೋೞ್ಮಿದುಳುಂ ॥
ಬರ್ಕೆಯ ತೊಳೆಯುಂ ಸೂಸಿದು
ವಾರ್ಕಡುಕೆಯ್ವನಿಲಜಂಗೆ ಕೂರ್ಪಂ ತೋರ್ಪರ್ ॥ ೧೨೦ ॥

ತಿಲಕ ತರುವಿಂ ನಿಶಾಚರ
ಬಲಮಂ ಬಿಡೆ ಪೊಯ್ದು ಕೊಂದು ರಾವಣನ ಯಶ ॥
ಸ್ತಿಲಕಮುಮನವರ ಪೆಂಡಿರ
ತಿಲಕಮುಮಂ ತೊಡೆದನೊಡನೆ ಪವಮಾನ ಸುತಂ ॥ ೧೨೧ ॥

ಅಂತು ಮೇಲೆತ್ತಿಬಂದಸುರ ಸೇನೆಯೆಲ್ಲಮಂ ಪೇೞೆ ಪೆಸರಿಲ್ಲದಂತು ಪೇಸದೆ ಕೊಂದು—

ಕಂ ॥ ಅಮಿತಬಲಂ ಕಿೞ್ತೀಡಾ
ಡೆ ಮರುತ್ತನಯಂ ಮರುನ್ನದೀ ತೀರ ವನ ॥
ದ್ರುಮಮೆನಿಸಿದುವಂಬರದೊಳ್
ನಮೇರು ಮಂದಾರ ಪಾರಿಜಾತ ಕುಜಂಗಳ್ ॥ ೧೨೨ ॥

ಚ ॥ ಸರಲ ತಮಾಲ ತಾಲ ಕದಲೀ ಸಹಕಾರ ಮಹೀರುಹಂಗಳಂ।
ಪರಶುವೊ ಮೇಘವಹ್ನಿಯೊ ದವಾಗ್ನಿಯೊ ಘೋರ ಸಮೀರನೋ ವನ ॥
ದ್ವಿರದನೊ ತನ್ನ ತೋಳ್ವಲಮೆನಲ್ ಬನಮಂ ಬಯಲಾಗೆ ಕಿೞ್ತನಾ।
ಸುರಗಿರಿಯಂ ಕಿೞಲ್ಕೆಱೆವ ಮಾರುತ ಸೂನುಗಿದಾವ ಸಾಹಸಂ ॥ ೧೨೩ ॥

1. ತಾಳುದ್ದಂ ಕಳೆವರೇನುದಾತ್ತ. ಘ; ತಾಳುದ್ದಂ ಬರೆ ಕಳೇವರಂ ಪವನಸುತಂ. ಚ.

ಉ ॥ ಕೋಗಿಲೆ ಬೆರ್ಚಿ ಪಾಱುದುವು ಚೂತ ವನಾವಳಿಯಿಂ ಶುಕವ್ರಜಂ ।
ಪೂಗ ವನಂಗಳಿಂ ಬೆದಱಿ ಪೋದುವು ಬಾಲ ಮರಾಲ ಸಂಕುಲಂ ।
ಪೂಗೊಳದಿಂದಗಲ್ದುವೆನಸುಂ ಪೆಱಪಿಂಗಿದುವುನ್ಮದಾಳಿ ಪು ।
ನ್ನಾಗ ವನಂಗಳಿಂ ತವಿಸೆ ನಂದನಮುಂ ಪವಮಾನ ನಂದನಂ ॥ ೧೨೪ ॥

ಮ ॥ ತನಿಗಂಪಂ ಕೆದಱುತ್ತುಮಿರ್ಪ ಪಳಿಕಿಂದಾಕರ್ಷಣಂಮಾಡಿ ಭೃಂ ।
ಗ ನಿಕಾಯಂಗಳನಂಗಜಂಗೆ ವಿಜಯ ಸ್ತಂಭಂ ವನಶ್ರೀಗೆ ಯೌ ॥
ವನಮೆಂಬಂತೆ ಪೊಗಟ್ಟಿಯಂ ತಳೆದುವಂ ಕಿಟ್ಟಿಂ ಮರುನ್ನಂದನಂ ।
ಘನಸಾರ ದ್ರುಮಮುಂ ದಶಾನನನ ಕೀರ್ತಿಸ್ತಂಭಮುಂ ಕೀಳ್ವಿವೋಲ್ ॥ ೧೨೫ ॥

ಪುಗಲಿಲ್ಲೀ ವನದೊಳ್ ಮದೀಯ ಪಿತೃಗೆಂತುಂ ವೈರಮುರ್ವೀಜ ರಾ ।
ಜಿಗಳೊಳ್ ಗಂಧವಹಂ ಮದೀಯ ಜನಕಂಗೆಂದನ್ನಯ ಪ್ರೇಷಮುಂ ॥
ಬಗೆಯೊಳ್ ತಾಳ್ದಿದ ಮಾಟ್ಕೆಯಿಂ ಪವನಜಂ ಕಿಟ್ಟಿಂ ಪುರೋದ್ಯಾನಮಂ ।
ಪಗೆ[1]ಯೆತ್ತಾಯ್ತೆನೆ ವಾರ್ತೆಗಲ್ಲಿ ತರು ವಲ್ಲೀ ಗುಲ್ಮವೊಂದಿಲ್ಲೆನಲ್ ॥ ೧೨೬ ॥

ನೆಲನುಚ್ಚಿಂತೆಪೊಲಾಗೆ ಕಿಟ್ಟಿ ಬನಮಂ ಮಾಱಾಂತರುರ್ವೆಟ್ಟಿಸೈ ।
ಗ್ಗಲದಿಂ ತಾಯ್ತೆದೆಗೂಡೆ ಬಿತ್ತಿ ಪೆಣನಂ ಬೇಱೊಂದು ಶೌರ್ಯಾಂಕುರಂ ॥
ತಲೆದೋಱುತ್ತದು ಕೊರ್ವಿ ಕೀರ್ತಿಲತೆಯಾಯ್ತಾ ವಲ್ಲಿಯಿಂದಂಬರ ।
ಸ್ಥಲಮಂ ಮುದ್ರಿಸಿ ರಾವಣಂಗಮುಲಿಲಂ ತಂದಂ ಮರುನ್ನಂದನಂ ॥ ೧೨೭ ॥

ಉ ॥ ಜಾನಕಿಯಿರ್ದಶೋಕೆಯ ಸಮೀಪದೊಳಿರ್ದ ಫಲಪ್ರಸೂನ ಸಂ ।
ತಾನ ವಿರಾಜಮಾನ ಕುಜರಾಜಿಯನೋವದೆ ಕಿಟ್ಟನಿಲ್ಲ ರೂ ॥
ಕ್ಷಾನಿಲಪಾತದಿಂ ತಪನ ತಾಪದಿನಂಬಿಕೆಗಗ್ಗಳಂ ಪರಿ ।
ಮ್ಲಾನತೆಯಕ್ಕುಮೆಂದುಬೀಪಿದಂ ಕೆಲವಂ ಪವನಂಜಯಾತ್ಮಜಂ ॥ ೧೨೮ ॥

ಅಂತು ದಶಾನನಂಗೆ ಯಶೋಭಂಗವಾಗೆ ವನಭಂಗಮುಂ ಮಾಳ್ಪುದುಂ ಚರಂ ನಿಶಾಚರನೊರ್ವನತಿ ತ್ವರಿತಗತಿಯಿಂದೆ ಬಂದು—

ಕಂ ॥ ವನ ಪಾಲರನಿಕ್ಕಿಯುಮಾ
ತ ನಿಶಾಚರ ಬಲಮನಿಕ್ಕಿಯುಂ ಪವನ ಸುತಂ ॥
ಬನಮುಂ ಕಿಟ್ಟಿಕ್ಕಿಯುಮಾ
ರೆನಗಿದಿರಾಂಪನ್ನರೆಂದು ಕಡುಕೆಯ್ದಿರ್ದಂ ॥ ೧೨೯ ॥

1 ಯೆಂತಾ. ಗ. ಚ.

ಎಂದು ಬಿನ್ನವಿಸೆ—

ಕಂ ॥ ಚರ ವಚನಂ ಕಿವಿಯಂ ಸಾ
ರ್ತರೆ ಘನ ನಿನದಕ್ಕೆ ಕೆಳರ್ದ ಕೇಸರಿವೋಲ್ ಕೇ ॥
ಸರಿಪೀಠದಿನೆಟ್ಟಿಂ ದಶ
ಶಿರನೆರಡುಂ ಪುರ್ವುಮುರ್ವಿ ಗಂಟಿಕ್ಕುವಿನಂ ॥ ೧೩೦ ॥

ಅಂತು ಕಡುಮುಳಿದು ಮೇಲೆ ನಡೆಯಲೊಡರಿಸುವ ತಂದೆಗೆ ಮಾರ್ಕೊಂಡು—

ಕಂ ॥ ಲೋಕಾಧಿಪತಿ ದಶಾನನ
ನೇಕಾಕಿಯಮೇಲೆ ನಡೆದನೆಂಬಪವಾದಂ ॥
ಲೋಕಕ್ಕೆ ಪರಿಯೆ ನಿಜ ಬಾ
ಹಾ ಕೌಕ್ಷೇಯಕದ [1]ಕೂರ್ಪು ನೀರ್ಪಡುಗಿಡುಗುಂ ॥ ೧೩೧ ॥

ಉ ॥ ನೀಂಬರವುಂಟೆ ದೇವ ಕದನಂ ಪವಮಾನ ತನೂಭವಂ ರಣಾ ।
ಡಂಬರದಿಂದಮುಂಜದೊಡೆ ಕೊಂದಪೆನಂಜಿದೊಡಮ್ಮ ನಿಮ್ಮ ಪಾ ॥
ದಾಂಬುರುಹಕ್ಕೆ ತಂದವನನೊಪ್ಪಿಸುವೆಂ ಬೆಸಸೆನ್ನನೆಂದು ಶೌ ।
ರ್ಯಾಂಬುಧಿ ಬೇಡಿದಂ ಬೆಸನನಿಂದಗಿ ದಾನವ ಚಕ್ರವರ್ತಿಯಂ ॥ ೧೩೨ ॥

ಅಂತು ಬೆಸನಂ ಬೇಡಿ ಪಡೆದು ಸಮರ ಸಂರಂಭದಿನಿದಿರ್ಚಿ ಬರ್ಪುದುಂ ಮಾರುತಿ ಕಂಡು ಪೆಜಗಿರಿಸಿಬಂದ ನಿಜವರೂಥಿನಿಯುಂ ಬರಿಸಿ ವಿಜಯ ರಥಾರೂಢ ನಾಗಿ ಲಂಕಾಪುರಮೆಲ್ಲಂ ತಲ್ಲಳಿಸಂತು ಕಾದಿ ಪೆಸರ ನಾಯಕರಂ ಪೇಸೇಱಿ ಕೊಲ್ವುದುಂ ಕಂಡಿಂದಗಿ ಮುಟ್ಟಿನರ್ಪುದುಂ ತನ್ನೊಳಿಂತೆಂದಂ—

ಉ ॥ ಕಾದುವ ಕೂರ್ಪುದೋರ್ಪ ಬೆಸನಂ ರಘುಜಂ ಬೆಸವೇಟ್ಟನಿಲ್ಲ ಮೇ ।
ಲಾದ ನಿಶಾಚರ ಪ್ರಮುಖರೊಳ್ ತಲೆ[2]ಮೆಟ್ಟಿಱುವಂದವಾವುದಾ ॥
ನೀ ದನು[3]ಜಾತ್ಮಜಂಗೆ ಪಿಡಿಪಿತ್ತು ದಶಾನನನಳ್ಕಿ ಬಳ್ಕಿ ಲಂ ।
ಕಾ ದಹನಕ್ಕೊಡರ್ಚುವೆನೆನುತ್ತುಮಿದಂ .ಬಗೆದಂ ಮರುತ್ಸುತಂ ॥ ೧೩೩ ॥

ಚಂ ॥ ಬಗೆಯದೆ ದಾನವಾಧಿಪನ ದೋರ್ಬಲಮಂ ಖಚರ ಪ್ರವೀರರಂ ।
ಬಗೆಯದೆ ನಚ್ಚಿ ತನ್ನಳವನಿಂದಗಿಗಾಂ ಪಿಡಿಪೀವೆನೆಂಬುದಂ ॥
ಬಗೆದನಿದೇನಪಾರ ಬಲನೋ ರಣಧೀರನೊ ಸಿದ್ಧ ವಿದ್ಯನೋ ।
ಬಗೆವವರಾರಿದಂ ಹನುಮನಂತಿರಖಂಡಿತ ಗಂಡಗರ್ವದಿಂ ॥ ೧೩೪ ॥

---

1. ಕಡುಪು. ಕ. ಖ ಗ. ಘ. 2. ಮು. 3. ನಂದನಂಗೆ.

ಎಂದು ನಿಶ್ಚಯಂಗೆಯ್ದು ತನ್ನ ಬಲಮೆಲ್ಲಮಂ ಬೀಡಿಂಗೆ ಕಳುಪಿ ಕದನ ಕೇಳಿಗಗಿದನಂದದಿನಿಂದಗಿಗೆ ಪಿಡಿಪೀವುದುಮಾತನಾತನಂ ತಂದು ಕಾಣಿಸಿ ದಶವದ ನಂಗಿಂತೆಂದನೀತಂ ನಮ್ಮ ವಿದ್ಯಾ ವಿನಿರ್ಮಿತಮಪ್ಪ ವಜ್ರಪ್ರಾಕಾರಮನೊಡೆದು ವಜ್ರಮುಖನಂ ಕೊಂದು ಸೀತಾದೇವಿಯ ಸಮೀಪಕ್ಕೆ ವಂದು ಬನಮನಿತುಮಂ ಕಿಟ್ಟಿ ಮೇಲೆಬಂದ ಖಚರ ಬಲಮೆಲ್ಲಮಂ ಕೊಂದನೀತಂಗೆ ತಕ್ಕುದಂ ದೇವರೆ ಬಲ್ಲಿರೆಂದು ಬಿನ್ನವಿಸೆ—

ಕಂ ॥ ಕಿಸು ಸೆರೆ ಪರಿದಿರೆ ಕಣ್ಗಳೊಳ್
ನೊಸಲೊಳ್ ಪುರ್ವಡರ್ದು ಪೊಡರೆ ಗಂಡಸ್ಥಳದೊಳ್ ॥
ಪಸರಿಸೆ ಬೆಮರ್ವನಿಗಳ್ ಮುನಿ
ದಸುರೇಂದ್ರಂ ಪವನ ಸುತನನಂದಿಂತೆಂದಂ ॥ ೧೩೫ ॥

ಚ ॥ ಮಸುಳೆ ನಿಜಾನ್ವವಾಯ ಮಹಿಮೋನ್ನತಿ ನಾಟ್ಕಿಡೆಪೋಗೆ ಪಾಟಿಯುಂ ।
ಪಸುಗೆಯುಮೆನ್ನ ಮನ್ನಣೆಯನಿಂವಗಿಯೊಳ್ ಸಮಕಕ್ಷ್ಯನಾಗೆ ರ ॥
ಕ್ಷಿಸಿದುದನೇನುಮಂ ಬಗೆಗೆ ತಾರದೆ ಲಜ್ಜೆಯನೊಕ್ಕು ಬಿಟ್ಟು ಮಾ ।
ನಸಿಕೆಯನಿಂತು ಭೂಚರರ್ಗೆ ಖೇಚರ ನೀಂ ಚರನಾಗಿ ಬರ್ಪುದೇ ॥ ೧೩೬ ॥

ಕಂ ॥ ಉಪಕೃತಿಯಂ ನೆನೆಯದೆ ನೀ
ನಪಕೃತಿಯನೊಡರ್ಚಿದೈ ದುರಾತ್ಮನೆ ರಿಪು ಭೂ ॥
ಮಿಪರೊಳೊಡಗೂಡಿದೈ ದ್ರೋ
ಹ ಪೆಂಪುಗಿಡೆ ದಂಡಿಸಲ್ಕೆವೇೞ್ಪುದೆ ನಿನ್ನಂ ॥ ೧೩೭ ॥

ಎನೆ ಕೆಲದೊಳಿರ್ದ ಕೆಲರ್ ದಾನವರ್ ಪವಮಾನ ಸೂನುಮನಿಂತೆಂದರ್ ಸ್ವಾಮಿದ್ರೋಹನಾಗಿ ಸೇನಾಭಂಗಮಂ ಮಾಡಿ ಪರಬಲಮಂ ಪೊಕ್ಕು ತಕ್ಕನುೞಿದು ದೋಷಕ್ಕೆ ಪಕ್ಕಾದೆ ಪವನಂಜಯಂಗೆ ಪುಟ್ಟಿದೊಡಿಂತು ಬಟ್ಟೆದಪ್ಪಿ ಗುಣಂಗೆಟ್ಟು ನೆಗೞ್ವುದು ದೊರೆಕೊಳ್ವದೆನೆ ಪವಮಾನ ಸೂನು ಮುಳಿದವರನಿಂತೆಂದಂ—

ಕಂ ॥ ತೋಯದ ವಾಹನನನ್ವಯ
ದಾಯತಿ ಕಿಡೆ ಪಾೞಿದಪ್ಪಿ ಪೞಿ ಪೊರ್ದೆ ಪರ ॥
ಸ್ತ್ರೀಯನಪೇಕ್ಷಿಸಿದ ಖಲ
ನ್ಯಾಯಮನಾರಯ್ದು ನೋಡಿಕೊಳ್ಳಿಂ ನಿಮ್ಮೊಳ್ ॥ ೧೩೮ ॥

ಅಜಿನಂ ದಶಮುಖನುೞಿದುದ
ನಱಿಯುತ್ತುಂ ಸಲ್ಲದೆಂದು ಬಾರಿಸದೊಳ್ಪಂ ॥

ಮಱಿದಿರ್ಪುದಱಿಂ ದೋಷ
ಕ್ಕೆಱಿವಟ್ಟೆನಿಸಿರ್ದ ಪಾಪಿಗಳ್ ನೀಮೆ ವಲಂ ॥ ೧೩೯ ॥

ಸೌಮಿತ್ರಿಯ ಕೈಯೊಳ್ ರಣ
ಭೂಮಿಯೊಳಿರ್ದಪುದು ರಾವಣಂಗಂ ನಿಮಗಂ ॥
ಪೋ ಮರಣಂ ಬಿದಿ ಬರೆದುದ
ನೇವಮಾತೇದೊರೆಯುರಾದೊಡಂ ತೊಡೆದಪರೇ ॥ ೧೪೦ ॥

ಎಂದು ಪಲತೆಱದಿಂ ನೆಱನೆತ್ತಿ ನುಡಿಯೆ ದಶಮುಖಂ ಮುಳಿದು ಪಲವಂ ಗಟಪಲೀಯದೀತನಂ ರಾಮದೂತನೆಂದು ಗೋಸಣೆಗಳೆದು ಪರಿಭವಿಸಿ ಪೊಱಮಡಿಸಿ ಕಳೆಯಿಮೆನೆ—

ಕಂ ॥ ಸಿಡಿಲ ಪೊಡರ್ಪಾ ಕ್ಷಣದೊಳೆ
ಕಿಡಿವುದು ಕಾಱ್ಕಿರ್ಚು ಬನಮನನಿಲನ ಬೆಸದಿಂ ॥
ಸುಡುವುದು ತೆಗಱಿನಲೇಂ ಕಿಡಿ
ಕಿಡಿವೋದನೊ ಕೋಪತಾಪದಿಂ ಪವನಸುತಂ ॥ ೧೪೧ ॥

ಮ ॥ ಉರಿಲಿಂಗಂ ರಸೆಯಿಂದಮುಂದೊಗೆದುದೋ ಪೇಱಿಂಬಿನಂ ಕಣ್ಣ ಕೇ ।
ಸುರಿಗಳ್ ದಳ್ಳಿಸೆ ಕೋಪದಿಂದಮುರಿದೆೞ್ದಾಸ್ಥಾನದಲ್ಲಿರ್ದ ದು ॥
ರ್ಧರ ವಿದ್ಯಾಧರ ವೀರರಂ ಜವನ ಬಾಯೊಳ್ ತೂಂಕಿದಂ ತನ್ನ ನಿ ।
ಷ್ಠುರ ಪಾದಾಹತಿಯಿಂ ಪ್ರಭಂಜನ ಸುತಂ ಹಸ್ತ ಪ್ರಹಾರಂಗಳಿಂ ॥ ೧೪೨ ॥

ಮ ॥ ಬಿದಿರ್ದೀಡಾಡಿ ಕೆಲಂಬರಂ ಕೆಲಬರಂ ನಿಟ್ಟೆಲ್ವು ನುರ್ಗಾಗೆ ಕಾ ॥
ಯ್ದೊದೆದೆಬ್ಬಿಟ್ಟ ಕೆಲಂಬರಂ ಕೆಲಬರಂ ಬಿಱ್ತಾಗೆ ಪೊಯ್ದಣ್ಮಿ ತಾ ॥
ಗಿದರಂ ಸೀಳ್ದು ಕೆಲಂಬರಂ ಕೆಲಬರಂ ಪ್ರೋದ್ವೃತ್ತರಂ ದೈತ್ಯರಂ ।
ತುದಿಗಾಲಂ ಪಿಡಿದೆತ್ತಿ ಪೊಯ್ದು ನೆಲದೊಳ್ ಕೊಂದಂ ಮರುನ್ನಂದನಂ॥೧೪೩॥

ಅಂತು ಕೊಂದು ಕಲ್ಪಾಂತ ಕೃತಾಂತನಂತೆ ಮಾಮಸಕಂಮಸಗಿ ಪೊಡೆವ ಸಿಡಿಲಂತೆ ಸಿಡಿಲ್ದು ಸಿಂಹ ಲಂಘನದಿಂದಂಬರಕ್ಕೆ ನೆಗೆದು—

ಕಂ ॥ ಮನೆಮನೆದಪ್ಪದೆ ನೆಗೆದುದು
ತನಿಗಿರ್ಚಿನೆ ದಹನ ವಿದ್ಯೆಯಿಂ ಸುಟ್ಟಂ ಪಾ ॥
ವನಿ ಲಂಕೆಯುನಸುರಾಧೀ
ಶನ ಮನಮುರಿವನ್ನಮಾನನಂ ಪೊಗೆವನ್ನಂ ॥ ೧೪೪ ॥

ಕಂ ॥ ಬಹುಧೂಮ ಲೇಖೆ ನಿಮಿರ್ದುವು
ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾ ॥
ದಹನಮನಸುರೇಂದ್ರ ವಿನಾ
ಶ ಹೇತುಗಳ್ ಧೂಮಕೇತುಗಳ್ ನೆಗೆದುವೆನಲ್ ॥ ೧೪೫ ॥

ಅಸುರೇಂದ್ರಂಗೆ ಕೃತಾಂತನ
ಕಿಸುಗಣ್ಚಿದ ಕಣ್ಣ ಕೆಂಪೆನಲ್ ಕೇಸುರಿ ದ ॥
ಳ್ಳಿಸಿದುದು ಬದ್ಧ ಭ್ರುಕುಟಿವೊ
ಲಸದಳಮುರ್ವಿಸಿದುದುರ್ವಿ ಧೂಮ ಸ್ತೋಮಂ ॥ ೧೪೬ ॥

ಚ ॥ ಅಣುವನ ವಹ್ನಿವಿದ್ಯೆ ಸುಡೆ ಲಂಕೆಯನಲ್ಲಿ ಛಟಚ್ಛಟೆಂಬ ಛೀ ।
ಷಣ ರವಮುಣ್ಮೆ ನೀಳ್ದುರಿಯ ನಾಲಗೆಗಳ್ ದಶಕಂಠ ರಕ್ತದಿಂ ॥
ತಣಿವ ದಿನಂಗಳಾದಪುವು ರಾಮ ಶರಂಗಳಿನೆಂದು ರಾಗದಿಂ ।
ಕುಣಿವ ಕುಕಿಲ್ವ ಭೈರವಿಯ ರಕ್ತ ಜಟಾ ಪಟಲಂಗಳೆಂಬಿನಂ ॥ ೧೪೭ ॥

ಪುರಹರನೊಡೆ ಮುರ್ಯ ತ್ರಿಪುರಮಂ ಪಲಕಾಲಮುಪೋಷಿತ ವ್ರತಾ ।
ಚರಣದೊಳಿರ್ದನೀಗಳುಪವಾಸದ ಪಾರಣೆ [1]ವಾಯು ಪುತ್ರನಿಂ ॥
ದೊರೆಕೊಳೆ ಲಂಕೆಯಂ ಶಿಖಿ ಶಿಖಾವಳಿಯುಪ್ಪಿನಮುಂಡು ತೇಗುವಂ ।
ತಿರೆ ಪೊಜಪೊಣ್ಮಿದತ್ತು ಧಗಿಲೆಂಬ ಧಗದ್ಧಗಿಲೆಂಬ ನಿಸ್ವನಂ ॥ ೧೪೮ ॥

ಮ॥ಸ್ರ॥ ಕರುಮಾಡಂ ಮೇರುವಂ ಪರ್ವಿದುದು ಚಟುಲ ದಾವಾಗ್ನಿಯೆಂಬಂದದಿಂ ನಿಂ
ದುರಿಯುತ್ತಿರ್ದತ್ತದಂ ಸುತ್ತಿಜಿದ ಧವಳ ಹಾರಂ ಸುಧಾವಾರ್ಧಿಯಂ ದು ॥
ಸ್ತರದೌರ್ವ ಜ್ವಾಳಿ ಜಿಹ್ವಾ ಪರಿಕರಮುಳುರ್ದತ್ತೆಂಬಿನಂ ಕಣ್ಗೆ[2]ದೇಂ ಭೀ ।
ಕರಮಾಗಿರ್ದತ್ತೊ ಲಂಕಾಪುರಮನುರಿಸೆ ದಿವ್ಯಾಗ್ನಿಯಿಂದಾಂಜನೇಯಂ ॥
[ ॥ ೧೪೯ ॥

ಉ ॥ ವಾಸುಗಿ ನುಂಗಲೆಂದು ದಶಕಂಧರನಂ ರಸೆಯಿಂ ಧರಾತಲ ।
ಕ್ಕಾಸುರಮಾಗಿ ತನ್ನ ರಸನಾ ದ್ವಿಸಹಸ್ರಮುಗುರ್ವನೀಯೆ ಭಾ ॥
ಭಾಸುರ ರತ್ನ ರಂಜಿತ ಸಹಸ್ರ ಫಣಂ ನೆಗೆದಂತೆ ಸುತ್ತಲುಂ ।
ಕೇಸುರಿ ಮಾಲೆ ನಿಂದುರಿಯೆ ಬೆಂದುದು ರಾವಣ ರಾಜಮಂದಿರಂ ॥ ೧೫೦ ॥

ಕಂ ॥ ಗೃಹ ದೀರ್ಘಿಕೆಯುಂ ಧಾರಾ
ಗೃಹಮುಂ ಬಡಬಾಗ್ನಿಯಂದದಿಂ ರತ್ನ ಶಿಲಾ ॥

---

1. ಯಾಗೆ ಲಂಕೆಯಂ । ಮರುತಜನೊಡೆ ಪಾವಕನುರಂಬರೆಗಂ ತಣಿದುಂ. ಚ.
2. ಳುಂಬಾ । ಕರಮಾಗಿರ್ದತ್ತು. ಚ.

ಗೃಹಮಂ ಸಿಡಿಲಂತಿರೆ ಧವ
ಲ ಹಾರಮಂ ದಾವ ಶಿಖಿಪೊಲಳುರ್ದುದು ದಹನಂ ॥ ೧೫೧ ॥

ಕನಕದ ರಜತದ ಕಾಂಸ್ಯದ
ಮನೆ [1]ಮುಟ್ಟುರ್ವಿಮುಟ್ಟಿ ಕರಗಿ ಕಣ್ಣಿಟ್ಟುವು ದೈ ॥
ತ್ಯನ ಸಿಂಹಾಸಂದಿಗೆ ರಾ
ಮನ ವೀರಶ್ರೀ ಕಡಂಗಿ ಕಣ್ಣಿಟ್ಟಳೆನಲ್ ॥ ೧೫೨ ॥

ಚ ॥ ಸುರಿವ ಮದಾಂಬುವಿಂದುರಿಯ ನಾಲಗೆ ತಣ್ಣಸವಾಗೆ ಬೇಗದಿಂ ।
ಪರಿದುವು ನಿರ್ಝರಂ ಸುರಿವ ಜಂಗಮ ನೀಲ ನಗಂಗಳೆಂಬಿನಂ ॥
ಭರದೊಳೆ ಕಂಭಮಂ ಮುಱಿಯೆ ಪಾಯ್ದು ತೊಡರ್ಪಱಿದಾನೆ ಸಾಲೆಗೆ ।
ಯ್ತರೆ ಯಮಜಿಹ್ವೆಯಂತುರಿಯ ನಾಲಗೆ ದಾನವನಂಕದಾನೆಗಳ್ ॥ ೧೫೩ ॥

ಇದು ಕಡೆಗಾಲದಂದಿನಡೆವೊತ್ತಿದ ಪಾವಕನೆಂಬಿನಂ ಪೊದ ।
ಱಿಪ್ದುದವಿ ಕೃಶಾನು ಸುತ್ತಿ ಸುಡೆ ಮುಂದುರಮಂ ನೆ[2]ಗೆದುಳ್ಳಲೆಂಕರಂ ॥
ಬೆದಱಿಸಿ ಲಾಯಮಂ ಪರಿದು ಮುಂಡಿಗೆಯಂ ಮುಱಿದಾಗಳೇಂ ಬಿಸಿ ।
ಲ್ಗುದುರೆಗಳಂದದಿಂ ಕುದುರೆಗಳ್ ಪಲವುಂ ದೆಸೆ[3]ಬಿಪ್ಪವೋದುವೋ ॥ ೧೫೪ ॥

ಕಂ ॥ ಎನ್ನ ಸುತನತಿಥಿ ಪೂಜೆಯ
ನೆನ್ನಸಖಂಗಿತ್ತನಗ್ನಿಗೆಂದನುಕೂಲಂ ॥
ತನ್ನೊಲವಿಂದೂಡಿದನನಿ
ಲನ್ನಯದಿಂ ಬೀಸಿಬೀಸಿ ಲಂಕಾಪುರಮಂ ॥ ೧೫೫ ॥

ಆ ಸಮಯದೊಳಗ್ನಿಶಿಖಾ ಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮಳಿಸಿ ನಿಂದು ಬಹುಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್—

ಚ ॥ ಜನಕಜೆಗಾಸೆಗೆಯ್ದು ಸುಕೃತ ಕ್ಷಯದಿಂ ಜಲವರ್ಷ ವಿದ್ಯೆ ಪ ।
ಳ್ಚನೆ ಪೆಱಪಿಂಗೆ ಪುಷ್ಪಕ ವಿಮಾನಮನೇಱಿ ದಶಾನನಂ ವಧೂ ॥
ಜನ ಸಹಿತಂ ಕೃಶಾನುಗೆ ಭಯಾಕುಲನಪ್ಪುದು ಚೋದ್ಯಮಲ್ತದೆಂ ।
ತೆನೆ ಶುಚಿಯಲ್ಲದಂಗೆ ಬೆಸಕೆಯ್ಗುವೆ ವಿದ್ಯೆಗಳಾವುವಾದೊಡಂ ॥ ೧೫೬ ॥

ಉ ॥ ಮಾನವದೂತನೆತ್ತ ಜಲರಾಶಿಯನಳ್ಕದೆ ಪಾಯ್ದು ಬರ್ಪುದೆ ।
ತ್ತಾನಲಳುಂಬಮಪ್ಪಸುರ ಸೇನೆಯನೊರ್ವನೆ ಕೊಲ್ವುದೆತ್ತ ಲಂ ॥

---

1. ದಳ್ಳುರಿ. ಗ. 2. ಗಳ್ವಳ್ಳೊಳಂಕರಂ. ಗ; ಗಳ್ಪುಳ್ಳ ಳಂಕರಂ. ಚ.
3. ಬಿಳ್ಪ ಪೋದುವೋ. ಕ. ಗ. ಘ.

ಕಾ ನಗರಕ್ಕೆ ನಂದನ ವನಕ್ಕೆ ವಿನಾಶಮನೀವುದೆತ್ತಿದೇಂ।
ದಾನವರಾಜ ದುರ್ವಿಲಸಿತೋತ್ಕಟ ಸಂಕಟ ವೇಗಮಾಗದೇ ॥ ೧೫೭ ॥

ಕಂ॥ ಪ್ರತಿಪಕ್ಷಮುಂಟೆ ಲಂಕಾ
ಪತಿಗಣುವಂ ರಾವಣಂಗಿದಿರ್ಚುವನೆ ಮಹಾ ॥
ಸತಿ ಸೀತೆಯ ಶೋಕಾನಲ
ಹತಿಯಿಂ ಬೆಂದತ್ತು ಕೂಡೆ ಲಂಕಾ ನಗರಂ ॥ ೧೫೮ ॥

ಎಂದು ಪೌರಜನಮುಲಿಯೆ ಲಂಕಾಪುರಮನುರಿಪಿ ಗಗನತಲಕ್ಕೆ ನೆಗೆದು ಮಗುಟ್ದು ನಿಜಸೇನೆಯುಂ ಕೂಡಿಕೊಂಡು ಗಂಧವಹ ನಂದನಂ ಕಿಷ್ಕಿಂಧ ಪುರಕ್ಕಭಿಮುಖನಾಗಿ—

ಉ॥ ಮಾರುತ ಮಾರ್ಗಮಂ ಪುದಿಯೆ ಕೇತನ ಪಟ್ಟಿಕೆಗಳ್ ವಿಮಾನ ಘಂ।
ಟಾ ರುತಿಗಳ್ ಜಯಾನಕ ಘನ ಧ್ವನಿಗಳ್ ದೆಸೆಯಂ ಪಳಂಚೆ ಭೂ॥
ಷಾ ರುಚಿಗಳ್ ದಿನಕ್ಕೆ ತನಿಗೊರ್ವನೊಡರ್ಚೆ ಜಯಾಂಗನಾ ಪ್ರಿಯಂ।
ಮಾರುತಿ ಬಂದನಾ ರಘುತನೂಜ ಮನೋರಥ ಸಿದ್ಧಿ ಬರ್ಪವೋಲ್ ॥ ೧೫೯ ॥

ಅಂತು ಬಂದು ಗಗನ ತಲದಿನವನೀತಲಕ್ಕವತರಿಸಿ ಕಿಷ್ಕಿಂಧಪುರ ಬಹಿಃಪುರದೊಳ್ ಬೀಡಂಬಿಟ್ಟು ಪುರಮಂ ಪುರ ಪುರಂಧ್ರಿಯರ ಮನಮುಮನರಮನೆಯುಮಂ ಪೊಕ್ಕು—

ಉ॥ ರಾಮಭುಜ ಪ್ರತಾಪ ತಪನೋದಯ ಶೈಲಮುಪಾಂತ ಪರ್ವತ।
ಸ್ತೋಮ ಸಮನ್ವಿತಂ ಬರುತುಮಿರ್ದಪುದೆಂಬಿನೆಗಂ ವಿಯಚ್ಚರ॥
ಗ್ರಾಮಣಿ ಸೂರ್ಯ ವಂಶ ನರಪಾಲ ಶಿರೋಮಣಿಯಿರ್ದ ತತ್ಸಭಾ।
ಭೂಮಿಗೆ ಬಂದನಾಪ್ತ ಖಚರಾನುಚರಂ ಪವನಂಜಯಾತ್ಮಜಂ ॥ ೧೬೦ ॥

ಚ॥ ಮರಕತ ಕರ್ಣಕುಂಡಲ ಮರೀಚಿಗಳಿಂ ದೆಸೆಗಳ್ ಪಸುರ್ಪುವೆ।
ತ್ತಿರೆ ಮಕುಟ ಪ್ರಭಾ ಪಟಲದಿಂ ಗಗನಂ ಕಿಸುಸಂಜೆ ಪರ್ವಿದಂ॥
ತಿರೆ ಕನಕಾದ್ರಿಯೊಳ್ ಪೊಳೆವ ತಾರೆಗಳಂದದೆ ತೋರಮುತ್ತಿನೈ।
ಸರಮುರದೊಳ್ ತಳತ್ತಳಿಸೆ ಬಂದನರಿಂಜಯನಂಜನಾಸುತಂ ॥ ೧೬೧ ॥

ಅಂತು ಬರುತ್ತುಮಿರೆ—

ಚ॥ ವದನ ವಿಕಾಸದಿಂ ಬರವಿನೇಟ್ಟಿರದಿಂದಮೆ ಕಾರ್ಯಸಿದ್ಧಿಯಾ।
ದುದನಱದಂಜನಾಸುತ ನಿರೀಕ್ಷಣದಿಂ ರಘುಜಂಗೆ ಹರ್ಷಮಾ॥

ದುದು ಪರಿಷಜ್ಜನಕ್ಕೆ ಪರಮೋತ್ಸವಮಾದುದು ಲಕ್ಷ್ಮಣಂಗೆ ಕೊ ।
ರ್ವಿದುದು [1]ಮನಂ ಮುದಂಬಡೆಯರಾರಭಿವಾಂಛಿತ ಕಾರ್ಯ ಸಿದ್ಧಿಯಿಂ ॥

ಅಂತು ನಿಜಾಗಮನಮೆ ಸಭಾಜನಮಂ ಹರ್ಷರಸ ಭಾಜನಮಂ ಮಾಡೆ—

ಚ ॥ ಪುದಿದಿರೆ ರಾಮಲಕ್ಷ್ಮಣರ ಕಣ್ಬೆಳಪುಂ ಬಳೆಸಿರ್ದ ತತ್ಸಭಾ ।
ಸದರ ವಿಲೋಚನ ಪ್ರಭೆಯುಮಾತ್ಮ ಶರೀರಮನಂಜನಾ ಸುತಂ ॥
ವಿದಲಿತ ನೀಲನೀರಜ ವನಂ ನಡೆತಂದಪುದೆಂಬಿನಂ ಸಭಾ ।
ಸದನಮನೆಯ್ದಿದಂ ಸಲಿಲ ವೀಚಿಗಳಂ ಗೆಲೆ ಭೂಷಣಾಂಶುಗಳ್ ॥ ೧೬೩ ॥

ಅಂತು ಬಂದು ರಾಘವಂಗೆ ವಿನಯ ವಿನಮಿತನಾಗಿ ಲಕ್ಷ್ಮಣಂಗೆ ತುಟಿ
ಲ್ಗೆಯ್ದು ಸಮುಚಿತ ಪ್ರದೇಶದೊಳಿಕ್ಕಿದುತ್ತುಂಗ ಮಣಿಮಯಾಸನಮನಲಂಕರಿಸಿ—

ಕಂ ॥ ಮಣಿಯೆ ವಿರಹಾಂಧಕಾರಂ
ಕುಣಿಯೆ ಜಗತ್ಪತಿಯ ನೇತ್ರ ಪುತ್ರಿಕೆ ಮೆಯ್ಯೊಳ್ ॥
ಪೆಣೆಯೆ ಪುಲಕಾಳಿ ಚೂಡಾ
ಮಣಿಯಂ ಕೊಟ್ಟಂ ನೃಪಂಗೆ ಪವಮಾನ ಸುತಂ ॥ ೧೬೪ ॥

ಅಂತು ಕುಡುವುದುಂ—

ಶಾ ॥ ಆ ರತ್ನಕ್ಕಿದಿರ್ವರ್ಪವೋಲ್ ನೃಪತಿಗಾನಂದಾಶ್ರುಗಳ್ ಬಂದುವಾ ।
ಸ್ತ್ರೀರತ್ನಂ ಪದೆದಪ್ಪಿದಂತೆ ಪುಲಕಂ ಚೂಡಾಮಣಿ ಸ್ಪರ್ಶದಿಂ ॥
ಧೀರೋದಾತ್ತನ ಮೆಯ್ಯೊಳುಣ್ಮಿದುವು ಸೀತಾ ಶುದ್ಧಿಯಂ ಕೇಳ್ವ ಚೇ ।
ತೋರಾಗಂ ರಘುನಂದನ ಶ್ರುತಿಗೆ ತಂದತ್ತಾಗಳೌತ್ಸುಕ್ಯಮಂ ॥ ೧೬೫ ॥

ಅನಂತರಂ ಮರುನ್ನಂದನಂ ಬಿನ್ನಪಮನವಧಾರಿಸುವುದೆಂದಿಂತೆಂದಂ.—

ಕಂ ॥ ಘನಸಮಯ ಸಮಾಗಮಮಂ
ಮನದೊಳ್ ನೆನೆಯುತ್ತುಮಿರ್ಪ ಚಾದಗೆವೋಲ್ ಮ ॥
ಜ್ಜನನಿ ನಿಜಾಗಮನಮೆ ಜೀ
ವನಮಾಗಿರೆ ದೇವ ಜೀವಮಂ ಪಿಡಿದಿರ್ದಳ್ ॥ ೧೬೬ ॥

ಉ ॥ ದೇವ ಪತಿವ್ರತಾ ಗುಣದಿನಗ್ಗಳಮಾವುದುಮುಂಟೆ ಜಾನಕೀ ।
ದೇವಿಗೆ ರಾವಣಂ ಮುಳಿದು ಮಾಟ್ಪುಪಸರ್ಗಮವೆನ್ನಮಾದೊಡಂ ॥

---

1. ಮನೋಮುದಂ ಪಡೆವರಾರಭಿವಾಂಛಿತ ಕಾರ್ಯ ಸಿದ್ಧಿಯಂ. ಕ. ಖ. ಘ. ಚ;
..................ಪಡೆಯರಾ.................... ಗ.

ಬೇವಸಮುಂ ಮನಕ್ಕೆ ತರಲಾಜಿವೆ ನಿಮ್ಮಡಿ ನಿಮ್ಮ ಭಕ್ತಿಯಿಂ ।
ಪಾವಿನ ಪಲ್ಲ ನಂಜು ಕಿಡುವಂತಿರೆ ಮಾಂತ್ರಿಕ ಮಂತ್ರ ಶಕ್ತಿಯಿಂ ॥ ೧೬೭ ॥

ಎಂದು ಬಿನ್ನವಿಸಿ ಮತ್ತಂ ಕೆಲವವಿನ್ನಾಣಂಗಳನಿಂತೆಂದಂ—

ಮ ॥ ಮುನಿಬೃಂದಾರಕರಪ್ಪ ಚಾರಣ ಯುಗಕ್ಕಾಹಾರಮಂ ದೇವರೀ ।
ಯೆ ನದೀತೀರದೊಳಾಯ್ತು ಚೋದ್ಯಮೆನೆ ಪಂಚಾಶ್ಚರ್ಯಮಾ ಯೋಗಿ ದ ॥
ರ್ಶನದಿಂ ದಂಡಕನಾ ಮಹಾಗಹನದೊಳ್ ಪರ್ದಾಗಿ ಪುಟ್ಟಿರ್ದು ತೊ ।
ಟ್ಟನೆ ಜಾತಿಸ್ಮರನಾದನೆಂಬ ಕುಜೀಪಂ ಮನ್ಮಾತೆ ಪೇಟ್ಟಿಟ್ಟಿದಳ್ ॥ ೧೬೮ ॥

ಎಂಬುದುಂ ಪ್ರಭಂಜನ ಸುತನ ಪ್ರಧಾನ ಪುರುಷಂ ಪೃಥುಮತಿವೆಸರ ಮಂತ್ರಿ ದಾಶರಥಿಗೆ ಕೈಗಳಂ ಮುಗಿದು.—

ಕಂ ॥ ಅಮಿತಬಲಂ ದೇಪರ್ ಬೆಸ
ಸೆ ಮನೋವೇಗದೊಳೆ ಪೋಗಿ ಲಂಕಾ ಪ್ರಾಕಾ ॥
ರಮನೊಡೆದಂ ಕೊಂದಂ ವ
ಜ್ರಮುಖನನಾರ್ ವಲಿಮು[1]ಖ ಧ್ವಜಂಗಿದಿರಾಂಪರ್ ॥ ೧೬೯ ॥

ಬನಮಂ ಕಿಟ್ಟಿಂ ಪೌಲ
ಸ್ತ್ಯನ ಲಂಕಾಪುರಮನುರಿಪಿದಂ ನಿಮ್ಮ ಬೆಸಂ ॥
ತನಗಿಲ್ಲದಸುರನಂ ಕೊ
ಲ್ಲನೆ ತಾರನೆ ದೇವ ದೇವಿಯಂ ಹನುಮಂತಂ ॥ ೧೭೦ ॥

ಎಂದು ಬಿನ್ನವಿಸೆ ಸುಗ್ರೀವಾದಿಗಳ್ ಹನುಮನ ಭುಜಬಲಕ್ಕಿದಾವ ಗಹನ ಮಾತಂಗಸಾಧ್ಯಮಾವುದೆಂದು ಕೊಂಡು ಕೊನೆಯೆ ಮರುನ್ನಂದನಂ ರಘುನಂದ ನಂಗೆ ಮತ್ತಮಿಂತೆಂದಂ—

ಕಂ ॥ ಆನ್ನಿಮ್ಮ ಸುದ್ದಿಯಂ ಪೇ
ಳ್ವನ್ನಂ ಮಜ್ಜನನಿ ಜೀವಿತಾಶೆಯನಿಟಾಕೆ ॥
ಯ್ದನ್ನ ತ್ಯಾಗಂಗೆಯ್ದಳ್
ಮುನ್ನಾದರ್ ಸತಿಯರಿನ್ನರಾರೆಂಬಿನೆಗಂ ॥ ೧೭೧ ॥

ಅಸುರನ ಮಾಜ್ಪಿಪಕೃತಿಯಿಂ
ದಸುವಂ ಬಿಡುವಂತುಟಕ್ಕುಮಂಬಿಕೆಗೆ ಬಟಾ ॥

1. ಖಂಗೆ ಕಾರ್ಪಂ ತೋರ್ಪರ್. ಕ. ಗ.

ಕ್ಕಸುರೇಂದ್ರನನಿಕ್ಕಿದೊಡ
ಲ್ಲಿ ಸಾಧ್ಯಮೋಂ ತಕ್ಕುದಲ್ತು ಕಾಲಕ್ಷೇಪಂ ॥ ೧೭೨ ॥

ಎಂಬುದುಮಂಜನಾಸುತನ ಬಿನ್ನಪಮೆ ತನಗೆ ವೀರರಸ ಪ್ರವಾಹಿನಿಗೆ ಸೇತುವಾಗೆ—

ಶಾ ॥ ಈ ವಾರಾಶಿಯನೀಂಟಲೆನ್ನ ಬಡಬಾಸ್ತ್ರಂ ಸಾಲ್ವುದಾರಾಂತೊಡಂ ।
ಜೀವಾಕರ್ಷಣವಿದ್ಯೆಯಂ ಮೆಱೆವುದೆನ್ನೀ ಚಾಪದಂಡಂ ದಶ ॥
ಗ್ರೀವಂಗಣ್ಣನೆ ಸಾಲ್ವನಿಂ ತಡೆವುದೇತರ್ಕೆಂದು ಸೌಮಿತ್ರಿ ಸು ।
ಗ್ರೀವಂಗೆಂದನುದಂಚಿತ ಭ್ರುಕುಟಿ ಗಂಡೋದ್ಗಾರಿ ಘರ್ಮ್ಮೋದಕಂ ॥ ೧೭೩ ॥

ಎಂಬುದುಮಾ ನುಡಿಗೊಡಂಬಟ್ಟು ಸುಗ್ರೀವಂ ರಣರಸೋದ್ಗ್ರೀವನಾಗಿ—

ಚ ॥ ತಡೆವಸಿತೇಕೆ ನಾಳೆ ನಡೆವಂ ರಣಕೇಳಿಗೆ ಬಾಡಬಾಸ್ತ್ರಮಂ ।
ತುಡುವನಿತಚ್ಚಿಗಂ ನಮಗದೇವುದೊ ಲಕ್ಷ್ಮಣದೇವ ನಮ್ಮ ಪೆ ॥
ರ್ಪಡೆ ಕಡಲಂ ನಭೋಗಮನವಿದ್ಯೆಯೆ ಸೇತುವೆನಲ್ಕೆ ದಾಂಟಿ ಮಾ ।
ರ್ಪಡೆಯನದಿರ್ಪುಗುಂ ರಘುತನೂಜನೊಳಾಜಿಗೆ ಬರ್ಪ ಗಂಡರಾರ್ ॥೧೭೪॥

ಎನೆ ಸಿಂಹನಾದಂ ಸಿಂಹದಂತೆ ಗರ್ಜಿಸಿ—

ಉ ॥ ಒರ್ವನೆ ಪೋಗಿ ಕಿಚ್ಚಿಟ್ಟು ಬನಮಂ ಪುರಮಂ ಸುಡೆ ಕಂಡು ತಮ್ಮ ದೋ ।
ರ್ಗರ್ವಮನೊರ್ವರುಂ ಮೆಱೆಯಲಾಱರೆ ಮಾರುತಿಯನ್ನರಿಲ್ಲಿ ಸಾ ॥
ಸಿರ್ವರಖರ್ವದೋರ್ವಲಯುತರ್ ಖಚರಾಧಿಪರಿರ್ದಪರ್ ನಿಶಾ ।
ಟರ್ವಯಲಿಂಗೆ ಬಂದಪರೆ ನಿಂದಪರೇ ರಣರಂಗಭೂಮಿಯೊಳ್ ॥ ೧೭೫ ॥

ಎನೆ ವಾಲಿದೇವನ ತನೂಭವಂ ಚಂದ್ರಮರೀಚಿ ದಶನಮರೀಚಿ ವಿದ್ಯುನ್ಮರೀಚಿಯಂ ಪಳಂಚಲೆವಿನಮಿಂತೆಂದಂ—

ಉ ॥ ಮಾರುತಿ ಬುದ್ಧಿವೇೞ್ದೊಡಮದಂ ಬಗೆಗೊಳ್ಳನೆ ರಾಮನಂಬುಗಳ್ ।
ಕೂರಿದುವೆಂಬಿದಂ ಬಗೆಗೆ ತಾರನೆ ಸಂಚಿತ ಪೂರ್ವಕರ್ಮ ದು ॥
ಷ್ಪ್ರೇರಣೆ ನೇರಿತಂ ನಡೆಯಲೀಗುಮೆ ದುರ್ಮತಿಯಪ್ಪ ರಾವಣಂ ।
ಗೀ ರಣಕೇಳಿ ಮಾರಣಮನೀಯದೆ [1]ಕಮ್ಮನೆ ಸೈತೆ ಪೋಕುಮೇ ॥ ೧೭೬ ॥

ಅದೆಂತೆನೆ ಸಾಧಿತ ಸಕಲವಿದ್ಯರಪ್ಪ ಗಗನಗತಿಯುಂ ಭೂತಪತಿಯುಂ ನಾಗರಾಜನುಂ ಅಶನಿವೇಗನುಂ ಮಹೇಂದ್ರನುಂ ಮೃಗೇಂದ್ರನುಂ ಭೀಮಕುಂಡಲನುಂ

---

1. ಕೆಮ್ಮನೆ ಗ. ಘ.

ಪ್ರಭಾಮಂಡಲನುಂ ಪ್ರಸನ್ನಕೀರ್ತಿಯುಂ ತಟಿದ್ವಕ್ತ್ರನುಂ ವಜ್ರದಂಷ್ಟ್ರನುಂ ವಿದ್ಯು ನ್ಮಾಲಿಯುಂ ರವಿಯುಂ ಕ್ರೂರನುಂ ಅಂಗದನುಂ ಶೂರನುಂ ನಳನುಂ ನೀಲನುಂ ಸುಷೇಣನುಂ ಮಂದರನುಂ ಜಾಂಬವನುಂ ಸಮೀರಣನುಂ ಸಿಂಹನಾದನುಂ ವರಾಹ ನುಂ ವಿರಾಧಿತನುಂ ಹನುಮಂತನುಂ ಮತ್ತಂ ಪೆಱರಱಿಕೆಯ ವಿದ್ಯಾಬಲ ಗರ್ವಿತರಪ್ಪ ವಿದ್ಯಾಧರರೆಲ್ಲರುಂ ರಾಮಲಕ್ಷ್ಮಣರ ಬೆಸನನೆ ಪಾರುತ್ತುಮಿರ್ದರಿವ ರೋರೊರ್ವರೆ ಮಾರ್ವಲಮಂ ಕೊಲಲುಂ ಗೆಲಲುಂ ನೆಱೆವರಿನ್ನೆಮಗೆ ಪೆಱತು ಮಂತಣಕ್ಕೆಡೆಯಿಲ್ಲೆನೆ ಕೇಳ್ದೆಲ್ಲರುಮಾತನ ಮಾತನೆ ಮನದೇಗೊಂಡು ವಿಜಯ ಪ್ರಯಾಣ ನಿಶ್ಚಿತ ಮಂತ್ರರಾಗಿರ್಩ುದುಮಾ ಸಮಯದೊಳ್—

ಕಂ ॥ ಕುಸಿದುವು ಕಿರಣಂಗಳ್ ಕಡು
ಬಿಸಿಲ ಪೊಡರ್ಪುಡು[1]ಗೆ ಮಂದನುಕ್ರಮದಿಂ ತ ॥
ಣ್ಬಿಸಿಲಾಯ್ತನಂತರಂ ಪೊಂ
ಬಿಸಿಲಾದುದು ಪೊರ್ದೆ [2]ಪಟಿಕ್ಕೆವೆಟ್ಟಮನರ್ಕಂ ॥ ೧೭೭ ॥

ತಪಸಿಗೆ ಪಿಂಗುವವೋಲಾ
ತಪ ಯೋಗಂ ತಿಣ್ಣಮಾದ ರಾಗೋದಯದಿಂ ॥
ತಪನಂಗೆ ಪಿಂಗಿದತ್ತಾ
ತಪಯೋಗಂ ತಿಣ್ಣವಾಗೆ ಸಂಧ್ಯಾರಾಗಂ ॥ ೧೭೮ ॥

ಆವಂ ಗಡ ವಾರುಣಿಯಂ
ಸೇವಿಸಿ ನಾಣ್ಗಿಡದನುೞಿದನಂಬರಮಂ ರಾ ॥
ಜೀವ ಸಖಂ ವಾರುಣಿಯಂ
ಸೇವಿಸಲೊಡಮಾತ್ಮತೇಜಮಸ್ತಮಿಸುವಿನಂ ॥ ೧೭೯ ॥

ದಶವದನನ ಪರಮಾಯು
ರ್ದಶೆಯಂತಸ್ತಮಿಸೆ ಭಾನು ಮಂಡಲಮಾಗಳ್ ॥
ದಶವದನನ ಪೞಿಯಂತಿರೆ
ದಶ ದಿಗ್ವದನಮುಮನುರ್ವಿ ಪರ್ವಿತ್ತು ತಮಂ ॥ ೧೮೦ ॥

ಕುಮುದಕ್ಕೆ ಮಂದಹಾಸಂ
ಸಮನಿಸಿದುದು ಬಿಟ್ಟು ಬಂದು ಸರಸಿಜಮಂ ವಿ ॥

---

1. ಗಿ ಬಂದ. ಕ ಖ. ಗ ಘ. 2. ಪಕ್ಷ ವೇದಿಯ. ಘ.

ಶ್ರಮಿಸೆ ಸಿರಿ ತನ್ನೊಳಾಶ್ಚ
ರ್ಯಮೆ ಜಡರನ್ಯಾಪಕರ್ಷದಿಂ ರಾಗಿಸರೇ ॥ ೧೮೧ ॥

ಕೋಕ ಮಿಥುನಂ ವಿಯೋಗೋ
ದ್ರೇಕಂ ದೋಷಾನುಷಂಗದಿಂ ಸಮನಿಸೆ ಚಿಂ ॥
ತಾಕುಲಿತಮಾದುದಾರ್ಗಂ
ವ್ಯಾಕುಲತೆಯನುಂಟುಮಾಱ್ಕುಮಿಷ್ಟ ವಿಯೋಗಂ ॥ ೧೮೨ ॥

ಅಂಬಿಱಿವಿಡಿವ ತಮೋದಾ
ನಾಂಬುವಿನೊಳ್ ಮುಳುಗಿ ನಿಂದನಭಮೆಂಬ ಮದ ॥
ಸ್ತಂಬೇರಮಮಾಗಳ್ ಸಿ
ಬ್ಬಂ ಬೊಯ್ದವೊಲಡರೆ ತುಱುಗಿದುವು ತಾರಗೆಗಳ್ ॥ ೧೮೩ ॥

ಪೆಱತೆಗೆವ ತಮಂ ತಟ್ತಿಮೆ
ದುಱುಗಲೆನಲ್ ಪೂರ್ವ ದಿಗ್ವಧೂ ವದನಂ ಕ ॥
ಣ್ದೆಱೆದವೊಲದೇಂ ಬೆಳರ್ತುದೊ
ಕಿಱಿದೆಡೆ ತುಹಿನಾಂಶು ಬಿಂಬಮುದಯಿಪ ಪದದೊಳ್ ॥ ೧೮೪ ॥

ಅನಂತರಂ ರೋಹಿಣೀರಮಣನುದಯಾಚಲ ಶಿಖಂಡ ಮಣಿ ಮಂಡನನೆನಿಸೆ–

ಕಂ ॥ ಜನಕಜೆಯ ವದನಮಂ ಸಿತ
ವನರುಹಮಂ ಚಂದ್ರಕಾಂತ ಮಣಿದರ್ಪಣಮಂ ॥
ನೆನೆಯಿಸಿದುದು ರಾಮಂಗಮ
ರ ನದಿಯ ಕಲಹಂಸನಂ ಸುಧಾಕರ ಬಿಂಬಂ ॥ ೧೮೫ ॥

ಆ ಸಮಯದೊಳುದಾತ್ತ ರಾಘವನುಚಿತ ಸನ್ಮಾನ ದಾನಪುರಸ್ಸರಮಖಿಲವಿದ್ಯಾಧರಾಧಿರಾಜರಂ ಬೀಡಿಂಗೆ ಬೆಸಸಿ ನಿರ್ವರ್ತಿತ ಸಂಧ್ಯಾಸಮಯಂ ಶಯ್ಯಾಗೃಹಕ್ಕೆ ಬಿಜಯಂಗೆಯ್ದು ದುಕೂಲ ಪ್ರಚ್ಛದಾಚ್ಛಾದಿತ ವಿಶಾಲ ಹಂಸತೂಲ ತಲ್ಪತಲದೊಳ್ ಸುಖ ಪ್ರಸುಪ್ತನಿರೆ––

ಮ ॥ ಜಿನ ಪೂಜಾವಸರಂ ಪ್ರಭಾತ ಸಮಯಂ ದಿಗ್ಜೈತ್ರಯಾತ್ರಾ ವಿನೋ ।
ದನದಿಂ ರಾಘವ ಮುಖ್ಯ ಮಂಗಲಮನಿಂತೀರ್ಚಲ್ಕೆ ಶಯ್ಯಾ ನಿಕೇ ॥
ತನದಿಂ ನೀನಿರದೇೞ್ವುದೆಂದು ಕರೆವಂತಾದತ್ತು ರಾಜಾಲಯಾ ।
ಬ್ಜಿನಿಯೊಳ್ ಪೊಣ್ಮುವ ಹಂಸ ಸಾರಸ ರಥಾಂಗೋ[1]ತ್ತಾರ ಕೋಲಾಹಲಂ
[ ॥೧೮೬ ॥

---

1. ತ್ತಾನ. ಕ. ಘ. ೧೮೬ ನೆಯ ಪದ್ಯವು ಚ. ದಲ್ಲಿಲ್ಲ.

ಮತ್ತಮಿನಿಸಾನುಂ ಬೇಗದಿಂ—

ಚ ॥ ಕದನ ಮದೋದ್ಧತಂ ಮುಳಿದು ಲಕ್ಷ್ಮಣನಾರ್ದಿಡೆ ವಾಯುವೇಗದಿಂ ।
ತ್ರಿದಶ ವಿರೋಧಿಯಪ್ಪ ದಶಕಂಠನ ವಕ್ಷಮನುರ್ಚಿ ಪೊಂಗಿ ಪೊ ॥
ಣ್ಮಿದ ರುಧಿರಾಂಬುವಿಂದರುಣಮಾದ ಸುದರ್ಶನ ಚಕ್ರದಂತದೇ ।
ನುದಯಿಸಿದತ್ತೊ ಸಾಂಧ್ಯ ಸಮಯಾರುಣಿತಂ ದಿನನಾಥ ಮಂಡಲಂ॥ ೧೮೭ ॥

ಅಂತು ನೇಸಱ್ ಮೂಡುವುದುಂ—

ಮ ॥ ಬಳಭದ್ರಂ ವ್ಯವಹಾರ ಮಂಗಲಮನಾಜ್ಯಾವೇಕ್ಷಣಾದ್ಯುತ್ಸವಂ ।
ಗಳನತ್ಯುತ್ಸವದಿಂದೊಡರ್ಚಿ ಜಿನಪೂಜೋತ್ಸಾಹಮಂ ಮುಖ್ಯಮಂ ॥
ಗಳಮಂ ಮಾಳ್ಪನುರಾಗಮಂ ಬಗೆಗೆ ತಂದಂ ಭಾರತೀ ಕರ್ಣ ಕುಂ ।
ಡಳನಪ್ರಾಕೃತನಪ್ರಮತ್ತ ಚರಿತಂ ಸಾಹಿತ್ಯ ವಿದ್ಯಾಧರಂ ॥ ೧೮೮ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖಕಿರಣ ಚಂದ್ರಿಕಾಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ಲಂಕಾದಹನ ವರ್ಣನಂ
ಏಕಾದಶಾಶ್ವಾಸಂ

# ದ್ವಾದಶಾಶ್ವಾಸಂ

---

ಕಂ ॥ ಶ್ರೀಗೆ ನೆಲೆಯೆನಿಪ ನಿಜ ಶ
ಯ್ಯಾಗೃಹದಿಂ ಸ್ನಪನ ರತ್ನಮಂಡಪ ವೇದೀ ॥
ಭಾಗಕ್ಕೆ ಪದತಳಂಗಳ್
ರಾಗಮನೋಲಗಿಸೆ ಬಂದನಭಿನವಪಂಪಂ ॥ ೧ ॥

ಅಂತು ಬಂದು—

ಕಂ ॥ ಸ್ನಪನ ಪವಿತ್ರಂ ಶುಚಿವ
ಸ್ತ್ರ ಪೂತ ಗಾತ್ರಂ ಪ್ರಧಾನ ಮಂತ್ರ ವಿಧಾನಾ ॥
ದ್ಯುಪಚರಿತಾಚಮನಂ ಪಂ
ಚ ಪರಮ ಗುರುಗರ್ಚ್ಯನೆತ್ತಿದಂ ರಘುರಾಮಂ ॥ ೨ ॥

ತದನಂತರಂ ಮಹಾಪ್ರವಾಹಿನೀ ಸಲಿಲ ಸಂಮಿಶ್ರ ಕರ್ಪೂರ ದಳ ಬಹುಳಕಾಂತಿ ದಂತುರಿತ ಚಂದ್ರಕಾಂತ ಕಲಶಂಗಳಿಂ ಸುರಭಿ ಮಲಯರುಹ ಪಂಕ ಪಿಂಜರಿತ ರಜತ ಶುಕ್ತಿಕೆಗಳಿಂ ಸಜಲ ಧವಳ ಕಲಮಾಕ್ಷತ ಕ್ಷೀರ ಗೌರ ಪಾಂಡುರಿತ ಕರ್ಕೇತನ ಕರಂಡಕಂಗಳಿಂ ನವೀನ ಪ್ರಸೂನ ಮಧು ವಿಲೀನ ಮಧುಕರ ಪಟಲ ಕರ್ಬುರಿತ ರತ್ನಪಟಲಿಕೆಗಳಿಂ ಸುಪಕ್ವ ಭಕ್ಷ್ಯೋಪದಂಶ ಪ್ರಚುರ ಚರು ವಿಚಿತ್ರವರ್ಣ ಶಬಲಿತ ಸುವರ್ಣ ಪರ್ಯಾಣಂಗಳಿಂದುನ್ಮುಖ ಮಯೂಖ ಮಾಣಿಕ್ಯದೀಪ ಕಿರಣಾರುಣಿತ ಮರಕತಮಣಿ ಪುತ್ರಿಕೆಗಳಿಂ ಬಹುಳ ಕಾಲಾಗರುಧೂಮ ಶ್ಯಾಮಲಿತ ಕಲಧೌತ ಧೂಪ ಘಟಂಗಳಿಂ ಕ್ಷೀರಾದಿಸವನ ಪಾವನ ರಸ ವಿಚಿತ್ರಾನೇಕ ಶಾತಕುಂಭ ಕುಂಭಂಗಳಿಂ ಗಂಧಸಲಿಲ ಸಂಭೃತ ವಿಶಾಲ ಹರಿನೀಲ ಭೃಂಗಾರಂಗಳಿಂ ನಿಜ ಪ್ರಭಾ ಪಟಲ ಪಲ್ಲವಿತ ಶೋಣ ಮಣಿಕಲಶಂಗಳಿಂ ಸ್ಫಟಿಕಮಣಿ ಕಿರಣಜಾಲ ಜಟಿಲಿತ ಮಧ್ಯ ರಂಗದಿಂ ಸಂಗೀತಕ ರಸ ತರಂಗಿತ ಬಾಹ್ಯ ರಂಗದಿಂ ಸ್ಥೂಲ ಮುಕ್ತಾಫಲ ಮುಕುಲಿತ ವಿವಿಧ ರಂಗವಲ್ಲಿಯಿಂ ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು ದರ್ಶನ ಸ್ತವನ ಮುಖರ ಮುಖಂ ಯಥಾವಿಧಿಯಿನಭಿಷವಮಂ ತೀರ್ಚಿ—

ಕಂ ॥ ಸಿರಿಕಂಡದ ಕೋಟಿಕ್ಕೆಸಟಿರೊಳ್
ಬೆರಸಿದ ಕತ್ತುರಿಯ ಸಾರವಣೆ ಬೆಳಗಿದ ಕ ॥

ಪ್ಫುರವಳಿಕಿನ ಸೊಡರ್ಗಳ್ ಸುಂ
ದರವೆನೆ ಜಿನಪತಿಯನವನಿಪತಿ ಪೂಜಿಸಿದಂ ॥ ೩ ॥

ಸುರಹೊನ್ನೆಯು ವಾಸಂತಿಯು
ಸುರಗಿಯು ಚಂಪಕದ ಕರ್ಣಿಕಾರದ ಪೊಂದಾ ॥
ವರೆಯು ವಿಚಕಿಲದ ನಸು ಬಿರಿ
ದರಲಿಂದರ್ಚಿಸಿದನವನಿಪತಿ ಜಿನಪತಿಯಂ ॥ ೪ ॥

ಚಾರು ಚರು ನಿಚಯದಿಂ ಘನ
ಸಾರಾಗರು ಧೂಮ ಲೇಖೆಯಿಂ ಮಲಯಜ ಕಾ ॥
ಶ್ಮೀರ ರಸದಿಂ ಜಿನೇಂದ್ರನ
ನಾರಾಧಿಸಿದಂ ನರೇಂದ್ರ ಚೂಡಾರತ್ನಂ ॥ ೫ ॥

ಬಾಳೆಯ ಮಾವಿನ ಕಪ್ಪುರ
ದೀಳೆಯ ತನಿವಣ್ಣಳಿಂದಮರ್ಚಿಸಿದಂ ಭೂ ॥
ಪಾಳಂ ನಿರ್ಭರ ಭಕ್ತಿಯ
ಜಾಳಕವೆನೆ ಮೆಯ್ಯೊಳೊಗೆದ ರೋಮಾಂಚಂಗಳ್ ॥ ೬ ॥

ಚ ॥ ಚರು ಮಣಿಪರ್ಯಣಕ್ಕೆ ಬಿಡುಮುತ್ತಿನ ಸೇಸೆಗೆ ಧೂಪ ಭಾಜನ ।
ಕ್ಕರುಣ ಮಣಿಪ್ರದೀಪಿಕೆಗೆ ದಿವ್ಯಫಲಕ್ಕೆ ನವೋರು ಪುಷ್ಪ ಮಂ ॥
ಜರಿಗೆ ಸುಗಂಧ ಶುಕ್ತಿಕೆಗೆ ಪುಣ್ಯನದೀ ಜಲ ಪೂರ್ಣ ರತ್ನ ಭಾ ।
ಸುರ ಕಲಶಕ್ಕೆ ಮೇಜಿ ಪವಣಿಲ್ಲೆನೆ ಪೂಜಿಸಿದಂ ರಘೂದ್ವಹಂ ॥ ೭ ॥

ಕಂ ॥ ಎನಿತೊಳವಾತಪ ವಾರಣ
ವೆನಿತೊಳವು ವಿಚಿತ್ರ ಪಲ್ಲವಾಂಚಿತ ಮಣಿ ಕೇ ॥
ತನವೆನಿತೊಳವಾಭರಣಮ
ವನಿತರೊಳಂ ರಘುತನೂಭವಂ ಪೂಜಿಸಿದಂ ॥ ೮ ॥

ಅಗರುವ ಧೂಮ ಲತಾ ಶಾ
ಖೆಗಳೊಳ್ ಕಾಯ್ಪುಜುಗಲೆಂದು ಬಗೆ ಬೆದಱುವಿನಂ ॥
ಮುಗಮುಗಿಸುವ ತನಿಗಂಪಿಂ
ಗಗಲದೆ ಮೊಗಸಿದುವು ಮಧುಕರ ಪ್ರಕರಂಗಳ್ ॥ ೯ ॥

ಮರಕತ ಕಲಶಂಗಳ್ ಕೇ
ಸರಿ ಪೀಠಮನುದ್ಗತಾಂಶು ಲೇಖಾ ದೂರ್ವಾಂ ॥

ಕುರದಿಂದರ್ಚಿಸೆ ಮುಕ್ತಾ
ಭರಣಮುಮರ್ಚಿಸಿದುವಂಶು ಜಲ ಧಾರೆಗಳಿಂ ॥ ೧೦ ॥

ಅಂತರ್ಚಿಸಿ ರಾಮಚಂದ್ರಂ ಜಿನೇಂದ್ರ ಮುಖಚಂದ್ರ ನಿರೀಕ್ಷಣ ಹರ್ಷ ಪುಳಕಿತ ಸರ್ವಾಂಗನಾನಂದಬಾಷ್ಪ ಸಲಿಲ ವಿಲುಲಿತ ವಿಲೋಚನಂ ನಿಟಲತಟ ಘಟಿತ ಕುಟ್ಮಲಿತಾಂಜಲಿಪುಟಂ ವಿನಮಿತ ಶಿರಸ್ಸರೋಜಂ ಗಂಧಸಲಿಲ ಶೇಷಾಕ್ಷತ ಕುಸುಮ ಶೇಖರಂ ಜಿನ ಚರಣ ಚಂದನ ತಿಲಕ ವಿಲಸಿತ ವದನಾರವಿಂದನುಚ್ಚರಿತ ಪುನರ್ದರ್ಶನ ವಾಕ್ಯ ಮಾಣಿಕ್ಯ ಕಂಠಾಭರಣಂ ಜಿನಚರಣಮಂ ಬೀೞ್ಕೊಂಡು ಜಿನ ಪೂಜಾಗೃಹ ಪುರೋಭಾಗದ ಚೌಪಳಿಗೆಯೊಳುತ್ತುಂಗ ಮಣಿಮಯಾಸನಾಸೀನಂ ಸುರಭಿ ಕುಸುಮ ದಾಮ ಸುಗಂಧಾನುಲೇಪನ ದಿವ್ಯ ವಸನ ದಿವ್ಯಾಭರಣ ಭೂಷಿತನಪ್ಪುದುಂ—

ಉ ॥ ಪೂತ ನಮೇರು ಸುತ್ತಿದಳಿಮಂಡಳಿಯಿಂ ರಜತಾದ್ರಿ ನೀಲ ಜೀ ।
ಮೂತ ಕದಂಬದಿಂ ಸುರಗಜಂ [1]ಮದವಟ್ಟೆಯಿನಾರ ದಿಟ್ಟಿಗಂ ॥
ಪ್ರೀತಿಯನುಂಟುಮಾೞ್ಪವೊಲದೇನೆಸೆದಿರ್ದನೊ ದೇಹದೀಪ್ತಿ ಚಂ ।
ದ್ರಾತಪಮಂ ಪಳಂಚಲೆಯೆ ನೀಲ ಪರಿಚ್ಛದದಿಂ ಹಲಾಯುಧಂ ॥ ೧೧ ॥

ಚ ॥ ಎಱಗಿಸಿ ಪಂಚರತ್ನ ರುಚಿಯಿಂ ಸುರ ಚಾಪದ ಚೆಲ್ವನಕ್ಕಱಿಂ ।
ದೆಱಗಿಸಿ ನೋೞ್ಪ ನೋಟಕರ ಲೋಚನ ಪುತ್ರಿಕೆಯಂ ಪೆಱರ್ಗೆ ತಾ ॥
ನೆಱಗದ ಪೆರ್ಮೆಯಂ ತಳೆದುದೆಂದೊಡೆ ಬಣ್ಣಿಪರಾರ್ ಜಿನೇಶ್ವರಂ ।
ಗೆಱಗಿ ಮಹತ್ತ್ವಮಂ ತಳೆದ ರಾಘವ ರತ್ನಹಟತ್ಕಿರೀಟಮಂ ॥ ೧೨ ॥

ಕಂ ॥ ಮರಕತ ಮಣಿ ಕುಂಡಲ ರ
ಶ್ಮಿರೇಖೆಯಿಂ ಗಂಡ ಮಂಡಲಂ ಸೇವಾಳಂ ॥
ಬೊರೆದ ಧವಳಾಬ್ಜ ದಳದಂ
ತಿರೆ ಕಣ್ಗೆಸೆದಂ ನರೇಂದ್ರ ಚೂಡಾರತ್ನಂ ॥ ೧೩ ॥

ಫಣಮಯ್ದುಂ ಪಡೆದಂ ತನ
ಗೆಣೆವಡೆದಂ ಶೇಷನುರ್ವಿಯಂ ತಾಳ್ದನೆನಲ್ ॥
ಮಣಿಮುದ್ರಾ ಫಣಮಣಿ ಕ
ಣ್ಬೊಣರಂ ತಣಿಸಿದುದು ಭುಜಯುಗಂ ರಘುಸುತನಾ ॥ ೧೪ ॥

---

1. ಮದವರ್ಕೆ. ಚ.

ಚ ॥ ತರುಣ ಮೃಣಾಲ ಗರ್ಭ ರುಚಿವೆತ್ತು ರಘೂದ್ವಹ ದೇಹದೀಪ್ತಿ ಮಂ।
ಜರಿಯನುಸಾಶ್ರಯಂಬಡೆದು ನಿಸ್ತುಲ ಮೌಕ್ತಿಕ ಹಾರಯಷ್ಟಿ ಪೇ॥
ರುರದೊಳದೇಂ ವಿರಾಜಿಸಿದುದೋ ಜನತಾ ನಯನೋತ್ಪಲೋತ್ಸವಂ।
ಶರದದ ಸಾಂದ್ರ ಚಂದ್ರರುಚಿಯೊಳ್ ತಲೆದೋಱುವ ತಾರಕಾಳಿವೋಲ್॥೧೫॥

ಅನಂತರಮಲ್ಲಿಂ ತಳರ್ದು—

ಚ ॥ ಚಮರರುಹಂಗಳಂ ತನಗೆರಟ್ಟಿಕೆಲದೊಳ್ ನಡೆತಂದು ಖೇಚರ।
ಪ್ರಮದೆಯರಿಕ್ಕೆ ಬೆಳ್ಗೊಡೆ ಸುಧಾಕರನಂ ಕೊಱಚಾಡೆ ಮಾಡೆ ರಾ॥
ಗಮನೆಳೆವೆಣ್ಗೆ ಕೇಸಡಿಯ ಕೆಂಪು ತನುಪ್ರಭೆ ಬೀಱೆ ಚಂದ್ರಿಕಾ।
ಭ್ರಮೆಯನಿಳಾಧಿಪಂ ನಡೆದನೋಲಗ ಸಾಲೆಗದೊಂದು ಲೀಲೆಯಿಂ ॥ ೧೬ ॥

ಅಂತು ಬಂದು ತನ್ಮಧ್ಯ ಸ್ಫಟಿಕ ಘಟಿತ ವೇದಿಕಾ ಶಿಖಂಡ ಮಂಡನಮೆನಿಪ್ಪ ಸಿಂಹಪೀಠದೊಳಮೋಘ ಬಾಣನಪ್ಪುದಾತ್ತರಾಘವನುಮಧಿರಾಜ ಪಾರ್ಶ್ವ ಮಣಿಮಯಾಸನದೊಳ್ ಸಾಗರಾವರ್ತ ಧನುರ್ಜ್ಯಾ ಲತಾ ತಾಡನ ಜನಿತ ಕಿಣ ಕಳಂಕಾಂಕಿತ ಪ್ರಕೋಷ್ಠನಪ್ಪ ಲಕ್ಷ್ಮಣನುಮತ್ರಿಪುತ್ರನಂ ಬಳಸಿದ ನಕ್ಷತ್ರ ಮಂಡಲದಂತೆ ವಿವಿಧ ಮಣಿಮಂಡಲ ಮರೀಚಿ ನಭೋಮಂಡಲಮನಾವರಿಸೆ ಸೇನಾಪ್ರಧಾನರ್ ಸಮುಚಿತಾಸನದೊಳ್ ಸುಗ್ರೀವಾಂಗದ ನಳ ನೀಲ ಜಾಂಬವ ಹನುಮತ್ಪ್ರಮುಖ ನಿಖಿಲ ಖಚರ ಪರಿವೃಢರುಮಿರ್ಪುದುಮಾ ಸಮಯದೊಳ್ ಪುರೋಹಿತನುಚ್ಚರಿತ ಸ್ವಸ್ತಿ ಶಬ್ದಂ ದೇವ ದಿಗ್ವಿಜಯ ಪ್ರಯಾಣ ಲಗ್ನಮತ್ಯಾಸನ್ನಮೆಂದು ಬಿನ್ನವಿಸೆ ಸೇನಾ ಪ್ರಧಾನಂ ನಳಂ ವಿಜಯ ದುಂದುಭಿಯುಂ ಪೊಯ್ಸುವುದುಂ—

ಶಾ ॥ ಲಂಕಾಧೀಶ್ವರ ಕಾಳೆಗಂ ನಿನಗೆ ಲೇಸಲ್ತೆಂತೆನಲ್ ವಾಸುದೇ।
ವಂ ಕೊಲ್ವಂ ಪ್ರತಿವಾಸುದೇವನನಿದೇಂ ಸಂದೇಹಮೋ ಸೀತೆಯಂ॥
ನೀಂ ಕೊಟ್ಟಟ್ಟು ಬರ್ದುಂಕಲಾಟಿಸುವೊಡೆಂಬಂತಷ್ಟದಿಗ್ಭಿತ್ತಿಯುಂ।
ಧೀಂಕಿಟ್ಟತ್ತು ರಘುಪ್ರವೀರ ವಿಜಯ ಪ್ರಸ್ಥಾನ ಭೇರೀರವಂ ॥ ೧೭ ॥

ಮ ॥ ಕುಲ ಶೈಲಂಗಳ ಪದ್ಮಿನೀಕುಲದ ದೇವೀಸಂಕುಲಂ ಬೆರ್ಚೆ ಪೆ।
ಳ್ಪಳಿಸುತ್ತುಂ ದೆಸೆಯಾನೆ ಬೆರ್ಚೆ ಕಿವಿಯಂ ಮಾರ್ತಂಡ ಸಪ್ತಾಶ್ವ ಮಂ॥
ಡಳಿ ಶಂಕಾಕುಳಿತಂ ಪೆಡಂಮುಗುಱೆ ಶಕ್ರಾಲಿಂಗನಂಗೆಯ್ಯೆ ಸಂ।
ಚಲಿಸುತ್ತುಂ ಶಚಿ ಘೂರ್ಣಿಸಿತ್ತು ವಿಜಯಪ್ರಸ್ಥಾನ ಭೇರೀರವಂ ॥ ೧೮ ॥

ಕಂ ॥ ಬಲಭದ್ರನ ನಿರ್ಮಲ ಕೀ
.ರ್ತಿ ಲತಾ ಕಂದಳಮೆನಿಪ್ಪ ಪನ್ನೆರಡುಂ ಮಂ॥

ಗಲ ಶಂಖಂಗಳ ದನಿಗಳ್
ಕುಲಗಿರಿ ಕುಂಜದೊಳೊಡರ್ಚಿದುವು ಮಾರ್ದನಿಯಂ ॥ ೧೯ ॥

ಭೋರೆನೆ ಪೊಯ್ವುದುವಾಱುಂ
ಭೇರಿಗಳುಂ ಕನಕ ಕೋಣ ಹತಿಯಿಂದಂ ಬಂ ॥
ಭಾರವವೇಂ ನೆಗೆದುದೊ ರಘು
ವೀರ ಜಯಶ್ರೀ ಕಲಾಪಿನೀ ಮೇಘ ರವಂ ॥ ೨೦ ॥

ಆ ಶುಭಮುಹೂರ್ತದೊಳ್—

ಕಂ ॥ ಸುರವಲ್ಲರಿಗಳ್ ಮುಗುಳಂ
ಸುರಿತರ್ಪುವು ರಜತ ಶಿಖರಿ ಶಿಖರದೊಳೆನೆ ಖೇ ॥
ಚರಿಯರ್ ಮುತ್ತಿನ ಸೇಸೆಯ
ನರಸಂಗಿಕ್ಕಿದರಪಾಂಗ ಮಾಲಾಸಹಿತಂ ॥ ೨೧ ॥

ದಧಿ ತಿಲಕ ಪುರಸ್ಸರಮುಖಿ
ಳ ಧರಾಧೀಶಂಗೆ ನೀಡಿದಳ್ ಮತ್ತೊರ್ವಳ್ ॥
ವಿಧುವದನೆ ದರ ಸ್ಮಿತಮಂ
ಮಧುಕರ ಝುಂಕಾರ ಮುಖರಮಂ ಬಾಸಿಗಮಂ ॥ ೨೨ ॥

ಆಗಳಖಿಳ ಜಯಜಯಧ್ವನಿವೆರಸು ಕುಲವೃದ್ಧ ಕುಲಾಂಗನಾಜನದಾಶೀರ್ವಾದವೊದವೆ ಸಿಂಹವಿಷ್ಟರದಿನೆಟ್ಟು—

ಕಂ ॥ ಇರದೊಡನೆಟ್ಟು ವಿಯಚ್ಚರ
ಪರಿವೃಢರ ಕಿರೀಟ ರತ್ನರುಚಿಗಳ್ ಗಗನೋ ॥
ದರಮಂ ಚಿತ್ರಿಸೆ ತಳರ್ದಂ
ನಿರಂಕುಶಂ ಲಕ್ಷ್ಮಣಾನ್ವಿತಂ ರಘುರಾಮಂ ॥ ೨೩ ॥

ಮಂಡಳಿಸಿದತ್ತು ನಿಜ ರುಚಿ
ಮಂಡಲಮಾಗಸದೊಳೆಂಬಿನಂ ಬೆಳ್ಗೊಡೆ ಕ ॥
ಣ್ಗೊಂಡು ಪರಿಭವಿಸಿದುದು ಶಶಿ
ಮಂಡಳಮಂ ಬಂದು ಕಂಡ ಬೆಳ್ದಾವರೆಯಂ ॥ ೨೪ ॥

ಪದಿನಾಱುಂ ಚಮರಜಮಂ
ಪದಿನಱುವರ್ ಖಚರ ಕನ್ಯೆಯರ್ ಪೂಗುಡಿವೇ ॥

ಱಿದ ಜಂಗಮ ಲತೆಗಳಿನಲ್
ಬಿದಿರ್ದಿಕ್ಕಿದರೊಡನೆ ಮದನನಂಬಿಕ್ಕುವಿನಂ ॥ ೨೫ ॥

ಚ ॥ ಎಸೆದುದು ಮಂಗಲಾನಕ ಘನಧ್ವನಿ ಮಂಗಲ ಪಾಠಕ ಸ್ವನಂ ।
ಪಸರಿಸಿದತ್ತು ಪೂರ್ಣಕಲಶಂ ಗುಡಿ ವಂದನಮಾಲೆ ಮುಂದೆ ಸಂ ॥
ಧಿಸಿದುವು ಗಾಯನೀ ಮಧುರ ಮಂಗಳ ಗೀತ ರವಂ ಮನಕ್ಕೆ ಸಂ ।
ತಸದೊದವಂ ನಿಮಿರ್ಚಿದುದು ರಾಘವ ದಿಗ್ವಿಜಯ ಪ್ರಯಾಣದೊಳ್ ॥ ೨೬ ॥

ಕಳಶಕುಚಂ ಕದಕ್ಕದಿಸೆ ಕೋಮಲೆಯರ್ ಶಶಿಕಾಂತ ಕಾಂತ ಮಂ ।
ಗಳ ಕಲಶಂಗಳಂ ತಳೆದು ಮಂಗಲ ದರ್ಪಣ ಪಲ್ಲವಾನಕಂ ॥
ಗಳನುಡೆನೂಲ ನೂಪುರದ ಮೆಲ್ಲುಲಿ ಕೈಮಿಗೆ ಪುಣ್ಯ ದೇವತಾ ।
ಕುಳಮೆನೆ ಗಾಡಿವೆತ್ತು ನಡೆದರ್ ಮನುವಂಶ ಜಯಪ್ರಯಾಣದೊಳ್ ॥ ೨೭ ॥

ಕಂ ॥ ದುಗುಲದ ಗುಡಿಗಳ ಬೆಂಬಿಡಿ
ದು ಗಾಳಿ ತಣ್ಪಿಡಿದು ತೀಡೆ ಕೈಸನ್ನೆಗಳಿಂ ॥
ಪಗೆವರ್ ಬೆಂಗುಡಿವೆಂಬಂ
ತೊಗೆದುವು ಮನುವಂಶ ಮಂಡನಂ ನಡೆವೆಡೆಯೊಳ್ ॥ ೨೮ ॥

ಎರಡನೆಯ ಸೂರ್ಯಹಾಸದ
ಪರಿಜಂ ಕೈಕೊಂಡು ಲಕ್ಷ್ಮಣಂ ಬಲಗೆಲದೊಳ್ ॥
ಬರೆ ಬಂದಂ ನಿಜ ಪಾಂಡುರ
ಮರೀಚಿ ಕಣ್ಗೊಳಿಸೆ ರೋಹಿಣೀ ರಮಣನವೋಲ್ ॥ ೨೯ ॥

ಅಂಗದ ಭುಜಶಿಖರದ ರ
ತ್ನಾಂಗದಮಂ ನಖ ಮಯೂಖ ಮಾಲಿಕೆಯಿಂ ಚಿ ॥
ಲ್ವಿಂಗೆ ನೆಲೆಮಾಡಿ ನಡೆದಂ
ಜಂಗಮ ತಾರಾದ್ರಿಯೆಂಬಿನಂ ಬಲಭದ್ರಂ ॥ ೩೦ ॥

ಅಂತು ರಾಜಭವನಮಂ ಪೊಱಮಟ್ಟು ಪುರೋಭಾಗಕ್ಕೆ ವಂದು—

ಕಂ ॥ ಮುನಿಜನದ ಬಂಧು ಜನದಭಿ
ಜನದಬಲಾಜನದ ಪರಕೆಗಳ್ ಕಿವಿಯಂ ತೆ ॥
ಕ್ಕನೆ ತೀವೆ ರಥಮನೇಱಿದ
ನಿನವಂಶಜನೇಱಿ ವಿಜಯ ವಧು ನಿಜ ಭುಜಮಂ ॥ ೩೧ ॥

ಆ ಸಮಯದೊಳ್ ನಳ ನೀಲ ಸುಷೇಣ ಪ್ರಸನ್ನಕೀರ್ತಿ ಪ್ರಮುಖ ಮುಖ್ಯ ನಾಯಕರಂ ಸೇನಾಮುಖಕ್ಕೆ ಪೇೞ್ದು ಸುಗ್ರೀವಾಂಗದ ಜಾಂಬವದ್ಗಗನಪತಿ ಭೂತ ಗತಿ ಪ್ರಭೃತಿಗಳಂ ಪಶ್ಚಿಮ ಪ್ರದೇಶದೊಳ್ ನಿಯಮಿಸಿ ತಟಿದ್ವಕ್ತ್ರ ವಜ್ರದಂಷ್ಟ್ರ ವಿರಾಧಿತ ಮಹೇಂದ್ರರ್ ಮೊದಲಾಗೆ ಪಲಬರುಮಂ ಬಲವಕ್ಕದೊಳ್ ನಿಯೋಜಿಸಿ ಮಂದರ ಸಮೀರ ಸಿಂಹನಾದ ವರಾಹರ್ ಮೊದಲಾದರನೆಡವಕ್ಕದೊಳ್ ನಡೆಯಿ ಮೆಂದು ಪೇೞ್ದು ಸೌಮಿತ್ರಿ ಸಕಲ ವಿದ್ಯಾಧರ ನಾಯಕರ್ವೆರಸು ತಾನುಂ ಹನುಮ ನುಂ ದಾಶರಥಿಯ ರಥೋಭಯಪಾರ್ಶ್ವದೊಳಂ ರಥಾರೂಢರ್ ಮೆಯ್ಗಾಪಾಗೆ ನಡೆವುದುಂ—

ಮ ॥ ನಡೆಗೊಂಡತ್ತು ಮದೇಭ ದಾನಜಲ ಧಾರಾಸಾರದಿಂ ಮಾರುತಂ ।
ನಡೆಗೆಟ್ಟಿರ್ದನಮುತ್ಪತಾಕೆಗಳಿನಾಕಾಶಾಪಗಾ ವೀಚಿ ನೂ ॥
ರ್ಮಡಿಸುತ್ತಿರ್ದನಮುಸ್ತ್ರಶಸ್ತ್ರ ಪಟಲ ಪ್ರದ್ಯೋತದಿಂದಂ ಪಗಲ್ ।
ಕಡುಕೊರ್ವಂ ಪಡೆದಿರ್ದನಂ ರಘುತನೂಜಾಖರ್ವ ಚಾತುರ್ಬಲಂ ॥ ೩೨ ॥

ಕಂ ॥ ಕರಿ ತುರಗ ರಥ ಪದಾತಿಯ
ಪರಿಸಂಖ್ಯೆಯನಱಿಯೆನಲ್ಲಿ ಕೇತನ ಪಟ ಸಂ ॥
ಚರಣಕ್ಕೆ ನಭಂ ಭಟ ಸಂ
ಚರಣಕ್ಕೆ ಧರಿತ್ರಿ ನೆಱೆಯದೆಂಬಿದನಱಿವೆಂ ॥ ೩೩ ॥

ಮ ॥ ನಿಜತೇಜಂ ಪೊಱಗಾಗೆ ಸ್ವೈರಿಪನೆ ರಾಮಸ್ವಾಮಿಯೆಂಬಂತೆ ನೀ ।
ರಜ ಮಿತ್ರ ಪ್ರಭೆಯುಂ ಪಳಂಚಲೆದು ಸೀತಾದೇವಿಯುಂ ಕೊಂಡು ಪೋ ॥
ದ ಜಗತ್ಕಂಟಕ ತೇಜಮಿರ್ದದೆಸೆಯುಂ ಪೂಣ್ಪಂತು ಪತ್ತುಂದಿಶಾ ।
ವ್ರಜಮುಂ ಪೂೞ್ದು ಪೊದಟ್ದು ಕೊರ್ವುವಡೆದತ್ತುತ್ತಾನ ಸೇನಾರಜಂ ॥ ೩೪ ॥

ತೆಱೆಯುತ್ತುಂ ತಲೆಮುಟ್ಟುತಾಳ್ದಿ ಧರೆಯುಂ ಸೇನಾಭರಾಕ್ರಾಂತದಿಂ ।
ಫಣಿರಾಜಂ ನಡುನೆತ್ತಿ ಪೊತ್ತಿ ಕಿಡಿವಿಟ್ಟಂತಿರ್ದುದಾಗಳ್ ಫಣಾ ॥
ಮಣಿಚಕ್ರಂ ವಿಷವಹ್ನಿ ಧೂಮಪಟಲಂ ನಿಶ್ವಾಸ ನಿರ್ಯತ್ಸಮೀ ।
ರಣನಿಂ ಪೂರಿಸಿದಂತಿರಿರ್ದುದು ಫಣಾ ಚಕ್ರಾಂಕಿತಂ ಸ್ವಸ್ತಿಕಂ ॥ ೩೫ ॥

ಅಂತಸಂಖ್ಯಾತ ಸೇನಾ ಸಮುದ್ರಂ ದಕ್ಷಿಣಸಮುದ್ರಾಭಿಮುಖಮಾಗಿ ನಡೆ ದು—

ಕಂ ॥ ವೇಲಾಂಧ ನಗ ನಿತಂಬದ
ವೇಲಾಂಧ ಪುರೋಪಕಂಠಮುಂ ಸಾರ್ದುದು ಭೂ ॥

ಪಾಲ ಸ್ಕಂಧಾವಾರಂ
ವೇಲಾವನ ವೀಧಿಯಿಲ್ಲದಂಭೋನಿಧಿವೋಲ್ ॥ ೩೬ ॥

ಆಗಳಾ ಪುರಾಧಿಪತಿ ಚತುರಂಗ ಸೇನಾಸಮನ್ವಿತಂ ಸಮುದ್ರವೇಸರ ವಿದ್ಯಾಧರಂ ಮುಂದೆ ನಡೆವ ನಳನ ಪಡೆಗೆ ರಣಾನುರಾಗದಿನಡ್ಡಂಬಂದು ನಿಲ್ವುದುಂ—

ಚ ॥ ಭ್ರುಕುಟಿ ಲಲಾಟದೊಳ್ ತನಗೆ ತೋಱದ ಮುನ್ನಮಿದಿರ್ಚಿದನ್ಯ ಸೈ ।
ನಿಕಮನದಿರ್ಪೆ ತನ್ನ ಪಡೆ ತನ್ನ ಪರಾಕ್ರಮ ಗರ್ವದುರ್ವು ಕೌ ॥
ತುಕಮೆನೆ ಕಟ್ಟಿದಂ ಖಚರ ನಾಯಕನಪ್ಪ ಸಮುದ್ರನಂ ಭಯಾ ।
ನಕ ರಸ ಮುದ್ರನಂ ನಳನರಾತಿ ಬಲಾರ್ಣವ ಬಾಡವಾನಳಂ ॥ ೩೭ ॥

ಮ ॥ ಅತಿ ಗಂಭೀರನನರ್ಘ್ಯ ರತ್ನ ಕಟಕಾಧಾರಂ ಮಹಾವಾಹಿನೀ ।
ಪತಿ ಲಕ್ಷ್ಮೀನಿಲಯಂ ನಿಸರ್ಗವಿಭು ಮರ್ಯಾದಾಪರಂ ಲೋಕ ವಿ ॥
ಶ್ರುತ ಸೀಮಾಂತನವಂ ನಿಮಿರ್ಚಿದ ಸಮುದ್ರಂ ಯುದ್ಧದೊಳ್ ಬಂಧನ ।
ಸ್ಥಿತನಾದಂ ತಲೆವಿಲ್ಲೊಳೆಂದೊಡೆ ನಳಂ ಗಂಡಂ ಪೆಱರ್ ಗಂಡರೇ ॥ ೩೮ ॥

ಅಂತಾತನಂ ತಂದು ತನಗೊಪ್ಪಿಸುವುದುಂ ಸಮುದ್ರಂಗಭಯಮಂ ಕೊಟ್ಟು ಮನ್ನಿಸೆ ಮಱು ದೆವಸವಾತಂ ತನ್ನ ಸುತೆಯರಂ ಸತ್ಯಶ್ರೀ ಕಮಲೆ ಗುಣಮಾಲೆ ರತ್ನಮಾಲೆಯೆಂಬ ನಾಲ್ವರಂ ಲಕ್ಷ್ಮಣಂಗೆ ಕೊಟ್ಟು ವೈವಾಹಿಕ ಸಂಬಂಧದಿಂ ಭೃತ್ಯಪದಮನಪ್ಪುಕೆಯ್ದು ಪೂರ್ವಪದಮಂ ಪಡೆದು ಮಱು ದೆವಸಮಲ್ಲಿಂದೆ ಮೇಲೆತ್ತಿ ನಡೆವಾಗಳ್—

ಕಂ ॥ ಅಡಿಗೆಱಗಿ ಸುವೇಳಾಚಲ
ದೊಡೆಯಂ ಖಚರಂ ಸುವೇಲನೆಂಬಂ ತನ್ನ ॥
ಕ್ಕೊಡಮೆಯನಿತ್ತು ಜಾವಿಟ್ಟಗೆ
ನಡೆದಂ ರಘುಜನ ಮಾರ್ಬಲಕ್ಕೆ ಮಾರ್ಬಲಮುಂಟೇ ॥ ೩೯ ॥

ಅಂತಂದಿನ ದಿವಸಂ ಸುವೇಲಾಚಲದೊಳಿರ್ದು ಮಱು ದೆವಸಂ ಲಂಕಾದ್ವೀಪದ ಸಮೀಪಮಪ್ಪ ಹಂಸದ್ವೀಪಮನೆಯ್ದಿವರ್ಪುದುಮಾ ದ್ವೀಪಾಧಿಪತಿ ನಭಶ್ಚರನಸಂಖ್ಯಾತ ಬಲ ಸಮೇತನಾಗಿ ತಾಗುವುದುಂ—

ಕಂ ॥ ಅನುವರದೊಳ್ ಹಂಸದ್ವೀ
ಪ ನಾಥನಂ [1]ದ್ವೀಪಿ ರಥನನಂಜಿಸಿ ದಂಡೋ ॥

1. ಗೆಲ್ದ ರಾಘವಂಗಂ. ಚ.

ಪನತಂಮಾಡಿದ ಯಮ ದಂ
ಡ ನಿಭಮುದಾರಳವೊ ನಳನ ಬಾಹಾದಂಡಂ ॥ ೪೦ ॥

ಅಂತಾ ದ್ವೀಪದೊಳ್ ಬೀಡಂಬಿಟ್ಟು ಲಕ್ಷ್ಮೀಧರಂ ಪ್ರಭಾಮಂಡಲಂಗೆ ಬಟ್ಟಯನಟ್ಟಿ ಪೆಱವುಂದ್ವೀಪಾಂತರದ ವಿದ್ಯಾಧರಾಧಿರಾಜರನಾಜ್ಞಾವಿಧೇಯರಂ ಮಾಡುತ್ತುಮಿರ್ಪಿನಮಿತ್ತಲ್—

ಚ ॥ ಅರುಣಮಣಿ ಪ್ರಭಾ ಪಟಲದಿಂದರುಣಾತಪಮಂ ತಗುಳ್ದು ಬಿ।
ತ್ತರಿಸುವ ಸಿಂಹಪೀಠದೊಳದೇನೆಸೆದಿರ್ದನೊ ರಾಹುಮಂಡಲಂ॥
ತರುಣ ದಿನೇಶ ಮಂಡಲಮನಾದರಿಸಿರ್ದಪೊಲಿಂದ್ರನೀಲ ಭಾ।
ಸುರತರ ದೇಹದೀಪ್ತಿ ಪುದಿಯಲ್ಕೆ ದಿಶಾನನಮಂ ದಶಾನನಂ ॥ ೪೧ ॥

ಕಂ ॥ ಉರದಿಂದಗಲದ ಲಕ್ಷ್ಮಿಯ
ತರಲೇಕ್ಷಣ ಮಾಲೆ ಹಾರಲತೆ ದನುಜನ ಪೇ ॥
ರುರದೊಳ್ ಸೊಗಯಿಸಿದುದು ಕಾ
ರಿರುಳೊಳ್ ತಲೆದೋರ್ಪ ತರಳ ತಾರಾವಳಿವೋಲ್ ॥ ೪೨ ॥

ಅಂಗದ ಮಣಿಭೂಷಣ ಕಿರ
ಣಂಗಳ್ ಜಗದೊಳಗಣರಸುಗಳ ಜಯ ವಧುವಂ ॥
ಪಿಂಗದೆ ಸಿಲೆಕಟ್ಟುವ ಪಾ
ಶಂಗಳವೆನೆ ಭುಜದೊಳೇಂ ಮನಂಗೊಳಿಸಿದುವೋ ॥ ೪೩ ॥

ಅವತಂಸ ಪಾರಿಜಾತಾ
ಸವಮಂ ಸವಿದಾಡಿ ಪಾಡುವಳಿಗಳ ನಿನದಂ ॥
ಸವಿವಡೆಯೆ ಸೈರಿಸಂ ಚಮ
ರವಿಕ್ಷ್ಯವಬಲೆಯರ ಪಿಂಡುಗಂಕಣದುಲಿಯಂ ॥ ೪೪ ॥

ತನುಜರುಮನುಜರುಮುಚಿತಾ
ಸನದೊಳ್ ಮಂತ್ರಿಗಳುಮಿರೆ ವಿಲಾಸದಿನಿರ್ದಂ ॥
ದನುಜಾಧೀಶಂ ಪ್ರತ್ಯಂ
ತ ನಗಂ ಬಳಸಿರ್ದ ನೀಲ ಕುತ್ಕೀಲದವೋಲ್ ॥ ೪೫ ॥

ಜನಕಸುತೆ ಮನದೊಳಿರೆ ಪರಿ
ಜನಮಿರೆ ನಿಯತ ಪ್ರದೇಶದೊಳ್ ವಿರಹೋದ್ದೀ ॥

ಪನವುಂ ಮಱೆಯಿಸಿ ದನುಜೇಂ
ದ್ರನಿಂದ್ರನಿರ್ಪಂತಿರೋಲಗಂಗೊಟ್ಟಿರ್ದಂ ॥ ೪೬ ॥

ಅಂತಿರ್ಪುದುಂ—

ಕಂ ॥ ಚರನೊರ್ವಂ ಬಂದು ವಸುಂ
ಧರೆಯೊಳ್ ಮೆಯ್ಯಿಕ್ಕಿ ಜಯಜಯ ಧ್ವನಿ ಪೊಣ್ಮ॥
ತ್ತಿರೆ ನಿಂದು ನಿಟಲ ತಟಗತ
ಕರ ಕುಟ್ಮಲನಾಗಳಸುರ ಪತಿಗಿಂತೆಂದಂ ॥ ೪೭ ॥

ಚ ॥ ಭುವನದೊಳಿನ್ನೆಗಂ ಮಱೆದು ಕಂಡಱೆಯೆಂ ದನುಜೇಂದ್ರ ದೇವ ದಾ।
ನವ ಖಚರಾಧಿನಾಯಕರೊಳಾಹವದೊಳ್ ನಿನಗುರ್ಕಿ ಸೊರ್ಕಿ ವಿಾ॥
ಱುವ ತಲೆದೋಱುವುದ್ಧತರನೀಗಳಿದಚ್ಚರಿ ಕಂಡೆನಾಂ ಮಹೋ।
ತ್ಸವದೊಳೆ ಬಂದಪರ್ ಮನುಜರಾಹವ ಕೇಳಿಗೆ ರಾಮಲಕ್ಷ್ಮಣರ್ ॥ ೪೮ ॥

ಮ ॥ ಬಲ ನಾರಾಯಣರಂ ನೆರಂಬಡೆದು ನಿಮ್ಮೊಳ್ ಕಾದುವುದ್ಯೋಗದಿಂ।
ಪಲವುಂದ್ವೀಪದ ಖೇಚರರ್ ನೆರೆದು ಹಂಸದ್ವೀಪದೊಳ್ ಬಿಟ್ಟು ಮುಂ॥
ಕಲಹಕ್ಕಲ್ಲದ ನಮ್ಮನೊಲ್ಲದವರೆಲ್ಲಂ ತಮ್ಮೊಳೊಂದಾದರಾ।
ಕಲಿಗಳ್ ದಾನವ ಚಕ್ರವರ್ತಿ ನಿಜ ದೋರ್ದಂಡಂಬರಂ ಗಂಡರೇ ॥ ೪೯ ॥

ಎಂದು ಬಿನ್ನವಿಸಿದ ಚರನ ವಚನಮನವಧರಿಸಿ ಬೀರಸಿರಿಯ ಬೆಳ್ಸಸದನದ ಬೆಳಗಿನಂತೆ ದಂತಕಾಂತಿ ಪಸರಿಸೆ ಮಂದಸ್ಮಿತ ಮುಖಂ ವಿದ್ಯಾಧರವೀರ ಪ್ರಮುಖನಪ್ಪ ದಶಮುಖನಿಂತೆಂದಂ—

ಶಾ ॥ ತಂದೆಂ ಸೀತೆಯನಾಂ ಪರಾಭವಮನೆನ್ನೊಳ್ ಕಾದಿ ನೀಗಲ್ ಮನಂ।
ದಂದೇಕಾಕಿಗಳೆತ್ತಿ ಬರ್ಪರವರೊಳ್ ಸಂಧಾನಮಂ ಮಾಡಿ ಮು॥
ನ್ನೆಂದುಂ ಕಪ್ಪಮನಿತ್ತು ಬಾಳ್ವ ಖಚರರ್ ಕೈವಾರದಿಂ ಕಾದಿಸಲ್।
ಬಂದಪ್ಪರ್ ಪರ ಹಸ್ತದಿಂ ಮೊಟನಿಡಲ್ ಬರ್ಪಂತೆ ಕಾಳಾಹಿಯಂ ॥ ೫೦ ॥

ಕಂ ॥ ಮೃಗರಾಜಂ ಗರ್ಜಿಪುದುಂ
ನಗದೊಳ್ ಮಾರ್ದನಿಗಳುಣ್ಮವಂತೊಡನೊಡನಿಂ॥
ದಗಿ ಮೇಘವಾಹನಾದಿಗ
ಳಗುರ್ವು ಪರ್ವುವಿನಮಸುರನೆಂದುದನೆಂದರ್ ॥ ೫೧ ॥

ಅಂತವರ್ ನರ್ಮ ಸಚಿವರಂತಿಚ್ಛೆಯಂ ಪ್ರತಿಪಾಲಿಸಿ ನುಡಿವುದುಮದಂ ಕೇಳ್ದು ನಯ ವಿದ್ಯಾ ವಿನಯ ವಿಭೂಷಣನಪ್ಪ ವಿಭೀಷಣಂ ಬಿನ್ನಪಮನವಧಾರಿಸು ವುದೆಂದಿಂತೆಂದಂ—

ಕಂ ॥ ಇಚ್ಛಾ ಪ್ರತಿಪಾಲನಮಂ
ತುಚ್ಛಂ ನುಡಿಗುಂ ವಿವೇಕಿ ಪೊಲ್ಲಮೆಗಂಡೇ ॥
ನಾಚ್ಛಾದಿಸುಗುಮೆ ಕಾರ್ಯ್ಯ ಪ
ರಿಚ್ಛೇದಮನುಭಯ ಲೋಕ ಹಿತಮಂ ನುಡಿಗುಂ ॥ ೫೨ ॥

ಮತ್ತಕೋಕಿಲ ॥ ಅಶುಚಿ ಲೋಭಿ ಶುಚಿ ಲೋಭವಿಲ್ಲದಂ।
ವಿಶದ ಶೌಚ ಗುಣವೊಂದೆ ಕಾರಣಂ ॥
ಕುಶಲ ವೃತ್ತಿಗೆನೆ ಭೂಭುಜಂ ಗುಣಾ।
ತಿಶಯ ಸೂರಿ ಶುಚಿಯಾಗದಿರ್ಪನೇ ॥ ೫೩ ॥

ಕಂ ॥ ಬಗೆ ದೆಸೆಬಿದ್ದಂ ಪರಿವುದು
ಬಗೆಯಂ ಬಗೆದಂತೆ ಪರಿಯಲೀಯದೆ ಪಿರಿಯಂ ॥
ತೆಗೆವುದು ಪಱಿಪೊರ್ದದ ಬ
ಟ್ಟೆಗೆ ನಿಜದಿಂದಾರ ಬಗೆಗಳುಂ ನೇರಿದುವೇ ॥ ೫೪ ॥

ಅವಿರುದ್ಧಮಿದೆಂಬಿನಮನು
ಭವಿಸುವುದಿಂದ್ರಿಯ ಸುಖಂಗಳಂ ಮಱೆದುಂ ವಿಾ ॥
ಱಿವು ತನ್ನನವೆಂಬನ್ನೆಗ
ಮವನೀಶ್ವರನಪ್ಪುಕೆಯ್ವುದಿಂದ್ರಿಯ ಜಯಮಂ ॥ ೫೫ ॥

ಜಡಧಾರೆ ಸೋಂಕೆ ಸಿರಿಗ
ನ್ನಡಿಗೆ ಕಲುಂಬೇಱುವಂತೆ ಸಿರಿಯೊಡೆಯಂಗೇಂ ॥
ಪಡೆಮಾತೊ ಪರ ಕಲತ್ರದ
ತೊಡರ್ಪಿನಿಂ[1] ಕರ್ಪುಗೊಳ್ಳದಿರ್ಪುದೆ ತೇಜಂ ॥ ೫೬ ॥

ಸಮನಿಸೆ ದುಶ್ಚರಿತಂ ಬಿಡ
ದ ಮಹೀಪಾಲಂ ಕಳಂಕಮಂ ಕಳೆಯದ ಚಂ ॥
ದ್ರಮನುಂ ಬಡವಾಗ್ನಿಯನುಪ
ಶಮಿಸದ ಲವಣಾಂಬುರಾಶಿಯುಂ ಜಡರಕ್ಕುಂ ॥ ೫೭ ॥

---

1. ಸೊಳ್ ತಪ್ಪು. ಕ. ಗ; ನಿಂತುರ್ಪು. ಚ.

ಕಂ ॥ ಕುಲ ಕಾಂತಾ ಸಂತೋಷಂ
ಕುಲವರ್ಧನ ಹೇತು ಪರವಧೂ ಸಂತೋಷಂ ॥
ಕುಲನಾಶ ಹೇತುವೆಂಬಿದು
ಹಲಧರ ಗೋಪಾಲ ಬಾಲಕ ಪ್ರಖ್ಯಾತಂ ॥ ೫೮ ॥

ಮ ॥ ವಧಮುಂ ಬಂಧನಮುಂ ಪರಾಭವಮುಮಂಗಚ್ಛೇದಮುಂ ಪೊರ್ದುಗುಂ ।
ವಿಧು ವಿಖ್ಯಾತಿ ಕಲುಂಬುಗೊಳ್ಗುಮಪವಾದಾತೋದ್ಯ ನಾದಂ ದಿಶಾ ॥
ವಧಿಯಂ ದಾಂಟುಗುಮನ್ಯ ಜನ್ಮದೊಳಮಕ್ಕುಂ ದುರ್ಗತಿ ಕ್ಲೇಶಮೆಂ ।
ದಧಿರಾಜರ್ ಕೆಲರಾಲಿಸರ್ ಮಱಿದುಮನ್ಯ ಪ್ರೇಯಸೀವಾರ್ತೆಯಂ ॥ ೫೯ ।

ಯಮಪಾಶಂ ಪಗೆವಂಗೆ ಕಲ್ಪಲತೆ ಕೈಯಾಂತಂಗೆನಲ್ ಚಂಡ ವಿ ।
ಕ್ರಮಮುಂ ಚಾಗದ ಪೆರ್ಮೆಯುಂ ಮೆಱೆಯದನ್ಯಸ್ತ್ರೀ ಕಚಾಕರ್ಷಣ ॥
ಶ್ರಮ ಸಂಭೋಗ ವಿಳಾಸಮಂ ಮೆಱೆವ ಬಾಹಾಸಂಗದಿಂ ಪಿಂಗದಿ ।
ರ್ಕುಮೆ ವೀರಾಂಗನೆ ಕಡ್ಡೆ ತೋಳ್ವಿಸುಗೆಯೊಳ್ [1]ಮೆಯ್ಪಟ್ಟು ನಿಲ್ವನ್ನಳೇ ॥೬೦॥

ಕಂ ॥ ಪೂವಿನೊಳಂ ಪೋರ್ಕುಳಿ ನಮ
ಗೇವುದೊ ಯುದ್ಧಂ ಪ್ರಧಾನ ಪುರುಷ ಕ್ಷಯಮೆಂ ॥
ಬೀ ವಚನಮಂ ವಿಚಾರಿಪು
ದೀವುದು ಜಾನಕಿಯನುೞಿವುದಸದಾಗ್ರಹಮಂ ॥ ೬೧ ॥

ಪರಿಜನಮುಮಾಪ್ತ ಜನಮುಂ
ಪುರಮುಂ ಬಾಂಧವರುಮಗಲದೊಂದೆಡೆಯೊಳ್ ಸ್ಥೈ ॥
ತಿರಲಕ್ಕುಂ ಜಾನಕಿಯಂ
ಪರಿಹರಿಸಿದೊಡಲ್ಲದಂ[2]ದಿರಲ್ ಬಂದಪುದೇ ॥ ೬೨ ॥

ಎಂದು ನುಡಿಯಲೊಡಮಿಂದಗಿ ವಿಷ ತರು ಪ್ರಸವದಂತೆ ದಂತಕಾಂತಿ ಪಸರಿಸೆ ವಿಭೀಷಣ ಸುಭಾಷಿತ ದೂಷಣಪರನಿಂತೆಂದಂ—

ಮ ॥ ವನಿತಾರತ್ನಮಯತ್ನಸಾಧ್ಯಮೆನೆ ಕೈಸಾರ್ದತ್ತು ಸೈಪಿಂದದಂ ।
ಮನುಜಂಗೀವುದು ಮಂತ್ರಮಾಯದೊಡಪಾಯಂ ಸಾರ್ಗುಮೆಂಬೀನಯಂ ॥
ಮನದೊಳ್ ಮಚ್ಚರಿಪಂಗೆ ತೋರ್ಕುಮುೞಿದಂಗೇಂ ತೋರ್ಕುಮೋ ಯುದ್ಧ ಸಾ ।
ಧ್ಯನೆ ವಿದ್ಯಾಧರ ಸಿದ್ಧ ಕಿನ್ನರ ಚಮೂ ವಿದ್ರಾವಣಂ ರಾವಣಂ ॥ ೬೩ ॥

1. ನೇರ್ಪಟ್ಟು. ಗ. ಘ. 2. ತಿರಲ್. ಚ.

ಮ॥ಸ್ರ॥ಬಗೆಯಂ ಶಂಕಾ ತಮಂ ತಳ್ತಿರೆ ತಱಿಸಲವಂ ಕಾಣ್ಬುದೇಂ ಮೊಗ್ಗೆ ನೀಗರ್ಗಾ ।
ದಿಗೆ ಮುನ್ನೀರ್ ಕೋಂಟೆ ವಿದ್ಯಾತ್ಮಕವಸುರಬಲಂ ಕಾಪಿನಾಳ್ ತೋಳಬಲ್ಪಿಂ॥
ನೆಗೞ್ದಾ ತಾರಾದ್ರಿಯಂ ಚಾಲಿಸಿದ ದಶಮುಖಂ ಮುಖ್ಯನೆಂದಂದು ಲಂಕಾ ।
ನಗರಕ್ಕಾತಂಕಮಕ್ಕುಂ ಮನುಜ ಬಲದಿನೀ ಕಜ್ಜಮಂ ನೀನೆ ಕಾಣ್ಬೈ ॥೬೪॥

ಪರಚಕ್ರಂ ಚಕ್ರಮಂ ಮೀಱುವುದೆ ರಿಪುಬಲಂ ಚಂದ್ರಹಾಸಾಸಿಯುಂ ಭೀ ।
ಕರಮಂ ಮಾಱಾಂಪುದೇ ಮಾರ್ಪಡೆಗೆ ಪಡೆಯಲಾತಂಕಮಂ ನಮ್ಮ ವಿದ್ಯಾ॥
ಧರ ಸೈನ್ಯಂ ಸಾಲದೇ ಕೆಮ್ಮನೆ ಭಯರಸಮಂ ತಾಳ್ದುವೈ ಲಕ್ಷ್ಮಣಂ ಸಂ।
ಗರದೊಳ್ ಪೌಲಸ್ತ್ಯನಂ ಗೆಲ್ದಪನೆ ರಣರಸೋತ್ಕಂಠನಂ ದುಗ್ಧ ಕಂಠಂ ॥೬೫॥

ಎಂಬುದುಂ ವಿಭೀಷಣಂ ಮುಳಿಸಂ ಮೊಗಕ್ಕೆ ತಂದಿಂತೆಂದಂ—

ಕಂ ॥ ಅಯಶಕ್ಕಂಜದೆ ನೀಂ ತಂ
ದೆಯ ರಾಜ್ಯಕ್ಕಱಿಪಿ ಕಲಹಮಂ ಬಲ್ಲಿದರೊಳ್ ॥
ಬಯಸುವೆ ಗಾವಿಲ ರಣಭೂ
ಮಿಯೊಳಾರುಮನುಱಿಯಲೀಗುಮೇ ರಾಮಶರಂ ॥ ೬೬ ॥

ತಂದನೆ ಸೀತೆಯನಱಿವಂ
ತಂದಂ ಲಂಕಾಪುರಕ್ಕೆ ತನಗಂ ನಮಗಂ ॥
ತಂದಂ ತವಿಲಂ ನಮ್ಮರ
ಸಂ ದೆಸೆಯುಂ ಪುದಿಯೆ ದುರ್ಯಶಃಪಟಹ ರವಂ ॥ ೬೭ ॥

ವಟ್ಟಂದೆತ್ತುದು ಬೆಳ್ಳಿಯ
ಬೆಟ್ಟಂ ಬಿಣ್ಪಿಂಗೆನಿಪ್ಪ ಕೋಟಿಕ ಶಿಲೆಯಂ ॥
ಬಟ್ಟಾಡಿದ ಬಾಹಾಬಲ
ವಿಟ್ಟಳವೆಂಟನೆಯ ಕೇಶವಂಗಿದಿರುಂಟೇ ॥ ೬೮ ॥

ಮ ॥ ಕರವಾಳ್ ಸಾಧನಮಾಯ್ತು ಸಾಧಿಸದೆ ಸೈಪಿಂ ಸೂರ್ಯಹಾಸಂ ಧನು ।
ಶ್ಶರ ಜಾಲಂ ನೆರಮಾಗೆ ಸಂಹರಿಸಿದಂ ಸೇನಾನ್ವಿತಂ ಯುದ್ಧದೊಳ್ ॥
ಖರನಂ ದೂಷಣನಂ ಪ್ರಸಿದ್ಧರಖಿಳ ದ್ವೀಪಾಧಿಪರ್ ಖೇಚರರ್ ।
ನೆರೆದಾಳೋಳಿಗೆ ವಂದರಾರ್ಗಮಧಿಕಂ ಸೌಮಿತ್ರಿ ಸಾಮರ್ಥ್ಯದೊಳ್ ॥ ೬೯ ॥

ಉ ॥ ಸಂಧಿಯನುಂಟುಮಾಡುವುದು ಸೀತೆಯನೀವುದು ರಾಮಲಕ್ಷ್ಮಣರ್ ।
ಬಾಂಧವರಪ್ಪುದಂ ಬಗೆವುದೇಳಿಸುವಂತವರ್ಗ್ಗಾರುಮೇಂ ಸಮ ॥
ಸ್ಕಂಧರೆ ಯುದ್ಧದೊಳ್ ರಣಮನರ್ಥಕಮೆಂತೆನೆ ಕಾದಿದಂದು ನಿ ।
ಲ್ಕುಂ ಧರೆ ನಿಲ್ವಿನಂ ಪಱಿ ಜಯಾಪಜಯಂಗಳೊಳಂ ದಶಾನನಾ ॥ ೭೦ ॥

ಶಾ ॥ ಮುಂ ಕೊಟ್ಟಟ್ಟುವುದುತ್ತಮಂ ರಿಪುಬಲಂ ವಾರಾಶಿಯಂ ದಾಂಟಿದ।
ನ್ನಂ ಕಲ್ಪಾಂತ ಕೃತಾಂತದೂತ ಸದೃಶಂಗಳ್ ರಾಮ ರೌದ್ರೇಷುಗಳ್ ॥
ಲಂಕಾದ್ವಾರ ಕವಾಟಮಂ ಮುಱಿಯದನ್ನಂ ಲಕ್ಷ್ಮಣ ಜ್ಯಾಲತಾ।
ಟಂಕಾರಂ ಕಿವಿಗೆಯ್ದುದನ್ನಮಖಿಲ ಪ್ರಖ್ಯಾತೆಯಂ ಸೀತೆಯಂ ॥ ೭೧ ॥

ಎಂಬುದುಮಾ ನುಡಿಗೆ ಕಾರ್ಮುಗಿಲ ಮೊಬಗಿಂಗೆ ಮುಸಗುವ ಪಂಚಾನನ ದಂತಿ ದಶಾನನಂ ದೆಸೆದೆಸೆಗೆ ಮುಸಗಿ—

ಕಂ ॥ ಒಱೆಯಿಂದಮುರ್ಚೆ ಮಿಂಚಂ
ಕಱೆಯುತ್ತುಮಗುರ್ವ್ವ ಪರ್ವೆ ಪಿಲಯಾಂಬುದದಿಂ ॥
ಸ್ಫೊರಮುಟ್ಟೆ ಸಿಡಿಲ ಮುಸಕಮ
ನುಱೆ ಸೆಱೆವಿಡಿದತ್ತು ಚಂದ್ರಹಾಸ ಕೃಪಾಣಂ ॥ ೭೨ ॥

ಆಗಳ್ ವಿಭೀಷಣಂ ವಜ್ರಮಯ ಘನ ಗದಾದಂಡಮಂ ಕೊಂಡದಿರದಿದಿರೊಳಿರ್ಪುದುಂ ಕುಲವೃದ್ಧರೆಡೆವೊಕ್ಕು ನುಡಿವುದುಂ ಕೋಪಮನುಪಸಂಹರಿಸಿ ಮಂದಸ್ಮಿತ ಮುಖಂ ದಶಮುಖನಿಂತೆಂದಂ—

ಮ॥ಸ್ರ॥ ಎನಗಂ ಬಲ್ಲಾಳ್ ಗಡಂ ಮಾನವನನಭಿಮತಮಂ ಕೇಳಲಾದತ್ತವಂಗಾ।
ಳ್ತನಮಂ ಪೂಣ್ದೆನ್ನೊಳಂ ದಾಯಿಗತನಮನಿವಂ ತೋರ್ಕೆ ದೋರ್ದಂಡ ಕಂಡೂ ॥
ಯನಮಂ ಚಂಡಾಸಿ ಸಂಘಟ್ಟದಿನೊಗೆವುರಿಯಿಂ ಮುಟ್ಟಿಪೆಂ ಮೂಱು ಕಣ್ಣಾ।
ತನುಮೆನ್ನಂ ಮಿಾಱಿ ಮಾಱಾಂತೊಡೆ ಪಡೆಯದೆ ಸಂತ್ರಾಸಮಂ ಚಂದ್ರಹಾಸಂ ॥ ೭೩ ॥

ಮ ॥ ಚಪಲಂ ಮೇಳದ ಪಂದೆ ಬೆರ್ಚದಿದಿರೊಳ್ ಮಾತಾಡೆ ಕೋಪಂ ಪೊದ।
ಲ್ದಪವಾದಂ ಪರಿವಂತು ಗೋತ್ರ ವಧಮುಕ್ಕುಂ ಲಂಕೆಯಿಂದೀತನಂ ॥
ವಿಪರೀತಾತ್ಮನನೀಗಳಿಂತೆ ಕಳೆಯಿಂ ಶಂಕಾಕುಲಂ ಬಾಱಿತ್ತಿಯಾ।
ದಪನೇ ಸಂಗರಕೇಳಿಗಿರ್ದೊಡುಪದೇಶಂಗೆಯ್ದಪಂ ಭೀತಿಯಂ ॥ ೭೪ ॥

ಎನಲೊಡಮುಶನಿವೇಗ ಚಪಲಾವೇಗ ಸಂಹಾರಕ ವಿದ್ಯುತ್ಪ್ರಮುಖ ಸಾಮಂತ ಸಹಿತಂ ಮೂವತ್ತಕ್ಷೌಹಿಣೀಬಲಂಬೆರಸು—

ಚ ॥ ಉರಿಕೊಳಲಿರ್ದ ಸಾನು ವನದಿಂ ಮದ ಸಿಂಧುರ ಯೂಥ ನಾಥನೋ।
ಸರಿಸುವ ಮಾಟಿಯಿಂ ದಶರಥಾತ್ಮಜರಿಂ ಕಿಡಲಿರ್ದ ಲಂಕೆಯಿಂ ॥

ದಿರದೆ ವಿಭೀಷಣಂ ತೊಲಗಿದಂ ಖಚರಾನ್ವಯ ರಾಜ್ಯಲಕ್ಷ್ಮಿಯುಂ ।
ಧರಿಯಿಸಲಿರ್ದ ಪುಣ್ಯನಿಧಿಯಂ ಸುಕೃತಂ ತೊಲಗಿಕ್ಕದಿರ್ಕುಮೇ ॥ ೭೫ ॥

ಮ ॥ ದನುಜೇಂದ್ರಂಗೆ ಮೃಗೇಂದ್ರ ಪೀಠಮೆ ಮಿಗಿಲ್ ಸಾಮರ್ಥ್ಯದಿಂ ಲಕ್ಷ್ಮಿಯಿಂ ।
ತನಗಾರುಂ [1]ಮಿಗಿಲಿಲ್ಲದಂ ಬಗೆದನೇ ಸದ್ವೃತ್ತಮುಂ ಬಿಟ್ಟೊಡ ॥
ಣ್ಣನುಮಂ ಬಿಟ್ಟು ವಿಭೀಷಣಂ ತೊಲಗಿ[2]ದಂ ಪೋತಕ್ಕುದುದ್ವೃತ್ತನ ।
ಪ್ಪನ ಸಂಸರ್ಗದಿನಪ್ಪ ಸಂಪದಮುಮಂ ಸದ್ವೃತ್ತರೇಗೆಯ್ವರೋ ॥ ೭೬ ॥

ಅಂತು ವಿಭೀಷಣಂ ಲಂಕಾದ್ವೀಪಮಂ ಪೊಱಮಟ್ಟು ಹಂಸದ್ವೀಪ ಸಮೀಪಕ್ಕೆ ವಂದು ನಿಜ ಮಹತ್ತರನಂ ಮುಂದಟ್ಟುವುದುಮಾತಂ ಪೋಗಿ ಪ್ರತೀಹಾರ ಪುರಸ್ಸರಂ ರಾಜಭವನಮಂ ಪೊಕ್ಕು ದೂರಾವನತ ಮಸ್ತಕಂ ಸರ್ವಾಂಗ ಪ್ರಣತನಾಗಿ ನಿಟಿಲ ತಟ ಘಟಿತ ಕರ ಕಿಸಲಯದಮೇಲೆ ದಂತಕಾಂತಿ ಪಸರಿಸೆ ದೇವ ಬಿನ್ನಪಮನವಧಾರಿಸುವುದೆಂದಿಂತೆಂದಂ—

ಚ ॥ ಮದ ಮದಿರಾ ಪ್ರಮತ್ತ ಹೃದಯಂ ಹಿತಮಂ ತನಗೊಲ್ದು ಪೇೞ್ಕೆ ।
ಳದೆ ವಿಪರೀತಮಂ ಬಗೆದು ಬಗ್ಗಿಸೆ ರಾವಣನೀ ದುರಾತ್ಮನೊಳ್ ॥
ಪುದುವೆನಗೇವುದೆಂದು ಬರುತಿರ್ದಪನಲ್ತೆ ಶರಣ್ಬಗಲ್ ಭವ ।
ತ್ಪದ ನಖ ವಜ್ರ ಪಂಜರಮನಾಜಿ ವಿಭೀಷಣನಾ ವಿಭೀಷಣಂ ॥ ೭೭ ॥

ಎಂದು ಮತ್ತಂ ದಶಮುಖನ ಮುಖರತೆಯುಮನುದ್ವೃತ್ತತೆಯುಮಂ ನೆಱೆಯೆ ಬಿನ್ನವಿಸಿ ಮಾಣ್ಬುದುಮತಿಕ್ರಾಂತ ಪ್ರಮುಖ ಮಂತ್ರಿಮುಖ್ಯರೆಂದರಿವರೊಡವುಟ್ಟಿದರಾಗಿಯುಮತಿಸ್ನೇಹಿತರಪ್ಪರ್ ಪುಸಿ ಜಗಳಮಂ ಪೊಣರ್ಚಿ ನಮಗುಪಾಯದಿನಪಾಯಮಂ ಬಗೆದು ಬಂದಪ್ಪರಿದಂ ದೇವರವಧಾರಿಸುವುದೆನೆ—

ಚ ॥ ದನುಜರಪಾಯಮಂ ಬಗೆವರೆಂತೆನಗಾ ದಶಕಂಠನುಂ ರಣ ।
ಕ್ಕೆನಗಿದಿರಾಗಲಳ್ಕಿ ಜನಕಾತ್ಮಜೆಯಂ ಕಪಟ ಪ್ರಪಂಚಮಂ ॥
ಜನಿಯಿಸಿಕೊಂಡು ಪೋದನೆನೆ ಕೆಮ್ಮನೆ ಬೆರ್ಚುವುದೇ ಶರಣ್ಗೆವಂ ।
ದನೊಳಭಯ ಪ್ರದಾನಮನೊಡರ್ಚುವುದೇವುದಿದರ್ಕೆ ಮಂತಣಂ ॥ ೭೮ ॥

ಕಂ ॥ ಎರೆದರ್ಗೀಯದೆ ಮಾಱಾಂ
ತರನಿಕ್ಕದೆ ಮಱೆಗೆ ವಂದರಂ ಕಾಯದೆ ಬಾ ॥
ಳ್ವಿರಮಗನ ಬಾಹುದಂಡಂ
ನಿರರ್ಥಕಂ ವ್ಯರ್ಥಮವನ ಪಾರ್ಥಿವ ಜನ್ಮಂ ॥ ೭೯ ॥

1. ದೊರೆಯಿ. ಕ. 2. ಪೋದಂ ತಕ್ಕನು. ಫ.

ಎಂಬುದುಮಂಜನಾಸುತಂ ಜನಪ್ರವಾದದೊಳವಿವರ ವಿಪ್ರತಿಪತ್ತಿಯಂ ಕೇಳ
ವದಲ್ಲದೆಯುಂ ವಿಭೀಷಣಂ ಗುಣಾಧಿಕನೆಂಬುದು ಜಗತ್ಪ್ರಸಿದ್ಧಮಾತನೆನಗಸ್ಮಜ್ಜನ
ಸೀತಾದೇವಿಯಿರ್ದೆಡೆಯುಂ ಪೇೞ್ದಿನ್ನಂ ಮನ್ನಿಸಿ ಕಱುಪಿದನೆನೆ ರಘುಕುಲಾಂಬ
ದ್ಯುಮಣಿ ವಿಭೀಷಣ ಮಹತ್ತರನಂ ತುಷ್ಟಿದಾನ ಪುರಸ್ಸರಂ ನಿಮ್ಮಾಳ್ದನಂ ತಂದ
ಕಾಣಿಸೆಂದು ವಿಸರ್ಜಿಸುವುದುಮಾತಂ ವಿಭೀಷಣನಂ ಕಂಡು ರಾಮದೇವ
ಕಾರುಣ್ಯಮುಮಂ ಮಹಾಮಹಿಮೆಯುಮಂ ಬಿನ್ನಪಂಗೆಯ್ವುದುಂ—

ಕಂ ॥ ಪಲತೆಱದ ಪಱೆಯ ದನಿ ತೆರೆ
ಯುಲಿಪೆನೆ ಪೊಕ್ಕತ್ತು ಕಟಕಮಂ ನೋೞ್ಪರ ಕ ॥
ಣ್ಣಲಸೆ ವಿಭೀಷಣ ವಾಹಿನಿ
ಜಲನಿಧಿಯಂ ಬಂದು ಪುಗುವ ಕುಲವಾಹಿನಿವೋಲ್ ॥ ೮೦

ಆ ಸಮಯದೊಳ್—

ಕಂ ॥ ಇದಿರಟ್ಟಿ ದಿವ್ಯ ವಸನಾಂ
ಗದಾದಿ ಭೂಷಣಮನವನಿಪತಿ ಸುಗ್ರೀವಾಂ ॥
ಗದ ಮುಖ್ಯರನಿದಿರಟ್ಟಿದ
ನುದಾತ್ತರಾಘವನ ಪದೆಪನಾವಂ ಪಡೆವಂ ॥ ೮೧

ಅನಂತರಂ ಕತಿಪಯ ಪರಿಜನ ಪರಿವೃತಂ ಪ್ರಧಾನ ಪುರುಷ ಪುರಸ್ಸರಂ ರಾ
ಮಂದಿರಮಂ ಪೊಕ್ಕು—

ಚ ॥ ಮಣಿಮಯ ಭೂಷಣ ಪ್ರಭೆ ಮನಕ್ಕನುರಾಗಮನುಂಟುಮಾಡೆ ರೋ ।
ಹಣಗಿರಿ ವಾರ್ಧಿಯಂ ಮಱೆವುಗಲ್ ನಡೆತಂದಪುದೆಂಬಿನಂ ವಿಭೀ ॥
ಷಣನವನೀಶನಿರ್ದೆಡೆಗೆ ಬಂದು ಪದಾನತನಾಗೆ ಭಾಳದೊಳ್ ।
ಪೆಣೆದು ನಖಾಂಶು ಕಟ್ಟಿದವೊಲಿರ್ದುದು ಖೇಚರ ರಾಜ್ಯಪಟ್ಟಮಂ ॥ ೮೨ ।

ಆಗಳ್—

ಕಂ ॥ ತೆಗೆದಾದರದಿಂ ತಱ್ಕೈ
ಸೆ ಗಗನ ಚರನಮೃತ ರಸದೊಳೋಲಾಡುವವೋಲ್ ॥
ಸೊಗಯಿಸಿದಂ ಚಂದ್ರಿಕೆಯುಂ
ನಗುವ ನರೇಂದ್ರನ ತನುಪ್ರಭಾ ಚಂದ್ರಿಕೆಯಿಂ ॥ ೮೩ ।

ಗುಣಮಂ ಕಡೆಗಣಿಸಿದ ರಾ
ವಣನೊಳ್ [illegible]

ಷಣನಮರ ನದಿಯೊಳಘವು
ರ್ಷಣವಿರ್ದವೊಲಿರ್ದನಧಿಪಸಂಗಪ್ರಭೆಯಿಂ ॥ ೮೪ ॥

ಜನನಾಥನ ಸಮ್ಮನದಿಂ
ಮನದೊಳ್ ಮೆಯ್ಯೊರ್ಚೆ ಸಂತಸಂ ಬಲಗೆಲದೊಳ್ ॥
ತನಗಾಗಳೇಱಲಿಕ್ಕಿದ
ಕನಕಾಸನದೊಳ್ ವಿಭೀಷಣಂ ಕುಳ್ಳಿರ್ದಂ ॥ ೮೫ ॥

ರಾವಣನಿಂದಾದೆರ್ದೆವಟಿ
ಲಾವಗವೋಸರಿಸೆ ನೃಪನ ದಯೆಯಿಂ ಖಚರಂ ॥
ದಾವಾನಲನಿಂ ಬೆಂದು ಸು
ಧಾವರ್ಷದಿನಾಱಿದಚಲಮಿರ್ಪಂತಿರ್ದಂ ॥ ೮೬ ॥

ಅನಂತರಂ ರಾಮಚಂದ್ರಂ ವಿಭೀಷಣನನುಚಿತ ಸಂಭಾಷಣ ಸುಧಾರಸದಿಂ ತಣಿಪಿ ಬೀಡಿಂಗೆ ಬೆಸಸುವುದುಮನ್ನೆಗಮಿತ್ತಲಪ್ರತಿಮಪ್ರಭಂ ಪ್ರಭಾಮಂಡಲಂ ಸಹಸ್ರಾಕ್ಷೌಹಿಣೀಬಲಂಬೆರಸು ಬಂದು ಕೂಡುವುದುಂ ಮಱುದಿವಸಮಲ್ಲಿಂ ತಳರ್ದು ರಘುವೀರಂ ಸಮುದ್ರತೀರಮನೆಯ್ದಿವರ್ಪುದುಂ—

ಚ ॥ ಶರನಿಧಿ ತೇಜಮುಂ ಜಸಮುಮುಂ ತಲೆಯೊಳ್ ನಿಲೆ ಪೂಣ್ದು ತಾಳ್ದಿದಂ ।
ತಿರೆ ತುಱುಗಿರ್ದ ವಿದ್ರುಮ ಲತಾವಳಿ ಶಂಖದ ಬಳ್ಳವಳ್ಳಿ ಬಂ ॥
ಧುರಮೆನಿಸಿರ್ದುವಾ ರಘುತನೂಭವನೆಟ್ಟಿರೆ ಸೇಸೆಯಿಕ್ಕಿದಂ ।
ತಿರೆ ತೆರೆಗೈಯೊಳುಚ್ಚಳಿಸಿ ಸೂಸಿದುವಬ್ಧಿಯ ತೋರಮುತ್ತುಗಳ್ ॥ ೮೭ ॥

ಕಂ ॥ ವಾರಿಧಿ ರಘುಜಂಗೆತ್ತಿದ
ನೀರಾಜನ ದೀಪಕಲಿಕೆ ಪೊಳೆದಪುದೆಂಬಂ ॥
ತೋರೊಂದೆಡೆಯೊಳ್ ಪೊಳೆದುವು
ರಾರಾಜಿಪ ಪದ್ಮರಾಗ ರುಚಿ ಮಂಜರಿಗಳ್ ॥ ೮೮ ॥

ನೆಲೆಯಿಲ್ಲದೆಯುಂ ನೆಲನಂ
ಬಲವಂದುಂ ವೇಲೆಗೊಂಡು ಮೆಯ್ಯಿಕ್ಕಿಯುಮಾ ॥
ಜಲನಿಧಿ ತರಂಗ ಭಂಗಾ
ಕುಲಿತಂ ನೆನೆಯಿಸಿದುದನ್ಯ ರಾಜನ್ಯಕಮಂ ॥ ೮೯ ॥

ಸುೞಿಗಳ್ ನೀರ್ದಿಗುರಿಯವೋಲ್
ಸುೞಿದುವು ತೆರೆ ತೆರೆಯನಟ್ಟಿದುವು ಬಿಟ್ಟದ ಬೆಂ ॥

ಬಟಿಯಂ ಬೆಟ್ಟಟ್ಟುವವೋಲ್
ತಟಿತ್ ತಳ್ತವೊಲಿರ್ದುವೊಗೆದ ಮಣಿ ಕಿರಣಂಗಳ್ ॥ ೯೦

ಆ ಮಹಾಸಮುದ್ರಮಂ ಬಲಾಚ್ಯುತರ್ ನೋಡಿ ಮೆಚ್ಚುತ್ತುಮಿರ್ಪುದುಮ
ಸಮಯದೊಳ್—

ಚ ॥ ಜಳಧಿಯ ಮೇಲೆ ಬಂದ ಜಲರಾಶಿಯೊ ಪೇಟಿಮೆನಿಪ್ಪ ಪೆರ್ಮೆಯಂ ।
ತಳೆದು ಬಲಂ ನಭೋ ಗಮನ ವಿದ್ಯೆಯೆ ಸೇತುವೆನಲ್ ನಲಂ ದ್ವಿಷ ॥
ದ್ಬಳ ವಿಲಯಾನಲಂ ನಡೆಯಿಸಲ್ ನಭದೊಳ್ ನಡೆದತ್ತಿಭೇಂದ್ರ ಸಂ ।
ಕುಳ ಮಕರಂ ಹಯಪ್ರಕರ ವೀಚಿ ವರೂಥ ಕುಳೀರ ಸಂಕುಲಂ ॥ ೯೧

ಶಾ ॥ ಹೇತಿವ್ರಾತ ಮರೀಚಿ ಖೇಚರ ಕಿರೀಟಾನರ್ಘ್ಯ ರತ್ನಾಂಶು ಭೂ ।
ಷಾ ತೇಜಃಪಟಲಂ ವಿಮಾನ ಬಹುರತ್ನಚ್ಛಾಯೆ ತಳ್ವೊಪ್ಪಿನಂ ॥
ಜ್ಯೋತಿರ್ಮಂಡಲಮೇಕೆ ತೆಂಕನಡೆಯುತ್ತಿರ್ದಪ್ಪುದೆಂಬಂತೆ ಸಂ ।
ಖ್ಯಾತೀತಂ ನಡೆದತ್ತು ರಾಘವ ಮಹಾಸೈನ್ಯಂ ನಭೋಭಾಗದೊಳ್ ॥ ೯೨

ಉ ॥ ಪಾವನಿ ಜಾಂಬವಾಂಗದ ಸುಷೇಣ ವಿಭೀಷಣ ಚಂದ್ರರಶ್ಮಿ ಸು
ಗ್ರೀವ ವಿಯಚ್ಚರ ಪ್ರಮುಖರೇಱಿದ ರತ್ನವಿಮಾನ ಮಾಲೆ ಶೋ ॥
ಭಾವಹಮಾಗಿ ಸುತ್ತಿ ಬರೆ ತನ್ನ ವಿಮಾನಮನಂಬರಂ ಬಯ ।
ಲ್ದಾವರೆದಾಣದಂತಿರೆಸೆದಂ ರಘುಜಂ ಕಲಹಂಸ ಲೀಲೆಯಿಂ ॥ ೯೩

ಮ ॥ ಪೊಗೆಯುತ್ತುಂ ಬಡಬಾಗ್ನಿ ರಾವಣಯಶೋ ದುಗ್ಧಾಬ್ಧಿಯಂ ಪೀರ್ವ ದಂ
ದುಗದಿಂ ಬಂದಪುದಕ್ಕುಮೆಂಬ ಬಗೆಯಂ ಸೌಮಿತ್ರಿ ಪೀತಾಂಬರಾಂ ॥
ಶುಗಳುಂ ತನ್ನ ತನುಪ್ರಭಾ ಪಟಲಮುಂ ಮಾಡ್ಪಂತು ಬಂದಂ ವಿಮಾ ।
ನ ಗಭಸ್ತಿ ಸ್ತಬಕಂ ಪಳಂಚಲೆವಿನಂ ಜ್ವಾಲಾ ಸಹಸ್ರಂಗಳಂ ॥ ೯೪

ಚ ॥ ಗಣನೆಗಳುಂಬವಿಾ ನೃಪರುಪಾರ್ಜಿತ ಪುಣ್ಯಮೆನಲ್ಕೆ ರಾಮ ಲ ।
ಕ್ಷ್ಮಣರ ವಿಮಾನಮಂ ಬಳಸಿ ಖೇಚರ ರಾಜ ವಿಮಾನ ಸಂಚಯಂ ॥
ಮಣಿಮಯಮಂಬರಸ್ಥಲಮುಮಿಟ್ಟೆಡೆಯೆಂಬಿನಮಂಬುರಾಶಿಯಂ ।
ಕ್ಷಣದೊಳೆ ದಾಂಟಿ ಪೊರ್ದಿದುದು ವೇಲೆಯದೊಂದು ವನಾಂತರಾಲಮಂ ॥ ೯೫

ಉ ॥ ಬೆಟ್ಟಮನೊಟ್ಟಿ ಬಟ್ಟೆ ನಡೆವಚ್ಚಿಗಮೇವುದೊ ವಾರ್ಧಿಯಂ ಮುಗಿ ।
ಲ್ವಟ್ಟೆಯೆ ಬಟ್ಟೆಯಾಗೆ ನಡೆವಚ್ಚರಿವೆತ್ತು ವಿಯಚ್ಚರಾಧಿಪರ್ ॥
ತೊಟ್ಟನೆ ದಾಂಟಿ ವಾರಿಧಿಯನಾ ತಡಿಗೆಯ್ದುವುದುಂ ನಭಕ್ಕೆ ತೂಂ ।
ತಿಟ್ಟನೊಲಾಗೆ ದಳ್ಳಿಸಿದುದಾ ಪಡೆಯೊಳ್ ಸೊಬಗೆಸೆಯುತ್ತುಮಳ್ಳೊಡಂ ॥ ೯೬

ಅಂತು ಸಮುದ್ರಮಂ ದಾಂಟಿ ಲಂಕಾಭಿಮುಖರಾಗಿ ಪಯಣಂಬೋಗಿ ವಿಂಶತಿ ಯೋಜನ ವಿಸ್ತಾರಮುಂ ತ್ರಿಂಶದ್ಯೋಜನಾಯಾಮಮುಮಪ್ಪ ರಣಭೂಮಿಯಂ ಕೈಕೊಂಡಿರ್ಪುದುಂ—

ಕಂ ॥ ಅವರವರ್ಗೆ ತಕ್ಕ ಮಣಿಮಯ
ಭವನಮನಧಿರಾಜ ರಾಜಗೃಹಮುಂ ಕಡೆಪ ॥
ಟ್ಟವರ್ಗೊಳಗಾಗಿರೆ ಸಂಭಿ
ನ್ನವಿದ್ಯೆಯಿಂ ಸ್ಥಪತಿ ಮಾಡಿ ಕೊಟ್ಟಂ ಬೀಡಂ ॥ ೯೭ ॥

ಗೃಹ ದೀರ್ಘಿಕೆಯಂ ಧಾರಾ
ಗೃಹಮುಂ ಗೃಹವನಮನುಪವನಂಗಳನಾರ್ಗಂ ॥
ಸ್ಪೃಹಣೀಯಮಾಗೆ ಪಲವಂ
ಬಹುವಿದ್ಯಾ ಗೃಹಮಹತ್ತರರ್ ಸಮೆದಿತ್ತರ್ ॥ ೯೮ ॥

ಅಂತು ಬೀಡಂಬಿಟ್ಟ ರಾಮಲಕ್ಷ್ಮಣರ ರಾಜಭವನಮುಂ ಬಳಸಿ ಸುಗ್ರೀವ ಪ್ರಭಾಮಂಡಲ ಪ್ರಮುಖ ನಿಖಿಲ ಖಚರ ಪರಿಬೃಢರುಮಖಿಲ ಸೇನೆಯುಮನುರೂಪ ಭವನಂಗಳೊಳಿಡೆಯುಱಿದು ಬೀಡಂಬಿಟ್ಟಿರ್ಪುದುಂ—

ಚ ॥ ದಿವಿಜ ನದೀ ತರಂಗ ಧವಲಂ ನಿಜ ನಿರ್ಮಲಕೀರ್ತಿ ವಲ್ಲಿ ಭೂ ।
ಭುವನಮನಾವಗಂ ಪುದಿದಿನಂ ವಿಬುಧಾವಳಿಗಪ್ಪಿನಂ ಮಹೋ ॥
ತ್ಸವಮಧಿರಾಜ ಪೂಜ್ಯನಭಿರಾಮತೆಯಂ ತಳೆದಂ ಸರಸ್ವತೀ ।
ಶ್ರವಣ ವಿಭೂಷಣ ಪ್ರಥಿತ ವಾಗ್ವಿಭವಂ ಕವಿತಾಮನೋಹರಂ ॥ ೯೯ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖ ಕಿರಣ ಚಂದ್ರಿಕಾಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರಚರಿತಪುರಾಣದೊಳ್
ಲಂಕಾದಿಗ್ವಿಜಯಪ್ರಯಾಣ ವರ್ಣನಂ
ದ್ವಾದಶಾಶ್ವಾಸಂ

---

# ತ್ರಯೋದಶಾಶ್ವಾಸಂ

ಕಂ॥ ಶ್ರೀ ಸುಕೃತಕ್ಕಾತ್ಮ ವಚ
ಶ್ರೀ ಸೂನೃತ ಸಂಪದಕ್ಕೆ ತೊಡವೆನೆ ಜಸವಾ॥
ಶಾ ಸುದತಿಗೆ ಸಾಹಿತ್ಯ ಕ
ಲಾ ಸುಭಗಂ ಪೆಂಪುವೆತ್ತನಭಿನವಪಂಪಂ ॥೧॥

ಆ ಸಮಯದೊಳ್—

ಮ॥ಸ್ರ॥ ಜನಿತಾ ಕೋಲಾಹಲಂ ಕಾಹಳ ಬಹುವಿಧ ವಾದ್ಯಸ್ವನಂ ಶಂಖ ಭೇರೀ।
ಧ್ವನಿ ಹೇಷಾಬೃಂಹಿತಂಗಳ್ ವಿಲಯ ಜಲನಿಧಿ ಧ್ವಾನವೆಂಬನ್ನೆಗಂ ಭೋಂ॥
ಕನೆ ಕರ್ಣಾಭ್ಯರ್ಣಮಂ ಸಾರ್ತರೆ ಮುನಿದಸುರಂ ಪೊಯ್ಸೆ ಪೊಣ್ಮಿತ್ತು ಚಂಡಾ।
ಶನಿಘೋಷಂ ಲೋಕಮಂ ಮೂವಳಸುವಳಸೆ ಸನ್ನಾಹಭೇರೀ ನಿನಾದಂ ॥೨॥

ಕಂ॥ ಎನಗೆ ರಣ ರಭಸದಿಂ ಗಡ
ಮನುಜಂ [1]ಮೇಲೆತ್ತಿ ಬಂದನಿಂ ದೋಃಕಂಡೂ॥
ಯನವಮಂ ಕಟಿಲ್ಚಲೆಡೆಯಾ
ಯ್ತೆನುತ್ತುಮುತ್ತರಳ ತಾಮ್ರಲೋಚನನಾದಂ ॥೩॥

ಆಗಳಾ ಭೇರೀರವಮಂಬರವನಾವರಿಸುವುದುಮತ್ತ ಭಾಸ್ಕರಪುರದ ಪಯೋಧರಪುರದ ಕಾಂಚನಪುರದ ಕಂಪನಪುರದ ವ್ಯೋಮಪುರದ ವ್ಯೋಮವಲ್ಲಭಪುರದ ಗಂಧರ್ವಪುರದ ಶಶಿ[2]ಮಂದಿರಪುರದ ಶಿವಮಂದಿರಪುರದ ಸಿಂಹಪುರದ ಲಕ್ಷ್ಮೀಪುರದ ಮಹಾಶೈಲಪುರದ ಚಕ್ರಪುರದ ಸೀಮಂತಪುರದ ಮಲಯಪುರದ ಶ್ರೀಗುಹಾಪುರದ ಅಶ್ವಪುರದ ಚಂದ್ರಪುರದ ಕಿರಿಂಜಯಪುರದ ಶಶಿಸ್ಥಾಪನಾಪುರದ ಮಾರ್ತಂಡಪುರದ ಸಹಸ್ಥಾಪನಪುರದ ವಿಶಾಲಸ್ಥಾಪನಪುರದ ಜಯಪುರದ ಪರೀಕ್ಷಾಪುರದ ವಿಶ್ವಪುರದ ಶ್ರೀಚಂದ್ರಪುರದ ಗಜಪುರದ ಗೋಪುರದ ಮಹಿಷೀಪುರದ ರತ್ನಪುರದ ವಿದ್ಯಾಧರರ್ ಮೊದಲಾಗೆ ಪಲವುಂಪುರದ ವಿದ್ಯಾಧರರಾಜರೆಲ್ಲಂ ತಂತಮ್ಮ ಸಮಗ್ರ ಸಾಮಗ್ರೀಸಹಿತರಾಗಿ ಬಂದು ಕೂಡುವುದುಮವರಂ ಸನ್ಮಾನ ದಾನಪುರಸ್ಸರಂ ಸಂತೋಷಂಬಡಿಸಿ ಚತುಸ್ತ್ರಿಂಶತ್ಸಹಸ್ರಾಕ್ಷೌಹಿಣೀ ಬಲಂಬೆರಸು ದಶಗ್ರೀವಂ ರಣರಸೋದ್ಧ್ರೀವನಾಗಿರ್ದನಾ ತ್ರಿಖಂಡ ಮಂಡಲಾಧಿಪತಿಯೊಳ್—

1. ಮುನಿದೆತ್ತಿ. ಗ. ಘ. 2. ಮಂಡಲ. ಕ. ಘ.

ಕಂ ॥ ರಣ ರಭಸದಿಂದಮೂವಂ
ಪೊಣರ್ವಂ ಮೂವತ್ತುನಾಲ್ಕು ಸಾಸಿರದಕ್ಷೌ ॥
ಹಿಣಿಗೊಡೆಯನಾದನೊಳ್ ರಾ
ವಣನೊಳ್ ವಿದ್ವಿಷ್ಟಸೈನ್ಯ ವಿದ್ರಾವಣನೊಳ್ ॥ ೪ ॥

ಮತ್ತಿತ್ತ ರಾಮಲಕ್ಷ್ಮಣರ್ ಸಹಸ್ರಾಕ್ಷೌಹಿಣೀಬಲಕ್ಕಧಿಪರಪ್ಪ ಸುಗ್ರೀವ ಪ್ರಭಾಮಂಡಲ ಸಮನ್ವಿತರ್ ಸಂಗ್ರಾಮೋತ್ಸುಕ ಚಿತ್ತರಾಗಿ ಪೆಱರುಮತಿಬಲರಪ್ಪ ವಿದ್ಯಾಧರರ್ ಬಂದು ಕೂಡುವುದುಮವರನೊಳಕೊಳುತ್ತುಮಿರ್ದರ್ ತದಕ್ಷೌಹಿಣೀ ಪ್ರಮಾಣ ಮೆಂತೆನೆ ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮುವೆಂದುಮನೀಕಿನಿಯೆಂದು ಮಿಂತೆಂಟು ತೆಱದಿಂ ಪಡೆಗೆ ಪೆಸರಕ್ಕುಮಲ್ಲಿ—

ಕಂ ॥ ಒಂದಾನೆಯು ಕಾಲ್ಗಾಪಿನೊ
ಳೊಂದು ರಥಂ ಮೂಱು ತುರಗಮಯ್ದುಂ ಕಾಲಾ ॥
ಳೊಂದಾಗಿ ಬಂದು ಮೊನೆಯೊಳ್
ನಿಂದಂದದು ಪತ್ತಿಯೆಂಬ ಪೆಸರಂ ಪಡೆಗುಂ ॥ ೫ ॥

ತ್ರಿಗುಣಂ ಪಿರಿದಕ್ಕುಂ ಪ
ತ್ತಿಗೆ ಸೇನೆಯುದಕ್ಕುಮಂತೆ ಸೇನಾಮುಖಮುಂ ॥
ತ್ರಿಗುಣಂ ಪಿರಿದಕ್ಕುಮದಂ
ತ್ರಿಗುಣಿಸಿದೊಡೆ ಗುಲ್ಮಮೆಂಬ ಪೆಸರಂ ಪಡೆಗುಂ ॥ ೬ ॥

ತ್ರಿಗುಣಿಸೆ ಗುಲ್ಮಮನದು ನೆ
ಟ್ಟಗೆ ವಾಹಿನಿಯಕ್ಕುಮಂತೆ ತದ್ವಾಹಿನಿಯಂ ॥
ತ್ರಿಗುಣಿಪುದುಂ ಪೃತನೆಯುದಂ
ತ್ರಿಗುಣಿಸೆ ಪೆಱತೇನೊ ಚಮುವೆನಲ್ ಪೆಸರ್ವಡೆಗುಂ ॥ ೭ ॥

ಈ ನೆಗಟ್ದ ಚಮೂ ತ್ರಿತಯಮ
ದಾನೀಕಿನಿಯಕ್ಕುಮದು ಪದಿರ್ಮಡಿಸಲೊಡಂ ॥
ತಾನಕ್ಷೌಹಿಣಿಯಕ್ಕುಂ
ಜೈನೋಕ್ತಮನನ್ಯರೆತ್ತಲಱಿವರ್ ಮೂರ್ಖರ್ ॥ ೮ ॥

ಇಂತೆನಿಸಿದಕ್ಷೌಹಿಣಿಯೊಳಗಣಾನೆಗಳುಮಿರ್ಪತ್ತೊಂದು ಸಾಸಿರದೆಂಟುನೂಱೆಪ್ಪತ್ತಕ್ಕುಂ ರಥಂಗಳುಮನಿತೆ ಅಕ್ಕುಂ ಕುದುರೆಯುಱುವತ್ತಯ್ದು ಸಾಸಿರದಱು

ನೂಱುಪತ್ತಕ್ಕುಂ ಕಾಲಾಳುವೊಂದು ಲಕ್ಕಮುವೊಂಭತ್ತು ಸಾಸಿರದ ಮೂನೂಱಯ್ವತ್ತಕ್ಕುಂ—

ಕಂ॥ ಒಂದಕ್ಷೌಹಿಣಿಗಿನಿತ
ಕ್ಕುಂ ದಲ್ ಚತುರಂಗ ಸಂಖ್ಯೆಯೆನೆ ಪಡೆಯೆರಡುಂ॥
ನಿಂದಿಱಿವೊಡೆ ನೆಲನೆಡೆಗಿಱ
ದೆಂದಱಿದಾ ಪಡೆಯ ಪವಣನಱಿವವನಾವಂ ॥ ೯ ॥

ಗಣಿದಿಗನಿನಿತನಿತಕ್ಷೌ
ಹಿಣಿಯೆಂದೆಣಿಸಲ್ಸಮರ್ಥನಕ್ಕೆಮ ರಥ ವಾ॥
ರಣ ವಾಹ ಪದಾತಿಗಳಂ
ಗಣಿಯಿಸಲಾರ್ತಪನೆ ರಾಮ ರಾವಣ ಬಲಮಂ ॥ ೧೦ ॥

ಚ॥ ಭಗಣದ ಲೆಕ್ಕಮಂ ಮಱಿಯ ನೀರ್ವನಿಯಂ ಪರಮಾಣು ಸಂಖ್ಯೆಯಂ।
ಗಗನದ ಸೀಮೆಯಂ ಜಳಧಿ ವೀಚಿಗಳಂ ದೆಸೆಯಂತಮಂ ಪವ॥
ಣ್ಬುಗಿಸಲೆರಳ್ಬಲಂಗಳ ಮದದ್ವಿಪ ವಾಹ ವರೂಥ ಕಿಂಕರಾ।
ದಿಗಳ ಪವಣ್ಗಳಂ ಪವಣಿಸಲ್ ಬಗೆದರ್ಪನೆ ಗಾಂಪನಾಗನೇ ॥ ೧೧ ॥

ಇಂತತಿ ಪ್ರಬಲಮಪ್ಪುಭಯ ಬಲಮುಮಾಯುಧಂಗಳನರ್ಚಿಸುವ ವಿಜಯ ವಾರಣ ವಾಜಿಗಳಂ ಪೂಜಿಸುವ ವೀರ ಸಂನ್ಯಸನಮಿರ್ಪ ಸುಭಟಾಲಾಪಮನಾಲಿಸುವ ರವಳಿ ಘೋಷಿಸುವ ದಂದುಗದಿನಂದಿನಿರುಳಂ ಕಳೆಯೆ ನೇಸರ್ ಮೂಡುವುದುಮಿಂದಗಿ ಬೆಸಸಿದಂದದೊಳ್—

ಕಂ॥ ಆರೆಮಗಿದಿರ್ಚುವರ್ ಸಮ
ರಾರಂಭಕ್ಕಾಮೆ ಮುಖ್ಯ ನಾಯಕರೆವೆನು॥
ತ್ತಾರಿಂ ಮುನ್ನಂ ಸೆರಗಂ
ಪಾರದೆ ಹಸ್ತಪ್ರಹಸ್ತರುಱದೊಡ್ಡಿರ್ದರ್ ॥ ೧೨ ॥

ಮಾರೀಚಂ ಮೊದಲಾಗೆ ಮ
ಹಾರಥರೊಡನೇಱ ಸಿಂಹರಥಮಂ ರಥಿಗಳ್॥
ನೀರದ ಗರ್ಜನಮಂ ರಣ
ಭೇರೀರವಮಿಱಿಪೆ ಲಂಕೆಯಂ ಪೊಱಮಟ್ಟರ್ ॥ ೧೩ ॥

ಪುಲಿಯ ರಥದೊಳ್ ಪಲರ್ ಮೆ
ಯ್ಗಲಿಗಳ್ ವಜ್ರೋದರಾದಿ ವೀರ ಪ್ರಮುಖರ್॥

ಕಲಹಕ್ಕೆ ನಡೆಯೆ ನಡೆದರ್
ಪಲಂಬರಂಬರ ಚರರ್ ತುರಂಗಮ ದಟಿದೊಳ್ ॥ ೧೪ ॥

ಕರಿ ತುರಗಾರೂಢರ್ ಸಂ
ಗರಕ್ಕೆ ತನಗಂಗರಕ್ಕೆಯೆನಿಸಿದ ವಿದ್ಯಾ ॥
ಧರ ತನಯರೇೞುಕೋಟಿಯು
ಮರೆಬರೆ ರಣಭೂಮಿಗಿಂದ್ರಜಿತು ಪೊಱಮಟ್ಟಂ ॥ ೧೫ ॥

ಇಂದಗಿಯು ಕೆಲದೊಳಹಿತರ
ನಿಂದಗಿದುಗಿವಂತು ಮಾಟ್ಪೆವೆಮುಗಳ್ವದರಾ ॥
ರೆಂದಂಬಂ ತೂಗುತ್ತುಂ
ಬಂದರ್ ಜಿತಶತ್ರು ಮೇಘವಾಹನ ವೀರರ್ ॥ ೧೬ ॥

ಶಾತ ತ್ರಿಶೂಲ ರುಚಿ ತೀ
ವ್ರಾತಪಮಂ ಬೀಱೆ ಬೀಱೆ ರಿಪುಬಲ ವಿಲಯೋ ॥
ತ್ಪಾತಮೆನೆ ಕುಂಭಕರ್ಣಂ
ಜ್ಯೋತಿಷ್ಪ್ರಭ ಮಣಿವಿಮಾನದೊಳ್ ಪೊಱಮಟ್ಟಂ ॥ ೧೭ ॥

ಅಂತು ನಿಜ ವಿಜಯಸೇನೆ ಸಂಗ್ರಾಮದೊಳೊಡ್ಡಿ ನಿಲ್ವುದುಂ :—

ಮ ॥ ಪಿಡಿದುಗ್ರಾಸ್ತ್ರಮನೇಱಿ ಪುಷ್ಪಕಮನಾಶಾ ಚಕ್ರಮಂ ಚಕ್ರಮಂ ।
ನಡೆ ನೋಡುತ್ತುಮಪಾರ ಸೈನ್ಯ ಸಹಿತಂ ಪೂರ್ಣೇಂದುವಂ ಪೋಲೆ ಬೆ ॥
ಳ್ಗೊಡೆ ಭೇರೀರವಮೇಕ ಶಂಖ ನಿನದಂ ತಳ್ಪೊಯ್ಯೆ ದಿಕ್ಚಕ್ರಮಂ ।
ನಡೆದಂ ದಾನವ ಚಕ್ರವರ್ತಿ ಸಮರಪ್ರಾರಂಭ ಸಂರಂಭದಿಂ ॥ ೧೮ ॥

ಅಂತು ನಡೆವೆಡೆಯೊಳ್—

ಚ ॥ ಒಡೆಯೆ ಸುರಾಲಯಂ ಕೆಡೆಯೆ ಪರ್ವತ ಸಂಕುಲಮುರ್ವರಾ ತಳಂ ।
ನಡುಗೆ ದಿಶಾನನಂ ಪೊಗೆಯೆ ಭೂಮಿರುಹಂ ಪ್ರತಿಕೂಲ ವಾಯುವಿಂ ॥
ದುಡಿಯೆ ಖಗಾಳಿ ದುಸ್ಸ್ವರದಿನೂಳೆ ರಣಾಗ್ರಹ ದುರ್ನಯಕ್ಷಣಂ ।
ಸೆಡೆಯದೆ ಸಂಗರಾವನಿಗೆ ಮಾನಧನಂ ನಡೆದಂ ದಶಾನನಂ ॥ ೧೯ ॥

ಕಂ ॥ ಸಮರಾರ್ಥಿ ಪೊಣ್ಮುವುತ್ಸಾ
ತಮನಪಶಕುನಂಗಳಂ ದಶಾಸ್ಯಂ ವೀರ ॥

ಪ್ರಮುಖಂ ಬಗೆಯದೆ ಬಂದಂ
ಸಮರಾವನಿಗರ್ಥಿ ದೋಷಮುಂ ಬಗೆದಪನೇ ॥ ೨೦ ॥

ಅಂತು ಬಂದೊಡ್ಡಿ ನಿಲ್ವುದುಂ—

ಕಂ ॥ ದನುಜೇಂದ್ರನೊಡ್ಡು [1]ಕರ್ಗನೆ
ಕನಿಯುತ್ತಿರೆ ನೋಡೆ ಕಂಡು ವಾನರಚಿಹ್ನರ್ ॥
ಮುನಿಸನುವಿಸೆ ಕಾದುವ ತ
ಕ್ಕಿನೊಳಾಹವಭೂಮಿಗೆಕ್ಕೆಯಿಂ ನಡೆತಂದರ್ ॥ ೨೧ ॥

ಪಲತೆಱದ ಪಜ಼ೆಯ ದನಿಗಳ್
ನೆಲೆವೆರ್ಚುವ ಕಡಲ ತೆರೆಯ ತಾಮುರ್ಱಟ್ಟಿನ ಬ ॥
ಲ್ಲುಲಿಯೆನೆ ಕಲಹ ಕ್ಕ್ಷೋಣಿಗೆ
ಪಲಬರ್ ಸುಭಟರ್ ಕಪಿಧ್ವಜರ್ ಕವಿತಂದರ್ ॥ ೨೨ ॥

ಪಲತೆಱದ ವಾಹನಂಗಳ
ನಲಂಘ್ಯ ವಿಕ್ರಮರೆನಿಪ್ಪ ವಿದ್ಯಾಧರ ವೀ ॥
ರ ಲಲಾಮರೇಱ ಸಂಗ್ರಾ
ಮ ಲೋಲುಪರ್ ಸಮರ ಭೂಮಿಗಂದೆಟ್ಟಿಂದರ್ ॥ ೨೩ ॥

ನಲ ನೀಲರ್ ಸಮರೋರ್ವಿಗೆ
ವಿಲಯಾಗ್ನಿಗಳಂತೆ ಮುಂತೆ ನಡೆದರ್ ವಿದ್ಯಾ ॥
ಬಲದ ಭುಜಬಲದ ಸೆಣಸಿಂ
ಕಲಿಗಳ್ ಹಸ್ತ ಪ್ರಹಸ್ತರೊಳ್ ತಳ್ತಿಱಯಲ್ ॥ ೨೪ ॥

ಅಂಗದ ಕುಮಾರನಾಹವ
ರಂಗದೊಳಾನಿಂದ್ರಜಿತ್ಕುಮಾರಂಗೀವೆಂ ॥
ಭಂಗಮನೆಂದು ಪರಾಕ್ರಮ
ತುಂಗಂ ಕಡುಕೆಯ್ದು ಕದನ ಕೇಳಿಗೆ ಬಂದಂ ॥ ೨೫ ॥

ಅಮಿತ ಚತುರಂಗ ಸೇನಾ
ಸಮನ್ವಿತರ್ ಪ್ಲವಗ ಕೇತುಗಳ್ ಮಾರುತ ಮಾ ॥

---

1. ಕಱಗನೆ. ಕ. ಖ.

ರ್ಗಮನೆಳಸಿ ಬಳಸಿ ನಡೆದರ್
ಸಮರ ಕ್ಷೋಣಿಗೆ ಸುಷೇಣನುಂ ಜಾಂಬವನುಂ ॥ ೨೬ ॥

ಅಂತು ನಿಜ ನಾಮಾಂಕಿತ ವಿಜಯ ವೈಜಯಂತಿಗಳಂಬರಮನಳ್ಳಿಱಿಯೆ ಜಾಂಬವಾಂಗದ ಸುಷೇಣ ಪ್ರಮುಖ ನಿಖಿಲ ವಲೀಮುಖ ಧ್ವಜಪ್ರಧಾನರ್ ರಣ ರಸಿಕರಾಗಿ ನಡೆದರ್ ಮತ್ತಂ ಪ್ರಭಾಮಂಡಲನುಂ ಮಹೇಂದ್ರನುಂ ಚಂದ್ರಾಭನುಂ ಮಹಾಬಲನುಂ ಸಮುನ್ನತಬಲನುಂ ಸರ್ವಪ್ರಿಯನುಂ ದುರ್ಬುದ್ಧಿಯುಂ ಶರಭನುಂ ಪ್ರೀತಿಂಕರನುಂ ಅನುಂದರನುಂ ದೃಢರಥನುಂ ಕುಮುದಾವರ್ತನುಂ ಸೂರ್ಯಜ್ಯೋತಿಯುಂ ವಿಜಯಾಶ್ರಯನುಂ ವಿಮಲಸಾಗರನುಂ ಸನ್ಮಾನನುಂ ರತಿವರ್ಧನನುಮೆಂಬ ಪೆಸರ ನಾಯಕರುತ್ಸಾಯಕರಾಗಿ ನಡೆದರ್ ಮತ್ತಂ—

ಕಂ ॥ ಓರೋರ್ವರ ಚತುರಂಗಮ
ನಾರೆಣಿಸಲ್ ನೆಱೆವರೆನೆ ರಣಾನಕ ರುತಿ ದಿ ॥
ಗ್ವಾರಣಮನೆಯ್ದೆ ಖೇಚರ
ವೀರರಗುರ್ವುರ್ವೆ ಸಂಗರೋರ್ವಿಗೆ ಬಂದರ್ ॥ ೨೭ ॥

ಜವದೊಳ್ ದೊರೆಯೆನಿಸುವ ಖಚ
ರ ವೀರ ಭಟರೇಱಿ ಪುಲಿಯ ರಥಮಂ ಸಮರೋ ॥
ತ್ಸವದಿಂ ನಡೆದರ್ ದಶವದ
ನ ವರೂಥಿನಿಯುಂ ಜವಂಗೆ ಬಾಣಸುಗೆಯ್ಯಲ್ ॥ ೨೮ ॥

ಪ್ರಸ್ತಾರಂ ದೋರ್ಬಲಮಂ
ದುಸ್ತರಮಂ ಬೀಱಲೆಂದು ರಣಭೂಮಿಗೆ ತೇ ॥
ಜಸ್ತರಣಿ ನಡೆದನಹಿತ ತ
ಮಸ್ತೋಮಮನಳುರೆ ಮಂಡಲಾಗ್ರ ಮಯೂಖಂ ॥ ೨೯ ॥

ಮತ್ತಂ ವಿಪಕ್ಷಬಲ ಕುಧರಕುಲಿಶ ಪ್ರಹಾರನೆನಿಸಿದ ಪ್ರಸ್ತಾರನುಂ ಕದನಕೇಳೀ ಕೃತಾಂತನೆನಿಸಿದ ಹಿಮವಂತನುಂ ರಿಪುಮನೋಭಂಗನೆನಿಸಿದ ಭಂಗನುಂ ಪ್ರಚಂಡ ಪ್ರತಾಪನೆನಿಸಿದ ಪ್ರಿಯರೂಪನುಮಾದಿಯಾಗೆ ಗಗನಚರ ಗಜಾರೋಹಕರಂಕುಶದ ಮಸೆಗಳ್ ಗಗನ ತಲಮನಾವರಿಸೆ ರಣಕ್ಷೋಣಿಗೆ ನಡೆದರ್ ಮತ್ತಂ ಯಮ ಸಮಕಕ್ಷನೆನಿಪ ದುಷ್ಪ್ರೇಕ್ಷನುಂ ರಿಪುಘಟಾ ವಿಘಟನ ಮೃಗೇಂದ್ರನಪ್ಪ ಪೂರ್ಣಚಂದ್ರನುಂ ಪ್ರಥನ ರಥ ಪಯೋಧಿಯಪ್ಪ ಸುವೀಥಿಯುಂ ರಿಪುಹೃದಯ ವಿದಾರಣ ರಣಾನಕ ಸ್ವನನೆನಿಪ್ಪ ನಿಸ್ವನನುಂ ನಿರ್ಜಿತಾನೇಕ ವಿಗ್ರಹನೆನಿಪ್ಪ ಪ್ರಿಯವಿಗ್ರಹನುಂ ಮೊದ

ಲಾಗೆ ಸಿಂಹರಥಮನೇಱಿ ಸಂಗರಾಂಗಣಕ್ಕೆ ನಡೆದರ್ ಮತ್ತಂ ವಿದ್ಯುತ್ಕರ್ಣ ಕಾಲ ಕ್ಷಿತಿಧರ ತರಲ ಸಂಗ್ರಾಮ ಪ್ರಮುಖರಖಿಲ ಘೋಳಾಯಿಲರ್ ಮನೋಜವ ಜಾತ್ಯಶ್ವಂಗಳನೇಱಿ ಕದನಕ್ಷೋಣಿಗೆ ನಡೆದರ್ ಮತ್ತಂ—

ಕಂ ॥ ಅನುವರ ಬೂವಿಗೆ ಬಲವಾ
ಹನನುಂ ರವಿ ಹನುಮನುಂ ಪ್ರಚಂಡಾರಿಯುಮು ॥
ಗ್ರನುಮಾದಿಯಾಗೆ ಖೇಚರ
ರನೇಕ ವಾಹನಮನೇಱಿ ನಡೆದರನೇಕರ್ ॥ ೩೦ ॥

ಅಂತು ಸಂಗ್ರಾಮ ಭೂಮಿಗೆ ವಂದು ರಘುವೀರ ಬಲದ ಸೇನಾನಾಯಕರಪ್ಪ ನಳ ನೀಲರ ಪೇಟ್ಟಿಡೆಯೊಳೊಡ್ಡಿ ನಿಲ್ವುದುಂ—

ಉ ॥ ಅಪ್ರತಿಮ ಪ್ರತಾಪನಿಧಿ ಭೂಷಣರತ್ನ ಹಟತ್ಕಿರೀಟ ರ ।
ತ್ನಪ್ರಭೆ ಬೀಱೆ ಬೇಱೆ ಕುಡುಮಿಂಚಿನ ಗೊಂಚಲನುಗ್ರ ಯುದ್ಧ ಕೇ ॥
ಳೀ ಪ್ರಿಯನಪ್ರಮೇಯ ಬಲನುದ್ಗತ ಮುದ್ಗರ ಹಸ್ತನೇಱಿ ರ ।
ತ್ನಪ್ರಭಮಂ ವಿಮಾನಮನಗುರ್ವಿಸಿದಂ ನಭದೊಳ್ ವಿಭೀಷಣಂ ॥ ೩೧ ॥

ಮತ್ತಮಾತನ ಸಮಕ್ಷದೊಳ್ ನಿಜಾಕ್ಷೌಹಿಣಿಗಾಗಸವೆಡೆನೆಱೆಯದೆನಿಸಿ—

ಮ ॥ ಬಲ ನಾರಾಯಣರಂ ನಿರೀಕ್ಷಿಸಿ ದಶಗ್ರೀವಂ ರಣ ಕ್ಷೋಣಿಯೊಳ್ ।
ತಲೆಯಂ ತೂಗಿ ಪೊಡರ್ಪುದೋರ್ಪನೆನುತುಂ ಬಂದೊಡ್ಡಿ ತಾರಾಭ್ರ ಮಂ ॥
ಡಲಮಂ ಮೂವಳಸಾಗೆ ಮುತ್ತಿ ವಿಲಸದ್ಭೂಷಾ ಪ್ರಭಾಮಂಡಲಂ ।
ಬಲ ವಾರಾಶಿಯ ಮಧ್ಯದೊಳ್ ವರುಣನಂತಿರ್ದಂ ಪ್ರಭಾಮಂಡಲಂ ॥ ೩೨ ॥

ಮತ್ತಂ ತತ್ಸಮೀಪದೊಳಸಂಖ್ಯಾತ ವಾಹಿನೀಸಹಿತನಾಗಿ ನಿಜಕಿರೀಟ ರತ್ನ ಪ್ರಭೆ ನಭಮನಾವರಿಸೆ—

ಕಂ ॥ ಸುಗ್ರೀವಂ ಕಡುಕೆಯ್ದು ದ
ಶಗ್ರೀವನೊಳಿಱಿಯಲಾನೆ ಸಾಲ್ವೆನೆನುತ್ತುಂ ॥
ವಿಗ್ರಹ ಕಾಂಕ್ಷೆಯಿನಿರ್ದನು
ದಗ್ರಬಲಂ ರತ್ನಮಯ ವಿಮಾನಾರೂಢಂ ॥ ೩೩ ॥

ಮತ್ತಂ ವಿರೋಧಿಬಲ ಸಂವರ್ತ ಸಮಯನೆನಿಪ ಯುದ್ಧಾವರ್ತನುಂ ರಣ ಕ್ರೀಡಾನುಕೃತ ಕೃತಾಂತನೆನಿಪ ವಸಂತನುಂ ರಿಪುಕುಲ ಕುಮುದವನ ರದನಿಯೆನಿಪ

ಕುಮುದನುಂ ಕೀರ್ತಿ ಚಂದನರಸ ಚರ್ಚಿತ ದಿಗಂಗನನೆನಿಸಿದ ಮಹಾರ್ಚಿತನುಂ ವಿದ್ವಿಷ್ಟಕುಲ ಕಾಳೋರಗನೆನಿಪ್ಪುರಗನುಂ ಮೊದಲಾಗೆ ಪಲಬರುಂ ಖಚರ ಪರಿವೃಢ ರಂಬರಮನಾವರಿಸಿ ವಿವಿಧಾಯುಧ ಹಸ್ತರ್ ಜ್ಯೋತಿರಮರ ನಾಯಕರಂತಿರ್ಪುದು ಮಾ ವಿದ್ಯಾಧರಾಧಿರಾಜ ಮಧ್ಯದೊಳ್—

ಕಂ ॥ ಚಾಮರಮನಿಕ್ಕೆ ಖೇಚರ
ಕಾಮಿನಿಯರ್ ಮಣಿವಿಮಾನದೊಳ್ ಮಣಿಮಯ ಘಂ ॥
ಟಾ ಮಧುರ ಧ್ವನಿಯೊಳ್ ಕ
ಲ್ಪಾಮರರಿರ್ಪಂತೆ ರಾಮಲಕ್ಷ್ಮಣರಿರ್ದರ್ ॥ ೩೪ ॥

ಅಂತುಭಯ ಬಲಮುಂ ನೆಲನುಮಾಗಸಮುಮೆಡೆನೆಱೆಯದಂತು ಸಮುಚಿತ ವ್ಯೂಹ ಪ್ರತಿವ್ಯೂಹ ಸ್ಥಾಪನೆಗಳಂ ಯಥಾವಿಧಿಯಿಂ ಪ್ರಯೋಗಿಸಿ ತಂತಮ್ಮ ಮೊನೆಯ ನಾಯಕರ ಬಿರುದಿನ ಬೀರವದ್ದಳೆಯ ಪದಿರ ಪಱೆಯ ಕಹಳೆಯ ಕಳ ಕಳಂ ಕಿವಿಶಬ್ದಂಗಿಡೆ ದಿವಮನೆಯ್ದಿ ಮಿಳಿರ್ದು ಮಿಳ್ಳಿಸುವ ಪೆಸರ ಕುಱುಪಿನ ಪಳ ಯಿಗೆಗಳುಂ ಸಂದಣಿಸಿ ಮುಂದೆ ನಿಂದ ಪಲವುಂಸಿಂದಂಗಳುಂ ಕಣ್ಬೊಲಕ್ಕೆ ಬರೆ ಕನಲ್ದೊನಲ್ದು ಕದನಕೇಳೀ ಕುತೂಹಲರಾಗಿರ್ಪುದುಮಿತ್ತ ನಳನೀಲರುಮತ್ತ ಹಸ್ತ ಪ್ರಹಸ್ತರುಮೊಡನೆ ಕಡೆಗಾಲದ ನಂಜಿನ ಪ್ರಲಯ ಪ್ರಭಂಜನಂ ಬೀಸುವಂತೆ ಕೈ ವೀಸುವುದುಂ—

ಚ ॥ ಇಳೆ ಮೊಱಗಿತ್ತೊ ಭಾನುರಥಮುರ್ವಿಗೆ ಬಿಟ್ಟುದೊ ಶೇಷಕಂಠ ಕಂ ।
ದಳ ಕಱಿನಾಸ್ಥಿ ನುಚ್ಚುನೂಱಾದುದೊ ಗೋತ್ರನಗಂ ಪಿಳಿಗಿತ್ತೊ ಸಾಗರಂ ॥
ತಳರ್ದುದೊ ಮೇಱೆಯಿಂದಮುಱದಂದಿನಿತದ್ಭುತಮಾದ ನಾದಮು ।
ಗ್ಗಳಿಸದೆನಲ್ ವಿಘೂರ್ಣಿಸಿದುದಿರ್ಬಲದೊಳ್ ಸಮರಾನಕ ಸ್ವನಂ ॥ ೩೫ ॥

ಕಂ ॥ ಕರಿಯೊಳ್ ಕರಿ ಹಯದೊಳ್ ಹಯ
ಮುರುರಥದೊಳ್ ರಥಮುಮಾಳ್ಗಳೊಡನಾಳ್ಗಳ್ ಕಾ ॥
ಯ್ದುರವಣಿಸಿ ತಾಗೆ ತಾಗಿದು
ವೆರಡೊಡ್ಡುಂ ನೆಲದೊಳಾಗಸಂ ತಾಗುವವೋಲ್ ॥ ೩೬ ॥

ಮ॥ಸ್ರ॥ ಧರೆ ಕಂಪಂಗೊಳ್ವಿನಂ ಪೆರ್ವಡೆಗಳೆರಡುಮೋರೊಂದಱೊಳ್ ತಾಗೆ ತೂರ್ಯ।
ಸ್ವರಮುಂ ಕೋದಂಡ ಟಂಕಾರಮುಮಿಭ ರದ ಸಂಘಟ್ಟ ನಿರ್ಘೋಷಮುಂ ಜೋ ॥
ದರ ಬಾಣಾಸಾರ ಘೋರ ಧ್ವನಿಯುಮಸಿ ಖಣತ್ಕಾರಮುಂ ಪರ್ವಿ ರೋದೋಂ ।
ತರಮುಂ ಸಂವರ್ತಕಾಲ ಕ್ಷುಭಿತ ಜಲನಿಧಿ ಧ್ವಾನದಂತಾದುದೆತ್ತಂ ॥ ೩೭ ॥

ಮ ॥ ಕರವಾಳೊಳ್ ಕರವಾಳ್ ಪಳಂಚಿ ಕಿಡಿಗಳ್ ಪೇರಾನೆ ಪೇರಾನೆಯೊಳ್ ।
ಭರದಿಂದಂ ಮೊಗಮಿಕ್ಕೆ ದಂತ ಶಕಲಂಗಳ್ ತೇರ್ಗಳೊಳ್ ತೇರ್ಗಳು ॥
ಬ್ಬರಮೇಸಾಡೆ ತುರಂಗ ಕೇತನ ಚಯಂಗಳ್ ಕೊಂತದೊಳ್ ಕೊಂತಮಾ ।
ಸುರಮಪ್ಪಂತಿಡರೊತ್ತೆ ತೋರವೆಣಗಳ್ ಬೀೞ್ತಂದುವುಗ್ರಾಜಿಯೊಳ್ ॥ ೩೮ ॥

ಅಂತುಭಯ ಚತುರಂಗ ಸೇನೆ ಭರಂಗೆಯ್ದು ತಾಗಿ ಘಟ್ಟೊತ್ತಿಱಿವ ಸಮಯ ದೊಳ್—

ಕಂ ॥ ರಣಗತ್ತಲೆ ಕೈಮಿಗೆ ಬಿ
ಲ್ಲಣಿ ಕಡುಕೆಯ್ದುಭಯ ಬಲದೊಳಂಬಿಕ್ಕುವುದುಂ ॥
ಕಣೆ ಕಣೆಯನೊರಸೆ ಕದನಾಂ
ಗಣದೊಳ್ ಕಿಡಿ ಕೆದಱಿದತ್ತು ಕೆಂಡದ ಮೞೆಯಂ ॥ ೩೯ ॥

ಬಾಣಾಂಧಕಾರಮುದ್ಗತ
ಶೋಣಿತ ಸಂಧ್ಯಾಭ್ರಮಸ್ತಮಿತ ರವಿ ಕಿರಣ ॥
ಶ್ರೇಣಿ ಧನುರ್ಬಲ ಸಮರ
ಕ್ಷೋಣಿ ಚಮೂ ಕಾಲರಾತ್ರಿ ಪಡೆದುದಗುರ್ವಂ ॥ ೪೦ ॥

ಮಾರ್ಮಲೆದು ಬಿಲ್ಲ ಬಿತ್ತಿಗ
ರೊರ್ವೊರ್ವದಲಿಸೆ ಕಣೆಗಳುರ್ಚಿ ಪೋದುವು ನೆಱನಂ ॥
ಧರ್ಮಗುಣ ಚ್ಯುತರನ್ಯರ
ಮರ್ಮ ವಿಭೇದಿಗಳೆನಿಪ್ಪುದೊಂದಚ್ಚರಿಯೇ ॥ ೪೧ ॥

ಎಡೆಗಿಡೆ ಗಗನಂ ಪವನಂ
ನಡೆಗಿಡೆ ಬಿಲ್ವಡೆಗಳಿಸುವ ಕಣೆಗಳ್ ನೆಱನಂ ॥
ಬಿಡೆ ನಟ್ಟು ಸುಭಟರಸುವಂ
ನಡೆಯಿಸಿದುವು ಯಮಪುರಕ್ಕೆ ಯಮದೂತರವೋಲ್ ॥ ೪೨ ॥

ಚ ॥ ರವಿ ಕಿರಣಂಗಳಸ್ತಮಿಸೆ ಕತ್ತಲೆ ಕೈಮಿಗೆ ಸುತ್ತಿ ಮುತ್ತಿ ದಿ ।
ಗ್ವಿವರಮನಾಗಸಂ ಪೊಳೆವ ಪೊಂಗಱೆಯಿಂ ಕವಿಲಾಗೆ ಭೋರೆನಲ್ ॥
ಪವನ ಜವಂಗಳಿರ್ವಲದ ಬಿಲ್ವಡೆ ಪೊಕ್ಕಿಸೆ ಬಾಣ ಸಂಕುಲಂ ।
ಕವಿದುವು [1]ತೋಳೆವಿಂಡು ಕವಿವಂತೆಲೆಯಿಕ್ಕಿದ ಕಾನನಂಗಳಂ ॥ ೪೩ ॥

---

1. ತೋಳವಿಂಡು. ಗ. ಘ.

ಚ ॥ ನಡೆಗಿಡೆ ಗಾಳಿ ಪೂಟೆ ಗಗನಸ್ಥಳಿ ತೆಕ್ಕನೆ ತೀವೆ ದಿಙ್ಮುಖಂ ।
ನಡುವಿರುಳಂತೆ ಕತ್ತಲಿಸೆ ಪಟ್ಟಪಗಲ್ ರಣಮಂ ನಿರೀಕ್ಷಿಸಲ್ ॥
ಪಡೆಯದೆ ದೇವರುಂ ದಿವಿಜಕಾಂತೆಯರುಂ ಬೆಱಗಾಗೆ ಪೂಣೆವೊ ।
ಕ್ಕೊಡನೊಡನಾರ್ದೆರಪ್ಪಿಡೆಯ ಬಿಲ್ಪಡೆ ಬೀಱಿದುದಸ್ತ್ರವಿದ್ಯೆಯಂ ॥ ೪೪ ॥

ಮ ॥ ದೆಸೆಯಂ ನುಂಗಿ ದಿನೇಶನಂ ನೊಣೆದು ರೋದೋಭಾಗಮಂ ಪೀರ್ದು ಸಂ ।
ದಿಸಿ ಮುಂದ್ಯೆಸಿ ಧನುರ್ಬಲಂಗಳಿಸೆ ಬಾಣಶ್ರೇಣಿ ಸೇನಾಂಗದೊಳ್ ॥
ಬಿಸುನೆತ್ತರ್ ಪೊಱಪೊಣ್ಮೆ ಸೋರ್ತರೆ ಕರುಳ್ ಕಣ್ಣಾಲಿಗಳ್ ಸೂಸೆ ಖಂ ।
ಡಿಸೆ ಕೈಗಳ್ ಕಡಿಖಂಡಮಾಗೆ ಕಣಕಾಲ್ಗಳ್ ನಟ್ಟುವುಗ್ರಾಜಿಯೊಳ್ ॥ ೪೫ ॥

ಕಂ ॥ ತುಡುವಂಬಂ ಬಿಡುವಂಬಂ
ನಡುವಂಬಂ ಕಾಣ್ಬುದಾರ್ಗಮರಿದೆಂಬಿನೆಗಂ ॥
ಕಡುವಿಲ್ಲರ್ ಕಡುಕೆಯ್ದಿಸೆ
ಕಡುವೇಗದೆ ಪರಿದುವರುಣಜಲದ ಪೊನಲ್ಗಳ್ ॥ ೪೬ ॥

ಮ ॥ ಸೆರಗಂ ಪಾರದೆ ಪೂಣೆವೊಕ್ಕು ಪೊಱಮುಯ್ವಂ ತಾಗೆ ಕೈವೇಗಮು ।
ಚ್ಚರಿಯಂ ಪುಟ್ಟಿಸೆ ತೀವಿ ತೊಟ್ಟಿಸುವುದುಂ ನೇರ್ದಿಕ್ಕೆ ಸರ್ವಾಂಗಮಂ ॥
ಶರಜಾಲಂ ಬಿಸುನೆತ್ತರುಣ್ಮೆ ನೊರೆನೆತ್ತರ್ ಸೂಸೆ ಕರ್ನೆತ್ತರಂ ।
ಬಿಂವಿಟ್ಟರ್ವಿಸೆ ಕೂಡೆ ಬಿಲ್ಪಡೆ ಪಡಲ್ಪಟ್ಟಿತ್ತು ಸಂಗ್ರಾಮದೊಳ್ ॥ ೪೭ ॥

ಉ ॥ ಓವದೆ ಬಿಲ್ಲ ಬಿತ್ತಿಗರಡುರ್ತಿಸೆ ರೌದ್ರ ಶರಾಳಿ ರೋಮರೋ ।
ಮಾವಳಿದಪ್ಪದುರ್ಚೆ ಬಿಸುನೆತ್ತರ ಸುಟ್ಟುರಿ ಪರ್ವೆ ವಹ್ನಿ ಜ ॥
ಹ್ವಾವಳಿಯಂದಮಾಗೆ ತೊವಲಿಕ್ಕಿದ ಪೆರ್ವಟು ಬೇಗೆಗಿರ್ಚೆನೊಳ್ ।
ಬೇವವೊಲಿರ್ದುವಿರ್ವಲದ ಬಿಲ್ಲಣಿಗಳ್ ರಣರಂಗ ಭೂಮಿಯೊಳ್ ॥ ೪೮ ॥

ಚ ॥ ಸ್ತನಿತ ಧನುರ್ಗುಣ ಧ್ವನಿ ಶತಹ್ರದ ಶಸ್ತ್ರಮರೀಚಿ ನಾಡೆ ಕ ।
ರ್ಗನೆ ಕನಿವೊಡ್ಡು ಕಾರಮುಗಿಲಂತಿರೆ ಘೋರನೆ ಕೊಂಡುದಾಗಳಂ ॥
ಬಿನಮಟೆ ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪೆರ್ವೆಣಂ ರಣಾ ।
ವನಿತಲಮಿರ್ದುದಂಕುರಿತಮಾದವೊಲೊಕ್ಕ ಕರುಳ್ವಿಣಿಲ್ಗಳಿಂ ॥ ೪೯ ॥

ಮ ॥ ಸತತಂ ಸತ್ಪಥವರ್ತಿಗಳ್ ಋಜುಗಳತ್ಯುತ್ಕೃಷ್ಟ ವಂಶಂಗಳ ।
ನ್ವಿತ ಸದ್ಧರ್ಮ ಗುಣಂಗಳಸ್ತ್ರಶತಿಗಳ್ ನಿಸ್ತ್ರಿಂಶ ಧಾನುಷ್ಕ ಸಂ ॥
ಗತಿಯಿಂದಂ ಪರ ಮರ್ಮಭೇದಿಗಳೆನಲ್ ತೀಕ್ಷ್ಣಂಗಳುಂ ಮಾಂಸ ಲೋ ।
ಹಿತ ವಕ್ತ್ರಂಗಳುಮಾದುವೆನ್ನರುಮನೇಂ ದುಸ್ಸಂಗಮೇಗೆಯ್ಯದೋ ॥ ೫೦ ॥

ಉ ॥ ಆಸುರಮಾಗೆ ಕೈಯ ಕಣೆಗಳ್ ತವುವನ್ನೆಗಮೆಚ್ಚು ಬಿಟ್ಟು ಬಾ ।
ಣಾಸನಮಂ ಕರುತ್ತಿಱಿದು ಕಟ್ಟಿದ ಗೇಣುಡಿವನ್ನಮನ್ಯರ ॥
ಟ್ಟಾಸುರಮಾಗೆ ಕೂರ್ಗಣೆಗಳಿಂದಿಸೆ ಮುಂದಡಿಯಿಟ್ಟು ವೀರ ಸಂ ।
ನ್ಯಾಸದೊಳಪ್ಸರೋಗಣಮನಲ್ಲಿ ಕೆಲರ್ ಬಸದಾಗೆ ಮಾಡಿದರ್ ॥ ೫೧ ॥

ಕಂ ॥ ನೊಸಲೊಳ್ ನಟ್ಟಂಬಂ ಕಿ
ೞ್ತು ಸುಭಟನುಚ್ಚಳಿಸೆ ಪುಣ್ಣ ಬಾಯಿಂ ನೆತ್ತರ್ ॥
ನೊಸಲುರಿಗಣ್ಣುರಿಯೆನೆ ನ
ರ್ತಿಸುವ ಮರುಳ್ವಡೆಯ ನಡುವೆ ಮೃಡನವೊಲಿರ್ದಂ ॥ ೫೨ ॥

ಅಂತು ಬಿಲ್ವಡೆ ಪಡಲ್ವಡೆ—

ಕಂ ॥ [1]ಜವನೆರ್ದೆ ಬಿರ್ಚುವ ತೆಱದಿಂ
ತವುತರ್ಪುದುಮುಭಯ ಬಲಧನುರ್ಧರ ಸೈನ್ಯಂ ॥
ಜವನೆರ್ವೆವೋಱಿಗಳ್ ತಾ
ಗುವಂತೆ ತಾಗಿದರಡುರ್ತು ಕಡಿತಲೆಕಾಱರ್ ॥ ೫೩ ॥

ಕೆಂಬಲಗೆಯ ಪೊಳೆಪಿಂ ಸಂ
ಧ್ಯಾಂಬುದಮಂ ಪಡೆದು ಜಡಿದು ಕಡಿತಲೆದೂಗು ॥
ತ್ತುಂ ಬಿಡದೆ ಸಿಡಿಲ ಬಳಗಮಿ
ದೆಂಬಿನೆಗಂ ತಾಗಿದತ್ತು ಭಾರ್ಗವ ಸೈನ್ಯಂ ॥ ೫೪ ॥

ಆಗಳೆರ್ವಲದ ಕಡಿತಲೆಕಾಱರಲಗಲಗಿನೊಳ್ ಪಳಂಚಿ ತಾಗಿ ನಿರ್ಘಾತ ಪುಷ್ಪರಂ ತಾಳವಟ್ಟಮವಿತಮುಱಿತಮೆಂಬ ಪಲವುಂತೆಱದಿಱಿವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ ಕಡಿಖಂಡವಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಳ್ದು ಕಿಱೆಪ್ಪೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ ಪಱಿದು ಪಾಯ್ವ ಪಂದಲೆಗಳುಂ ದೆಸೆದೆಸೆಗೆ ತಿಣ್ಣಮಾಗೆ ಸೂಸುವ ಕಣ್ಣಾಲಿಗಳುಂ ಮುಱಿದ ಮೂಳೆಗಳುಂ ಪಱಿದ ಪೊರ್ಕುೞ್ಗಳುಂ ಸೋರ್ವ ಕರುಳ್ಗಳುಂ ಆರ್ವ ಮರುಳ್ಗಳುಂ ಕೆತ್ತುವ ತನಿಗಂಡಮುಂ ಕುಣಿವ ಮರುಳ್ತಂಡಮುಂ ನೆತ್ತರ ತೊಱೆಯುಂ ನೆಣದ ಪಳ್ಳಂಗಳುಂ ಪೆಣದ ಬಣಂಬೆಗಳುಂ ಕೋಟ್ಮಿದುಳ ಕೋಟ್ಕೆಸಱುಮಗುರ್ವವಡೆಯೆ—

---

1. ಜವನೆಲೆ ವೆರ್ಚಿನ. ಗ; ಜವನೆರೆ ಬೞ್ಚಿಪ. ಚ.

ಕಂ ॥ ಪಱಿದ ತಲೆ ರಾಗದಿಂ ಬೊ
ಬ್ಬಿಱಿದಾರ್ವಿನಮಟ್ಟೆ ಕಟ್ಟಿದಲಗಿಂದಂ ತ ॥
ಳ್ತಿಱುವುದುಮೊಡನೊಡನೆ ಬಯ
ಲ್ಪೊಱೆವರಿದುವು ರೌದ್ರ ರಸಮುಮದ್ಭುತ ರಸಮುಂ ॥ ೫೫ ॥

ತಲೆಗರೆಯುದಣ್ಮಿ ಸತ್ತರ
ತಲೆಗಳನಟ್ಟೆಯೊಳಮರ್ಚಿಕೊಂಡುಯ್ವೆಡೆಯೊಳ್ ॥
ತಲೆ ತಡವರಲಮುರಿಯರೇಂ
ತಲೆಯಂ ತಲೆವಿಡಿದು ಬಿಡದೆ ತಲೆವತ್ತಿದರೋ ॥ ೫೬ ॥

ಅಂತು ಪೇರಣಿ ಪೆಣಮಯಮಾಗೆ ಮೋಱೆದಪ್ಪಿದ ಪೂರ್ವಾಪರ ಪಾರಾವಾರ ವೀಚಿಯ ನಿಚಯಮೆನಿಸಿ—

ಕಂ ॥ ಸೆರಗಂ ಬೆರಗಂ ಬಗೆಯದೆ
ಪೊರೆದಾಳ್ದನ ಜೋಳವಾಳಿ ನಿಲೆ ಗೋಱಾಯ್ಲರ್ ॥
ಪರಿಯಿಪುದುಮೊಂದೆ ನೇಣೊಳ್
ಪರಿವಂತಿರೆ ಪರಿದುವುಭಯ ಬಲದ ಹಯಂಗಳ್ ॥ ೫೭ ॥

ಆಹವ ಕರ್ಕಶರಶ್ವಾ
ರೋಹಕರೊಟ್ಟೈಸಿ ಕೀಱು [1]ಬಿಟ್ಟಿಕ್ಕುವುದುಂ ॥
ಲೋಹಖುರಂಗಳ್ ಪರಿದುವು
ವಾಹಿನಿಯ ತರಂಗಮೆನೆ ತುರಂಗ ಚಯಂಗಳ್ ॥ ೫೮ ॥

ಉ ॥ ಕಟ್ಟಿದ ಪಂಚವಣ್ಣಿಗೆಯ ಪಟ್ಟೆಯ ತೊಂಗಲೊಳಿಂದ್ರಚಾಪಮಂ ।
ಪುಟ್ಟಿಸಿ ತೊಟ್ಟ ವಜ್ರಕವಚಚ್ಛವಿಯೊಳ್ ಚಪಲಾ ಕಲಾಪಮಂ ॥
ಪುಟ್ಟಿಸಿ ತಾಗಿ ತಟ್ಟಿಱಿದು ಲೋಹಿತ ವೃಷ್ಟಿಯನಾಸವಾರಿಗಳ್ ।
ಪುಟ್ಟಿಸೆ ಮೋಱೆದಪ್ಪಿ ಕವಿತಂದುದು ರೌದ್ರರಸಂ ರಣೋರ್ವಿಯೊಳ್ ॥ ೫೯ ॥

ಚ ॥ ಒದವಿದ ಲೋಹವಕ್ಕರೆಯ ವಾಹಕರಿಕ್ಕಿದ ಸೀಸಕಂಗಳೆ ।
ತ್ತಿದ ಕರವಾಳ ವಜ್ರಕವಚಂಗಳ ಕಾಂತಿ ದಿಗಂತರಾಳಮಂ ॥
ಪುದಿವಿನೆಗಂ ಮನಃಪವನ ವೇಗದೆ ನೋಟ್ಪರ ಕಣ್ಗಳೊಳ್ ಬಿಸಿ ।
ಲ್ಗುದುರೆಗಳಂದದಿಂ ಕುದುರೆಗಳ್ ಪೊಳೆದುಳ್ಕಿದುವಿರ್ವಲಂಗಳೊಳ್ ॥ ೬೦ ॥

---

1. ಬಿದ್ದಿಕ್ಕುವುದುಂ. ಚ.

ಅಂತು ಪರಿದು ತಾಗುವುದುಂ—

ಚ ॥ ಜವನರಥಾವು ಕೊಂಡುವೆನೆ ಕರ್ಕಡೆ ಕೊಂಡುವು ಚಕ್ರಮೆಯ್ದೆವಂ ।
ದುವು ಲಯಕಾಲ ಚಕ್ರಮೆಸೆ ನಾಳಿಯ ಕೋಲ್ ಜವನಾಳಿವೆಂಬಿನಂ ॥
ಕವಿದುವು ತೋಮರಂ ಜವನ ಡಾಮರವಾದುವು ಜಾನುದಘ್ನಮಾ ।
ದುವು ತರವಾರಿಯಿಂದಿೞಿಯೆ ಲೋಹಿತವಾರಿಗಳಾಸವಾರಿಗಳ್ ॥ ೬೧ ॥

ಉ ॥ ಪಾಯಿಸಿ ಪೊಯ್ಯೆ ಗೋಱಿಯಿಲರೊರ್ವರನೊರ್ವರಗುರ್ವು ಪರ್ವೆ ಕಾ ।
ಳಾಯಸ ಶುಕ್ತಿಯಿಂ ಸಮೆದ ಸೀಸಕದಿಂ ಬಹು ರಾಹು ಮಂಡಲ ॥
ಪ್ರಾಯಮೆನಿಪ್ಪ ದಾನವರ ಪಂದಲೆಗಳ್ ರವಿಮಂಡಲಂಬರಂ ।
ಪಾಯೆ ಬಿಸಿಲ್ ಪೊಡರ್ಪುಗಿಡೆ ಪಾಳಿಸಿದತ್ತುಪರಾಗ ಲೀಲೆಯಂ ॥ ೬೨ ॥

ಬಾಳುಡಿ ಪಾಱೆ ಬೀೞೆ ಪಗಲುಳ್ಕಿದವೊಲ್ ರುಧಿರಂ ದಿಗಂತಮಂ ।
ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ॥
ಪಾಳಿಸೆ ಸೂಸಿ ಕೋಱ್ಮಿದುಳ ತಂಡಮಿಳಾವಳಯಕ್ಕೆ ಬಿಟ್ಟು ತಾ ।
ರಾಳಿಗಳಂತಗುರ್ವಿಸೆ ಭಯಂಕರಮಾಯ್ತು ತುರಂಗ ಸಂಗರಂ ॥ ೬೩ ॥

ಕಂ ॥ ತಾಱುದ್ದಂಬರಮುತ್ಕ
ಲ್ಲೋಳಮಸೃಕ್ಸಿಂಧು ಕಾಱ್ಪುರಂಬರಿವಿನೆಗಂ ॥
ತಾಳುಂತಟ್ಟುಂಬೊಯ್ದರ್
ಗೋಱಿಯಿಲರ್ ಸುಭಟರಟ್ಟೆಗಳ್ ತೇಂಕುವಿನಂ ॥ ೬೪ ॥

ಉ ॥ ಆಹವ ದೋಹಳಂ ತಮಗೆ ಕೈಮಿಗೆ ಬಾಳ್ಜೞಿಪೊಯ್ಗೆ ಬೆರ್ಚದು ।
ತ್ಸಾಹಮನಪ್ಪುಕೆಯ್ದುೞಿದು ಪೋಗದೆ ಮಣ್ಮಱಿಯಾಗೆ ವಾಜಿಯುಂ ॥
ವಾಹಕರುಂ ಮರುಳ್ಪಡೆಯುಮಾಗಡೆ ತಮ್ಮೊಡನಾಡೆ ರಾಗದಿಂ ।
ವಾಹಕರಟ್ಟೆಯುಂ ತುರಗದಟ್ಟೆಯುಮಾಡಿದುವಾಜಿ ರಂಗದೊಳ್ ॥ ೬೫ ॥

ಚ ॥ ನೆರೆದು ನಿಶಾಟರೆಲ್ವುಱಿಯೆ ತಿಂದ ಗಜಂಗಳೆ ನಾವೆಯಾಗೆ ಪುಲ್ ।
ಮರುಳ ಕುಟುಂಬಮಂ ಪೆಣದ ಕೈಗಳೆ ಪುಟ್ಟುಗಳಾಗೆ ರಾಗದಿಂ ॥
ತೆರೆಯನಡಂಗೆ ಪೊಯ್ದು ಮುಗಿಲುದ್ದಮೆನಲ್ ಪರಿಯುತ್ತುಮಿರ್ಪ ನೆ ।
ತ್ತರ ತೊಱೆಯಂ ಮರುಳ್ತೊಱಿಸಿ ಪಾಯಿಸುತಿರ್ದುವು ಯುದ್ಧಭೂಮಿಯೊಳ್
॥ ೬೬ ॥

ಅಂತುಭಯ ಬಲದ ವಾಹಕ ವ್ಯೂಹಮೊರ್ಮೊದಲೊಳೆ ಮಣ್ಮಱಿಯಾಗೆ—

ಮ ॥ ಕ್ಷಿತಿಚಕ್ರಂ ನಿಜಭಾರದಿಂ ಕೆಣಱುದತ್ತೆಂಬನ್ನೆಗಂ ಚಕ್ರ ಚೀ ।
ತ್ಕೃತವಾ ಕಲ್ಪಘನಾಘನ ಸ್ತನಿತಮೆಂಬನ್ನಂ ಧನುರ್ದಂಡ ಟಂ ॥
ಕೃತಮುದ್ದಾಮಮಯಾಟ್ಟಹಾಸ ರಸಮೆಂಬನ್ನಂ ಹಯಾನೀಕ ಹೇ ।
ಷಿತಮತ್ಯದ್ಭುತಮಾಗೆ ತಾಗಿದುವು ತೇರ್ ತೇರೊಳ್ ರಣಕ್ಷೋಣಿಯೊಳ್ ॥ ೬೭ ॥

ಕಂ ॥ ರಥಿಗಳ್ ರಥಿಗಳನಿಸೆ ಸಾ
ರಥಿಗಳ್ ಸಾರಥಿಗಳೊಡನೆ ತಳ್ತಿಱಿಯೆ ಮರು ॥
ತ್ಪಥದೊಳ್ ಮಿಳ್ಳಿಸೆ ಪಟಿಯಿಗೆ
ರಥಂ ರಥಂಗಳೊಳದಿರ್ಚಿ ತಾಗಿದುವಾಗಳ್ ॥ ೬೮ ॥

ಚ ॥ ಕದನದೊಳಾರ್ದು ಸಾರ್ದಿಸೆ ಮಹಾರಥರಚ್ಚು ಸಿಡಿಲ್ದುದೀಸು ಸೂ ।
ಸಿದುದರಗೀಲ್ ಕಟಿಲ್ದುದು ಮಡಂ ಕಡಿವೋದುವು ಪಾಪೆ ರೂಪುಗೆ ॥
ಟ್ಟುದು ನೊಗನೋರೆವೋಯ್ತು ತುರಗಂ ಪಡಲಿಟ್ಟುದು ವೈಜಯಂತಿ ಬಿ ।
ಟ್ಟುದು ರಥ ಚೋದಕರ್ ಮಡಿದರಾಗಳಪಾರ ಶರ ಪ್ರಹಾರದಿಂ ॥ ೬೯ ॥

ಕಂ ॥ ಸಾರಥಿ ಮಡಿದೊಡಮುಳ್ಕದೆ
ತೇರಂ ಜೋಡಿಸುತುಮಂತ ರಥಿಯೊಳ್ ಸೆರಗಂ ॥
ಪಾರದೆ ತಳ್ತಿಱಿಯುತ್ತುಂ
ಸಾರಥಿಯುಂ ರಥಿಯುಮಾಗೆ ಕಾದಿದರಱಿಬರ್ ॥ ೭೦ ॥

ತಪ್ಪದೆ ರಣಮುಖದೊಳ್ ಮುಂ
ತಪ್ಪದಟರನಿಸೆ ಮಹಾರಥರ್ ಜವನಾಳಂ ॥
ತಪ್ಪ ಕಣೆ ರೋಮರೋಮಂ
ದಪ್ಪದೆ ನಾಂಟಿದುವು ಸೀಂಟಿದುವು ವಿಧಿಲಿಪಿಯಂ ॥ ೭೧ ॥

ಕೃತ ಶಸ್ತ್ರವಿದ್ಯರಪ್ರತಿ
ಹತ ಭುಜಬಲರುಭಯ ಬಲದ ರಥಿಗಳ್ ಗತಜೀ ॥
ವಿತರಾದರ್ ಸಂಗ್ರಾಮದೊ
ಳತಿರಥ ಸಮರಥ ಮಹಾರಥಾರ್ಧರಥರ್ಕಳ್ ॥ ೭೨ ॥

ತೇರೊಡ್ಡು ಗಾಳಿಗೊಡ್ಡಿದ
ನೀರದದೊಡ್ಡಿನವೊಲಾಗೆ ಕೂರಂಕುಶಮಂ ॥
ಚಾರಿಸುತುಮಾನೆಗಳನಾ
ಧೋರಣರಾ ರಣದೊಳಣೆದು ನೂಂಕಿದರಾಗಳ್ ॥ ೭೩ ॥

ಚ ॥ ಮೊಗವಡವಂ [1]ನಿಷಾದ ಕಳೆದಂಕುಶದಿಂದಣೆದಾರ್ದು ನೂಂಕೆ ಗಾ।
ಳಿಗೆ ಗಜಮೂಡಿದಂತೆ ಪರಿದಾನೆಗಳಾನೆಗಳೊಳ್ ಕಡಂಗಿ ಕಾ॥
ರ್ಮುಗಿಲವೊಲಟ್ಟಿ ಮುಟ್ಟೆ ಕಡುಪಿಂ ಬಿಡೆ ಪೋರ್ದುವು ಕೋಡ ಕೋಟಿಯೊಳ್।
ಲ್ಲುಗುತರೆ ಕೋಳ್ಮಿದುಳ್ಪೆರಸಿ ಮಸ್ತಕ ಪಿಂಡದ ಮೌಕ್ತಿಕೋತ್ಕರಂ ॥ ೭೪ ॥

ನಡುಗೆ ಧರಾತಲಂ ಕದಳಿಕಾ ಪರಿಘ ಪ್ರತಿಘಾತದಿಂ ಮುಗಿಲ್।
ಪಡಲಿಡೆ ಕೋಪಮುಂ ಜವಮುಮೇೞ್ಗೆಯುಮಾಸುರಮಪ್ಪಿನಂ ಮದಂ॥
ಬಿಡುತರೆ ಕೇೞ ತಾಗಿದುವೆರಡ್ಪಡೆಯಾನೆಗಳಾನೆಯೊಳ್ ಸಿಡಿಲ್।
[2]ಸಿಡಿಲೊಳೆ ತಾಗಿದಂತೆ ಕಿಡಿ ಬೀೞ್ತರೆ ತಾಗೆ ರದಂ ರದಂಗಳೊಳ್ ॥ ೭೫ ॥

ಮ ॥ ಉಗುವೇಂಟುಂಮದಧಾರೆ ಬಲ್ಸರಿಗಳಂ ದಂತಾಂಶುಗಳ್ ಬಳ್ಳಿಯಿಂ।
ಚುಗಳಂ ಬಿೞ್ಚನೆ ಬಿಟ್ಟ ದಿಟ್ಟ ಸಿಡಿಲಂ ಕೇೞ್ಮಾಡೆ ಬಂದೆಯ್ದೆ ಕಾ॥
ರ್ಮುಗಿಲೊಡ್ಡಂ ಮುಗಿಲೊಡ್ಡು ತಾಗುವವೊಲ್ಪೆತಂದಾನೆಯೊಡ್ಡಾನೆಯೊ।
ಡ್ಡುಗಳೊಳ್ ತಾಗಿದುವದ್ಭುತ ಸ್ತನಿತಮೆಂಬನ್ನಂ ಬೃಹದ್ಬೃಂಹಿತಂ ॥ ೭೬ ॥

ಅಂತು ದಂತಿಘಟೆ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ ಜೋದರ್ ಜೋದರೊಳೇಸಾಡೆಯುಂ ಮಧ್ಯಮ ನಿಷಾದಿಗಳ್ ಮಧ್ಯಮ ನಿಷಾದಿಗಳೊಳಸಿ ಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ ವಜ್ರಮುಷ್ಟಿ ಮುದ್ಗರ ಚಕ್ರ ಪರಶು ತೋಮರ ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳೆೞ್ಚುಮಿಟ್ಟುಮಿಱಿದುಂ ಪೊಯ್ದು ಮತಿಭಯಂಕರಾಕಾರಮಾಗೆ ಕಾದುವಾಗಳ್—

ಕಂ ॥ ಕೇತನ ದಂಡಾಹತ ಜೀ
ಮೂತ ಘಟಾ ಪಟಲದಿಂ ರದಾಹತ ಮದವ॥
ನ್ಮಾತಂಗ ಕುಂಭದಿಂ ರಣ
ಭೂತಲದೊಳ್ ಬಿೞ್ದುವೊಡನೆ ಮೌಕ್ತಿಕ ಮಣಿಗಳ್ ॥ ೭೭ ॥

ಚ ॥ ಕರಿಘಟೆಯಿರ್ಕೆಲಂಬಿಡಿದು ಕತ್ತಿಗೆಯಂ ಜಡಿಯುತ್ತುಮಂಗ ರ।
ಕ್ಷರ ಪಡೆ ತಾಗೆ ಮಾರ್ಪಡೆಯ ಕತ್ತಿಗೆಯೊಳ್ ಜವನೆರ್ಮೆವೋರಿಯಂ॥
ತಿರೆ ತಲೆಮಟ್ಟು ತಳ್ತಿಱಿದು ಮೆಯ್ವಸದಿಂ ಜವನುಂಡು ಕಾಱಿದಂ।
ತಿರೆ ಕಡಿಖಂಡಮಾಗೆ ಕರಮಾಸುರಮಾದುದು ಸಂಗರಾಂಗಣಂ ॥ ೭೮ ॥

ಕಂ ॥ ಕಾಲ್ಗಾಪಿನ ಬಲ್ಲಣಿಯೊಳ್
ಬಲ್ಗಿಯ್ತ್ತುದಿನಿಱಿದು ಮಡಿಯೆ ನೆತ್ತರ ತೊಱೆಗಳ್ ॥

---

1. ಬಿಸುಟ್ಟು. ಗ. ಚ. 2. ಕಿಡಿಯಪೊಲಾಗೆ ತಾಗಿ.

ಗಲ್ಗಲನೆ ಪಱಿಯೆ ಕರುಳ ಪಿ
ಣಿಲ್ಗಳೆ ತೆಪ್ಪಂಗಳಾಗೆ ತೇಂಕಿದರರೆಬರ್ ॥ ೭೯ ॥

ಮ॥ ಮಣಿಯೇಱುಂಗೆ ದಿಶಾಗಜಂ ಪೆಳಱೆ ಕೋಡೇಱುಂಗೆ ಮಾಱಾನೆಗಳ್ ।
ರಣದೊಳ್ ಬೆಂಗುಡೆ ಜೋದರೆಚ್ಚ ಪಲವುಂ ನಾರಾಚದೇಱುಂಗೆ ಬ ॥
ಲ್ಲಣಿಗಳ್ ಬೆಂಗುಡೆ ಕೇತನ ಪ್ರಚಯದಳ್ಳೇಱುಂಗೆ ನೋೞ್ಪಿಪ್ಪರೋ ।
ಗಣಮುಂ ದೇವರುಮಳ್ಕೆ ವಾರಣ ರಣಂ ಕಣ್ಗೇನಗುರ್ವಾದುದೋ ॥ ೮೦ ॥

ಚ॥ ಅಗದೊಳಗಂ ಮೊಗಂಬುಗುವವೋಲ್ ಮದದಾನೆಗಳಾನೆಯೊಳ್ ಮೊಗಂ ।
ಬುಗುತರೆ ದಂತದಂಡ ಹತಿಯಿಂ ಬಿಸುನೆತ್ತರ ಧಾರೆಗಳ್ ಭುಗಿ ।
ಲ್ಭುಗಿಲೆನೆ ಪಾಯ್ದು ಪೊಣ್ಮಿದುವು ಕೋೞ್ಮಿದುಳೊಕ್ಕುವು ಬಲ್ಗರುಳ್ಗಳಿ ।
ರ್ಬಗಿಯೆನೆ ದೋಣಿವಿಟ್ಟುದು[1]ರಮುಳ್ದರಿವಿಟ್ಟುದು ಕುಂಭ ಮಂಡಲಂ ॥ ೮೧ ॥

ಇಭಮಿದಿರಾಗಿ ತನ್ನೊಡನೆ ತಳ್ತಿಱಿದಾಜಿಯೊಳಣ್ಮಿ ಸತ್ತ್ವನಂ ।
ಸುಭಟನನಾಗಸಕ್ಕೆ ಪಿಡಿದೆತ್ತಿ ಭಯಂಕರಮಾಗೆ ಮಾರ್ಬಲ ॥
ಕ್ಕಭಿಮುಖಮಾಗಿ ಕೀಱು ಪರಿದತ್ತು ಸುರಪ್ರಮದಾಜನಕ್ಕೆ ದು ।
ರ್ಲಭನೆನಿಸಿರ್ದ ವಲ್ಲಭನನಾಪದದೊಳ್ ಪದೆದೀವ ಮಾೞ್ಕೆಯಿಂ ॥ ೮೨ ॥

ಕಂ॥ ಕರಿಗಳ ಹರಿಗಳ ರಥಿಗಳ
ನರರ ಕಬಂಧಂಗಳೊಡನೆ ಭೂತಗಣಂಗಳ್ ॥
ನೆರೆದಾಡಿದು[2]ವದ್ಭುತಮಾ
ಸುರಮುಚ್ಚರಿ ರೌದ್ರಮಾಗೆ ರಣ ಮಂಡಲದೊಳ್ ॥ ೮೩ ॥

ಅಂತು ಮಾಱಾಂತು ಕಾದಿ ಖಚರ ಚಾತುರ್ದಂತಮಂತಕನ ಪುರಮನೆಯ್ದೆ—

ಕಂ॥ [3]ಬಲಮುಱಿದೊಡಳವುಗಱಿದಾ
ಬಲಿಮುಖ ಬಲಮಾಸೆಗೆಯ್ಯೆ ನಳ ನೀಳರ ತೋ ॥
ಳ್ವಲಮಂ ಪೊಗೞಿಸಿದರ್ ದೋ
ರ್ವಲಮಂ ಹಸ್ತಪ್ರಹಸ್ತರಿರ್ವಲದಿಂದಂ ॥ ೮೪ ॥

ಅಂತು ವಾನರ ಬಲಮೆಲ್ಲಮೊಲ್ಲನುಲಿದೋಡಿ ನಳ ನೀಳರ ಮಱೆಯಂ ಪುಗುವುದುಂ—

---

1. ಶಿರಂ ಬಿರಿಕೆರ್ದುದು. ಗ. 2. ವತ್ಯದ್ಭುತ ತರ. ಚ. 3. ಬಲಮುಱಿದಿರೆ ಮದ ಮುಱಿದಿರೆ. ಗ. ಘ.

ಕಂ ॥ ಇಳೆ ನಡುಗುವಿನಂ ರಥಮಂ
ನಳನ ವರೂಥಕ್ಕೆ ಸೈತುವರಿಯಿಸಿ ಕೋಪಾ ॥
ನಳನುದ್ಧಮುರಿಯೆ ಹಸ್ತಂ
ಕೆಳರ್ದಂತಕನಂತೆ ಕಲುಷ ವಶ ಗತನಾದಂ ॥ ೮೫

ಆಗಿ ನಳ ನಿರೀಕ್ಷಣದಿನನ್ಯಜನ್ಮ ಜನಿತ ಕ್ರೋಧವತ್ಯದ್ಭುತವಾಗೆ—

ಕಂ ॥ [1]ತ್ರಸ್ತಾರಿ ಧನುರ್ಜ್ಯಾ ನಿನ
ದ ಸ್ತನಿತಂ ಪೊಣ್ಮೆ ನಳನವೇಲಾ ಕ್ಷಣದೊಳ್ ॥
ದುಸ್ತರ ತೇಜಂ ಕಱೆದಂ
ಹಸ್ತದ ಮುಱೆಯೆನಿಸಿ ಹಸ್ತನಂಬಿನ ಮುಱೆಯಂ ॥ ೮೬

ಆಗಳವನ ಶರವರ್ಷಮಂ ನಳಂ ಬಡವಾನಳನಂತೆ ತವಿಸಿ—

ಕಂ ॥ ಪೊಱಮುಯ್ವಂತಾಪನ್ನಂ
ಪೆಱೆಯಂಬಂ ತೀವಿ ತೊಟ್ಟು ಹಸ್ತನ ತಲೆಯಂ ॥
ಪಱಿಯೆಚ್ಚಂ ಸಂಗರದೊಳ್
ಮಱುವಕ್ಕಂ ನಳನ ಕಣೆಗೆ ಮಣಿಯದುದುಂಟೇ ॥ ೮೭

ಅಂತು ಹಸ್ತನಸ್ತಮಿಸುವುದುಂ ಪ್ರಹಸ್ತನತಿ ಕುಪಿತನಾಗಿ ನಿಜ ವರೂಥಮ
ನಳನ ವರೂಥಕ್ಕದಿರದಿದಿರಂ ಪರಿಯಿಸುವುದುಮಾ ಸಮಯದೊಳ್ ನೀಲಂ ನೀ
ಮೇಘದಂತೆ ಗರ್ಜಿಸಿ ನಳನಂ ಪೆಱಗಿಕ್ಕಿ ನಿಲ್ಪುದುಂ—

ಕಂ ॥ [2]ಎಂತು ಪೆಱಗಿಕ್ಕಿ ನಳನಂ
ನೀಂ [3]ತಱಿಸಂದಾಂತೆ ಬಲ್ಪುಗಿಡದಣ್ಣಣ್ಮಂ ॥
ದಂತಕನೆ ಮುಸಗಿ ಮೇಲೆ
ಟ್ಟಂತೆಪೊಲಿರ್ದಂ ಪ್ರಹಸ್ತನಪ್ರತಿಮ ಬಲಂ ॥ ೮೮

ಅಂತು ಸೆರೆದು ನಿಂದು—

ಕಂ ॥ ಪಾಱುಂಬಳೆಯಿಂದಿಡೆ ಜವ
ಮಾಱದೆ ಕಡುವೇಗದಿಂದವೆಯ್ತುರ್ಪುದುಮ ॥
ಯ್ದಾಱು ಕಡಿವೋಗಲೆಚ್ಚಂ
ಮಾಱಾಂಪುದು ಮೊಗ್ಗೆ ನಳನುಮಂ ನೀಲನುಮಂ ॥ ೮೯

---

1. ಪ್ರಸ್ತುರಿತ. ಗ. 2. ಅಂತು. ಚ. 3. ತಱಿಸಂದಂತೆ. ಚ.

ಅಂತವನ ನಚ್ಚಿನ ಕೈದುವಂ ಕಡಿಖಂಡಮಾಗೆಚ್ಚು—

ಮ ॥ ಮೊನೆಯಂಬಂ ದೊಣೆಯಿಂದಮುರ್ಚಿ ತಿರುವಾಯೊಳ್ ಸಾರ್ಚಿ ಬೇಗಂ ಪ್ರಹ।
ಸ್ತನ ವಕ್ಷಸ್ಸ್ಥಲಮಂ ಕರುತ್ತಿಸುವ್ರದುಂ ಕಾಲಾಹಿವೊಲ್ ಕೊಂಡು ತೊ॥
ಟ್ಟನೆ ಬೆನ್ನಿಂ ಪೊಱಮಟ್ಟು ಪೋಗೆ ಸರಲಿಂ ಮುಂ ಪೋದುದಾಯುಃಪ್ರಭಂ।
ಜನಮೆಂದಂದಿದಿರಾಂಪರಾರ್ ವಿಜಯಲಕ್ಷ್ಮೀಲೋಲನಂ ನೀಲನಂ ॥೯೦॥

ಅಂತು ಹಸ್ತಪ್ರಹಸ್ತರಸ್ತಮಿಸೆ—

ಕಂ ॥ ಕಾವೆಂ ನಳನೀಳರ್ ಕೊಲೆ
ಸಾವ ದಶಾನನನ ಬಲಮನಿಂದಿಂಗೆಂಬಂ ॥
ತಾವೃತ ಸಾಂಧ್ಯ ದ್ಯುತಿ ರಾ
ಜೀವ ಸಖಂ ಪಶ್ಚಿಮಾಬ್ಧಿಯೊಳ್ ಮೆಯ್ಗರೆದಂ ॥ ೯೧ ॥

ಅಂತು ನೇಸಱ್ ಪಡುವುದುಮುಭಯ ಬಲಮುಪಹಾರ ತೂರ್ಯಮಂ ಪೊಯಿಸಿ ತಂತಮ್ಮ ಬೀಡಿಂಗೆ ಪೋಗಿ ಸಮರ ಪರಿಶ್ರಮಮನಾಱಿಸುತ್ತೋಲಗಂಗೊಟ್ಟಿರ್ಪುದು ಮಾ ಸಮಯದೊಳ್—

ಮ ॥ ನಳನೀಳರ್ ಭುಜ ವೀರ್ಯಮಂ ಮೆಚ್ಚಿದುದಂ ಹಸ್ತಪ್ರಹಸ್ತರ್ ದ್ವಿಷ।
ದ್ಬಳಮಲ್ಲಾಡುವಿನಂ ಕರುತ್ತಿಱಿದು ದೇವಸ್ತ್ರೀಯರುತ್ಸಂಗಮಂ ॥
ಗಳ ಪೀಠಸ್ಥಿತರಾದುದಂ ನೆರೆದು ಚಾತುರ್ದಂತಮುಂ ಕಾದಿ ಮು।
ಣ್ಮುಱಿಯಾದಂದಮುಮಂ ತಗುಳ್ಚು ಪೊಗೞುತ್ತಿರ್ದರ್ ಕೆಲರ್ ಖೇಚರರ್॥೯೨॥

ಅದಲ್ಲದೆಯುಂ—

ಚ ॥ ಕೆಲರ್ಗನುಲೇಪಮಂ ಕೆಲರ್ಗೆ ಭೂಷಣಮಂ ಕೆಲರ್ಗಾಯುಧಂಗಳಂ।
ಕೆಲರ್ಗೆ ತನುತ್ರಮಂ ಕೆಲರ್ಗೆ ವಾಜಿಗಳಂ ಕೆಲರ್ಗುನ್ಮದೇಭಮಂ ॥
ಕೆಲರ್ಗೆ ವರೂಥಮಂ ತಡೆಯದಟ್ಟುವ ದಂದುಗದಿಂದಮುಂದು [1]ಕಾ।
ಣಲೆ ಬೆಳಗಾದುದಿರ್ವಲದ ನಾಯಕರ್ಗಂ ಕದನಾನುರಾಗದಿಂ ॥ ೯೩ ॥

ಅನಂತರಂ—

ಕಂ ॥ ಕದನ ರಸಾಸ್ವಾದನ ಲೋ
ಭದಿನೆರಡುಂ ಪಡೆಯುಮೊಡನೆ ಪಾರ್ದಿರ್ದಪುವೆ ॥
ನ್ನುದಯಮನಾನಿಂ ತಡೆದಿ
ರ್ಪುದು ಪದನಲ್ತೆಂದು ದಿನಪನುದಯಂಗೆಯ್ದಂ ॥ ೯೪ ॥

1. ಕಣ್ಗಲೆ. ಗ. ಘ.

ಚ ॥ ಜವನಿಕೆಯಿಂ ನಿಶಾಚರ [1]ಕಬಂಧಮನಾಡಿಸಲಂಧಕಾರಮಂ ।
ರವಿ ಕಳೆದಿಕ್ಕೆ ತನ್ನ ಕರಪಲ್ಲವದಿಂದುಷೆ ಪಿಂಗೆ ಪಣ್ಣಿ ಬಂ ॥
ದುವು ಕರಿ ಕೇಱಿಬಂದುವು ಹಯಂ ರಣಭೂಮಿಗೆ ತೇರ್ ತೆರಳ್ದು ಬಂ ।
ದುವು ತಱಿಸಂದು ಬಂದುವು ಕಡಂಗಿ ಧನುರ್ಬಲಮಿರ್ವಲಂಗಳೊಳ್ ॥೯೫॥

ಅಂತು ಬಂದು ಕೈವೀಸುವುದುಂ—

ಕಂ ॥ ಅಂತುಭಯ ಬಲದ ಚಾತು
ರ್ದಂತಂ ಪೇಸೇಟಿಕೆ ಕಾದಿ ದೆಸೆವಲಿಗುಡಲಿಂ ॥
ದಂತಕ[2]ನಡುವುಟ್ಟಿಯನ
ಟ್ಟಂತಿರೆ ಕಡಿಖಂಡಮಾಯ್ತು ರಣ ಮಂಡಲದೊಳ್ ॥ ೯೬ ॥

ಆ ಸಮಯದೊಳ್ ಸಂಗ್ರಾಮ ರಸ ರಸಿಕರಾಗಿ—

ಕಂ ॥ ಮಾರೀಚ ಸಿಂಹ ಕಟಿಗಳ್
ಚಾರಣ ಶುಕ ಮಕರ ವಿಘ್ನ ಶರಪಂಜರ ಗಂ ॥
ಭೀರ ಮದನಾಂಕುಶರ್ ಸಮ
ರಾರಂಭದೊಳಿರ್ದರುಜದೆ ವಜ್ರಪ್ರಮುಖರ್ ॥ ೯೭ ॥

ಅಂತಿರ್ದ ಪೌಲಸ್ತ್ಯನ ಪದಿಂಬರ್ ಸಾಮಂತರೊಳಂ ಪ್ರಭಾಮಂಡಲನ ಸಾಮಂತರ್ ಸಂತಾಪನುಂ ಪ್ರಥಿತನುಂ ನಂದನನುಂ ಉದ್ಧತನುಂ ಮಹೋದಧಿಯುಂ ಉದ್ದಾಮಕೀರ್ತಿಯುಂ ವಿಘಟನುಂ ಉದ್ದಾಮನುಂ ಗಜನುಂ ದುರಿತಾಸ್ತ್ರನುಮೆಂಬ ಪದಿಂಬರುಮೋರೊರ್ವರಿಂ ಗಱಿಸನ್ನೆಗೆಯ್ದು ಕಾದುವಲ್ಲಿ—

ಕಂ ॥ ಸಂತಾಪನಂ ವಿರೋಧಿಗೆ
ಸಂತಾಪಮನುಂಟುಮಾಟ್ಪಿ ಬಲ್ಲಾಳಂ ಕ ॥
ಲ್ಪಾಂತ ಕೃತಾಂತನವೊಲ್ ಕೊಂ
ದಂ ತಲ್ಲಳಿಪಂತು ಮಾರ್ಬಲಂ ಮಾರೀಚಂ ॥ ೯೮ ॥

ಉ ॥ ರಾವಣಸೇನೆ ಬಾಜಿಸೆ ಜಯಾನಕಮಂ ರಘುರಾಮ ಸೇನೆಯೊಳ್ ।
ತೀವೆ ಭಯಾನಕಂ ಗಗನ ಮಂಡಲಮಂ ನಿಜ ಚಾಪ ಟಂಕೃತಂ ॥
ಮೂವಳಸಾಗೆ ಮುತ್ತೆ ಮಕರಂ ಬಡವಾಮುಖದನ್ನಮಪ್ಪ ಬಾ ।
ಣಾವಳಿಯಿಂ ಮಹೋದಧಿಯ ಜೀವನಮಂ ತವುವನ್ನಮಾಂಟದಂ ॥ ೯೯ ॥

---

1. ಕದಂಬ. ಚ. 2. ನಡೆ. ಗ.

ಕಂ ॥ ಉದ್ದಾಮನ ಪಂದಲೆ ಪಱಿ
ದುದ್ದಂಪಾಱುವಿನಮಿಸುವುದುಂ ಗಂಭೀರಂ ॥
ಬದ್ದವಣದ ಪಱಿಗಳ್ ಕಿವಿ
ಸದ್ದಂಗಿಡೆ ಪೊಯ್ದುವಿಂದ್ರವೈರಿಯ ಪಡೆಯೊಳ್ ॥ ೧೦೦ ॥

ಸಿಂಹಕಟಿ ರಿಪು ಮದದ್ವಿಪ
ಸಿಂಹಂ ಪ್ರಥಿತನನಜೇಯ ಬಾಹಾಬಲನಂ ॥
ಸಂಹರಿಸಿದಂ ದಶಾಸ್ಯನ
ಸಿಂಹಾಸಂದಿಯುನಸಂಚಲಂಮಾಡುವವೋಲ್ ॥ ೧೦೧ ॥

ಅಂತು ನಿಜವರೂಥಿನಿಯ ನಾಲ್ವರುಂ ಮಹಾಸಾಮಂತರಂತಕ ಜಠರಾಗ್ನಿಗಾಹುತಿಯಪ್ಪುದುಂ ಘೃತಾಹುತಿವಡೆದ ಹುತವಹನಂತುಱಿದ ಸಾಮಂತರತಿಕುಪಿತರಾಗಿ ರಾವಣನ ವರೂಥಿನಿಯುಂ ಗಱಿಸನ್ನೆಗೆಯ್ದು ಲಯ ಸಮಯದ ಭೈರವನ ಭೀಕರಾಕಾರಮನಪ್ಪುಕೆಯ್ದು ಕಡುಕೆಯ್ದು ಕಾದುವಲ್ಲಿ—

ಮ॥ಸ್ರ॥ ಎರಡುಂ ತೇರೊಂದನೊಂದೆಯ್ತರೆ ನಡುಗೆ ನೆಲಂ ನೇಮಿ ಸಂಘಟ್ಟದಿಂದಂ।
ಬರದೊಳ್ ಮತ್ತೇಭ ಸಿಂಹ ಧ್ವಜಮಭಿನಯಮುಂ ಬೀಱೆ ಕೋದಂಡ ಟಂಕಾ ॥
ರ ರವಂ ಕೈಗಣ್ಮೆ ಸಾರ್ತಂದಿಸೆ ದಶಮುಖ ಸಾಮಂತನಂ ವಿಘ್ನನಂ ತೋ।
ಮರದಿಂದುದ್ದಾಮನಿಟ್ಟಂ ಬಿಡೆ ಕಡುನೆಱನಂ ನಟ್ಟು ತೂಗಾಡುವನ್ನಂ ॥೧೦೨॥

ಕಂ ॥ ಇಡೆ ವಜ್ರಿ ವಜ್ರ ಹತಿಯಿಂ
ಕೆಡೆದ ಕುಲಾಚಲದ ಮಾಟಿಕ್ಕೆಯಿಂದಂ ವಿಘ್ನಂ ॥
ಕೆಡೆದಂ ತೋಮರ ಹತಿಯಿಂ
ದೊಡನುಣ್ಮೆ ಜಯಾನಕ ಸ್ವನಂ ಕಪಿಬಲದೊಳ್ ॥ ೧೦೩ ॥

ದನುಜೇಂದ್ರನ ಸೇನೆಯ ವ
ಜ್ರನ ದೋರ್ದಂಡಂಗಳಂ ಕುಠಾರಾಯುಧದಿಂ ॥
ಮನುಜೇಂದ್ರನ ಸೇನೆಯ ವಿಘ
ಟನಾಜಿಯೊಳ್ ಪೋಡುಗಾಱನಂತಿರೆ ತಱಿದಂ ॥ ೧೦೪ ॥

ಆ ರಣರಂಗದೊಳುನ್ಮದ
ವಾರಣಮುಜಗರಮನಿಕ್ಕುವಂತವಯುವದಿಂ ॥
ಚಾರಣನಂ ಕೊಂದಿಕ್ಕಿದ
ನಾರಳವುದ್ಧತನವಾರ್ಯ ಬಾಹಾವೀರ್ಯಂ ॥ ೧೦೫ ॥

ಕಂ॥ ಎಡೆವಲಿಗುಡಲೆಂದಂತಕ
ನಡುವುೞ್ಗಿಯನಟ್ಟಿ ತೆಱದೆ ತಾರುಂತಟ್ಟಂ॥
ಗೆಡೆದಿರೆ ರಣದೊಳ್ ಮತ್ತಂ
ಕಡಿಖಂಡಮುದಾಯ್ತು ನೋಡೆ ರಣಮಂಡಲದೊಳ್ ॥ ೧೦೬ ॥*

ಶುಕನಂ ದುರಿತಾಸ್ತ್ರಂ ಕಿಂ
ಶುಕ ವಿಟಪಿಯನಳುರ್ವ ದಾವ ಪಾವಕನಂತಂ॥
ತಕ ಹೋಮಕುಂಡದೊಳ್ ನೂಂ
ಕೆ ಕಂಡು ಕಾಲಾಗ್ನಿಯಂತೆ ರಾವಣನುರಿದಂ ॥ ೧೦೭ ॥

ಶರ ಪಂಜರನಂ ಯಮ ಕುಂ
ಜರಕ್ಕೆ ಕಡಿಕೊಂಬುಮಾಡಿ ಕಡಿಖಂಡಮೆನಲ್ ॥
ಕರವಾಳಿಂ ನಂದನನಾ
ಜಿರಂಗದೊಳ್ ಪೊಯ್ಯೆ ಪೊಯ್ಬುವುತ್ಸವ ಪಟಹಂ ॥ ೧೦೮ ॥

ಗಜರಿಪು ನಖರ ಪ್ರಕರದೆ
ಗಜಮಂ ಸೀಳ್ವೊಟ್ಟವಂತೆ ಮದನಾಂಕುಶನಾ ॥
ತ್ಮಜಯಾಸಿಯಿಂದೆ ಕೊಂದಂ
ಗಜನಂ [1] ರಾವಣನ ಸೇನೆ ಸುಗಿದುಗಿವಿನೆಗಂ ॥ ೧೦೯ ॥

ಅಂತೆರಬ್ಬಲಮುಮೊಟ್ಟಜೆಗಿಡದೆ ತಳ್ತಿಱಿದು ಪಾಳಿಯುನಸಕಱಿಯುಪಱಿಯೆ–

ಉ ॥ ಚಂಡ ಪರಾಕ್ರಮರ್ ದನುಜ ನಾಯಕರುಂ ರಣ ರಾಗದಿಂ ಪ್ರಭಾ ।
ಮಂಡಲ ಮುಖ್ಯ ನಾಯಕರುಮೊರ್ವರೊಳೊರ್ವರಿದಿರ್ಚುವಂದಮಂ ॥
ಕಂಡು ಕೃಪಾಳು ಮಾಣಿಸುವೆನಿಂದಿನ ಯುದ್ಧಮನೆಂಬ ಮಾಱ್ಕೆಯಿಂ ।
ಚಂಡಮರೀಚಿ ಪಶ್ಚಿಮ ಪಯೋಧಿಯೊಳೊಯ್ಯನೆ ಮೆಯ್ಯಸಿಕ್ಕಿದಂ॥ ೧೧೦ ॥

ಅಂತು ನೇಸರ್ ಪಡುವುದುಂ—

ಕಂ ॥ ಅಪಹಾರ ತೂರ್ಯಮಂ ಪೊಯಿ
ಸಿ ಪಡೆಗಳೆರಡುಂ ರಣೋರ್ವಿಯಿಂದಂ ತಂತ ॥
ಮ್ಮ ಪುರಕ್ಕೆ ಪೋದುವಾನಕ
ವಿಪುಲ ರವಂ ಗಗನ ವಿವರಮಂ ತೀವುವಿನಂ ॥ ೧೧೧ ॥

* ಈ ಪದ್ಯವು ಗ ಪುಸ್ತಕದಲ್ಲಿ ಮಾತ್ರ ಇದೆ. 1. ರಾಘವನ ಸೇನೆ ಸುಗಿದುಗುವಿನೆಗಂ. ಘ.

ಅಂತು ಬೀಡಿಂಗೆ ಪೋಗಿ ಸಂಗ್ರಾಮ ಸಂರಂಭದೊಳುಭಯಬಲಮುಂ ವಿ ರ್ಪಿನಂ—

ಕಂ ॥ ಮತ್ಕುಲನ ವಿಜಯ ನಾಟ್ಯ ಚ
ಮತ್ಕೃತಿಯಂ ನೋಡಿ ಕಣ್ಗಳಂ ತಣಿಪುವೆನೆಂ ॥
ಬುತ್ಕಂಠತೆಯಿಂದುದಯ ಕು
ಭೃತ್ಕೂಟಮನೇಱಿದಂತಿರಿನನುದಯಿಸಿದಂ ॥ ೧೧೨ ॥

ಅಂತು ದಿನಪೋದಯಮಪ್ಪುದುಂ ಪೂರ್ವಕ್ರಮದೊಳುಭಯ ವಾಹಿನಿಯುಂ ರಣಭೂಮಿಗೆ ಬಂದೊಡ್ಡಿನಿಲ್ವುದುಂ ದಶಾನನ ಸೇನಾಪತಿಗಳಪ್ಪ ಕುಂಭ ನಿಕುಂಭ ಶಂಭು ಸ್ವಯಂಭು ಚಂಡ ಪ್ರಚಂಡ ಕುಂಡಲ ಹಲಾಹಲ ಪುಷ್ಪಚೂಲ ಧೂಮ ರಾಕ್ಷಸ ಸಂಧ್ಯಾಕ್ಷ ಬಿಂದುಮಾಲಿ ಭೀಮ ಭೀಷಣ ಧವಳಕೀರ್ತಿ ವಿಕ್ರಮ ವಿದ್ಯುಜ್ಜಿಹ್ವ ಸೌಮ್ಯಾನನ ಶಾರ್ದೂಲ ಪ್ರಮುಖರನೇಕರೊಡ್ಡಿ ನಿಲ್ವುದುಂ—

ಕಂ ॥ ಮನುವಂಶ ಲಲಾಮನ ರಾ
ಮನ ಮುಂದೆ ಪೊಡರ್ಪುದೋರ್ಪ ಸೈಪೆಮಗಾದ ॥
ತ್ತೆನುತುಂ ಖೇಚರ ವಲ್ಲಭ
ರನೇಕರೊದವಿದ ರಣಾನುರಾಗದಿನಿರ್ದರ್ ॥ ೧೧೩ ॥

ಅಂತುದಾತ್ತ ರಾಘವನೊಳ್ ಮಿತ್ರಭಾವದಿಂ ಕೂಡಿದ ವಿದ್ಯಾಧರರಪ್ಪ ಚಂದ್ರಾಭ ಚಂದ್ರಮಾಲಿ ರತಿವರ್ಧನ ಸಿಂಹರಥ ಮೇಘವಾಹನ ಭೀಮ[1]ರವ ಕುಮುದಾವರ್ತ ಸುಷೇಣ ಜಯಮಿತ್ರ ಮಾನಾರ್ಹ ಮಹೇಂದ್ರ ಮೇಘಪರ್ವತ ಸರ್ವಪ್ರಿಯ ತರಂಗ ತರಲ ಚಪಲಾವೇಗ ವಿದ್ಯುತ್ಕರ್ಣ ಜಯ ವಿಜಯರೆಂಬ ರಣಪ್ರಣಯಿಗಳ್ ತಮತಮಗೆ ಸಮ ಕಕ್ಷರಪ್ಪ ವಿದ್ಯಾಧರ ಪ್ರತಿನಾಯಕರೋರೊರ್ವರೊಳಗುರ್ವು ಮದ್ಭುತಮುಮಾಗೆ ಕಾದುವಲ್ಲಿ—

ಚ ॥ ಉಡಿವ ರಥಂಗಳಿಂ ಮಡಿವ ವಾಜಿಗಳಿಂ ಕಡಿಖಂಡಮಪ್ಪಿರ ।
ಟ್ಟಿಡೆಯ ಪದಾತಿಯಿಂ ಕೆಡೆವ ವಾರಣದಿಂ ಕುಣಿವಟ್ಟೆಗಾರ್ವ ಬೊ ॥
ಬ್ಬಿಡುವ ಮರುಳ್ಗಳಿಂ ಪರಿವ ಲೋಹಿತದಿಂ ಪರಿದಂಬರಕ್ಕೆ ಧಿಂ ।
ಕಿಡುವ ಶಿರಂಗಳಿಂದತಿ ಭಯಂಕರಮಾದುದು ಸಂಗರಾಂಗಣಂ ॥ ೧೧೪ ॥

ಕಂ ॥ ಪಲವುಂ ದಿನಮಿಂತಿರಡುಂ
ಬಲದ ಮಹಾಬಲ ಪರಾಕ್ರಮರ್ ಕಾದಿ ಮನೋ ॥

1. ರಥ. ಗ.

ಬಲದ ಭುಜಬಲದ ವಿದ್ಯಾ
ಬಲದಳವಂ ನೆಱೆಯೆ ಮೆಱೆದು ಮಣ್ಮಱೆಯಾದರ್ ॥ ೧೧೫ ॥

ಅಂತವರನುದಿನಮನುವರದೊಳಣ್ಮಿ ಕಾದುತ್ತುಮಿರ್ದೊಂದು ದಿವಸಂ—

ಕಂ ॥ ದಾವ ದಹನಕ್ಕೆ ವನ್ಯ ಮೃ
ಗಾವಲಿ ಬೆಂಗುಡುವ ಮಾೞ್ಕೆಯಿಂ ಬೆಂಗುಡೆ ಸು ॥
ಗ್ರೀವನ ಪಡೆ ಸೆಡೆದು ದಶ
ಗ್ರೀವನ ಪೆರ್ವಡೆಗೆಗುರ್ವುವಡೆದುದು ಸಮರಂ ॥ ೧೧೬ ॥

ಆ ಸಮಯದೊಳ್ ನಿಜ ವರೂಥಿನಿಯಂ ಪೆಱಗಿಕ್ಕಿ—

ಕಂ ॥ ತ್ರಿಪತಾಕೆ ನಿಟಿಲ ತಟದೊಳ್
ಕಪಿಧ್ವಜಂ ಗಗನ ತಲದೊಳರ್ವಿಸೆ ಕಿಷ್ಕಿಂ ॥
ಧ ಪುರಾಧಿಪನುಱದಿಱಿಯಲ್
ವಿಪಕ್ಷಮಂ ರಥಮನೇಱಿದಂ ಸುಗ್ರೀವಂ ॥ ೧೧೭ ॥

ಅಂತು ರಥಾರೂಢನಾಗಿ ಕಾದಲ್ ಕಡಂಗಿ ಬರ್ಪುದುಂ—

ಕಂ ॥ ಬಾರಿಸಿ ಸುಗ್ರೀವನನು
ಗ್ರಾರಾತಿ ಬಲಕ್ಕೆ ಲಯಮನೊಡರಿಪ ಬಗೆಯಿಂ ॥
ಮಾರುತಿ ಕರಿಯಿಂ ಪೂಡಿದ
ತೇರಂ ಜವನೇಱುವಂತಿರೇಱಿದನಾಗಳ್ ॥ ೧೧೮ ॥

ದ್ರು॥ವಿ॥ ಮಿಳಿರ್ದು ಮಿಳ್ಳಿಸೆ ವಾನರ ಕೇತನಂ ।
ಪ್ರಳಯ ಕಾಲದ ಮಾರಿಯ ಮೂರಿಯಂ ॥
ತಳೆದು ಮಾರುತಿ ಯೇಱಿದ ತೇರದೇಂ ।
ತಳರ್ದುದೋ ಧರೆ ಕಂಪಿಸುವನ್ನೆಗಂ ॥ ೧೧೯ ॥

ಅಂತು ತಳರ್ದು ಪವಮಾನ ತನೂಭವಂ ಮನಃಪವನ ವೇಗದಿಂ ಕುಂಭಕರ್ಣನ ತನೂಭವರಪ್ಪ ಮಾಲಿ ಜಂಬುಮಾಲಿಗಳ ಬಲಮನಳಱೆ ತಾಗುವುದುಂ--

ಶಾ ॥ ಜ್ಯಾ ರಾವಕ್ಕಗಿದಳ್ಕಿ ಬಳ್ಕೆ ದಿಗಿಭಂ ಕೋದಂಡದೊಳ್ ಪೂಡಿಕೊಂ ।
ಡಾರುತ್ತುಂ ನಿಶಿತಾಸ್ತ್ರದಿಂದಿಸೆ ಹನೂಮಂತಂ ದ್ವಿಷತ್ಸೇನೆಯೊಳ್ ॥

ಪೇರಾಳುಂ ತುರಗಂ[1]ಗಳುಂ ರಥಮುಮುನ್ಮತ್ತೇಭಮುಂ ಬಿಟ್ಟುವಾರ್ ।
ವೀರಾಗ್ರೇಸರನಪ್ಪ ಮಾರುತಿಯ ದಿವ್ಯಾಸ್ತ್ರಕ್ಕೆ ಮೆಯ್ಯಾನ್ತರ್ಚುವರ್ ॥ ೧೨೦ ॥

ಮ ॥ ಪವಮಾನ ಪ್ರಿಯನಂದನಂ ಚರಮ ದೇಹಂ ದೇಹಮಂ ಕೈದುಮು ।
ರ್ಚವು ವಿದ್ಯಾಪರಮೇಶ್ವರಂ ಗಜ ರಥಾರೂಢಂ ಮಹಾ ಧನ್ವಿ ಕಾ ॥
ದುವರಾರಾತನನಂತವೀರ್ಯನಿದಿರೊಳ್ ಮಾಱಾಂಪುದುಂ ಕೊಂದನಾ ।
ಹವದೊಳ್ ಮಾಲಿಯ ಜಂಬುಮಾಲಿಯ ಮಹಾ ಸಾಮಂತ ಸಂದೋಹ
ಮಂ ॥ ೧೨೧ ॥

ಕಂ ॥ [2]ಜವನೆರ್ದೆ ಬಿರ್ಚಿದುದೆನೆ ದಾ
ನವ ಸೇನೆಗೆ ವಿಲಯ ಸಮಯಮಿಾ ಸಮಯದೆ ಸಂ ॥
ಭವಿಸಿದುದೆನೆ ತವೆ ಕೊಂದಂ
ಪವಮಾನ ಸುತಂಗೆ ಸಂಗರಕ್ಕಿದಿರುಂಟೇ ॥ ೧೨೨ ॥

ಅಂತು ಜಯಜಯಾರಾವದೊಡನೆ ಜಯಜಾಯಾ ರಮಣನಪ್ಪ ಮಾರುತಿ ನಿಜ ನಿಶಿತ ಶರಾಸಾರದಿಂ ತನ್ನ ಸೇನಾ ಕೃಶಾನು ಜ್ವಾಲಾ ಕಲಾಪಮನದಿರ್ಪೆ ವಿಲಯ ಸಮಯ ಜ್ವಾಲೆಯಂತೆ ಮಾಲಿ ತಿಣ್ಣಮುಱಿದು ನಿಜ ವರೂಥಮಂ ಮಾರುತಿಯ ರಥಕ್ಕೆ ಸೈತುವರಿಯಿಸೆ—

ಕಂ ॥ ಬಿಸಿಲೆಸಕಂಗಿಡೆ ಕಟ್ಟಿಲೆ
ಪಸರಿಸೆ ಮಾರುತಿಯ ತೇರ ಗಜ ಮಸ್ತಕದಿಂ ॥
ಪೊಸಮುತ್ತುಗಳುಗೆ ಕೈಮಿಗೆ
ಬಿಸುನೆತ್ತರ್ ಮಾಲಿ ಕಱಿದನಂಬಿನ ಮೞೆಯಂ ॥ ೧೨೩ ॥

ಅಂತು ಮಾರುತಿಯ ರಥಮಂ ಮಿಸುಕಲೀಯದಿಸುವುದುಂ—

ಕಂ ॥ ಸ್ಯಂದನ ಬಂಧನಮಂ ಮಾ
ಟ್ಟಿಂ ದಲಿವಂ ನಮಗಮೆಂದು ಮಾರುತಿ ಮುಳಿದಂ ॥
ಬಿಂದಂ ಖಂಡಿಸಿ ಪೆಱ
ತೊಂದಂಬಿಂದವನ ತಲೆಯುಮಂ ಪಱಿಯೆಚ್ಚಂ ॥ ೧೨೪ ॥

ಅಂತು ಮಾಲಿಯ ತಲೆ ಪಱಿದು ನೆಲಕ್ಕೆ ಬೀೞ್ವುದುಂ—

ಪೃಥ್ವಿ॥ನಿಜಾಗ್ರಜನ ಸಾವು ಬೇವಸಮನಗ್ಗಳಂ ಮಾೞ್ಪುದುಂ ।
ಗಜಾರಿ ಘನ ಗರ್ಜನಕ್ಕೆ ಕಡುಕೆಯ್ದು ಮೆಲ್ವಾಯ್ವವೋ ॥

---

1. ರಥಂ ಪಲವು ಮತ್ತೇಭಂಗಳುಂ. ಗ. 2. ಜವನೆರೆ ಬಿರ್ಚಿದುದೆನೆ. ಗ. ಚ.

ಲಜೇಯಬಲ ಜಂಬುಮಾಲಿ ಗದೆಗೊಂಡು ಮೇಲ್ವಾಯ್ವುದುಂ ।
ಭುಜಾಸಿಯೊಳೆ [1]ಕೊಂದನಂದವನುಮಂ ಮರುನ್ನಂದನಂ ॥ ೧೨೫ ॥

ಅಂತು ಜಂಬುಮಾಲಿಯಂ ಕೊಂದು ಮುಂದೆ ಧವಳ ಛತ್ರ ಚಾಮರ ಪಾಳಿ ಧ್ವಜ ಶಂಖ ಕಾಹಳ ಪ್ರಮುಖ ರಾಜ್ಯಚಿಹ್ನಂಗಳ್ವೆರಸು ಹಸ್ತ್ಯಶ್ವ ರಥ ಪದಾತಿ ಬಲದಿಂ ವಿದ್ಯಾಧರಾಧಿರಾಜರಿಂ ಪರಿವೃತನಾಗಿರ್ದ ದಶಮುಖನಂ ವಲಿಮುಖ ಧ್ವಜಂ ಕಂಡು—

ಕಂ ॥ ದೊರೆವೆತ್ತ ಸಮರವಿಾಗಳ್
ದೊರೆಕೊಂಡತ್ತೆಂದು ತನ್ನ ರಥಮಂ ಲಂಕೇ ॥
ಶ್ವರನಿದಿರ್ೊಡ್ಡಣದತ್ತಲ್
ಪರಿಯಿಸಿದನಿದೇಂ [2]ಪ್ರತಾಪಿಯೋ ಪವನಸುತಂ ॥ ೧೨೬ ॥

ಅಂತು ಪರಿಯಿಸೆ ರಕ್ಕಸವಡೆ ತಕ್ಕುಗೆಟ್ಟು ತಲ್ಲಳಿಸುವಂತೊಟ್ಟೈಸಿ ಕಾದುತ್ತುಂ ಬರ್ಪ ವಲಿಮುಖ ಧ್ವಜನಂ ದಶಮುಖಂ ಕಂಡು ಕಡುಮುಳಿದು ಕಾದಲ್ ಬಗೆಯೆ ಮಯ ತನೂಜರಪ್ಪ ಮಹೋದರ ವಜ್ರೋದರರ್ ದಶಾಸ್ಯನ ಸ್ಯಂದನಕ್ಕಡ್ಡಂಬಂದು ಕಾಳೆಗಮಂ ಕೈಕೊಂಡು ಮಹೋದರನಂಗದನೊಳಂ ವಜ್ರೋದರಂ ಹನುಮಂತನೊಳಂ ಸಾಮಾನ್ಯಾಸ್ತ್ರದೊಳಂ ದಿವ್ಯಾಸ್ತ್ರದೊಳಂ ಪಿರಿದುಪೊಟ್ತು ಕಾದೆ—

ಕಂ ॥ ಅಂಗದನ ಕಣೆ ಮಹೋದರ
ನಂಗದ ಲೋಹಿತಮನೀಂಟೆ ಪಿಂಗೆ ದಶ ಪ್ರಾ ॥
ಣಂಗಳುಮೇಂ ಪಡೆದನೊ ದಿವಿ
ಜಾಂಗನೆಯರ ಪೀವರ ಸ್ತನಾಲಿಂಗನಮಂ ॥ ೧೨೭ ॥

ಅಂತು ಮಹೋದರನಂ ಯಮೋದರಮನಂಗದಂ ಪುಗಿಸೆ ತಾನುಮತಿ ಕುಪಿತನಾಗಿ—

ಮ॥ಸ್ರ॥ತಿರುವಾಯೊಳ್ ತೊಟ್ಟು ದಿವ್ಯಾಸ್ತ್ರಮನಿಸೆ ಹನುಮಂ ಸಾಯಕಂ ನಾಂಟೆ ವಜ್ರೋ ।
ದರ ವಕ್ಷೋಭಾಗಮಂ ಬೆಂಗಲಗುಬಳೆಯೆ ಕರ್ನೆತ್ತರಿರ್ಮೆಯ್ಯೊಳಂ ಪಾ ॥
ಯ್ತರೆ ಜೀವಂಬಿಟ್ಟು ಬಾಯಂ ನಯನ ಯುಗಳಮಂ ಬಿಟ್ಟು ಕರ್ವೆಟ್ಟು ಬೀಳ್ವಿಂ ।
ತಿರೆ ಬಿದ್ದಂ ಭೂಮಿಯೊಳ್ ರಾವಣಭುಜ ವಿಜಯಶ್ರೀಯುಮಲ್ಲಾಡು ವನ್ನಂ ॥ ೧೨೮ ॥

1. ಪೊಯ್ದು ಕೊಂದನವನಂ. ಚ. 2. ಪ್ರಚಂಡನೋ ಹನುಮಂತಂ. ಗ.

ಅಂತು ವಜ್ರೋದರಂ ಸುರ ಸುಂದರೀ ವಿಮಾನೋದರಮನಲಂಕರಿಸೆ—

ಕಂ ॥ ದವ ದಹನಂ ಕಾನನಮಂ
ತವಿಪಂತಿರೆ ಬಾಡವಾನಲಂ ವಾರಿಧಿಯಂ ॥
ತವಿಪಂತಿರೆ ಪವನ ಸುತಂ
ತವಿಸಿದನಗಣಿತಮೆನಿಪ್ಪ ದಾನವ ಬಲಮಂ ॥ ೧೨೯ ॥

ಅಣುವನ [1]ಕೂರ್ಗಣೆಗಳ್ ನಡೆ
ಪೆಣಮಯುಮಾದತ್ತು ಮೇಱೆ ಪವಣಿಲ್ಲದ ರಾ ॥
ವಣವಡೆ ಪರ್ವಿದ ಮರ್ವಾ
ಕ್ಷಣದೊಳೆ ಕಿಡುವಂತೆ ಚಂಡಕರ ಕರ ಹತಿಯಿಂ ॥ ೧೩೦ ॥

ದಿವ್ಯಾಯುಧಂಗಳಂ ಗೆಲೆ
ದಿವ್ಯಾಯುಧಮಸುರವಡೆಯುನನಿಲ ತನೂಜಂ ॥
ಸವ್ಯಾಪಸವ್ಯಮೆಚ್ಚ್ಚ ರ
ಣ ವ್ಯಸನಿ ಪಿಶಾಚವಡೆಗೆ ಬಾಣಸುಗೆಯ್ದಂ ॥ ೧೩೧ ॥

ಆ ಸಮಯದೊಳ್—

ಉ ॥ ಮಾಲಿಗೆ ಜಂಬುಮಾಲಿಗೆ ಮರುತ್ತನಯಂ ಕುಡೆ ಯುದ್ಧದೊಳ್ ಕೃತಾಂ ।
ತಾಲಯಮಂ ನಿಜಾತ್ಮಜರ ಸಾವಿನೊಳುತ್ಕಟಮಾಗೆ ಶೋಕಮು ॥
ನ್ಮೀಲಿಸೆ ಕೋಪಮಾ ಪ್ರಳಯ ಭೈರವನಂತಿರೆ ಕುಂಭಕರ್ಣನಾ ।
ಭೀಲಮನೆತ್ತಿ ಪೊತ್ತು ನಡೆದಂ ಕದನಕ್ಕಿದಿರಂ ತ್ರಿಶೂಲಮಂ ॥ ೧೩೨ ॥

ಅಂತು ಕಡಂಗಿ ಬರ್ಪ ಕುಂಭಕರ್ಣನಂ ಕಂಡು ಮಾರುತಿಯಂ ಪೆಱಗಿಕ್ಕಿ ರಘುವೀರನ ಬಲದ ಮಹಾಸಾಮಂತರ್ ಚಂಡನುಂ ಶಶಿಮಂಡಲನುಂ ಬಲಿಯುಂ ಮೊದಲಾಗೆ ಪಲರುಮಡ್ಡಂಬಂದು ತನ್ನ ಬಲಮನಳಱೆ ಕಾದುತ್ತುಮಿರೆ ಕುಂಭಕರ್ಣನತಿ ಕುಪಿತನಾಗಿ ಬೇಗಂ ಪ್ರಕ್ಷೋಭಣ ವಿದ್ಯಾ ಶರದಿಂ ಕಪಿಧ್ವಜರ ಧ್ವಜಿನಿ ಮೆಯ್ಯಱಿಯದೊಱಗುವಂತು ಮಾಳ್ಪುದುಂ ನಿದ್ರಾಪ್ರಬೋಧಿನಿಯೆಂಬ ದಿವ್ಯಬಾಣದಿಂ ಸುಗ್ರೀವಂ ಹನುಮಂಮೊದಲಾಗೆ ಮಿಕ್ಕ ನಾಯಕರ ನಿದ್ರಾಮುದ್ರೆಯಂ ಕಳೆವುದುಮನಿಬರುಂ ರಕ್ಕಸವಡೆ ಬೆಂಗುಡೆ ಕಾದುತ್ತುಮಿರೆ ಕಂಡು ಕಡುಮುಳಿದು—

---

1. ಮಾರ್ಗಣೆ. ಚ.

ಕಂ ॥ ಚಳಿಯಿಸಲಮರಾಚಲಮಂ
ತುಳುಂಕಲಂಭೋನಿಧಾನಮಂ ದಿನಕೃನ್ಮಂ ॥
ಡಳಮನಿಳಿಗಿಱಪಲೆಂದಾ
ಜಿ ಲಂಪಟಂ ದೆಸೆಗೆ ಮಸಗಿದಂ ದನುಜೇಂದ್ರಂ ॥ ೧೩೬ ॥

ಅಂತು ದಶಗ್ರೀವಂ ಸುಗ್ರೀವನ ಕಂಠಕಂದಳಮಂ ಚಂಡ ಪರಶುವಿಂ ಖಂಡಿಸಲುಂ ಪವಮಾನ ತನೂಭವನ ಪ್ರಾಣಪವಮಾನನಂ ಬಾಹು ರಾಹುಗಾಹಾರಮಿಕ್ಕಲುಂ ಪ್ರಭಾಮಂಡಲನ ಮಂಡಲಾಗ್ರಮಂ ಚಂದ್ರಹಾಸ ಪ್ರಭಾಮಂಡಲದಿಂ ಹತಪ್ರಭಾಮಂಡಲಂಮಾಡಲುಂ ನಳನ ಕೋಪಾನಲನಂ ಖಡ್ಗಧಾರಾ ಜಲದಿಂ ನಂದಿಸಲುಂ ನೀಲನ ನೀಲ ಲೋಹಿತದಿಂ ಭೂತಗಣಮಂ ತಣಿಪಲುಮುತ್ಕಂಠನಾಗಿ ನಿಜವರೂಥಮಂ ರಿಪುವರೂಥಿನಿಗೆ ಪರಿಯಿಸಲೊಡರಿಸುವುದುಮಾ ಸಮಯದೊಳ್ ಮಂಡೋದರೀ ಜಠರ ಜಾಹ್ನವೀ ವಿಕಸಿತಾರವಿಂದಂ ತಂದೆಯ ಮುಖಾರವಿಂದಮಂ ನೋಡಿ ನಿಟಲ ತಟ ಘಟಿತ ಮುಕುಲಿತಾಂಜಲಿ ಪುಟಂ—

ಕಂ ॥ ತ್ರಿ ಪತಾಕೆ ನಿನ್ನ ನಿಟಲದೊ
ಳಪಾಂಗದೊಳ್ ಕೆಂಪು ಸಮನಿಪನ್ನೆವರಂ ಸ್ವೈ ॥
ರಿಪುದೆ ವಲವೆನಗೆ ಬನ್ನಂ
ನೃಪೇಂದ್ರ ಬನ್ನಕ್ಕೆ ಬೇಱೆ ಕೋಡೆರಡೊಳವೇ ॥ ೧೩೭ ॥

ಉ ॥ ನೀಂಬರೆಗಂ ಕಸಿಧ್ನಜರಸಾಧ್ಯರೆ ನಿನ್ನೊಳಿದಿರ್ಚುವನ್ನನಾ ।
ವಂ ಬೆಸಸೆನ್ನನಂಜಿದೊಡವಂದಿರ ಬಾಬ್ಬಿಲೆದಂದಪೆಂ ರಣಾ ॥
ಡಂಬರದಿಂದಮಂಜದೊಡೆ ಪಂದಲೆದಂದಪೆನೆಂದು ಪೂಣ್ದು ಶೌ ।
ರ್ಯಾಂಬುಧಿ ಬೇಡಿದಂ ಬೆಸನನಿಂದಗಿ ದಾನವ ಚಕ್ರವರ್ತಿಯಂ ॥ ೧೩೮ ॥

ಅಂತು ತಂದೆಯಂ ಬೆಸನಂ ಬೇಡಿಕೊಂಡು—

ಕಂ ॥ ಗಿರಿಗಳೆ ಪರಮಾಣುಗಳೆನೆ
ಸರೋಜ ಭವನೀ ಕರೀಂದ್ರಮಂ ಮಾಡಿದನೇಂ ॥
ದಿರದದಜ ಕಾಯ ಬಲಮಂ
ನಿರೂಪಿಸಲ್ ನಾಗರಾಜನುಂ ನೆಱೆದಪನೇ ॥ ೧೩೯ ॥

ಎಂಬಿನಮುಗುರ್ವುವೆತ್ತುದಂ ತ್ರೈಲೋಕ್ಯಕಂಟಕಮೆಂಬಾನೆಯನೇಱೆ ಪ್ರಳಯ ಪ್ರಕ್ಷೋಭಮಾದಂತೆ ಮುಳಿದು ಬರೆ ವಾನರಬಲಂ ದೋರ್ವಲಮನುಬಿದು

ಪೇಳೞ್ ಸುಗ್ರೀವನುಂ ಪ್ರಭಾಮಂಡಲನುಮಿದಿರ್ಚಲ್ ನೆಱೆದು ನಿಲ್ವುದುಮವರ
ನಿಂದ್ರಜಿತ್ಕುಮಾರನಿಂತೆಂದಂ—

ಕಂ ॥ ಕಪಿ ವಂಶಕ್ಕೆ ನಿಸರ್ಗಂ
ಚಪಲತೆ ಖಚರೇಂದ್ರನಪ್ಪ ದಶಕಂಠನ ಪಾ ॥
ದ ಪಯೋಜ ಸೇವೆಯಂ ಬಿ
ಟ್ಟ ಪಶುವೆ ನೀಂ ಭೂಚರಂಗೆ ಕಿಂಕರನಾದೈ ॥ ೧೩೭ ॥

ನಿನ್ನಿಂಬನಱಿಯದಾಜಿಯೊ
ಳೆನ್ನೊಡನೆ ಪೊಣರ್ಕೆ[1]ಗೆಂದು ಬಂದಪೆ ಮುಳಿದಾಂ ॥
ನಿನ್ನಂ ಕೊಲ್ವೆಡೆಯೊಳ್ ಕಾ
ವನ್ನರ್ ಕೈಕೊಂಡು ಭೂಮಿ ಗೋಚರರೊಳರೇ ॥ ೧೩೮ ॥

ಎನೆ ಮುಳಿದು—

ಕಂ ॥ ಕಾಳೆಗಮನುಱಿದು ಪೆಂಡಿ
ಗಾರ್ಳೆಗಮಂ ಮಾೞ್ಪೆ ಗಂಡುವಾತುಳ್ಳೊಡೆ ಕೂ ॥
ರ್ವಾಳ ಮುಸೆದೋರ್ಪುದೆನಗೆಂ
ದೇಳಿಸಿದಂ ದನುಜತನುಜನಂ ಸುಗ್ರೀವಂ ॥ ೧೩೯ ॥

ಅಂತವರಿರ್ವರುಮೋರೊರ್ವರಂ ಮೂದಲಿಸಿ ಕಾದುತಿರ್ದರನ್ನೆಗಮಿತ್ತಲ್—

ಕಂ ॥ ಜನಕಾತ್ಮಜನೊಳ್ ದಶಮುಖ
ತನೂಭವಂ ಮೇಘವಾಹನಂ ಬಿಲ್ವೊಯ್ದಂ ॥
ಬಿನ ಮಱೆಯುಂ ಲಯಸಮಯದ
ಘನಾಘನಂ ಕಱೆವ ಮಾೞ್ಕೆಯಿಂದಂ ಕಱೆದಂ ॥ ೧೪೦ ॥

ಅವನೆಚ್ಚಂಬುಗಳಂ ಚಂ
ಡವಿಕ್ರಮಂ ಮಂಡಲಾಗ್ರದಿಂ ಖಂಡಿಸಿದಂ ॥
ಬವರದೊಳಿದಿರಾಂಪವರಾ
ರವಾರ್ಯ ಭುಜವೀರ್ಯನಂ ಪ್ರಭಾಮಂಡಲನಂ ॥ ೧೪೧ ॥

ಅಂತು ನಿಜ ನಿಶಾತ ಶರ ಸಂಘಾತಮಂ ಖಂಡಿಸೆ ಮೇಘವಾಹನನಗ್ನಿಬಾಣ
ದಿಂದಿಸುವುದುಮದಂ ಪ್ರಭಾಮಂಡಲಂ ವರುಣಾಸ್ತ್ರದಿಂ ಕಡಿಯೆ ಕಡುಮುಳಿದು—

1. ಗಂತು. ಗ. ಘ.

ಚ ॥ ತಿರುವಿನೊಳಿಟ್ಟು ಕೂರ್ಗಣೆಗಳಂ ಧನುವಂ ಪೊಱಮುಯ್ವನೆಯ್ದುವಂ।
ತಿರೆ ತೆಗೆದಸ್ತ್ರವಿದ್ಯೆಗಿವನೊಳ್ದೊರೆಯಾರೆನೆ ಮೇಘವಾಹನಂ ॥
ತುರಗಮನೆಚ್ಚು ಸಾರಥಿಯನೆಚ್ಚು ಪತಾಕೆಯನೆಚ್ಚು ಬಿಲ್ಲನೆ ।
ಚ್ಚು ರಥಮನೆಚ್ಚು ಪರ್ಚುಪಱುಮಾಡಿದನಾ ಜನಕಾತ್ಮಜಾತನಂ ॥ ೧೪೨ ॥

ಅಂತು ವಿರಥನಂ ಮಾಡಿ—

ಕಂ ॥ ದನುಜ ಸುತಂ ಪನ್ನಗಶರ
ದಿನಿಸುವುದುಂ ಜನಕಸುತನನದು ಪೆಣೆದಹಿಬಂ ॥
ಧನದಿಂ ಪೊಡರ್ಪುಗುಂದಿಸೆ
ತನುವಂ ಮಱೆದಿಳೆಗೆ ಬಿೞ್ದು ಮೂರ್ಛೆಗೆ ಸಂದಂ ॥ ೧೪೩ ॥

ಅಂತತಿ ಪ್ರಚಂಡ ಬಲಂ ಪ್ರಭಾಮಂಡಲಂ ಮೂರ್ಛಿತನಪ್ಪುದುಮಿತ್ತಲಿಂದ್ರ ಜಿತ್ಕುಮಾರಂ ಸುಗ್ರೀವನಂ ವಿರಥನಂ ಮಾಡಿ ಪನ್ನಗಾಸ್ತ್ರದಿಂದಿಸುವುದುಂ—

ಉ ॥ ಕಾಲಡಿಯಿಂ ಕೊರಲ್ವರೆಗಮಿಂದಗಿಯೆಚ್ಚ ಫಣೀಂದ್ರ ಸಾಯಕಂ।
ಕೀಲಿಸಿದಂತೆವೊಲ್ ಬಿಗಿಯೆ ಸುತ್ತುವುದುಂ ಬಸಮುತ್ತು ಮುಚ್ಚೆ ಕ ॥
ಣ್ಣಾಲಿಗಳಿಚ್ಚೆಗೆಟ್ಟು ಕಪಿಕೇತನನಾಗಳೆ ಮುಚ್ಚೆವೋಗೆ ಶ।
ಕ್ರಾಲಯಮುಂ ಪಳಂಚಿದುದು ದಾನವಸೈನ್ಯ ಜಯಾನಕ ಸ್ವನಂ ॥ ೧೪೪ ॥

ಮತ್ತಿತ್ತಲೊಂದು ಮೊನೆಯೊಳ್—

ಕಂ ॥ ಮಾಯಾ ಯುದ್ಧದೊಳಂ ದಿ
ವ್ಯಾಯುಧ ಯುದ್ಧದೊಳಮಧಿಕ ಬಲರುಭಯ ಬಲಂ ॥
ಜೀಯೆಂಬಿನೆಗಂ ಕಾದಿದ
ರಾಯತಿ ನಿಲೆ ಕುಂಭಕರ್ಣನುಂ ಮಾರುತಿಯುಂ ॥ ೧೪೫ ॥

ರಣಕರ್ಕಶನಸುರ ಕುಲಾ
ಗ್ರಣಿ ವಿರಥಂಮಾಡಿ ವೀರನಂ ಖಚರ ಕುಲಾ ॥
ಗ್ರಣಿಯನವಯವದೊಳಣುವನ
ನಣುವಂ ಪಿಡಿವಂತೆ ಕುಂಭಕರ್ಣಂ ಪಿಡಿದಂ ॥ ೧೪೬ ॥

ಚ ॥ ಅಮಿತ ಪರಾಕ್ರಮ ಪ್ರಥಿತರಪ್ಪ ಕಪಿಧ್ವಜರುಂ ವಿಯಚ್ಚರ।
ಪ್ರಮುಖರುಮೆಯ್ದಿದರ್ ನೆರೆದು ರಾವಣ ಸೇನೆಯೊಳಣ್ಮಿ ಕಾದಿ ಭಂ ॥

ಗಮನಿದು ತಕ್ಕುದನ್ಯರ[1]ವಶರ್ ದಶಕಂಧರನಂ ದಶಾಸ್ಯ ಸೈ ।
ನ್ಯಮನುಜಿದಿಕ್ಕಿ ಗೆಲ್ವೆಡೆಗೆ ಲಕ್ಷ್ಮಣನೆಂಬುದೊ ರಾಮನೆಂಬುದೋ ॥ ೧೪೭ ॥

ಅಂತಿಂದಗಿ ಮೇಘವಾಹನ ಕುಂಭಕರ್ಣರಿಂ ಸುಗ್ರೀವ ಪ್ರಭಾಮಂಡಲ ಹನುಮತ್ಪ್ರಮುಖ ಮುಖ್ಯನಾಯಕರ್ಕಳುಂ ನಾಗಪಾಶವಿದ್ಯೆಯಿಂ ಕಟ್ಟುವಡೆದು ಪಟ್ಟಿರ್ಪುದುಂ—

ಕಂ ॥ ಅವರಘುವಟ್ಟಿರವಂ ತಿಳಿ
ದು ವಿಭೀಷಣನಜುಪಿ ರಾಮ ಲಕ್ಷ್ಮೀಧರರ್ಗೆ ॥
ನ್ನ ವರೂಥಿನಿಯುಂ ಕೊಂಡ
ನ್ನೆವರಂ ನೀಮಿರ್ಪುದವರನೀಗಳೆ ತರ್ಪೆಂ ॥ ೧೪೮ ॥

ಎಂದು ಬಿನ್ನಪಂಗೆಯ್ದು ವಿಭೀಷಣಂ ರಣರಸಿಕನಾಗಿ ಪೋಪುದುಮಂಗದಂ ತಾನುಮೊಡನೆ ಸಂಗ್ರಾಮ ಸಂರಂಭಮನಪ್ಪುಕೆಯ್ದು ಕುಂಭಕರ್ಣನಂ ಮುಟ್ಟಿ ವಂದು—

ಕಂ ॥ ಸಂಗರದೊಳ್ ಕುಡುವೆಂ ದೋ
ರ್ಭಂಗಮನಾವಂಗವೆಂದು ಕಲುಷಾನಲನಿಂ ॥
ದಂಗದನಂಗೀಕರಿಸಿದ
ನಂಗಾರಮನುಗುಟ್ವ ಕ್ರೂರ ಸಿಡಿಲ ಪೊಡರ್ಪಂ ॥ ೧೪೯ ॥

ಅಂತು ಮಾಮಸಕಂಗೊಂಡು ಕೃತಾಂತನಂತೆ ಸಾಧಾರಣಾಸ್ತ್ರದೊಳಂ ದಿವ್ಯಾಸ್ತ್ರದೊಳಂ ಕಾದಿ—

ಕಂ ॥ ಶರಭಂ ಪಿಡಿದ ಮೃಗಾಧೀ
ಶ್ವರನಂ ಭೇರುಂಡನೆಚಿದುಕೊಳ್ವಂತೆ ನಿಶಾ ॥
ಚರ ಕರದಿನಂಗದಂ ಸಂ
ಗರ ರಂಗದೊಳೆಚಿದುಕೊಂಡನನಿಲಾತ್ಮಜನಂ ॥ ೧೫೦ ॥

ಗೆಲೆ ಕಾದಿ ಕುಂಭಕರ್ಣನ
ನಲಂಘ್ಯಬಲನಂಗದಂ ಜಯಶ್ರೀ ನಿಲಯಂ ॥
ಜಲದ ಪಥಕ್ಕೊಗೆದಾ ಕ್ಷಣ
ದೊಳೆ ಮಾರುತಿವೆರಸು ರಘುಜನಲ್ಲಿಗೆ ಬಂದಂ ॥ ೧೫೧ ॥

---

1. ಪೆಸರ್. ಕ. ಖ. ಘ. ಚ.; ಪಿಸರ್. ಗ.

ಇತ್ತಲಾ ವಿಭೀಷಣನಿಂದಗಿ ಮೇಘವಾಹನರೊಳಾಹವಕ್ಕೊಡರ್ಚುವುದುಮವರೆಮ್ಮ ಕಿಱಿಯಮ್ಮನೊಳ್ ಕಾದುವುದು ತಕ್ಕುದಲ್ತು ಪಿಂಗೆ ಭಂಗಮಿಲ್ಲೆಂದು ಕೈದುಗೆಯ್ಯದುಪೇಕ್ಷೆಗೆಯ್ದು ತೊಲಗಿ ಪೋಗೆ ಮುಟ್ಟಿವೋಗಿ ವಿಭೀಷಣಂ ಪನ್ನಗಶರವೇಷ್ಟಿತರಾಗಿರ್ದ ಸುಗ್ರೀವ ಪ್ರಭಾಮಂಡಲರಂ ಕಂಡೇನುಂಗೆಯ್ಯಲಱಿಯದೆ ಸಂಭ್ರಮ ಚಿತ್ತನಾಗಿ ನೋಡುತ್ತುಮಿರೆ—

ಕಂ ॥ ಏನುಚಿತಮೆನಗೆ ರಘುಕುಲ
ಹಾನಿಯನೀಕ್ಷಿಸುವುದೆಂದು ಕಡುವೇಗದಿನು।
ತ್ತಾನಪದಂ ಪೋಪಂತಿರೆ
ಭಾನು ಬಿಸಿಲ್ ಮುಸುಱೆ ಪೊಕ್ಕನಪರಾರ್ಣವಮಂ ॥ ೧೫೨ ॥

ಅಂತು ನೇಸರ್ಪಡುವುದುಂ ದಶಾಸ್ಯನಪಹಾರ ತೂರ್ಯಮಂ ಪೊಯಿಸಿ ಬೀಡಿಂಗೆ ಪೋಪುದುಮಿತ್ತಲ್—

ಕಂ ॥ ಸೌಮಿತ್ರಿ ಮುಕುಲಿತಾಂಜಲಿ
ರಾಮಂಗಿಂತೆಂದನಿವರ್ಗೆ ಪನ್ನಗಶರ [1]ಮೂ ॥
ರ್ಛಾ ಮುದ್ರಾಚ್ಛೇದನದಿಂ
ಕ್ಷೇಮಮನೊಡರಿಸುವುಪಾಯಮಾವುದು ಬೆಸಸಿಂ ॥ ೧೫೩ ॥

ಎನೆ ದಾಶರಥಿ ದಶನಕಾಂತಿ ನಿರ್ವಿಷೀಕರಣ ಮಣಿ ಮಯೂಖದಂತೆ ಸಿಮಿರ್ಸೆನೆಗಮಿಂತೆಂದಂ—

ದ್ರು ॥ ವಿ ॥ ಇವರುಪದ್ರವಮಂ ಕ್ಷಣಮಾತ್ರದಿಂ।
ತವಿಸುಗುಂ ನೆನೆ ಮುಂ ಬರಮಿತ್ತನಂ ॥
ದಿವಿಜನಂ ಪೆಱತೇನೆನೆ ಲಕ್ಷ್ಮಣಂ।
ಸವಿನಯಂ ನೆನೆದಂ ಬರಮಿತ್ತನಂ ॥ ೧೫೪ ॥

ಕಂ ॥ ನೆನೆವುದುಮಾಸನ ಕಂಪಂ
ಜನಿಯಿಸಿದತ್ತಾಗಳಾ ಮಹಾಲೋಚನನೆಂ ॥
ಬ ನಿಲಿಂಪಂಗೆನೆ ರಘುವೀ
ರನ ಲಕ್ಷ್ಮೀಧರನ ಸೈಪು ಸಾಧಾರಣಮೇ ॥ ೧೫೫ ॥

ತನಗಾಸನ ಕಂಪಂ ತೊ
ಟ್ಟನೆ ಪುಟ್ಟೆ ರಣಪ್ರಪಂಚದೊಳ್ ರಘುವೀರಂ ॥

1. ವಿಷ್ಯಾ. ಗ.

ನೆನೆದಪನೆಂದು ಮಹಾಲೋ
ಚನನೊರ್ಮೊದಲಱಿದನವಧಿ ಲೋಚನದಿಂದಂ ೧೫೬ ॥

ಅಂತದಂ ಗರುಡಾಧಿಪನಪ್ಪ ಮಹಾಲೋಚನನಱಿದು ಬಹು ವಿದ್ಯಾ ಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬೆರಡು ವಿದ್ಯೆಗಳುಮಂ ದಿವ್ಯಾಸ್ತ್ರಂಗಳುಮನುಯ್ದು ಕುಡೆಂದು ನಿಜಾನುಚರನಪ್ಪ ಚಿಂತಾವೇಗನೆಂಬ ದೇವಂಗೆ ಬೆಸಸುವುದುಮಾತಂ ಬಂದು ಸಿಂಹವಾಹಿನಿಯಂ ಶ್ರೀರಾಮಂಗೆ ಗರುಡವಾಹಿನಿಯಂ ಲಕ್ಷ್ಮೀಧರಂಗೆ ಸದ್ಭಾವದಿನೀವುದುಂ—

ಕಂ ॥ ಮನ್ನಿಸಿ ಚಿಂತಾವೇಗಮ
ಹೋನ್ನತನಂ ಜೈನ ಪೂಜೆಗೆಯ್ದತಿಹರ್ಷೋ ।
ತ್ಪನ್ನ ಪುಲಕಾವಲೀ ಸಂ
ಛನ್ನ ಶರೀರರ್ ಬಲಾಚ್ಯುತರ್ ಬಗೆಗೊಂಡರ್ ॥ ೧೫೭ ।

ಚ ॥ ಪ್ರಣತ ಜಗಜ್ಜನಂ ತ್ರಿಭುವನ ಪ್ರಭು ಕಾವ್ಯಕಲಾ ವಿಲಾಸಿನೀ ।
ಪ್ರಣಯಿ ಪರಾರ್ಥ ಕಲ್ಪತರು ನಮ್ಮ ಮನೋರಥ ಸಿದ್ಧಿ ದೇಶ ಭೂ ॥
ಷಣ ಕುಲಭೂಷಣ ವ್ರತಿ ಪದಾಂಬುಜ ಸೇವೆಯಿನಾದುದೆಂದು ಸ
ದ್ಗುಣ ಮಣಿಭೂಷಣಂ ಪುಲಕಮಂ ತಳೆದಂ ಕವಿತಾ ಮನೋಹರಂ ॥೧೫೮॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣ ನಖಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರಚರಿತ ಪುರಾಣದೊಳ್ ಬಲಾಚ್ಯುತ
ಪುಣ್ಯ ಪ್ರಭಾವೋದಯ ವರ್ಣನಂ
ತ್ರಯೋಧಶಾಶ್ವಾಸಂ

## ಚತುರ್ದಶಾಶ್ವಾಸಂ

ಕಂ॥ ಶ್ರೀರಮಣಣನಿಷ್ಟಸಿದ್ಧಿಗೆ
ಚಾರಣ ಮುನಿ ಪಾದ ಕಲ್ಪಪಾದಪಮೆ ವಲಂ॥
ಕಾರಣಮಾದುದೆನುತ್ತುಂ
ಚಾರಿತ್ರ ಪವಿತ್ರನೊಸೆದನಭಿನವಪಂಪಂ ॥ ೧ ॥

ಅಲಘು ಮಹಿಮ ಪ್ರಭಾವಂ
ನೆಲೆವೆರ್ಚಿದುದೆಮಗೆ ಯೋಗನಿಷ್ಠಾ ಪರ ನಿ॥
ಷ್ಫಲರೆನಿಪ ದೇಶಭೂಷಣ
ಕುಲಭೂಷಣ ದಿವ್ಯಯೋಗಿ ದರ್ಶನದಿಂದಂ ॥ ೨ ॥

ಎಂದವರಂ ನಿರ್ಭರ ಭಕ್ತಿಯಿಂ ಸ್ತುತಿಗೆಯ್ದು ಹರ್ಷಭರ ವಿನಮ್ರನಾಗಿ ವರ್ಷ ವರುಣ ಕೃಶಾನು ಬಾಣಂಮೊದಲಾ[1]ಗೆ ಪಲವುಂ ದಿವ್ಯಬಾಣಂಗಳುಮಂ ಧವಳಛತ್ರ ಚಾಮರಂಗಳುಮಂ ಸಿಂಹ ಗರುಡಧ್ವಜಂಗಳುಮನಭೇದ್ಯ ಕವಚಂಗಳುಮನನರ್ಘ್ಯ ರತ್ನಭೂಷಣಂಗಳುಮಂ ರಾಮಲಕ್ಷ್ಮಣರ್ಗೆ ಕೊಟ್ಟು ಚಿಂತಾವೇಗಂ ಮನಃಪವನವೇಗದಿಂ ನಿಜ ನಿವಾಸಕ್ಕೆ ಪೋಪುದುಮಿತ್ತಲ್—

ಕಂ॥ ಜಿನ ಧರ್ಮದ ಸಾಮರ್ಥ್ಯದಿ
ನಿನಿತು ಮಹಾಮಹಿಮೆ ರಾಮ ಲಕ್ಷ್ಮೀಧರರೊಳ್॥
ಜನಿಯಿಸೆ ವಿಸ್ಮಯಮಾದುದು
ಹನುಮಂತ ಪ್ರಮುಖ ನಿಖಿಲ ವಿದ್ಯಾಧರರೊಳ್ ॥ ೩ ॥

ಅನಂತರಮಾ ಗರುಡವಾಹಿನಿಯ ತನುಪ್ರಭೆ ತಮಮನಭಿಭವಿಸೆ ತತ್ಪಕ್ಷಪಾತ ಜಾತ ವಾತ ಘಾತದಿಂ ನಾಗಪಾಶ ವಿದ್ಯೆ ಸಡಿಲ್ದುಪೋಗೆ ಸುಗ್ರೀವ ಪ್ರಭಾಮಂಡಲರಪಗತ ಮೂರ್ಛಾಪ್ರಪಂಚರ್ ಪ್ರಸನ್ನಮನರ್ ಸಿಂಹ ಗರುಡ ವಾಹನಾರೂಢರಾಗಿರ್ದ ರಾಮಲಕ್ಷ್ಮಣರಲ್ಲಿಗೆ ಬಂದವರ ಪುಣ್ಯಪ್ರಭಾವಕ್ಕೆ ಸಂತೋಷಂಬಟ್ಟು ನಿಮಗೀ ಮಹಾಮಹಿಮೆಯಾದ ವೃತ್ತಾಂತಮಂ ಬೆಸಸಿಮೆನೆ ಶ್ರೀರಾಮದೇವರದೆಲ್ಲಮಂ ನೆಱೆಯೆ ಬೆಸಸುತ್ತುಂ ಬೀಡಿಂಗೆ ಬಿಜಯಂಗೆಯ್ದಂದಿನಿರುಳಾ ಮಹೋತ್ಸವ ವ್ಯಾಪಾರದೊಳಿರ್ಪುದುಂ—

1. ಗೊಡೆಯು. ಗ. ಘ. ಚ.

ಕಂ ॥ ಇಂದಿನನುವರದೊಳಪಜಯ
ಘಂ ದನುಜಂಗುಂಟುಮಾಬ್ಜಮಿನ ವಂಶಜನೆಂ ॥
ದಂದಧಿಕ ರಾಗಮುಂ ತಳೆ
ದಂದದಿನಿನನುದಯಶಿಖರಿ ಶೇಖರನಾದಂ ॥ ೪ ॥

ಅಂತು ನೇಸರ್ ಮೂಡುವುದುಂ ದಶವದನನೆಂದಿನಂದದಿಂ ರಣಭೂಮಿಗೆ ವಂದೊಡ್ಡಿ ನಿಲ್ವುದುಮಿತ್ತ ರಾಮಲಕ್ಷ್ಮಣರ್ ನಿರ್ವರ್ತಿತ ನಿತ್ಯನಿಯಮರ್ ದೇವ ನಿತ್ತ ದಿವ್ಯ ಕವಚಮಂ ತೊಟ್ಟು ದಿವ್ಯಾಭರಣ ಭೂಷಿತರಾಗಿರ್ಪುದುಂ—

ತರಳವೃತ್ತಂ ॥ ದನುಸುತಂ ಕಿಟಿ ತನ್ನನಾ ಮುಳಿಸಿಂ ವೃಡಾದ್ರಿಯೆ ಸಿಂಹ ವಾ ।
ಹಿನಿಯ ರೂಪಿನೊಳಾಹವಕ್ಕೆ ಸಹಾಯಮಾಯ್ತು ರಘೂದ್ವಹಂ ॥
ಗೆನಿಸಿ ಕಾಯ ಬಲಂ ಕನತ್ಕನಕೋಪಲಾಕ್ಷಿ ಬೃಹದ್ಗುಹಾ ।
ನನಮುಗುರ್ವಿಸೆ ತುಂಗಶೃಂಗಮೆ ಕೋಱೆದಾಡೆಗಳಾದವೋಲ್ ॥ ೫ ॥

ಚ ॥ ವಿಳಯ ಘನಾಘನಂಗಳೆನೆ ಪಕ್ಷ ಯುಗಂ ನಡೆತರ್ಪ ರೋಹಣಾ ।
ಚಳಮೆನೆ ಪಂಚ ವರ್ಣ ವಿಲಸತ್ತನು ಬಿಚ್ಚನೆ ಬಿಟ್ಟ ದಿಟ್ಟಿಗಳ್ ॥
ಪೊಳೆವುದಿತಾರ್ಕ ಬಿಂಬಮೆನೆ ಚಂಚು ಮರೀಚಿ ಶತಹ್ರದಾಪ್ರಭೋ ।
ಜ್ಜ್ವಳಮೆನೆ ಭೀಕರಂ ಗರುಡವಾಹಿನಿ ವಿದ್ಯೆಯ ವಿಕ್ರಿಯಾ ಕ್ರಮಂ ॥ ೬ ॥

ಅಂತಗುರ್ವಾಗೆ ವಿಗುರ್ವಿಸಿದ ಸಿಂಹ ಗರುಡ ವಾಹನಂಗಳನೇಱಿ ಸಿಂಹ ಗರುಡ ಧ್ವಜಂಗಳನೆತ್ತಿಸಿ ದೇವ ನಿರ್ಮಿತಂಗಳಪ್ಪ ಸಿತಾತಪತ್ರಂಗಳಂ ಪಿಡಿಯಿಸಿ ಸುಗ್ರೀವ ಪ್ರಭಾಮಂಡಲ ಮರುತ್ಸುತ ವಿಭೀಷಣ ಪ್ರಮುಖ ನಿಖಿಳ ವಿದ್ಯಾಧರರ್ ಬಳಸಿ ಬರೆ ಸಂಗ್ರಾಮಭೂಮಿಗೆ ಬಂದೆಂದಿನಂದದಿನೊಡ್ಡಿ ನಿಲ್ಪುದುಂ—

ಕಂ ॥ ಎರಡೊಡ್ಡುಂ ತಾಗಿ ಭಯಂ
ಕರಮೆನೆ ಕಾದಿದುವು ಪಱಿದ ತಲೆ ನೆತ್ತರ ಸು ॥
ಟ್ಟುರೆ ಕಂಡದಿಂಡೆ ಕೋಱ್ಮಿದು
ಳ ರಾಶಿ ನೆಣದುರ್ವು ಪರ್ವೆ ಸಮರಾವನಿಯೊಳ್ ॥ ೭ ॥

ವಾರಣ ಘಟೆಯುಂ ಜೋದರು
ಮಾರೋಹಕರುಂ ತುರಂಗ ದಳಮುಂ ರಥಿಯುಂ ॥
ತೇರುಮೊಡನಱಿಯೆ ಪೋಲ್ತ
ತ್ತೀರೊಡ್ಡುಂ ಪವನ ಹತ ಘನಾಘನದೊಡ್ಡಂ ॥ ೮ ॥

ಚ ॥ ಪಲವು ಗಜಂಗಳುಂ ಪಲವು ವಾಜಿಗಳುಂ ಪಲವುಂ ರಥಂಗಳುಂ।
ಪಲರುಮುದಗ್ರ ವೀರ ಭಟರುಂ ಪಲವುಂ ತೆಱದಾಯುಧಂಗಳಿಂ॥
ಪಲವು ವಿಧಂಗಳಿಂ ಪಲವುಮೊಡ್ಡಣದಿಂ ಪಲರುಂ ಪೊಗಟ್ಟಿನಂ।
ತೊಲಗದೆ ತಾಗಿ ತಳ್ತಿಱಿಯೆ ನಾಡೆಯುಮದ್ಭುತಮಾದುದಾಹವಂ ॥ ೯ ॥

ಆ ಮಹಾಹವದೊಳ್—

ಉ ॥ ವಾನರ ಸೇನೆ ದಾನವರ ಸೇನೆಯನಳ್ಕುಱೆ ಕಾದೆ ಕಂಡು ಪಂ।
ಚಾನನದಂತೆ ಗರ್ಜಿಸಿ ದಶಾನನನೆಯ್ತರೆ ಬೆರ್ಚಿ ಪೋಗೆ ದೀ॥
ನಾನನಮಾ ಕಪಿಧ್ವಜನಿ ಬೇಗಮದಂ ಪೆಱಗಿಕ್ಕಿ ತಾಗಿದಂ।
ದಾನವ ರಾಜನಂ ಜವನ ಮುಂಬಿವನೆಂಬಿನೆಗಂ ವಿಭೀಷಣಂ ॥ ೧೦ ॥

ಅಂತು ತಾಗುವುದುಂ ಕಡುಮುಳಿದು ರಾವಣಂ ವಿಭೀಷಣಂಗಿಂತೆಂದಂ—

ಕಂ ॥ ಎನ್ನೊಡನೆ ಪುಟ್ಟಿ ಖಚರ ಕು
ಲೋನ್ನತಿ ಕೇಣ್ಪಿಟ್ಟು [1]ತಕ್ಕುಗಿಡೆ ಕಿಂಕರ ಭಾ॥
ವಂ ನಿನಗೆ ಸಮನಿಸಿತ್ತು ಕೆ
ಲನ್ನಗುವಿನಮೆಲವೊ ನೀಚ ಭೂ ಗೋಚರರೊಳ್ ॥ ೧೧ ॥

ಅಕ್ಷೂಣಮಪ್ಪ ಸಿರಿಯುಂ
ದಕ್ಷಿಣ ಭರತತ್ರಿಖಂಡ ಧರೆಯುಂ ಯುವ ರಾ॥
ಜ ಕ್ಷತ್ರ ಚಾಮರಮನುಱಿ
ದಕ್ಷಮ ದೊರೆಗೆಟ್ಟ ಮಾನವಂಗಾಳಾದೈ॥ ॥ ೧೨ ॥

ಎಂದು ಮೂದಲಿಸಿ—

ಕಂ ॥ ತನಗಧಿಕಮಾಗೆ ಮನದೊಳ್
ಮುನಿಸು ವಿಭೀಷಣನನೆಂದನಸುರೇಂದ್ರನದೆಂ॥
ತನುಜನೊಡನಾಂ ತೊಡರ್ಚುವೆ
ನನುವರಮುಂ ಗೋತ್ರ ವಧ ಮಹಾಪಾತಕಮುಂ ॥ ೧೩ ॥

ಅದಱಿನೆನ್ನ ಮುಂತಣಿಂ ತೊಲಗಿ ಪೋಗೆಂದ ದಶಮುಖನ ದುರುಕ್ತಿಗೆ ವಿಭೀಷಣಂ ಕೋಪಗ್ರಹಾವೇಶಮನಪ್ಪುಕೆಯ್ದು ಹಿತಮನಱಿಪಿದೊಡೆನ್ನಂ ಪೊಱ ಮಡಿಸಿ ಕಳೆದಂದೆ ನಿನ್ನ ಸುಧರ್ಮಿಕೆಯುಂ ತಕ್ಕೊರ್ಮೆಯುಂ ಪಱಿಪಟ್ಟು ಪೋದು

1. ಮುಟ್ಟು ಚ.

ದಿನ್ನಾದೊಡಂ ತ್ರಿಭುವನ 'ಸ್ತವನೀಯಮಪ್ಪ ನಮ್ಮ ತೋಯದವಾಹನಾನ್ವಯಕ್ಕೆ ಬನ್ನಮಪ್ಪಂತು ಪರಪ್ರೇಯಸಿಗಳಿಪಂ ತಂದ ನಿರ್ಬುದ್ಧಿಕೆಯನುಳಿದು ನಿನಗಂ ನಿನ್ನ ವಂಶಕ್ಕಮಕಾಲ ಮೃತ್ಯುವಂ ತಾರದೆ ರಾಮಸ್ವಾಮಿಗೆ ಜಗನ್ಮಾತೆಯಂ ಸೀತಾದೇವಿಯನೊಪ್ಪಿಸಿ ನಿನ್ನ ಸಾಮ್ರಾಜ್ಯಪದವಿಯೊಳ್ ಪದುಳಂನಿಲ್ವುದೆನೆ ಮುಳಿದು ತಿರುವಾಯೊಳಂಬಂ ತೊಟ್ಟು ಮುಟ್ಟಿವರೆ—

ಕಂ ॥ ತ್ರಿ ಪತಾಕಾ ಭೀಷಣ ತರ
ಲಪನಂ ತೆಗೆದಿಸೆ ವಿಭೀಷಣಂ ರಾವಣ ಕೇ ॥
ತ್ರಿ ಪತಾಕಾ ದಂಡಂಬೆರ
ಸು ಪತಾಕಾ ದಂಡಮುಡಿದು ಕೆಡೆದತ್ತಾಗಳ್ ॥ ೧೪ ॥

ಅಂತು ವಿಭೀಷಣನೇಸಾಡೆ ತಾನುಮೊಡನೆ—

ಕಂ ॥ ಸೋದರನ ಧನುರ್ಗುಣಮುಂ
ಛೇದಿಸಿದಂ ರೋಷಿ ರಾವಣಂ ಮದ ಮದಿರೋ ॥
ನ್ಮಾದವಶಂ ಧರ್ಮ ಗುಣ
'ಚ್ಛೇದನಮುಂ ಮಾಳ್ಪುದೆಂಬುದೊಂದಚ್ಚರಿಯೇ ॥ ೧೫ ॥

ಅಂತು ದಶಾನನಂ ನಿಜ ಶರಾಸನಮುಂ ಖಂಡಿಸೆ—

ಕಂ ॥ ದಶವದನ ಶರಾಸನಮುಂ
ನಿಶಾತ ಶರದಿಂ ವಿಭೀಷಣಂ ಖಂಡಿಸಿದಂ ॥
ದಶವದನನುಂ ವಿಭೀಷಣ
ನ ಶರಾಸನಮುಂ ನಿಶಾತ ಶರದಿಂ ಕಡಿದಂ ॥ ೧೬ ॥

ಅಂತು ಕಲುಷ ವಶ ಗತರಾಗಿ—

ಕಂ ॥ ಪಿತೃವುಂ ಪಿತೃವ್ಯನುಂ ಕಾ
ದೆ ತನ್ನೊಳಿಂದಗಿಗೆ ಪಕ್ಷವಾದುದು ಲಂಕಾ ॥
ಪತಿಯೊಡನೆ ತಕ್ಕುದೊರ್ಮರ
ದ ತಿಗುಡು ಮತ್ತೊಂದು ಮರನನೇಂ ಪತ್ತುಗುಮೇ ॥ ೧೭ ॥

ಅಂತು ಇಂದ್ರಜಿತ್ಕುಮಾರನೆಡೆವೊಕ್ಕು ವಿಭೀಷಣನೊಳ್ ಕಾದಲೊಡರಿಸೆ ಲಕ್ಷ್ಮಣಂ ನಿಜ ವರೂಥಮನಾತನ ವರೂಥಕ್ಕಡ್ಡಂನೂಂಕಿ—

ಕಂ ॥ ಇತ್ತಿತ್ತ ಮಗುೞ್ದು ಮಗುೞ್ದಿಂ
ದತ್ತಲ್ ರಾಮಾನುಜನ್ಮನಿಂದಗಿಯೊಳ್ ಕಾ ॥
ದುತ್ತುಮಿರೆ ರಾಘವಂ ಸುಭ
ಟೋತ್ತಮನೊಳ್ ಕುಂಭಕರ್ಣನೊಳ್ ಬಿಲ್ವೊಯ್ದಂ ॥ ೧೮ ॥

ಆ ಸಮಯದೊಳಸಮಯ ವಿಲಯ ಸಮಯ ಸಮುತ್ಪಾದನ ಸಮರ್ಥನಪ್ಪ ಕೃತಾಂತನಂತೆ ಹನುಮಂತಂ ಕುಂಭಕರ್ಣನೊಳ್ ಕಿಷ್ಕಿಂಧಂ ಕೇತುವಿನೊಳ್ ಪ್ರಭಾಮಂಡಲಂ ಮೇಘವಾಹನನೊಳ್ ವಿರಾಧಿತಂ ಮಯನೊಳೂರ್ಜಿತಂ ದೃಢ ರಥನೊಳ್ ಪೆಱರುಮಱಿಕೆಯ ಕಪಿಧ್ವಜ ಬಲನಾಯಕರನೇಕರ್ ರಾಕ್ಷಸ ಬಲದ ನಾಯಕರೊಳ್ ಬಿಲ್ವೊಯ್ದು ಬಹು ಕಬಂಧ ನರ್ತನ ಪ್ರಬಂಧಮಗುರ್ವುಮದ್ಭುತ ಮುಮಾಗೆ ಮಹಾಯುದ್ಧಂಗೆಯ್ಯುತ್ತುಮಿರ್ಪಿನಮಿತ್ತಲ್—

ಕಂ ॥ ಇಂದಗಿ ಸಾಧಾರಣ ಶರ
ಸಂದೋಹದಿನೆಚ್ಚು ಕಾದಲಣಮಾಱದೆ ಶ ॥
ತ್ರುಂದಮನೊಳ್ ಲಕ್ಷ್ಮಣನೊಳ್
ತಂದಂ ದಿವ್ಯಾಸ್ತ್ರಗರ್ಭ ಶರಧಿಗೆ ಕೈಯಂ ॥ ೧೯ ॥

ಅಂತು ದಿವ್ಯ ಬಾಣಮಂ ಬಾಣಾಸನದೊಳ್ ಪೂಡಿಕೊಂಡುಪೇಂದ್ರನನಿಂದ್ರ ಜಿತ್ಕುಮಾರನಿಸುವುದುಂ—

ಮ ॥ ಗಗನಾಭೋಗದೊಳಿರ್ದು ನೋೞ್ಪ ಸುರ ಸಂದೋಹಂ ಮಹೋತ್ಸಾಹದಿಂ ।
ಪೊಗೞ್ವಿನ್ನಂ ತಮದಂಬನರ್ಕಶರದಿಂದಾಶೀವಿಷೋಗ್ರಾಸ್ತ್ರಮಂ ॥
ಖಗರಾಜಾಸ್ತ್ರ ನಿಪಾತದಿಂ ಕಿಡಿಸಿ ದಿವ್ಯಾಸ್ತ್ರಂಗಳಿಂ ಗೆಲ್ದನಿಂ ।
ದಗಿಯಂ ಸಂಹೃತಿ ಕಾಲ ಸಾಂಧ್ಯ ಜಲದಾರಕ್ತೇಕ್ಷಣಂ ಲಕ್ಷ್ಮಣಂ ॥ ೨೦ ॥

ಕಂ ॥ ತ್ರಿದಶೇಂದ್ರ ವಿಜಯಿಯುಂ ದಶ
ವದನನನಾಹವದೊಳಿಕ್ಕಲಿರ್ದ ಮಹಾ ವೀ ॥
ರ್ಯದ ಕಣಿಗೆ ಲಕ್ಷ್ಮಣಂಗಾ
ವುದು ಗಹನಮೊ ಗೆಲ್ವುದುೞಿದ ರಣಬಾಲಕರಂ ॥ ೨೧ ॥

ಅಂತು ಗೆಲ್ದಿಂದಗಿಯುಂ ವಿರಥಂಮಾಡಿ ನೆಲಕ್ಕಿಕ್ಕಿ ನಾಗಪಾಶದೊಳ್ ಕಟ್ಟಿ. ವಿರಾಧಿತನ ಕೈಯೊಳ್ ಬೀಡಿಂಗೆ ಕೞಿಪುವುದುಮಿತ್ತಲ್—

ಕಂ ॥ ಪೆಱರಳವೆ ರಾಮನೊಳ್ ತ
ಳ್ತಿಱಿಯಲಿವಂ ರಾವಣಂಗೆ ಶೌರ್ಯದೊಳಂ ನೇ ॥

ಗಿರಿಜಿಯನೆನೆ ಕುಂಭಕರ್ಣಂ
ಮೆಱೆದಂ ಕೋದಂಡ ಬಾಹುದಂಡದ ನೆರವಂ ॥ ೨೨ ॥

ಅಂತು ಕದನ ಕರ್ಕಶನಾಗಿ ಕಾದುತ್ತುಮಿರೆ ರಾಘವನವನನೇಳಿದಂಬಗೆದು ದಿವ್ಯ ಬಾಣ ತೂಣೀರಕ್ಕೆ ಕೈಯನುಯ್ವುದುಂ—

ಸ್ರ॥ ಸಾಮಾನ್ಯಾಸ್ತ್ರಂಗಳಿಂ ಭಂಗಮನೊಡರಿಸಿದಂ ಕುಂಭಕರ್ಣಂಗೆನಲ್ ಸಂ।
ಗ್ರಾಮಾವಷ್ಟಂಭ ಸಂರಂಭದಿನತುಲಬಲಂ ಮಾಜಿ ಮಾಜಾಂಪನಾವಂ ॥
ರಾಮಂ ದಿವ್ಯಾಸ್ತ್ರಮಂ ತೊಟ್ಟೊಡೆ ಕುಲನಗಮುಲ್ಲಾಡುಗುಂ ದಿಕ್ಕರೀಂದ್ರ।
ಸ್ತೋಮಂ ಬಾಯ್ವಿಟ್ಟು ಪಿಮ್ಮೆಟ್ಟುಗುಮಿಳೆಗಿೞಗುಂ ವ್ಯೋಮದಿಂ ಭಾನು ಬಿಂಬಂ ॥ ೨೩ ॥

ಅಂತವನ ಶಸ್ತ್ರಾಸ್ತ್ರಮಂ ತನುತ್ರ ಕೋದಂಡ ಪತಾಕಾ ದಂಡಂಗಳಂ ಖಂಡಿಸುವುದುಂ—

ಉ॥ ಮಿಕ್ಕ ಮಹಾರಥಂ ವಿರಥನಾದನಧೋಕ್ಷಜನಂತೆ ನಾಗ ಪಾ।
ಶಕ್ಕೊಳಗಾದನೀಶ್ವರ ಕಿರೀಟಮೆನಲ್ ರಥದಿಂ ನೆಲಕ್ಕೆ ಪಾ॥
ಯ್ದುಕ್ಕಟ ಬೊಮ್ಮನಂತಿರೆ ರಜೋಮಯನಾದನಿದಿರ್ಚಿ ರಾಮನೊಳ್।
ತಕ್ಕಿನ ಕುಂಭಕರ್ಣನೆನೆ ಮಿಕ್ಕವರಾಂತು ಬದುರ್ಕುವನ್ನರಾರ್ ॥ ೨೪ ॥

ಅಂತು ಬಂಧನಕ್ಕೆ ವಂದ ಕುಂಭಕರ್ಣನಂ ಪ್ರಭಾಮಂಡಲಂಗೊಪ್ಪಿಸುವುದುಂ ಪ್ರಭಾಮಂಡಲಂ ಮೇಘವಾಹನನಂ ನಾಗಪಾಶದೊಳ್ ಕಟ್ಟಿ ಕುಂಭಕರ್ಣಂಬೆರಸು ಬೀಡಿಂಗೆ ಪೋದನಿತ್ತಲ್ ಪಿರಿದುಂಬೊೞ್ತು ಭರಂಗೆಯ್ದು ಕಾದುತ್ತುಮಿರ್ದ ವಿಭೀಷಣನಂ ರಾವಣಂ ನೋಡಿ ಕೊಲಲ್ವೇಡಿ—

ಕಂ॥ ಶೂಲಾಯುಧದಿಂದಿಡೆ ಲಯ
ಕಾಲೋರಗದಂತೆ ಬರ್ಪುದಂ ಜಯ ಲಕ್ಷ್ಮೀ॥
ಲೋಲಂ ಲಕ್ಷ್ಮೀಧರನ
ಸ್ತ್ರಾಲಿಗಳಿಂ ಖಂಡಖಂಡಮಾಗಿರೆ ಕಡಿದಂ ॥ ೨೫ ॥

ಅಂತು ಕಡಿದು ವಿಭೀಷಣನಂ ಪೆಱಗಿಕ್ಕಿ ಲಕ್ಷ್ಮಣನೆಡೆಗೋದು ರಾವಣನೊಳ್ ತಾಗುವುದುಂ—

ಕಂ॥ ನೀಂ ಕಾದೆ ವಿಭೀಷಣನಂ
ಮುಂ ಕೊಲಲೆಂದಿಟ್ಟ ಶೂಲಮಂ ಖಂಡಿಸಿ ನಿ॥

ನ್ನಂ ಕಾವನಾವನಿನ್ನೆನು
ತುಂ ಕೊಂಡಂ ದಿವ್ಯ ಶಕ್ತಿಯುಂ ದಶಕಂಠಂ ॥ ೨೬ ॥

ಅಂತು ಕೊಂಡಭಿಮಂತ್ರಿಸಿ ಸರ್ವಶಕ್ತಿಯಿಂದಿಡುವುದುಂ—

ಚ ॥ ಕುಳಿಕನ ದಾಡೆಯೋ ಜವನ ದಾಡೆಯೊ ಮೇಣ್ ವಿಲಯಾಗ್ನಿ ಜಿಹ್ವೆಯೋ।
ಜಳಧಿಯನೀಂಟುವೌರ್ವ ದಹನಾರ್ಚಿಯೊ ಪೇಟಿನೆ ರೌದ್ರ ರೂಪಮಂ ॥
ತಳೆದು ಕಪಿಧ್ವಜರ್ ನಡುಗುವಂತು ದಶಾನನನಿಟ್ಟ ಶಕ್ತಿನಿ ।
ಶ್ಚಳಮೆನೆ ನಟ್ಟುದಪ್ರತಿಮ ಶಕ್ತಿ ಜನಾರ್ದನ ವೀರ ವಕ್ಷಮಂ ॥ ೨೭ ॥

ಅಂತು ದಿವ್ಯ ಶಕ್ತಿ ನಿಶ್ಯಕ್ತಿಯಪ್ಪಂತು ನಟ್ಟು ನಿಲೆ—

ಕಂ ॥ ಸಮರ ವಿಜಯಾಂಗನಾ ಸಂ
ಗಮ ಜನಿತ ಶ್ರಮದೊಳಾದ ನಿದ್ರೆಯವೋಲ್ ಕ ॥
ಣ್ಣಮೆ ಮುಚ್ಚಿ ಮುಚ್ಚೆವೋದಂ
ಕಮಲಾಕ್ಷಂ ದನುಜ ದಿವ್ಯ ಶಸ್ತ್ರಾಹತಿಯಿಂ ॥ ೨೮ ॥

ಅನುವರದೊಳ್ ಸಮ ಬಲನೀ
ತನೆ ದೋರ್ಬಲ ದೃಪ್ತನೆಂಬ ಬಗೆದಾರದೆ ಬಿ ॥
ಟ್ಟನನಿಱಿಯಲೊಲ್ಲನಿಲ್ಲಾ
ವನೊ ರಾವಣನಂತು ಪಾಟಿಯುಂ ಪಾಳಿಸುವಂ ॥ ೨೯ ॥

ಅಂತು ಮೂರ್ಛಿತನಪ್ಪುದುಂ ದಾನವ ಸೇನೆಯೊಳ್ ಘೂರ್ಣಿಸುವ ಜಯಾನಕ ರವಂ ಶ್ರವಣ ವಿವರಮಂ ಸಾರ್ತರೆ ತದ್ವೃತ್ತಾಂತಮಂ ತಿಳಿದು—

ಚ ॥ ಅನುಜನೆ ಮೂರ್ಛೆವೋದಟಲೆ ಕೋಪಮನಗ್ಗಳಮುಂಟುಮಾಡೆ ಕೀ ।
ಱಿಸೆನೊ ಕುಲ ಶೈಲಮಂ ಕುಡಿವೆನೋ ಕಡಲಂ ವಸುಧಾತಲಕ್ಕೆ ತ ॥
ರ್ಪೆನೊ ಶಶಿ ಸೂರ್ಯ ಮಂಡಲಮನೆತ್ತುವೆನೋ ನೆಲನಂ ವಿಯತ್ತಲ ।
ಕ್ಕೆನಗಿದಿರಾವನೆಂದೊದಱಿ ರಾವಣನೊಳ್ ಪೊಣರ್ದಂ ರಘೂದ್ವಹಂ ॥೩೦॥

ಮ ॥ ತಿರುವಿಲ್ಲಂಬು ಪತಾಕೆ ವಜ್ರಕವಚಂ ಸೂತಂ ವರೂಥಂ ಹಯೋ ।
ತ್ಕರಮೆಂಬಿಂತಿವನಾಗಳೆಚ್ಚು ಕಡಿಖಂಡಂಮಾಡಿ ದಿವ್ಯಾಸ್ತ್ರದಿಂ ॥
ವಿರಥಂಮಾಡಿದನೇಟು ಸೂಟ್ಪರೆಗವಾವಂ ರಾಮಬಾಣಕ್ಕೆ ನಿ ।
ತ್ತರಿಪಂ ತನ್ನನೆ ಸಂತವಿಟ್ಟನಸುರಂ ಮುಂ ತಾಗಲೇನಾರ್ತನೇ ॥ ೩೧ ॥

ಅಂತು ರಾವಣಂ ಪಲವುಸೂೞ್ ವಿರಥನಾಗಿಯುಮವಿಚ್ಛಿನ್ನ ಕವಚನು ಮವ್ರಣಕಾಯನುಮಪ್ಪುದುಂ—

ಕಂ ॥ ಭೇದಿಪುದು ಕುಲಾದ್ರಿಯನೆ
ನ್ನೀ ದಿವ್ಯ ಶರಂಗಳಿವನ ದೇಹಮನಿನಿಸುಂ ॥
ಭೇದಿಸಿದುವಿಲ್ಲ ವಿಸ್ಮಯ
ಮಾದಪುದಲ್ಲಾಯುವಲ್ಲನಕ್ಕುಂ ದನುಜಂ ॥ ೩೨ ॥

ಎಂದು ಬಗೆಯುತಿರ್ಪಿನಂ—

ಮ ॥ ಇನ ವಂಶೋದ್ಭವನಪ್ಪ ಲಕ್ಷ್ಮಣನ ಮೂರ್ಛಾವೇಗಮಂ ಪಿಂಗಿಸಲ್ ।
ಮನುವಂಶಂಗೆಡೆಮಾಡ್ಪೆನಿಂದಿನಿರುಳೊಳ್ ಲಕ್ಷ್ಮೀಧರಂ ಗೆಲ್ದನಿಂ ॥
ದನುಜಾಧೀಶ್ವರನಿಟ್ಟ ಶಕ್ತಿಯ ಪೊಡರ್ಪಂ ತಕ್ಕುದಲ್ಲೆಂದು ದಿ ।
ನ್ನೆನಗೆಂಬಂತೆ ದಿನಾಧಿನಾಥನಪರಾಂಭೋರಾಶಿಯಂ ಪೊರ್ದಿದಂ ॥ ೩೩ ॥

ಅಂತು ನೇಸರ್ ಪಡುವುದುಮೆರಡುಂಪಡೆಗಳಪಹಾರ ತೂರ್ಯಮಂ ಪೊಯಿಸಿ ತಂತಮ್ಮ ಬೀಡಿಂಗೆ ಪೋಪುದುಮಾ ಸಮಯದೊಳ್—

ಮ ॥ ಮನದೊಳ್ ಹರ್ಷ ವಿಷಾದವಾದುವು ದಶಾಸ್ಯಂಗೊರ್ವನಂ ವೈರಿಯಂ ।
ಮೊನೆಯೊಳ್ ಸಾಧಿಸಿದೆಂ ಮಹಾಬಳನನೆಂಬುತ್ಸಾಹದಿಂದಾತ್ಮನಂ ॥
ದನರಪ್ಪಿಂದಗಿ ಮೇಘವಾಹನರುಮಂ ಮತ್ತೋದರಂ ಕುಂಭಕ ।
ರ್ಣನುಮಂ ಬಾೞ್ಪಿಲೆಗೊಂಡರೆಂದಸದಳಂ ಮೆಯ್ವೆರ್ಚಿದುದ್ವೇಗದಿಂ ॥ ೩೪ ॥

ಅಂತು ಬಗೆ ಬೆದಱೆ ರಾವಣಂ ಲಂಕೆಗೆ ಪೋದನಿತ್ತ ದಾಶರಥಿ ಮೂರ್ಛಿತನಾಗಿರ್ದ ಲಕ್ಷ್ಮಣನಂ ಕಂಡು ತಾನುಂ ಮೂರ್ಛೆವೋಗಿ ನೀಡಱಿಂದೆೞ್ಚತ್ತು ಮತ್ತಮತಿವಿಹ್ವಲ ಚಿತ್ತನಾಗಿ ತಮ್ಮನನೆಯ್ದೆವರ್ಪುದುಂ ಜಾಂಬವ ಸುಷೇಣ ಪ್ರಮುಖ ಮಂತ್ರಿಗಳೆಂದರ್ ದೇವ ದಿವ್ಯ ಶಸ್ತ್ರದೊಳಾದ ವೇದನೆ ಕರಸ್ಪರ್ಶನದಿನಧಿಕಮಕ್ಕುಂ ಮುಟ್ಟಬೇಡೆಂದು ಬಾರಿಸಿ ನೀಮೇಕೆ ವಿಹ್ವಲರಪ್ಪಿರ್ ಸೌಮಿತ್ರಿಯುಪ್ಪೊಡೆಂಟನೆಯ ಕೇಶವನಾತನ ಕೈಯೊಳ್ ರಾವಣಂಗಪಾಯಮಕ್ಕುಮಲ್ಲದೀತಂಗಪಾಯಮುಪ್ಪುದಲ್ತು ದಿವ್ಯಶಸ್ತ್ರ ಪ್ರಹರಣ ಭರಮನಪಹರಿಸುವ ಭೇಷಜ ಪ್ರಯೋಗಮನೊಡರಿಸುವ ಮೆಂದು ಶೋಕೋದ್ರೇಕಮನುಪಶಮಿಸುವುದುಮನಂತರಂ—

ಕಂ ॥ ಸೌಮಿತ್ರಿಯ ಸುತ್ತಣ ರಣ
ಭೂಮಿಯನಿಂಬಾಗೆ ಸಮೆದು ಕಪಿಕೇತು ಕುಲ ।

ಗ್ರಾಮಣಿ ಸುಗ್ರೀವಂ ವಿ
ದ್ಯಾಮಯಮುಮಂ ಸಪ್ತ ಗುಪ್ತಿಯಂ ನಿರ್ಮ್ಮಿಸಿದಂ ॥ ೩೫ ॥

ಅಂತು ನಿರ್ಮಿಸಿದ ವಿದ್ಯಾಪ್ರಾಕಾರಂಗಳ ಬಹಿರಂತಃಪ್ರದೇಶಂಗಳೊಳ್ ಪಲಬರ್ ವಿದ್ಯಾಧರರಂ ಕಾಪುವೇೞ್ದಿರ್ದುಂ—

ಕಂ ॥ ಚಲಿಯಿಸೆನೆಂದಾದಿಯ ಬಾ
ಗಿಲ ಕಾಪಿನೊಳಸಮ ಸೈನ್ಯನೆಂಟನೆಯ ಕುಲಾ ॥
ಚಲಮೆಂಬಿನಂ ಪ್ರಭಾಮಂ
ಡಲನಿರ್ದಂ ಮಂಡಲಾಗ್ರಮುಂ ಜಡಿಯುತ್ತುಂ ॥ ೩೬ ॥

ಎರಡನೆಯ ಬಾಗಿಲೊಳ್ ಸಂ
ಗರಕ್ಕೆ ತಾನಂಗರಕ್ಕೆ ರಘುಜಂಗೆಂಬಂ ॥
ತೆರಡನೆಯ ದಂಡಧರನಂ
ತಿರಿರ್ದನುಱದಂಗದಂ ಗದಾ ದಂಡಧರಂ ॥ ೩೭ ॥

ಮೂಱನೆಯ ನೊಸಲ ಕಣ್ಣಂ
ತೋಱುವೆನಾನಸುರ ಸೇನೆಗೆಂಬಂತಾಗಳ್ ॥
ಮೂಱನೆಯ ಬಾಗಿಲೊಳ್ ಕೈ
[1]ವಿಾಱದೆ ಶೂಲಾಯುಧಂ ವಿಭೀಷಣನಿರ್ದಂ ॥ ೩೮ ॥

ಸಮುದಂ ಚಾಪಧರಂ ತ
ನ್ನಮಿತ ಬಲಂಬೆರಸು ಮಾರುತಂಗಂ ಪುಗಲಿಂ ॥
ದು ಮರೀಚಿಗಮಣಮರಿದೆನೆ
ಕುಮುದಂ ನಾಲ್ಕನೆಯ ಬಾಗಿಲೊಳ್ ನೆಱೆದಿರ್ದಂ ॥ ೩೯ ॥

ಪರಚಕ್ರ ವಿಲಯ ಕೇತುವೊ
ಲಿರೆ ಕೊಂತಂ ತನ್ನ ಹಸ್ತದೊಳ್ ತನ್ನ ಬಲಂ ॥
ಬೆರಸು ಸುಷೇಣಂ ಖೇಚರ
ಪರಿವೃಢನಯ್ದನೆಯ ಬಾಗಿಲೊಳ್ ಬಂದಿರ್ದಂ ॥ ೪೦ ॥

ಅಪರಿಮಿತ ಸೈನಿಕಂ ಪಿಡಿ
ದು ಪಿಂಡಿವಾಳಮನಖರ್ವ ಬಾಹಾಗರ್ವಂ ॥

1. ಪಾಱದೆ. ಗ. ಚ.

ಕ್ಷಪಿತ ರಿಪುಸೈನ್ಯನಿರ್ದಂ
ಕಪಿಕುಲನಾಱನೆಯ ಬಾಗಿಲೊಳ್ ಸುಗ್ರೀವಂ ॥ ೪೧ ॥

ಎನ್ನನತಿಕ್ರಮಿಸಲ್ ನೆಱೆ
ವನ್ನಂ ಪೆಱನಾವನಿರುಳ ಕಾಳೆಗದೊಳೆನು ॥
ತ್ತುನ್ನೀಲಂ ರಣಲೋಲಂ
ತನ್ನ ಬಲಂಬೆರಸು ಕಡೆಯ ಬಾಗಿಲೊಳಿರ್ದಂ ॥ ೪೨ ॥

ಅಂತವರಸಂಖ್ಯಾತ ಬಲಸಮೇತರಾಗಿರ್ಪುದುಮಾ ಪ್ರಾಕಾರದೊಳಗಣ ಮಣಿಮಂಟಪದ ಪೂರ್ವದ್ವಾರದೊಳ್ ಶರಭನುಂ ಪಶ್ಚಿಮದ್ವಾರದೊಳ್ ಚಂದ್ರಮರೀಚಿಯುಂ ಉತ್ತರದ್ವಾರದೊಳ್ ಜಾಂಬವನುಂ ದಕ್ಷಿಣದ್ವಾರದೊಳ್ ಮಹೇಂದ್ರನುಂ ಅಪಾರ ವೀರಭಟ ಸೇನಾಸಮನ್ವಿತರಾಗಿ ಲಕ್ಷ್ಮಣನಂ ಕೈಕೊಂಡಿರ್ಪುದುಮಿತ್ತ ರಾವಣಂ ನಿಜಾಂತರಂಗದೊಳ್—

ಕಂ ॥ ಸಾಯದೆ ಮಾಣಂ ಲಕ್ಷ್ಮಣ
ನೀಯಿರುಳೊಳೆ ಸಾಯೆ ಸೆಱೆಗಳಂ ಕೊಲ್ಲದೆ ಕೈ ॥
ಗಾಯುರವರೆಮಗೆ ಪಿರಿದುಮ
ಪಾಯಂ ಸಮನಿಸಿದುದೆಂದು ಚಿಂತಿಸುತಿರ್ದಂ ॥ ೪೩ ॥

ಅಂತಿರ್ಪುದುಮಿತ್ತ ಸೀತಾದೇವಿ ಶಕ್ತಿಪ್ರಹಾರದಿಂ ಲಕ್ಷ್ಮೀಧರಂ ಮೂರ್ಛಿತನಾಗಿರ್ದನೆಂಬುದಂ ಕೇಳ್ದು ಶೋಕಾನಲ ದಂದಹ್ಯಮಾನ ಮಾನಸೆಯಾಗಿ—

ಕಂ ॥ ಈ ದಿವ್ಯಾಯುಧ ಹತಿಯಿಂ
ದಾದತ್ತು ವಿಪತ್ತಿ ನಿನಗೆ ಲಕ್ಷ್ಮೀಧರ ಧಾ ॥
ತ್ರೀ ದಯಿತನಪ್ಪ ನೀನೆಂ
ಬಾದೇಶಮದೆತ್ತ ಪೋಯ್ತು ಮನುಕುಲ ತಿಲಕಾ ॥ ೪೪ ॥

ಸಾವಂ ರಾವಣನೆಂದರ್
ಕೇವಲಿಗಳ್ ಸಿದ್ಧಶಿಲೆಯನುದ್ಧರಿಸಿದ ಶೌ ॥
ರ್ಯಾವಷ್ಟಂಭನಿನದು ಪುಸಿ
ಸಾವಾದುದೆ ನಿನಗೆ ವೈರಿ ಶಸ್ತ್ರಾಹತಿಯಿಂ ॥ ೪೫ ॥

ಎಂದು ಪಲತೆಱದಿಂ ಪ್ರಳಾಪಂಗೆಯ್ವ ಸೀತೆಯುಂ ವಿನೀತೆ ಖಚರಕಾಂತೆ ಸಂತೈಸಿ ನಿಮಗಿನಿತು ದುಃಖಮೇವುದು ನಿಮ್ಮ ಮೈದುನಂ ವಾಸುದೇವನಪ್ಪುದಱಿಂ ಪ್ರತಿವಾಸುದೇವನಿಂ ಸಾವನೆಯ್ದುವನಲ್ಲನೆಂದಱಲನಾಱಿಸುತಿರ್ಪಿನಮಿತ್ತಲ್—

ಕಂ ॥ ಗಗನ ಚರಂ ಲಕ್ಷ್ಮೀಧರ
ನಗಣ್ಯ ಪುಣ್ಯ ಪ್ರಭಾವದಿಂ ಮತ್ತೊರ್ವಂ ॥
ಗಗನ ತಳಂ ನಿಜ ಭೂಷಾಂ
ಶುಗಳಿಂ ಪ್ರಜ್ವಳಿಸುವಂತು ಬೇಗಂ ಬಂದಂ ॥ ೪೬ ॥

ಅಂತು ಬಂದು ಬೀಡಂ ಪುಗುವಲ್ಲಿ ಕಾಪಿನವರಡ್ಡಂಬರ್ಪುದುಮಾತಂ ರಥ ನೂಪುರಚಕ್ರವಾಲಪುರದಿಂ ಕಾಳೆಗದ ಸುದ್ದಿಯಂ ಜನಕನಾರಯ್ಯಲಟ್ಟಿದೊಡೆ ಬಂದೆನೆಂದವರನುಮತದಿಂ ಪ್ರಭಾಮಂಡಲನಂ ಬಂದು ಕಂಡು ತನ್ನ ಬಂದ ಬರವ ನಱಿಪಿ ಸೌಮಿತ್ರಿಯ ಮೂರ್ಛಾಪ್ರಪಂಚಮನವರ ದೆಸೆಯಿನಱಿದಾ ದಿವ್ಯ ಶಕ್ತಿ ಯಿಂದಾದಪಾಯಮನಪಹರಿಸುವುಪಾಯಮನಾಂ ಬಲ್ಲೆನೆಂಬುದುಂ ಪ್ರಭಾಮಂಡ ಲಂ ಪ್ರಮೋದ ಮುದಿತ ಹೃದಯನಾತನಂ ರಾಮಸ್ವಾಮಿಯಲ್ಲಿಗುಯ್ವುದುಮಾತಂ ಸಾಷ್ಟಾಂಗ ಪ್ರಣತನಾಗಿ ದೇವ ಭವತ್ಪ್ರಸಾದದಿಂ ಲಕ್ಷ್ಮೀಧರಂಗೆ ಸರ್ವ ಕ್ಷೇಮ ಮಕ್ಕುಮಾ ದೆಸೆಗುಮ್ಮಳಿಸದೆನ್ನ ಬಿನ್ನಪಮನವಧರಿಸುವುದೆಂದಿಂತೆಂದಂ—

ಚ ॥ ನಿರುಪಮ ದೇವನೀತ ಪುರಮೆಮ್ಮ ಪುರಂ ಪುರ ವಲ್ಲಭಂ ಕಲಾ ।
ಪರಿಣತನೆನ್ನ ತಂದೆ ಶಶಿಮಂಡಲನಾನತಿಚಂದ್ರನೆಂಬ ಖೇ ॥
ಚರನೆನದೊರ್ಮೆ ವಾಯು ಪಥದೊಳ್ ಪರಮೋತ್ಸವದಿಂ ವಿಹಾರಿಸು ।
ತ್ತಿರೆ ಪಗೆವಂ ಸಹಸ್ರವಿಜಯಂ ಕಡುಕೆಯ್ದಿದಿರಾಗಿ ತಾಗಿದಂ ॥ ೪೭ ॥

ಅಂತು ತಾಗೆ ಪಿರಿದುಪೊಟ್ಟಿರ್ವರುಂ ಭರಂಗೆಯ್ದು ಕಾದುತ್ತಿರ್ದು—

ಕಂ ॥ ಅವನಿಟ್ಟ ಶಕ್ತಿಯಿಂದಾಂ
ಜವಮುಱಿದು ನಭೋವಿಭಾಗದಿಂ ಸಾಕೇತ ॥
ಕ್ಕವತರಿಸಿ ಮಹೇಂದ್ರೋದ್ಯಾ
ನ ವನದ ತಣ್ಬುಱಲ ತಾಣದೊಳ್ ಬಿೞ್ದಿರ್ದೆಂ ॥ ೪೮ ॥

ಚ ॥ ಭರತನುಮೆನ್ನ ಪುಣ್ಯವಶದಿಂದಿರದಲ್ಲಿಗೆ ಬಂದು ಮೂರ್ಛೆಮೋ ।
ಗಿರೆ ಕೃಪೆಯಿಂದಮೆನ್ನನವಲೋಕಿಸಿ ದಿವ್ಯ ಸುಗಂಧ ತೋಯಮಂ ॥
ತರಿಸಿ ಮುದಂಗದೊಳ್ ತಳಿಯೆ ಶಕ್ತಿಯ ಶಕ್ತಿ ಪೊಡರ್ಪುಗೆಟ್ಟು ಚಿ ।
ಚ್ಚರಮದು ಪಿಂಗೆ ಮುಚ್ಚೆದಿಳಿದೆಂ ಮರವಟ್ಟವನೇೞ್ಪೆ ಮಾಟ್ಕೆಯಿಂ ॥ ೪೯ ॥

ಅಂತು ಮೂರ್ಛೆಯಿಂದೆೞ್ಚತ್ತು ಕತಿಪಯ ಪರಿಜನಂಬೆರಸಿರ್ದು ಭರತನಂ ಕಂಡಕಾರಣ ಬಂಧುವಪ್ಪ ನಿನ್ನ ದೂಸಱಿಂದೆನಗೆ ಪುನರ್ಜನ್ಮಮಾದುದೀ ಗಂಧ ಸಲಿಲಕ್ಕೆನಿತು ಸಾಮರ್ಥ್ಯಮಾದ ಕಾರಣಮಂ ಪೇೞ್ವುದೆನೆ ಭರತನಿಂತೆಂದನೆಮ್ಮ

ಪುರಕ್ಕೆ ಮಾರಿಗುತ್ತಂ ಮೊದಲಾಗೆ ಪೆಱವುಮಾಗಂತುಕ ಪೀಡೆಗಳಪ್ಪುದುಮಾನ ವರ್ಕೇನುಂಗೆಯ್ಯಲಱಿಯದುಮ್ಮಳಿಸುತ್ತಿರ್ಪುದುಂ ಆ ವ್ಯತಿಕರಮನೆಮ್ಮ ಮಾವಂ ದ್ರೋಣಮೇಘಂ ಕೇಳ್ದು ಬಂದಾ ಗಂಧೋದಕಮಂ ತಳಿದು—

ಕಂ ॥ ಪುರಮುಂ ದೇಶಮುಮಂ ವ್ಯಾ
ಧಿ ರಹಿತಮಪ್ಪಂತು ಮಾೞ್ಪುದುಂ ಪಿರಿದಪ್ಪ ॥
ಚ್ಚರಿ ತನ್ನ ಚಿತ್ತದೊಳ್ ಪೆ
ರ್ಚಿರೆ ಭರದಿಂ ದ್ರೋಣಮೇಘನಂ ಬೆಸಗೊಂಡೆಂ ॥ ೫೦ ॥

ಅಂತು ಬೆಸಗೊಳ್ವುದುಂ ದ್ರೋಣಮೇಘನಿಂತೆಂದಂ—

ಕಂ ॥ ಪಲವುಂ ವ್ಯಾಧಿಗಳಿಂ ಮು
ತ್ತಲವಧು ನವೆಯುತ್ತುಮಿರ್ದು ಬಸಿರಾಗಲೊಡಂ ॥
ತೊಲಗೆ [1]ರುಜೆ ಹೃದಯ ಶಲ್ಯಂ
ಲಲನಾರತ್ನಮನದೊಂದು ಕೂಸಂ ಪೆತ್ತಳ್ ॥ ೫೧ ॥

ಆ ಕೂಸಿಂಗದುಕಾರಣದಿಂ ವಿಶಲ್ಯಸೌಂದರಿಯೆಂಬ ಪೆಸರಾದುದಾಕೆಯ ಮಜ್ಜನ ಜಲದಿಂದೆಮ್ಮ ನಾಡುಂ ಬೀಡುಂ ವ್ಯಾಧಿರಹಿತಮಾದುದೆಂಬಿದಂ ದ್ರೋಣ ಮೇಘಂ ಪೇೞ್ದನೆಂದು ಭರತಂ ಪೇೞ್ವುದುಂ—

ಕಂ ॥ ಎನಗಧಿಕಮಾಗೆ ಕೌತುಕ
ಮಿನಿತತಿಶಯಮಾಕೆಗಾದ ಕಾರಣಮಂ ಪೇ ॥
ೞಿನಗೆಂದು ಮತ್ತೆಯುಂ ಭರ
ತನನಾಂ ಬೆಸಗೊಂಡೆನಪರಿಮಿತ ಸುಚರಿತನಂ ॥ ೫೨ ॥

ಬೆಸಗೊಳ್ವುದುಂ ಭರತನಿಂತೆಂದನೀ ಪೂರ್ವವಿದೇಹದ ಪುಂಡರೀಕಿಣೀಪುರಮ ನಾಳ್ವಂ ತ್ರಿಭುವನಾನಂದ ಚಕ್ರವರ್ತಿಯೆಂಬನಾತನ ಮಗಳನಂಗಶರೆಯೆಂಬಳ್ ತಿರುವಿಂ ಬರ್ದುಂಕಿದನಂಗನರಲಂಬಿನಂತೆ ಕೇಳೀವನದೊಳಗೆ ಸುೞಿಯುತ್ತಿರ್ಪುದು ಮಾ ಸಮಯದೊಳ್ ಪುಷ್ಕಲಾವತೀವಿಷಯದ ವಿಜಯಾರ್ಧಗಿರಿಯ ಪ್ರತಿಷ್ಠಾ ಪುರಮನಾಳ್ವಂ ಪುನರ್ವಸುವೆಂಬ ವಿದ್ಯಾಧರನಾಕೆಯಂ ಕಂಡು ಮದನಶರ ಶಲಾಕಾ ಕೀಲಿತ ಹೃದಯನಾಗಿ ವಿಮಾನದೊಳಿಟ್ಟು ನಭಕ್ಕೆ ನೆಗೆದು ಪೋಪುದುಂ ತ್ರಿಭುವ ನಾನಂದಚಕ್ರವರ್ತಿ ಕೋಪವಶ ವರ್ತಿಯಾಗಿ ಪಲರುಂ ವಿದ್ಯಾಧರ ಪ್ರಮುಖರ ನಾತನ ಮೇಲೆತ್ತವೇೞ್ವುದುಮವರೊಳ್ ಪುನರ್ವಸು ಕಾದಿ ಬಸವೞಿದನಂಗಶರೆ ಯಂ ಪರ್ಣಲಘು ವಿದ್ಯೆಯಿಂ ನೆಲಕ್ಕಿೞಿಪುವಂತು ಮಾಡಿ ಪೋಪುದುಂ—

1. ರುಜಾ ಹೃಚ್ಛಲ್ಯಂ. ಖ. ಘ. ಚ.

ಕಂ ॥ ಆ ವಿದ್ಯೆ ಗಗನ ತಲದಿಂ
ದಾವಧುವಂ ಮೆಲ್ಲನಿೞಿಪಿ ರೌದ್ರ ಮೃಗಂಗ ॥
ಳ್ಗಾವಾಸಮೆನಿಪದೊಂದು ಮ
ಹಾ ವಿಷಮಾಟವಿಯೊಳಿರಿಸಿ ಪೋದತ್ತಾಗಳ್ ॥ ೫೩ ॥

ಆಕೆಯುಮಾ ಕಾಂತಾರ ನ
ದೀ ಕೂಲದೊಳಿರ್ದು ನೆನೆದು ಪಿತೃ ಮಾತೃಗಳಂ ॥
ಶೋಕಾಕುಲೆ ದುಷ್ಕರ್ಮ ವಿ
ಪಾಕಮಿದೆಂದಂತರಂಗದೊಳ್ ಚಿಂತಿಸಿದಳ್ ॥ ೫೪ ॥

ಧರಣೀಶ್ವರ ಸುತೆಯಾಗಿಯು
ಮರಣ್ಯದೊಳ್ ಬಿಟ್ಟು ಸಾವ ದುಷ್ಕರ್ಮ ಫಲಂ ॥
ದೊರೆಕೊಂಡತ್ತೆನಗಿದನಪ
ಹರಿಪೊಡೆ ಪೆಱತೇಂ ಜಿನೇಂದ್ರ ಚರಣಮೆ ಶರಣಂ ॥ ೫೫ ॥

ಎಂದು ತಱಿಸಂದು ತಪದೊಳ್
ನಿಂದು ಮಹಾನೋಂಪಿಯುನಿತುಮಂ ಪಲಕಾಲಂ ॥
ಸಂದಿಸಿ ನೋಂತು ತನೂದರಿ
ಪಿಂದಿಕ್ಕಿದಳಬ್ದಮಂ ಸಹಸ್ರ ತ್ರಯಮಂ ॥ ೫೬ ॥

ಅಂತು ತನು ತಾಱೆ ತಪಂಗೆಯ್ದನಶನ ದೀಕ್ಷೆಯೊಳಿರ್ದೊಂದು ದೆವಸಂ—

ಕಂ ॥ ನುಂಗೆ ಜರದಜಗರಂ ತ
ನ್ನಂಗಿ ತಪಸ್ವಿನಿ ಸಮಾಧಿ ಸಮನಿಸೆ ಮನದೊಳ್ ॥
ಪಿಂಗದೆ ನೆಲಸಿರೆ ಪಂಚ ಪ
ದಂಗಳ್ ನಾಲಗೆಯೊಳಱಿವೆ ಮೆಯ್ಯಾಗಿರ್ದಳ್ ॥ ೫೭ ॥

ಅಂತಿರ್ದು ಶರೀರಭಾರಮನಿೞಿಪಿ ಸನತ್ಕುಮಾರ ಕಲ್ಪದೊಳ್ ಪುಟ್ಟಿ ಸುರ ಲೋಕ ಸುಖಮನನುಭವಿಸಿ ಬಂದೀಗಳೀ ದ್ರೋಣಮೇಘಂಗೆ ಸರ್ವೌಷಧಿ ಪ್ರಾಪ್ತೆ ಪುಷ್ಪ ಸುತೆಯಾದಳಾ ಪುನರ್ವಸುವುಂ ಮಗುೞ್ದು ಬಂದು ಮುನ್ನಂ [1]ತನ್ನಿರಿಸಿ ಪೋದ ಪೇರಡವಿಯೊಳನಂಗಶರೆಯಂ ಕಾಣದೆ ತನಗದುವೆ ನಿರ್ವೇಗ ಕಾರಣಮಾಗೆ ತಪಂಬಟ್ಟು—

1. ತಂದಿರಿಸಿ. ಕ. ಚ.

ಕಂ॥ ತನುವಂ [1]ತಪಿಯಿಸಿ ತಪದೊಳ್
ಮುನಿಯದೆ ಮುನಿಯಿಸದೆ ನಡೆದು ಮುನಿಪತಿ ಸಂನ್ಯಾ॥
ಸನದಿಂ ಸಮಾಧಿ ಸಮನಿಸೆ
ಸನತ್ಕುಮಾರದೊಳಪಾರ ಸುಖದೊಳ್ ತಣಿದಂ ॥ ೫೮ ॥

ನಿರತಿಶಯ ಸುಖ ಸುಧಾಸಾ
ಗರದೊಳ್ ಮನವಾರೆ ಮೂಡಿ ಮುಳ್ಕಾಡುತ್ತುಂ॥
ಪರಮಾಯುವಂ ಪುನರ್ವಸು
ಚರಾಮರಂ ತೀರ್ಚಿ ಬಂದು ಲಕ್ಷ್ಮಣನಾದಂ ॥ ೫೯ ॥

ಎಂದು ಮನಃಪರ್ಯಯ ಜ್ಞಾನಿಗಳಪ್ಪ ಸರ್ವಭೂತಹಿತ ಭಟ್ಟಾರಕರ್ ತನಗೆ ಪೇೞ್ದುದನೆನಗೆ ಭರತಂ ಪೇೞ್ದನೆಂದತಿಚಂದ್ರ ವಿಯಚ್ಚರಂ ಬಿನ್ನವಿಸೆ ರಾಮ ಚಂದ್ರಂ ಮೆಚ್ಚಿ ಮೆಚ್ಚುಗೊಟ್ಟು ಹನುಮದಂಗದ ಪ್ರಭಾಮಂಡಲರನಾ ಗಂಧೋದಕ ಮಂ ಭರತನಂ ಬೇಡಿ ತನ್ನಿಮೆಂದಟ್ಟುವುದುಮವರ್ ಮನೋವೇಗದಿಂ ದಿವ್ಯ ವಿಮಾನಂಗಳನೇಱಿ ವಿಯನ್ಮಾರ್ಗದಿಂ ಪೋಗಿ ಸಾಕೇತಮಂ ಪೊಕ್ಕು ಭರತನಂ ಕಂಡು—

ಕಂ॥ ಕಿಱಿದಱಿೞೆ ರಣದ ವಾರ್ತೆಯ
ನಱಿಪಿ ದಶಾನನನ ಶಕ್ತಿ ನೆಱಗೊಳೆ ತನುವಂ॥
ಮಱೆದಿರ್ದಂ ಲಕ್ಷ್ಮಣನೆಂ
ದಱಿಪಿದರಂಗದ ಮರುತ್ತನೂಜ ಪ್ರಮುಖರ್ ॥ ೬೦ ॥

ಪ್ರಶಮಿಸುಗುಂ ಲಕ್ಷ್ಮೀಧರ
ನ ಶಕ್ತಿಯಿಂದಾದ ಬಾಧೆ ತಡೆಯದೆ ನೀವಿಾ॥
ನಿಶೆಯೊಳೆ ತಂದೆಮಗೀವುದು
ವಿಶಲ್ಯಸೌಂದರಿಯ ಮಿಂದ ಗಂಧೋದಕಮಂ ॥ ೬೧ ॥

ಅದಲ್ಲದಂದು ನೇಸರ್ ಮೂಡುವುದುಂ ಲಕ್ಷ್ಮಣಂ ಗತಪ್ರಾಣನಕ್ಕುಮೆನೆ ಭರತ ಶತ್ರುಘ್ನರ್ ಕೇಳ್ದು ರಾವಣನಮೇಲೆ ನಡೆಯಲೊಡರಿಸಿ—

ಕಂ॥ ಬಿಸಸನದೊಳ್ ದಶಮುಖನಂ
ದೆಸೆವಲಿಗುಡಲೆಂದು ಭರತ ಶತ್ರುಘ್ನರ್ ಸಾ॥
ಹಸ ಧನ ರಾಜಿ ಕ್ರೀಡಾ
ವಸಥರ್ ಸನ್ನಾಹಭೇರಿಯುಂ ಪೊಯಿಸುವುದುಂ ॥ ೬೨ ॥

1. ಛಪಿಯಿಸಿ. ಗ.

ಅದಂ ಪ್ರಭಾಮಂಡಲಂ ಬಾರಿಸಿ ರಘುವೀರನ ಬೆಸನಿಲ್ಲದೆಮಗೆ ನಿಮ್ಮ ನುಯ್ವುದುಚಿತಮಲ್ತು ನಿಮಗೆ ಲಂಕೆ ದೂರಮಪ್ಪುದಱಿಂ ಬೇಗಂ ಬರಲ್ಬಾರದೆನೆ ಭರತನಿನ್ನೆಮಗೆ ಕಜ್ಜಮಾವುದೆನೆ ಗಂಧೋದಕಮಂ ತರಿಸಿ ಕೊಟ್ಟೊಡದನುಯ್ದು ಲಕ್ಷ್ಮಣನ ಶಸ್ತ್ರಪೀಡೆಯಂ ಕಳೆವಮೆನೆ ಭರತನಿಂತೆಂದಂ—

ಕಂ ॥ ಸುರಭಿ ಜಲದಿಂದಮೇನಾ
ತರುಣಿಯನೊಡಗೊಂಡು ಪೋಪುದಾಕೆಗೆ ಲಕ್ಷ್ಮೀ ॥
ಧರನೆ ವರನೆಂಬುದಂ ಶುಭ
ಚರಿತರ್ ಮುನ್ನೆನಗೆ ದಿವ್ಯಮುನಿಪರ್ ಪೇೞ್ದರ್ ॥ ೬೩ ॥

[1]ಎಂತುಂ ಸ್ತ್ರೀರತ್ನಕ್ಕಾ
ತಂ ತಕ್ಕಂ ಮಿಕ್ಕ[2]ರನಧಿಕಾರಿಗಳೆಂದ ॥
ತ್ಯಂತ ಹಿತರಂ ಪ್ರಧಾನರ
ನಂತವರೊಡಗೂಡಿ ಕೂಸನೆರೆದಟ್ಟುವುದುಂ ॥ ೬೪ ॥

ಮನ್ನಿಸಿ ಭರತನ ಮಾತಂ
ತನ್ನ ತನೂಭವೆ ವಿಶಲ್ಯಸೌಂದರಿವೆರಸಿ ॥
ತ್ತ್ರನ್ನೂರ್ವರ್ ಕನ್ನೆಯರಂ
ಚೆನ್ನೆಯರಂ ದ್ರೋಣಮೇಘನತ್ಯುತ್ಸವದಿಂ ॥ ೬೫ ॥

ಆ ಕನ್ಯಾರತ್ನಂಗಳಂ ಪ್ರಭಾಮಂಡಲಂ ವಿಮಾನಾರೂಢೆಯರ್ಮಾಡಿ ನಕ್ಷತ್ರ ವೀಥಿಯಿಂ ಕ್ಷಣಮಾತ್ರದೊಳೆ ರಣಭೂಮಿಯನೆಯ್ದಿ ವಿಮಾನಂಗಳಿನವನೀತಲ ಕ್ಕವತರಿಸಿ ಬರ್ಪಲ್ಲಿ ವಿಶಲ್ಯಸೌಂದರಿ ಲಕ್ಷ್ಮಣನನೆನಿತೆನಿತು ಸಾರೆ ಪೋಕುಮನಿತ ನಿತು ಶಕ್ತಿ ಶಕ್ತಿಗೆಟ್ಟು—

ಮ ॥ ಗಗನಾಭೋಗಮನಾವಗಂ ಬೆಳಗುತುಂ ಜ್ವಾಲಾ ಸಹಸ್ರಂಗಳಿಂ ।
ದುಗುಳುತ್ತುಂ ಕಿಡಿಯಂ ಜನಾರ್ದನನ ವಕ್ಷೋಭಾಗಮಂ ಬಿಟ್ಟು ಮೇ ॥
ಗೊಗೆವಾಗಳ್ ಪವನಾತ್ಮಜಂ ಪಿಡಿಯೆ ದಿವ್ಯಸ್ತ್ರೀಯ ರೂಪಾಗಿ ಕೈ ।
ಮುಗಿದೆನ್ನಂ ಬಿಡಿಮೆಂದು ತಲ್ಲಳಿಸಿ ಶಂಕಾತಂಕಮಂ ತಾಳ್ದಿದಳ್ ॥ ೬೬ ॥

ಅಂತು ನಡನಡುಗುತ್ತುಮಾಂ ವಿಜೆಯೆಯೆಂಬೆಂ ಪ್ರಜ್ಞಪ್ತಿವಿದ್ಯೆಯಿಂ ಕಿಱಿ ಯಳೆಂ ಬಾಲಿಭಟ್ಟಾರಕರ್ ಕಾರಣಮಾಗೆ ರಾವಣಂ ಕೈಲಾಸಮನೆತ್ತಿ ಬೞಿಕ್ಕೆ ವೀಣೆಯಂ ಬಾಜಿಸಿ ಜಿನ ಗುಣಸ್ತವನಂಗಳಂ ಹರ್ಷಚಿತ್ತದಿಂ ಪಾಡುತ್ತುಮಿರೆ ಧರಣೇಂದ್ರಂಗಾಸನ ಕಂಪಮಾಗೆ ಬಂದು—

---

1. ಅಂತುಂ. ಗ. ಘ; ಉಂತುಂ. ಖ 2. ರಧಿಕರಾರಿಂದಂದ. ಚ

ಕಂ ॥ ಕರವೊಸೆದು ನೋಡಿ ದಶಕಂ
ಧರನಂ ಹರ್ಷ ಪ್ರಕರ್ಷದಿಂದೆನ್ನಂ ಖೇ ॥
ಚರಪತಿಗೆ ಕೊಟ್ಟನಾಂ ದಶ
ಶಿರನ ಬೆಸಂ[1]ಬಿಡಿದು ತಾಗಿದೆಂ ಲಕ್ಷ್ಮಣನಂ ॥ ೬೭ ॥

ನಾನುಮೀ ಸರ್ವೌಷಧರ್ಧಿಪ್ರಾಪ್ತೆಯಪ್ಪ ವಿಶಲ್ಯಸೌಂದರಿಯಿಂದಲ್ಲದೆ ಪೋಪೆನಲ್ಲೆನೆನ್ನಂ ಪೋಗಲೀಯಿಮೆನೆ ವಿದ್ಯಾಧರರ್ಗೆಲ್ಲಂ ಚೋದ್ಯಮಾಗೆ ವಿದ್ಯಾದೇವತೆಯನಣುವಂ ಬಿಟ್ಟು ಕಳೆವುದುಮಿತ್ತಲ್—

ಕಂ ॥ ಚಲದಲಕ ಚಯಂ ರಘುಕುಲ
ತಿಲಕನ ಚರಣಾರವಿಂದಮಂ ಮಧುಕರ ಮಂ ॥
ಡಲಿಯಂತೆ ಮುಸುಕೆ ವನಿತಾ
ತಿಲಕಂ ನಡೆತಂದು ವಿನಯ ವಿನಮಿತೆಯಾದಳ್ ॥ ೬೮ ॥

ತದನಂತರಂ—

ಕಂ ॥ ದನುಜೇಂದ್ರನ ವಿಜಯ ಶ್ರೀ
ವನಿತೆಯೊ ಲಕ್ಷ್ಮಣನ ಪುಣ್ಯದೇವತೆಯೋ ಪೇ ॥
ೞೆನೆ ಕೆಲದೊಳ್ ಬಂದಿರ್ದಳ್
ತನುರುಚಿ ಮೂವಳಸುವಳಸೆ ಪರಿಷಜ್ಜನಮಂ ॥ ೬೯ ॥

ಆಗಳಾ ಕನ್ಯಾರತ್ನದ ಕರಸ್ಪರ್ಶನದಿಂ ಪವಿತ್ರ ಸುರಭಿ ಸಲಿಲ ಸೇಚನದಿಂ—

ಕಂ ॥ ಪತ್ತುವಿಡೆ ಮೂರ್ಛೆ ಮುನಿಸ
ಚ್ಚೊತ್ತಿದವೋಲ್ ಮನದಿನಗಲದಿರೆ ಕಣ್ ಕೆಂಪಂ ॥
ಬಿತ್ತರಿಸೆ ಮುಸಗಿ ರಾವಣ
ನೆತ್ತಣನೆನುತುಂ ಜನಾರ್ದನಂ ಕುಳ್ಳಿರ್ದಂ ॥ ೭೦ ॥

ಅಂತಿರ್ಪುದುಂ—

ಕಂ ॥ ಅಲರ್ವಂತಿರಿನೋದಯದೊಳ್
ಜಲಜ ವನಂ ರಾಘವಂಗಮಖಿಲ ಜನಕ್ಕಂ ॥
ನೆಲೆವೆರ್ಚಿದುದನುರಾಗಂ
ಜಲರುಹ ನಾಭಂಗೆ ಪಿಂಗೆ ಮೂರ್ಛಾವೇಗಂ ॥ ೭೧ ॥

1. ಬಸದು. ಖ. ಗ. ಚ.

ಕಂ ॥ ಆಶೀರ್ನಿನಾದವಾಶಾ
ದೇಶಮನೆಯ್ದಿದುದು ಮಂಗಲಾನಕ ರವಮಾ ॥
ಕಾಶಮನಡರ್ದುದು ಮೂರ್ಛಾ
ಕ್ಲೇಶಂ ಲಕ್ಷ್ಮೀಧರಂಗೆ ಪೆಱಪಿಂಗಲೊಡಂ ॥ ೭೨ ॥

ನಾರಾಯಣನಂ ಮಣಿಮಯ
ನೀರಾಜನ ದೀಪಮಾಲೆ ಬಳಸಿದುವಾಗಳ್ ॥
ಮೇರುವನೊಲ್ಲದೆ ಪಲವುಂ
ತಾರಾವಳಿ ಬಳಸುವಂತೆ ನೀಲಾಚಲಮಂ ॥ ೭೩ ॥

ಆ ಸಮಯದೊಳ್ ಲಕ್ಷ್ಮಣನ ಸಮಕ್ಷದೊಳಿರ್ದ ವಿಶಲ್ಯಸೌಂದರಿ—

ಕಂ ॥ ಅಪಹರಿಸಿ ಶಕ್ತಿ ಬಾಧೆಯ
ನುಪಕಾರಮನುಂಟುಮಾಡಿ ಲಕ್ಷ್ಮಣನೊಳ್ ಪೀ ॥
ನ ಪಯೋಧರೆ ಕಡುಗಾಡಿಯೊ
ಳಪಕಾರಮನತನು ಬಾಧೆಯುಂ ಪುಟ್ಟಿಸಿದಳ್ ॥ ೭೪ ॥

ಆಗಳಾ ಕನ್ಯಾರತ್ನಂಬೆರಸು ತಮ್ಮ ತಂದನೂರ್ವರ್ಕನ್ನೆಯರುಮಂ ಮರು ನ್ನಂದನಾದಿಗಳ್ ವಿವಾಹವಿಧಿಯಿಂ ಕೈಕೊಳ್ವುದೆನೆ ರಾವಣ ವಿಜಯಾನಂತರಂ ಸಕಲ ಭುವನಾಂಬಿಕೆಯುಂ ಸೀತಾದೇವಿಯುಂ ತಂದು ರಾಮಸ್ವಾಮಿಗೊಪ್ಪಿಸಿದೊ ಡಲ್ಲದೆ ಮದುವೆನಿಲ್ಲೆನೆನೆ ತಮ್ಮ ಪೋದ ಬಂದ ವೃತ್ತಾಂತಮುಮಂ ವಿಶಲ್ಯಸೌಂದರಿ ಯಂ ತಂದ ತೆಱನುಮಂ ತಿಳಿಪಿ ನಿಮ್ಮ ಪುಣ್ಯಪ್ರಭಾವಕ್ಕಿದಾವ ಗಹನಮೆಂದೊಡಂ ಬಡಿಸೆ ಶುಭ ಮುಹೂರ್ತದೊಳ್ ಲಕ್ಷ್ಮಣನನಿಬರುಮಂ ಮದುವೆನಿಲ್ವುದುಮಿತ್ತಲ್—

ಕಂ ॥ ಚರನಱಿಪೆ ತಮಗೆ ದಶಕಂ
ಧರನ ಮೃಗಾಂಕಾದಿ ಮಂತ್ರಿ ಮುಖ್ಯರ್ ಲಕ್ಷ್ಮೀ ॥
ಧರ ಪುಣ್ಯಶಕ್ತಿಯುಂ ದಶ
ಶಿರಂಗದಂ ಪೇಟಲೆಂದು ಬೇಗಂ ಬಂದರ್ ॥ ೭೫ ॥

ಅಂತು ಬಂದು ಸಮುಚಿತಾಸನದೊಳ್ ಕುಳ್ಳಿರ್ದು ಮುಕುಳಿತಾಂಜಲಿಗ ಳಾಗಿ—

ಕಂ ॥ ಇರುಳೊಳೆ ವಿಶಲ್ಯಸೌಂದರಿ
ಬರೆ ಶಕ್ತಿ ಪೊಡರ್ಪುಗೆಟ್ಟು ಪೋದುದು ತತ್ಸಂ ॥

ದರಿವೆರಸು ನೂರ್ವರಂ ನೃಪ
ತರುಣಿಯರಂ ದೇವ ಮದುವೆನಿಂದನುಪೇಂದ್ರಂ ॥ ೭೬ ॥

ಎಂದು ಬಿನ್ನವಿಸೆ—

ಕಂ ॥ ಸೀತೆಯನೊಪ್ಪಿಸುವುದು ರಘು
ಜಾತನೊಳೊಡರಿಪುದು ಸಂಧಿಯಂ ಸಂಗ್ರಾಮಂ
ಪ್ರೋ ತಕ್ಕುದಲ್ತು ನಮಗವ
ರೇತೆಜದೊಳಮಧಿಕರವರನಾರ್ ಗೆಲ್ದಪರೋ ॥ ೭೭ ॥

ಎತ್ತಾನುಂ ಗೆಲ್ದೊಡಮಾ
ಪತ್ತಂ ಪಿಡಿವೆತ್ತ ಕುಂಭಕರ್ಣಾದಿಗಳೊಳ್ ॥
[1]ಮತ್ತೇನೊಡರಿಸುವರ್ ದನು
ಜೋತ್ತಂಸ ಬಱಿಕ್ಕೆ ಗೆಲ್ದೊಡಂ ಫಲಮುಂಟೇ ॥ ೭೮ ॥

ಎನೆ ಘನಾಘನ ನಿನದಮನಾಲಿಸಿದ ಪಂಚಾನನದಂತೆ ದಶಾನನಂ ಕನಲ್ದು—

ಕಂ ॥ ಇಂದ್ರನುಮಂ ಗೆಲ್ದೆನ್ನನು
ಪೇಂದ್ರಂ ಗೆಲ್ದಪನೆ ಗೆಲ್ದೊಡಂ ಜೀವನಮಾ ॥
ಚಂದ್ರಾರ್ಕಮೆ ವಿಶದ ಯಶ
ಶ್ಚಂದ್ರಿಕೆಗೆ ಕಳಂಕಮಾಗದಂತಿರೆ ನೆಗೞ್ವೆಂ ॥ ೭೯ ॥

ಅದಱಿಂ ನಿಮ್ಮ ಮಂತಣಕ್ಕವಸರಮಲ್ತುಸಿರದಿರಿಮೆಂದು ಮಂತ್ರಿಗಳಂ ಜಡಿಯೆ ರಾವಣನ ಕಟ್ಟಾಯಕ್ಕೆ ಮಯಂ ವಿಸ್ಮಯಂಬಟ್ಟು ದೇವ ನಮ್ಮ ಸೆಱೆ ಗಪಾಯಮಾಗದಂತು ಕಾದಿ ಗೆಲ್ವುದೆನೆ—

ಕಂ ॥ ಮಯನೆಂದುದನೇಗೊಂಡಂ
ನಯ ನಿಪುಣರ್ ಪೇೞ್ದೊಡಂ ದುರಾಗ್ರಹದಿಂ ಸಂ ॥
ಧಿಯ ಮಾತಂ ಕೈಕೊಳ್ಳನೆ
ಭಯಮಱಿಯಂ ಕದನ ಮದ ವಶಂ ದಶವದನಂ ॥ ೮೦ ॥

ಅಂತಾತನ ನುಡಿಗೊಡಂಬಟ್ಟನಂತರಂ ರಾಮಲಕ್ಷ್ಮಣರ ಪುಣ್ಯ ಪ್ರಭಾವಕ್ಕೆ ವಿಸ್ಮಯಂಬಟ್ಟು ಸಿಂಹ ಗರುಡ ವಾಹನಂಗಳಂ ಪಡೆದು ಸುಗ್ರೀವ ಪ್ರಭಾಮಂಡಲ ಮರುನ್ನಂದನಾದಿಗಳ್ಗೆ ಪನ್ನಗಶರ ಪ್ರಹಾರದಿಂ ಸಮನಿಸಿದಾಸನ್ನ ಮೃತ್ಯುವನಪ ಹರಿಸಿ—

1. ಮತ್ತೆನ್ನದೊಡರಿಪರ್ ದನು. ಘ. ಚ.

ಚ ॥ ಅವಯವದಿಂದಮೆನ್ನ ತನುಜಾನುಜರಂ ಪಿಡಿದುಯ್ದರೆನ್ನ ಕೈ।
ದುವನುರಗೇಂದ್ರನೊಳ್ ಪಡೆದ ಶಕ್ತಿಯನಶ್ರಮದಿಂದೆ ಗೆಲ್ದರಾ ॥
ನವರನಶಲ್ಯರೆಂದುಱದೆ ಕಾದಿದೆನಪ್ಪೊಡೆ ಕಾರ್ಯ ಹಾನಿ ಸಂ।
ಭವಿಸುಗುವೆಂದು ತನ್ನ ಮನದೊಳ್ ಪರಿಭಾವಿಸಿದಂ ದಶಾನನಂ ॥ ೮೧ ॥

ಅಂತು ಮನದೊಳ್ ಮಂತಣಮಿರ್ದು ಕಾರ್ಯ ನಿಶ್ಚಯಂಗೆಯ್ದು—

ಕಂ ॥ ಸಾಧಾರಣರಿವರೆನಿಪ ವಿ
ರೋಧಿಗಳುಮನುಱದೆ ನೆಗಱ್ದುದನುಚಿತಮದಱಿಂ ॥
ಸಾಧಿಸಿ ಬಹುರೂಪಿಣಿಯಂ
ಸಾಧಿಸುವೆಂ ಪಗೆಯನೆಂಬ ಬಗೆಯಂ ಬಗೆದಂ ॥ ೮೨ ॥

ಅಂತು ಬಗೆದು ಲಂಕಾನಗರದೊಳಂ ನಾಡೊಳಂ ಹಿಂಸೆ ಬೇಡೆಂದು ಗೋಸಣೆ ಗಳೆದು ಜಿನಪೂಜೆಯಂ ಪ್ರತಿದಿನಂ ಮಾಱ್ಪಂತು ನಿಯಮಿಸಿ ಮಂಡೋದರಿಗಂ ಪೊಱಲ್ಗಮೆನಿತುಪಸರ್ಗಮನಾರ್ ಮಾಡಿಱ್ಪೊಡಂ ನಮ್ಮ ಪಡೆಯೊಳ್ ಮಾರ್ಕೊಳ್ಳ ದಂತು ಮಾಱ್ಪುದೆಂದು ಪೇೞ್ದು—

ಕಂ ॥ ಅರಮನೆಯೊಳಗಣ ಜಿನ ಮಂ
ದಿರಕ್ಕೆ ನಡೆತಂದು ಮಂಗಲದ್ರವ್ಯ ಪುರ ॥
ಸ್ಸರಮೊಳಗೆ ಪೊಕ್ಕು ಶಾಂತೀ
ಶ್ವರಂಗೆ ಪದಿಪೊದವೆ ಮಾಡಿ ಸವನೋತ್ಸವಮಂ ॥ ೮೩ ॥

ತದನಂತರಂ ದಿವ್ಯಾರ್ಚನೆಗಳಿಂದರ್ಚಿಸಿ ಪದ್ಮಾಸನ ಸ್ಥಿತಂ ಸ್ಫಟಿಕಾಕ್ಷ ಮಾಲೆ ಯಂ ಪಿಡಿದು ದಿವ್ಯ ಮಂತ್ರಂಗಳಂ ಜಪಿಯಿಸುತ್ತಿರ್ದನನ್ನೆಗಂ ಫಾಲ್ಗುನ ನಂದೀ ಶ್ವರಮಾದುದಾಗಳುಭಯಬಲಮುಮಭಯಘೋಷಣೆಯಂ ಘೋಷಿಸಿ ಕಾಳೆಗಮ ನುೞಿದಿರ್ಪುದುಂ—

ಕಂ ॥ ಅಱಿದು ವಿಭೀಷಣನಸುರನ
ತೆಱನಂ ಚರ ವಚನದಿಂದದಂ ರಘುವೀರಂ ॥
ಗಱಿಪುವ ಬಗೆಯಿಂ ಬಂದಂ
ಪೆಱನೀತೆಱದಿಂದೆ ಕೂಡೆ ತಿಳಿದವನಾವಂ ॥ ೮೪ ॥

ಅಂತು ಬಂದು ವಿಭೀಷಣನಿಂತೆಂದಂ—

ಚ ॥ ಭುಜ ಬಲಮುಂ ಪವಣ್ಬಡಿಪೊಡಪ್ರತಿಮುಂ ತವಿಲಿಲ್ಲ ದಾನವ ।
ಧ್ವಜಿನಿಗೆ ಚಂದ್ರಹಾಸಮುನಿದಿರ್ಚುವ ಚಕ್ರಮುನಾಂಕೆಗೊಳ್ವ ಭೂ ॥
ಭುಜ ಸುರ ಖೇಚರ ಪ್ರಮುಖರಿಲ್ಲೆನೆ ರಾಘವದೇವ ದುರ್ಜಯಂ ।
ನಿಜದೊಳೆ ಮತ್ತೆ ಸಾಧಿಸಿದಪಂ ಬಹುರೂಪಿಣಿಯಂ ದಶಾನನಂ ॥ ೮೫ ॥

ಕಂ ॥ ರಾವಣನೊರ್ವನುಮಂ ಧರ
ಣೀವಲ್ಲಭ ಗೆಲ್ವುದರಿದು ಸಾಧಿಸಿ ವಿದ್ಯಾ ॥
ದೇವತೆಯನವಂ ಪಡೆವಂ
ರಾವಣ ಕೋಟಿಯನಿದಿರ್ಚುವವರಾರ್ ಬಱಿಯಂ ॥ ೮೬ ॥

ಅದಱಿಂ ವಿದ್ಯಾಸಾಧನೆವುಗದ ಮುನ್ನಂ ರಾವಣಂಗುಪಸರ್ಗಮನೊಡರ್ಚಿ ಲಂಕಾಪುರಮಂ ಕೈಕೊಳ್ಳಲಿದವಸರಮೆನೆ ರಘುವೀರನಿಂತೆಂದಂ—

ಚ ॥ ವನಿತೆಗೆ ಕೈದುವಂ ಬಿಸುಟವಂಗಿದಿರಾಗದವಂಗೆ ಭೂಭುಜಂ ।
ಮುನಿವುದು ಪಾಱಿಯಲ್ತು ನಿಯಮ ಸ್ಥಿತನಾಗಿ ದಶಾನನಂ ಜಿನೇಂ ॥
ದ್ರನ ಮಱಿವೊಕ್ಕು ಸಾಧಿಸಿದಪಂ ಗಡ ವಿದ್ಯೆಯನೆಂತೊ ಬಾಧೆಯಂ ।
ಜನಿಯಿಪುದಾತನೊಳ್ ಬಿಸುಡತಕ್ಕುದನಿಂತುಸಿರಲ್ಕೆ ತಕ್ಕುದೇ ॥ ೮೭ ॥

ಎನೆ ವಿಭೀಷಣಾಂಗದಾದಿಗಳೀ ಮಹಾಸತ್ವನಪ್ಪ ರಘುವೀರನನಾಚಾರಮನೆಂತುಮೊಲ್ವನಲ್ಲನದುಕಾರಣದಿನಧಿರಾಜನಱಿಯದಂತು ವಿದ್ಯಾಸಾಧನೆಗೆ ವಿಘ್ನಂ ಮಾಳ್ಪಮೆಂದು [1]ನಂದೀಶ್ವರಮಂ ಕಱಿಸಿ ವಿಭೀಷಣಂಬೆರಸು—

ಕಂ ॥ ಮಕರಧ್ವಜ ಮುಖ್ಯರ್ ಖಚ
ರ ಕುಮಾರರ್ ಗಗನ ಮಾರ್ಗದಿಂ ಬಂದು ಬಲಾ ॥
ಧಿಕರಸಮ ಸೈನಿಕರ್ ಮಸ
ಗಿ ಕಪಿಧ್ವಜರುಱದೆ ಲಂಕೆಯಂ ಪುಗುತಂದರ್ ॥ ೮೮ ॥

ಒಡೆಯುತ್ತುಂ ಮಾಡಂಗಳ
ನುಡಿಯುತ್ತುಂ ನಂದನಂಗಳಂ ನೀರ್ನೆಲನಂ ॥
ಕಿಡಿಸುತ್ತುಂ ಲಂಕೆಗವರ್
ಪಡೆದರ್ ನಿಶ್ಶಂಕರಳವಿಗೞಿದೆರ್ದೆವಱಲಂ ॥ ೮೯ ॥

---

1. ನಂದೀಶ್ವರನಂ. ಗ.

ಅಂತು ವಾನರಧ್ವಜ ಸೇನೆ ಲಂಕೆಯಂ ಕದಡಿ ಕಲಂಕೆ ಮಯಂ ಮುಳಿದು ಕಾಳೆಗಕ್ಕೊಡರಿಸೆ ಬಂದು ಮಂಡೋದರಿ ತಂದೆಯಂ ಬಾರಿಸುವುದುಮಾತಂ ಶುಭ ಪರಿಣಾಮದಿಂ ನಿಜ ಭವನಮಂ ಪೊಕ್ಕಿರೆ ವಾನರ ಸೇನೆಯರಮನೆಯಂ ಪೊಕ್ಕು—

ಕಂ ॥ ಮುನಿದೆಱೆದು ತಂದು ನಿಜ ಕುಲ
ವನಿತೆಯರಂ ಬಿಡದೆ ವೋದಿಯುಂ ಹಾಹಾಕ್ರಂ ॥
ದನಮಂ ಪುಟ್ಟಿಸೆ ಕೇಳ್ದಂ
ದನುಜಂ ಜಪಿಯಿಸುತುಮಿರ್ದನವ್ಯಗ್ರ ಮನಂ ॥ ೯೦ ॥

ಅಂತಿರ್ಪುದುಮಾ ಜಿನ ಭವನದೊಳ್ ವಸಿಯಿಸುವ ದೇವತೆಗಳೆಲ್ಲಮಿವರಲ್ಲ ದುದಂ ನೆಗೞ್ದಿಪ್ಪರೆಂದಗುರ್ವಾಗೆ ಬೇತಾಳ ರೂಪುಗಳಂ ಬಿಗುರ್ವಿಸಿ ಪರಿತಂದು ಮಾರ್ಕೊಂಡು ಮರ್ಕಟಧ್ವಜ ಬಲಕ್ಕೆ ಭಂಗಮಂ ಪಡೆಯೆ ಪೆಱವುಂ ಜಿನಾವಾಸ ನಿವಾಸಿಗಳಪ್ಪ ದೇವತೆಗಳಾ ಬಲಮಂ ಪೆಱಗಿಕ್ಕಿ ಕಾದಿ ಮುನ್ನಿನ ದೇವತೆಗಳನೋಡಿಸು ವುದುಮವು ಪರಿತಂದು ನಿಜಸ್ವಾಮಿಯಪ್ಪ ಪೂರ್ಣಭದ್ರನೆಂಬ ಯಕ್ಷಾಧಿಪಂಗೆ ಪೇೞ್ದುದುಂ—

ಕಂ ॥ ಮುನಿಪತಿಗಳ ತೆಱದಿಂದನ
ಶನಮಂ ಕೈಕೊಂಡು ಕೈದುವಂ ಬಿಸುಟು ದಶಾ ॥
ನನನಿರೆಯುಂ ಕಾದುವುದ
ರ್ಕೆನಲ್ದವಂ ಮಾಣಿಭದ್ರನಲ್ಲಿಗೆ ಪೋದಂ ॥ ೯೧ ॥

ಅಂತು ಪೋಗಿ ತತ್ಸ್ವರೂಪಮಂ ಪೇೞ್ದು ತಾನುಮಾತನುಮತಿಕುಪಿತರಾಗಿ ಬಂದು ದೇವತೆಗಳಂ ತೂಳ್ದು—

ಕಂ ॥ ಅಭಿಭವಿಸಿ ಕಪಿಧ್ವಜಿನಿಯ
ನಭಯರ್ಪರಿತಂದು ರಾಮಲಕ್ಷ್ಮಣರಂ ಕಂ ॥
ಡು ಭಯಾಕುಲ ಚಿತ್ತರ್ ಮಾ
ಣಿಭದ್ರನುಂ ಪೂರ್ಣಭದ್ರನುಂ ಸ್ತುತಿಯಿಸಿದರ್ ॥ ೯೨ ॥

ಅಂತು ಪೊಗೞ್ದು ನಿಮ್ಮ ಸಾಮಂತರುಪಶಾಂತನಾಗಿರ್ದ ರಾವಣನ ಪೊಲ ನಱಿಯೆ ನಿಮ್ಮ ಪುರುಷಾಕಾರಮಱಿಗುಮೆನೆ ಲಕ್ಷ್ಮಣನಿಂತೆಂದಂ—

ಕಂ ॥ ಸೀತಾದೇವಿಯನೀ ರಘು
ಜಾತನ ಕುಲವಧುವನಱಿಪಿ ಕೈತವದಿಂ ತಂ ॥

ದಾತಂಗೆ ಹಿತಂಗೆಯ್ವುದು
ಪೋ ತಕ್ಕುದೊ ತಗದೊ ಬಗೆದು ನೋಡಿಂ ನಿಮ್ಮೊಳ್ ॥ ೯೩ ॥

ನಿಮಗೆಮ್ಮ ಮಾಡಿದಪಕಾ
ರಮಾವುದಕ್ರಮದಿನೆಮ್ಮ ಮೇಲೆ ಬರಲ್ಕ ॥
ಕ್ಕುಮೆ ಪೇೞಿಮೆಂದ ಲಕ್ಷ್ಮಣ
ನ ಮಾತು ಕಿವಿಗೆಯ್ದೆ ಚಿತ್ತವಿತ್ತಿಂತೆಂದರ್ ॥ ೯೪ ॥

ಲಂಕಾಪುರ ಪ್ರಾಸಾದಂಗಳ್ಗಂ ಚೈತ್ಯಾಲಯಂಗಳ್ಗಂ ನಿಯಮಸ್ಥನಾಗಿರ್ದ ದಶಾನನಂಗವಿಾಗಳೞಿವಂ ಮಾಡದೆ ವಿದ್ಯಾಸಾಧನೆಗೆ ವಿಘ್ನಂಮಾಡಿಮೆಂದು ರಾಮಲಕ್ಷ್ಮಣರಂ ಪರಸಿ—

ಕಂ ॥ ಜಕ್ಕರ್ ಪೂಜಿಸಿ ಪೋದ ಬ
ೞಿಕ್ಕಂಗದನೇಱಿ [1]ಬಾರಿಸುತ್ತಂಕುಶದಿಂ ॥
ದಿಕ್ಕರಿಯನಧಃಕರಿಸುವ
ತಕ್ಕಿನ ಕಿಷ್ಕಿಂಧಮೆಂಬ ನಿಜ ವಾರಣಮಂ ॥ ೯೫ ॥

ಅಂತು ವಾರಣಾರೂಢಂ ಪುರಗೋಪುರಮಂ ಪೊಕ್ಕು—

ಕಂ ॥ ಲಂಕೆಯ ಚೆಲ್ವಂ ನೋಡು
ತ್ತುಂ ಕಿಷ್ಕಿಂಧಾಧಿರಾಜನರಮನೆಯಂ ಪೊ ॥
ಕ್ಕಂ ಕಣ್ಗೆ ತೊಡವೆನಿಪ್ಪುದ
ನಂಕುಶದಾಭರಣದಂಶು ತೞ್ಕಿಸೆ ನಭಮಂ ॥ ೯೬ ॥

ಅಂತರಮನೆಯಂ ಪೊಕ್ಕು ಸೌಂದರನುಮಿಂದ್ರನುಂ ಮೊದಲಾಗೆ ಪಲಂಬರಂಬರಚರ ಕುಮಾರರ್ಕಳಂ ಬಲಸಹಿತರಾಗಿ ಪೊಱಗಿರಿಸಿ ಶಾಂತಿಜಿನಭವನಮಂ ಬಲಗೊಂಡೊಳಗಂ ಪೊಕ್ಕು ದರ್ಶನ ಸ್ತುತಿಗೆಯ್ದು ನೀಲ ನಗದಂತೆ ನಿಶ್ಚಲನಾಗಿರ್ದ ರಾವಣನಂ ನೋಡಿ—

ಕಂ ॥ ಅಂಗದನೆಂದಂ ರಾಮ ಶ
ರಂಗಳ ಕೋಳ್ಗಗಿದು ಸುಗಿದು ದಶವದನ ಮನೋ ॥
ಭಂಗಮನೊಳಕೊಂಡೇಕೆ ಜ
ಪಂಗೆಯ್ದಪೆ ನೆನೆಯ ನಿನ್ನ ದುರ್ವಿಲಸಿತಮಂ ॥ ೯೭ ॥

1. ಚಾರಿಸುತ್ತಂಕುಶಮಂ. ಫ.

ಮ ॥ ದುರಭಿಪ್ರಾಯನೆ ಖೇಚರಾನ್ವಯದ ಶುದ್ಧಾಚಾರಮಂ ಬಿಟ್ಟು ಕಾ ।
ಪುರುಷಂ ಕಾತರನೆಂದು ಸತ್ಪುರುಷರೆಲ್ಲಂ ದೂಷಿಸುತ್ತಿರ್ಪಿನಂ ॥
ಪರದಾರ ಪ್ರಿಯನಾದ ಪಾತಕನೆ ಯುದ್ಧಕ್ಕಳ್ಕಿ ಶುದ್ಧಾತ್ಮನಂ ।
ತಿರೆ ಶಾಂತೀಶನ ಮುಂದೆ ಮೆಯ್ಗರೆದಿದೇನಂ ಜಾನಿಸುತ್ತಿರ್ದಪ್ಪೆ ॥ ೯೮ ॥

ಕಂ ॥ ಬಲವಱಿಯೆ ನಿನ್ನ ಬಾಹಾ
ಬಲಮಂ ಪೆಜಗಿಕ್ಕಿ ವಿದ್ಯೆಯಃಂ ಸಾಧಿಸಿ ನೀಂ ॥
ಗೆಲಲೇನಾರ್ತಪೆ ನಿನ್ನಂ
ಕೊಲಲ್ಕೆ ಜನಿಯಿಸಿದ ರಾಮ ಲಕ್ಷ್ಮೀಧರರಂ ॥ ೯೯ ॥

ಕಿಚ್ಚಿಟ್ಟ ಬಱಿಕೆ ನಂದಿಸ
ಲಚ್ಚಿಗದಿಂ ಬಾವಿದೋಡುವಂತಿರೆ ಕಣ್ಣಂ ॥
ಮುಚ್ಚಿ ಜಪಿಯಿಸುವೆ ರಾಘವ
ಸೆಚ್ಚಂಬಿಂ ಕಾಯಲಾರ್ಪುವೇ ದೇವತೆಗಳ್ ॥ ೧೦೦ ॥

ಎಂದು ಪಲತೆಱದಿಂ ನೆಜನೆತ್ತಿ ನುಡಿಯುತ್ತುಮುತ್ತರೀಯ ವಸನಾಂಚಲದಿಂ ಮೋದುತ್ತುಮಾತನ ಕೈಯ ಪಳಿಕಿನಕ್ಷಮಾಲೆಯಂ ಪಱಿದೀಡಾಡುತ್ತುಮಿಂತು ಬಹುಪ್ರಕಾರದಿಂ ಪರಿಭವಿಸಿ ಮತ್ತಮಾತನ ಪೆಂಡಿರ ಭೂಷಣಂಗಳಂ ಕಳೆದು ಬಿಸುಡುತ್ತುಮಲ್ಲದುದಂ ನುಡಿಯುತ್ತುಂ—

ಕಂ ॥ ಯುವತಿಯರೋರೊರ್ವರ ತಲೆ
ನವಿರಂ ತಲೆನವಿರೊಳಡಸಿ ಕಟ್ಟುತ್ತುಂ ಮೋ ॥
ದುವುದುಂ ದ್ವಿಗುಣಿಸಿದುದು ಹಾ
ರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್ ॥ ೧೦೧ ॥

ಅಱಿಯೊಳೆ ಜಾನಕಿಯುಂ ತಂ
ದಱಿಗಂಡನೆ ನಿನ್ನ ಪೆಂಡಿರಂ ನೀಂ ನೋಟ್ಪಿಂ ॥
ತೆಱಿದುಯ್ದಪೆನಣ್ಮುವೊಡುಱಿ
ದಱಿ ಜಪಮಂ ದನುಜ ತೋರ್ಪುದೆನ್ನೊಳ್ ಕೂರ್ಪಂ ॥ ೧೦೨ ॥

ಎಂದು ಮಾಣದೆ ಮತ್ತಂ—

ಉ ॥ ರೋದನಮುಣ್ಮೆ ಪೊಣ್ಮೆ ಕುಟಿಲಾಲಕಮಂ ಪಿಡಿದೀಟ್ದು ತಂದು ಮಂ ।
ಡೋದರಿಯಂ ಮದೀಯ ಪಿತೃಗಳ್ಕೈವ ಚಾಮರಮಿಕ್ಕಲುಯ್ವಪೆಂ ॥

ಕಾದುಕೊಳಲ್ ಪೊಡರ್ಪುೞ್ ನಿನಗುಳ್ಳೊಡೆ ಚೇತರಿಸೆಂದು ದುಃಖಸಂ।
ಪಾದನಮಂ ತದಂಗನೆಯರೊಳ್ ಪಡೆದಂ ರಣತುಂಗನಂಗದಂ ॥ ೧೦೩ ॥

ಅಂತಾತಂ ಪರಿಭವಿಸುವುದುಂ ಮಂಡೋದರಿ ಮೊದಲಾಗೆ ಪಲರುಮಂತಃಪುರ ಕಾಂತೆಯರಿಂತೆಂದರ್—

ಉ ॥ ಸಾಧಿಸಿ ವಿದ್ಯೆಯುಂ ಪಡೆವುದೇಂ ನಿಜ ಪಾರ್ಶ್ವದೊಳಿಮ್ಮನಿಂತಿವಂ।
ಬಾಧಿಸಲೆಂತು ನೀಂ ಮಿಡುಕದಿರ್ದಪೆ ಮೂರ್ಛೆಗೆ ಸಂದರಂತೆ ವಿ॥
ದ್ಯಾಧರ ಚಕ್ರವರ್ತಿ ಶರಣಾ[1]ಗೆಮಗೆಂದು ಶರೀರ ತಾಪ ತ।
ಪ್ತಾಧರಮುಟ್ಟಿದುಚ್ಚ ರವದಿಂದವರೋಧ ವಧೂ ಕದಂಬಕಂ ॥ ೧೦೪ ॥

ಅಂತತಿ ಪ್ರಳಾಪಮಪ್ಪಂತವರ್ಗಱಲನೆರ್ದೆವಱಲನಂಗದಂ ಪಡೆವುದುಂ ರಾವಣಂ ಧ್ರುವಮಂಡಲದಂತೆ ಚಲಿಯಿಸದೆ ಚಿತ್ತನಿರೋಧಂಗೆಯ್ದು ದಿವ್ಯಮಂತ್ರದಿಂ ವಿದ್ಯೆಯುಂ ಸಾಧಿಸುವುದುಂ—

ಕಂ ॥ ಪೊಸಗಾರ ಸಿಡಿಲ ಮಸಕಮ
ನಸಕಱಿದು ಕೃತಾಂತ ಜಿಹ್ವೆ ಪೊಡಕರಿಸುವವೋಲ್ ॥
ಬೆಸಸು ಬೆಸಸೆಂದು ಕರಮ
ರ್ವಿಸಿ ಸನ್ನಿದವಾಯ್ತು ವಿದ್ಯೆ ರಾವಣನಿದಿರೊಳ್ ॥ ೧೦೫ ॥

ಅಂತು ಸನ್ನಿಹಿತೆಯಾಗಿ ಚಕ್ರಧರನಪ್ಪ ಲಕ್ಷ್ಮೀಧರನುಂ ಚರಮ ದೇಹಧಾರಿಯಪ್ಪ ರಾಮಸ್ವಾಮಿಯುಮುೞಿಯಲುೞಿದರನುೞಿಯಲೀಯೆನೆನೆ ರಾವಣನುೞಿದವರೞಿವೆನಗೇವುದೆಂದು ವಿದ್ಯಾದೇವತೆಗೆ ಪೊಡೆವಟ್ಟು ಶಾಂತಿ ಜಿನಭವನಮಂ ಮೂರುಸೂೞ್ ಬಲಗೊಂಡು ಬರ್ಪನ್ನೆಗಮಂಗದಾದಿಗಳ್ ಪೋಱಮಟ್ಟು ಪೋಗಿ ತಮ್ಮ ಬೀಡಂ ಪುಗುವುದುಂ—

ಉ ॥ ಇತ್ತ ದಶಾನನಂ ನಿಜ ವಧೂಜನಮುಂ ಕೋಱಚಾಡಿ ಕಾಡಿ ದು।
ರ್ವೃತ್ತ ವಿರೋಧಿ ಖೇಚರರನಿಕ್ಕುವ ಬಲ್ಮುಳಿಸಿಂದೆ ಬಂದು ಪೊ॥
ಯ್ವೆತ್ತಿಭ ವೈರಿಯಂತೊದಱ ಕೆಂಗಱ ಮೂಡಿದ ಭೃಂಗ ಮಾಲೆ ನೀ।
ಳ್ದತ್ತೆನೆ ನೋಡಿದಂ ಮಯ ತನೂಜೆಯ ಬಾಡಿದ ವಕ್ತ್ರಪದ್ಮಮುಂ ॥ ೧೦೬ ॥

ಅಂತಾಕೆವೆರಸು ಸಮಸ್ತಾಂತಃಪುರಮುಮಂ ನೋಡಿ ನಿಮಗಿನಿತು ಭಂಗಮಂ ಮಾಡಿದಂಗದಾದಿಗಳಂ ಭ್ರೂಭಂಗಮಾತ್ರದೊಳೆ ಸೆಱೆಗೆಯ್ದು ತಂದು ನಿಮ್ಮ ಮುಂದೆ

1. ರೆಮ. ಖ. ಗ. ಘ

ಬಹುಪ್ರಕಾರದಿಂ ಪರಿಭವಿಸುವೆನೆಂದು ಸಂತಯಿಸಿ ಶಾಂತಿಜಿನಭವನದೊಳ್ ಮಹಾ ಪೂಜೆಯಂ ಮಾಡಿಸಿ ನಿರ್ವರ್ತಿತ ನಿತ್ಯ ನಿಯಮನಮೃತಾಹಾರಮನಾರೋಗಿಸಿ ತದನಂತರಂ ಬಹುರೂಪಿಣೀ ವಿದ್ಯಾಪ್ರಭಾವಮಂ ಪರೀಕ್ಷಿಸಿ ಪ್ರಮೋದ ಮುದಿತ ಹೃದಯನಾಗಿ—

ಚ ॥ ಸಮಧಿಕರಾರ್ ಜಗತ್ತ್ರಯದೊಳಿನ್ನೆನಗೆನ್ನೊಳಿದಿರ್ಚುವನ್ನರಾರ್ ।
ಸಮರದೊಳೆಂದು ತನ್ನ ಭುಜದಂಡಮನೀಕ್ಷಿಸಿ ಜಾನಕೀ ಮುಖಾ ॥
ಬ್ಜಮನವಲೋಕಿಸಲ್ ಕರಮೆ ಕಾತರನಾಗಿ ವಿಯಚ್ಚರಾಧಿಪಂ ।
ಪ್ರಮದ ವನಕ್ಕೆ ಬಂದನರಲಂಬುಗಳಿಲ್ಲದ ಕಾಮನೆಂಬಿನಂ ॥ ೧೦೭ ॥

ಅಂತು ಭೋಂಕನೆ ಬರ್ಪ ರಾವಣನ ಗಂಡಗಾಡಿಯಂ ಕೆಲದೊಳಿರ್ದ ಖಚರ ಕಾಂತೆಯರ್ ಸೀತಾದೇವಿಗೆ ತೋರ್ಪುದುಂ—

ಕಂ ॥ ರಾವಣನ ರೂಪು ಸೀತಾ
ದೇವಿಗೆ ತೃಣಕಲ್ಪಮಾಯ್ತು ಪತಿಭಕ್ತಿಯೊಳಾ ॥
ರೀ ವನಿತೆಯ ತೆಜದಿಂ ಸ
ದ್ಭಾವಮನೊಳಕೊಂಡ ಪುಣ್ಯವತಿಯರ್ ಸತಿಯರ್ ॥ ೧೦೮ ॥

ಏನಂ ಕೇಳ್ದಪೆನೋ ರಘು
ಸೂನುವ ಲಕ್ಷ್ಮಣನ ಪೊಲ್ಲವಾರ್ತೆಯನಿನ್ನೆಂ ॥
ದಾ ನಳಿನಾನನೆ ಬರ್ಪ ದ
ಶಾನನಂ ಕಂಡು ತಾಳ್ದಿದಳ್ ತಲ್ಲಳಮಂ ॥ ೧೦೯ ॥

ಅಂತು ತಲ್ಲಳಿಸುತಿರ್ದ ಮಾನಿನಿಯನೆಯ್ದೆ ವಂದು ದಶಾನನನಿಂತೆಂದಂ ಬಹು ರೂಪಿಣೀ ವಿದ್ಯೆ ಸಾಧಿತವಾದುದಿನ್ನೆನಗಸಾಧ್ಯಮಪ್ಪ ಮರುವಕ್ಕಮಿಲ್ಲ ನಿನ್ನ ನಚ್ಚಿನ ರಾಮ[1]ನ ದೆಸೆಯಂ ಬಿಟ್ಟೆನಗೊಡಂಬಟ್ಟು ಸಾಮ್ರಾಜ್ಯ ಸುಖಮನನುಭವಿಸೆನೆ ಸೀತೆ ವಿಹ್ವಲೀಭೂತ ಚಿತ್ತೆಯಾಗಿ—

ಕಂ ॥ ಕರುಣಿಸುವೊಡೆನಗೆ ದಶಕಂ
ಧರ ಧುರದೊಳ್ ರಘುತನೂಜನಾಯುಃಪ್ರಾಣಂ ॥
ಬರೆಗಂ ಬಾರದಿರೆನುತುಂ
ಧರಿತ್ರಿಯೊಳ್ ಮೆಯ್ಯನೊಕ್ಕು ಮೂರ್ಛೆಗೆ ಸಂದಳ್ ॥ ೧೧೦ ॥

1. ನಾಸೆಯಂ. ಗ. ಘ.

ಕಂ ॥ ಜಾನಕಿ ಮೂರ್ಛಿತೆಯೊಗೆ ದ
ಶಾನನನನುಕಂಪೆ ಪುಟ್ಟೆ ಕರುಣಿಸಿ ತನ್ನಂ ॥
ತಾನೆ ಪೞಿದುೞಿದು ಕರ್ಮಾ
ಧೀನ ಸಮುತ್ಪನ್ನ ದುರಘ ದುಷ್ಪರಿಣತಿಯಂ ॥ ೧೧೧ ॥

ಕದಡಿದ ಸಲಿಲಂ ತಿಳಿವಂ
ದದೆ ತನ್ನಿಂ ತಾನೆ ತಿಳಿದ ದಶವದನಂಗಾ ॥
ದುದು ವೈರಾಗ್ಯಂ ಸೀತೆಯೊ
ಳುದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ ॥ ೧೧೨ ॥

ಪತ್ತುವಿಡದಿರ್ದನೇ ರವಿ
ಪತ್ತಿದ ಸಂಧ್ಯಾನುರಾಗಮಂ ಮನದೞಿಪಿಂ ॥
ದೆತ್ತಾನುಂ ಪೊಲ್ಲೆನಿಪುದ
ನುತ್ತಮನಾಚರಿಸಿ ಪತ್ತುವಿಡದಿರ್ದಪನೇ ॥ ೧೧೩ ॥

ಅಂತು ಮನದೊಳೊಗೆದ ಕಾರುಣ್ಯ ರಸಮೆ ಸೀತೆಯೊಳಾದನುರಕ್ತತೆಯಂ ಕರ್ಚಿ ಕಳೆವುದುಂ ಸ್ವಭಾವ ಪರಿಣತಿಯೊಳ್ ನಿಂದು ಸ್ವಕೀಯಾಪ್ತ ಪುರುಷ ಪರಿಷಜ್ಜನಕ್ಕಿಂತೆಂದಂ—

ಚ ॥ ಗುಣ ಪರಿಪಾಲನಾರ್ಥಮೆನಗಂ ಬಗೆದೋರಿದಳಿಲ್ಲ ದಿವ್ಯ ಭೂ ।
ಷಣ ವಸನಾಂಗರಾಗಮುಮನೊಲ್ಲದೆ ಖೇಚರ ರಾಜ್ಯ ಲಕ್ಷ್ಮಿಯಂ ॥
ತೃಣ ಸಮನಾಗೆ ಭಾವಿಸಿದಳೀ ಸತಿಯುಂ ಮೊದಲಾಗಿ ಪೌರುಷ ।
ಪ್ರಣಯಿಯೆನಿಂತಪೇಕ್ಷಿಸುವೆನೇ ಗುಣಹಾನಿಯನೆನ್ನ ಪಾಪದಿಂ ॥ ೧೧೪ ॥

ಕಂ ॥ ಇವರಂ ಪ್ರಾಣಪ್ರಿಯರಂ
ನೆವಮಿಲ್ಲದೆ ಕರ್ಮವಶಮೆ ನೆವಮೆನೆ ಕಂದ ॥
ರ್ಪ ವಿಮೋಹದಿಂದಗಲ್ಚಿದೆ
ನವಿವೇಕಿಯೆನೆನ್ನ ಕುಲದ ಪೆಂಪೞಿವಿನೆಗಂ ॥ ೧೧೫ ॥

ರಾಮನನಗಲ್ಚಿ ತಂದಾ
ನೀ ಮಾನಿನಿಗಿನಿತು ದುಃಖಮಂ ಪುಟ್ಟಿಸಿದೆಂ ॥
ಕಾಮ ವ್ಯಾಮೋಹದಿನಾ
ಶಾ ಮುಖಮಂ ಪುದಿಯೆ ದುರ್ಯಶಃಪಟಹ ರವಂ ॥ ೧೧೬ ॥

ಚ ॥ ಎನಗೆ ವಿಭೀಷಣಂ ಹಿತಮನಾದರದಿಂದಮೆ ಪೇೞೆ ಕೇಳದಾ ।
ತನನವಿನೀತನೆಂ [1]ಗಜಱಿ ಗರ್ಜಿಸಿ ಬಯ್ದನುಜಾತನಂ ವಿನೀ ॥
ತನನಱೆಯಟ್ಟೆ ದುರ್ವ್ಯಸನಿಯೆಂ ಕೞಿದೆಂ ವ್ಯಸನಾಭಿಭೂತನಾ ।
ವನುಮನುರಾಗವೇಗದೆ ಹಿತಾಹಿತ ಚಿಂತೆಯನೇಕೆ ಮಾಡುಗುಂ ॥ ೧೧೭ ॥

ಜಸದೞಿವಂ ಪರಾಭವದ ಪತ್ತುಗೆಯುಂ ದೊರೆವೆತ್ತ ತಮ್ಮ ಮಾ ।
ನಸಿಕೆಯ ಕೇಡನುನ್ನತಿಯ ಬನ್ನಮನನ್ಯ ಭವಾನುಬದ್ಧಮ ॥
ಪ್ಪ ಸುಗತಿಯಂ ಸುಹೃಜ್ಜನದ ಬೇವಸಮಂ ಜನತಾಪವಾದಮಂ ।
ವ್ಯಸನಿಗಳಾರುಮೆತ್ತಲಱಿವರ್ ವಿಷಯಾಸವ ಮತ್ತ ಚೇತಸರ್ ॥ ೧೧೮ ॥

ಎಂದುದ್ವೇಗಪರನಾಗಿ ನುಡಿದಾತ್ಮಗತದೊಳಿಂತೆಂದಂ—

ಮ ॥ ಇರದುಯ್ದಾಗಳೆ ಕೊಟ್ಟೊಡೆನ್ನ ಕಡುಪುಂ ಕಟ್ಟಾಯಮುಂ ಬೀರಮುಂ ।
ಬಿರುದುಂ ಬೀಸರಮಕ್ಕುಮೋಸರಿಸಿದಂತಾಗಿರ್ಕುಮಂತಾಗದಂ ॥
ತಿರೆ ದೋರ್ಗರ್ವಮನಿರ್ವಲಂ ಪೊಗೞ್ವಿನಂ ಸೌಮಿತ್ರಿಯುಂ ರಾಮನಂ ।
ವಿರಥರ್ಮಾಡಿ ರಣಾಗ್ರದೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯಂ ॥ ೧೧೯ ॥

ಎಂದು ನಿಶ್ಚಯಿಸಿ ನಿಜನಿವಾಸಕ್ಕೆ ವಂದಂಗದ ಪ್ರಭಾಮಂಡಲ ಸುಗ್ರೀವ ಹನುಮದಾದಿಗಳ ದುರಾಚಾರಕ್ಕೆ ಮುಳಿದವಂದಿರಂ ರಾಮನೞಿಯೆ ಕೊಲ್ವೆನೆಂದು [2]ಭರಂಗೆಯ್ದಿರ್ದನಾ ಸಮಯದೊಳ್—

ಕಂ ॥ ಪರಿವೇಷಂ ನಾಡೆ ಭಯಂ
ಕರಮಪ್ಪುದನರ್ಕ ಬಿಂಬದೊಳ್ ನಟ್ಟಿರುಳೊಳ್ ॥
ಸುರಚಾಪಂ ಮೂಡುವುದಂ
ಗಿರಿಶಿಖರಂ ಬಿರಿವುದಂ ನೆಲಂ ಮೊೞಗುವುದಂ ॥ ೧೨೦ ॥

ಪಡಿಗೆ ಮದಮುಪ್ಪುದಂ ಮದ
ಮುಡುಗುವುದಂ ಮದಗಜಕ್ಕೆ ಗೃಹದೇವತೆಗಳ್ ॥
ಗಡಣದಿನೞ್ವುದನಾಗಸ
ವೆಡೆಗೆಟ್ಟಿರೆ ಧೂಮಕೇತುಗಳ್ ಮೂಡುವುದಂ ॥ ೧೨೧ ॥

---

1. ದು ಬಿಡೆ ಗರ್ಜಿಸಿ ಗ. 2. ಭರವಸಂ. ಖ. ಗ. ಘ.

ಮ॥ಸ್ರ॥ ಪಗಲುಳ್ಕಂ ಬೀೞ್ವುದಂ ಧಾರಿಣಿ ನಡುಗುವುದಂ ಘೊಳ್ಳಿನಲ್ ದೀಪ್ತದೊಳ್ಬ ।
ಳ್ಳುಗಳೊಳುತ್ತಿರ್ಪುದಂ ಕೈದುಗಳುಡಿವುದನಾದಿತ್ಯನುಂ ಚಂದ್ರನುಂ [1]ಮೋ ॥
ಗೊಗೆದಂತಾಗಿರ್ಪುದಂ ಮಾಡದ ಮಣಿಕಲಶಂ ಬೀೞ್ವುದಂ ಕಂಡು ತಮ್ಮೊಳ್।
ಬಗೆದರ್ ನೈಮಿತ್ತಿಕರ್ ನಾಳಿನ ಕದನದೊಳಕ್ಕುಂ ದಶಾಸ್ಯಂಗಪಾಯಂ ॥ ೧೨೨ ॥

ಎಂದು ನಿಶ್ಚಯಿಸಿ ನುಡಿಯುತ್ತಿರ್ದರಾಗಳಸುರಪತಿ ನಿಜಾಸ್ಥಾನ ಮಂಡಪ ಮಧ್ಯಸ್ಥಿತ ಸಿಂಹಾಸನದೊಳಿರ್ದು ಸೆಱೆಯೊಳಿರ್ದ ತನುಜಾನುಜರಂ ನೆನೆದು ಮುಳಿದು ಕಾಳೆಗಕ್ಕೆ ನಡೆಯಲೊಡರಿಸಿ ಶಸ್ತ್ರಶಾಲೆಯಂ ಪುಗುವುದುಮದಂ ಮಂಡೋದರಿ ಕಂಡು ಮಂತ್ರಿಗಳಂ ಕರೆದೀ ರಣಮಂ ಮಾಣ್ಬಂತು ಮಾೞ್ಪುದೆಂದು ಪೇೞ್ವುದುಮವರಿಂತೆಂದರಾಮುಂ ಪಲವುಂ ಪರ್ಯಾಯದಿಂ ಪೇೞ್ದೊಡಂ ಕೇಳ್ದನಿಲ್ಲಿಲ್ಲಿಗೆ ತಕ್ಕುದಂ ನುಡಿದು ದೇವಿಯರಿಂತಾನುಮೊಡಂಬಡಿಸುವುದೆನೆ ಮಂಡೋದರಿ ರಾವಣನಲ್ಲಿಗೆ ಬಂದೆಱಗಿ ಪೊಡೆವಟ್ಟು—

ಶಾ ॥ ಆನೀ ಜಾನಕಿಯಂ ರಘುಪ್ರಿಯತನೂಜಂಗಿತ್ತು ತರ್ಪೆಂ ಭವ ।
ತ್ಸೂನು ಭ್ರಾತೃಗಳಂ ರಣ ವ್ಯಸನದಿಂ ಸಾವೆಯ್ದುಗುಂ ಬಂಧು ಸಂ ॥
ತಾನಂ ಕಾಳೆಗಮಂ ಬಿಸುೞ್ಪುದೆನೆ ರೋಷಾವೇಶದಿಂ ರಾವಣಂ ।
ನೀನಿಲ್ಲಿಂ ತೊಲಗೆಂದು ಚಪ್ಪರಿಸಿದಂ ಮಂಡೋದರೀ ದೇವಿಯಂ ॥ ೧೨೩ ॥

ಅಂತು ಚಪ್ಪರಿಸೆಯುಂ ಮಾಣದೆ ಮತ್ತಿಂತೆಂದಳ್—

ಕಂ ॥ ಪರವನಿತೆಗೞಿಪಿ ರಣ ದು
ರ್ಧರನೆನಿಸಿರ್ದಶನಿವೇಗನೞಿದುದನಸುರೇ ॥
ಶ್ವರ ನೀನೇನಱಿಯದನೇ
ಸಂಹರಿಸಲ್ವೇೞ್ಪುದದಱಿನಸದಾಗ್ರಹಮಂ ॥ ೧೨೪ ॥

ಎಂತುಮೀಾತಂಗಳೆಂಟನೆಯರ್ಧಚಕ್ರವರ್ತಿಗಳ್ ನಿನಗೆ ಶತ್ರುಗಳಪ್ಪುದಱಿಂ ನೀನಿವರ ಬವರಮನುೞಿದು ಸಂಧಿಗೊಡಂಬಟ್ಟು ವಿದ್ಯಾಧರ ರಾಜ್ಯ ಸುಖಮನನುಭವಿಸುವುದೆನೆ ರಾವಣನೆಂದನಮಂದಿರೆನಗೆ ಕಾಳೆಗದೊಳ್ ನಿಲ್ವ ಗಂಡರಲ್ಲರದರ್ಕೆ ನೀನಂಜದಿರೆಂದು ನುಡಿದು ಸನ್ನಾಹ ಭೇರಿಯಂ ಪೊಯಿಸುವುದುಂ—

ಕಂ ॥ ಹಿತಮಂ ಹಿತರಱಿಪಿದೊಡಂ
ಮತಿಗೆಟ್ಟೞಿಕೆಯ್ದನೆಂದು ದಶಮುಖ ಕುಲದೇ ॥

---

1. ಮೊಗ್ಗರೆದಂತಾಗಿರ್ಪುದಂ. ಕ. ಖ. ಗ. ಚ.

ವತಿ ಪುಯ್ಯಲಿಡುವವೋಲ್ ದಿ
ಗ್ವಿತತಿಯನಾವರಿಸಿದತ್ತು ಭೇರೀನಾದಂ ॥ ೧೨೫ ॥

ಆ ಸಮಯದೊಳ್ ಸಿಂಹಾಸನಾರೋಹಣಕ್ಕಿದುವೆ ಚರಮ ಸಮಯಮೆಂ ದಱಿಪುವಂತೆ—

ಉ ॥ ತಾರಗೆಯಂ ತಮಂ ಸೆಱಗೆ ತಂದವೊಲರ್ವಿಸೆ ದೇಹ ದೀಪ್ತಿಯೊಳ್ ।
ಹಾರ ಮರೀಚಿ ಮಾಣಿಕದ ಪೆರ್ಮೊಡಮಿಂ ಪೊಱಪೊಣ್ಮುವಂಶುಗಳ್ ॥
ದಾರುಣ ಕೋಪ ಪಾವಕನೆ ತನ್ನೊಡಲಂ ಸುಡುವಂದಮಾಗೆ ಕೋ ।
ಪಾರುಣ ನೇತ್ರನೆಟ್ಟನೊಡನೇಟ್ಟನೆಗಂ ಖಚರೇಂದ್ರ ಮಂಡಲಂ ॥ ೧೨೬ ॥

ಚ ॥ ಅವಯವ ಶೋಭೆಯಂ ಪಡೆವುವಲ್ಲದೆ ಭೂಷಣಮೆನ್ನ ಮಾಟಕ್ಕೆಯಿಂ ।
ದವಯವಮಾಗಿ ವರ್ತಿಸುವುವೇಂ ಪೆಱವೆಂದವನೇಳಿಪಂತೆವೋಲ್ ॥
ನವ ಮುಖಭೂಷಣಂ ದಶಮುಖ ವ್ಯವಹಾರಮನಿತ್ತು ರಾವಣಂ ।
ಗವಿರಲ ಕಾಂತಿಯಿಂ ಬೆಳಗಿದತ್ತು ಸಮಸ್ತ ದಿಶಾ ಮುಖಂಗಳಂ ॥ ೧೨೭ ॥

ಅಂತು ಸಿಂಹಾಸನದಿನೆಟ್ಟು—

ಕಂ ॥ ಚಮರಜಮನಿಕ್ಕೆ ಖಚರ
ಪ್ರಮದಾ ಜನಮುತ್ತಮಾಂಗದೊಳ್ ಬೆಳ್ಗೊಡೆ ಚಂ ॥
ದ್ರಮನಂ ಗೆಲೆ ನಡೆದಂ ವಿ
ಕ್ರಮ ಧವಲಂ ಚಂದ್ರಹಾಸಮಂ ಜಡಿಯುತ್ತುಂ ॥ ೧೨೮ ॥

ಆಗಳಸಮ ಸಮರ ಕೇಳೀ ಕುತೂಹಲರ್ ಖಚರ ಪರಿಬೃಢರ್ ಮಣಿ ಮಕುಟ ಕಾಂತಿ ಪೊದಟ್ದು ನೀಳ್ದು ಮಿಗೆ ಪರ್ವಿ ಶಕ್ರಧನುವನನುವಿಸೆ ಕೆಳರ್ದ ಕೇಸರಿ ಗಳಂತೆ ನಡೆಯೆಯುಂ ಅಪಾರ ಚತುರಂಗ ಸೇನೆ ಚರಣ ಸಂಚರಣಕ್ಕೆ ನೆಲಂ ನೆಱಿಯದೆಂಬಂತೆ ನಡೆಯೆಯುಂ ಕರಿ ವೃಷಭ ಸಿಂಹ ಗರುಡ ಹಂಸಾದಿ ಮಹಾ ಧ್ವಜಂಗಳೆಡೆಗಿಱಿದು ನಡೆಯೆಯುಂ ವಿವಿಧ ರತ್ನಖಚಿತ ಕನಕ ದಂಡ ಮಂಡಿತ ವಿಚಿತ್ರ ರಾಜಚಿಹ್ನಂಗಳ್ ಮುಂದೆ ಸಂದಣಿಸಿ ನಡೆಯೆಯುಂ ನಡೆವ ಸಮಯದೊಳೊಡ ನೊಡನೆ ನೆಲಂ ಮೊಟಗೆ ಮೊಟಗುವ ಪಱಿಯ ದನಿಗಳಿಂದುಂ ಆಕಸ್ಮಿಕಮುದ ಯಿಪ ಧರಾಕಂಪಮಂ ಸೇನಾ ಭರದಿನಾದ ಧರಾಕಂಪಮೆಂದುಂ ಪಸರಿಸುವ ದಿಗ್ದಾಹ ಮನಂಬರಚರ ಕಿರೀಟ ಮಾಣಿಕ್ಯ ಮಯೂಖ ಲೇಖೆಗಳಿಂದುಮವಿರಳಮಾಗೆ ಕವಿದ ಕಾವುಳಮಂ ಸೇನಾ ರಜೋಜಾಳಮೆಂದುಂ ಪೂಜಾವಾಜಿ ವಿಲೋಚನ ವಿಗಳದಶ್ರು ಬಿಂದುಗಳನಾನಂದಾಶ್ರು ಬಿಂದುಗಳೆಂದುಮೊಱೆಯಿನುರ್ಚುವ ಕೈದುಗಳಂ ಇದಿರ್ಚ

ದರನಿಱಿಯುಲುರ್ಚಿದುವೆಂದುಂ ಕಣ್ಬೊಲದೊಳ್ ಸುೞಿವ ಕಾಲಾಯಸ ಕಾಲ ಪುರುಷನಂ ಕಾಳಿಗಕ್ಕೆ ಜವಂ ನೆರಂಬಂದಪ್ಪನೆಂದುವಾಗಸದೊಳೊಗೆವ ಧೂಮ ಕೇತುಗಳಂ ವಿಜಯ ಕೇತುಗಳೆಂದುಂ ಕಣ್ಣೊಳುಳ್ಕುವುಲ್ಕಾಪಾತಮಂ ನಿಜಪ್ರತಾ ಪಾನಲ ಸ್ಫುಲಿಂಗಂಗಳೆಂದುಮಭೂತ ಪೂರ್ವಮಪ್ಪುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು—

ಮ॥ಸ್ರ॥ರದನಂಗಳ್ ನಾಲ್ಕಱಿಂದದ್ಭುತಮೆನಿಪ ಸಹಸ್ರ ದ್ವಿಪ ಸ್ಕಂಧದೊಳ್ ಪೂ।
ಡಿದ ವಿದ್ಯಾದೇವತಾ ನಿರ್ಮಿತ ರಥಮನತಿಕ್ಷೋಭದಿಂದೇಱಿ ಬಂದಂ॥
ಕದನ ಕ್ಷೋಣೀ ತಲಕ್ಕುನ್ನಮಿತ ಬಹು ಪತಾಕಾ ಪಟಚ್ಛನ್ನ ಮೇಘಾ।
ಸ್ಪದಮಂ ಸಂಗ್ರಾಮ ಭೇರೀರವ ಬಧಿರಿತ ನಾನಾ ದಿಶಾಸ್ಯಂ ದಶಾಸ್ಯಂ॥ ೧೨೯॥

ಅಂತು ಬಂದು ಸಂಗ್ರಾಮ ಭೂಮಿಯೊಳೊಡ್ಡಿ ನಿಲ್ವುದುಂ—

ಕಂ॥ ಈ ತೋರ್ಪುದಚಲಮೋ ಜೀ
ಮೂತಮೊ ಪೇೞೆಂದು ಪೊಳೆವುದಂ ಜಾಂಬವನಂ॥
ಕೌತುಕದಿಂ ಬೆಸಗೊಂಡಂ
ಸೀತಾರಮಣಂ ದಶಾಸ್ಯನೇಱಿದ ರಥಮಂ ॥ ೧೩೦ ॥

ಅಂತು ಬೆಸಗೊಳ್ವುದುಂ ಜಾಂಬವನದು ದೇವ ರಾವಣನ ಬಹುರೂಪಿಣೀ ವಿದ್ಯಾ ವಿನಿರ್ಮಿತ ವರೂಥಮೆಂಬುದುಂ ಲಕ್ಷ್ಮಣಂ ಕೇಳ್ದು ಸನ್ನಾಹ ಭೇರಿಯಂ ಪೊಯಿಸೆ—

ಕಂ॥ ಆರಾಧಿಸಿ ಪಡೆದಂ ಗಡ
ತೇರಂ ದೋಸ್ಸಾರನಲ್ಲದಂಗೇವುದೊ ಪೇೞ್॥
ತೇರೆಂದು ಸಿಂಹ ರಥಮಂ
ವೀರಶ್ರೀ ರಮಣನೇಱಿದಂ ರಘುವೀರಂ ॥ ೧೩೧ ॥

ವಿಗ್ರಹ ಭೂಮಿಯೊಳಿಂದು ದ
ಶಗ್ರೀವನನಿಕ್ಕಿ ವಿಜಯ ಲಕ್ಷ್ಮಿಯೊಳಾಂ ಪಾ॥
ಣಿ ಗ್ರಹಣಮನೊಡರಿಪೆನೆಂ
ಬಾಗ್ರಹದಿಂ ಕೃಷ್ಣನೇಱಿದಂ ಸ್ಯಂದನಮಂ ॥ ೧೩೨ ॥

ಅಂತು ಸಿಂಹ ಗರುಡ ವಾಹಿನೀ ರಥಂಗಳಂ ರಾಮಲಕ್ಷ್ಮಣರೇಱಿ ವಿದ್ಯಾ ಪರಮೇಶ್ವರರಪ್ಪ ವಿದ್ಯಾಧರರಿಂ ಪರಿವೃತರಾಗಿ ಚತುರಂಗ ಬಲ ಸಮನ್ವಿತರ್ ಶುಭ ಶಕುನಂಗಳನಿದಿರ್ಗೊಳುತ್ತುಂ ಸಂಗ್ರಾಮ ಭೂಮಿಗೆ ಬಂದೊಡ್ಡಿ ನಿಲ್ವುದುಂ ರಾವಣಂ

ಕಂಡು ಕೈವೀಸುವುದುಮುಭಯ ಬಲಮುಂ ತಳ್ತು ಕಾದುವಲ್ಲಿ ವಾನರ ಬಲದ ನಳನುಂ ನೀಲನುಂ ಕುಮುದನುಂ ಯೂಥನಾಥನುಮೆಂಬ ನಾಯಕರೊಟ್ಟೈಸಿ ತಳ್ತಿಱಿದು ದನುಜಬಲಮಂ ತವೆ ಕೊಲ್ವುದಂ ಕಂಡು ಮಾರ್ಕೊಂಡು ರಾಕ್ಷಸ ಬಲದ ಮುಖ್ಯ ನಾಯಕರ್ ಕುಂಭನುಂ ವಿಕ್ರಮನುಂ ಮಾಲಿಯುಂ ವೀರನುಂ ಸೂರ್ಯರಥನುಂ ಮೊದಲಾಗೆ ಪಲಂಬರೆಯ್ತಂದು ತಮ್ಮ ಪಡೆಗಭಯಮಪ್ಪಂತು ಕಾದುತ್ತುಮಿರ್ದರತ್ತ ಮತ್ತೊಂದು ಮೊನೆಯೊಳ್ ರಾವಣನ ಬಲದ ಭೂತನುಂ ಸಂಭೂತನುಂ ಕುಟಿಲನುಂ ಕಾಲದಂಡನುಂ ಊರ್ಮಿಯುಂ ತರಂಗನುಂ ವಾನರ ಬಲದೊಳ್ [1]ತಲೆಮುಟ್ಟಿ ಮಲೆದು ಕಾದುವಲ್ಲಿ—

ಮ ॥ ವನಗಜ ಯೂಥಮಂ ಭರದಿನಟ್ಟುವ ಕೇಸರಿಯಂತೆ ದೈತ್ಯರು ।
ಳ್ಳನಿಬರುಮಂ ಮಹಾರಣದೊಳದ್ಭುತಮಾಗೆ ಕರುತ್ತು ಕಾದಿ ಪಾ ।
ವನಿ ಬಿಱುತೋಡುವಂತೆ ಬೆದಱಟ್ಟುವುದಂ ನಡೆನೋಡಿಕೊಂಡು ಕಾ ।
ಯ್ಪನುಮಿಸೆ ಮುಟ್ಟೆ ಮೂದಲಿಸಿ ತಾಗಿದನಾಹವ ದುರ್ಜಯಂ ಮಯಂ॥೧೩೩॥

ಅಂತು ತಾಗಿ—

ಕಂ ॥ ಅಯನಯ ಮಯನತಿ ವೇಗದೆ
ಮಯನಿಸೆ ದುರ್ಜಯನೆನಿಪ್ಪ ಮಾರುತಿಗಂ ವಿ ॥
ಸ್ಮಯಮುಗ್ಗಳಮಾದುದು [2]ಶರ
ಮಯಮಾದುದು ನೋಡೆ ಕೂಡೆ ದಿಗವನಿ ವಲಯಂ ॥ ೧೩೪ ॥

ಅಂತು ಪುಂಖಾನುಪುಂಖಮಿಸುವುದುಂ—

ಕಂ ॥ ಅವನೆಚ್ಚ ಬಾಣಜಾಲಮ
ನವಯವದಿಂದೆಚ್ಚು ತವಿಪುದುಂ ಮಾರುತಿ ಭೈ ॥
ರವನಂದದಿಂ ತ್ರಿಶೂಲದಿ
ನವನಿಟ್ಟಂ ದನುಜ ಸೇನೆ ಬೊಬ್ಬಿರಿವಿನೆಗಂ ॥ ೧೩೫ ॥

ಅಂತಿಡುವುದುಂ—

ಕಂ ॥ ಶೂಳಾಯುಧಮಂ ನಿಶಿತ ಶ
ರಾಳಿಗಳಿಂ ಪವನ ಸೂನು ಕಡಿದಿಕ್ಕೆ ಮಯಂ ॥

---

1. ತಲೆ ಪಟ್ಟು. ಘ. 2. ರವ ಮಯದಿಂದಂ ಪುದಿದುದಖಿಳ. ಚ.

ದೋಳಾಯಮಾನ ಚಿತ್ತಂ
ಕಾಳೆಗದ ಪೊಡರ್ಪುಗೆಟ್ಟು ಮರವಟ್ಟಿರ್ದಂ ॥ ೧೩೬ ॥

ಆದಂ ಕಂಡು ದಶವದನಂ ಪ್ರಜ್ವಲಿತಮೆಂಬ ದಿವ್ಯ ರಥಮನಟ್ಟುವುದುಮದ ನೇಱಿ ಮಯಂ ಮಹಾಯುದ್ಧಂಗೆಯ್ದು ವಿಜಯ ಶ್ರೀಯನಪ್ಪುಕೆಯ್ದು—

ಕಂ ॥ ಕರಮುರಿದು ಮಯನ ಬಾಹಾ
ಪರಿಘ ಕ್ಕಿದಿರಿಡುವುದಾರ್ಗಮಾಹವದೊಳ್ ದು ॥
ರ್ಧರನೆನಿಸಿದತುಳ ಬಲನಂ
ನಿರಾಯುಧಂಮಾಡಿದಂ ಮರುನ್ನಂದನನಂ ॥೧೩೭॥

ಅಂತು ಹನುಮನಂ ನಿರಾಯುಧಂಮಾಟ್ಟುದುಂ ಪ್ರಭಾಮಂಡಲಂ ಬಂದೆಡೆ ಗೊಂಡು ತಾಗುವುದುಂ—

ಕಂ ॥ ಧುರದೊಳ್ ಮಯನಾತನುಮಂ
ವಿರಥಂಮಾಟ್ಟುದುಮದರ್ಕೆ ಸುಗ್ರೀವಂ ಚೆ ॥
ಚ್ಚರವೊದವಿ ಬಂದು ತಾಗಿದ
ನರಾತಿ ಬಲಮೆಲ್ಲಮೊಲ್ಲನುಲಿದೋಡುವಿನಂ ॥ ೧೩೮ ॥

ಅಂತು ತಾಗುವುದುಮಾತನುಮಂ ನಿರಸ್ತ್ರಂಮಾಟ್ಟುದುಮಾತನಂ ಪೆಱಗಿಕ್ಕಿ—

ಕಂ ॥ ಉರವಣಿಸಿ ವಿಭೀಷಣನತಿ
ಭರದಿಂ ತಾಗುವುದುಮಾ ಮಹಾಬಲನ ಭುಜಾ ॥
ಪರಿಘಕ್ಕೆ ಕುಂದನಿನಿಸಂ
ದೊರೆಕೊಳಿಸಿದನೆಂದೊಡೇಂ ಮಯಂ ದುರ್ಜಯನೋ ॥ ೧೩೯ ॥

ಆಗಳಾ ಮಯನ ಮಸಕಮಂ ದಾಶರಥಿ ಕಂಡು ಕಡು ಮುಳಿದು—

ಕಂ ॥ ಇದು ರಕ್ಕಸರುಸಿರಂ ಪೀ
ರ್ವುದಗ್ರ ಕಾಳಾಹಿಯೆನಿಪ ಬಿಲ್ಲಂ ರಾಮಂ ॥
ಪದುಳಂ ತಂದಂಗುಷ್ಠದ
ಮೊದಲ್ಗೆ ಕೊಪ್ಪಿಂಗೆ ನೂಂಕಿದಂ ಜ್ಯಾಲತೆಯಂ ॥ ೧೪೦ ॥

ಅಂತು ನಿಜ ವಿಜಯ ಧನುರ್ಲತೆಯನೇಱಿಸಿ ನೀವಿ ಜೇವೊಡೆವುದುಂ—

ಕಂ॥ ರಾವಣನ ದಿವ್ಯ ರಥದ ಗ
ಜಾವಳಿ ಪೆಟ್ಟಳಿಸೆ ಬೆರ್ಚಿ ರವಿಯ ಹಯಂಗಳ್ ॥

ತೀವಿದುದು ಗಗನಮಂ ವ
ಜ್ರಾವರ್ತ ಧನುರ್ಲತಾ ಘನ ಜ್ಯಾರಾವಂ ॥ ೧೪೧ ॥

ಅನಂತರಂ ಸಂವರ್ತ ಸಮಯದತಿವರ್ತಿಯಪ್ಪ ದಂಡಧರನ ಪೊಡರ್ಪನಪ್ಪು ಕೆಯ್ದು ಮಾರ್ಪಡೆಯಂ ಪಡಲ್ವಡಿಸುತ್ತೆ ಬರ್ಪುದಾತ್ತರಾಘವನ ಬೞಿವಿಡಿದ ವಿಭೀಷಣ ಪ್ರಭಾಮಂಡಲ ಮರುನ್ನಂದನ ಸುಗ್ರೀವಾದಿಗಳುಂ ಮಗುಳ್ದು ಕಾದಲ್ ಮನಂಗೆಯ್ದು ಬರೆ ಪದ್ಮದೇವನವರಂ ಪಿಂತಿಕ್ಕಿ ಮಯನಂ ಮುಟ್ಟೆವಂದು ಮಹಾ ಯುದ್ಧಂಗೆಯ್ದು—

ಕಂ ॥ ಜನಕ ಸುತನಂ ಮರುನ್ನಂ
ದನನಂ ಸುಗ್ರೀವನಂ ವಿಭೀಷಣನಂ ಗೆ ॥
ಲ್ದನನಂಜಿಸಿ ರಾಮಂ ಜಯ
ವನಿತೆಯ ಕೈವಿಡಿವ ತೆಱದೆ ಮಯನಂ ಪಿಡಿದಂ ॥ ೧೪೨ ॥

ಚ ॥ ಪಿಡಿಯೆ ರಘೂದ್ವಹಂ ಮಯನನೀಕ್ಷಿಸಿ ರಾಕ್ಷಸ ಚಕ್ರವರ್ತಿ ಕಾ ।
ಯ್ಪೊಡರಿಸೆ ಕೇಱಿ ತನ್ನ ರಥಮಂ ಪರಿಚೋದಿಸವೇಟ್ದು ರಾಮನೊಳ್ ॥
ತೊಡರಲೊಡರ್ಚಿ ಬರ್ಪ ಪದದೊಳ್ ಮಗುಳಿತ್ತಲೆನುತ್ತುಮೆಯ್ದಿದಂ ।
ಸಿಡಿಲ ಪೊಡರ್ಪುಮಂ ಜವನ ಕೂರ್ಪುಮನೀಟ್ಕುಳಿಗೊಂಡು ಲಕ್ಷ್ಮಣಂ॥೧೪೩॥

ಅಂತು ರಘುನಂದನನ ಸ್ಯಂದನಮಂ ಪೆಱಗಿಕ್ಕಿ—

ಶಾ ॥ ಎತ್ತಾನುಂ ದೊರೆಕೊಂಡೆ ರಾಘವನಮೋಘಾಸ್ತ್ರಕ್ಕೆ ಮಾಱಾಂಪ ವಿ ।
ಕ್ರಾಂತಂ ಕಾಮುಕ ನಿನ್ನೊಳುಂಟೆ ಕದನಕ್ಕಣ್ಣಂಬರಂ ಗಂಡರಾರ್ ॥
ಮುಂತಾಗೆನ್ನೊಳಿದಿರ್ಚು ಕೂರ್ಗಣೆಯ ಕೂರ್ಪಂ ತೋರ್ಪೆನಣ್ಮೆಂದು ಕ ।
ಲ್ಪಾಂತೋಗ್ರಾಂತಕನಂತೆ ಗರ್ಜಿಸಿದನಾರಕ್ತೇಕ್ಷಣಂ ಲಕ್ಷ್ಮಣಂ ॥ ೧೪೪ ॥

ಅಂತು ಗಜರಿ ಗರ್ಜಿಸುವುದುಂ ಘನ ಗರ್ಜನೆಗೇಳ್ದ ಕೇಸರಿಯಂತೆ ಕೆಳರ್ದು—

ಕಂ ॥ ಕರಿಗಳ್ ಸಾಸಿರದೊಳ್ ಪೂ
ಡಿ ರಥಂ ಜಂಗಮ ಕುಲಾದ್ರಿ ಬರ್ಪಂತೆ ಭಯಂ ॥
ಕರಮಾಗೆ ಬಂದು ದಶಕಂ
ಧರನಾಸುರಮಾಗೆ ತಾಗಿದಂ ಲಕ್ಷ್ಮಣನಂ ॥ ೧೪೫ ॥

ಆಗಳೆಱಂಕೆಯ ಬೆಟ್ಟಂ
ಬೇಗಂ ಬರ್ಪಂತೆ ಬಂದು ಲಕ್ಷ್ಮಣನ ರಥಂ ॥

ತಾಗಿದುದು ಗರುಡ ವಾಹಿನಿ
ಸಾಗರಮುಚ್ಚಳಿಸೆ ಪಕ್ಷ ಪವನಾಹತಿಯಿಂ ॥ ೧೪೬ ॥

ಅಂತವರ್ ತಮ್ಮ ರಥಮನನತಿದೂರದೊಳಿರಿಸಿ—

ಕಂ ॥ ಇವು ದೃಷ್ಟಿ ವಿಷಾಹಿಯ ಗರ
ಳ ವಹ್ನಿ ಜಿಹ್ವಾ ವಿಭಾಸಮೆನೆ ಕಣ್ಗಳ ಕೆಂ ॥
ಪವರೊರ್ವರೊರ್ವರಂ ಪ್ರಾ
ಣ ವಾಯುವಂ ನುಂಗುವಂತೆ ನೋಡಿದರಾಗಳ್ ॥ ೧೪೭ ॥

ಅಂತವರಿರ್ವರುವೋರೊರ್ವರಂ ಜನ್ಮಾಂತರ ಜನಿತ ಕಲುಷ ವಶಗತರಾಗಿ ನೀಡುಂ ನೋಡೆ ತದನಂತರಂ ಲಕ್ಷ್ಮೀಧರಂ ದಶಕಂಧರನನಿಂತೆಂದಂ—

ಕಂ ॥ ಪಲ ದಿವಸಕ್ಕೆತ್ತಾನುಂ
ಕಲಹಕ್ಕೊಳಗಾದೆ ನಿನ್ನ ಬಾಟ್ಸೂಸೆಯು ಪಂ ॥
ಬಲನಿನ್ನುಟಿ ರಘುವೀರನ
ಚಲನಾಬ್ಜಕ್ಕೆಱಗಿ ಪಡೆಯ ಮೃತ್ಯುಂಜಯಮಂ ॥ ೧೪೮ ॥

ಎನೆ ದಶಮುಖಂ ಮುನಿದಿಂತೆಂದಂ—

ಕಂ ॥ ತ್ರಿಜಗದೊಳುಳ್ಳಱಕೆಯ ಭೂ
ಭುಜರಂ ಭುಜ ಬಲದಿನೆನ್ನ ಕಾಲ್ಗೆಱಗಿಸಿದೆಂ ॥
ನಿಜ ತನುಗೆಱಗಿಸುವೆನಧೋ
ಕ್ಷಜ ನಿಮಿಷಾರ್ಧದೊಳೆ ಪರ್ದುಮಂ ಕಾಗೆಯುಮಂ ॥ ೧೪೯ ॥

ಎಂದು ಬಿಡೆನುಡಿದು ಕೈದುಗೆಯ್ಯೆಂದು ಮೂದಲಿಸಿ ನಿಜವಿಜಯ ಚಾಪಂಗಳನೇಱಿಸಿ ನೀವಿ ಜೇವೊಡೆವುದುಂ—

ಮ ॥ ದಿನಕೃನ್ಮಂಡಲಮಂ ಪಳಂಚಿ ಕುಲ ಭೂಭೃತ್ಕೂಟದೊಳ್ ಬೇರೆ ಮಾ।
ರ್ದನಿಯಂ ಪುಟ್ಟಿಸಿ ಲೋಕ ಪಾಲರ ಮನಕ್ಕಾತಂಕಮಂ ತಂದು ಕೂ ॥
ಡೆ ನಭೋಮಂಡಲಮಂ ದಿಶಾ ವಲಯಮಂ ತಟಿಸ್ಸೊಯ್ದು ಪೊಣ್ಮಿತ್ತು ಪೇಂ।
ದ್ರನ ದೈತ್ಯೇಂದ್ರನ ದಿವ್ಯ ಚಾಪ ವಿಪುಲ ಜ್ಯಾಘಾತ ಘೋರ ಸ್ವನಂ ॥ ೧೫೦ ॥

ಅಂತು ಸಮರ ಸನ್ನದ್ಧರಾಗಿ—

ಕಂ ॥ ಅಯ್ದುಂ ಸ್ಥಾನದೊಳಂ ನಿಂ
ದಯ್ದುಂ ತೆಱದೇಸಿನೋಜೆವೆತ್ತಪ್ರತಿಮರ್ ॥

ಕಾಯ್ದಿಸೆ ದೆಸೆ ಮಸುಳ್ವಿನೆಗಂ
ಪಾಯ್ದುವು ಪುಂಖಾನುಪುಂಖಮಸ್ತ್ರಾವಳಿಗಳ್ ॥ ೧೫೧ ॥

ದನುಜೇಂದ್ರನ ಗಜ ರಥಮುಂ
ಮನುಜೇಂದ್ರನ ಗರುಡ ರಥಮು[1]ಮೆವೆ ಮಿಡುಕದೆ ನಿ ॥
ಲ್ವಿನಮವರೆಚ್ಚಂಬುಗಳಂ
ದನುವರದೊಳ್ ಪಡೆದುವೊಡನೆ ಶರ ಪಂಜರಮಂ ॥ ೧೫೨ ॥

ಓರೊರ್ವರೆಚ್ಚ ಕಣೆಗಳ
ನೋರೊರ್ವರ್ ಕಡಿದು ಮಾಣದಿಸೆ ಮಾರ್ಮುಗಿಲಿಂ ॥
ದೋರಂತೆ ಪಾಯ್ವ ಪುಷ್ಕರ
ಧಾರಾ ಸಂದೋಹದಂತೆ ಪಾಯ್ದುವು ಕಣೆಗಳ್ ॥ ೧೫೩ ॥

ಪುರುಷೋತ್ತಮನಿಸೆ ದಶಕಂ
ಧರನಂ ಕೂರ್ಗಣೆಗಳುರ್ಚಲಾಱವೆ ದಶಕಂ ॥
ಧರನಿಸೆ ನಿಶಿತಾಸ್ತ್ರಂಗಳ್
ಪುರುಷೋತ್ತಮ ತನುವನುರ್ಚಲಾಱವೆ ಧುರದೊಳ್ ॥ ೧೫೪ ॥

ನೆಱೆ[2]ದುದು ನಿನ್ನ ನಿಷೇಕಂ
ನೆಱಗೊಳ್ಳದೆ ಮಾಣವೆನ್ನ ಬಾಣಾವಳಿಗಳ್ ॥
ಗಱಿ ಸೋಂಕದೆ ಪೋಗೆನುತುಂ
ಗಱಿ ಗಱಿಯುಂ ಸೋಂಕಿ ಪರಿಯೆ ಲಕ್ಷ್ಮಣನೆಚ್ಚಂ ॥ ೧೫೫ ॥

ಚ ॥ ಸಮಧಿಕರಸ್ತ್ರ ಶಸ್ತ್ರ ಬಲದೊಳ್ ದೃಢಕಾಯದೊಳತ್ಯುದಗ್ರ ವಿ ।
ಕ್ರಮದೊಳನಂತ ವೀರ್ಯದೊಳನೇಕ ವಿಧ ಪ್ರಧನಂಗಳೊಳ್ ಧನು ॥
ಶ್ರ್ರಮದೊಳಪಾರ ಪೌರುಷದೊಳಾದೊಡಮೇಂ ಪ್ರತಿ ವಾಸುದೇವನೊಳ್ ।
ಸಮನಿಸಿದಾಯುರಂತಮೆ ಜಯಪ್ರದಮಾದುದು ವಾಸುದೇವನೊಳ್ ॥೧೫೬॥

ಕಂ ॥ ರಾವಣ ಲಕ್ಷ್ಮಣರತಿ ರೋ
ಷಾವೇಶದಿನೆಚ್ಚುಮಿಟ್ಟುಮಿಱಿದುಂ ಪೊಯ್ದುಂ ॥
ನೋವಂ ಸಾವಂ ಬಗೆಯದೆ
ದೇವರ್ಕಳ ನೆರವಿ ನೋಡೆ ಕಾದುತ್ತಿರ್ದರ್ ॥ ೧೫೭ ॥

---

1. ಮೆಲೆ ಮಿಡುಕದೆ. ಖ. ಗ. ಘ. ಚ. 2. ದುವು. ಗ. ಘ. ಚ.

ಕಂ ॥ ಸಾಧಾರಣಾಸ್ತ್ರದಿಂದಮ
ಸಾಧಾರಣಮಪ್ಪ ಯುದ್ಧಮುಂ ಮಾಡಿಯುಮೇಂ ॥
ಸಾಧಿಸಲಣಮಾಱನೆ ಲ
ಕ್ಷ್ಮೀಧರನಂ ಕದನ ಕರ್ಕಶಂ ದಶವದನಂ ॥ ೧೫೮ ॥

ಅಂತಚಿಂತ್ಯ ಯುದ್ಧಂಗೆಯ್ದು ಲಕ್ಷ್ಮಣನಂ ಗೆಲಲ್ ನೆಱೆಯದೆ ವಿದ್ಯಾಯುದ್ಧಮಂ ಪೊಣರ್ಚಿ ದಿವ್ಯಾಸ್ತ್ರಮನಭಿಮಂತ್ರಿಸಿಕೊಂಡಿಸುವುದುಂ—

ಚ ॥ ಪೊಗೆ ಪೊಱಪೊಣ್ಮೆ ಸೂಸೆ ಕಿಡಿಗಳ್ ಗರಳಾನಲನಿಂ ಜಗಂಗಳಂ ।
ಬಗೆಯದೆ ನುಂಗಲೆಂದು ಪರಿತಂದಪುದಂತಕನಾಜ್ಞೆಯಿಂದಮಿಂ ॥
ಪಗೆವಡೆಗಿಲ್ಲ ಜೀವನಮೆನಲ್ ದಶಕಂಧರನೆಚ್ಚ ರೌದ್ರ ಪ ।
ನ್ನಗ ಶರಮಂ ಗರುತ್ಮಶರದಿಂ ಬಿಱುತೋಡಿಸಿದಂ ಜನಾರ್ದನಂ ॥ ೧೫೯ ॥

ಲಯಸಮಯಂ ಜಗಕ್ಕೆ ಪೆಱತಾವುದೊ ರಾವಣನುಗ್ರ ಕೋಪ ವ ।
ಹ್ನಿಯೆ ವಿಲಯಾನಲಂ ಮುಳಿಸೆ ಕಲ್ಪ ವಿರಾಮಮೆನಲ್ ಸಹಸ್ರ ಜಿ ॥
ಹ್ವೆಯೊಳಮಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿ ಬಾಣಮಂ ।
ಜಯ ರಮಣೀರಮಂ ತವಿಸಿದಂ ಹರಿ ವಾರುಣ ದಿವ್ಯ ಬಾಣದಿಂ ॥ ೧೬೦ ॥

ಇಸೆ ತಮುದಂಬಿನಿಂ ದಶಮುಖಂ ತಪನಾಸ್ತ್ರದಿನದ್ರಿ ಬಾಣದಿಂ ।
ದಿಸೆ ದನುಜಾಧಿಪಂ ಕುಲಿಶ ಸಾಯಕದಿಂ ತರು ದಿವ್ಯ ಬಾಣದಿಂ ॥
ದಿಸೆ ಖಚರಂ ಕುಠಾರ ಶರದಿಂದಭಿಮಂತ್ರಿಸಿ ಮೇಘ ಬಾಣದಿಂ ।
ದಿಸೆ ದಶಕಂಧರಂ ಪವನ ಸಾಯಕದಿಂ ತಱಿದಂ ಗದಾಯುಧಂ ॥ ೧೬೧ ॥

ಕಂ ॥ ಇವು ಮೊದಲಾಗಿರೆ ನಿಜ ದಿ
ವ್ಯ ವಿಶಿಖಮುಂ ಮತ್ತಮಾಜಿಯೊಳ್ ಪಲವಂ ದಾ ॥
ನವ ರಿಪು ಭಂಜಿಸೆ ನಿಜ ದಿ
ವ್ಯ ವಿಶಿಖದಿಂ ದೆಸೆಗೆ ಮಸಗಿದಂ ದಶವದನಂ ॥ ೧೬೨ ॥

ಅಂತು ಮುಳಿದು ದಿವ್ಯ ಬಾಣದಿಂ ಲಕ್ಷ್ಮಣನಂ ಗೆಲಲ್ ನೆಱೆಯದೆ—

ಚ ॥ ಸಿಡಿಮಿಡಿಗೊಂಡು ತನ್ನ ಕಲುಷೋಗ್ರ ಕೃಶಾನುವೆ ತನ್ನ ದೇಹಮಂ ।
ಸುಡೆ ನಿಲಲಾಱದುಮ್ಮಳಿಸಿ ಲಕ್ಷ್ಮಣ ದೇವನ ದಿವ್ಯ ಬಾಣದಿಂ ॥
ಕಿಡೆ ನಿಜ ದಿವ್ಯ ಬಾಣದೆಸಕಂ ಮಸಕಂಗಿಡದಿಂದ್ರ ವಿದ್ವಿಷಂ ।
ಪಡೆದನಪಾರಮಂ ತನುಗಳಂ ಬಹುರೂಪಿಣಿಯೆಂಬ ವಿದ್ಯೆಯಿಂ ॥ ೧೬೩ ॥

ಕಂ ॥ ಆ ವಿದ್ಯೆಯ ಸಾಮರ್ಥ್ಯಮ
ನೇವಣ್ಣಿಸುವೆಂ ಜನಾರ್ದನಂಗಾಕ್ಷಣದೊಳ್ ॥
ರಾವಣ ಮಯಮಾಯ್ತ್ತಖಿಲ ಧ
ರಾ ವಲಯಂ ಗಗನ ವಲಯಮಾಶಾ ವಲಯಂ ॥ ೧೬೪ ॥

ರಾವಣರನೇಕರುಂ ಯು
ದ್ಧಾವಷ್ಟಂಭ ಪ್ರಚಂಡ ದೋರ್ದಂಡರಗು ॥
ರ್ವಾವರಿಸೆ ಸುತ್ತಿ ಮುತ್ತೆ ಜ
ಯಾವಸಥಂ ಲಕ್ಷ್ಮಣಂ ರಣೋತ್ಸುಕನಾದಂ ॥ ೧೬೫ ॥

ಅಂತು ಸೌಮಿತ್ರಿಯಂ ಸುತ್ತಿ ಮುತ್ತಿ—

ಕಂ ॥ ಇಟ್ಟರ್ ಕೆಲರಿಱಿದರ್ ಕೆಲ
ರೊಟ್ಟಜೆಯಿಂ ಬಂದು ತಾಗಿದರ್ ಕೆಲರಂಬಂ ॥
ತೊಟ್ಟರ್ ಕೆಲರಟ್ಟಿಱಿದ ಬೊ
ಬ್ಬಿಟ್ಟರ್ ಕೆಲರಾಜಿ ರಂಗದೊಳ್ ಪೌಲಸ್ತ್ಯರ್ ॥ ೧೬೬ ॥

ಅಂತಗುರ್ವಾಗೆ ಬಿಗುರ್ವಿಸಿ ಕಾದುವಲ್ಲಿ—

ಮ ॥ ಅನಿತುಂ ರಾವಣ ಕೋಟಿ ಕೋಟಿ ತೆಱದಿಂ ದಿವ್ಯಾಸ್ತ್ರ ಶಸ್ತ್ರಂಗಳಿಂ ।
ಮುನಿದೆಯ್ತಂದಿಸೆ ಪೊಯ್ಯೆ ತಳ್ತಿಱಿಯೆ ತಳ್ತೇಸಾಡಿದಂ ಕೋಟಿಗೊ ॥
ರ್ವನೆ ಬಿಲ್ಗೊಂಡು ಪುನರ್ಭವಂ[1]ಗಳವು ಕೋಟಾಕೋಟಿಗಳ್ ಪಾಱಿ ಬೀ ।
ೞ್ವಿನೆಗಂ ಪಂದಲೆಗಳ್ ಧನುರ್ಧರ ಧುರೀಣಂ ದುರ್ಧರಂ ಲಕ್ಷ್ಮಣಂ ॥ ೧೬೭ ॥

ಶರ ಸಂಧಾನದ ವೇಗಮಂ ಪೊಗೞಲಾವಂ ಸಾಲ್ವಪಂ ಕೋಟಿ ದೈ ।
ತ್ಯರನಾಂತೊರ್ವನೆ ದೀಪ ಮಾಲಿಕೆಗಳಂ ಚಂಡಾನಿಲಂ ನಂದಿಪಂ ॥
ತಿರೆ ಮೆಯ್ವೆರ್ಚಿದುವಂ ತುಷಾರ ಕಣಮಂ ಚಂಡಾಂಶು ನಿರ್ಮೂಲಿಪಂ ।
ತಿರೆ ನಿರ್ಮೂಲಿಸಿದಂ ನಿಶಾತ ಶರ ಸಂಘಾತಂಗಳಿಂ ಲಕ್ಷ್ಮಣಂ ॥ ೧೬೮ ॥

ಕಂ ॥ ರಾವಣ ಕೋಟಿಯ ತಲೆ ಕೆಂ
ದಾವರೆಯಂ ಕೆದಱಿದಂತೆ ರಣ ಮಂಡಲಮಂ ॥
ತೀವೆ ತೆಗೆದೆಚ್ಚು ಲಕ್ಷ್ಮಣ
ದೇವನವೋಲ್ ಕೋಟಿ ಭಟನೆನಿಪ್ಪವನಾವಂ ॥ ೧೬೯ ॥

1. ಮುಗುಳಿಃ. ಕ. ಖ.

ಮ ॥ ಸಮರಕ್ಷೋಣಿಯನೆಯ್ದಿ ರಾವಣ ಶಿರಂಗಳ್ ತೀವಿ ತಳ್ತೊಪ್ಪಿಯ್ದುವು ।
ಕ್ರಮದಿಂ ಪುಂಜಿಸಿ ರೌದ್ರಮಾದುವು ಸುಮಿತ್ರಾಪುತ್ರ ಬಾಣಾಸನಾ ॥
ಶ್ರಮದೊಳ್ ವಿಶ್ರಮಿಸಿರ್ಪ ಯೋಗಿನಿ [1]ಜಯ ಶ್ರೀವಿಶ್ರುತಾಕಾಶ ಲಿಂ ।
ಗಮನಾರಕ್ತ ಸರೋಜ ಸಂತತಿಗಳಿಂದಭ್ಯರ್ಚನಂಗೆಯ್ದವೋಲ್ ॥ ೧೭೦ ॥

ಅಂತಗುರ್ವಾಗೆ ಬಿಗುರ್ವಿಸಿ ಕಾದುವಲ್ಲಿ ರಾವಣನ ತಲೆಗೆ ನೆಲನುಮಾಕಾಶಮುಮೆಡೆನೆಱಿಯದೆನೆ ತಱಿದೊಟ್ಟೆ ರಾವಣಂ ಬಹುರೂಪಿಣೀ ವಿದ್ಯೆಯನುೞಿದು ಮುಳಿಸನುೞಿಯದೆ ಚಂದ್ರಹಾಸದಿನಿಱಿಯೆ ಲಕ್ಷ್ಮಣಂ ಸೂರ್ಯಹಾಸದಿನದರ್ಕೆ ಭಂಗಮನೊಡರ್ಚೆ ಕೆರ್ಚೇಱಿದ ಕೋಪದಿಂ ಮನಂಬೆರ್ಚೆ—

ಮ ॥ ದೊಣೆಯಿಂದಂ ತೆಗೆಯಲ್ಕೆ ಮರ್ವು ನಭಮಂ ಪರ್ವಿತ್ತು ದಿವ್ಯಾಸ್ತ್ರಮಂ ।
ಗೊಣೆಯುಕ್ಕುಯ್ಯಲೊಡಂ ದಿನಾಧಿಪನ ತೇಜಂ ಪಿಂಗಿಪೋದತ್ತು ರಾ ॥
ವಣನೇಸಾಡಿದೊಡಾಯ್ತು ರಾತ್ರಿಸಮಯಂ ಸಮ್ಮೋಹನಾಸ್ತ್ರಕ್ಕೆ ಲ ।
ಕ್ಷ್ಮಣ ವೀರಂ ಪ್ರತಿಕಾರ ಮಂತ್ರ ವಿಕಲಂ ವಿಭ್ರಾಂತನಾಗಿರ್ಪಿನಂ ॥ ೧೭೧ ॥

ಅನ್ನೆಗಮಿತ್ತ ಚಂದ್ರವರ್ಧನ ವಿಯಚ್ಚರೇಂದ್ರನ ಮಗಳ್ದಿರೆಣ್ಬರ್ ಕನ್ನೆಯರ್ ಮಣಿಮಯ ವಿತಾನ ವಿರಾಜಮಾನ ವಿಮಾನಾರೂಢೆಯರ್ ವಿಯನ್ಮಾರ್ಗದಿಂ ಬಂದು ಲಕ್ಷ್ಮಣನಂ ನೋಡುತ್ತುಮಿರೆ ದೇವಾಪ್ಸರೋಗಣಿಕೆಯರಾಕೆಗಳಂ ನೀಮಾರ್ಗೇನಿಮಿತ್ತಮಿಲ್ಲಿಗೆ ಬಂದಿರೆಂದು ಬೆಸಗೊಳ್ವುದುಮವರಿಂತೆಂದರ್ ಸೀತಾಸ್ವಯಂವರಕ್ಕೆ ಮದೀಯ ಜನಕನೊಡಗೊಂಡು ಪೋಗಿ ಲಕ್ಷ್ಮಣನಂ ಕಂಡು ಮನದೆ ಕೊಂಡೆಮ್ಮನೀತಂಗೆ ಕೊಟ್ಟೆನೆಂಬುದುಮೆಮಗೀತನೆ ಪುರುಷನಪ್ಪುದಱಿನೀತನನು ವರವೆಂತಾದಪುದೆಂಬುದಂ ನೋಡಲ್ ಬಂದೆವೆನೆ ಲಕ್ಷ್ಮಣನಾ ಮಾತಂ ಕೇಳ್ದಾಕೆಗಳನಳ್ಕರ್ತು ನೋಟ್ಪುದುಮವರ್ ಸಮಯೋಚಿತಮನಱಿದು ಸಮ್ಮೋಹನ ಶರ ಶಕ್ತಿಯನೀ ಮಂತ್ರದಿಂ ಕಿಡಿಸೆಂದುಚ್ಚರಿಸುವುದುಮಾ ಮಂತ್ರದಿನಭಿಮಂತ್ರಿಸಿ—

ಚ ॥ ಶರಧಿಯನುರ್ಚಿ ಪಿಂಗಿದುದು ಭೋಂಕನೆ ಕೆಟ್ಟಲೆ ದಿವ್ಯ ಬಾಣಮುಂ ।
ತರೆ ತಿರುವಿಂಗೆ ತೀವ್ರಕಿರಣಂ ತಲೆದೋಱಿದನಾರ್ದು ಪಂಕಜೋ ॥
ದರನಿಸೆ ರಾತ್ರಿ ಪಿಂಗಿ ಪಗಲಪ್ಪುದುಮಾದುದು ಸಂತಸಂ ಸುರಾ ।
ಸುರರ್ಗವಲೋಕಿಸಲ್ ಪಡೆದೆವೆಂದವರಿರ್ವರ ದೋರ್ವಲಂಗಳಂ ॥ ೧೭೨ ॥

ಅಂತು ಸಮ್ಮೋಹನಾಸ್ತ್ರಂ ಕೂರ್ಪುಗಿಡೆ ಪೊಡರ್ಪುಗಿಡದೆ ರಾವಣಂ ವಿಘ್ನ ವಿನಾಯಕಾಸ್ತ್ರದಿಂದಿಸುವುದುಮದಂ ಲಕ್ಷ್ಮಣಂ ಸಿದ್ಧಾರ್ಥ ವಿದ್ಯಾಶಿಲೀಮುಖದಿಂ ಪರಾಙ್ಮುಖಂಮಾಟ್ಪುದುಂ—

---

1. ಜಯ. ಗ. ಘ. ಚ.

ಕಂ ॥ ಎನಿತಂ ಕೊಂಡಾಡುವೆ ನೀ
ತನ ಮುಸಕಮನೀಗಳಿಂತೆ [1]ಕಿಡಿಸುವೆನೆಂದಾ ॥
ದನುಜೇಂದ್ರಂ ರೋಷ ಹುತಾ
ಶನನೆರ್ದೆಯೊಳ್ ತಿಣ್ಣಮುರಿಯೆ ಕಿಡಿಕಿಡಿವೋದಂ ॥ ೧೭೩ ॥

ಅಂತತಿ ಪ್ರಬಲ ಕಲುಷ ವಶಗತನಾಗಿ—

ಮ ॥ ಪರಚಕ್ರ ಕ್ಷಯ ಕಾಲಚಕ್ರಮೆನಿಸಿರ್ದಾತ್ಮೀಯ ಚಕ್ರಕ್ಕೆ ಖೇ ।
ಚರ ಚಕ್ರೇಶ್ವರನುಯ್ಯೆ ಕೈಯನದು ತೇಜಶ್ಚಕ್ರದಿಂ ಕೋಟಿ ಭಾ ॥
ಸ್ಕರಚಕ್ರ ಪ್ರಭೆಯಂ ಪಳಂಚಲೆದು ಕೈಗೆಯ್ತಂದು ಲೋಕೈಕ ಭೀ ।
ಕರಮಾಟಂದುದು ನೀಲ ಮೇಘ ನಿಕಟ ಪ್ರಸ್ಫಾರ ದಂಭೋಳಿವೋಲ್ ॥೧೭೪॥

ಅಂತು ವೀರಪುರುಷ ರತ್ನನೆನಿಪ ರಾವಣನ ಕೈಗೆ ಚಕ್ರರತ್ನಂ ಬರ್ಪುದುಮದಂ ಲಕ್ಷ್ಮಣಂ ಕೋವರ ಚಕ್ರಮಂ ಬಗೆವಂತೆ ಬಗೆದು—

ಉ ॥ ಭೇದಿಪೆನೀ ದಶಾನನನ ಚಕ್ರಮನೀತನ ಕಂಠ ನಾಳಮಂ ।
ಭೇದಿಸಿ ತೋರ್ಪೆನೆನ್ನ ಭುಜ ವೀರ್ಯಮನೆಂದು ಕಡಂಗಿ ವಿಕ್ರಮಾ ॥
ಸಾದಿತ ವಿಶ್ವಲೋಕ ವಿಜಯಂ ಕುಲಿಶಾಸ್ತ್ರದ ಪಿಳ್ಕು ನಾರಿಯೊಳ್ ।
ಕೋದು ಕದಂಪನೆಯ್ದೆ ಧನುವಂ ತೆಗೆದರ್ವಿಸಿದಂ ಜನಾರ್ದನಂ ॥ ೧೭೫ ॥

ಮ॥ಸ್ರ॥ ಕಡಿಖಂಡಂಮಾಡುವೆಂ ಚಕ್ರಮನೆಡೆಯೊಳೆನುತ್ತುಂ ಧನುರ್ದಂಡಮಂ ಜೇ।
ವೊಡೆಗೆಯ್ದುಗ್ರಾಸ್ತ್ರಮಂ ಸಂಧಿಸಿ ತಿರುವಿನೊಳಾಲೀಢದೊಳ್ ನಿಂದು ಕೋಲುಂ॥
ಕಡೆಗಣ್ಣುಂ ಕೈಯುಮಿಂಬಾಗಿರೆ ತೆಗೆನೆಱದವ್ಯಗ್ರನೇಕಾಗ್ರ ಚಿತ್ತಂ ।
ಬಡೆದಿರ್ದಂ ಚಂದ್ರ ಚೂಡಂ ತ್ರಿಪುರಮನಿಸಲೆಂದಿರ್ದವೋಲ್ ರಾಮ ಚಂದ್ರಂ ॥ ೧೭೬ ॥

ಉ ॥ ದಂಡಧರಂಬೊಲಿರ್ದನಭಿವೀಕ್ಷಿಸುತುಂ ಶತ ಖಂಡಮಪ್ಪಿನಂ ।
ಖಂಡಿಸುವೆಂ ವಿಯಚ್ಚರನನಚ್ಚಿನ ಚಕ್ರಮನೆಂದು ಘರ್ಮವಾ ॥
ರ್ಮಂಡಲಿ ಗಂಡ ಮಂಡಲದಿನಲ್ಲುಗೆ ಲೋಹಿತ ಲೋಚನಂ ಪ್ರಭಾ ।
ಮಂಡಲನೆತ್ತಿ ಚಂಡ ಭುಜದಂಡ ವಿಮಂಡಿತ ಮಂಡಲಾಗ್ರಮಂ ॥ ೧೭೭ ॥

ಕಂ ॥ ಇಡೆ ದಶವದನನ ಚಕ್ರದ
ಪೊಡರ್ಪನಾಂ ಕಿಡಿಪೆನೆಂದು ಶೂಲಾಯುಧಮಂ ॥
ಪಿಡಿದೆತ್ತಿ ಸೂಸೆ ಕಣ್ಗಳ್
ಕಿಡಿಯಂ ಭೈರವನವೋಲ್ ವಿಭೀಷಣನಿರ್ದಂ ॥ ೧೭೮ ॥

1. ಸೆರಪುವೆ. ಗ. ಘ ಚ

ಕಂ ॥ ಪುಡಿಪುಡಿಮಾಟಪ್ಪಿಂ ಚಕ್ರಮ<br>
ನೆಡೆಯೊಳೆ ಲಕ್ಷ್ಮಣನನೆಯ್ದಲೀಯೆನೆನುತ್ತುಂ ॥<br>
ಪಿಡಿದೆತ್ತಿ ಗದೆಯನಿರ್ದಂ<br>
ಕಡೆಗಾಲದ ಪೊಡೆವ ಸಿಡಿಲವೋಲ್ ಸುಗ್ರೀವಂ ॥ ೧೭೯ ॥

ಇರೆ ವಾಮಹಸ್ತದೊಳ್ ಬಿಲ್<br>
ತಿರುವಂ ಗೊಲೆಗೊತ್ತಿ ಚಕ್ರಮಂ ಚಿಲ್ಲಿಸುವೆಂ ॥<br>
ಬರಲೀಯೆನೆಂದು ಲಾಂಗಲ<br>
ಶರಂಗಳಂ ಪಿಡಿದು ಪವನನಂದನನಿರ್ದಂ ॥ ೧೮೦ ॥

ವಿಕ್ರಮ ಕರ್ಕಶನೀತನೆ<br>
ಶಕ್ರನೆನಲ್ ಪಿಂಗದಂಗದಂ ವಜ್ರದ ರು ॥<br>
ಕ್ಷಕ್ರಂ ದೆಸೆಯಂ ದಳ್ಳಿಸೆ<br>
ಚಕ್ರಮನಾಕ್ರಮಿಸಲೆಂದು ತಱಿಸಂದಿರ್ದಂ ॥ ೧೮೧ ॥

ಅಂತವರ್ ಸಹಸ್ರ ಯಕ್ಷ ರಕ್ಷಿತಮಪ್ಪ ಸುದರ್ಶನ ಚಕ್ರದ ಬರವನಭಿವೀಕ್ಷಿಸು ತ್ತಿರ್ಪುದುಮತ್ತ ದಶಮುಖಂ ಲಕ್ಷ್ಮಣಂಗಭಿಮುಖನಾಗಿ—

ಕಂ ॥ ಅಱಿಗಂಡಿನೊಳೀಂ ಕೈದುವ<br>
ನುಱಿ ಶಕ್ತಿಯೊಳಾದ ಸಾವನೆಂತಾನುಂ ಮುಂ ॥<br>
ಕಱಿದಿಂ ಸಾಯದಿರಾಂತರ<br>
ನುಱಿವಂತಾಡುಗುವೆ ಚಕ್ರ ಧಾರಾಚಕ್ರಂ ॥ ೧೮೨ ॥

ಎಂದು ಮೂದಲಿಸಿ—

ಕಂ ॥ ತಿರಿಪೆ ಧರಾಚಕ್ರಂ ಕೋ<br>
ವರ ಚಕ್ರದ ತೆಱದೆ ತಿರಿದುದೆಂಟುಂದೆಸೆ ತ ॥<br>
ಳ್ತುರಿದುವು ಚಕ್ರದ ಬಿಸುಪಿಂ<br>
ಸುರ ಸಂಕುಲಮುಗಿದು ತೆಗೆದುದಿರ್ದೆಡೆಯಿಂದಂ ॥ ೧೮೩ ॥

ಆಗಳದಂ ಕಂಡು—

ಉ ॥ ಕಾವವರಾರೊ ಲಕ್ಷ್ಮಣನನಕ್ಕಟ ಸೀತೆಯ ಬೇವಸಕ್ಕೆ ಕಾ ।<br>
ಲಾವಧಿಯಾದುದಿಲ್ಲೆನೆ ಸುರಾಸುರ ಮಂಡಲಮಾರೆ ಹರ್ಷದಿಂ ॥<br>
ರಾವಣ ಸೈನಿಕಂ ಕಪಿ ಬಲಂ ಬಿಱುತೋಡುವಿನಂ ತ್ರಿಲೋಕ ವಿ ।<br>
ದ್ರಾವಣನಿಟ್ಟನಾ ಖಚರ ಚಕ್ರಿ ಸುದರ್ಶನ ದಿವ್ಯಚಕ್ರದಿಂ ॥ ೧೮೪ ॥

ಅಂತಿಸುವುದುಮಾ ಚಕ್ರರತ್ನಂ ತನ್ನನಾಕ್ರಮಿಸಲಿರ್ದ ಹನುಮಾಂಗದಾದಿಗಳ ದಿವ್ಯಾಯುಧಂಗಳನೊಟ್ಟೈಯಿಸಿ ಲಕ್ಷ್ಮೀಧರನಂ ಮುಟ್ಟಿವಂದು ಮೂಱು ಸೂೞ್ ಬಲಗೊಂಡಾತನ ಬಲದ ಮುಯ್ಪಿನ ಕೆಲದೊಳಿರ್ಪುದುಮದಂ ಲಕ್ಷ್ಮೀಧರನವ ಲೋಕಿಸುತ್ತುಮಿರೆ ರಾಮಸ್ವಾಮಿ ಕಂಡು ಲಕ್ಷ್ಮಣ ನಿನಗೆ ಚಕ್ರರತ್ನಂ ದೊರೆಕೊಂಡು ದದನೆ ಕೊಂಡಿಡೆಂದು ಬೆಸಸುವುದುಮದರ್ಕೆ ಲಕ್ಷ್ಮಣಂ ದಕ್ಷಿಣ ಭರತ ಧಾತ್ರಿಗಭಯ ಹಸ್ತಮೆನಿಪ್ಪ ತನ್ನ ದಕ್ಷಿಣ ಹಸ್ತಮಂ ನೀಡೆ—

ಕಂ ॥ ಲಂಕಾಧೀಶನ ಜಯವಧು
ಪಂಕಜ ನಾಭಂಗೆ [1]ಕೊರ್ತು ರಣ ಮುಖದೆಡೆಯೊಳ್ ॥
ಮುಂ ಕೊಟ್ಟಟ್ಟಿದ ರತ್ನದ
ಕಂಕಣಮೆಂಬಂತೆ ಕೈಗೆ ವಂದುದು ಚಕ್ರಂ ॥ ೧೮೫ ॥

ಆಗಳ್ ಚಕ್ರಪಾಣಿ ಖಚರ ಚಕ್ರವರ್ತಿಯನಿಂತೆಂದಂ—

*ಮಲ್ಲಿಕಾ ॥ ನಿನ್ನ ನಚ್ಚಿನ ಚಕ್ರಮುಂ ಬೆಸಕೆಯ್ಯಲೊಲ್ಲದೆ ಬಿಟ್ಟುಬಂ ।
ದೆನ್ನನಾಶ್ರಯಿಸಿತ್ತು ಕೆಮ್ಮನೆ ಕಾದಿ ಸಾಯದೆ ಲಂಕೆಯೊಳ್ ॥
ನಿನ್ನ ಪುತ್ರ ಕಳತ್ರ ಮಿತ್ರರೊಳೊಂದಿ ರಾಜ ವಿಭೂತಿಯೊಳ್ ।
ಮುನ್ನಿನಂತಿರು ಬೇಡಿ ಕೊಂಡಭಯ ಪ್ರದಾನಮನಣ್ಣನೊಳ್ ॥ ೧೮೬ ॥

ಕಂ ॥ ಅಸದಾಗ್ರಹಮಂ ಬಿಸುಟೊ
ಪ್ಪಿಸು ಸೀತಾದೇವಿಯಂ ಜಗಜ್ಜನನಿಯನ ॥
ರ್ಚಿಸು ರಾಮಸ್ವಾಮಿಯ ಚರ
ಣ ಸರೋರುಹಮಂ ಕಿರೀಟ ಮಣಿ ಮಂಜರಿಯಿಂ ॥ ೧೮೭ ॥

ಎನೆ ದಶಮುಖಂ ಕೋಪ ಶಿಖಿಯಿಂ ನಂದುವ ಸೊಡರಂತುದ್ದಮುರಿದು—

ಮ ॥ ಎಲೆ ಪಾರುಂಬಳೆ ಪೋಗೆ ಪೋದುದೆ ಸುಮಿತ್ರಾಪುತ್ರ ಮತ್ಪೌರುಷಂ ।
ಪಲವಂ ನೀಂ ಗಿಳಿಯಂದದಿಂ ಗಟಪದಿರ್ ಕೈಲಾಸಮಂ ತೂಗಿದೀ ॥
ತೊಲೆಯೊಳ್ ದಕ್ಷಿಣಬಾಹು ದಂಡದೊಳಿದಿರ್ಚಲ್ ಗಂಡನಾರೆಂದು ಮೆ ।
ಯ್ಗಲಿ ಪಾಯ್ದಂ ರಥದಿಂ ನೆಲಕ್ಕೆ ಜಡಿಯುತ್ತುಂ ಚಂದ್ರಹಾಸಾಸಿಯಂ ॥ ೧೮೮ ॥

ಅಂತು ಪೊಡರ್ಪುಗಿಡದತಿ ಭರದಿನಿಱಿಯಲನುಗೆಯ್ದು ಬರ್ಪುದಂ ಕಂಡು ಕೋಟಿಕ ಶಿಲೆಯನೆತ್ತಿದ ಮಹಾಸತ್ವಂ ಸುದರ್ಶನ ಚಕ್ರದಿಂದಿಡುವುದುಂ—

---

1. ಸೋಲ್ತು ಮನದೊಲವಿಂದಂ. ಗ. * ಮಲ್ಲಿಕಾಮಾಲೆ.

ಮ ॥ ಹೃದಯಂ ಸೀತಾನಿಮಿತ್ತಂ ಮನಸಿಜನಿಸೆ ಪಂಚೇಷುವಿಂ ಭಿನ್ನಮಾಗಿ ।
ರ್ದುದದಱಿಂ ಲಕ್ಷ್ಮೀಧರಂ ಕೋಪದಿನಿಡೆ ಪೆಱತೇಂ ಚಕ್ರರತ್ನಕ್ಕೆ ಪಾಡಾ ॥
ದುದೆನಲ್ ನಟ್ಟುರ್ಚಿ ಬೆನ್ನಿಂ ಪೊಱಮಡೆ ವಿಗತ ಪ್ರಾಣನಾ ದಾನವೇಂದ್ರಂ ।
ತ್ರಿದಶೇಂದ್ರಂ ವಜ್ರದಿಂದಿಟ್ಟೊಡೆ ನಡುಗೆ ನೆಲಂ ಬೆಟ್ಟು ಬೀೞ್ವಂತೆ ಬಿೞ್ದಂ ॥೧೮೯॥

ಅಂತು ಚಕ್ರಹತಿಯಿಂ ಧರಾತಲದೊಳ್ ಬಿೞ್ದ—

ಚ ॥ ಅಸುರನನರ್ಘ ಶೋಣಮಣಿ ಭೂಷಣ ದೀಧಿತಿಯೊಳ್ ಕಿರೀಟದೊಳ್ ।
ಮಿಸುಗುವ ಪದ್ಮರಾಗ ರುಚಿಯೊಳ್ ಪೊಱಪೊಣ್ಮುವ ರಕ್ತ ವಾರಿಯೊಳ್ ॥
ಮುಸುಕಿ ರಣಾವಲೋಕನ ಕುತೂಹಲದಿಂ ನೆರೆದಪ್ಸರೋಗಣ ।
ಕ್ಕಸುರ ಕುಲಾಧಿದೇವತೆ ಚಿತಾನಲನಿಂ ಸುಡುವಂತೆ ತೋಱಿದಂ ॥ ೧೯೦ ॥

ಮ॥ ಸ್ರ॥ ಅಸಿರತ್ನಂ ಚಕ್ರರತ್ನಂಬಡೆದನಮಿತ ಶಸ್ತ್ರಾಧಿದೈವಂಗಳಂ ಸಾ ।
ಧಿಸಿದಂ ಕೈಲಾಸಮಂ ಚಾಲಿಸಿದನಖಿಲ ದಿಕ್ಪಾಲರಂ ಗೆಲ್ದನಂತ ॥
ಪ್ಪಸುರೇಂದ್ರಂ ತನ್ನ ಶಸ್ತ್ರಾನನದೊಳೆ ಮರಣ ಪ್ರಾಪ್ತನಾದಂ [1]ದಲಂದ ।
ನ್ಯ ಸತೀ ಸಂಭೋಗ ಕೇಳೀ ರತರುಱಿದವರ್ಗಳ್ ಸಾವುದಿನ್ನಾವ ಚೋದ್ಯಂ ॥ ೧೯೧ ॥

ಅಂತು ದಶಾನನಂ ಯಮಾನನಮಂ ಪುಗುವುದುಂ—

ಚ ॥ ಸುರಿದುದು ಪುಷ್ಪವೃಷ್ಟಿ ಸುರ ದುಂದುಭಿ ಘೂರ್ಣಿಸಿದತ್ತುಪೇಂದ್ರನಂ ।
ಪರಸಿದುದಟ್ಟಿಱಿಂ ಸುರಗಣಂ ಮಿಳಿರ್ದತ್ತು ಜಯಧ್ವಜಂ ನಿಶಾ ॥
ಚರ ಬಲವೋಡಿದತ್ತಭಯ ಘೋಷಣಮುಣ್ಮಿದುದಬ್ಧಿ ಘೋಷಮಂ ।
ಪರಿಭವಿಸಿತ್ತು ವಾನರ ಪತಾಕಿನಿಯೊಳ್ ವಿಜಯಾನಕ ಸ್ವನಂ ॥ ೧೯೨ ॥

ಆಗಳವನೀತಲದೊಳ್ ಬಿೞ್ದಿರ್ದ ರಾವಣನಂ ವಿಭೀಷಣಂ ಕಂಡು ಸಹೋದರ ಸ್ನೇಹಂ ಕಾರಣಮಾಗೆ ಮೂರ್ಛೆವೋಗಿ ಶೀತಲ ಕ್ರಿಯೆಯಿನೆಂತಾನುಮೆೞ್ಚತ್ತು ಮತ್ತಮತಿ ಪ್ರಲಾಪಂಗೆಯ್ದು ಶೋಕ ವಿಕಲನಾಗಿರ್ದನಿತ್ತ ರಾವಣಂಗೆ ಮರಣಮಾದುದನಱಿದು ರಂಭೆಯುಂ ಚಂದ್ರಾನನೆಯುಂ ಚಂದ್ರಿಕೆಯುಂ ಪ್ರವರೆಯುಮೂರ್ವಶಿಯುಂ ಮಂಡೋದರಿಯುಂ ಕಮಲೆಯುಂ ಕಮಲಾನನೆಯುಂ ರುಕ್ಮಿಣಿಯುಂ ರತ್ನಮಾಲೆಯುಂ ಶ್ರೀಮತಿಯುಂ ಶ್ರೀಮಾಲೆಯುಂ ಶ್ರೀಕಾಂತೆಯುಂ ಸಂಧ್ಯಾಮಾಲೆಯುಂ ತಟನ್ಮಾಲೆಯುಂ ಅನಂಗಸೌಂದರಿಯುಮಾನಂದೆಯುಂ ವಸುಂಧರೆಯುಂ ಪ್ರಭಾವತಿಯುಂ ಪದ್ಮಾವತಿಯುಂ ಭಾನುಮತಿಯುಂ ಧೃತಿಯುಂ ಮನೋ

1. ದಲೆಂದಂದ ಸತೀ. ಗ. ಘ. ಚ.

ವೇಗೆಯುಂ ರತಿಕಾಂತೆಯುಮೆಂದಿವರ್ ಮೊದಲಾಗೆ [1]ನಾಲ್ವತ್ತೆಣ್ಸಾಸಿರಮಂತಃಪುರ ಪುರಂಧ್ರಿಯರ್ ಬೇಗಂ ಬಂದಾತನ ಕಳೇಬರಮಂ ಕಂಡು ತಟಿಕ್ಕೈಸಿ ಕೊಂಡು ಮೂರ್ಛೆವೋಗಿ ನೀಡಱಿಂದೆಚ್ಚತ್ತು ವಿಷಾದ ವಹ್ನಿಗಾಜ್ಯಾಹುತಿಗಳಾಗಿ—

ಕಂ ॥ ನಿನ್ನಂತವುರದ ಕಾಂತೆಯ
ರನ್ನೋಡದೆ ನುಡಿಯದೆಂಬುಕೆಯ್ಯದೆ ಪದೆಪಿಂ ॥
ಮನ್ನಿಸದೆ ಮುಳಿದ ತೆಱದಿಂ
ನಿನ್ನಿರ್ದಿರವಾವ ಕಾರಣಂ ಖಚರಪತೀ ॥ ೧೯೩ ॥

ಚ ॥ ಕರಿ ಹರಿ ಹಂಸ ಮಾನ ಮಕರಾದಿ ಮಹಾಧ್ವಜವಾರ ಮುಂದೆ ಪೇೞ್ ।
ಪರಿವುವೊ ನಿನ್ನ ಬೆಳ್ಗೊಡೆಯ ತಣ್ನೆೞಲೊಳ್ ನಿಲಲಾರೊ ಯೋಗ್ಯರಾರ್ ॥
ಸುರ ನರ ಕಿನ್ನರೋರಗರನಾಳ್ವೆಸಕೆಯ್ಸುವುದಾತ್ತರಿನ್ನದಾರ್ ।
ಭರತ ವಸುಂಧರಾ ವಲಯಮಂ ಪರಿರಕ್ಷಿಸುವರ್ ದಶಾನನಾ ॥ ೧೯೪ ॥

ಉ ॥ ದುರ್ಮತಿ ಧಾತ್ರನಿಂ ನಿನಗೆ ದುಸ್ಥಿತಿ ಸಾರ್ದುದು ನಿನ್ನ ಪೆಂಡಿರಿ ।
ನ್ನಾರ್ಮಧು ಮಾಸದೊಳ್ ನಿಜ ವಿನೋದ ವನಂಗಳ ಪಾದಪಂಗಳೊಳ್ ॥
ಪೆರ್ಮೊಲೆಯೊತ್ತಿನಿಂ ಕುರ ವಕಕ್ಕೆ ವಿಕಾಸಮನುಂಟುಮಾಳ್ಪರಿ ।
ನ್ನಾರ್ಮಧು ಬಿಂದು ಸೇಕದೊಳೆ ಕೇಸರದೊಳ್ ಪಡೆವರ್ ವಿಕಾಸಮಂ ॥ ೧೯೫ ॥

ಮ ॥ ದಿವಮಂ ನೀಂ ಪುಗೆ ಖೇಚರೇಂದ್ರ ತರಳಾಪಾಂಗ ಪ್ರಭಾ ಪಾತದಿಂ ।
ದವರೋಧಾಂಗನೆಯರ್ಕಳಾ ತಿಲಕದೊಳ್ ಪೂಗೊಂಚಲಂ ಮಾಳ್ಪರಿ ॥
ನ್ನವನೀವಲ್ಲಭ ನಿನ್ನ ನಂದನದಶೋಕಾನೋಕಹಕ್ಕಾರೊ ಪ ।
ಲ್ಲವಮಂ ಪುಟ್ಟಿಸುವರ್ ವಿಲಾಸವತಿಯರ್ ಪಾದ ಪ್ರಹಾರಂಗಳಿಂ ॥ ೧೯೬ ॥

ಉ ॥ ಇಂ ಕಡುಕೆಯ್ದು ದಿಕ್ಪತಿಗಳಳ್ಕುವಿನಂ ತ್ರಿಜಗದ್ವಿಭೂಷಣ ।
ಕ್ಕಂಕುಶಮಿಕ್ಕಿ ದಿಗ್ಗಜಮನೋಡಿಸಲುಂ ವಿಜಯಾರ್ಧ ಶೈಲದಿಂ ॥
ತೆಂಕಣ ಧಾತ್ರಿಯುಂ ತನಗೆ ಕಂಕಣದಂತಿರೆ ಕೈಗೆ ಮಾಡಲುಂ ।
ಲಂಕೆಯನಾಳಲುಂ ನೆಱೆವ ಖೇಚರ ವಲ್ಲಭನಾರ್ ದಶಾನನಾ ॥ ೧೯೭ ॥

ಕಂ ॥ ಬಾಳಿಯನಂಜಿಸಿ ಭುಜ ಬಲ
ಶಾಳಿಯನೋಡಿಸಿ ಸಹಸ್ರ ಬಾಹುವನಿನ್ನಾರ್ ॥
ಬಾಳಮುಸೆಯಿಂ ದಶಾನನ
ಕೇೞಾಳ್ಮಾಡುವರೊ ನೆಲದೊಳುಳ್ಳರಸುಗಳಂ ॥ ೧೯೮ ॥

---

1. ಪದಿನಾರ್ ಸಾಸಿರಂ. ಚ.

ಕಂ॥ ದಿವಿಜ ಭವನಕ್ಕೆ ಹಾ ದಾ
ನವೇಂದ್ರ ನೀನತಿಥಿಯಾದೆ ತುಡುವವರಿನ್ನಾರ್ ॥
ನವ ಮುಖಭೂಷಣಮಂ ಸ್ವೈ
ರ ವಿಹಾರದಿನೇಱುವನ್ನರಾರ್ ಪುಷ್ಪಕಮಂ ॥ ೧೯೯ ॥

ಉ॥ ಅತ್ತ ಸುರಾಸುರರ್ ನೆರೆದು ಬೊಬ್ಬಿಡೆ ನೀಂ ಕಿಱುಗುಂಡನೆತ್ತುವಂ।
ತೆತ್ತಿದ ಬನ್ನಮಂ ಬಗೆಗೆ ತಂದು ಕುಬೇರ ಗಿರೀಂದ್ರಮಾರ್ಷ್ಯಿ ಮಂ ॥
ಯ್ವೆತ್ತಿರೆ ನಿರ್ಝರಚ್ಛಲದಿನೋಕುಳಿಯಾಡುವಿನಂ ದಶಾಸ್ಯ ದೇ।
ವೋತ್ತಮ ಕಾಮಿನೀಜನದ ತೋಳ್ವಲೆಯೊಳ್ ತೊಡರಲ್ಕೆ ತಕ್ಕುದೇ ॥ ೨೦೦ ॥

ಎತ್ತುವಿನಂ ಮಹೋತ್ಸವ ಪತಾಕೆಗಳುತ್ಸವ ತೂರ್ಯ ನಿಸ್ವನಂ।
ಬಿತ್ತರಿಪನ್ನಮಂತಕನ ಬಾರಿಗೆ ಸೋವತಮಾದೆ ದೇವ ದು ॥
ರ್ವೃತ್ತ ವಿರೋಧಿ ನಿರ್ದಲನ ಕಾಳೆಗದೊಳ್ ಪಿಡಿಪೆತ್ತ ಸತ್ತ ಬೆ।
ನ್ನಿತ್ತ ವಿರೋಧಿ ಭೂಭುಜರ ಖೇಚರ ರಾಜರ ರಾಜಧಾನಿಯೊಳ್ ॥ ೨೦೧ ॥

ಎಂದತಿಪ್ರಲಾಪಂಗೆಯ್ಯುತ್ತುಂ ರಾವಣನ ಚರಣೋಪಾಂತದೊಳ್ ಮೆಯ್ಯ ನೀಡಾಡಿ ಹಾಹಾ ದಶಾಸ್ಯ ಕೀರ್ತಿ ವಲ್ಲರೀ ವಲಯಿತ ದಿಶಾಸ್ಯ ಹಾಹಾ ವಿಲಾಸ ಮಕರ ಧ್ವಜ ಖೇಚರಕುಲ ಧ್ವಜ ಹಾಹಾ ತ್ರಿಲೋಕ ವಿಜಯಸ್ತಂಭ ಜಯಶ್ರೀ ಸಾಲ ಭಂಜಿಕಾ ರಂಜಿತ ಭುಜಸ್ತಂಭ ಹಾಹಾ ದುರ್ವಾರ ದೈತ್ಯ ದರ್ಪ ವಿಧ್ವಂಸ ಸರಸ್ವತೀ ಕರ್ಣಾವತಂಸ ಹಾಹಾ ರಿಪು ನೃಪತಿ ಕಟಕ ವಿಟಪಿ ಕುಠಾರ ಖಚರ ಕಾಮಿನೀ ಪಯೋಧರ ಮಧ್ಯ ರಾಜಿತ ತರಳ ತಾರಹಾರ ಹಾಹಾ ವನಿತಾ ಯೌವನವನ ವಸಂತ ಅನವರತ ಚತುರ್ವಿಧ ಪುರುಷಾರ್ಥ ಚಿಂತಿತ ಸ್ವಾಂತ ನಿನ್ನಂತಃಪುರದ ಕಾಂತಾಜನದ ಕದಂಪಿನೊಳ್ ಮೃಗಮದ ಪತ್ರಲೇಖೆಯಂ ಬರೆಯಲುಂ ಬಾಹು ಲತೆಯೊಳ್ ಪಿಂಡುಗಂಕಣಮನೇಱಿಸಲುಂ ಘನ ಸ್ತನಮಂಡಲದೊಳ್ ಮಲಯ ರುಹ ಚರ್ಚೆಯನೊಡರ್ಚಲುಂ ನಿತಂಬ ಬಿಂಬದೊಳ್ ನೂಲ ತೊಂಗಲನೊಡ ರ್ಚಲುಂ ಪದ ಪಯೋಜದೊಳ್ ಮಣಿ ನೂಪುರಮನಳವಡಿಸಲುಮತಿ ಪರಿಚಯದಿ ನಲಸಿದಂತೆ ದಿವಿಜ ಕಾಂತಾಸಂಭೋಗ ಲೀಲಾಲಸನಾಗಿ—

ಕಂ॥ ದಿಗಿಭಕ್ಕೆ ಕುಲಾದ್ರಿಗೆ ಪ
ನ್ನಗ ಪತಿಗತಿ ಭಾರಮಾಗೆ ಭೂಭಾರಮನೇ ॥
ಕೆ ಗಡಂ ನೀನೊಪ್ಪಿಸಿ ವ
ಜ್ರಿಗೆ ತಲ್ಲಳಮಾಗೆ ದಿವಕೆ ದಾಟಿಯನಿಟ್ಟೈ ॥ ೨೦೨ ॥

ಎಂದು ಬಹುವಿಧದಿಂ ಪಳವಿಸುವ ಪೌಲಸ್ತ್ಯನ ಕುಲಸ್ತ್ರೀಯರಂ ಕಂಡು ರಾಮಸ್ವಾಮಿ ಕರುಣಿಸಿ ರಾವಣಂಗೀ ಮರಣಮಾತನ ದುರ್ವ್ಯಸನದಿಂದಾದುದಲ್ಲದೆಮ್ಮಿಂದಾದುದಲ್ತಾಗಾಗ್ದೊಡಂ ಸಂಸಾರ ಸ್ವರೂಪಮಿಂತುಟೆ ವಲಮಾರ ಜೀವನಮುಂ ಜವ್ವನಮುಂ ಧನ ಧಾನ್ಯಮುಮಿಷ್ಟಸಂಯೋಗಮುಂ ಕ್ಷಣದೆ ನಶ್ವರಂಗಳದಱಿಂದವರ್ಗಳಿಲದಲಸದೆ ಸೈರಿಸುವುದೆಂದವರುಮಂ ವಿಭೀಷಣನುಮಂ ಸಂತಯಿಸಿ—

ಕಂ ॥ ಬವರಂಗೆಯ್ವಾತಂಗಾ
ಯ್ತವಸಾನಂ ತಕ್ಕುದಲ್ತು ಪಗೆಗೊಳ್ವುದು ವಿ ॥
ಕ್ಕವರೊಳ್ ನಮಗೆಂದಂ ರಾ
ಘವಂಗೆ ಸಚ್ಚರಿತದೆಸಕಮೊಂದಚ್ಚರಿಯೇ ॥ ೨೦೩ ॥

ಎಂದು ತಾನುಂ ಲಕ್ಷ್ಮಣನುಮಾನೆಯನೇಱಿ ಪಲರ್ ಸಾಮಂತರ್ ಬಳಸಿಬರೆ ಮಂಡೋದರಿಯ ಸಮೀಪಕ್ಕೆ ಬಂದಾಕೆಯ ಶೋಕಮಂ ಸಂಸಾರ ಸ್ವರೂಪಮಂ ಪೇೞ್ದು ಪಿಂಗಿಸಿ ಬಳಿಯಂ ಕರ್ಪೂರಾಗರು ಗೋಶೀರ್ಷ ಚಂದನಾದಿಗಳಿಂ ರಾವಣನಂ ಯಥಾವಿಧಿಯಿಂ ಸಂಸ್ಕರಿಸಿ ತದನಂತರಮಿಂದಗಿ ಮೇಘವಾಹನ ಕುಂಭಕರ್ಣ ಮಯ ಮಾರೀಚಾದಿಗಳಂ ಬರಿಸಿ ಸೆಱೆಯಂ ಬಿಡಿಸಿ ಪಲತೆಱದಿನವರ ಶೋಕಮನುಪಶಮಿಯಿಸಿ—

ಕಂ ॥ ರಾವಣನೊರ್ವನೆ ಕಳಿದಂ
ನೀವಿನಿಬರುಮಟ್ಟಿಱಿಂ ವಿಭೀಷಣನೊಳ್ ಸ ॥
ದ್ಭಾವಮನೆ ಮೆಱೆದು ಖಚರ
ಶ್ರೀ ವಿಭವಮನೆಂದಿನಂದದಿಂದನುಭವಿಸಿಂ ॥ ೨೦೪ ॥

ಎಂಬುದುಂ ಕುಂಭಕರ್ಣಾದಿಗಳ್ ರಾಮಲಕ್ಷ್ಮಣರ ನಿಷ್ಕಷಾಯತ್ವಮುಮಂ ಸಂಸಾರ ಭೀರುತ್ವಮುಮಂ ಧೈರ್ಯಮುಮಂ ಬಾಹುವೀರ್ಯಮುಮಂ ಮೆಚ್ಚಿ ಪೊಗೞ್ದಿನ್ನೆಮಗೆ ಸಂಸಾರ ಸುಖಂ ಸಾಲ್ಗುಮೆಂದು ಭೋಗ ನಿರ್ವೇಗ ಪರರಾಗಿ ನುಡಿದು ರಾಮಲಕ್ಷ್ಮಣರ್ವೆರಸು ಪದ್ಮಸರೋವರದೊಳ್ ಜಲದಾನ ಕ್ರಿಯೆಯಂ ನಿರ್ವರ್ತಿಸಿ ದಿಂಬಳಿಯಂ ನೇಸರ್ ಪಡುವ ಸಮಯದೊಳ್—

ಕಂ ॥ ಅನುಪಮರಱುಸಾಸಿರ್ವರ್
ಮುನಿಗಳ್ವೆರಸಪ್ರಮೇಯ ಮುನಿ ನಾಥರ್ ಬಂ ॥
ದಿನ ಪಥದಿಂ ಲಂಕೆಯನಂ
ದನ ವನ ಮಧ್ಯದೊಳೆ ನಿಯಮ ನಿಯಮಿತರಿರ್ದರ್ ॥ ೨೦೫ ॥

ಅಂತಿರ್ಪುದುಂ—

ಕಂ ॥ ಪ್ರಕಟಿಸಿದುದು ಶುಕ್ಲ ಧ್ಯಾ
ನ ಕೃಶಾನು ಜ್ವಾಲೆಯಿಂದವರ್ ಸುಡೆ ಮೂಲ ॥
ಪ್ರಕೃತಿಗಳೊಳ್ ಘಾತಿಗಳಂ
ಸಕಲ ಪದಾರ್ಥಾವಭಾಸಿ ಕೇವಲ ಬೋಧಂ ॥ ೨೦೬ ॥

ಇತ್ತ ಧಾತಕೀಷಂಡದೊಳ್ ತೀರ್ಥಂಕರ ಕುಮಾರ ಜನ್ಮೋತ್ಸವಮಪ್ಪುದುಂ ಚತುರ್ನಿಕಾಯ ದೇವನಿಕಾಯುಂ ಭಗವಜ್ಜನ್ಮಾಭಿಷವಣಮಂ ತೀರ್ಚಿ ಲಂಕೆಯ ಮೇಲೆ ಬರುತ್ತುಂ ಕುಸುಮಾಯುಧೋದ್ಯಾನದೊಳ್ ಸರ್ವಜ್ಞತ್ವಮಂ ಪೆತ್ತಿರ್ದಪ್ರಮೇಯ ಭಟ್ಟಾರಕರಂ ಕಂಡು ಬಲಗೊಂಡು ಪೊಡೆವಟ್ಟು ಪೂಜಿಸುವ ಸಮಯದೊಳ್ ಭೋಂಕನೆ ಪಸರಿಸುವ ಶಂಖ ಪಟಹಾದಿ ವಿವಿಧ ವಾದ್ಯ ರವಂಗಳಂ ರಾಮಲಕ್ಷ್ಮಣರುಂ ವಾನರಧ್ವಜರುಂ ಕೇಳ್ದು ಜಿನ ಪೂಜೋತ್ಸವ ಪಟಹ ರವಂಗಳೆಂದಱಿದಿಂದ್ರಜಿನ್ಮೇಘವಾಹನ ಕುಂಭಕರ್ಣಾದಿಗಳಿಂ ಪರಿವೃತರಾಗಿ ಭಟ್ಟಾರಕರಿರ್ದೆಡೆಗೆ ವೋಗಿ—

ಉ ॥ ಆ ರಘುವಂಶ ಕೇತು ಬಲಗೊಂಡು ಲಲಾಟದೊಳೊಪ್ಪೆ ಹಸ್ತ ಪಂ ।
ಕೇರುಹ ಕುಟ್ಮಲಂ ವಿನಮಿತಂ ವಿವಿಧಾರ್ಚನೆಯಿಂದಘೌಘ ಸಂ ॥
ಹಾರಕರಂ ಭವಾಂಬುನಿಧಿ ತಾರಕರಂ ನೆಗೞ್ದಪ್ರಮೇಯ ಭ ।
ಟ್ಟಾರಕರಂ ರಘುಪ್ರವರನರ್ಚಿಸಿದಂ ಕವಿತಾ ಮನೋಹರಂ ॥ ೨೦೭ ॥

ಇದು ಪರಮ ಜಿನಸಮಯ ಕುಮುದಿನೀಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖ ಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರ ಚರಿತ ಪುರಾಣದೊಳ್
ರಘುವೀರ ವಿಜಯವರ್ಣನಂ
ಚತುರ್ದಶಾಶ್ವಾಸಂ.

# ಪಂಚದಶಾಶ್ವಾಸಂ

ಕಂ॥ ಶ್ರೀರಾಮಾ ರಮಣಂ ವಾ
ಕ್ಶ್ರೀರಾಮಾ ವಲ್ಲಭಂ ಯಶಶ್ರೀ ಕಾಂತಂ ॥
ವೀರಶ್ರೀ ಪತಿ ಮುನಿ ಬೃಂ
ದಾರಕ ಪದ ವಿನತನಾದನಭಿನವ ಪಂಪಂ ॥ ೧ ॥

ಅಂತು ನಿರ್ಭರ ಭಕ್ತಿಯಿಂ ವಂದಿಸಿ ಸಂಸಾರ ಕ್ಷಯ ಕಾರಣಮಪ್ಪ ಧರ್ಮಮುಮ ನಾಪ್ತ ಗುಣಂಗಳುಮಂ ಜೀವಾದಿ ತತ್ವಭೇದಂಗಳುಮಂ ಭಟ್ಟಾರಕರ್ ಬೆಸಸೆ ಕೇಳ್ದು ಸಂತುಷ್ಟ ಚಿತ್ತನಾದನನಂತರಮಿಂದ್ರಜಿನ್ಮೇಘವಾಹನ ಕುಂಭಕರ್ಣ ಮಯ ಮಾರೀಚಾದಿಗಳ್ ತಂತಮ್ಮ ಭವಾಂತರಮನವರ್ ಬೆಸಸೆ ಕೇಳ್ದಲ್ಲಿಯೆ ದೀಕ್ಷೆ ಗೊಂಡರ್ ಮಂಡೋದರಿಯುಂ ನಾಲ್ವತ್ತೆಣ್ಛಾಸಿರ ವಿದ್ಯಾಧರಿಯರ್ವೆರಸು ಶಶಿಕಾಂ ತಾರ್ಯಿಕಾ ಸಮಕ್ಷದೊಳ್ ದೀಕ್ಷೆಗೊಂಡು ಶುಭಧ್ಯಾನ ತಾತ್ಪರ್ಯದಿನಿರ್ದಳಿತ್ತಲ್ ಪುನರ್ನಮಸ್ಕಾರಂಗೆಯ್ದು ಮಗುಳ್ದು ಸುಗ್ರೀವಾಂಗದ ಪ್ರಭಾಮಂಡಲ ಮರುತ್ಸುತ ವಿರಾಧಿತ ಪ್ರಮುಖ ವಿದ್ಯಾಧರ ಪರಿವೃತರ್ ತ್ರಿಜಗದ್ಭೂಷಣ ಗಜಾರೂಢರಾಗಿ—

ಮ॥ ಸ್ರ॥ ಗುಡಿಯುಂ ಸಿಂದಂಗಳುಂ ಮುಂದುರುವರಿಯೆ ದಿನಾಧೀಶ ಬಿಂಬಂಬರಂ ಧಿಂ।
ಕಿಡೆ ಶಂಖ ಧ್ವಾನಮಾಶಾ ವಿವರಮನಿತುಮಂ ತೀವೆ ಭೇರೀರವಂ ಬೆ ॥
ಳ್ಗೊಡೆಯುಂ ಚಿತ್ರಾತಪತ್ರಂಗಳುಮಜನಿಸೆ ಚಂಡಾಂಶುವಂ ಮುಟ್ಟೆವಂದರ್।
ಕಡುಚೆಲ್ವಂ ಪೆತ್ತ ಲಂಕಾಪುರದುಪವನಮಂ ರಾಮ ಲಕ್ಷ್ಮೀಧರರ್ಕಳ್ ॥ ೨ ॥

ಅಂತು ಬಂದು—

ಉ॥ ಜಕ್ಕರ ಕಾಪಿನೊಳ್ ನಡೆಯೆ ಮುಂದೆ ಸುದರ್ಶನ ಚಕ್ರ ರತ್ನಮಿ ।
ರ್ವಕ್ಕದೊಳಂ ವಿಯಚ್ಚರ ಕುಲಪ್ರಭುಗಳ್ ಬರೆ ಭೂಷಣಾಂಶುಗಳ್ ॥
ತೆಕ್ಕನೆ ತೀವುವಂತು ನಭಮಂ ದನುಜಾಧಿಪ ರಾಜಧಾನಿಯಂ ।
ಪೊಕ್ಕರಯೋಧ್ಯೆಯಂ ಪುಗುವವೋಲಸಮಾನ ಬಲರ್ ಬಲಾಚ್ಯುತರ್ ॥ ೩ ॥

ಅಂತು ಪುರಮಂ ಪೊಕ್ಕು ರಾಜವೀಥಿಯೊಳಗನೆ ಸೀತಾದರ್ಶನೋತ್ಸುಕ ನಾಗಿ ಬರ್ಪ ರಾಮಸ್ವಾಮಿಯ ಮನಮನಱಿದು ಚಾಮರಗ್ರಾಹಿಣಿಯರ್ ದೇವ ಸೀತಾದೇವಿಯರಿತ್ತಲೀ ಪುಷ್ಪಪ್ರಕೀರ್ಣಕಮೆಂಬ ನಗದ ನಂದನದೊಳಿರ್ದರೆಂದು ಬಿನ್ನವಿಸುವುದುಮಾದೆಸೆಗೆ ವಿಜಯವಾರಣಮನಣೆದು ನೂಂಕಿ ರಾಘವಂ ಬರ್ಪ

ಸಮಯದೊಳ್ ಸೀತಾದೇವಿಯ ಕೆಲದೊಳಿರ್ದ ಖೇಚರಿಯರ್ ತನ್ನ ಬರವನಱಿಪು
ವನ್ನೆಗಮೆಯ್ದೆವಂದು—

ಕಂ॥ ಬಂಬಲನೆ ಬಾಡಿ ಮಂಜಿಱ
ದಂಬುಜ ಲತೆಯಂತಿರಿರ್ದ ಜಾನಕಿಯಂ ನೀ॥
ಲಾಂಬರನೀಕ್ಷಿಸಿ ವಿಜಯ
ಸ್ತಂಬೇರಮದಿಂ ಸಮುತ್ಸುಕಂ ಧರೆಗಿೞಿದಂ ॥ ೪ ॥

ಅಂತಾನೆಯಿಂದಿೞಿದು ಬರ್ಪ ವಲ್ಲಭ ವಿಲೋಕನ ಜನಿತ ಸಂಭ್ರಮದಿನಾಕಂಪ
ನಮನಪ್ಪುಕೆಯ್ದು—

ಕಂ॥ ಇದಿರ್ವಂದು ಕೈಗಳಂ ಮುಗಿ
ದುದಯಿಸೆ ಪುಲಕಂಗಳುಣ್ಮೆ ಘರ್ಮ ಜಲಂಗಳ್॥
ಪದ ಪದ್ಮಕ್ಕೆಱಗಿರ್ದಳ್
ಕೆದಱಿದ ಕುರುಳೋಳಿ ಮಱಸೆ ಮಱಿದುಂಬಿಗಳಂ ॥ ೫ ॥

ಆ ಸಮಯದೊಳ್—

ಚ॥ ಸತಿಯ ಪತಿವ್ರತಾಗುಣ ಸಮೃದ್ಧಿಗೆ ದರ್ಶನ ಶುದ್ಧಿಗಚ್ಚಱಿಂ।
ಸ್ತುತಿಯಿಸಿ ನಿರ್ಜರರ್ ಕಱೆದು ಪೂಮೞೆಯಂ ವಸನಾಂಗರಾಗದಿಂ॥
ದತಿಶಯ ದಿವ್ಯಭೂಷಣ ಗಣಂಗಳಿನರ್ಚಿಸೆ ನೋಡಿ ನಾಡೆ ವಿ।
ಸ್ಮಿತಮನರಾಗಿ ಜಾನಕಿಗೆ ಕೈಮುಗಿದರ್ ಖಚರಾಧಿನಾಯಕರ್ ॥ ೬ ॥

ಕಂ॥ ಜಾನಕಿಯ ಶೀಲಮಂ ದಿವಿ
ಜಾನೀಕಂ ಮೆಚ್ಚಿ ಪೊಗೞ್ದು ಪೂಜಿಸೆ ರಾಮಂ॥
ಗಾನಂದ ಪುಲಕಮಾದುವು
ಮಾನಿನಿಯರ್ ಮಹಿಮೆಗಿಂತು ನೋಂತರುಮೊಳರೇ ॥ ೭ ॥

ಅನಂತರಂ ಲಕ್ಷ್ಮೀಧರಂ ತನಗೆಱಗಿ ಪೊಡೆವಟ್ಟೊಡಾತನಂ ಪರಸಿ ಮನ್ನಿ
ಮಿತ್ತಂ ಕರಂ ಸೇದೆವಟ್ಟಿರೆಂದು ಮನ್ಯುಮಿಕ್ಕು ಶೋಕಿಸುತ್ತಿರ್ಪುದುಂ ಲಕ್ಷ್ಮಣನುಂ
ರಾಮನುಂ ಸಂತಯಿಸಿದಿಂಬೞಿಯಂ ಪ್ರಭಾಮಂಡಲನಂ ಕಂಡು ಪೊಡೆವಟ್ಟೊಡಾತ
ನತಿ ಪ್ರೀತಿಯಿಂ ಪರಸಿ ಸೀತಾದೇವಿಗೆ ಸುಗ್ರೀವ ನಲ ನೀಲಾಂಗದ ಮರುತ್ಸುತ
ಚಂದ್ರಾಭ ಸುಷೇಣ ಜಾಂಬವಾದಿಗಳಂ ಪೆಸರ್ವೆಸರೊಳೆ ಪೇೞ್ದು ತೋಱಿ ಸಂತೋಷ
ಮಂ ಮಾಡೆ—

ಮ॥ ಸ್ರ॥ ಸತಿಯುಂ ತಾನುಂ ಮದಾಂಧ ದ್ವಿಪಮನೊಡನೆ ಬಂದೇಱೆ ವಿದ್ಯಾಧರಾಧೀ।
ಶ ತನೂಜರ್ ಸುತ್ತಲುಂ ಮಂಡಳಿಸಿ ನಡೆಯೆ ಬೇಱೊಂದು ಪೂರ್ಣೇಂದು ಬಿಂಬಾ ॥
ಕೃತಿಯಿಂ ಶ್ವೇತಾತಪತ್ರಂ ಸೊಗಯಿಸೆ ದೆಸೆಯಂ ತೀವೆ ತೂರ್ಯಪ್ರಣಾಸಂ।
ಜಿತ ಶಕ್ರಾವಾಸಮಂ ರಾವಣನರಮನೆಯಂ ರಾಘವಂ ಬಂದು ಪೊಕ್ಕಂ॥ ೮ ॥

ಕಂ ॥ ತ್ರಿಜಗದ್ಭೂಷಣ ಮಾದ್ಯ
ದ್ಗಜಮಂ ಕಾಲ್ಗೋದು ಪೊಳೆಯಿಸುತ್ತಂಕುಶಮಂ ॥
ವಿಜಿಗೀಷು ಲಕ್ಷ್ಮಣಂ ಮದ
ಗಜದಡಕಿಲಿದೆನಿಸಿ ಪೊಕ್ಕನೊಡನರಮನೆಯಂ ॥ ೯ ॥

ಅಂತರಮನೆಯಂ ಪೊಕ್ಕಲ್ಲಿಯ ಶಾನ್ತಿ ಜಿನ ಭವನಮಂ ರಾಮಲಕ್ಷ್ಮಣರ್ ಸಕಲ ವಿದ್ಯಾಧರ ಸಹಿತಂ ಬಲಗೊಂಡು ಜಿನಪತಿಯಂ ಸ್ತುತಿ ಶತಂಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿದಿಂಬಱಿಕ್ಕೆ ಸಹಸ್ರಾಂತಃಪುರ ಪ್ರಧಾನೆಯಪ್ಪ ವಿದಗ್ಧೆ ವೆಸರ ತನ್ನ ಮಹಾದೇವಿಯಂ ವಿಭೀಷಣಂ ರಾಮಸ್ವಾಮಿಯಲ್ಲಿಗಟ್ಟುವುದುಮಾ ಮಹಾನುಭಾವೆ ಬಂದು ರಾಮಲಕ್ಷ್ಮಣರ್ಗಂ ಸೀತಾದೇವಿಗಮೆಱಗಿ ಪೊಡೆವಟ್ಟೆಮ್ಮರ ಮನೆಗೇೞ್ತನ್ನಿಂ ಕಾಲ್ಗರ್ಚುವೆನೆಂಬವಸರದೊಳ್ ವಿಭೀಷಣನುಂ ಬಂದು ಬಿಜಯಂಗೆಯ್ವಿಮೆಂದು ಸಿಂಹ ಗರುಡವಾಹನಾರೂಢರಂ ಮಹಾವಿಭೂತಿಯಿಂ ನಿಜರಾಜಭವನಕ್ಕುಯ್ದು ಸಿಂಹಾಸನದೊಳಿರಿಸಿ ಮಣಿಭಾಜನದೊಳರ್ಘ್ಯಪಾದ್ಯಮಂ ಕೊಟ್ಟು—

ಕಂ ॥ ಅವರ್ಗೆ ವಿಭೀಷಣನತ್ಯು
ತ್ಸವದಿಂ ಬಿರ್ದಿಕ್ಕಿ ದಿವ್ಯಮಣಿ ಭೂಷಣ ದಿ ॥
ವ್ಯ ವಿಲೇಪನ ದಿವ್ಯಾಂಬರ
ನಿವಹಮನೋಲಗಿಸಿ ವಿನಯಮಂ ಪ್ರಕಟಿಸಿದಂ ॥ ೧೦ ॥

ಅಂತು ನಿರಂತರೋತ್ಸವದಿಂ ಕತಿಪಯ ದಿನಂ ಪೋದಿಂಬಱಿಯಮೊಂದು ಶುಭದಿನ ಮುಹೂರ್ತದೊಳ್—

ಮ ॥ ಬೆಸಕೆಯ್ದಪ್ಪುದು ಚಕ್ರರತ್ನಮಖಿಲೋರ್ವೀಚಕ್ರಮಂ ನೀಮೆ ಪಾ।
ಲಿಸಿಮಾಳೋಳಿಯೊಳಿರ್ಕೆ ರಾಜ ಕುಲಮೆಂದುತ್ಸಾಹ ತೂರ್ಯ ಸ್ವನಂ ॥
ದೆಸೆಯಂ ತೀವೆ ವಿಭೀಷಣಂ ಬೆರಸು ಸುಗ್ರೀವಾದಿಗಳ್ ರಾಘವಂ।
ಗೆ ಸುಮಿತ್ರಾತನಯಂಗೆ ರಾಜ್ಯ ಸವನ ಪ್ರೋತ್ಸಾಹಮಂ। ಮಾಡಿದರ್ ॥ ೧೧ ॥

ಅಂತು ಪೂರ್ವ ಜನ್ಮಸಂಚಿತ ಸುಕೃತದಿಂ ದಿವ್ಯಾಯುಧ ವಸ್ತುವಾಹನಂಗಳುಮಂ ದಿವ್ಯ ಸ್ತ್ರೀಯರುಮಂ ಸ್ವೀಕರಿಸಿ ಮುನ್ನೆ ತಮ್ಮ ಬರ್ಪ ಸಮಯದೊಳ್ ಮದುವೆನಿಂದರಸಿಯರಂ ತರಿಸಿ ಶುಭದಿನ ಮುಹೂರ್ತದೊಳ್—

ಕಂ ॥ ಅನತಿಶಯ ರೂಪ ವಿದ್ಯಾ
ವಿನಯ ಸಮನ್ವಿತೆಯರಂ ಮಹೋತ್ಸವ ಪಟಹ ॥
ಧ್ವನಿ ಪೊಣ್ಮೆ ಚಂದ್ರವರ್ಧನ
ತನುಜೆಯರಂ ಪಡೆದು ಮದುವೆ ನಿಂದನುಪೇಂದ್ರಂ ॥ ೧೨ ॥

ಅಂತು ರಾಮಲಕ್ಷ್ಮಣರ್ ಸುಖದಿನಲ್ಲಿ ಕೆಲವು ಕಾಲಮಿರ್ದರಿತ್ತಲಿಂದ್ರಜಿತು ಮೇಘವಾಹನರ್ ಕೇವಲಜ್ಞಾನಮಂ ಪಡೆದು ನರ್ಮದೆಯ ತಡಿಯೊಳ್ ಮುಕ್ತಿ ಪ್ರಾಪ್ತರಾದರದಱಂ [1](ದಾತೊಱೆ ಮೇಘರವೆಯೆಂಬ ಪೆಸರ ತೀರ್ಥಮಾದುದು ತೂರ್ಣಮತಿಯೆಂಬ ನಗ ನಿತಂಬದೊಳ್ ಜಂಬುಮಾಲಿ ತಪಂಗೆಯ್ದುಹಮಿಂದ್ರಸ್ಥಾನದೊಳ್ ಪುಟ್ಟಿದಂ ಕುಂಭಕರ್ಣಂ ನರ್ಮದೆಯ ತಡಿಯೊಳ್ ಕೇವಲಜ್ಞಾನಪ್ರಾಪ್ತನಾಗಿ ಮೋಕ್ಷಕ್ಕೆ ಸಂದುದರಿಂ) ದಾ ಪೊಟೆಗೆ ಪೀತರವೆಯೆಂಬ ಪೆಸರಾಯ್ತು ಮಾರೀಚನುಂ ಕಲ್ಪ ಗತನಾದಂ ಮಯನುಮಂಬರ ಚಾರಣತ್ವಮುಮಂ ಸರ್ವೌಷಧರ್ಧಿತ್ವಮುಮನವಧಿಜ್ಞಾನಮುಮಂ ಪೆತ್ತು ಮಲರಹಿತನಾಗಿ ನೆಗೞ್ದು ಜೀವಿತಾವಧಿಯೊಳೀಶಾನಕಲ್ಪಕ್ಕೆ ಪೋದಂ[2] (ಮಂಡೋದರೀಗಣಿನಿಯರುಮನೇಕ ಕಾಲಂ ದುರ್ಧರ ಕಾಯಕ್ಲೇಶ ತಪದಿಂ ನೋಂಪಿಗಳಂ ಚರಿಯಿಸಿ ವಿಹಾರಿಸುತ್ತಂ ವೈತರಣೀ ನಗ ನಿತಂಬದ ಶಾರ್ದೂಲಗುಹೆಯೊಳಿರ್ದು ಧರ್ಮಧ್ಯಾನದಿಂ ಮುಡಿಪಿ ಬೞಯುಮೀಶಾನಕಲ್ಪಗತೆಯಾದಳುೞದರಸಿಯರುಗ್ರೋಗ್ರ ತಪಂಗೆಯ್ದು ಶುಭ ಧ್ಯಾನದಿಂ ಮುಡಿಪಿ ತಂತಮ್ಮ ಸ್ಥಾನದೊಳ್ ಪುಟ್ಟಿದರ್) ಮತ್ತಿತ್ತ ಲಂಕೆಯೊಳ್ ರಾಮಲಕ್ಷ್ಮಣರ್ ಚಕ್ರವರ್ತಿಗಳಾಗಿ ಸುಖದಿನಿರ್ಪುದುಮಿತ್ತಲ್—

ಕಂ ॥ ನೆನೆದಪರಾಜಿತೆ ರಘುರಾ
ಮನನತಿಶೋಕ ಪ್ರಬಂಧದಿಂದಿರ್ಪುದುಮಾ ॥
ವನಿತೆಯರ ಮನೆಗೆ ಬಂದಂ
ಘನಪಥದಿಂ ಭೋಂಕನಿೞದು ನಾರದ ಮುನಿಪಂ ॥ ೧೩ ॥

ಅಂತು ಬರ್ಪುದನಪರಾಜಿತಾಮಹಾದೇವಿ ಕಂಡಿದಿರೆೞ್ದೀಜಲಿಕ್ಕಿ ಬೞಯ ಮಿಚ್ಛಾಕಾರಂ ಗೆಯ್ವುದುಂ—

ಕಂ ॥ ನಿಮಗಿನಿತು ಶೋಕಮೇಕಾ
ಯ್ತೆಮಗನಿತುಮನಱಯೆ ಪೇೞಮೆನೆ ನಾರದ ದಿ ॥
ವ್ಯಮುನೀಶ್ವರನನಿತುಮನಾ
ಕಮಲಾನನೆ ನೆಱಯೆ ತೆಱಯೆ ಬಿನ್ನವಿಸುವುದುಂ ॥ ೧೪ ॥

---

1, 2. ಈ ಭಾಗಗಳು. ಕ. ಖ. ಚ. ಪ್ರತಿಗಳಲ್ಲಿಲ್ಲ.

ಅದಂ ನಾರದನವಧಾರಿಸಿ ರಾಮಲಕ್ಷ್ಮಣರ ಕ್ಷೇಮವಾರ್ತೆಯಂ ನಿಮಗಿಂದೆ ತಂದಪೆನೆಂದಪರಾಜಿತಾಮಹಾದೇವಿಯ ಮನೋವಿಷಾದಮಂ ಕಳೆದು—

ಕಂ ॥ ನೀರದ ಪಥಕ್ಕೆ ಛೋಂಕನೆ
ನಾರದನೊಗೆದೆಯ್ದಿ ಲಂಕೆಯಂ ತನು ರುಚಿ ನೀ ॥
ಹಾರಮನಾದರ್ಶಿಸೆ ಬಲ
ನಾರಾಯಣ ದೇವರಿರ್ದ ಸಭೆಯಂ ಪೊಕ್ಕಂ ॥ ೧೫ ॥

ಅಂತು ಪುಗುವುದುಂ ರಾಮಸ್ವಾಮಿ ನಾರದನಪ್ಪುದನಱಿದು ಬೇಗಮಿದಿರೆೞ್ದು ಮಣಿಮಯಾಸನದೊಳಿರಿಸಿ ಕನಕ ಪಾತ್ರದೊಳರ್ಘ್ಯಮಂ ಕೊಟ್ಟು ನೀವೀ ರಣ ನಿರೀಕ್ಷಣಂ ಮಾಡದೆತ್ತಲಿರ್ದಿರೆಲ್ಲಿಂ ಬಂದಿರೆಂಬುದುಂ ನಾರದನಿಂತೆಂದನಾವಿಾ ದೇಶದಿಂ ಪೋಗಿ ಧಾತಕೀಷಂಡದ ಪೂರ್ವವಿದೇಹದ ಸುರೇಂದ್ರರಮಣ ಪುರದೊಳ್ ತೀರ್ಥಕರರ್ ಜನಿಯಿಸಿದೊಡವರ್ಗೆ ಜನ್ಮಾಭಿಷೇಕಮಂ ಸಕಲ ಸುರವರರ್ ಸುರ ಗಿರಿ ಮಸ್ತಕದೊಳ್ ಮಾೞ್ಪುದಂ ನೋಡುತ್ತುಮಿರ್ದೀಗಳಯೋಧ್ಯೆಯಂ ಪೊಕ್ಕು ಅಪರಾಜಿತಾ ಮಹಾದೇವಿಯರುಮಂ ಸುಮಿತ್ರಾದೇವಿಯರುಮಂ ಕಂಡೆವವರ್ ನಿಮ್ಮನೀ ಸಮಯದೊಳ್ ಕಾಣದಿರ್ದೊಡೆ ನಿಶ್ಚಯಂ ಶರೀರತ್ಯಾಗಂಗೆಯ್ವರೆಂದಱಿಪುವುದುಂ—

ಕಂ ॥ ಆ ಮಾತು ಮುಟ್ಟೆ ಕಿವಿಯಂ
ರಾಮಂಗಂ ಲಕ್ಷ್ಮಣಂಗಮುದ್ವೇಗಂ ನಿ ॥
ಸ್ಸೀಮಂ ಸಮನಿಸೆ ತಮ್ಮಂ
ತಾಮೆ ಕೃಪಾಶೂನ್ಯರೆಂದು ನಿಂದಿಸಿ ಕೊಂಡರ್ ॥ ೧೬ ॥

ಅಂತು ನಿಜ ಜನನಿಯರನಗಲ್ದು ಬಹುಕಾಲಮತಿಕ್ರಾಂತಮಾದುದೆಂದು ಕಟ್ಟುಕಡೆದು—

ಕಂ ॥ ನಮ್ಮಿಲ್ಲ ವಿಭವಮಂ ಸುಖ
ಮಮ್ಮನದೊಳ್ ಬಗೆದು ಬಗೆದೆವಿಲ್ಲುೞಿದುದನೆಂ ॥
ದುಮ್ಮಳಿಸಿ ವಿಭೀಷಣನಂ
ತಮ್ಮಲ್ಲಿಗೆ ಬರಿಸಿ ರಾಮಲಕ್ಷ್ಮಣರೆಂದರ್ ॥ ೧೭ ॥

ಅವಧಿಯ ವರ್ಷಂಗಳ್ ತೀ
ರ್ದುವಯೋಧ್ಯೆಗೆ ಪೋಗದಂದು ಜನನಿಯರುಂ ಬಾಂ ॥
ಧವರುಂ ಖೇದಿಸುವರ್ ಪೋ
ಗವೇೞ್ಪುದೆಂದಱಿಪಿ ತಮ್ಮ ಗಮನೋದ್ಯಮಮಂ ॥ ೧೮ ॥

ಕಂ ॥ ಪವಣಿಲ್ಲದ ಲಂಕೆಯ ಜಿನ
ಭವನಂಗಳೊಳೆಲ್ಲಮರ್ಚನಾ ದ್ರವ್ಯಕ್ಕಂ ॥
ಪವಣಿಲ್ಲೆನೆ ರಾಮಂ ಜಿನ
ಸವನೋತ್ಸವದೊಳ್ ಸುರೇಂದ್ರನಂ ಗೆಲೆವಂದಂ ॥ ೧೯ ॥

ಮಂಗಳ ಪರಿಕರಮಂ ಖಚ
ರಾಂಗನೆಯರ್ ಪಿಡಿದು ಮುಂದೆ ಬರೆ ಮಂಗಳ ವೃ ॥
ತ್ತಂಗಳನೋದುತ್ತುಂ ಬರೆ
ಮಂಗಳ ಪಾಠಕ ನಿಕಾಯಮೆರಡುಂ ಕೆಲದೊಳ್ ॥ ೨೦ ॥

ನಾನಾನಕ ರುತಿ ಸಕಲ ದಿ
ಶಾನನಮಂ ತೀವೆ ರಾಜ ಚಿಹ್ನ ವ್ರಜಮುಂ ॥
ತ್ತಾನಿತಮೆಸೆದಿರೆ ದಿವ್ಯ ವಿ
ಮಾನಮನುತ್ಸವದಿನೇಱಿದಂ ಪುಷ್ಪಕಮಂ ॥ ೨೧ ॥

ಬಲದೊಳ್ ಲಕ್ಷ್ಮೀಧರನೆಡ
ಗೆಲದೊಳ್ ಜಾನಕಿ ಬೆಡಂಗುವೆತ್ತೆಸೆದಿರೆ ಸು ॥
ತ್ತಲುಮಿರೆ ಖಚರ ವಿಮಾನಾ
ವಲಿ ರಾಮಂ ಮಣಿ ವಿಮಾನದೊಳ್ ಕಣ್ಗೆಸೆದಂ ॥ ೨೨ ॥

ಅಂತು ರಾಮಲಕ್ಷ್ಮಣರ್ ಸಾಧಿತ ದಕ್ಷಿಣದಿಗ್ವಿಜಯರ್ ಪ್ರಯಾಣ ಭೇರಿಯಂ ಪೊಯಿಸಿ—

ಕಂ ॥ ಜಂಗಮ ಸರೋವರಂಗಳ
ಭಂಗಿಯನದಟಲೆವ ಖಚರ ಪರಿವೃಢರ ವಿಮಾ ॥
ನಂಗಳ್ಗಿಡೆ ನೆಱೆಯದು ಗಗ
ನಾಂಗಣಮೆಂಬಂತಯೋಧ್ಯೆಗಭಿಮುಖರಾದರ್ ॥ ೨೩ ॥

ಅಂತು ತಳರ್ದು ಜಲಧಿಯಂ ದಾಂಟಿ ದಂಡಕಾರಣ್ಯಮನೆಯ್ದೆ ವಂದು—

ಕಂ ॥ ಚಾರಣಮುನಿ ಯುಗಲಕ್ಕಾ
ಹಾರಮನಿತ್ತೆಡೆಯನಲ್ಲಿ ತಮ್ಮಿರ್ದ ಲತಾ ॥
ಗಾರದ ಪುೞಿಲೆಡೆಯಂ ಸೀ
ತಾ ರಮಣಿಗೆ ಸುಟ್ಟಿ ತೋಱಿದಂ ರಘುವೀರಂ ॥ ೨೪ ॥

ಕಂ ॥ ಜಲಜಾಕ್ಷಿಗೆ ಸೀತೆಗೆ ರಘು
ಕುಲ ತಿಲಕಂ ಸುಟ್ಟಿ ತೋಱಿದಂ ಮುನ್ನಂ ಕೇ ॥
ವಲ ಲಬ್ಧಿ ದೇಶಭೂಷಣ
ಕುಲಭೂಷಣ ಸಾಧುಗಳ್ಗೆ ಸಮನಿಸಿದೆಡೆಯಂ ॥ ೨೫ ॥

ಅಂತು ಪವನ ಪಥದೊಳ್ ಮನಃಪವನ ವೇಗದಿಂ ಬರ್ಪ ಸಮಯದೊಳ್—

ಕಂ ॥ ಕನಕ ಪ್ರಾಕಾರದೊಳಂ
ವನ ಮಾಲೆಯೊಳಂ ಮನಕ್ಕೆ ವಂದೀ ಪುರಮಾ ॥
ವನದೆಂದು ರಘೂದ್ವಹನಂ
ಜನಕಜೆ ಬೆಸಗೊಂಡಳಂದಯೋಧ್ಯಾಪುರಮಂ ॥ ೨೬ ॥

ಅಂತು ಬೆಸಗೊಳ್ವದುಂ ಶ್ರೀರಾಮದೇವರಿದೆಮ್ಮಯೋಧ್ಯಾಪುರಮೆಂದುಪೇ ೞುತ್ತುಂ ಪುರ ಬಹಿಃಪುರಮನೆಯ್ದೆ ಬರ್ಪ ಸಮಯದೊಳ್ ನಾನಾವಿಧ ವಿಮಾನಂ ಗಳನೇಱಿ ಬರ್ಪ ವಿದ್ಯಾಧರ ಪರಿವೃಢರಿಂ ಪರಿವೃತನಾಗಿ ಪುಷ್ಪಕ ವಿಮಾನಮನೇಱಿ ಬರ್ಪ ರಾಮಸ್ವಾಮಿಯ ಬರವನಱಿದು ಮಹಾವಿಭೂತಿಯಿಂ ಪ್ರಮೋದ ಮುದಿತ ಹೃದಯರಾಗಿ—

ಕಂ ॥ ಇಭಮಂ ನೀಲಾಚಲ ಸ
ನ್ನಿಭಮಂ ಶತ್ರುಘ್ನ ಸಹಿತಮೇಱಿ ವಿಭೂಷಾ ॥
ಪ್ರಭೆ ನಭಮನಡರೆ ಭರತಂ
ಶುಭ ರತನಿದಿಗೊಳಲಯೋಧ್ಯೆಯಂ ಪೊಱಮಟ್ಟಂ ॥ ೨೭ ॥

ಅಂತು ಮಹಾವಿಭೂತಿಯಿಂ ಬರ್ಪ ಭರತ ಶತ್ರುಘ್ನರಂ ರಾಮಸ್ವಾಮಿ ಗೆಂಟ ಱೊಳೆ ಕಂಡು ಪುಷ್ಪಕ ವಿಮಾನದಿನವನಿಗವತರಿಸೆ ಭರತ ಶತ್ರುಘ್ನರುಮಾನೆಯಿಂ ದಿೞಿದು ಬಂದು ಪಾದ ಪ್ರಾಂತದೊಳ್ ಸರ್ವಾಂಗ ಪ್ರಣತರಾಗಿರ್ಪುದುಂ ರಾಮ ಸ್ವಾಮಿ ತೆಗೆದಪ್ಪಿಕೊಂಡು ಪರಸಿದಿಂಬೞಿಕ್ಕೆ ಸೀತಾದೇವಿಗಂ ಲಕ್ಷ್ಮೀಧರಂಗಮನು ಕ್ರಮದಿಂ ಪೊಡೆವಟ್ಟು ಪರಕೆಯಂ ಕೈಕೊಂಡೋರೊರ್ವರ ಕುಶಲ ವಾರ್ತೆಯಂ ಬೆಸಗೊಂಡು ಸಂತುಷ್ಟ ಚಿತ್ತರಾದನಂತರಂ ಸುಗ್ರೀವ ಪ್ರಭಾಮಂಡಲ ಮರುತ್ಸುತಾದಿ ಗಳಿಂ ಪರಿವೃತರಾಗಿ—

ಮ ॥ ಮಣಿಘಂಟಾ ಮಣಿಕಿಂಕಿಣೀ ಮಣಿವಿತಾನ ಭ್ರಾಜಿಯಂ ನೇತ್ರ ಭೂ ।
ಷಣಮಂ ಲೀಲೆಯಿನೇಱಿ ಪುಷ್ಪಕಮನುದ್ಯತ್ಕೇತನಾನೀಕ ತೋ ॥

ರಣ ಮಾಂಗಲ್ಯ ಸಮೃದ್ಧಮಂ ಭರತ ಶತ್ರುಘ್ನರ್ಕಳುಂ ರಾಮಲ ।
ಕ್ಷ್ಮಣರುಂ ಪೊಕ್ಕರಯೋಧ್ಯೆಯಂ ಪುದಿವಿನಂ ಗಂಭೀರ ಬಂಭಾರವಂ ॥೨೮॥

ಅಂತು ಪುರಮಂ ಪೊಕ್ಕಪರಾಜಿತಾಮಹಾದೇವಿಯುಮಂ ಸುಮಿತ್ರಾಮಹಾ
ದೇವಿಯುಮಂ ಕೈಕಾಮಹಾದೇವಿಯುಮಂ ಸುಪ್ರಭಾಮಹಾದೇವಿಯುಮಂ ರಾಮ
ಲಕ್ಷ್ಮಣರ್ ಕಂಡೆಱಗಿ ಪೊಡೆವಟ್ಟವರವರಾಶೀರ್ವಾದ ಪಾರಿಜಾತ ಕರ್ಣಪೂರದಿನಲಂ
ಕರಿಸಿದಿಂಬೞಿಕ್ಕೆ ಸೀತೆ ಪೊಡೆವಡೆ ಪರಸಿ ತೞ್ಕೈಸಿಕೊಂಡೋರೊರ್ವರ ಕ್ಷೇಮ
ಕುಶಲವಾರ್ತೆಯಂ ನುಡಿದಿಷ್ಟ ಸಂಯೋಗದಿಂ ಮನೋರಾಗಮನಪ್ಪುಕೆಯ್ದಿರ್ಪಿನಂ—

ಕಂ॥ ಬಲ ನಾರಾಯಣರುಂ ಭೂ
ತಲಮಂ ಭರತ ತ್ರಿಖಂಡಮಂ ನಿಜ ಬಾಹಾ ॥
ಬಲದಿಂ ರಕ್ಷಿಸಿ ನಿಜ ನಿ
ರ್ಮಲ ಯಶದಿಂ ಭುವನ ಭವನಮಂ ಧವಲಿಸಿದರ್ ॥ ೨೯ ॥

ಅಂತವರ್ ಸುಖದಿನೋಲಗಂಗೊಟ್ಟಿರ್ದೊಂದು ಶುಭದಿನ ಮುಹೂರ್ತದೊಳ್
ರಾಮಸ್ವಾಮಿ ರಾಕ್ಷಸ ದ್ವೀಪ ಸಹಿತಮಂ ಲಂಕೆಯಂ ವಿಭೀಷಣಂಗೆ ದೇವಾನೀಕ
ಪುರಮಂ ರತ್ನಜಟಿಗೆ ಕಿಷ್ಕಿಂಧನಗರಮಂ ಸುಗ್ರೀವಂಗೆ ಶ್ರೀಪರ್ವತನಗರಮಂ
ಹನುಮಂಗೆ ಪಾತಾಳಲಂಕೆಯಂ ವಿರಾಧಿತಂಗೆ ರಥನೂಪುರಚಕ್ರವಾಲಪುರಮಂ
ಪ್ರಭಾಮಂಡಲಂಗೆ ರಾಜ್ಯಾಭಿಷೇಕಂಗೆಯ್ದು ಕೊಟ್ಟು ಮತ್ತಂ ಪೆಱರುಪಕಾರಂಗೆಯ್ದ
ವರ್ಗಂ ಪ್ರಾರ್ಥಿಸೆ ಬಂದ ವಿದ್ಯಾಧರರ್ಗಂ ನಾಡಂ ಬೀಡುಮಂ ಕೊಟ್ಟು ಲಕ್ಷ್ಮಣನಂ
ತ್ರಿಖಂಡ ಮಂಡಲಕ್ಕಧಿರಾಜನಂ ಮಾಡಿ ಭರತನನಯೋಧ್ಯೆಯಂ ಮುನ್ನಿನಂದದಿಂ
ದಾಳ್ವುದೆಂದು ಬೆಸಸೆ—

ಮ॥ಸ್ರ॥ ಭರತಂ ನಿಮ್ಮಾಜ್ಞೆಯಂ ಮೀಱದೆ ವಸುಮತಿಯಂ ಕಾದುಕೊಂಡಿರ್ದೆ
ನಿನ್ನಾ ।
ನರಸಂ ಕೈಕೊಳ್ವನಲ್ಲೆಂ ವಿಷಯ ಸುಖಮನಾನೊಲ್ಲೆನಾಂ ಮೋಕ್ಷ ಲಕ್ಷ್ಮೀ ॥
ಪರಿರಂಭೋತ್ಕಂಠನೆಂ ಸಂಸೃತಿಯ ದೆಸೆಗೆ ಬೆಚ್ಚುತ್ತಿನೆಂದಂದು ವೈರಾ ।
ಗ್ಯ ರತಂ ರಾಮಂಗೆ ಕೈಯಂ ಮುಗಿದೆಱಗಿದನನ್ನಂ ಮಹಾಸತ್ವನಾವಂ ॥೩೦॥

ಅಂತು ತಪಕ್ಕೆ ತಱಿಸಂದು ನುಡಿಯೆ ಶ್ರೀರಾಮದೇವರ್ ಮುನ್ನೆಮಗೆ
ಭೂಚರರೆ ಬೆಸಕೆಯ್ದರೀಗಳ್ ಖೇಚರರುಂ ಬೆಸಕೆಯ್ವರಿಂ ಕೆಲವು ಕಾಲಂ ರಾಜ್ಯ
ಸುಖಮನನುಭವಿಸಿ ನಾಮೆಲ್ಲಮೊಡನೆ ತಪಂಬಡುವಮೆನೆ ನಿಮ್ಮಡಿ ನೀಮೆನಗೆ
ಕಾರುಣ್ಯಂಗೆಯ್ವೊಡೆನ್ನಂ ಪೋಗಲೀವುದೆನಗಿಂ ತಪಮೆ ಕಾರ್ಯಂ ನೀಮಿದಂ ಮಾರ್ಕೊಳ್ಳ
ದಿರಿಮೆಂದು ಮಱುಮಾತಿಂಗೆಡೆಯಿಲ್ಲದಂತತಿ ಪ್ರತಿಜ್ಞೆಗೆಯ್ದು ಬಿನ್ನವಿಸಿ ರಾಜಭವನ

ವಮಂ ಪೊಱಮಟ್ಟು ಪೋಗೆ ಸಂಭ್ರಮದಿಂ ಲಕ್ಷ್ಮೀಧರನುಂ ಕೈಕಾಮಹಾದೇವಿಯುಂ ವೈದೇಹಿಯುಂ ವಿಶಲ್ಯಾಸುಂದರಿಯುಂ ಪಲರುಮಂತಃಪುರ ಪುರಂಧ್ರಿಯರುಂ ಬೞಿಯನೆ ಪೋಗಿ ತಪೋವಿಘ್ನ ಹೇತುಗಳಪ್ಪ ಮಾತುಗಳಂ ನುಡಿಯುತ್ತಿರ್ಪಿನಮತ್ತಲಯ್ಪನೆಯ ಕ್ರೋಧಿನಿಯೆಂಬ ಮದದೊಳತಿವರ್ತಿಯಾಗಿ--

ಮ ॥ ತ್ರಿಜಗದ್ಭೂಷಣ ವಾರಣಂ ಮುೞಿಯೆ ಪಾಯ್ದಾಲಾನಮಂ ತ್ವಗ್ಗ ಲೋ ।
ಹಜ ಬಂಧಂಗಳನೆಲ್ಲಮಂ ಪಱಿವಿನಂ ಪೊಯ್ದೆತ್ತಿ ಮೊತ್ತಕ್ಕೆ ಕಾ ॥
ಯ್ದು ಜವಂ ಕೊಲ್ವವೊಲೆಯ್ದೆ ಬಂದು ಜವದಿಂ ಗಂಧಾಂಧನಾ ಭೀಮ ಸಾ ।
ಮಜಮುಂ ವಿಸ್ಮಯಮಪ್ಪಿನಂ ಭರತನಂ ಕಂಡಾಯ್ತು ಜಾತಿ ಸ್ಮರಂ ॥ ೩೧ ॥

ಅಂತು ಜಾತಿಸ್ಮರನಾಗಿ ಮದೋದ್ರೇಕಮಂ ಬಿಟ್ಟು ಕೈಯನೆೞಲೆವಿಟ್ಟು ಪೊಡೆವಟ್ಟಿರ್ಪುದುಂ ಭರತನಾ ಗಜಮಂ ವೈದೇಹಿಯುಂ ವಿಶಲ್ಯಾಸೌಂದರಿಯುಂ ಬೆರಸೇಱಿ ಮಹಾವಿಭವದಿಂ ರಾಜಭವನಮಂ ಪೊಕ್ಕು ಆನೆಯಿಂದಿೞಿದೆಲ್ಲರುಮೊಡನಾರೋಗಿಸಿ ಸುಖದಿನೊಡ್ಡೋಲಗಂಗೊಟ್ಟರೆ—

ಕಂ ॥ ನಿರುಜಂ ತ್ರಿಜಗದ್ಭೂಷಣ
ಕರಿ ಕವಳಂಗೊಳ್ಳದೆಂದು ಸಾಹಣದ ಮಹ ॥
ತ್ತರರಱಿಪೆ ರಾಮಲಕ್ಷ್ಮೀ
ಧರರ್ಕಳಾ ನುಡಿಗೆ ನಾಡೆ [1]ವಿಸ್ಮಿತರಾದರ್ ॥ ೩೨ ॥

ಆ ಸಮಯದೊಳ್ ಋಷಿ ನಿವೇದಕನತಿತ್ವರಿತ ಗತಿಯಿಂ ಬಂದು ಸರ್ವಾಂಗ ಪ್ರಣತನಾಗಿ ದೇವ ಮಹೇಂದ್ರೋದ್ಯಾನ ವನಕ್ಕೆ ದೇಶಭೂಷಣ ಭಟ್ಟಾರಕರ್ ಬಿಜಯಂಗೆಯ್ದರೆಂದು ಬಿನ್ನವಿಸೆ ಸಿಂಹಾಸನದಿನೆೞ್ದಾ ದೆಸೆಗೆ ಕೈಗಳಂ ಮುಗಿದು—

ಕಂ ॥ ಅವನೀವಲ್ಲಭರಾರ್ ಧ
ರ್ಮವತ್ಸಲರ್ ತನ್ನ ತೆಱದಿನೆಂಬನ್ನಂ ರಾ ॥
ಘವ ದೇವನಲ್ಕೆಱಿಂ ಋಷಿ
ನಿವೇದಕಂಗಮರ ಧೇನುವೀವಂತಿತ್ತಂ ॥ ೩೩ ॥

ಅಂತು ಮೆಚ್ಚಿತ್ತು ರಾಮಲಕ್ಷ್ಮಣರುಂ ಭರತ ಶತ್ರುಘ್ನರುಂ ತ್ರಿಜಗದ್ಭೂಷಣ ಗಜಾರೂಢರಾಗಿ ಅಪರಾಜಿತಾಮಹಾದೇವಿ ಮೊದಲಾಗೆ ನಾಲ್ವರ್ ಜನನಿಯರುಂ ಜಾನಕಿ ಮೊದಲಾಗೆ ಸಮಸ್ತಾಂತಃಪುರಮುಂ ಸುಗ್ರೀವಂ ಮೊದಲಾಗೆ ಸಕಲ ವಿದ್ಯಾಧರ ವಲ್ಲಭರುಂ ವಂದನಾಭಕ್ತಿಯಿಂದೊಡನೆ ಬರೆ ಬಂದು ವಾಹನದಿಂದಿೞಿದು

---

1. ವಿಸ್ಮಯಮುತ್ತರ್. ಗ.

ಗೆಂಟೞಿಯೊಳೆ ರಾಜಚಿಹ್ನಂಗಳನಿರಿಸಿ ಭಟ್ಟಾರಕರಂ ಮೂರು ಸೂೞ್ ಬಲಗೊಂಡು ದಿವ್ಯಾರ್ಚನಂಗಳಿಂದರ್ಚಿಸಿ ಸರ್ವಾಂಗ ಪ್ರಣತರಾಗಿ ನಿಜ ನಿಯತ ಸ್ಥಾನದೊಳ್ ಕುಳ್ಳಿರ್ದು ಧರ್ಮ ಶ್ರವಣಾನಂತರಂ ನಾರಾಯಣನೆಂದನೀ ತ್ರಿಜಗದ್ಭೂಷಣ ದ್ವಿರದಂ ಚತುರ್ದಿನಮೇಕಾರಣಂ ಕವಳಂಗೊಳ್ಳದೆಂಬುದಂ ಬೆಸಸಿಮೆನೆ—

ಕಂ॥ ಅಪವರ್ಗ ಶ್ರೀಯ ಕಟಾ
ಕ್ಷ ಪಾತವೆಂಬಂತು ದಂತರುಚಿ ನಿಮಿರ್ವಿನಮಿಾ ॥
ದ್ವಿಪಮನ್ಯಜನ್ಮಮಂ ತಿಳಿ
ದುಪಶಮಮಂ ತಳೆದು ಕವಳಮಂ ಕೊಳ್ಳದೆನಲ್ ॥ ೩೪ ॥

ಮುಗಿದ ಕರ ಕಿಸಲಯಂಗಳ್
ಸೊಗಯಿಸೆ ಮತ್ತಂ ಮುನೀಂದ್ರ ವೃಂದಾರಕರಂ ॥
ಜಗದಧಿಪಂ ಗಜದ ಭವಾ
ಳಿಗಳಂ ವಿನಮಿತ ಶಿರೋಧರಂ ಬೆಸಗೊಂಡಂ ॥ ೩೫ ॥

ಅಂತು ಬೆಸಗೊಳ್ವುದುಂ ದೇಶಭೂಷಣ ಕೇವಲಿಗಳಿಂತೆಂದು ಬೆಸಸಿದರೀ ವಿನೀತಾನಗರದೊಳ್ ಸುಪ್ರಭಂಗಮಾತನರಸಿ ಪ್ರಹ್ಲಾದಿನಿಗಂ ಸೂರ್ಯೋದಯನುಂ ಚಂದ್ರೋದಯನುಮೆಂಬ ತನೂಜರಾಗಿ ವೃಷಭ ಸ್ವಾಮಿಗಳೊಡನೆ ಪೋಗಿ ತಪಸ್ಥರಾಗಿ ಸೈರಿಸಲಾಱದೆ ಪರೀಷಹ ಭಗ್ನ ಮನರಾಗಿ ಮರೀಚಿಯೊಡನೆ ಕೂಡಿ—

ಕಂ॥ ತಾಪಸರಾಗಿ ಕುಧರ್ಮ
ವ್ಯಾಪಾರದೊಳೆಸಗಿ ಘೋರ ಸಂಸಾರ ಮಹಾ ॥
ಕೂಪದೊಳಗೞ್ದು ಪಿರಿದ
ಪ್ಪಾಪತ್ತಂ ಪೆತ್ತನೇಕ ಭವಮಂ ಬಂದರ್ ॥ ೩೬ ॥

ಅಂತು ಬಾರದ ಭವಮಂ ಬಂದೆಂತಾನುಂ ಕುರುಜಾಂಗಣ ವಿಷಯದ ಗಜಪುರಮನಾಳ್ವ ಹರಿಪತಿಗಮಾತನರಸಿ ಚಂದ್ರಾನನೆಗಂ ಮುಂ ಪೇೞ್ದ ಚಂದ್ರೋದಯಂ ಕುಲಂಕರನೆಂಬ ಮಗನಾಗಿ ರಾಜ್ಯದೊಳ್ ನಿಂದನಾ ಪುರದೊಳ್ ಸೂರ್ಯೋದಯನುಂ ವಿಶ್ವಾವಸುವೆಂಬ ಪಾರ್ವಂಗೆ ಮೂಢಶ್ರುತಿಯೆಂಬ ಪುತ್ರನಾಗಿ ಕುಲಂಕರನೆಂಬ ನೃಪತಿಗೆ ಪುರೋಹಿತನಾಗೆ ಕುಲಂಕರನುಂ ಹಿಂಸಾಹೇತುಗಳಪ್ಪ ಜನಂಗಳ ನಿರಿಸಿ ತಾಪಸ ರೂಪ ಧಾರಿಗಳೆ ಗುರುಗಳೆಂಬ ನಂಬುಗೆಯಂ ಮಾಡಿ ನಡೆಯಿಸುತ್ತಿರ್ಪಿನಂ ಕುಲಂಕರನರಸಿ ದುಶ್ಶೀಲೆ ಶ್ರೀಮತಿಯೆಂಬ ಪಾಣ್ಬೆ ಮೆಚ್ಚಿದರೊಡನೆ ಮೆಚ್ಚಿದಂತೆ ವಿಷಯ ಸುಖಮನನುಭವಿಸಲೆಂದು—

ಕಂ ॥ ಜಾತಿಯ ನೀತಿಯ ಸೈಪಿನ
ಮಾತಡಿಗಿಡೆ ಪತಿಯುಮಂ ಪುರೋಹಿತನುಮನಾ ॥
ಪಾತಕಿ ವಿಷದಿಂ ಕೊಂದಳ್
ಕೌತುಕಮೆ ವಿವೇಕ ವಿಕಲರೇನಂ ಮಾಡರ್ ॥ ೩೭ ॥

ಅಂತು ಸತ್ತು ಕುಲಂಕರನುಂ ಮೂಢಶ್ರುತಿಯುಮನುಕ್ರಮದಿಂ ಮೊಲನುಂ ಮುಂಗುರಿಯುಮಾಗಿ ಪುಟ್ಟಿ ಸತ್ತು ಬೞಿಯಂ ಮೂಢಶ್ರುತಿ ಶುಂಡಾಲನಾಗಿ ಕುಲಂಕರಂ ದರ್ದುರನಾಗಿ ಪುಟ್ಟಿ ತನ್ನನಾ ಶುಂಡಾಲಂ ಮೆಟ್ಟೆ ಸತ್ತೆಸಡಿಯಾಗಿ ಪುಟ್ಟಿ ಆ ಶುಂಡಾಲಂ ಸತ್ತು ಕಾಗೆಯಾಗಿ ತನ್ನಂ ತಿನೆ ಸತ್ತೆಸಡಿ ಕುಕ್ಕುಟನಾಯ್ತಾ ಕಾಗೆ ಸತ್ತು ಬಿಡಾಲನಾದುದಾ ಬಿಡಾಲಂ ಮುನ್ನಿನ ಕುಕ್ಕುಟನಂ ತಿಂದುದೀ ತೆಱದಿಂ ಕುಲಂಕರಂ ಮೂಱು ಸೂೞ್ ಕುಕ್ಕುಟನಾಗಿ ಪುಟ್ಟಿ ಮೂಢಶ್ರುತಿಯುಂ ಬಿಡಾಲನಾಗಿ ಮೂಱುಸೂೞ್ ಪುಟ್ಟಿ ತಿನೆ ಸತ್ತು ಕುಲಂಕರಂ ಮೀನಾದಂ ಮೂಢಶ್ರುತಿ ಸತ್ತು ಮೊಸಳೆಯಾದಂ—

ಕಂ ॥ ಆರೆತ್ತ ಜೀವರ್ ಕರ್ಮ
ಪ್ರೇರಣೆಯಿಂ ಪಗೆಯೆ ಕೆಳೆಯನಕ್ಕುಂ ಕೆಳೆಯುಂ ॥
ಕ್ರೂರ ರಿಪುವೆನಿಸಿ ಬರ್ಕುಂ
ಬಾರದ ಭವಮುಂ ವಿಚಿತ್ರಮೀ ಸಂಸಾರಂ ॥ ೩೮ ॥

ಅಂತು ಮೊಸಳೆಯಾದ ಮೂಢಶ್ರುತಿಯುಮಂ ಮೀನಾದ ಕುಲಂಕರನುಮಂ ಮೀಂಗುಲಿ ಕೊಲೆ ಸತ್ತು ರಾಜಗೃಹದೊಳ್ ಜಲೂಕೆಯೆಂಬ ಪಾರ್ವಿತಿಗಂ ಬಹ್ವಾಶನೆಂಬ ಪಾರ್ವಂಗಂ ಮೂಢಶ್ರುತಿ ವಿನೋದನೆಂಬ ಮಗನಾದನಾ ಮೀನಾಗಿ ಸತ್ತ ಕುಲಂಕರನುಮವರ್ಗೆ ರಮಣನೆಂಬ ನಂದನನಾಗಿ ಬಳೆದು ದೇಶಾಂತರಕ್ಕೆ ಪೋಗಿ ವೇದವಿದನಾಗಿ ಮಗುೞ್ದು ಬರುತ್ತುಂ ನಿಜಗ್ರಾಮಮಪ್ಪ ರಾಜಗೃಹದ ಪೊಱ ಪೊೞಲನೆಯ್ದೆ ವರ್ಷ ಸಮಯದೊಳ್ ನೇಸರ್ ಪಡುವುದುಮಂಧಕಾರಮತಿ ಪ್ರಬಲಮಾಗೆ ಬರಲಱಿಯದೆ ಯಕ್ಷಗೃಹದೊಳ್ ವಸಿಯಿಸಿರ್ಪುದುಂ—

ಕಂ ॥ ಆ ರಮಣನಗ್ರಜಾತ ಮ
ನೋರಮೆ ಸಮಿತಾಭಿಧಾನೆ ಪಾಣ್ಬನ ಬರವಂ ॥
ಪಾರುತ್ತಡಂಗಿ ಯಕ್ಷಾ
ಗಾರಮನವಳಂಧಕಾರಮಂ ಪೊಕ್ಕಿರ್ದಳ್ ॥ ೩೯ ॥

ಅಂತಿರ್ಪುದುಮಾಕೆಯಲ್ಲಿಗೆ ಬರುತ್ತಿರ್ದಶೋಕದತ್ತನೆಂಬ ಪಾಣ್ಬನಂ ತಳಾಱರ್ ಪಿಡಿದು ಕೊಲ್ವುದುಂ ವಿನೋದಂ ತನ್ನ ಪಾರ್ವಂತಿಯ ದುಶ್ಚರಿತ್ರಮನಱಿವ

ನಪ್ಪುದಱಿನಾಕೆಯ ಬಱಿಯನೆ ಬಂದುಱಿದಿರ್ದು ಯಕ್ಷಾಗಾರದೊಳಿರ್ದಾಕೆ ಯೊಳ್ ನುಡಿಯುತ್ತಿರ್ದ ತನ್ನ ತಮ್ಮನಪ್ಪ ರಮಣನಂ ಪಾಣ್ಬನೆಂದೆ ಬಗೆದು ಕೊಂದಾಕೆಯಂ ಮನೆಗೆ ತಂದಾಳುತ್ತಿರ್ದು ತಾನುಮಾಕೆಯ ಕೈಯೊಳ್ ಸತ್ತು ಸಂಸಾರದೊಳ್ ತೊಳಲ್ದು ಮಹಾಗಹನದೊಳಿರ್ವರುಂ ಮಹಿಷಂಗಳಾಗಿ ಕಾದಿ ಸತ್ತು ಮತ್ತಂ ಕರಡಿಗಳಾಗಿ ಪುಟ್ಟಿ ಬೇಗೆಗಿರ್ಚಳ್ಪಿ ಸತ್ತು—

ಕಂ ॥ ಗಿರಿ ದರಿಗಳ ವನದೊಳ್ ಬೇ
ಡರ ಬಸಿಱೊಳ್ ಬಂದು ಪಾಪಮಂ ಸಾಲ್ವನಿತಂ ॥
ನೆರೆಪಿ ಕಡೆಗಾಲದೊಳ್ ವನ
ಚರರ್ಕಳಿಂದೊಡನೆ ಸತ್ತು ಪುಲ್ಲೆಗಳಾದರ್ ॥ ೪೦ ॥

ಮತ್ಸರಮಂ ಜಿನ ಮತದೊಳ್
ವತ್ಸಲತೆಯನುಂಟುಮಾಡಿ ಕುಮತದೊಳಮವರ್ ॥
ಕುತ್ಸಿತ ಯೋನಿಗಳೊಳ್ ಬೀ
ಭತ್ಸ ಶರೀರಂಗಳಾಗಿ ತಿರಿತರುತಿರ್ದರ್ ॥ ೪೧ ॥

ಅಂತು ಪುಲ್ಲೆಗಳಾಗಿ ಪುಟ್ಟುವುದುಮವಂ ಬೇಡನೊರ್ವಂ ಪಿಡಿದು ನಡಪುತ್ತು ಮಿರ್ದನನ್ನೆಗಮತ್ತ ಸ್ವಯಂಭೂತಿರಥನೆಂಬ ಮಹೀನಾಥಂ ವಿಮಲ ಜಿನನಾಥರಂ ವಂದಿಸಿ ಬರುತ್ತುಮಾ ಪುಲ್ಲೆಗಳಂ ಬೇಡನಿಂ ಬೇಡಿಕೊಂಡು ನಿಜ ರಾಜಭವನ ದೊಳಗಣ ಜಿನಾಲಯದೊಳಿರಿಸಿ ನಡಪುತ್ತುಮಿರ್ಪುದುಮಲ್ಲಿ ರಮಣನಪ್ಪ ಪುಲ್ಲೆ ಋಷಿಯರ ಸಂಯೋಗದಿಂದುಪಶಮ ಚಿತ್ತನಾಗಿ ಸತ್ತು ದೇವಲೋಕಕ್ಕೆ ಪೋಯ್ತು ಮತ್ತಂ ವಿನೋದನಪ್ಪ ಪುಲ್ಲೆ ಸತ್ತು ತಿರ್ಯಗ್ಗತಿಯೊಳ್ ತಿರ್ರನೆ ತಿರಿದೆಂತಾನುಂ ಕರ್ಮೋಪಶಮದಿಂ ಕಾಂಪಿಲ್ಯ ನಗರದೊಳ್ ಧನದತ್ತನೆಂಬ ಪರದನಾಗಿ ಪುಟ್ಟಿ ಮೂವತ್ತೆರಡು ಕೋಟಿ ಧನಕ್ಕಧಿನಾಥನಾಗಿರ್ದನಾ ಧನದತ್ತಂಗಮಾತನ ಕುಲಸ್ತ್ರೀ ವಾರುಣಿಗಂ ರಮಣನಪ್ಪ ದೇವಂ ದಿವದಿಂ ಬಂದು ಭೂಷಣನೆಂಬ ಮಗನಾಗೆ ನೈಮಿತ್ತಿಕರೀತನವಶ್ಯಂ ಜಿನ ಮುನಿಗಳಂ ಕಂಡಾಗಳೆ ತಪಂಬಡುವನೆನೆ ಧನದತ್ತನಾ ಮಾತಂ ಕೇಳ್ದು—

ಕಂ ॥ ತನುಜ ಸ್ನೇಹದಿನವನಂ
ಮುನಿಪತಿಗಳ್ ಕಾಣದಂತು ಮಾಡದ ಮೇಗಂ ॥
ಗನೆವೆರಸು ಸುಖದಿನಿರಿಸಿದ
ನೆನೆ ಚಿತ್ರಮೆ ಸಹಜಮಲ್ತೆ ಪುತ್ರಸ್ನೇಹಂ ॥ ೪೨ ॥

ಅಂತು ಸುಖದಿನಿರ್ದೊಂದು ದಿವಸಂ ಭೂಷಣಂ ಶ್ರೀಧರ ಭಟ್ಟಾರಕರಂ ವಂದಿಸಲೆಂದು ಪೋಪ ದೇವರ್ಕಳನಾಕಾಶದೊಳ್ ಕಂಡು ಜಾತಿಸ್ಮರನಾಗಿ ಭಟ್ಟಾರಕರಂ ಬಂದಿಸಲೆಂದು ಮಾಡದಿಂದಿೞಿದು ಬರುತ್ತುಂ ಸರ್ಪದಷ್ಟನಾಗಿ ಸತ್ತು ಮಹೇಂದ್ರ ಕಲ್ಪಕ್ಕೆ ಪೋಗಿ ಮಗುೞ್ದು ಬಂದು ಪುಷ್ಕರ ದ್ವೀಪದ ಚಂದ್ರಾದಿತ್ಯ ಪುರಮನಾಳ್ವ ಪ್ರಕಾಶಯಶಂಗಮುದಿತೆಗಂ ಜಗದ್ದ್ಯುತಿವೆಸರ ಸುತನಾಗಿ ರಾಜ್ಯಂಗೆಯ್ಯುತ್ತುಂ—

ಕಂ ॥ ಜಿನ ಗದಿತ ಮಾರ್ಗದಿಂ ಜಿನ
ಮುನಿಗನ್ನಮನಿತ್ತು ದೇವ [1]ಕುರು ಭೂತಲ ಸಂ ॥
ಜನಿತಂ ತತ್ಸುಖದೊಳ್ ತ
ಣ್ಣನೆ ತಣಿದೀಶಾನ ಕಲ್ಪದೊಳ್ ಜನಿಯಿಸಿದಂ ॥ ೪೩ ॥

ಕಿಡದ [2]ಪರಮಾತ್ಮಸುಖಮಂ
ಕುಡುವ ಮಹಾಮಹಿಮೆವಡೆದ ಸಾಧು ಪದಂಗಳ್ ॥
ಕಿಡುವ ಸುರಲೋಕ ಸುಖಮಂ
ಕುಡುವುದದೇ ಗಹನಮೆನಿಸಿ ಕಲ್ಪಜನಾದಂ ॥ ೪೪ ॥

ಅಂತೀಶಾನಕಲ್ಪದೊಳನಲ್ಪ ಸುಖಮನನುಭವಿಸಿ ಬಂದು ಜಂಬೂದ್ವೀಪದ ಪರವಿದೇಹದ ನಂದ್ಯಾವರ್ತ ಪುರಮನಾಳ್ವ ಚಲನೆಂಬ ಚಕ್ರವರ್ತಿಗಮಾತನ ಮಹಾದೇವಿ ಬಾಲಹರಿಣಿಗಮಭಿರಾಮನೆಂಬ ಮಗನಾಗಿ—

ಕಂ ॥ ಅಱಿದಾತಂ ಸಂಸಾರದ
ತೆಱನಂ ತೊಱೆಯಲ್ಕೆ ಬಗೆಯೆ ಬಲ್ಲಾಳ್ತನದಿಂ ॥
ತುಱುಗೆವೊಗಣ್ಗೊಳ್ವೆಂಡಿರ್
ಸೆಱೆವಿಡಿದರ್ ಸುತ್ತಿ ಮುತ್ತಿ ಮೂಸಾಸಿರ್ವರ್ ॥ ೪೫ ॥

ಅಂತು ತನ್ನಂ ತಮ್ಮಯ್ಯನಪ್ಪ ಚಕ್ರವರ್ತಿಯ ಬೆಸದಿಂ ಬೞಸಿಕೊಂಡಿರ್ದ ಕನ್ನೆಯರಂ ಪುಲ್ಗೆಣೆಯಾಗೆ ಬಗೆದು—

ಕಂ ॥ ಜಿನ ಧರ್ಮದ ಪೆರ್ಮೆಯೆ ನಿಲೆ
ಮನದೊಳ್ ಬಾಲೆಯರ್ಗೆ ಧರ್ಮಮಂ ಪೇೞುತ್ತುಂ ॥
ಮನೆಯೊಳ್ ಮುನಿಯವೊಲಿರ್ದಂ
ತನಗಳವಡೆ ಋಷಿ ಗುಣಂಗಳೆನಿತೊಳವನಿತುಂ ॥ ೪೬ ॥

1. ಕುಲ. ಗ. 2. ಪವರ್ಗದ. ಗ. ಘ.

ಅಂತು ಸಮ್ಯಕ್ತ್ವ ಶುದ್ಧನಾಗಿ ಸಂನ್ಯಸನಂಗೆಯ್ದು ಪಂಚ ನಮಸ್ಕಾರ ಪರಿಣತಂ ಶರೀರ ಭಾರಮನಿೞಿಪಿ ಬ್ರಹ್ಮೋತ್ತರ ಕಲ್ಪದೊಳ್ ದೇವನಾಗಿ ಪುಟ್ಟು ವುದುಂ—

ಕಂ ॥ ಇತ್ತಲ್ ಮುಂ ಪೇೞ್ದಾ ಧನ
ದತ್ತಂ ಸತ್ತಾ–ಜವಂಜವೀ ಜಲಧಿಯೊಳಾ ॥
ೞುತ್ತೇೞುತ್ತಿರ್ದಂ ದು
ರ್ವೃತ್ತಂಗೆ ದುರಂತ ದುಃಖಮುಪ್ಪುದು ಪಿರಿದೇ ॥ ೪೭ ॥

ಅಂತಾತಂ ಸಂಸಾರದೊಳ್ ತೊೞಲ್ದು ಬಂದು ಪೌದನಪುರದೊಳಗ್ನಿಮುಖನೆಂಬ ಪರದಂಗಮಾತನ ಪರದಿತಿ ಶಕುನಿಗಂ ಮೃದುಮತಿವೆಸರ ಸುತನಾಗಿ ಕಿತವನಾಗೆ ಪೊಱಮಡಿಸಿ ಕೞಿಯೆ ಪೋಗಿ ಋಷಿಯರಂ ಸಾರ್ದು ಸಾಕ್ಷರಿಕನಾಗಿ ಮಗುೞ್ದು ಬಂದು ಮಾತಾಪಿತೃಗಳೊಳ್ ಕೂಡಿ ಸಂತೋಷದಿನಿರ್ದು ವಸಂತೆಯುಂ ರಮಣಿಯುಮೆಂಬಿರ್ವರ್ ಗಣಿಕೆಯರ್ಗಾಸಕ್ತನಾಗಿ ಧನಮಂ ನಿಧುವನಕ್ಕೆ ಸಲಿಸಿ ವಿಕಲಮತಿಯಾದ ಮೃದುಮತಿ ಸ್ತೇಯಮೆ ತನಗೆ ಜೀವನೋಪಾಯಮಾಗೆ ನೆಗೞುತ್ತುಮೊಂದು ದಿವಸಂ ಶಶಾಂಕಪುರಮನಾಳ್ವ ನಂದಿವರ್ಧನನರಮನೆಯಂ ಪೊಕ್ಕು ಕೞಲೆಂದುೞಿದಿರ್ದ ಸಮಯದೊಳ್ ನಂದಿವರ್ಧನಂ ಶಶಾಂಕಮುಖ ಭಟ್ಟಾರಕರ್ ಬೆಸಸೆ ಧರ್ಮಮಂ ಕೇಳ್ದು ನಿರ್ವೇಗಪರನಾಗಿ ಮನೆಗೆವಂದು ತನ್ನರಸಿಗಾಂ ತಪಸ್ಥನಪ್ಪೆಂ ನೀನುಬ್ಬೆಗಂ ಬಡದಿರೆಂದು ನುಡಿವುದುಂ ಕೇಳ್ದು ಮೃದುಮತಿವೆಸರನ್ವರ್ಥಮಾಗೆ ಸಂಸಾರ ಭೀರುವಾಗಿ ತತ್ತಪೋನಿಧಿಯ ಸನ್ನಿಧಿಯೊಳ್ ತೊಱೆದು ತಪಂಗೆಯ್ಯುತ್ತುಮಿರ್ಪುದುಮಿತ್ತಲಾಲೋಕಪುರದ ಪರಿಸರದ ಪರ್ವತದ ಮೇಲೆ—

ಕಂ ॥ ಗುಣನಿಧಿಗಳ್ ನಾಮದೊಳಂ
ಗುಣನಿಧಿಗಳ್ ಗಗನ ಚಾರಣರ್ ಶೈಲ ಶಿರೋ ॥
ಮಣಿಯೆನೆ ಕೈಯೆತ್ತದೆ ಮುನಿ
ಗಣ ಪೂಜ್ಯರ್ ಪೂಣ್ದು ನಾಲ್ಕು ತಿಂಗ[1]ಳನಿರ್ದರ್ ॥ ೪೮ ॥

ಅವರಂ ಪೂಜಿಸಿ ಪೋದರ್
ದಿವಕ್ಕೆ ದಿವಿಜರ್ಕಳವರುಮಾ ಪರ್ವತದಿಂ ॥
ಪವನ ಪಥಾತಿಥಿಯಾದರ್
ದಿವಸಾವಧಿ ಪಿಂಗಿಪೋಗೆ ಪರಮಾತಿಥಿಗಳ್ ॥ ೪೯ ॥

1. ಳ್ಿಂದರ್. ಗ. ಘ.

ಮತ್ತಿತ್ತ ಮೃದುಮತಿಗಳುಗ್ರೋಗ್ರ ತಪಂಗೆಯ್ದತಿ ಕ್ಷಪಿತ ಕಾಯರಾಲೋಕ ನಗರಕ್ಕೆ ಚರಿಗೆಗೆ ಪೋದೊಡಾ ಪೊಲಿಲನಾಳ್ವರಸಂ ಮೊದಲಾಗೆ ಪಲಬರುಮಾ ಚಾರಣರೆಗೆತ್ತೀ ರುಷಿಯರ್ ನಾಲ್ಕು ತಿಂಗಳ್ವರಂ ಕೈಯಿಕ್ಕಿ ನಿಂದರಿವರ ತಪದ ಪೆರ್ಮೆಗೆ ದೇವರ್ಕಳ್ ಪೂಜಿಸಿ ಪೋದರ್ ಗಡಮೆಂದು ಪೊಗೞ್ದು ತಮ್ಮಂ ಪೂಜಿಸಿ ಕೊಂಡಾಡೆ ಮಾಯೆಯಿಂ ಪೂಜಿಸಿದ ಪೂಜೆಗೆ ಮುಯ್ಯಾಂತು—

ಕಂ ॥ ಅಱಿಪಿಲ್ಲದ ಜಿನ ಧರ್ಮದೊ
ಳಱಿಪಿಂದಾಹಾರ ಕಾಂಕ್ಷೆಯಿಂ ಮಾಯೆಯ ಬೆಂ ॥
ಬಱಿಸಂದು ತಪಂಗೆಯ್ದೊಡ
ಲಱಿವಿನೊಳಭಿರಾಮನಿರ್ದ ದಿವಮಂ ಪೊಕ್ಕಂ ॥ ೫೦ ॥

ಅಂತು ಪುಗುವುದುಂ ಮೃದುಮತಿಯನಭಿರಾಮ ಚರಾಮರಂ ಕಂಡತಿ ಸ್ನೇಹಿತನಾಗಿ ಸುಖದಿನಿರ್ದು—

ಕಂ ॥ ದಿವದಿಂ ಪರಮಾಯುಷ್ಯಂ
ತವೆ ಮಾಯಾತಪದ ಫಲದೆ ಮೃದುಮತಿ ಚರನಾ ॥
ದಿವಿಜಂ ಕುಂಜರಗಿರಿ ಸಾ
ನು ವನ ನಿಕುಂಜಕ್ಕೆ ವಂದು ಕುಂಜರನಾದಂ ॥ ೫೧ ॥

ಅನಂತರಮಭಿರಾಮಚರಂ ಬ್ರಹ್ಮೋತ್ತರ ಕಲ್ಪದಿಂ ಬಂದು ದಶರಥ ಮಹೀ ನಾಥಂಗಂ ಕೈಕಾಮಹಾದೇವಿಗಮಾ ಭರತನೆಂಬ ಮಗನಾದನೀತನಂ ತ್ರಿಜಗ ದ್ಭೂಷಣ ಗಜಂ ಕಂಡು ಜಾತಿಸ್ಮರಂ ಸಂಸಾರ ಭೀರುವಾದುದಱಿಂ ಬ್ರತಂಗೊಂಡು ಸುಗತಿವುಗಲಿರ್ದುದೆಂದು—

ಕಂ ॥ ಆನೆಯ ಭರತನ ಭವ ಸಂ
ತಾನಂಗಳನಱಿಪೆ ದೇಶಭೂಷಣ ದಿವ್ಯ ॥
ಜ್ಞಾನಿಗಳಾಲಿಸಿ ವಿಸ್ಮಿತ
ಮಾನಸರಾದರ್ ಬಲಾಚ್ಯುತ ಪ್ರಮುಖರ್ಕಳ್ ॥ ೫೨ ॥

ಆ ಸಮಯದೊಳ್—

ಉ ॥ ಹಸ್ತಿಯ ತನ್ನ ಮುನ್ನಿನ ಭವಾವಳಿಯೆಲ್ಲಮನೆಯ್ದೆ ಪೇೞೆ ಲೋ ।
ಕ ಸ್ತುತ ದೇಶಭೂಷಣ ಮಹಾಮುನಿಪುಂಗವರಾ ಜವಂಜವ ॥
ತ್ರಸ್ತಮನಂ ತಪಶ್ಚರಣ ಲೋಭರತಂ ಭರತಂ ಭವಾಬ್ಧಿಯಂ ।
ದುಸ್ತರಮಂ ಸಮುತ್ತರಿಸಲುತ್ಸುಕ ವೃತ್ತಿಯನುಂಟುಮಾಡಿದಂ ॥ ೫೩ ॥

ಕಂ॥ ಬಾರದ ಭವವೊಂದಿಲ್ಲೆನೆ
ನಾರಕ ತಿರ್ಯಙ್ಮನುಷ್ಯ ಗತಿಯೊಳ್ ಬಂದೆಂ॥
ಸಾರದೆ ಜಿನ ಚರಣಮನಿ
ನ್ನಾರಾಧಿಸಿ ಪಡೆವೆನಮೃತ ಸುಖ ಸಂಪದಮಂ ॥ ೫೪ ॥

ಎಂದು ತಱಿಸಂದು ಭರತಂ ಸಹಸ್ರತ್ರಯ ರಾಜಪುತ್ರರ್ ಸಹಿತಂ ತಪಸ್ಥನಾದಂ ಕೈಕೆಯುಂ ಮುನ್ನೂರ್ವರ್ ಸ್ತ್ರೀಯರ್ವೆರಸು ಪೋಗಿ ಪೃಥುಮತಿ ಗಂತಿಯರ ಪಕ್ಕದೆ ಸಮ್ಯಕ್ತ್ವ ಪೂರ್ವಕಂ ತಪಂಗೊಂಡಳಾ ತ್ರಿಜಗದ್ಭೂಷಣ ಗಜಂ ಸಮ್ಯಕ್ತ್ವ ಪೂರ್ವಕಮಣುವ್ರತಮನಲ್ಲಿಯೆ ಕೈಕೊಂಡು ಪಲವು ನೋಂಪಿಗಳಂ ನೋಂತು ಸಂನ್ಯಸನದಿಂ ಮುಡಿಪಿ ಬ್ರಹ್ಮೋತ್ತರಕಲ್ಪಗತಮಾಯ್ತು ಭರತಮುನಿಗಳುಂ ಚತುರಂಗುಲ ಚಾರಣ ಋದ್ಧಿಪ್ರಾಪ್ತರಾಗಿ ವಿಹಾರಿಸಿ ಕೇವಲಜ್ಞಾನ ಪ್ರಾಪ್ತರಾಗಿ ಮೋಕ್ಷಕ್ಕೆ ಪೋದರಿತ್ತಲ್ ಸಿದ್ಧಾರ್ಥನುಂ ರತಿವರ್ಧನನುಂ ಮೊದಲಾಗೆ ಭರತನೊಡನೆ ತಪಂಗೊಂಡ ಮೂಸಾಸಿರ್ವರುಂ ತಂತಮಗೆ ತಕ್ಕ ಸ್ಥಾನದೊಳ್ ಪುಟ್ಟಿ ಸುಖದಿನಿರ್ಪುದುಮಿತ್ತ ಕೈಕಾಗಣಿನಿಯರುಮನಶನದೆ ತಪದೊಳ್ ನೆಗೞ್ದು ಜೀವಿತಾಂತ್ಯದೊಳ್ ಸೌಧರ್ಮ ಕಲ್ಪದೊಳ್ ಪುಟ್ಟಿದರ್—

ಕಂ॥ ಪರಿಪಾಲಿಸಿ ಧರೆಯಂ ಖೇ
ಚರ ಭೂಚರ ಭೂಪರಾಳ್ವೆಸಂ ಗೆಯ್ಯೆ ನಿರಂ॥
ತರ ಸುಖದಿನಿತ್ತಲಮರೇ
ಶ್ವರ ವಿಭವಂ ಬಡೆದು ರಾಮಲಕ್ಷ್ಮಣರಿರ್ದರ್ ॥ ೫೫ ॥

ಅಂತು ಸುಖದಿನಿರ್ದೊಂದು ದಿವಸಂ ರಾಘವಂ ಶತ್ರುಘ್ನಂಗೆ ಸಾಕೇತ ಪುರಾರ್ಧಮನಕ್ಕೆ ಪೌದನಪುರಾರ್ಧಮನಕ್ಕೆ ಪುಂಡರೀಕಿಣೀಪುರಮನಕ್ಕೆ ರಾಜಗೃಹಪುರಮನಕ್ಕೆ ನಿನ್ನ ಮೆಚ್ಚಿದುದಂ ಬೇಡಿಕೊಳ್ಳೆಂಬುದುಮಿದಾವುದುಮನೊಲ್ಲೆನುತ್ತರ ಮಥುರೆಯಂ ದಯೆಗೆಯ್ಯಿಮೆಂದು ಬಿನ್ನವಿಸೆ ರಾಮದೇವರೆಂದರುತ್ತರಮಥುರೆಯನಾಳ್ವ ಮಧುವಿಂಗಮರೇಂದ್ರನಿತ್ತ ಶೂಲಾಯುಧಂ ಮಱುವಕ್ಕದ ಮೇಲೆ ಬಿಟ್ಟಕ್ಕಿದೊಡೆ ಸಾಸಿರ್ವರಂ ಕೊಂದು ಮಗುೞ್ಚಿ ಕೈಗೆವರ್ಪುದದಲ್ಲದೆಯುಮಾತನ ತನೂಭವಂ ಲವಣಾರ್ಣವನೆಂಬವಂ ರಾವಣನಳಿಯನವನನಾರುಂ ಗೆಲಲ್ ಬಾರದು ನೀನಾವೊಟಲೊಳೆಂತಿರ್ದಪೆಯೆನೆ ಶತ್ರುಘ್ನನಾಗ್ರಹದಿನದನೆ ಬೇಡಿಕೊಳ್ವುದುಂ ಲಕ್ಷ್ಮೀಧರಂ ತನ್ನ ವಜ್ರಕವಚಮುಮಂ ಸಾಗರಾವರ್ತ ಶರಾಸನಮುಮನಗ್ನಿಮುಖ ಶಿಲೀಮುಖಮುಮಂ ಕೊಟ್ಟು ಕಟಿಪುವುದುಂ ಮಹಾಬಲ ಸಮೇತನಾಗಿ ಪುಣ್ಯಭಾಗೆಯೆಂಬ ತೊಱೆಯನೆಯ್ದಿ ತನ್ನದೀತೀರದೊಳ್ ಬೀಡಂ ಬಿಟ್ಟಿರ್ಪುದುಂ ಗುಪ್ತಚರನೊರ್ವನತಿ ತ್ವರಿತಗತಿಯಿಂ ಬಂದು ದೂರಾವನತ ಮಸ್ತಕಂ—

ಕಂ ॥ ಮಧು ಮಧುರೆಯೊಳಿರೆ ಶೂಲಾ
ಯುಧಮಾ ಪುರವರದ ಪೂರ್ವ ನಂದನ ವನದೊಳ್ ॥
ವಧುವುಂ ತಾನುಂ ರತಿಸುಖ
ಮಧುಸೇವಾ ಮತ್ತರತ್ತ ಮೆಯ್ಮಱೆದಿರ್ದರ್ ॥ ೫೬ ॥

ಎಂದು ಬಿನ್ನವಿಸೆ ಶತ್ರುಘ್ನಂ ಮನದೆ ಕೊಂಡೊಂದು ಲಕ್ಕ ಕುದುರೆವೆರಸು ದಾಟಿಯಿಟ್ಟು ಮಧುವಿರ್ದ ಬನಮಂ ಮುತ್ತಿ ಪೊಱವೊಟಲೊಳಿರ್ದರಂ ಪೇಸೇಱೆ ಕೊಲ್ವುದಂ ಮಧು ಕೇಳ್ದು ವನದಿಂ ಪೊಱಮಟ್ಟು ಯುದ್ಧಂಗೆಯ್ವ ಸಮಯ ದೊಳ್ ಸೇನಾಪತಿ ಕೃತಾಂತ ವಕ್ತ್ರಂ ಮಧು ತನೂಭವನಪ್ಪ ಲವಣಾರ್ಣವನ ಜೀವನಮಂ ಬಡಬಾನಲನಂತೆ ತವಿಸಿ ಕೃತಾಂತ ವಕ್ತ್ರಕ್ಕೆ ಸೋವತಂಮಾಳ್ಪುದು ಮದಂ ಕಂಡು ಮಧು ಮುಳಿದು ಬಂದು ಶತ್ರುಘ್ನಂ ಕಾದಲೆಯ್ತರ್ಪುದುಂ ತನ್ನ ಶೂಲಾಯುಧಮತ್ತಲಿರ್ದುದುಮಂ ತನ್ನ ಸುತಂ ಸತ್ತುದುಮಂ ಬಗೆದು ತನ್ನ ಸಾವಂ ನಿಶ್ಚಯಿಸಿ ಕೈದುವಿಂಗೆ ಕೈಯನುಯ್ಯದೆ ವಿರೋಧಿಬಲದಾಯುಧಕ್ಕೆ ಮೆಯ್ಯ ನೊಪ್ಪಿಸಿ ತನ್ನ ಸಹಸ್ರ ಕುಂತಲಮಂ ಪಂಚಮುಷ್ಟಿಯಿಂ ಪಱಿದುಕೊಂಡು ಬಾಹ್ಯಾ ಭ್ಯಂತರ ಪರಿಗ್ರಹಂಗಳಂ ಪರಿತ್ಯಾಗಂಗೆಯ್ದು ಮಹಾವ್ರತಮನೇಱಿಸಿಕೊಂಡು ಸಂನ್ಯಸನದಿಂ ಪ್ರಾಣ ಪರಿತ್ಯಾಗಂಗೆಯ್ದು ಸನತ್ಕುಮಾರ ಕಲ್ಪಕ್ಕೆ ಸಂದನಿತ್ತಲ್—

ಕಂ ॥ ಪಗೆಯಂ ಸಾಧಿಸಿ ರಿಪು ವನಿ
ತೆಗಿತ್ತು ವೈಧವ್ಯ ದೀಕ್ಷೆಯಂ ಶತ್ರುಘ್ನಂ ॥
ಬಗೆದ ಬಗೆ ಕೂಡೆ ಜಯ ಲ
ಕ್ಷ್ಮಿಗೆ ವಲ್ಲಭನಾಗಿ ಮಧುರೆಯೊಳ್ ಸುಖಮಿರ್ದಂ ॥ ೫೭ ॥

ಇತ್ತ ವಿಜಯಾರ್ಧ ಪರ್ವತದ ದಕ್ಷಿಣ ಶ್ರೇಣಿಯ ರತ್ನಪುರಮನಾಳ್ವ ರತ್ನ ರಥಂಗಂ ಚಂದ್ರಾನನೆಗಂ ಪುಟ್ಟಿದ ಕನ್ಯಾರತ್ನಮಂ ಮನೋರಮೆಯನಾರ್ಗೆ ಕುಡುವ ಮೆಂದು ನಾರದನಂ ಬೆಸಗೊಳ್ವುದುಂ ತ್ರಿಖಂಡ ಮಂಡಲಾಧಿಪತಿಯಪ್ಪ ಲಕ್ಷ್ಮೀ ಧರಂಗೆ ಕುಡುವುದೆನೆ ರತ್ನರಥನುಮವನ ಮಕ್ಕಳಪ್ಪ ಹರಿಯುಂ ಮನೋವೇಗನುಂ ಮೊದಲಾಗೆಲ್ಲರುಂ ಕೇಳ್ದು ಕಲುಷವಶ ಗತರಾಗಿ—

ಕಂ ॥ ಕೆಳೆಯು ಪಗೆಯೊಡನೆ ಪಗೆಯುಂ
ಬಳೆಯಿಪುದಂ ಬಿಟ್ಟು ಕೂಸುಗೊಟ್ಟನುನಯಮಂ ॥
ಬಳೆಯಿಸುವುದೆಂದು ನುಡಿದೀ
ಗೞಪಂ ನಮ್ಮಳವನಱಿಯುಲೊಪರಿಸಿ ನುಡಿದಂ ॥ ೫೮ ॥

ಎಂದು ಕಿಡೆನುಡಿದು ಪೊಱಮಡಿಸಿ ಕಳೆಯೆ ಕಡುಮುಳಿದು ನಾರದಂ ಮನೋರಮೆಯ ರೂಪಂ ಪಟದೊಳ್ ಬರೆದು ಲಕ್ಷ್ಮಣಂಗೆ ತೋಱಿ ತನ್ನಂ ಪರಿಭವಿಸಿದುದುಮಂ ಪೇೞೆ ಕೇಳ್ದು—

ಕಂ ॥ ನೆಲನೆಡೆ ನೆಱೆಯದು ಭೂಚರ
ಬಲಕ್ಕೆ ಖೇಚರ ಬಲಕ್ಕೆ ನಭಮೆಯ್ದದೆನಲ್ ॥
ಬಲಭದ್ರಯುತಂ ಲಕ್ಷ್ಮಣ
ನಲಂಘ್ಯಬಲನೆತ್ತಿ ಮುತ್ತಿದಂ ತತ್ಪುರಮಂ ॥ ೫೯ ॥

ಅಂತು ರತ್ನಪುರಮಂ ಮುತ್ತುವುದುಂ ರತ್ನರಥಂ ತನ್ನ ಮಕ್ಕಳ್ವೆರಸು ಮಹಾಯುದ್ಧಂಗೆಯ್ದು ವಿರಥನಾಗಿ ಬೆನ್ನೀಯೆ ಬೆನ್ನನೆ ಪರಿತಂದು—

ಕಂ ॥ ಕಡುಗಲಿತನದಿಂದೆನ್ನಂ
ಬಿಡೆನುಡಿದು ಪೊಡರ್ಪನುೞಿದು ಬೆಳ್ಕಿರಲೆಯವೋಲ್ ॥
[1]ಕಡುಗಲಿಗಳಾದಿರೆನುತುಂ
ತೊಡೆಯಂ ಪೊಯ್ದಾರ್ದು ನಾರದಂ ನರ್ತಿಸಿದಂ ॥ ೬೦ ॥

ಅಂತು ಮುಟ್ಟೆ ಮೂದಲಿಸೆ ಪೋಗಲೆಡೆಗೆಟ್ಟು ಮಗುೞ್ದು ಬಂದು ಲಕ್ಷ್ಮಣಂಗೆ ಪೊಡೆವಟ್ಟು ಮನೋರಮೆಯಂ ಕೊಟ್ಟು ರಾಮಂಗೆ ಶ್ರೀಕಾಂತೆಯಂ ಕೊಟ್ಟಾಳ್ವೆಸನನಪ್ಪುಕೆಯ್ವುದುಮಾತಂ ಬೆರಸು ದಕ್ಷಿಣಶ್ರೇಣಿಯೆಲ್ಲಮಂ ಬಾಯ್ಕೆಯ್ಸಿ ನಿಖಿಲ ತ್ರಿಖಂಡ ವಲ್ಲಭನಾಗಿ ವಿಶಲ್ಯಾಸೌಂದರಿಯುಂ ರೂಪವತಿಯುಂ ವನಮಾಲೆಯುಂ ಕಲ್ಯಾಣಮಾಲೆಯುಂ ರತಿಮಾಲೆಯುಂ ಜಿತಪದ್ಮೆಯುಮಭಯಮತಿಯುಂ ಮನೋರಮೆಯುಮೆಂಬೆಣ್ಬರ್ ಕನ್ನೆಯರ್ಗಂ ಮಹಾದೇವೀಪಟ್ಟಮಂ ಕಟ್ಟಿ—

ಕಂ ॥ ಇವರಾದಿಯಾಗೆ ಲಕ್ಷ್ಮಣ
ನವಾರ್ಯ ಶೌರ್ಯಂ ವಿವಾಹ ಮಾಂಗಲ್ಯ ಮಹೋ ॥
ತ್ಸವದಿಂ [2]ಪದಿನೆಣ್ಛಾಸಿರ
ಮವರೋಧ ವಧೂಜನಕ್ಕೆ ವಲ್ಲಭನಾದಂ ॥ ೬೧ ॥

ಆ ಮಹಾಬಲ ಪರಾಕ್ರಮನಪ್ಪ ರಾಘವದೇವನುಂ ಜನಕಸುತೆಯುಂ ಪ್ರಭಾವತಿಯುಂ ರತಿಯುಂ ಶ್ರೀಕಾಂತೆಯುಮೆಂಬ ನಾಲ್ವರ್ ಮಹಾದೇವಿಯರ್ ಮೊದಲಾಗೆಯೆಣ್ಛಾಸಿರಮಂತಃಪುರಕ್ಕಧಿಪನಾದನಿಂತು ರಾಮಲಕ್ಷ್ಮಣರ್ ಪಲಕಾಲಂ ರಾಜ್ಯ ಸುಖಮನನುಭವಿಸುತ್ತಿರೆ ಲಕ್ಷ್ಮಣನ ಮನೋವಲ್ಲಭೆ ವಿಶಲ್ಯಾಸೌಂದರಿಗೆ

1. ಕಡುಗಡಿಯರಾದಿರೆ. ಚ. 2. ಪದಿನಾಸಾಸಿರ. ಖ.

ಶ್ರೀಧರಂ ರೂಪವತಿಗೆ ಪೃಥ್ವೀತಿಲಕಂ ವನಮಾಲೆಗರ್ಜುನಂ ಕಲ್ಯಾಣಮಾಲೆಗೆ ಮಂಗಲಂ ರತಿಮಾಲೆಗೆ ಶ್ರೀಕೇಳಿ ಜಿತಪದ್ಮೆಗೆ ವಿಮಲಪ್ರಭಂ ಅಭಯಮತಿಗೆ ಸತ್ಯಕೀರ್ತಿ ಮನೋರಮೆಗೆ ಸುಪಾರ್ಶ್ವನೆಂಬ ಮಕ್ಕಳಾದರಿಂತರ್ಧ ಚಕ್ರವರ್ತಿಯ ಮಕ್ಕಳೆಣ್ಬರುಮನುದಿನ ಪ್ರವರ್ಧಮಾನ ಮನೋಹರಾಕಾರರಾಗಿ ಬಳೆಯುತ್ತುಮಿರೆ ಮತ್ತೊಂದು ದಿವಸಂ—

ಕಂ॥ ಜನಕಸುತೆ ನಾಲ್ಕು ನೀರ್ ಮಿಂ
ದು ನಾಡೆ ಬೆಳ್ವಸದನಂ ವಿರಾಜಿಸೆ ಕಾಂಚೀ॥
ನಿನದಂ ಕೈಮಿಗೆ ಲಕ್ಷ್ಮೀ
ವನಿತೆಯುಮೋಲ್ ಸೆಜ್ಜೆವನೆಗೆ ಬಿಜಯಂಗೆಯ್ದಳ್ ॥ ೬೨ ॥

ಅಂತು ಸೂಟಿಗ್ಗೆವಂದು ನಿಶಾವಸಾನ ಸಮಯದೊಳ್—

ಕಂ॥ ಶರಭ ದ್ವಿತಯಂ ನಿಜ ಮುಖ
ಸರೋಜಮಂ ಬಂದು ಪುಗುವುದಂ ಪುಷ್ಪಕದಿಂ॥
ಧರಣಿಗೆ ಬೀಳ್ತುರ್ಪುದನಾ
ಹರಿಣೇಕ್ಷಣೆ ಸೀತೆ ಕಂಡಳೆರಡಂ ಕನಸಂ ॥ ೬೩ ॥

ಅಂತು ಕಂಡ ಸ್ವಪ್ನಂಗಳಂ ರಾಮಸ್ವಾಮಿಗಱಿಪುವುದುಂ—

ಕಂ॥ ಅಮಿತ ಪರಾಕ್ರಮರಿವರೆನಿ
ಪ ಮಕ್ಕಳಂ ಪಡೆವೆ ಶರಭಯುಗ ದರ್ಶನದಿಂ॥
ಕಮಲಾನನೆ ಮತ್ತಿನ ಕನ
ಸು ಮನೋಹರಮಲ್ತು ಖೇದಮಂ ಪುಟ್ಟಿಸುಗುಂ ॥ ೬೪ ॥

ಎಂದು ಕನಸಿನ ಫಲಮಂ ಪೇೞ್ದು ರ್ವರುಮೇವಯಿಸುತ್ತುಮಿರೆ ಕೆಲವು ದಿವಸಕ್ಕೆ ಸೀತೆಗೆ ಗರ್ಭಚಿಹ್ನಂಗಳ್ ತೋಱಿದುವಾ ಮಹಾನುಭಾವೆಗೆ ಜಿನ ಪೂಜೋತ್ಸವ ಮಂಮಾಳ್ಪ ಬಯಕೆ ಸಮನಿಸೆ ಜಿನಮಹಾಮಹಮಂ ಮಹೇಂದ್ರೋದ್ಯಾನದ ಜಿನಾಲಯಂಗಳೊಳೆಲ್ಲಮನುದಿನಂ ಮಾಡುತ್ತುಮಿರಲೊಂದು ದಿವಸಂ—

ಕಂ॥ ಕಟ್ಟಿದುದಂ ಕಳೆವವರಾರ್
ನೆಟ್ಟನೆ ಸತ್ಪಥದೊಳೆಸಗೆಯುಂ ಬೇವಸಮೆ॥
ಟ್ಟಿಟ್ಟಪುದಂ ಸೂಚಿಪವೋಲ್
ಪುಟ್ಟಿದುದಾ ಸತಿಗೆ ದಕ್ಷಿಣಾಕ್ಷಿ ಸ್ಪಂದಂ ॥ ೬೫ ॥

ಆಗಳಾ ದುರ್ನಯಕ್ಕೆ ಸೀತೆ ಭಯಸ್ಥೆಯಾಗಿ ಗೃಹ ಮಹತ್ತರನಂ ಕರೆದಾರೇನಂ ಬೇಡಿದೊಡವರ್ಗದಂ ಕುಡುವುದೆಂದು ಪೇೞ್ದು ತಾನುಮನುದಿನಂ ಜಿನಾಭಿಷೇಕಮುಮಂ ಜಿನಪೂಜೆಗಳುಮಂ ಮಾಡುತ್ತುಮಿರಲೊಂದುದಿವಸಂ [1]ಜನಪದ ಜನಂ ಬಂದು ಬಿನ್ನವಿಸಲಣ್ಮದಿರೆ ರಾಮಸ್ವಾಮಿ ನಿಮ್ಮ ಬಂದ ಕಾರ್ಯಮನಂಜದೆ ಪೇೞಿಮೆಂಬುದುಂ ಪ್ರಜೆಗಳನುಮತದಿಂ ವಿಜಯನೆಂಬ ಮಹತ್ತರನಿಂತೆಂದಂ—

ಚ ॥ ವ್ಯಸನಿ ದುರಾತ್ಮನಪ್ಪ ದನುಜಂ ಕರಮೆಡ್ಡಮೆನಿಪ್ಪ ಸೀತೆಗಾ ।
ಟಿಸಿ ಪಿಡಿದುಯ್ದೊಡಾ ಖಲ ನಿವಾಸದೊಳಿನ್ನೆಗಮಿರ್ದಳಂ ವಿಚಾ ॥
ರಿಸದೊಡಗೂಡಿ ಮುನ್ನಿನವೊಲಿರ್ಪುದು ಪಾೞಿಯೆ ಲೋಕ ಸೀಮೆಯಂ ।
ವಸುಧೆಗಧೀಶನೇಳಿಸುವುದುಂ ಪ್ರತಿಪಾಲಿಪರಾರೊ ಧರ್ಮಮಂ ॥ ೬೬ ॥

ಎಂಬುದುಂ ರಾಮನದಂ ಕೇಳ್ದು—

ಕಂ ॥ ಜನಮೆಂದಂತುಟೆ ಭಾವಿಸ
ದನಯಮನಾಂ ನೆಗೞ್ದೆನೆಂದು ಪಶ್ಚಾತ್ತಾಪಂ ॥

---

1. ಇಲ್ಲಿ ಗ. ಘ. ಪುಸ್ತಕಗಳ ಪಾಠವು ಮುಂದೆ ಬರೆದಿರುವಂತಿದೆ:—

ಮ॥ಸ್ರ॥ ಉಱಿದಂಡಾಧ್ಯಕ್ಷಕಂ ಪಾಮರ ಕುಲದೊಳಗೊರ್ವಂ ಬಿಸುಟ್ಟೋಪಳಂ ಮ ।
ತ್ತಱುದಿಂಗಳ್ ಪೋಗೆ ಕೂಡಿರ್ದ್ದರವನಱಿದು ದಂಡಕ್ಕೆ ಸರ್ವಸ್ವಮಂ ಬೆ ॥
ಳ್ಕಱುವನ್ನಂ ಬೇಡಲಂತೊಕ್ಕಲಿಗರ ಬಳಗಂ ತಮ್ಮೊಳೊಂದಾಗಿ ಲೋಕ ।
ಕ್ಕೆಱೆಯಂ ರಾಮಂಗೆ ನಾಮಿನ್ನಱಿಯಿಡುವಮೆನುತ್ತಂದಯೋಧ್ಯಕ್ಕೆ ಬಂದರ್ ॥

ಅಂತು ಬಂದವಸರಂಬಡೆದರಮನೆಯಂ ಪೊಕ್ಕು ರಾಮಂಗೆ ತಮ್ಮ ಬಂದಕಾರ್ಯಮಂ ಬಿನ್ನವಿಪುದುಮದಂ ವಿಚಾರಿಸಿ ನ್ಯಾಯದಿಂ ಸಂತೋಷಮಪ್ಪಂತವರ್ಗೆ ನುಡಿಯುಲನಿತರೊಳ್ ನಿಲ್ಲದೆ ಮತ್ತಮೊಕ್ಕಲಿಗನ ತಲೆಯೊಳ್ ಮರುಳುಂಟೆಂಬುದಂ ನನ್ನಿಮಾಡಿ ರಾಘವಂಗಿಂತೆಂದರ್—

ವ್ಯಸನಿ ದುರಾತ್ಮನಪ್ಪ ದನುಜಂ........................(ಇತ್ಯಾದಿ)

ಅಂತುಮಲ್ಲದೆ ದುರಾಚಾರನಪ್ಪ ರಾವಣನ ಕೆಲದೊಳಿರ್ದ ಜಾನಕಿಯಂ ತಂದು ಮಹಾದೇವೀಪಟ್ಟಂಗಟ್ಟಿ ಕೈಕೊಂಡಿರಂತಪ್ಪೊಡದುವುಂ ದೋಷಮಾಗಲೆವೇೞ್ಕುಮೆನಲದಂ ರಾಮಂ ಕೇಳ್ದು—

ತನಗಧಿಕವಾಗೆ ರಘುನಂ
ದನನುಬ್ಬರಮೆಸ್ಸಿಸೆ ತಳಿದನಂದುಬ್ಬೆಗಮಂ ॥ ೬೭ ॥

ಜಸಮುಂ ಧರ್ಮಮುಮುೞಿವಂ
ದೆಸಗುವುದೇಳಿದಿಕೆಯೆಂದು ವೈದೇಹಿಯುಮಂ ॥
ಬಿಸುಡಲ್ ಬಗೆದಂ ಮನುವಂ
ಶ ಸಮುದ್ಭವರಾರುಮುಚಿತಮಂ ಮಿಾಱುವರೇ ॥ ೬೮ ॥

ಅಂತು ರಾಮಸ್ವಾಮಿ ಸೀತಾದೇವಿಗತಿಸ್ನೇಹಿತನಾಗಿಯುಂ ಜನಾಪವಾದಕ್ಕೆ ಸೆಡೆದು ಪರಿಹರಿಸಲೊಡರಿಸಿ ಲಕ್ಷ್ಮಣನಂ ಬರಿಸಿ ಕಟ್ಟೇಕಾಂತದೊಳಾ ವ್ಯತಿಕರಮ ನಱಿಪೆ ಸೌಮಿತ್ರಿ ಕೇಳ್ದು ಕಡುಮುಳಿದು ನಿಮ್ಮಡಿಗಳವಿವೇಕಿಗಳಂತರ್ಥ ನಾಶಾದಿ ವಚನ ಪಂಚಕಂಗಳಂ ನುಡಿಯಲಾಗದದನಿಂತೇಕೆ ನುಡಿವಿರೆಂದು ಮತ್ತಮಿಂತೆಂದಂ—

ಕಂ ॥ ಸತಿ ಸೀತಾದೇವಿ ಪತಿ
ವ್ರತಾದಿ ಗುಣ ರತ್ನಭೂಷಣಾಲಂಕೃತೆ ತ ॥
ತ್ಸತಿಯೊಳವಗುಣಮನೂರ್ಜಿತ
ಮತಿಗಳ್ ನಿಮ್ಮನ್ನರುಸಿರ್ವುದನುಚಿತಮಲ್ತೇ ॥ ೬೯ ॥

ಎನೆ ಲಕ್ಷ್ಮಣಂಗೆ ರಾಮಸ್ವಾಮಿಯಿಂತೆಂದಂ—

ಕಂ ॥ ಪುರುದೇವಂ ಮೊದಲಾಗಿರೆ
ದೊರೆವೆತ್ತಿಕ್ಷ್ವಾಕು ವಂಶದವನೀಶರೊಳಾಂ ॥
ಬರಮಿಲ್ಲ ದುಶ್ಚರಿತ್ರಂ
ದೊರೆಕೊಂಡಂದೆನ್ನ ಪೌರುಷಂ ದೊರೆಗಿಡದೇ ॥ ೭೦ ॥

ಅದಱಿಂ ನೀನಿದಂ ಮಾರ್ಕೊಳ್ಳದಿರೆಂಬುದುಂ ಲಕ್ಷ್ಮೀಧರನಿಂತೆಂದಂ—

ಕಂ ॥ ಸೀತೆ ಗುಣಂಗಿಡೆ ಸಕಲ ಧ
ರಾತಲಮೊಡನಱಿಗುಮಲ್ಲದಂದಾ ಸತಿಯಂ ॥
ಪ್ರೀತಿಯಿನರ್ಚಿಸಿ ದಿವಿಜ
ವ್ರಾತಂ ಕಱೆಗುಮೆ ನರೇಂದ್ರ ಪೂವಿನ ಮೞೆಯಂ ॥ ೭೧ ॥

ಎಂದೆನಿತಾನುಮಂ ರಾಮಸ್ವಾಮಿಗೆ ನುಡಿದೀ ಪೊಲ್ಲವಾತಂ ಪರೆಪಿದೊಕ್ಕಲಿಗರ ನಾಲಗೆಯಂ ಕಿೞ್ತಿಕ್ಕುವೆನೆಂಬುದುಂ ಲಕ್ಷ್ಮಣನ ಕೈಯಂ ಪಿಡಿದಿದನೊಂದಂ

ಮಾರ್ಕೊಳ್ಳದಿರೆಂದು ತನ್ನಮೇಲೆ ಸೂರುಳ್ದು ಮಾರ್ನುಡಿಯದಂತು ಮಾಡಿ ಕೃತಾಂತ ವಕ್ತ್ರನಂ ಕರೆದು ಸೀತೆಯನೊರ್ವಳನೇ ಬೇಗಮುಯ್ದು ಭೀಮಾಟವಿಯೊಳಿಕ್ಕಿ ಬಾರೆಂದು ಪೇೞ್ವುದುಮಾ ಮಾತಂ ಲಕ್ಷ್ಮಣಂ ಕೇಳ್ದು ತಲ್ಲಳಿಸಿ ರಾಮಸ್ವಾಮಿಯ ಪಾದಾರವಿಂದಕ್ಕೆ ವಿನತನಾಗಿ ಮತ್ತಮಿಂತೆಂದಂ—

ಚ ॥ ಜನಕ ತನೂಜೆ ನೆಟ್ಟನೆ ಮಹಾಸತಿ ಗರ್ಭಿಣಿ ಪಾಪಭೀರು ಕಾ ।
ನನಮತಿ ರೌದ್ರಮಲ್ಲಿ ಪೞಿಗಂಜದೆ ಪಾತಕಮುಕ್ಕುಮೆಂಬಿದಂ ॥
ನೆನೆಯದೆ ಬಾಯ್ಗೆ ಬಂದ ತೆಱದಿಂ ಪೆಱರೆಂದೊಡೆ ಕೇಳ್ದು ಬಿಟ್ಟಮೆ ।
ಟ್ಟನೆ ಬಿಸುಡೆಂದು ನಿಷ್ಕರುಣ ವೃತ್ತಿಯಿನಿಂತುಸಿರಲ್ಕೆ ತಕ್ಕುದೇ ॥ ೭೨ ॥

[1]ಎಂದಱಲ್ದು ನುಡಿದಟ್ಟೆ ಕಱಿಯದೆನಗೆ ಕ್ಷಮಿಯಿಸುವುದೆನೆ ರಾಘವ ನಿಂತೆಂದಂ—

ಕಂ ॥ ಪೞಿಯಕ್ಕೆ ಪಾಪಮಕ್ಕೆಮ
ಪೞಗೞಿಪುವೆನೆನಗೆ ಕೂರ್ಪೊಡುಸಿರದಿರಿನ್ನೆಂ ॥
ದೞಲದೆ ಸೀತೆಯ ಪಂಬಲ
ನುೞಿದೇಂ ಲೋಕಾಪವಾದ ಭೀರುವೊ ರಾಮಂ ॥ ೭೩ ॥

ಅಂತು ಸೌಮಿತ್ರಿಯನುಬ್ಬೆಗಂ ಬಡದಿರೆಂದು ಬಾರಿಸಲೊಡಂ ಸಭೆಯಿನೆೞ್ದು ಪೋಪುದುಮನಂತರಂ ಕೃತಾಂತವಕ್ತ್ರನಂ ರಾಮಸ್ವಾಮಿಯೆಂದನಯೋಧ್ಯಾನಗರದ ಸಮ್ಮೇದ ಪರ್ವತದ ಸಮೀಪದೆಡೆಯ ಜಿನಾಲಯಂಗಳಂ ವಂದಿಸಿ ನಿಮ್ಮ ಬಯಕೆಯಂ ತೀರ್ಚಿ ಬರ್ಪಂ ಬನ್ನಿಮೆಂದು ಸೀತೆಯನೊಡಗೊಂಡು ಪೋಗಿ ಭೀಮಾಟವಿಯೊಳ್ ನಿರ್ಜಂತುಕ ಪ್ರದೇಶದೊಳ್ ಬಿಟ್ಟು ಬರ್ಪುದೆನೆ—

ಕಂ ॥ ಸೇವೆಯೆ ಕಷ್ಟಂ ಸೀತಾ
ದೇವಿಯನೀಡಾಡಿ ಬರ್ಪುದಡವಿಯೊಳೆನೆ [2]ದೋ ॥
ಷಾವಿಲಮನಱ್ದ್ರಿ ರಾಘವ
ದೇವಂಗೆ ಕೃತಾಂತವಕ್ತ್ರನದನೇಗೊಂಡಂ ॥ ೭೪ ॥

ಅಂತು ಬೆಸನಂ ಕೈಕೊಂಡು ಸೀತಾದೇವಿಯ ಕೆಲಕ್ಕೆ ಬಂದು—

---

1. ಎಂದು ನುಡಿದಱಲ್ದು ಸೀತಾದೇವಿಯುಂ ಪತಿವ್ರತಾಗುಣ ಮಣಿ ಮಂಡನೆಯನಟ್ಟಿ.
2. ದೋಷಾವಿಲನುಮಳ್ಳಿ. ಚ. ಗ. ಘ

ಕಂ ॥ ರಾಮಂ ಕಲಿಸಿದ ತೆಱದಿಂ
ರಾಮೆಗೆ ಪುಸಿನುಡಿದು ರಥಮನೇಱಿಸಿ ಕೊಂಡಾ ॥
ಭೀಮಾಟವಿಯಂ ಕರಿ ಹರಿ
ಭೀಮಾಟನಮಂ ಕೃತಾಂತಮುಖನೆಯ್ತಂದಂ ॥ ೭೫ ॥

ಆ ಮಹಾಗಹನಮಂ ಪೊಕ್ಕು ತನ್ಮಧ್ಯ ನಿರ್ಝರ ವಾರಿಧಾರಾ ಪರೀತ ಗಿರಿ ದರೀ ಪ್ರದೇಶದೊಳ್ ಮಹಾಸತಿಯಂ ರಥದಿಂದಿೞಿಪಿ ಮನ್ಯು ಗದ್ಗದ ಕಂಠನಾಗಿ ಕಣ್ಣೀರ್ಗಳಂ ನೆಗಪುವುದುಂ ಕೃತಾಂತವಕ್ತ್ರನಂ ಸೀತಾದೇವಿ ಕಂಡಿದೇಕೆ ಶೋಕಂಗೆಯ್ವಪೆ ಪೇೞೆಂದೊಡಾತನೆಂದನಬ್ಬಾ ನಿಮ್ಮ ಮೇಲೆ ಲೋಕಮೆಲ್ಲಮಭಿಯೋಗಮನಿಟ್ಟೊಡರಸಂ ನಿಮ್ಮನಡವಿಯೊಳ್ ಬಿಸುಟ್ಟು ಬರವೇೞ್ದೊಡಿಲ್ಲಿಗೆ ತಂದೆನೆನೆ ಸೀತಾದೇವಿ ಕೇಳ್ದು ಮೂರ್ಛೆವೋಗಿ ಕಿಱಿದುಂ ಬೇಗದಿಂ ಚೇತರಿಸಿ ಕೃತಾಂತವಕ್ತ್ರಂಗಿಂತೆಂದಳ್ ರಾಮದೇವರ್ ಸಕಲ ವಸುಧಾ ತಲಮಂ ನ್ಯಾಯದಿಂ ಪ್ರತಿಪಾಲಿಸುವುದು ದೇವ ಗುರು ಪೂಜೆಯಂ ಮಱೆಯದಿರ್ಪುದು ಜನಾಪವಾದ ಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದೆನಗೆ ದಯೆಗೆಯ್ವರಪ್ಪೊಡೆಂದಳೆಂಬುದಂ ಮಱೆಯದೆ ಪೇೞೆಂದು ಬಾಷ್ಪ ಜಲ ಲುಲಿತ ಲೋಚನೆ ತಲೆಯಂ ಬಾಗಿ ನೆಲನಂ ಬರೆಯುತ್ತುಮಿರ್ದಳಂ ಕೃತಾಂತವಕ್ತ್ರಂ ನೋಡಿ—

ಕಂ ॥ ತರುಣಿಯನಂತರ್ವತ್ನಿಯ
ನರಣ್ಯದೊಳ್ ಬಿಸುಡವೇೞ್ದೊಡೀ ಬೆಸನಂ ಕಾ ॥
ಪುರುಷನೆನೇಗೊಂಡೆಂ ಕಿಂ
ಕರ ಭಾವದಿನಪ್ರಶಸ್ತಮಾವುದುಮುಂಟೇ ॥ ೭೬ ॥

ಎಂದು ತನ್ನಂ ತಾನೆ ನಿಂದಿಸಿಕೊಂಡು ಕಣ್ಣೀರ್ಗಳಂ ಸಿಡಿಯುತ್ತುಂ ಸೀತಾದೇವಿಗೆ ಕ್ಷಮಿಯಿಸುವುದೆಂದು ಪೊಡೆವಟ್ಟು ಬೀೞ್ಕೊಂಡಯೋಧ್ಯೆಗೆ ಪೋದನಿತ್ತಲ್—

ಕಂ ॥ ಗುಣವತಿ ರಾಘವನಂ ಲ
ಕ್ಷ್ಮಣನಂ ನೆನೆ ನೆನೆದು ಶೋಕ ಪಾವಕನೆರ್ದೆಯೊಳ್ ॥
ಮಣಿಯದೆ ದಳ್ಳಿಸೆ ಕಣ್ಗಳ
ಪೊಣರಿಂ ಕಣ್ಬನಿಗಳುಣ್ಮೆ ದೆಸೆಗೆಟ್ಟಿರ್ದಳ್ ॥ ೭೭ ॥

ಅಂತಿಷ್ಟ ವಿಯೋಗ ವಿಕಲೆ ದಶ ದಿಶಾಮುಖ ದತ್ತ ದೃಷ್ಟಿ ಪೆಱರಾರುಮಂ ಕಾಣದೆ—

ಕಂ ॥ ಜಿನ ಮುನಿಯುಂ ಪೆಱವುಂ ಪ್ರಾ
ಣಿ ನಿಕಾಯಮನಕ್ಕೆ ನಾಡೆ ನೋಯಿಸಿದೆಂ ಮು ॥
ನ್ನಿನ ಜನ್ಮದೊಳಂತಲ್ಲದೊ
ಡೆನಗಿನಿವಿಂದೊಂದವಸ್ಥೆ ಬಱಿದಾದಪುದೇ ॥ ೭೮ ॥

ಎಂದು ಜಿನಾಗಮ ಕುಶಲೆಯಪ್ಪುದಱಿಂ ತನ್ನಂ ತಾನೆ ನಿಂದಿಸಿಕೊಂಡು ಸಂತಯಿಸಿ—

ಚ ॥ ಅಡವಿಯೊಳೂರೊಳಾವೆಡೆಯೊಳಾದೊಡಮೆನ್ನರುಮಪ್ಪ ಕಾಲದೊಳ್ ।
ಕಿಡುವರೆ ಕೇಡು [1]ಮೂಡಿದವರಪ್ಪೊಡೆ ನಿರ್ಮಲ ಜೈನ ಧರ್ಮಮಂ ॥
ಪಿಡಿದುಪಸರ್ಗಮಂ ಬಗೆಯದಾಗಮದಿಷ್ಟದಿನೆನ್ನ ಜೀವಮಂ ।
ಬಿಡುವೆನವೋಘಮೆಂದು ತೊಱೆದಳ್ ಜನಕಾತ್ಮಜೆ ಶೋಕ ವೇಗಮಂ ॥೭೯॥

ಅಂತು ವಿಗತ ಶೋಕವೇಗೆ ಮಹಾಋಷಿಯರ್ಕಳ್ ಮಹಾಗಹನದೊಳ್ ತಪಂಗೆಯ್ದಪವರ್ಗಮಂ ಸಾಧಿಸುವರದಱಿಂದೆನಗಮಿಾ ಪ್ರದೇಶವೊಳ್ಳಿತ್ತು ಸಮನಿಸಿತ್ತು ನೋಂತುಂ ಪಸಿದುಮಂತ್ಯದೊಳ್ ಸಂನ್ಯಸನದಿಂ ಪರತ್ರೆಯುಂ ಸಾಧಿಸುವೆನೆಂದು ಪರಮಾಗಮ ಭಾವನೆಯಿಂದಿರ್ಪನ್ನೆಗಮಾ ಪ್ರಸ್ತಾವದೊಳ್—

ಕಂ ॥ ಜನಕ ತನೂಜೆಯ ಸುಕೃತಮೆ
ಮನುಷ್ಯ ರೂಪಾಗಿ ಬರ್ಪ ತೆಱದಿಂ ನೃಪನಂ ॥
ದನನೊರ್ವನಾ ಮಹಾಕಾ
ನನಕ್ಕೆ ಬಲಸಹಿತಮಾನೆವೇಂಟೆಗೆ ಬಂದಂ ॥ ೮೦ ॥

ಅಂತು ಬಂದನತಿ ದೂರದೊಳ್—

ಕಂ ॥ ವನ ದೇವತೆಯೋ ಲಕ್ಷ್ಮಿಯೊ
ವನಿತೆಯೊ ದಿವದಿಂದಮಿೞಿದ ಮೇನಕೆಯೋ ಪೇ ॥
ೞೆನುತುಂ ಜಾನಕಿಯುಂ ಲೋ
ಚನ ಪಥದೊಳ್ ಮುಂದೆ ವಜ್ರಜಂಘಂ ಕಂಡಂ ॥ ೮೧ ॥

ಅಂತು ಕಂಡೆಯ್ದೆ ವಂದು ವಿಸ್ಮಯ ಸ್ತಿಮಿತ ಲೋಚನನಬ್ಬಾ ನೀಂವಾರ್ಗೇ ನಿಮಿತ್ತಮಿಾ ಕಾನನದೊಳಿರ್ದಿರೆಂಬುದುಮನವದ್ಯ ಚರಿತನೆಂದಱಿದಿಂತೆಂದಳಾಂ

1. ಮೂಡಲವರಪ್ಪೊಡೆ ಗ.

ಜನಕ ತನೂಜೆಯೆಂ ಪ್ರಭಾಮಂಡಲನನುಜೆಯೆಂ ರಾಮಸ್ವಾಮಿಯ ಭಾರ್ಯೆ ಸೀತಾ ದೇವಿಯೆಂಬಿನೆನ್ನಮೇಲೆ ಜನಪದ ಜನಂ ಪೊಲ್ಲನಪ್ಪ ರಾವಣನುಯ್ವುಳಂ ತಂದು ವಿಚಾರಿಸದೆ ಮಹಾದೇವೀಪಟ್ಟಂಗಟ್ಟುವುದಾವುಚಿತಮೆಂದಿಟ್ಟಳವಿಟ್ಟು ನುಡಿಯೆ ಲೋಕಾಪವಾದಕ್ಕೆ ರಾಮಸ್ವಾಮಿ ನಾಣ್ಚಿ ಕೃತಾಂತವಕ್ತ್ರನೆಂಬ ಪಡೆವಳನಂ ಕರೆದು ಸಮ್ಮೇದಂ ಮೊದಲಾದ ತೀರ್ಥಸ್ಥಾನಂಗಳ ಜಿನಾಲಯಂಗಳಂ ವಂದಿಸಿ ಬರ್ಪ ಮೆಂದು ನಂಬೆ ನುಡಿದೊಡಗೊಂಡುಯ್ದು ಬಿಸುಟ್ಟುಬರ್ಪುದೆಂದೊಡಾತನೆನ್ನಂ ನಿರ ಪರಾಧೆಯಂ ತಂದಿಲ್ಲಿ ಬಿಸುಟು ಪೋದನೆಂದು ಮಹಾದೇವಿ ಕಣ್ಣೀರ್ಗಳಂ ನೆಗಪೆ—

ಕಂ ॥ ಪವಣಿಲ್ಲದ ಸೀತೆಯ ಶೋ
ಕ ವಹ್ನಿಯಂ ಸೂಕ್ತಿ ಸಲಿಲದಿಂದಾಱಿಸಿದಂ ॥
ಭವ ವಿಭವದ ಚಪಲತೆಯಂ
ಸವಿಸ್ತರಂ ತಿಳಿಪಿ ವಜ್ರಜಂಘ ನರೇಂದ್ರಂ ॥ ೮೨ ॥

ಅನಂತರಮಿಂತೆಂದನಾಂ ಸೋಮ ವಂಶದರಸಂ ದ್ವಿರದ ವಾಹನಂಗಂ ಸುಬಂಧು ಮಹಾದೇವಿಗಂ ಪುಟ್ಟಿದೆಂ ವಜ್ರಜಂಘನೆಂಬೆಂ ಪುಂಡರೀಕಿಣೀ ಪುರಮನಾಳ್ವೆಂ ಜಿನ ಧರ್ಮದ ದೆಸೆಯಿಂ ನೀಮೆನಗೆ ತಂಗೆವಿರಪ್ಪಿರ್ ಬಿಜಯಂಗೆಯ್ಯಿಮೆಂದು ಸಿವಿಗೆಯ ನೇರಿಸಿಕೊಂಡು ಪೋಗಿ ಕಾಂತಾರಮಂ ಕಱಿದನುಕ್ರಮದಿಂ ಪುಂಡರೀಕಿಣೀ ಪುರ ಮನೆಯ್ದಿ ನಿಜ ರಾಜಭವನಮಂ ಪೊಕ್ಕು ಶೀಲವತಿವೆಸರ ನಿಜಾಗ್ರಜೆಯ ಮಾಡ ಕ್ಕುಯ್ದು ರಾಮದೇವರ ಭಾರ್ಯೆ ಜನಕತನೂಜೆ ಪ್ರಭಾಮಂಡಲನ ತಂಗೆ ಸೀತಾ ದೇವಿ ನಮಗಂ ಜಿನಧರ್ಮದ ದೆಸೆಯಿಂದೊಡವುಟ್ಟಿದಳೆಂದು ಸಮರ್ಪಿಸಿ ಸೀತಾ ದೇವಿಯಂ ನಿಮಗೆ ಪ್ರಭಾಮಂಡಲನಿಂದಗ್ಗಳಮಾಗೆ ಬೆಸಕೆಯ್ವೆನೆಂದು ಸಂತೋಷಂ ಬಡೆ ನುಡಿದು ವಜ್ರಜಂಘಂ ತನ್ನ ಮಾಡಕ್ಕೆ ಪೋದನಿತ್ತಲ್—

ಕಂ ॥ ಜಿನಮುನಿಗಾಹಾರಮನನು
ದಿನಮಿತ್ತು ಜಿನೇಂದ್ರ ಪೂಜೆಯಂ ಮಾಡುತ್ತುಂ ॥
ಮನವೊಸೆದು ಶೀಲವತಿಯುಂ
ಜನಕಜೆಯುಂ ಕೂಡಿ ದಿವಸಮಂ ನಡೆಯಿಸಿದರ್ ॥ ೮೩ ॥

ಇತ್ತಲಾ ಕೃತಾಂತವಕ್ತ್ರಂ ಪೋಗಿ ರಾಘವನಂ ಕಂಡು ಸೀತೆ ಕಲಿಸಿದ ಮಾತೆ ಲ್ಲಮಂ ಪೇೞೆ ಕೇಳ್ದು ಮೂರ್ಛೆವೋಗಿ ನೀಡಱಿಂದೆಚ್ಚತ್ತು ಮತ್ತಮತಿ ಪ್ರಲಾಪಂ ಗೆಯ್ಯೆ ಲಕ್ಷ್ಮಣಂ ಶೋಕ ವಿಕಲನಾಗೆ ಕೃತಾಂತವಕ್ತ್ರನವರ ಶೋಕಮನುಪ ಶಮಿಸುವುದುಂ ರಾಮಚಂದ್ರಂ ಚಂದ್ರಕಲಶನೆಂಬ ಸೀತಾ ಮಹತ್ತರನಂ ಕರೆದು—

ಚ ॥ ಜಿನಪತಿ ಪೂಜೆಯುಂ ಮುನಿಜನಕ್ಕೆ ಚತುರ್ವಿಧಮಪ್ಪ ದಾನಮುಂ ।
ಜನಕತನೂಜೆ ಪೇೞ್ದ ತೆಱದಿಂ ನೆಗೞ್ದಿಂದು ಪುರೋಹಿತಂಗೆ ಸ ॥
ಜ್ಜನ ಮಹಿತಂಗೆ ಪೇೞ್ದನಭಿರಾಮನಶೇಷ ಕಲಾ ಕಲಾಪ ಕೋ ।
ಕನದ ಭವಂ ಪರಾರ್ಥ ಚರಿತಂ ಪ್ರಥಿತಂ ಕವಿತಾಮನೋಹರಂ ॥ ೮೪ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣ ನಖಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರಚರಿತ ಪುರಾಣದೊಳ್
ಸೀತಾಪರಿತ್ಯಾಗ ವರ್ಣನಂ
ಪಂಚದಶಾಶ್ವಾಸಂ.

# ಷೋಡಶಾಶ್ವಾಸಂ

---

ಕಂ॥ ಶ್ರೀಕಾಂತಂ ವಿಶದ ಯಶ
ಶ್ಶ್ರೀಕಾಂತಂ ಚಂದ್ರಕಲಶನಂ ನಿಯಮಿಸಿದಂ॥
ಸ್ವೀಕೃತ ಸತ್ಸಂಗಂ ದೂ
ರೀಕೃತ ದೋಷಾನುಷಂಗನಭಿನವಪಂಪಂ ॥ ೧ ॥

ಅಂತು ನಿಯಮಿಸುವುದುಂ ಪುರೋಹಿತಂ ಚಂದ್ರಕಲಶನನುದಿನವಾ ಮಾರ್ಗದಿಂ ನೆಗೞುತ್ತುಮಿರ್ಪುದುಮಿತ್ತಲ್—

ಕಂ॥ ಆ ಸೀತೆ ಪೂರ್ಣಮೆನೆ ನವ
ಮಾಸಂ ಶ್ರವಣ ಪ್ರಸಕ್ತನೆನೆ ತುಹಿನ ಕರಂ॥
ವಾಸವ ನಿಭರಂ ಶ್ರಾವಣ
ಮಾಸದ ಪುಣ್ಣಿಮೆಯ ಪಗಲೊಳಮಳಂ ಪೆತ್ತಳ್ ॥ ೨ ॥

ಅಂತವಳಂ ಪೆತ್ತು ಮಹಾವಿಭೂತಿಯಿಂ ಜಾತೋತ್ಸವಮಂ ಮಾಡಿ ಶುಭ ದಿನ ಮುಹೂರ್ತದೊಳಿರ್ವರ್ ತನೂಭವರ್ಗಂ ಲವನುಂ ಕುಶನುಮೆಂದು ಪೆಸರ ನಿಟ್ಟು ಶುಕ್ಲಪಕ್ಷದ ಚಂದ್ರಮನಂತನುದಿನೋಪಚಯಮನಪ್ಪುಕೆಯ್ದು ಶೈಶವಮ ನಧಃಕರಿಸಿದಿಂಬೞಿಕ್ಕೆ—

ಕಂ॥ ಅವರಂ ಸಿದ್ಧಾರ್ಥಂ ಕಲಿ
ಸುವುದುಂ ಕಲ್ತರ್ ನಿರಂಕುಶರ್ ತಮ್ಮನ್ನರ್॥
ಭುವನದೊಳಿಲ್ಲೆಂಬಿನೆಗಂ
ಲವಾಂಕುಶರ್ ಕಲೆಗಳಂ ಚತುಷ್ಷಷ್ಟಿಗಳಂ ॥ ೩ ॥

ಮತ್ತಂ ಶಸ್ತ್ರಾಸ್ತ್ರವಿದ್ಯೆಗಳೆಲ್ಲಮಂ ನೆಱಿಯೆ ಕಲ್ತು ನವ ಯೌವನ ಪ್ರಾಪ್ತ ರಪ್ಪುದುಂ ವಜ್ರಜಂಘಂ ಶಶಿಮಾಲೆಯೆಂಬ ತನ್ನ ಮಗಳ್ವೆರಸು ಮೂವತ್ತಿರ್ವರ್ ಕನ್ನೆಯರಂ ಲವಂಗೆ ಕಲ್ಯಾಣೋತ್ಸವದಿಂ ಮದುವೆಯಂ ಮಾಡಿದಿಂಬೞಿಯುಮಂ ಕುಶಂಗೆ ಪೃಥ್ವೀಪುರಮನಾಳ್ವ ಪೃಥುಗಮಾತನರಸಿಯಪ್ಪಮೃತಮತಿಗಂ ಪುಟ್ಟಿದ ಕನಕಮಾಲೆಯಂ ಬೇಡಿ ಪೆರ್ಗಡೆಗಳನಟ್ಟುವುದುಮಾತನಿಂತೆಂದಂ—

ಕಂ॥ ಎನ್ನ ಮಗಳಂ ಮದೀಯ ಕು
ಲೋನ್ನತಿ ಪೆಱಿಸಿಂಗುವನ್ನವಜ್ಞಾತ ಕುಲಂ॥
ಗೆನ್ನನೆರೆದಟ್ಟಿದಂ ಗಡ
ತನ್ನಳವಂ ವಜ್ರಜಂಘನೇಂ ನಚ್ಚಿದನೋ ॥ ೪ ॥

ಎಂದು ಬಂದ ಪೆರ್ಗಡೆಗಳಂ ಗರ್ಜಿಸಿ ವಿಸರ್ಜಿಸುವುದುಮವರ್ ಬಂದವನ ದುರ್ವಿನಯ ವಚನಮಂ ಬಿನ್ನವಿಸೆ ವಜ್ರಜಂಘನತಿ ಕುಪಿತನಾಗಿ ಮೇಲೆತ್ತಿ ಬರ್ಪುದುಂ ವ್ಯಾಘ್ರರಥನೆಂಬ ಪೃಥುವಿನ ಪರಮ ಬಂಧು ಮುಳಿದು ಪೊಣರ್ಕೆಗೆ ಬರ್ಪುದು ಮವನನವಯವದೊಳೆ ಕಾದಿ ಪಿಡಿದು ಕಡುಕೆಯ್ದು ವಿಱಿ ಮೇಲೇೞ್ತರ್ಪುದುಂ ಪೃಥು ಕೇಳ್ದು ತಾನುಮಿದಿರೆತ್ತಿ ಬರ್ಪುದುಂ ವಜ್ರಜಂಘನಱಿದು ಪುಂಡರೀಕಿಣೀ ಪುರಕ್ಕೆ ತನ್ನ ಮಗಂಗೆ ಬೞಿಯನಟ್ಟುವುದುಮಾತನೊಡನೆ ಸಮಸ್ತ ಸಾಮಗ್ರೀ ಸಹಿತನಾಗಿ—

ಕಂ॥ ಕನ್ನೆಯನೀಯದ ಪೃಥುವಂ
ಬನ್ನಮನೆಯ್ದಿಸಲೊಡರ್ಚಿ ಮುನಿಸನುವಿಸೆ ತೋ॥
ರ್ಪಂ ನಮ್ಮ ಕೂರ್ಪನೆಂದು ಸ
ಮುನ್ನತ ವೀರ್ಯರ್ ಲವಾಂಕುಶರ್ ತಱಿಸಂದರ್ ॥ ೫ ॥

ಅಂತು ತಱಿಸಂದು ವಜ್ರಜಂಘನೊಳ್ ಬಂದು ಕೂಡುವುದುಮದಂ ಪೃಥು ಕೇಳ್ದು ವಂಗ ಮಗಧಾದಿ ವಿಷಯದರಸುಮಕ್ಕಳಂ ಕೂಡಿಕೊಂಡಸಂಖ್ಯಾತ ಬಲ ಸಮೇತನಾಗಿ ಪೊಱಮಟ್ಟೊಡ್ಡಿ ನೆಱಿದು ಕಾದಿ ಲವಾಂಕುಶರ್ಗೆ ಸೋಲ್ತೋಡು ವಾಗಳವರಱಿಯದ ಕುಲದವರ್ಗೆ ಬೆನ್ನೀವುದು ನಿಮಗೆ ಪಸುಗೆಯಲ್ತೆಂದು ಮೂದಲಿಸುತ್ತುಂ ಮುಟ್ಟಿವರ್ಪುದುಂ ಪೃಥು ಪೋಗಲೆಡೆಗೆಟ್ಟು ಕೈಮುಗಿದೆನ್ನ ಗೆಯ್ದ ದೋಷಕ್ಕೆ ಕ್ಷಮಿಯಿಸುವುದೆಂದು ವಿನತನಾಗೆ ಲವಾಂಕುಶರ್ ಕ್ಷಮಿಯಿಸುವುದು ಮಾತನವರಂ ತನ್ನ ಪೊೞಲ್ಗೆಯ್ದು ಕುಶಂಗೆ ಕನಕಮಾಲೆಯಂ ಕುಡುವುದುಮಾ ಪೊೞಲೊಳೊಂದು ದಿವಸಮಿರ್ದು ಮಱುದೆವಸಂ ವಜ್ರಜಂಘನಂ ಪುಂಡರೀಕಿಣೀ ಪುರಕ್ಕೆ ಕೞಿಪಿ ಲವಾಂಕುಶರ್ ದಿಗ್ವಿಜಯ ಪ್ರಯಾಣ ಭೇರಿಯಂ ಪೊಯಿಸಿ ವಂಗ ಮಗಧ ವಿಷಯಂಗಳಾದಿಯಾಗೆ ಸಕಲ ವಿಷಯಂಗಳಂ ಬಾಯ್ಕೇಳಿಸಿ ಗಂಗೆಯುಂ ದಾಂಟಿ ಕೈಲಾಸ ನಗದುತ್ತರ ದಿಗ್ಭಾಗಮನೆಯ್ದಿ ಸಿಂಧುವಂ ಮುಟ್ಟಿವಂದು ಪಶ್ಚಿಮ ಸಮುದ್ರ ತೀರಂಬಿಡಿದು ನಡೆದು ಕಪ್ಪಂಗೊಂಡು ಸಿದ್ಧ ದಿಗ್ವಿಜಯರ್ ಸಕಲ ರಾಜ ಸಮಾಜಂಬೆರಸಿ ಬರೆ ಮಗುೞ್ದು ಬಂದು ಮಹಾವಿಭೂತಿಯಿಂ ಪುಂಡರೀಕಿಣೀಪುರ ಮಂ ಪೊಕ್ಕು-ಸುಖದಿನಿರ್ಪುದುಮಿತ್ತಲ್—

ಕಂ ॥ ಜಾನಕಿಯಿರ್ದೆಡೆಯಂ ಹಿಂ
ಸಾನಂದಂ ತಿಳಿದು ನಾರದಂ ಬಂದು ನಭೋ ॥
ಯಾನದೊಳೆ ವಜ್ರಜಂಘ ಮ
ಹೀನಾಥನ ಪುಂಡರೀಕಪುರಮಂ ಪೊಕ್ಕಂ ॥ ೬ ॥

ಅಂತು ಪುರಮಂ ಪೊಕ್ಕು ಲವಾಂಕುಶರಂ ಕಾಣ್ಬುದುಮವರಿಚ್ಛಾಕಾರಂಗೆಯ್ದು ಮಣಿಮಯಾಸನಮಂ ಕುಡುವುದುಂ ರಾಮಲಕ್ಷ್ಮಣರಂತೆ ಮಹಾನುಭಾವರಾಗಿ ಮೆಂದು ಪರಸುವುದುಂ—

ಕಂ ॥ ಅವರ ಕುಲವಾವುದವರಾ
ವವನೀವಲ್ಲಭ ತನೂಭವರ್ ಪೌರುಷಮೇ ॥
ನವರ್ಗೆಂದತಿ ಕೌತುಕದಿಂ
ಲವಾಂಕುಶರ್ ಮಾಯಜೋಗಿಯಂ ಬೆಸಗೊಂಡರ್ ॥ ೭ ॥

ಅಂತು ಬೆಸಗೊಳ್ವುದುಂ ನಾರದನಿಂತೆಂದನವರಿಕ್ಷ್ವಾಕು ವಂಶದ ದಶರಥ ಮಹೀನಾಥನ ತನೂಭವರ್ ಜನಕನ ಮಗಳಪ್ಪ ಸೀತಾದೇವಿ ರಾಮದೇವರ ಮಹಾ ದೇವಿಯಾಗಿ ಸುಖ ಸಂಕಥಾ ವಿನೋದದೊಳಿರಲೊಂದು ದಿವಸಂ ದಶರಥ ಮಹಾ ರಾಜಂ ವೈರಾಗ್ಯ ಪರನಾಗಿ ದೀಕ್ಷೆಗೊಳಲುದ್ಯೋಗಂಗೆಯ್ದು ರಾಮನಂ ಕರೆದು ರಾಜ್ಯಪಟ್ಟಮಂ ಕಟ್ಟಲೆಂದಿರ್ಪುದುಮಾ ಸಮಯದೊಳ್ ಕೈಕಾಮಹಾದೇವಿಯದಂ ಕೇಳ್ದು ಬೇಗಂ ಬಂದು ದೇವರೆನಗೆ ಕಾರುಣ್ಯಂಗೆಯ್ದು ಮೆಚ್ಚಂ ದಯೆಗೆಯ್ವುದೆಂದು ಬಿನ್ನಪಂಗೆಯ್ವುದುಂ ತಪೋವಿಘ್ನಮಪ್ಪುದು ಪೂಜಗಾಗೆ ನಿನ್ನ ಮೆಚ್ಚಿದುದಂ ಬೇಡಿ ಕೊಳ್ಳೆಂಬುದುಂ ಭರತಂಗೆ ರಾಜ್ಯಮಂ ಕುಡುವುದೆನೆ ವಿಸ್ಮಯ ಚಿತ್ತನಾಗಿ ದಶರಥ ನೊಂದುಮಂ ನುಡಿಯಲಱಿಯದಿರ್ಪುದುಂ ತಂದೆಯ ನನ್ನಿಯಂ ಪಾಲಿಸಲೆಂದು ರಾಮಸ್ವಾಮಿ ಭರತಂಗೆ ರಾಜ್ಯಮನಿತ್ತು ದಂಡಕಾರಣ್ಯದೊಳಿರೆ ರಾವಣಂ ಸೀತಾ ದೇವಿಯಂ ಕಂಡಾಸಕ್ತನಾಗಿ ತನ್ನ ಕುಲಾಚರಣಂಗೆಟ್ಟು ಕಳ್ದುಕೊಂಡು ಪೋದ ನೆಂದಾ ವೃತ್ತಾಂತಮನಾದ್ಯಂತಮೆಯ್ದೆ ಪೇೞ್ದು ಮತ್ತಮಿಂತೆಂದಂ ರಾಮಲಕ್ಷ್ಮಣ ರಱಿದು ಸಮಸ್ತ ವಿದ್ಯಾಧರ ಸಹಿತ ಸುಗ್ರೀವ ಪ್ರಭಾಮಂಡಲ ಹನುಮತ್ಸಹಿತರಾ ಗೆತ್ತಿ ಪೋಗಿ ರಾವಣನಂ ಕೊಂದು ತ್ರಿಖಂಡ ಮಂಡಲಾಧಿಪತಿಗಳಾಗಿ ವಿಭೀಷಣಂಗೆ ಲಂಕೆಯ ರಾಜ್ಯಪಟ್ಟಂಗಟ್ಟಿ ದಿಗ್ವಿಜಯಮಂ ಸಾಧಿಸಿ ಮಗುೞ್ದು ಬಂದು ಅಯೋಧ್ಯೆ ಯೊಳ್ ಸುಖದಿಂ ರಾಜ್ಯಂಗೆಯ್ಯುತ್ತುಮಿರಲೊಂದು ದಿವಸಂ ರಾಮಂಗೆ ಜನಪದ ಜನಂಗಳ್ ನೆರೆದು ಬಂದು ಸೀತಾದೇವಿಯನೊಳಕೊಂಡಿರಲಾಗದೆಂದಪವಾದಮಂ ಪೊರ್ದಿಸಿ ನುಡಿಯೆ ಲಕ್ಷ್ಮೀಧರನಂ ಕರೆದು ಕಟ್ಟೇಕಾಂತದೊಳ್ ಪೇೞೆ ಲಕ್ಷ್ಮೀ ಧರಂ ಸೀತಾದೇವಿ ಮಹಾಸತಿಯುಂ ಗುಣವತಿಯುಮಪ್ಪುದಱಿಂದೀಗಳೀ ನುಡಿ

ನಿಮಗುಸಿರಲ್ ತಕ್ಕುದಲ್ತೆಂದು ಕರಂ ಪ್ರಾರ್ಥಿಸಿ ದೇವರೆನಗೆ ಕಾರುಣ್ಯಂಗೆಯ್ವೊಡಿ
ದೊಂದಂ ಕ್ಷಮಿಯಿಸುವುದೆಂದೊಡೆಮ್ಮಾಜ್ಞೆಯಂ ಮೀಱದಿರಿನ್ನುಮಿದರ್ಕೆ ನೀನೇನು
ಪಂ ನುಡಿಯದಿರೆಂದು ಲಕ್ಷ್ಮಣನಂ ಮಾರ್ನುಡಿಯದಂತು ಮಾಡಿ ಜನಪದದ
ಪೞಿಗೇವಯಿಸಿ ನೀವಾ ಪರಮೇಶ್ವರಿಯ ಗರ್ಭದೊಳಿರ್ದಂದು ತೊಱೆದು ಕೃತಾಂತ
ವಕ್ತ್ರನೆಂಬ ತನ್ನ ಪಡೆವಳನಂ ಕರೆದು ಪೋಗಿ ಅರಣ್ಯದೊಳೀಡಾಡಿ ಬಾಯೆಂದು
ಪೇೞ್ವುದುಮಾತಂ ತಂದೀಡಾಡಿ ಪೋಪುದುಂ ವಜ್ರಜಂಘಂ ಕಂಡನುಬಂಧ ಸ್ನೇಹ
ದಿಂದೊಡಗೊಂಡು ಬಂದು ಸೀತಾದೇವಿಗೆ ಬೆಸಕೆಯ್ಯುತ್ತಿರ್ಪುದುಂ ನೀಮುಂ ಪುಟ್ಟಿದಿ
ರೆಂಬುದನಱಿದು ಬಂದೆವಾವದುಕಾರಣದಿನವರ್ ನಿಮ್ಮ ತಂದೆವಿರಪ್ಪುದಱಿಂದವರ
ಪರಾಕ್ರಮ ಸೌಂದರ್ಯಮಂ ಪೋಲ್ವರಾಗಿಮೆಂದು ಪರಸಿದೆವೆಂಬುದುಮದಂ ಕೇಳ್ದು
ಕದನಕೇಳಿ ನಿರಂಕುಶನಂಕುಶನಿಂತೆಂದಂ—

ಕಂ॥ ತಕ್ಕರ ಮಾತಂ ಕೇಳದೆ
ತಕ್ಕೊರ್ಮೆಯನುೞಿದು ತೊಱೆದು ಗುಣವತಿಯಂ ಪಾ॥
ಪಕ್ಕಂಜದ ಜಡ ಮತಿಯಂ
ತಕ್ಕುದೆ ಪೊಗೞಲ್ಕೆ ರಾಮನಂ ನಿರ್ಗುಣನಂ ॥ ೮ ॥

ಎಂದಯೋಧ್ಯಾನಗರವಿಲ್ಲಿಗೆನಿತುಂಟೆಂಬುದುಂ ನಾರದಂ ನೂರಯ್ವತ್ತು
ಯೋಜನಮೆನೆ ಕೇಳ್ದಾ ಕ್ಷಣದೊಳೆ ಸಮಸ್ತ ಬಲಂಬೆರಸೆತ್ತಿ ನಡೆದು ಕತಿಪಯ ದಿನ
ಕ್ಕಯೋಧ್ಯೆಯನೆಯ್ದಿ [1]ಹಸ್ತ್ಯಶ್ವ ರಥ ಪದಾತಿ ಬಲಮನೊಡ್ಡಿ ಲವಾಂಕುಶರ್ ಸಿಂಧುರಾ
ರೂಢರಾಗಿ ಬಹಿಃಪುರದೊಳ್ ಬೀಡಂ ಬಿಡುವುದುಮಿತ್ತ ಸಿದ್ಧಾರ್ಥ ಕ್ಷುಲ್ಲಕ ನಾರದಂ
ಪ್ರಭಾಮಂಡಲನಲ್ಲಿಗೆ ಪೋಗಿ ಲವಾಂಕುಶರ ತೆಱನನೆಲ್ಲಮನಱಿಪುವುದುಮಾತಂ
ವ್ಯಾಕುಲ ಚಿತ್ತನಾಗಿ ಜನಕ ವಿದೇಹಿಗಳ್ವೆರಸು ಪುಂಡರೀಕಿಣೀಪುರಕ್ಕೆ ವರ್ಪುದುಂ
ಸೀತಾದೇವಿ ಕಂಡಿಧಿರೆೞ್ದು ತಂದೆಗಂ ತಾಯ್ಗಮಣ್ಣಂಗಮೆಱಗಿ ಪೊಡೆವಟ್ಟು
ಮನ್ನ್ಯುಮಿಕ್ಕು ದುಃಖಂಗೆಯ್ದಂಬೞಿಯಂ ಪ್ರಭಾಮಂಡಲಂ ರಾಮಲಕ್ಷ್ಮಣರ
ದೆಸೆಯಿಂ ಕೂಸುಗಳ್ಗೆ ಪ್ರಮಾದಮಕ್ಕುಮದಱಿಂದಯೋಧ್ಯೆಗೆ ಪೋಪಂ ಬಿಜಯಂ
ಗೆಯ್ಯಿಮೆಂದು ಸೀತಾದೇವಿಯುಂ ಲವಾಂಕುಶರರಸಿಯರಂ ತನ್ನ ವಿಮಾನಮ

1. ಬೀಡಂಬಿಟ್ಟು ರಾಮಲಕ್ಷ್ಮಣರಲ್ಲಿಗೆ ದೂತರನಟ್ಟೆ ಸಮಸ್ತ ನಾಡಂ ಬೀಡುಮನೊಪ್ಪಿಸಿ ಪೋಪು
ದಲ್ಲದೊಡೆ ಬಂದು ಕಾಣ್ಬುದೆಂದು ನುಡಿಯಿಮೆಂಬುದುಮಾ ದೂತರ್ ಬಂದು ರಾಮಲಕ್ಷ್ಮಣರಂ ಕಂಡು
ತದ್ವೃತ್ತಾಂತಮಂ ಬಿನ್ನವಿಸೆ ರಾಮಲಕ್ಷ್ಮಣರಾಕ್ಷೇಪಿಸಿ ಪರ ಚಕ್ರಮನೆಱಗಿಸುವಮಲ್ಲದಾಮೆಱಗುವುದೆಂಬ
ಮಾತಂ ನುಡಿವ ನಿಮ್ಮ ದುರ್ವೃತ್ತಿಕೆಯೊ ಮೇಣ್ ನಿಮ್ಮಾಳ್ದರ ಪ್ರಾಪ್ತಿಯೊ ಪೇೞಿಮೆಂದು ಬಂದ
ದೂತರಂ ಪರಿಭವಿಸಿ ಕಳೆವುದುಮವರ್ ಬಂದು ಲವಾಂಕುಶರ್ಗೆ ಬಿನ್ನಪಂಗೆಯ್ಯೆ ಕದನ ಕರ್ಕಶರ್
ಹಸ್ತ್ಯಶ್ವ ರಥ ಪದಾತಿ ಬಲಮನೊಡ್ಡಿ ಲವಾಂಕುಶರ್ ಸಿಂಧುರಾರೂಢರಾಗಿ ಬಹಿಃಪುರದೊಳ್ ನಿಲ್ವುದುಂ;
—ಎಂದು ಕ. ಖ. ಗ. ಘ. ಪುಸ್ತಕಗಳಲ್ಲಿದೆ.

ನೇಱಿಸಿಕೊಂಡು ನಭೋಮಾರ್ಗದಿಂ ಬಂದು ಲವಾಂಕುಶರೊಳ್ ಕೂಡುವುದು ಮಿತ್ತಲ್—

ಕಂ ॥ ಪರಚಕ್ರಮೆಮ್ಮ ಬಾಹಾ
ಪರಿಘಕ್ಕಿದಿರೆತ್ತಿ ಬಂದುದೆಂದತಿ ಕುಪಿತರ್ ॥
ಸೆರಗಂ ಪಾರದಯೋಧ್ಯಾ
ಪುರ ಗೋಪುರಮಂ ಬಲಾಚ್ಯುತರ್ ಪೊಱಮಟ್ಟರ್ ॥ ೯ ॥

ಅಂತು ಪೊಱಮಟ್ಟು ಬಂದು ಕೈವೀಸುವುದುಂ—

ಕಂ ॥ ಕುಲವಾಹಿನಿಯೊಳ್ ತಾಗುವ
ಕುಲ ವಾಹಿನಿಯಂತೆ ತಾಗಿ ಕಳೆದುದು ಜಯಮಂ ॥
ಗೆಲೆ ಕಾದಿ ರಾಮಲಕ್ಷ್ಮಣ
ಬಲಮಂ ಸಂಗ್ರಾಮದೊಳ್ ಲವಾಂಕುಶರ ಬಲಂ ॥ ೧೦ ॥

ಚ ॥ [1]ಲವನ ಬಲಕ್ಕೆ ರಾಘವ ಬಲಂ ಪೆಱಪಿಂಗೆ ಕಡಂಗಿ ರಾಘವಂ ।
ಲವನೊಳಿದಿರ್ಚೆ ರಾಘವನ ಕೇತನಮಂ ಧನುವಂ ವರೂಥಮಂ ।
ಲವನುಡಿಯೆಚ್ಚೊಡಿರ್ಪೆ ವಿರಥಂ ರಘುನಂದನನಾದನಾವನಾ ।
ಹವದೊಳಿದಿರ್ಚೆ ಜೀವಿಸುವವಂ ಲವನಂ ಜವನಂ ಮಹೀಭುಜಂ ॥ ೧೧ ॥

ಉ ॥ ಆಗಳೆ ಮತ್ತಮೊಂದು ರಥಮಂ ರಘುನಂದನನೇಱಿ ಮಾರ್ಗಣ ।
ಕ್ಕಾಗಸಮೆಯ್ದೆ ದಂತಿಸುವುದುಂ ತಱಿದೊಟ್ಟಿದನಂತವಂ ಮನೋ ॥
ವೇಗದಿನಸ್ತ್ರ ಸಂತತಿಗಳಿಂ ಸುರ ಸಂತತಿ ರಾಘವಂಗೆ ಚಾ ।
ಪಾಗಮದೊಳ್ ಲವಂ ಶತಸಹಸ್ರ ಗುಣಂ ಮಿಗಿಲಾದನೆಂಬಿನಂ ॥ ೧೨ ॥

ಅಂತು ಸಾಮಾನ್ಯಾಸ್ತ್ರಂಗಳಂ ಖಂಡಿಸೆ ರಾಘವಂ ದಿವ್ಯಾಸ್ತ್ರಂಗಳೊಳಂ ಕಾದಿ ಲವನಂ ಗೆಲಲ್ ನೆಱೆಯದೆ ವಿಸ್ಮಿತ ಚಿತ್ತನಾಗಿರ್ಪನಮಿತ್ತಲ್—

ಕಂ ॥ ಭರವಶದಿಂದಂ ಕುಶನೊಳ್
ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂ ॥
ಧರನೊಳ್ ನೆರೆವಂತಿರೆ ಶರ
ಪರಿಣತಿಯಂ ನೆಱೆಯೆ ಮೆಱೆದು ಕಾದುತ್ತಿರ್ದಂ ॥ ೧೩ ॥

ಅಂತಚಿಂತ್ಯ ಯುದ್ಧಂಗೆಯ್ವ ಸಮಯದೊಳ್—

1. ಅವರ._ಗ. ಘ.

ಕಂ ॥ ಪರಶುವಿನಿಂ ಲಕ್ಷ್ಮೀಧರ
ನುರಗೆಲನನನಂತವೀರ್ಯನಂ ಕುಶನಿಡೆ ಕಣ್ ॥
ತಿರುಗಿ ಬರೆ ಮಱಿದು ಮೆಯ್ಯಂ
ಪರವಶದಿಂ ಕೇತುದಂಡಮಂ ನೆರ್ವಿರ್ದಂ ॥ ೧೪ ॥

ಅಂತು ಮೂರ್ಛಿತನಾಗಿ—

ಕಂ ॥ ನೀಡಱಿನೆಚ್ಚಿತ್ತು ರಣ
ಕ್ರೀಡಾಸಕ್ತಂ ಸರಕ್ತಲೋಚನನಿವನಂ
ನಾಡಾಡಿಯ ಕೈದುಗಳಿಂ
ಕೂಡದು ಗೆಲಲೆಂದು ಚಕ್ರಿ ಚಕ್ರಮನಿಟ್ಟಂ ॥ ೧೫ ॥

ಇಡೆ ಕಡುಪಿಂದಂ ಕುಶನಂ
ನಡಲೊಲ್ಲದೆ ಚಕ್ರರತ್ನಮಿರ್ದೆಸೆಗಮದೇ ॥
ನೆಡೆಯಾಡುತಿರ್ದುದೋ ಸಾ
ವೊಡರಿಸದರನಾವ ಕೈದುಗಳುಮುರ್ಚುಗುಮೋ ॥ ೧೬ ॥

ಆಗಳಂಕುಶಂ ನಿರಂಕುಶನೆನಿಸಿ—

ಕಂ ॥ ಸವ್ಯಾಪಸವ್ಯಮೆಚ್ಚು ಪಿ
ತೃವ್ಯನ ಕೈವಿಡಿದ ವಿಜಯವಧುವಂ ಕೈಕೊಂ ॥
ಡವ್ಯಾಜ ಶೌರ್ಯನಂಕುಶ
ನವ್ಯುತ್ಪನ್ನನವೊಲಿಂತು ಮೊರೆದಪ್ಪುವನೇ ॥ ೧೭ ॥

ಅಂತಂಕುಶಂ ಗೆಲೆ ಕಾದೆ ಲಕ್ಷ್ಮಣಂ ತನ್ನ ಮನದೊಳ್ ನಮ್ಮ ಪುಣ್ಯಪ್ರಭಾವಂ ತೊಲಗಿದುದೀಗಳಿವರ್ ಬಲದೇವ ವಾಸುದೇವರಾದರೆಮುಗಜಯ್ಯರೆಂದು ಸುರಗತಿಯಂ ನಿಶ್ಚಯಿಸಿ ಸಮರ ಸಂರಂಭಮನುಱಿದಿರ್ಪುದುಮತ್ತ ಸಿದ್ಧಾರ್ಥ ಕ್ಷುಲ್ಲಕ ನಾರದಂ ನೀರದ ಪಥದೊಳಿರ್ದು ಬಲದೇವ ವಾಸುದೇವರೆಂಬ ಮಹಿಮೆ ನಿಮಗಲ್ಲದೆ ಪೆಱರ್ಗೆ ಸಲ್ವುದೆ ಪೇೞಿಮೆಂದು ನಗುತ್ತುಂ ಇವರ್ ಸೀತಾದೇವಿಯ ತನೂಜರ್ ಲವಾಂಕುಶರೆಂಬರ್ ತಮ್ಮ ಜನನಿಯುಂ ವಿಚಾರಿಸದೆ ಪೊರಮಡಿಸಿ ಕಳೆದಿರೆಂದು ಮುಳಿದು ನಿಮ್ಮನೀತೆಱದಿಂ ಕಾಣಲ್ ಬಂದರೆಂದಱಿಪುವುದುಮತಿ ಮುದಿತ ಹೃದಯನಾಗಿ—

ಕಂ ॥ ಧನುವಂ ದಿವ್ಯೇಷುಗಳಂ
ತನುತ್ರಮಂ ಕಳೆದು ಲಕ್ಷ್ಮಣಂ ದಶರಥರಾ ॥

ಮನನೆಯ್ದಿ ಬಂದು ಕೈಮುಗಿ
ದು ನಮನ್ಮಣಿಮಯ ಕಿರೀಟನಂದಿಂತೆಂದಂ ॥ ೧೮ ॥

ಈತಂಗಳಿರ್ವರುಂ ರೂ
ಪಾತಿಶಯದೊಳಸಮ ಶೌರ್ಯದೊಳ್ ನಿಮ್ಮನ್ನರ್ ॥
ಸೀತಾದೇವಿಯ ಸೂನುಗ
ಳೀ ತೇಜದಿಂ ಕಾಣಲೆಂದು ಬಂದರ್ ನಿಮ್ಮಂ ॥ ೧೯ ॥

ಎಂದು—

ಚ ॥ ತನಗೆ ಲವಾಂಕುಶಾಗಮನ ವೃತ್ತಕಮಂ ತಿಳಿವಂತು ಪೇೞ್ತ ತ ।
ನ್ನನುಜನದರ್ಕೆ ವಿಸ್ಮಯಮುಮುತ್ಸುಕ ಭಾವಮುಮಾದಮಪ್ಪುದುಂ ॥
ತನಯರನಾಗಳಂತೆ ಪಡೆದಂತನುರಾಗಮನಪ್ಪುಕೆಯ್ದು ಭೋಂ ।
ಕನೆ ರಥದಿಂದಮಂದಿೞಿದು ಬಂದನುಪೇಂದ್ರ ಯುತಂ ರಘೂದ್ವಹಂ ॥ ೨೦ ॥

ಆ ಸಮಯದೊಳ್—

ಉ ॥ ಆನೆಯ ಮೇಗಣಿಂದಿೞಿದು ಸಂಭ್ರಮದಿಂದಿದಿರ್ವಂದು ರಾಘವಂ ।
ಗಾನತರಾಗಿ ಮೌಳಿಮಣಿ ದೀಪ್ತಿ ಜಲಂಗಳಿನೀಯೆ ಪಾದ್ಯಮಂ ॥
ಸೂನುಗಳಪ್ಪೞಿಂ ತೆಗೆದು ತಪ್ಪಿಸಿದಂ ನಿಜದೇಹ ಕಾಂತಿ ಸಂ ।
ತಾನ ಮರುತ್ಪ್ರವಾಹಿನಿಯೊಳಿರ್ವರುಮಂದವಗಾಹಮಿರ್ಪಿನಂ ॥ ೨೧ ॥

ಕಂ॥ ಕ್ರಮದಿಂ ಲವಾಂಕುಶರ್ ವಿ
ಕ್ರಮ ಧನರತಿಹರ್ಷ ಭಾರದಿಂದೆಱಗೆ ನಿಜ ॥
ಕ್ರಮ ಯುಗಳಕ್ಕಾಶೀರ್ವಾ
ದ ಮುಖರ ಮುಖನಾದನಾ ಸುಮಿತ್ರಾಪುತ್ರಂ ॥ ೨೨ ॥

ಅಂತು ರಾಮಲಕ್ಷ್ಮಣರ್ ತನೂಭವರಂಗ ಪರಿಷ್ವಂಗ ಸುಖಾನುಭವದಿಂ ತಣಿದು ಲವಾಂಕುಶರ ಪುರುಷಾಕಾರಮಂ ಮನದೆ ಕೊಂಡಾನಂದಬಾಷ್ಪ ಜಲ ಲುಲಿತ ಲೋಚನರುಂ ರೋಮಾಂಚ ಕಂಚುಕಿತ ಶರೀರರುಮಾಗಿರ್ಪಿನಮತ್ತ ಸೀತಾದೇವಿ ತನೂಭವರ ಭುಜಬಲಮುಮಂ ತಂದೆವಿರೊಳೊಂದಿದುದುಮಂ ವಿಮಾನಾರೂಢೆ ಕಂಡು ಸಂತೋಷಂಬಟ್ಟು ವಿಯನ್ಮಾರ್ಗದಿಂ ಪುಂಡರೀಕಿಣೀಪುರಕ್ಕೆ ಪೋದಳಿತ್ತ ರಾಮಲಕ್ಷ್ಮಣ ಲವಾಂಕುಶರ್ ಪುಷ್ಪಕ ವಿಮಾನಮನೇಱಿ ಸುಗ್ರೀವ ವಿರಾಧಿತ ವಿಭೀಷಣ ಹನುಮದಂಗದಾದಿ ವಿಯಚ್ಚರರಿಂ ಪೆಱರುಮಱಿಕೆಯ ಭೂಮಿಗೋಚರ ಮಹೀಭುಜರಿಂ ಪರಿವೃತರಾಗಿ ಕೈಗೆಯ್ದು ಸಾಕೇತಪುರಮಂ ಪೊಕ್ಕು

ಸುಖದಿನಿರ್ಪುದುಮೊಂದು ದಿವಸಂ ಸುಗ್ರೀವ ಸುಷೇಣ ಜಾಂಬವ ಪ್ರಮುಖರಧಿರಾಜನಲ್ಲಿಗೆ ಬಂದವಸರಂಬಡೆದು—

ಕಂ ॥ ಪರ ವಿಷಯದೊಳಿರಿವುದೆ ಸ
ಚ್ಚರಿತ್ರೆಯಂ ದೇವ ಜಾನಕೀದೇವಿಯಯಸಿಂ ॥
ಬರಿಸುವುದಿದನೇಗೊಳ್ವುದು
ಕರುಣಿಪುದೆಮಗೆಂದು ವಿನಯಮಂ ಪ್ರಕಟಿಸಿದರ್ ॥ ೨೩ ॥

ಎಂದು ಬಿನ್ನವಿಸೆ ರಾಘವನಿಂತೆಂದಂ—

ಕಂ ॥ ಲೋಕಾಪವಾದ ಭಯದಿಂ
ದಾಕೆಯನಾಂ ಕಳೆದೆನವಗುಣಾರೋಪಣದಿಂ ॥
ಪೋ ಕಳೆದೆನೆ ಸಚ್ಚರಿತದೊ
ಳಾಕೆಗೆ ಸಮರಾರುಮಿಲ್ಲದುದನಾನಱಿವೆಂ ॥ ೨೪ ॥

ಅದಱಿನೆಲ್ಲರುಮಱಿಯೆ ದಿವ್ಯದಿನಪವಾದಮಂ ಕಳೆವಂತು ಮಾಳ್ಪುದೆಂಬುದುಮವರ್ ಮಹಾಪ್ರಸಾದಮೆಂದು ಬೀೞ್ಕೊಂಡು ಪುಂಡರೀಕಿಣೀಪುರಕ್ಕೆ ಬಂದು ಸೀತಾದೇವಿಯಂ ಕಂಡು ಕೈಮುಗಿದು ರಾಮದೇವರ ಕಾರುಣ್ಯಂಗೆಯ್ದು ತೆಱನನಱಿಪೆ ವೈದೇಹಿ ವಿಷಯವಿರಕ್ತೆ ದಿವ್ಯದೊಳ್ ಶುದ್ಧೆಯಾಗಿ ತಪಂಬಡುವೆನೆಂದು ಮನದೊಳ್ ಪರಿಚ್ಛೇದಿಸಿ ಪುಷ್ಪಕವಿಮಾನಮನೇಱಿ ಗಗನಮಾರ್ಗದಿಂ ಬಂದಯೋಧ್ಯೆಯನೆಯ್ದಿ ನೇಸರ್ ಪಡುವುದುಂ ಮಹೇಂದ್ರೋದ್ಯಾನದೊಳಿರುಳಂ ಕೞಿಪಿ ಮಱುದಿವಸಂ ರಾಘವನಂ ಕಂಡು—

ಮ ॥ ಅವಿಚಾರಂ ಕಳೆದೆನ್ನನಿಂತಿನಿತು ನೋವಂ ಮಾಡಿದಿರ್ ದೇವರೆಂ ।
ದು ವಿಷಾದಂ ಮಿಗೆ ನೊಂದು ಸೀತೆ ನುಡಿದಳ್ ತಾನಂತದಂ ಕೇಳ್ದು ರಾ ॥
ಘವದೇವಂ ಜನತಾಪವಾದ ಭಯದಿಂದೀ ಖೇದಮಂ ಮಾಡಿದೆಂ ।
ಭುವನ ಖ್ಯಾತಮೆನಿಪ್ಪ ನಿನ್ನ ಚರಿತಂ ಪೇೞ್ಬಾರ್ಗಮಜ್ಞಾತಮೋ ॥ ೨೫ ॥

ಅದಱಿಂ ಲೋಕ ಪ್ರತ್ಯಯಮಪ್ಪಂತು ಮಾಳ್ಪುದೆನೆ ಮಹಾಪ್ರಸಾದಮೆಂದು ಪಿರಿದಪ್ಪುದೊಂದು ಕೊಂಡಮನಗುೞಿಸಿ ಚಂದನದಗರುವಿನಿಂಧನಂಗಳುಮಂ ಸುಗಂಧ ದ್ರವ್ಯಂಗಳುಮನಿಕ್ಕಿ ಕಿರ್ಚಂ ತಗುಳ್ಚುವುದು ಮಾ ಸಮಯದೊಳ್ ಸಕಲಭೂಷಣ ಭಟ್ಟಾರಕರ ಕೇವಲಜ್ಞಾನ ಪೂಜೆಗೆ ಬರ್ಪ ದೇವನಿಕಾಯದೊಳ್ ದೇವೇಂದ್ರಂ ಸೀತಾದೇವಿಯ ಮಹೋಪಸರ್ಗಮನಱಿದು ಮೇಘಕೇತನನೆಂಬ ದೇವನಂ ನೀನೀ ಮಹಾಸತಿಯುಪಸರ್ಗಮಂ ಪಿಂಗಿಸಿ ಬರ್ಪುದೆಂದು ನಿಯಮಿಸಿ

ಪೋದನಿತ್ತ ಮೇಘಕೇತನನುರಿಯುತ್ತಿರ್ದ ಕುಂಡದ ಸಮೀಪದ ವಿಯನ್ಮಂಡಲದೊಳ್ ವಿಮಾನಾರೂಢನವಲೋಕಿಸುತ್ತಿರ್ದನಾ ಪ್ರಸ್ತಾವದೊಳ್ ಸೀತಾದೇವಿ ತದಗ್ನಿಕುಂಡ ದೇಱಯಂ ಮೆಟ್ಟಿ—

ಚ ॥ ನೆರೆದ ವಿಯಚ್ಚರಾಮರ ನರ ಪ್ರಮುಖರ್ಕಳುಮೆಯ್ದೆ ಕೇಳೆ ಸು ।
ಸ್ವರಮಿಱಕೆಯ್ಯ ಕೋಕಿಲ ಕಲ ಸ್ವರಮಂ ನುಡಿದಳ್ ವಸುಂಧರಾ ॥
ವರನೆನಿಸಿರ್ದ ರಾಘವನೊಳಲ್ಲದೆ ರಾವಣನಾದಿಯಾಗೆ ಮಿ ।
ಕ್ಕರೊಳಱಪಂ ಮನಕ್ಕೆ ತರೆ ಮಾರಣಮಕ್ಕೆನಗೀ ಕೃಶಾನುವಿಂ ॥ ೨೬ ॥

ಎಂದತಿ ಪ್ರತಿಜ್ಞೆಗೆಯ್ದು ಪಂಚಪರಮೇಷ್ಠಿಗಳ್ಗೆ ನಮಸ್ಕಾರಂಗೆಯ್ದು ಧಗದ್ಧಗಿಸಿ ತಿಣ್ಣಮುರಿಯುತ್ತಿರ್ದ ಕುಂಡದೊಳಗೆ ಮೆಯ್ಯನೀಡಾಡೆ—

ಮ ॥ ಮರವಟ್ಟಿತ್ತು ಮರುದ್ಗಣಂ ಪರಿಜನಂ ಬೆರ್ಚಿತ್ತು ಶೋಕಾಗ್ನಿಯಿಂ ।
ದುರಿದತ್ತಾಪ್ತಜನಂ ಲವಾಂಕುಶರೊಳಾದತ್ತಾಕುಲಂ ವಿಹ್ವಲಂ ॥
ಪಿರಿದಾದತ್ತು ರಘೂದ್ವಹಂಗೆ ಪರಿತಾಪಂ ಲಕ್ಷ್ಮಣಂಗಾಗಳು ।
ಬ್ಬರಮಾದತ್ತು ಲತಾಂಗಿ ಸೀತೆ ಪುಗೆ ತೇಜಃಪಿಂಡಮಂ ಕುಂಡಮಂ ॥ ೨೭ ॥

ಅಂತು ಮಹಾಸತಿ ನೀರಂ ಪುಗುವಂತೆ ಕಿರ್ಚಂ ಪುಗುವುದುಂ—

ಕಂ ॥ ಜಳದೇವತೆ ಕೋಡುವ ತಿಳಿ
ಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿ ॥
ಶ್ಚಳಮಿರೆ ಮನದೊಳ್ ಜಿನಪತಿ
ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ ॥ ೨೮ ॥

ಸತಿಯ ವಿಶುದ್ಧಾಚಾರಂ
ಹುತಾಶನ ಪ್ರಬಲ ದಾಹಿಕಾ ಶಕ್ತಿಯುಮಂ ॥
ಪ್ರತಿಬಂಧಿಸಿದುದು ಚೋದ್ಯಮೆ
ಪತಿವ್ರತಾಗುಣದ ಮಹಿಮೆ ಸಾಧಾರಣಮೇ ॥ ೨೯ ॥

ಆಗಳಾಖಂಡಲನ ಬೆಸದಿನಿರ್ದ ದೇವನಾ ಕುಂಡಮನೆ ಪದ್ಮಷಂಡಂ ಮಾಡಿ ಯಲ್ಲಿ ಸಹಸ್ರ ದಳ ಸುವರ್ಣ ತಾಮರಸಮುಮದಱ ಕರ್ಣಿಕೆಯ ಮೇಲೆ ಸಿಂಹಾಸನ ಮುಮಂ ವಿಗುರ್ವಿಸಿ ತನ್ನ ದೇವಿಯರ್ಕಳಿನಾ ಸರೋವರದೊಳಿರ್ದ ಸೀತಾದೇವಿಯ ನೆತ್ತಿ ತರಿಸಿ ಸಿಂಹಾಸನದೊಳಿರಿಸಿ ತಾನಾಕಾಶದೊಳಿರ್ದು ಲೋಕಕೆಲ್ಲಮಾಶ್ಚರ್ಯ ಮಾಗೆ ಪೂವಿನ ಮಱೆಯಂ ಕಱೆವುದುಮುದಂ ಕಂಡು—

ಕಂ ॥ ಜನಮೆಲ್ಲಮೊಂದೆ ಕೊರಲೊಳ್
ಜನಕಾತ್ಮಜೆಯಂ ಪತಿವ್ರತಾಗುಣ ಮಣಿಮಂ ॥
ಘನೆಯಂ ಪೊಗಟ್ದುದು ಸನ್ಮಾ
ರ್ಗ ನಿರತರಂ ಮೆಚ್ಚಿ ಪೊಗಟದಿರ್ಪರುಮೊಳರೇ ॥ ೩೦ ॥

ಪೊಂಜಲಗೆಯಂತೆ ಕೀರ್ತಿಗಂ
ದಂ ಜಾನಕಿ ಶುದ್ಧೆಯಾಗೆ ಜನನಿಯ ಕೆಲದೊಳ್ ॥
ಸಂಜಾತ ಪುಲಕ ಕಲಿಕಾ
ರಂಜಿತ ತನುಗಳ್ ಲವಾಂಕುಶರ್ ಕುಳ್ಳಿರ್ದರ್ ॥ ೩೧ ॥

ಮ॥ ಸ್ರ॥ ರಾಮಂ ರೋಮಾಂಚಮಂ ತಾಳ್ದಿದನಣಮೊಸೆದಂ ಲಕ್ಷ್ಮಣಂ ಬಂಧುವರ್ಗಂ ।
ಪ್ರೇಮಕ್ಕಾವಾಸಮಾದತ್ತಖಿಲ ಪರಿಜನಂ ಹರ್ಷಮಂ ತಾಳ್ದಿದತ್ತು ॥
ದ್ದಾಮಂ ಪೊಣ್ಮಿತ್ತು ದೇವಾನಕ ರುತಿ ಕುಲ ವೃದ್ಧರ್ಕಳಿಟ್ಟಾಡಿದರ್ ದಿ ।
ವ್ಯಾಮೋದಂ ಗಂಧವಾಹಂ ಸುಟಿದುದು ಪರಸಿತ್ತಟ್ಕಿಱಿಂ ರಾಜಲೋಕಂ॥೩೨॥

ಆಗಳ್ ರಾಮಸ್ವಾಮಿ ಸೀತಾದೇವಿಯ ಸಮಾಪಕ್ಕೆ ಬಂದು—

ಕಂ ॥ ಕ್ಷಮಿಯಿಸುವುದೆನಗೆ ನೀಂ ಮು
ನ್ನಮಿರ್ದ ತೆಱದಿಂ ಮದೀಯ ವಲ್ಲಭೆಯಾಗಿ ॥
ರ್ದವ್ಯತಾಂಶು ವದನೆ ಸಾಮ್ರಾ
ಜ್ಯ ಮಹಿಮೆಯೊಳ್ ನೆರೆದು ಪಡೆಯ ಸುಖ ಸಂಪದಮಂ ॥ ೩೩ ॥

ಎಂದು ನುಡಿಯೆ ಸೀತಾದೇವಿ ರಾಮಸ್ವಾಮಿಗಿಂತೆಂದಳೆನ್ನ ಮುನ್ನುಪಾರ್ಜಿಸಿದ ಕರ್ಮಮೆನಗೆ ಪಿರಿದಪ್ಪ ದುಃಖಮಂ ಮಾಡಿದೊಡಾ ಕರ್ಮಕ್ಕೆ ಮುಳಿವೆನಲ್ಲದುಟಿದವರ್ಗದೇಕೆ ಮುಳಿವೆಂ ಕೇಡುಳ್ಳ ಸಂಸಾರದೊಳಪ್ಪುದೇಂ ಕೇಡಿಲ್ಲದ ಮೋಕ್ಷ ಸುಖಕ್ಕೆ ಕಾರಣಮಪ್ಪ ತಪಮಂ ಕೈಕೊಳ್ವೆನೆಂದು ತನ್ನ ಸಹಸ್ರ ಕುಂತಲಂಗಳಂ ಪಱಿದು ಮುಂದಿಕ್ಕುವುದುಂ—

ಕಂ ॥ ಸತಿಯ ಪರಿಚ್ಛೇದಮೆ ತನ
ಗತಿ ದುಃಖಮನುಂಟುಮಾಡೆ ಮೋಹ ಗ್ರಹ ಪೀ ॥
ಡಿತನಾಗಿ ರಾಘವಂ ಮೂ
ರ್ಛಿತನಾದಂ ಪ್ರಿಯ ವಿಯೋಗಮಂ ಸೈರಿಪರಾರ್ ॥ ೩೪ ॥

ಅಂತು ಮೂರ್ಛಿತನಾಗಿ ಶೀತಲ ಕ್ರಿಯೆಗಳಿನೆಂತಾನುಮೆಚ್ಚತ್ತನನ್ನೆಗಮಿತ್ತ ವೈದೇಹಿ [1]ಪೃಥುಮತಿ ಕಂತಿಯರ ಪಕ್ಕದೆ ತಪಂಗೊಂಡು ಮಹೇಂದ್ರೋದ್ಯಾನ ವನಕ್ಕೆ ಪೋಗಿ ಸಕಲ ಭೂಷಣ ಕೇವಲಿ ಭಟ್ಟಾರಕರ ಸಭೆಯೊಳಿರ್ಪುದುಂ—

ಕಂ ॥ ಮುಚ್ಚೆದಿಳಿದರಸಿಯೊಳ್ ಬಗೆ
ಬೆಚ್ಚಿರೆ ಶೀಲವತಿ ಸೀತೆ ಪೂಣ್ದುದನೆಂತುಂ ॥
ಪುಚ್ಚಟಿಯ[2]ಳೆನ್ನದಟ್ಟಿಪಿಂ
ಚೆಚ್ಚರಮಾ ಸಭೆಗೆ ರಾಘವಂ ಬಟಿಸಂದಂ ॥ ೩೫ ॥

ಅಂತತಿ ವ್ಯಾಮೋಹದಿಂ ಬಂದು ಸಕಲ ಲೋಕಾಧಿಪರಿಂ ಪರಿವೃತರಾಗಿರ್ದ ಸಕಲಭೂಷಣ ಕೇವಲಿಗಳ ಸಭೆಯನೆಯ್ದುಲೊಡಂ ರಾಮನ ಮೋಹನೀಯ ಕರ್ಮ ಮುಪಶಮಕ್ಕೆ ಸಲ್ವುದುಮಾನೆಯಿಂದಿಟಿದು ಬಂದು ಬಲಗೊಂಡು ಪೊಡೆವಟ್ಟು ಕುಳ್ಳಿರ್ದನಾ ಸಭೆಯೊಳ್ ಪೃಥುಮತಿ ಗಂತಿಯರ ಸಮಕ್ಷದೊಳ್ ದೀಕ್ಷೆಗೊಂಡಿರ್ದ ಸೀತಾದೇವಿಯುಂ ಕಂಡು—

ಮ ॥ ತ್ರಿದಶರ್ ಪೂಜಿಸೆ ಮಾನವರ್ ಪೊಗಟೆ ಶೌಚಾಚಾರಮುಂ ದಿವ್ಯದಿಂ ।
ವಿದಿತಂಮಾಡಿದರಾರ್ ಮಹಾಸತಿಯರಾರ್ ನಿಮ್ಮಂದದಿಂ ಮೋಕ್ಷಸಂ ॥
ಪದಮುಂ ಮಾಡುವ ದೀಕ್ಷೆಗೊಂಡರೆನುತುಂ ಕೈಕೊಂಡು ಲಕ್ಷ್ಮೀಧರಂ ।
ಮೊದಲಾಗೆಲ್ಲರುಮಟ್ಟಿಜಿಂದೆಜಗಿ ಸೀತಾ ಸಂಸ್ತವಂ ಮಾಡಿದರ್ ॥ ೩೬ ॥

ಅಂತು ಗುಣಸ್ತವನಂಗೆಯ್ದು ದಿವಿಜ ಸಭೆಯೊಳಿರ್ದು ಧರ್ಮಮುಂ ಕೇಳ್ದಿಂ ಬಟಿಕ್ಕೆ ವಿಭೀಷಣಂ ಸಕಲಭೂಷಣ ಭಟ್ಟಾರಕರ್ಗೆ ಕರ ಕಮಲಮುಂ ಮುಗಿದು ಪೂರ್ವ ಜನ್ಮದೊಳ್ ರಾಮನಾವುದೊಂದು ಪುಣ್ಯಮನುಪಾರ್ಜಿಸಿ ಸಕಲ ವಿದ್ಯೆಗಳಂ ಕಲ್ತು ಮಹಾವಿಭವ ಸಹಿತನಾದಂ ಮತ್ತಂ ಶೌಚಾಚಾರ ಪರಾಯಣನಪ್ಪ ವಿದ್ಯಾ ಧರ ವಲ್ಲಭಂ ರಾವಣನಾವ ಪಾಪಂಗೆಯ್ದನಾಗಿ ಸೀತಾದೇವಿಗೆ ಮರುಳ್ಗೊಂಡು ಪೋದನಾರ್ಗಮಸಾಧ್ಯನುಮಭೇದ್ಯನುಂ ಜಗದ್ವಿಜಯಿಯುಮಪ್ಪ ರಾವಣನಂ ಲಕ್ಷ್ಮಣನಾವುದೊಂದು ಪುಣ್ಯಂಗೆಯ್ದನಾಗಿ ಸಂಗ್ರಾಮದೊಳ್ ಕೊಂದು ಭರತ ತ್ರಿಖಂಡ ಮಂಡಲಾಧಿಪತಿಯಾದನದೆಲ್ಲಮುಂ ಬೆಸಸಿಮೆನೆ—

ಕಂ ॥ ಮದನಫಣಿ ನಿರ್ವಿಷೀಕರ
ಣ ದಿವ್ಯ ಮಂತ್ರ ಸ್ವನಂ ಜರಾಮರಣ ಶಿಲಾ ॥
ವಿದಳನ ಟಂಕಧ್ವನಿ ಪೊ
ಣ್ಮಿದತ್ತು ಕೇವಲಿಯ ಮಧುರ ಗಂಭೀರ ರವಂ ॥ ೩೭ ॥

---

1. ಪೃಥ್ವೀಮತಿ. ಗ. ಘ. 2. ದೆನ್ನ. ಕ. ಖ ಗ. ಘ.

ಈ ಭರತದ ಯಕ್ಷಪುರದ ನಯದತ್ತನೆಂಬ ಪರದಂಗವಾತನ ಪರದಿತಿ ಸುನಂದೆಗಂ ಪ್ರಥಮ ಜನ್ಮದೊಳ್ ಧನದತ್ತನೆಂಬ ತನೂಜನಾಗಿ ಜಿನಧರ್ಮಮಂ ಬಿಡದೆ ನಡೆದು ಜೀವಿತಾವಧಿಯೊಳ್ ಸೌಧರ್ಮಕಲ್ಪ ಗತನಾಗಿ ತದಾಯುರವಸಾನದೊಳ್ ಶ್ರಾವಸ್ತಿಪುರದ ಪರದಂ ಸಮ್ಯಗ್ದೃಷ್ಟಿ ಮೇರುವೆಂಬಂಗವಾತನ ಪರದಿತಿ ಧಾರಿಣಿಗಂ ಪದ್ಮರುಚಿವೆಸರ ಮಗನಾಗಿ ಜಿನಮಾರ್ಗದೊಳ್ ನಡೆದು ಕಡೆಯೊಳೀಶಾನಕಲ್ಪದೊಳ್ ಪುಟ್ಟಿ ತದಾಯುರಬ್ಧಿಯಂ ತವೆ [1]ಪೀರ್ದಲ್ಲಿಂ ಬಂದಪರವಿದೇಹದ ವಿಜಯಾರ್ಧ ನಗದ ನಂದ್ಯಾವರ್ತಪುರಮನಾಳ್ವ ನಂದೀಶ್ವರನೆಂಬ ವಿದ್ಯಾಧರಂಗವಾತನರಸಿ ಕನಕಾಭೆಗಂ ನಯನಾನಂದನೆಂಬ ನಂದನನಾಗಿ ವಿದ್ಯಾಧರರಾಜ್ಯ ಸುಖಮನನುಭವಿಸಿ ಭೋಗ ನಿರ್ವೇಗದಿಂ ತಪಸ್ಸ್ಥನಾಗಿ ಪಲ ಕಾಲಂ ತಪಂಗೆಯ್ದು ಸಮಾಧಿಯಂ ಮುಡಿಪಿ ಮಾಹೇಂದ್ರ ಕಲ್ಪಕ್ಕೆ ಪೋಗಿ ಸುರ ಲೋಕ ಸುಖಮನನುಭವಿಸಿ ತದನಂತರಮಲ್ಲಿಂ ಬಂದು ಪೂರ್ವವಿದೇಹದ ಕ್ಷೇಮ ಪುರಮನಾಳ್ವ ವಿಮಲವಾಹನ ಮಹೀಭುಜಂಗವಾತನಂತಃಪುರ ಪ್ರಧಾನೆ ಪದ್ಮಾವತಿಗಂ [2]ಶ್ರೀಚಂದ್ರನೆಂಬ ಕುಮಾರನಾಗಿ ರಾಜ್ಯದೊಳ್ ನಿಂದು ಬಹುಸಹಸ್ರ ಸಂವತ್ಸರಂ ರಾಜ್ಯಂಗೆಯ್ದು ಸಮಾಧಿಗುಪ್ತರೆಂಬಾಚಾರ್ಯರ ಸಮಕ್ಷದೊಳ್ ದೀಕ್ಷೆಗೊಂಡು ಗ್ರೋಗ್ರತಪಂಗೆಯ್ದು ಬ್ರಹ್ಮಕಲ್ಪಕ್ಕೆ ಪೋಗಿ ಬಂದೀಗಳ್ ರಾಮದೇವನಾದನೆಂಬುದುಂ—

ಕಂ ॥ ಬಲಭದ್ರರಾಮ ಜನ್ಮಾ
ವಲಿಯಂ ತಿಳಿವಂತು ಪೇೞ್ದು ಲಕ್ಷ್ಮಣನ ಭವಾ ॥
ವಲಿಯನಮೃತಾಬ್ಧಿ ವೀಚೀ
ಕಲ ಸ್ವರಂ ನೆಗೞೆ ಭುವನ ಗುರುವಿಂತೆಂದಂ ॥ ೩೮ ॥

ಮುನ್ನಂ ಪೇೞ್ದ ಯಕ್ಷಪುರದ ನಯದತ್ತನೆಂಬ ಪರದಂಗೆ ವಸುದತ್ತನೆಂಬ ಮಗನಾಗಿ ಕಾಲಂಗೆಯ್ದು ಮೃಣಾಳಕುಂಡಲ ಪುರಮನಾಳ್ವ ವಿಜಯಸೇನ ಮಹೀನಾಥನ ಮಗಂ ಶಂಭುವೆಂಬಂಗೆ ಶ್ರೀಭೂತಿಯೆಂಬ ಪುರೋಹಿತನಾಗಿ ಸನ್ಮಾರ್ಗದೊಳ್ ನಡೆದು ನಿಜಸ್ವಾಮಿಯಪ್ಪ ಶಂಭುವಿನ ಕೈಯೊಳ್ ಕನ್ಯಾನಿಮಿತ್ತಂ ಸತ್ತು ದೇವಗತಿವಡೆದಲ್ಲಿಂ ಬಂದು ಪ್ರತಿಷ್ಠಾಪುರದೊಳ್ ಪುನರ್ವಸುವೆಸರ ವಿದ್ಯಾಧರನಾಗಿ ತಪಂಗೆಯ್ದು ದೇವಗತಿಯನಪ್ಪುಕೆಯ್ದಲ್ಲಿಂ ಬಂದೀಗಳ್ ಲಕ್ಷ್ಮಣನಾದನೆಂದು ಬೆಸಸಿ ಬೞಿಯಂ ರಾವಣನ ಭವಾವಳಿಯನಿಂತೆಂದು ಬೆಸಸಿದರಾ ಮೃಣಾಳಕುಂಡಲ ಪುರಮನಾಳ್ವ ವಿಜಯಸೇನಂಗಂ ರತ್ನಮಾಲೆಗಂ ಪುಟ್ಟಿ ಶಂಭುವೆಂಬ ದಾರಕನುಂ ಜಿನಧರ್ಮ ನಿರ್ಧಾರಕನುಮಾಗಿ ಮದ್ಯ ಮಧು ಮಾಂಸ ಸೇವನೆಗೆಯ್ದು ನರಕ ತಿರ್ಯಗಾದಿ ಗತಿಗಳೊಳ್ ಪಲಕಾಲಂ ತಿರಿತಂದೆಂತಾನುಂ ಪಾಪೋಪಶಮಮಪ್ಪುದುಂ

1. ಬಯಸ್ತು. ಚ. 2. ಚಂದ್ರಾಭ. ಚ.

ಕುಶಧ್ವಜನೆಂಬ ಪಾರ್ವಂಗವಾತನ ಪಾರ್ವತಿಗಂ ಭಾಸಕುಂಡಲನೆಂಬ ಮಗನಾಗಿ ಚಿತ್ರಸೇನ ಮುನಿ ಸಮೀಪದೊಳ್ ಜಾತರೂಪ ಧರನಾಗಿ ನಿಷ್ಠೆಯಿಂ ನೆಗಟುತ್ತುಂ ವಂದನಾನಿಮಿತ್ತಂ ಸಮ್ಮೇದ ಗಿರೀಂದ್ರದ ಜಿನೇಂದ್ರ ಭವನಂಗಳ್ಗೆ ಪೋಗುತ್ತುಂ ಕನಕನೆಂಬ ವಿದ್ಯಾಧರನ ವಿಭೂತಿಯಂ ಕಂಡು ವಿಸ್ಮಿತನಾಗಿ ಮದೀಯ ತಪಃಫಲದಿ ನೆನಗವಿೂ ವಿಭೂತಿ ಸಮನಿಸುವುದಕ್ಕೆಂದು ನಿಧಾನ ಪೂರ್ವಕಂ ತಪಂಗೆಯ್ದು ಕಾಲ ಪ್ರಾಪ್ತನಾಗಿ ಸನತ್ಕುಮಾರ ಕಲ್ಪಕ್ಕೆ ಪೋಗಿ ಬಂದೀಗಳ್ ತ್ರಿಖಂಡ ಮಂಡಲಾಧಿ ಪತಿಯಪ್ಪ ರಾವಣನಾದಂ—

ಕಂ॥ ಎಂದಱಿಪಿ ದಶಾಸ್ಯನ ಭವ
ಸಂದೋಹಮನಖಿಲ ಭುವನ ವಂದ್ಯಂ ಸೀತಾ ॥
ಸುಂದರಿಯ ಭವಮನಱಿಪಲ್
ಮಂದರ ಧೈರ್ಯಂ ಮುನೀಂದ್ರನಂದಿಂತೆಂದಂ ॥ ೩೯ ॥

ಈ ಭರತದ ಯಕ್ಷಪುರದ ಸಾಗರದತ್ತನೆಂಬ ಪರದಂಗವಾತನ ಪರದಿತಿ ರತ್ನ ಪ್ರಭೆಗಂ ಗುಣವತಿಯೆಂಬ ಮಗಳಾಗಿ ಮಿಥ್ಯಾಭಾವನೆಯಿಂ ಕಾಲಂಗೆಯ್ದೆನಿತಾನುಂ ಕಾಲಂ ತಿರ್ಯಗ್ಗತಿಯೊಳ್ ತಿರಿತಂದು ಕಡೆಯೊಳ್ ಪಿಡಿಯಾಗಿ ಪುಟ್ಟಿ ತೊಟಲುತ್ತುಂ ಗಂಗೆಯ ತಡಿಯೊಳೊರ್ಮೆ ತಣ್ಣೀರುಣಲ್ ಪೋಗಿ ಕೆಸರೊಳ್ ಬಿಟ್ಟು ಪೊಱಮಡ ಲಾಱದಿರ್ದ ಸಮಯದೊಳ್ ನಭೋಂಗಣದೊಳ್ ಪೋಗುತ್ತುಂ ತರಂಗತಮನೆಂಬ ವಿದ್ಯಾಧರಂ ಕಂಡು ಸಮಿೂಪಕ್ಕೆ ಬಂದು ಪಂಚ ನಮಸ್ಕಾರಮಂ ಪೇಟ್ವುದುಮುಪ ಶಮ ಚಿತ್ತದಿಂ ಸತ್ತು ಶ್ರೀಭೂತಿಪುರೋಹಿತಂಗವಾತನ ಭಾರ್ಯೆ ಸರಸ್ವತಿಗಂ ವೇದ ವತಿಯೆಂಬ ಮಗಳಾಗಿ ತಮ್ಮ ಮನೆಗೆ ಚರ್ಯಾಮಾರ್ಗದಿಂ ಬಂದ ಋಷಿಯರಂ ದೂಷಿಸಿ ನುಡಿಯೆ ತಂದೆ ಬಾರಿಸಿ ಜಿನಧರ್ಮಸ್ವರೂಪಮಂ ತಿಳಿಯೆ ಪೇೞೆ ಕೇಳ್ದು ಜೈನಮಾರ್ಗದಿಂ ನಡೆಯುತ್ತುಮಿರಲಾಕೆಯಂ ಮೂರನೆಯ ಭವದೊಳ್ ರಾವಣ ನಾಗಿ ಪುಟ್ಟುವ ಶಂಭು ಕಂಡು ಕಣ್ಸೋಲ್ತು ಬೇಡಿಯಟ್ಟುವುದುಂ ಶ್ರೀಭೂತಿ ಮಿಥ್ಯಾ ದೃಷ್ಟಿಯೆಂದು ಕೂಸುಗುಡಲೊಲ್ಲದಿರೆ ಮುಳಿದಾತನಂ ಕೊಲಿಸಿ ಮಗುೞ್ದುಮಾ ಶಂಭುವಾಕೆಯಂ ಬೇಡುವುದುಮೊಡಂಬಡದೆ ಜನಕ ಶೋಕ ವೇಗದಿನಾತಂಗೆ ಮುಱು ಮೆಯ್ಯೊಳಾದೊಡಂ ವಿನಾಶ ಹೇತುವಾಗಿ ಜನಿಯಿಸುವೆನಕ್ಕೆಂದು ನಿಧಾನಪೂರ್ವಕಂ ತಪಂಗೆಯ್ದು ಕೞಿದು [1]ಬ್ರಹ್ಮಕಲ್ಪದೊಳ್ ಪುಟ್ಟಿ ಬಂದು ಚಿತ್ರೋತ್ಸವೆಯೆಂಬಳಾಗಿ ಪುಟ್ಟಿ ಕ್ರಮದಿನೀಗಳ್ ಸೀತೆಯಾದಳೆಂದು ಬೆಸಸಿ ಪ್ರಭಾಮಂಡಲನ ಭವಾವಳಿಯ ನಿಂತೆಂದು ಬೆಸಸಿದರ್ ಗುಣವರ್ಮನೆಂಬ ಪರದನಾಗಿ ಕುಂಡಲ ಮಂಡಿತನೆಂ ಬರಸನಾಗಿ ಬೞಿಯಂ ಪ್ರಭಾಮಂಡಲನಾದಂ ವಸುದತ್ತನಾದಂದಿನ ಕೆಳೆಯನಪ್ಪ

1. ಬ್ರಹ್ಮೋತ್ತರ. ಖ

ಯಾಜ್ಞವಲ್ಕಿ ವಿಭೀಷಣನಾಗಿ ಪುಟ್ಟಿ ಮುನ್ನಿನ ಕೆಳೆತನಂ ಕಾರಣಮಾಗೆ ಲಕ್ಷ್ಮಣನೊಳ್ ಬಂದು ಕೂಡಿದಂ ಮುನ್ನೆ ಪೇಳ್ದ ಪದ್ಮರುಚಿಯ ಕೈಯೊಳ್ ಪಂಚ ನಮಸ್ಕಾರಮಂ ಕೇಳ್ದ ವೃಷಭಂ ರಾಜಪುತ್ರನಾಗಿ ಪುಟ್ಟಿ ತಪಂಗೊಂಡು ಸ್ವರ್ಗದೊಳ್ ಪುಟ್ಟಿಬಂದೀಗಳ್ ಸುಗ್ರೀವನಾಗಿ ಮುನ್ನಿನುಪಕಾರಂ ಕಾರಣಮಾಗೆ ರಾಮಂಗನುವಶನಾಗಿ ಬೆಸಕೆಯ್ದ ನೆಂದಿದೆಲ್ಲಮಂ ಸಕಲಭೂಷಣ ಕೇವಲಿಗಳ್ ಸವಿಸ್ತರಂ ರಾಮಂಗೆ ಪೇಳ್ದುಮತ್ತ ಮಿಂತೆಂದರ್ ಶ್ರೀಭೂತಿಯೆಂಬ ಪುರೋಹಿತನಾದಂದು ರಾವಣನಪ್ಪ ಶಂಭುವಿನ ಕೈಯೊಳ್ ಸತ್ತುದರಿಂದಾ ಮುಳಿಸು ಕಾರಣಮಾಗೆ ಲಕ್ಷ್ಮಣಂ ರಾವಣನಂ ಕೊಂದಂ ಸೀತೆಯುಂ ವೇದವತಿಯಾದಂದು ಮಂಡಲಾಗ್ರ ಪುರದೊಳ್ ಋಷಿಯರ ಮಂಡಲಿ ಯೊಳಿರ್ದ ಸುದರ್ಶನ ಋಷಿಯರುಮನವರ ತಂಗೆವಿರಪ್ಪ ಸುದರ್ಶನೆಯರೆಂಬ ಕಂತಿಯರುಮಂ ತವ್ಮೊಳ್ ಪೊರ್ದಿದರಸಿ ಪೊಲ್ಲದಂ ನುಡಿದು ನೆಗಟುತ್ತುಮಿರೆ ವೇದವತಿಯ ಮೊಗದೊಳೊಂದು ಬಾಹು ಪುಟ್ಟಿ ಪೊಲ್ಲರಲ್ಲದರಂ ಪೊಲ್ಲರೆಂದು ನುಡಿ ದೊಡೀ ಬಾಹಾದುದೆಂದೆಲ್ಲರ್ಗಮಾದ್ಯಂತಂ ತಿಳಿಯೆ ಪೇಳ್ದುಪ್ರಾಯಶ್ಚಿತ್ತಂಗೊಂಡೊಳ್ಳಿ ತ್ತಾಗಿ ನಡೆದು ಕಡೆಯೊಳ್ ದೇವಲೋಕಕ್ಕೆ ಪೋಗಿ ಬಂದು ತಾನುಮೀಗಳಭಿ ಯೋಗಕ್ಕೆ ಪಕ್ಕಾದಳೆಂದು ಮತ್ತಮಿಂತೆಂದರ್—

ಚ ॥ ಜಿನಮುನಿಯಕ್ಕೆ ಜೈನನೆನಿಸಿರ್ದವನಕ್ಕೆಮ ಪಾಪ ಬುದ್ಧಿಯಿಂ ।
ತನಗೆ ಜಿನೇಂದ್ರ ಧರ್ಮದವರಾರುಮನಾಗದು ದೂಷಿಸಲ್ಕೆ ಕೇ ॥
ಳ್ಮನೆ ಮುನಿವಂಗೆ ಮಚ್ಚರಿಸುವಂಗಱಿವಿಲ್ಲದವಂಗೆ ದೂಷಿಪಂ ।
ಗನಿತಿನಿತೆಂದು ಲೆಕ್ಕವಿಡಲೇಂಗಳ ಬರ್ಪುದೆ ಕರ್ಮ ಬಂಧಮಂ ॥ ೪೦ ॥

ಎಂದು ಪೇಳ್ವುದುಮನಂತರಂ ಕೃತಾಂತವಕ್ತ್ರನೆಂತಾನುಂ ರಾಮಸ್ವಾಮಿಯ ನೊಡಂಬಡಿಸಿ ಪಲಂಬರರಸುಮಕ್ಕಳ್ವೆರಸು ಸಕಲ ಭೂಷಣ ಬೋಧ ನಿಧಿಯ ಸನ್ನಿಧಿ ಯೊಳ್—

ಕಂ ॥ ಅಱಿದಂದೆ ತೊಱೆಯದಂದೇ
ತಱಿದಱಿವೆಂದಱಿವೆ ತನಗೆ ತೊಡವಾದುದೆನಲ್ ॥
ತೊಱೆದಾ ಕೃತಾಂತವಕ್ತ್ರಂ
ತಱಿಸಂದು ಕೃತಾಂತ ವಕ್ತ್ರಮಂ ಮುದ್ರಿಸಿದಂ ॥ ೪೧ ॥

ಅಂತು ಕೃತಾಂತವಕ್ತ್ರಂ ದೀಕ್ಷೆಗೊಳ್ವುದುಂ ರಾಮನಿನ್ನುಂ ಕೆಲದಿವಸ ಮಿರ್ದು ದೀಕ್ಷೆಗೊಳ್ವೆಮೆಂದು ನಿಶ್ಚಯಿಸಿ ಭಟ್ಟಾರಕರ್ಗೆ ಸರ್ವಾಂಗ ಪ್ರಣತನಾಗಿ ಸೀತಾಂಬಿಕೆಯರಲ್ಲಿಗೆ ಪೋಗಿ ಲಕ್ಷ್ಮಣಾದಿಗಳ್ವೆರಸು ನಿಶ್ಶಲ್ಯಂಗೆಯ್ದು ದಿವ್ಯ ಮುನಿಯ ಸಭಾಮಂಡಲಮಂ ಪೊಱಮಟ್ಟು—

ಮ ॥ ದಶ ದಿಙ್ಮಂಡಲಮಂ ಪಳಂಚಲೆಯೆ ಭೇರೀನಿಸ್ವನಂ ರಾಜ ಲೋ ।
ಕ ಶಿರೋಭೂಷಣ ಪಂಚರತ್ನ ರುಚಿ ಲೇಖಾನೀಕದಿಂ ಶಕ್ರ ಚಾ ॥
ಪ ಶತಂಗಳ್ ನೆಲೆವೆರ್ಚೆ ಲಕ್ಷ್ಮಣ ಸಮೇತಂ ರಾಮದೇವಂ ಲವಾಂ ।
ಕುಶ ವಕ್ತ್ರಾಂಬುಜ ದತ್ತ ದೃಷ್ಟಿ ಪುರಮಂ ಪೊಕ್ಕಂ ಮಹೋತ್ಸಾಹದಿಂ ॥೪೨॥

ಅಂತಯೋಧ್ಯಾಪುರಮಂ ಪೊಕ್ಕು ಸುಖದಿಂ ಕೆಲವುಕಾಲಮಿರ್ಪುದುಮಿತ್ತ ಸೀತಾರ್ಯಿಕೆ ಪಲವುಕಾಲಂ ತಪಂಗೆಯ್ದು ಮೂವತ್ತಾರು ದಿವಸಂ ಸಂನ್ಯಸನಮಂ ಕೈಕೊಂಡಚ್ಯುತ ಕಲ್ಪದೊಳ್ ಸ್ವಯಂಪ್ರಭನೆಂಬ ಪ್ರತೀಂದ್ರನಾಗಿ ಪುಟ್ಟಿದಳ್ ಮತ್ತ ಮಿತ್ತ ಕಾಂಚನಪುರಮನಾಳ್ವ ಕಾಂಚನ ರಥಂಗಂ ವಿದ್ಯುನ್ಮಾಲೆಗಂ ಪುಟ್ಟಿದ ಮಂದಾಕಿನಿಯುಂ ಚಂದ್ರವಕ್ತ್ರೆಯುಮೆಂಬ ಕನ್ನೆಯರ್ ಸ್ವಯಂವರಕ್ಕೆ ನೆರೆದರಸುಮಕ್ಕಳೊಳೊರ್ವರುಮಂ ಮೆಚ್ಚದೆ ಲವಂಗೆ ಮಂದಾಕಿನಿ ಮಾಲೆಯುಂ ಸೂಡಿದಳಂಕುಶಂಗೆ ಚಂದ್ರವಕ್ತ್ರೆ ಮಾಲೆಯುಂ ಸೂಡಿದಳಾ ಸಭೆಯೊಳಿರ್ದ ಲಕ್ಷ್ಮಣನೆಣ್ಬರ್ ಕುಮಾರರುಮದಂ ಕಂಡು ನಿರ್ವೇಗ ಪರಾಯಣರಾಗಿ ಮಹಾಬಲ ಭಟ್ಟಾರಕರ ಪಕ್ಕದೆ ದೀಕ್ಷೆಯುಂ ಕೈಕೊಂಡರಿತ್ತ ವಿದ್ಯಾಧರ ರಾಜ್ಯ ಸುಖಮನೆನಿತಾನುಂ ಕಾಲಂ ಪ್ರಭಾಮಂಡಲನನುಭವಿಸಿ ಕರುಮಾಡದೇಱನೆಯ ನೆಲೆಯೊಳಿರ್ದಲ್ಲಿ ಸಿಡಿಲ್ ಪೊಡೆಯೆ ಸತ್ತು ದೇವ ಕುರುವಿನೊಳ್ ಪುಟ್ಟದನಿತ್ತ ಹನುಮಂ ಕರ್ಣಕುಂಡಲಪುರದೊಳಗರಸುಗೆಯ್ಯುತ್ತುಂ ಪಲಕಾಲಮಿರ್ದೊಂದು ದಿವಸಂ ಕೃಷ್ಣಪಕ್ಷದಿರುಳ್ ಮಣಿಮಾಡದೊಳಿರ್ದು ಗಗನ ತಲದಿಂ ಬೀೞ್ತಿರ್ಪುಲ್ಕಮಂ ಕಂಡು ಸಂಸಾರಿಗಳ ಧನಮುಂ ಜೀವನಮುಂ ಜೌವನಮುಮಿಂತೆ ಕ್ಷಣದಿಂದಧ್ರುವಂಗಳೆಂದು ಬಗೆದು ನಿರ್ವೇಗ ಪರನಾಗಿ [1]ಸುಶ್ರುತನೆಂಬ ತನ್ನ ಮಗಂಗೆ ರಾಜ್ಯಮಂ ಕೊಟ್ಟು ವಿದ್ಯುದ್ಗ್ಯತಿ ಮೊದಲಾಗೇೞ್ನೂಱಯ್ವದಿಂಬರ್ ವಿದ್ಯಾಧರ ವಲ್ಲಭರ್ವೆರಸು ಧರ್ಮಾಭರಣರೆಂಬ ಚಾರಣಋಷಿಯರ ಸಮಕ್ಷದೊಳ್ ದೀಕ್ಷೆಯಂ ಕೊಂಡಂ ಹನುಮನರಸಿಯರೆಲ್ಲಂ ಸುಮತಿ ಗಂತಿಯರ ಪಕ್ಕದೊಳ್ ತಪಸ್ಸ್ಥೆಯರಾದರ್ ಹನುಮಮುನಿ ಘಾತಿಯುಮನಘಾತಿಯುಮಂ ಕಿಡಿಸಿ ನಿರ್ವಾಣ ಪ್ರಾಪ್ತನಾದಂ—

ಕಂ ॥ ಇತ್ತ ಬಲದೇವನುಂ ಪುರು
ಷೋತ್ತಮನುಮನೇಕ ವತ್ಸರಂ ರಾಜ್ಯ ಸುಖಾ ॥
ಯತ್ತಮನರ್ ನಿರವಧಿ ಸಂ
ಪತ್ತಿಗೆ ನೆಲೆಯೆನಿಸಿ ನಾಡೆ ನಲಿಯುತ್ತಿರ್ದರ್ ॥ ೪೩ ॥

ಅಂತಿರ್ಪುದುಮಿತ್ತಲೊರ್ಮೆ ಸುರ ಪರಿಷನ್ಮಧ್ಯ ವರ್ತಿ ಸೌಧರ್ಮೇಂದ್ರಂ ಧರ್ಮ ನಿರೂಪಣ ಪ್ರವಣನಿಂತೆಂದಂ—

1. ಸುಪ್ರತ. ಘ.

ಕಂ॥ ಮನುಜ ಗತಿ ಗತಿಗಳೊಳ್ ಪಾ
ವನಮೆಂತೆನೆ ಮಿಕ್ಕ ಗತಿಗಳಪವರ್ಗ ಶ್ರೀ ॥
ಸ್ತನಮಂಡಲ ಗಾಢಾಲಿಂ
ಗನ ಸೌಖ್ಯಮನೀಯಲಾಜವಪ್ಪುದಱಿಂದಂ ॥ ೪೪ ॥

ಎಂಬುದುಮಾ ಸಭೆಯೊಳಿರ್ದ ಸಮ್ಯಗ್ದೃಷ್ಟಿಯಪ್ಪ ವಿಭಾವಸುವೆಂಬ ದೇವಂ—

ಕಂ॥ ಮಳ ರಹಿತಮಪ್ಪ ತಪಮಂ
ತಳೆದಪವರ್ಗಕ್ಕೆ ಸಲ್ವ ಮಾನವ ಗತಿಯಂ ॥
ತಳೆವೊಡೆ ದಿವಿಜಾಯುಷ್ಯಂ
ಗಳಿಯಿಪ ತೆಜನಾವುದೆಂದು ಸಂಭ್ರಮಿಸುವುದುಂ ॥ ೪೫ ॥

ಅದಂ ಕಂಡಾಗಳ್ ಮತ್ತೊರ್ವಂ ಗೀರ್ವಾಣನಿಂತೆಂದಂ—

ಕಂ॥ ಮನುಜ ಗತಿವಡೆವುದುತ್ತಮ
ಮೆನಿಸಿಯುಮಾ ಬ್ರಹ್ಮಕಲ್ಪದಿಂ ಬಂದುಂ ರಾ ॥
ಮನದೇಕೆ ದೀಕ್ಷೆಗೊಳ್ಳಂ
ಮನುಷ್ಯ ಭವಮೊಂದೆ ದೀಕ್ಷೆಗೇಂ ಕಾರಣಮೇ ॥ ॥ ೪೬ ॥

ಎನೆ ವಿಭಾವಸುವೆಂಬಂ ಲಕ್ಷ್ಮಣನೊಳಾದ ಸ್ನೇಹಂ ಕಾರಣಮಾಗೆ ತಪಮ
ನುಪೇಕ್ಷಿಸಿರ್ದಂ—

ಕಂ। ಎಂತುಂ ಪೂರ್ವಭವ ಸ್ನೇ
ಹಂ ತೊಱೆಯಲ್ಬರ್ಪುದಲ್ತು ಲಕ್ಷ್ಮಣನ ವಿಯೋ ॥
ಗಂ ತನಗಾದೊಡೆ ರಾಮಂ
ಸಂತಾಪಮನತಿ ವಿಷಾದಮಂ ಕೈಕೊಳ್ಗುಂ ॥ ೪೭ ॥

ಲಕ್ಷ್ಮಣನುಮಂತೆ ರಾಮಂಗತಿಸ್ನೇಹಿತನಾತನಗಲ್ದಾಗಳೆ ಸಾಗುಮೆನೆ ನಿಸರ್ಗ
ರಾಗಿಗಳಪ್ಪುದಱಿಂ ರಾಮಲಕ್ಷ್ಮಣರ ಸ್ನೇಹಮಂ ನೋಡಲರ್ಥಿಗಳಾಗಿ ರತ್ನ
ಚೂಲನುಮಮೃತಚೂಲನುಮೆಂಬ ದೇವರಿರ್ವರುಮಯೋಧ್ಯಾಪುರಕ್ಕೆ ಬಂದು—

ವ॥ಸ್ರ ಪರಲೋಕ ಪ್ರಾಪ್ತನಾದಂ ದಶರಥ ಸುತನೆಂಬಂತು ರಾಜಾಲಯಂ ಶೋ।
ಕ ರಸಾಂಭೋರಾಶಿಯೊಳ್ ಭೋಂಕನೆ ಮುಳುಗಿದುದೆಂಬಂತು ಹಸ್ತಚ್ಛಟಾಜ॥

ರ್ಝರ ಮಧ್ಯಂ ಪೆಂಡವಾಸಂ ಗಗನ ವಿವರಮುಂ ರೋದನೋನ್ನಾದದಿಂದಂ।
ಭರಿತಂ ಮಾಳ್ಪಿಂತು ವೈಕುರ್ವಣ ಪರಿಣತಿಯಂ ಬೀಱಿದಂ ರತ್ನಚೂಲಂ॥೪೮॥

ಮ ॥ ಬಲದೇವಾಕೃತಿಯಂ ಸರಾಗನಮರಂ ನಿಷ್ಪ್ರಾಣಮುಂ ವಿಕ್ರಿಯಾ।
ಬಲದಿಂ ನಿರ್ಮಿಸೆ ಕಂಡು ಲಕ್ಷ್ಮಣನದಂ ನಿಸ್ಸೀಮ ಶೋಕಂ ಭಯಾ॥
ಕುಲಿತಂ ಹಾ ನಿನದಾನುಗಂ ಕ್ಷಣದೆ ಜೀವಂ ಪೋಗೆ ಬಿೞ್ದಂ ಧರಾ।
ತಲದೊಳ್ ಹರ್ಷ ವಿಷಾದ ವೇಗದೊದವಿಂ ಸಾವಪ್ಪುದಾಶ್ಚರ್ಯಮೇ ॥ ೪೯ ॥

ಅಂತು ಕಾಲಪ್ರಾಪ್ತನಪ್ಪುದುಂ ಲಕ್ಷ್ಮಣನಂತಃಪುರ ಪುರಂಧ್ರಿಯರ್ ಕಂಡತಿ ಪ್ರಲಾಪಂ ಗೆಯ್ವುದಂ ರಾಮಂ ಕೇಳ್ದು ಮೂರ್ಛಿತನಾಗಿ ನೀಡಱಿಂದೆೞ್ಚತ್ತು ಗತಪ್ರಾಣನಾದ ಲಕ್ಷ್ಮಣನ ಕೆಲಕ್ಕೆ ಪೋಗಿ ಮಗುೞ್ದುಂ ಮೂರ್ಛಾಗತನಾಗಿ ಮತ್ತಮೆೞ್ಚತ್ತು ಪಲತೆಱದಿಂ ಪ್ರಲಾಪಂಗೆಯ್ಟ್.—

ಕಂ ॥ ಹಾ ತಮ್ಮನೆ ನಿನ್ನುಮನಾ
ಪಾತಕಿ ಬಿದಿ ಕೊಂಡುಪೋದನೇವೆನೆನುತ್ತುಂ ॥
ಸೀತಾಪತಿ ಪೂರ್ವ ಭವ
ಪ್ರೀತಿಯಿನತಿಶೋಕ ವೇಗ ವಿಹ್ವಲನಾದಂ ॥ ೫೦ ॥

ಅಂತಚಿಂತ್ಯ ದುಃಖಾಭಿಭೂತನಾಗಿ ಶೋಕಂಗೆಯ್ಯುತ್ತುಮಿರೆ ಲವಾಂಕುಶರ್ ಕಂಡದುವೆ [1]ನಿರ್ವೇಗ ಕಾರಣಮಾಗೆ ಬಂದು ರಾಮಸ್ವಾಮಿಗೆ ಪೊಡೆವಟ್ಟು ಬೀೞ್ಕೊಂಡು ಮಹೇಂದ್ರೋದ್ಯಾನದಮೃತೇಶ್ವರ ಭಟ್ಟಾರಕರ ಪಕ್ಕದೆ ತಪಸ್ಥ ರಾಗಿರ್ದರಿತ್ತ ರಾಮನ ಶೋಕಮಂ ವಿಭೀಷಣಂ ಬಂದು ಸಂಸಾರದನಿತ್ಯತೆಯುಂ ಪೇೞ್ದುಪಶಮಿಸಲಾಱದಿರೆ ಸುಗ್ರೀವಾದಿಗಳ್ ನೆರೆದು ಬಂದು ಲಕ್ಷ್ಮಣನ ಶವಮುಂ ದಹಿಸುವಮೆಂಬುದುಂ—

ಕಂ ॥ ಅವರಂ ಪಲತೆಱದಿಂ ಬ
ಯ್ದು ಪೊಯ್ದು ಲಕ್ಷ್ಮಣನ ಪೆಣನನಾ ಕ್ಷಣದೊಳ್ ನಾ ॥
ನಿವರ ಸಮೀಪದೊಳಿರಲೆಂ
ತುಮಾಗದೆಂದೆತ್ತಿಕೊಂಡು ರಾಮಂ ಪೋದಂ ॥ ೫೧ ॥

ಮ॥ ಸ್ರ॥ ಮರುಳಾದಂ ವಾಸುದೇವಂ ಕಱಿದೊಡೆ ಬಲದೇವಂ ಪೆಣಕ್ಕಿತ್ತು ವಸ್ತ್ರಾ।
ಭರಣ ಸ್ರಕ್ಚಂದನಾಲೇಪನ ಪರಿಕರಮುಂ ಪೊತ್ತುಕೊಂಡಿರ್ದಪಂ ತ॥
ಚ್ಚರಮಾಂಗಂ ವಿಶ್ವ ವಿದ್ಯಾವಿದನೆನೆ ವಿಕಲಂಮಾಳ್ಪುದಾಶ್ಚರ್ಯಮೇ ಮಿ।
ಕ್ಕರನಜ್ಞಾನಾಸವಾಸ್ವಾದಿತ ಜಡರನೆಲೇ ಮೋಹ ಮೂರ್ಛಾತಿರೇಕಂ ॥೫೨॥

---

1. ವೈರಾಗ್ಯ ಚ.

ಕಂ॥ ಬಗೆಗಿಡಿಸೆ ಮೋಹನೀಯಂ
ನಗಧರ ಶವಧಾರಿಯಾಗೆ ಷಣ್ಮಾಸಮದೇಂ ॥
ನೆಗಟ್ದುದೊ ಸಲೆ ಬಲದೇವನ
ಪೆಗಲ ಪೆಣಂ ಕುಂದದೆಂಬ ನಾಟ್ನುಡಿ ಜಗದೊಳ್ ॥ ೫೩ ॥

ಅಂತು ರಾಮಸ್ವಾಮಿ ರಾಜ್ಯ ರಕ್ಷಣಮಂ ಮಱೆದು ಲಕ್ಷ್ಮಣ ವಿಯೋಗದಿಂ ವಿಕಲನಾಗಿರೆ ಕೆಲದ ನೆಲದರಸುಮಕ್ಕಳ್ ಪೊಡರ್ಪುಗೆಟ್ಟು ಮಟ್ಟಮಿರ್ಪುದುಮಿತ್ತ ಲಿಂದಗಿಯ ಮಗನಪ್ಪ ವಜ್ರಮಾಲಿ ಸುಂದರನ ಮಗನಪ್ಪ ಚಾರುರತ್ನಂಬೆರಸು ಪಲರುಮಂ ಕೂಡಿಕೊಂಡಯೋಧ್ಯೆಗಾಸನ್ನಮಾಗೆ ಬೀಡಂಬಿಟ್ಟುದಂ ರಾಮಂ ವಚನ ಪರಂಪರೆಯಿಂ ಕೇಳ್ದು ಲಕ್ಷ್ಮಣನಂ ಬಿಟ್ಟು ಪೋಗಲಾಱದತಿ ದುಃಖಿತನುಂ ಕಲುಷ ವಶಗತನುಮಾಗಿ ನಿಜ ವಜ್ರಾವರ್ತ ಚಾಪಮುಮನಗ್ನಿಮುಖ ಶಿಲೀಮುಖಮುಮಂ ನೋಡುತ್ತುಮಿರೆ ದೇವಗತಿವಡೆದ ಜಟಾಯುವುಂ ಕೃತಾಂತವಕ್ತ್ರನುಮಾಸನಕಂಪ ಮಾಗಲವಧಿಬೋಧದಿಂ ಲಕ್ಷ್ಮಣಂ ಮರಣಪ್ರಾಪ್ತನಪ್ಪುದುಂ ರಾಮಂ ಶೋಕಾಭಿ ಭೂತನಾಗಿರೆ ಪಗೆವಡೆಯಿಱಿಯಲೆಂದು ಬಂದಯೋಧ್ಯೆಯುಂ ಬಳಸಿ ಬಿಟ್ಟಿರ್ದುದನಱಿ ದಿರ್ವರ್ ದೇವರುಂ ಬಂದು ಮಾರ್ಪಡೆಯನೋಡಿಸುವುದುಂ ವಜ್ರಮಾಲಿಯುಂ ಚಾರುರತ್ನನುಂ ತಮಗದುವೆ ನಿರ್ವೇಗ ಕಾರಣಮಾಗೆ ಪಲಬರರಸುಮಕ್ಕಳ್ವೆರಸು ರತಿವೇಗ ಭಟ್ಟಾರಕರ ಪಕ್ಕದೆ ತಪಸ್ಸ್ಥರಾದರಿತ್ತ ಕೃತಾಂತವಕ್ತ್ರ ಜಟಾಯು ದೇವರ್ಕಳ್ ರಾಮನಲ್ಲಿಗೆ ಬಂದು—

ಕಂ॥ ಎನಿತಾನುಂ ತೆಱದಿಂ ಧ
ರ್ಮ ನಿರೂಪಣೆಗೆಯ್ದುಮೆಂತುಮೇನಾರ್ತರೆ ರಾ ॥
ಮನ ವಿಕಲತೆಗಿಡಿಸಲ್ ಮು
ನ್ನಿನ ಭವದನುಬಂಧಮುಂ ಕಱಲ್ಚುವರೊಳರೇ ॥ ೫೪ ॥

ಅಂತು ಧರ್ಮ ವಾತ್ಸಲ್ಯದಿಂ ರಾಮನ ವೈಕಲ್ಯಮಂ ಕಳೆಯಲೆಂದೊಂದೆಡೆ ಯೊಳ್ ನಯನ ಪಥದೊಳಿರ್ದು—

ಮ॥ಸ್ರ॥ ಕಲನೊಂದಂ ತೀವಿ ನೀರಂ ಪೊಸೆದು ಸಿಕತದೊಳ್ ಗಾಣಮಂ ಪೊಯ್ದು ಮತ್ತಂ।
ಶಿಲೆಯೊಳ್ ಧಾನ್ಯಂಗಳಂ ಬಿತ್ತಿಯುಮೊಣಗಿದ ಭೂಜಕ್ಕೆ ನೀರ್ವೊಯ್ವುದುಂ ಕೋ ॥
ಟಲೆವಟ್ಟೇ ನಿಷ್ಫಲೋದ್ಯೋಗಮನೊಡರಿಪುದೇನೆಂಬುದುಂ ದೇವರೆಂದರ್ ।
ಬಲದೇವಂಗಣ್ಣ ನೀನೀ ಪೆಣನನಱಿಪಿನಿಂ ಪೊತ್ತಿರಲ್ ಬರ್ಪುದುಂಟೇ ॥ ೫೫ ॥

ಎನೆ ಮುನಿದಮಾಂಗಲ್ಯ ವಚನಮನೇಕೆ ನುಡಿದಿರೆಂದಾ ಕೃತಾಂತವಕ್ತ್ರನೊಳ್ ನುಡಿಯುತ್ತಿರ್ಪನ್ನೆಗಂ ಜಟಾಯುದೇವನೊಂದು ಪೆಣನಂ ಪೊತ್ತು ಮುಂದಣ್ಗೆವರೆ ರಾಮಂ ಕಂಡೀ ಮೃತಕಮಂ ನಿಷ್ಪ್ರಯೋಜನಮಿಂತೇಕೆ ಪೊತ್ತು ತೊಟಲ್ದಪೆಯೆನೆ ಜಟಾಯುದೇವಂ ನೀನೀ ಪೆಣನಂ ಪೊತ್ತು ತೊಟಲ್ವುದೇನಿಮಿತ್ತಮೆಂದು ತೋಱಿ ನುಡಿವುದುಂ—

ಕಂ ॥ ಎಂತಾನುಂ ಪಲವುಂ ದೃ
ಷ್ಟಾಂತಮನೆನಿತಾನುಮುಪಮೆಯುಂ ತದ್ದಿವಿಜರ್ ॥
ಮುಂ ತೋಱಿ ತೋಱಿ ಚಿತ್ತ
ಭ್ರಾಂತಿಯುಮಂ ಹಳಿಯ ಪೞಿಯುಮಂ ಪಿಂಗಿಸಿದರ್ ॥ ೫೬ ॥

ಅಂತಪಗತ ಮೋಹನಾದ ರಾಮಂಗೆ ದೇವರಿರ್ವರುಂ ತಮ್ಮ ದಿವ್ಯ ಸ್ವರೂಪಮಂ ತೋಱಿ ಮತ್ತಮಿಂತೆಂದರೆಮಗಾಸನ ಕಂಪಮಪ್ಪುದುಂ ನಿಮಗಾದುಪಸರ್ಗಮನಱಿದು ಬಂದು ನಿಮ್ಮ ಮೇಲೆತ್ತಿ ಬಂದ ಪಗೆವರನೋಡಿಸುವುದುಮವರದುವೆ ನಿರ್ವೇಗ ಕಾರಣಮಾಗೆ ಪಲಂಬರರಸುಮಕ್ಕಳ್ವೆರಸು ತಪಂಬಟ್ಟರೆಂಬುದುಂ—

ಕಂ ॥ ಮುಗಿಲ ಮಱೆಪೋದ ಚಂದ್ರಾಂ
ಶುಗೆ ಕಾಳಿಕೆಪೋದ ಪೊಂಗೆ ಪೊಗೆಪೋದ ಕೃಶಾ ॥
ನುಗೆ ಸಮನಾದಂ ಮೋಹಂ
ಬಗೆಯಿಂ ಪೊಱಮಟ್ಟು ಪೋಗೆ ದಶರಥರಾಮಂ ॥ ೫೭ ॥

ಅಂತಕಲುಷ ಹೃದಯನಾಗಿ—

ಕಂ ॥ ಎನ್ನುಮನಾನಱಿಯದೆ ಚಿಃ
ಬನ್ನಕ್ಕೊಳಗಾದೆನೆಂದು ರಘುಕುಲ ತಿಲಕಂ ॥
ತನ್ನಂ ತಾನಱಿದೊಡಲಂ
ತನ್ನಿಂ ಬೇರ್ಪಡಿಸಲಾದಮುತ್ಸುಕನಾದಂ ॥ ೫೮ ॥

ಅಂತು ವೈರಾಗ್ಯ ಪರಾಯಣನಾಗಿ ವಿಭೀಷಣ ಸುಗ್ರೀವ ನಳ ನೀಳ ಜಾಂಬವ ಪ್ರಸನ್ನಕೀರ್ತಿ ವಿರಾಧಿತಾದಿಗಳುಮಂ ಪೆಱವುಂ ಪ್ರಧಾನ ಪುರುಷರೆಲ್ಲರುಮಂ ಬರವೇಟ್ಟಿಟ್ಟುವುದುಮವರ್ ಬಂದು[1] ಸರಯುವೆಂಬ ತೊಱೆಯ ತಡಿಯೊಳ್ ಲಕ್ಷ್ಮಣ ಶವಮಂ ಯಥಾವಿಧಿಯಿಂ ಸಂಸ್ಕಾರಿಸಿ ಬರ್ಪುದುಮಾಗಳಂತೆ ರಾಮಸ್ವಾಮಿ

1 ಸರಯೂಹ. ಗ. ಘ.

ಲವನ ಪಿರಿಯ ಮಗಂಗೆ ರಾಜ್ಯಪಟ್ಟಮಂ ಕಟ್ಟಿ ಪಲಂಬರರಸುಮಕ್ಕಳ್ವೆರಸು ಸುವ್ರತ ರೆಂಬ ಚಾರಣರ ಪಕ್ಕದೆ ತಪಸ್ಸ್ಥನಾದಂ ವಿಭೀಷಣನುಂ ನಿಜ ತನೂಭವನಪ್ಪ ಸುಭೂಷಣಂಗೆ ಲಂಕೆಯ ರಾಜ್ಯಮನಿತ್ತು ದೀಕ್ಷೆಯುಂ ಕೊಂಡಂ ಸುಗ್ರೀವನು ಮಂಗದಂಗೆ ರಾಜ್ಯಮಂ ಕೊಟ್ಟಲ್ಲಿಯೆ ದೀಕ್ಷೆಯಂ ಕೊಂಡಂ ಶತ್ರುಘ್ನ ನಳ ನೀಳ ವಿರಾಧಿತ ಚಂದ್ರರಶ್ಮಿ ಪ್ರಮುಖರುಂ ರಾಮನೊಡನೆ ಸುವ್ರತಚಾರಣರ ಸಮಕ್ಷ ದೊಳ್ ದೀಕ್ಷೆಯುಂ ಕೈಕೊಂಡರಂತಿನಿಬರಂತಃಪುರದ ಕಾಂತೆಯರುಂ ಶ್ರೀಮ ತ್ಯಾರ್ಯಿಕಾ ಸಮಕ್ಷದೊಳ್ ದೀಕ್ಷೆಗೊಂಡರ್ ಮತ್ತಮಾ ರಾಮಯತಿ ಪರಮಾಗಮ ಪ್ರಣೀತ ಮಾರ್ಗದಿಂ—

ಕಂ ॥ ಮೂಲಗುಣೋತ್ತರ [1]ಗುಣದಿಂ
ಶೀಲಮನಳವಡಿಸಿ ಸಮಿತಿಯುಂ ಗುಪ್ತಿಗಳಂ ॥
ಪಾಲಿಸಿ ಪಂಚಮಹಾವ್ರತ
ಲೀಲೆಯಿನೆಸೆದಂ ಪ್ರಮಾದಮಿಲ್ಲೆಂಬಿನೆಗಂ ॥ ೫೯ ॥

ಪಿಡಿದು ದಶಧರ್ಮಮಂ ಗೆ
ಲ್ದೊಡತನುವಂ ಕುಸುಮಬಾಣನಂ ಕರ್ವಿನ ಬಿ ॥
ಲ್ವಿಡಿದನನದೇಕೆ ಲೋಕಂ
ಕಡಂಗಿ ಬಣ್ಣಿಪುದೊ ರಾಘವ ವ್ರತಿಪತಿಯುಂ ॥ ೬೦ ॥

ಉ ॥ ಮೂಲ ಗುಣಂಗಳಿಂದೆ ದಶಧರ್ಮಮನೇಱಿಸಿ ಕೊಂಡವೋಘ ಬಾ ।
ಣಾಳಿಯನಲ್ಲಿ ತೊಟ್ಟು ನಿಲಲೀಯದೆ ತೂಳ್ದಿ ಪರೀಷಹಂಗಳಂ ॥
ಮೇಳಿಸಿದಂ ಜಯಾಂಗನೆಯನೇಕ ವಿಹಾರದೊಳಾ ಮುನೀಶ್ವರಂ ।
ಮೇಳಿಸೆ ಕೀರ್ತಿ ಕೀರ್ತಿಮುಖದಂತೆ ದಿಶಾ ರದನೀ ರದಂಗಳಂ ॥ ೬೧ ॥

ಕಂ ॥ ಕೇವಲ ಬೋಧೋದಯಮೆಂ
ಬೀ ವಿಭವಂಬೆತ್ತು ಸಕಲರೂಪ ವ್ಯಾಪಾ ॥
ರಾವಗಮ ಸಂಪದಂ ಸ
ರ್ವಾವಧಿ ಪುಟ್ಟಿತ್ತು ರಾಘವ ವ್ರತಿಪತಿಯೊಳ್ ॥ ೬೨ ॥

ಅಂತು ಸರ್ವಾವಧಿಯುಂ ಪಡೆದು ಲಕ್ಷ್ಮಣನ ತಮ್ಮ ಮುನ್ನಿನ ಭವಂಗಳು ಮಂ ಲಕ್ಷ್ಮಣನಿರ್ಪತ್ತೊಂದುವರ್ಷಂ ಕುಂದೆ ಪನ್ನಿರ್ಛಾಸಿರ ವರ್ಷಮಂ ಜೀವಿಸಿ ಬೞಿಯಮಧೋಲೋಕ ಗತನಾದುದುಮಂ ಸ್ನೇಹಮಂ ಪರೀಕ್ಷಿಸಲ್ಬಂದ ದೇವಂ ಕಾರಣಮಾಗೆ ಲಕ್ಷ್ಮಣಂ ಸತ್ತನಲ್ಲದಾತಂಗೆ ಪರಮಾಯು ನೆಱೆಯೆ ಸತ್ತನಲ್ಲೆಂ

---

1. ಗುಣಮಂ. ಜ. ೫೯ ನೆಯ ಪದ್ಯವು ಮಲ್ಲಿನಾಥ ಪುರಾಣದಲ್ಲಿ ೧೧ ನೆಯ ಆಶ್ವಾಸದ ೧೩ ನೆಯ ಪದ್ಯವಾಗಿದೆ.

ಬಾದುಮನಱಿದು ರಾಮಭಟ್ಟಾರಕರುಗ್ರೋಗ್ರ ತಪಶ್ಚರಣ ನಿರತರಾಗಿ ದ್ವಾದಶ ದಿನಂಬರಂ[1]ಮಾಹಾರ ಪರಿತ್ಯಾಗ ಪ್ರತ್ಯಾಖ್ಯಾನಮುಂ ಕೈಕೊಂಡು ಪಾರಣೆಯ ದಿನ ದೊಳ್—

ಕಂ ॥ ನಗರಾರಣ್ಯ ವಿಶೇಷಂ
ಬಗೆಗಿಲ್ಲೆನೆ ಕಾಲ ನಿಯಮದಿಂ ಬನದಿಂ ಚ ॥
ರ್ಯೆಗೆ ಪೊಱಮಟ್ಟಂ ಮುನಿ ತ
ನ್ನ ಗಮನಮುಂ ದ್ರುತ ವಿಲಂಬಿತಂ ಪೊರ್ದದೆನಲ್ ॥ ೬೩ ॥

ಅಂತು ಬಂದು [2]ನಂದನಸ್ಥಲಿಯೆಂಬ ಪೊೞಲಂ ಪುಗುವುದುಮಾ ಪುರದ ಜನಮವರ ತಪಃಪ್ರಭಾವಮುಂ ದಿವ್ಯ ಶರೀರಮುಂ ನೋಡಿ ಕೌವರೆಗೊಂಡು ಬೞಿ ಸಲ್ವುದುಮದನಾ ಪೊೞಲನಾಳ್ವರಸಂ ಪ್ರತಿನಂದಿ ಕಂಡು ರಾಮಭಟ್ಟಾರಕರನಿದಿರ್ಗೊಳಲ್ ಮಣಿಮಾಡದಿಂದಿೞಿದು ಬರ್ಪನ್ನೆಗಂ ಮಾರ್ಗಮಱಿಯದ ಜನಂಗಳೆಮ್ಮ ಮನೆಗೇೞ್ತನ್ನಿಮೆಂಬುದುಂ ಭಟ್ಟಾರಕರ್ಗೆ ಚರ್ಯಾವಿಘ್ನಮಾದೊಡಾಹಾರಂಗೊಂಡಂತೆ ಸಂತುಷ್ಟ ಚಿತ್ತರಾಗಿ ಪೊೞಲಂ ಪೊಱಮಟ್ಟು ಪೋಪುದುಮಿತ್ತಲ್ ಪ್ರತಿನಂದಿ ರಾಮಭಟ್ಟಾರಕರ್ಗೆ ಚರ್ಯಾವಿಘ್ನಮಾದುದರ್ಕೆ ಮನದೊಳ್ ಚಿಂತಿಸುತಿರ್ಪಿನಮಿತ್ತಲ್—

ಕಂ ॥ ಅನಶನಮುಂ ಪನ್ನೆರಡುಂ
ದಿನಂಬರಂ ಪೂಣ್ದು ಮಾಣ್ದುನಿಲ್ಲಿನ್ನೆಂದುಂ ॥
ಜನಪದಮುಂ ಪುಗೆನೆಂದಾ
ಮುನಿಪತಿ ಕಾಂತಾರ ಭಿಕ್ಷೆಯುಂ ಕೈಕೊಂಡಂ ॥ ೬೪ ॥

ಒಂದುದಿನಮಾ ಮಹಾಮುನಿ
ಬೃಂದಾರಕನಿರ್ದ ಕಾನನಕ್ಕೆೞಿದುಯ್ದು ॥
ತ್ತೊಂದು ವಿಷಮಾಶ್ವಮಾ ಪ್ರತಿ
ನಂದಿ ನೃಪಾಲಕನನುಚಿತ ಪರಿಪಾಲಕನಂ ॥ ೬೫ ॥

ಅಂತಾ ಸೂಕಳ ತುರಂಗಮುಮತಿವಿಷಮ ಗಹನಮುಂ ಪುಗುವುದುಂ ಪ್ರತಿನಂದಿ ಸೂಕಳಗುದುರೆಯಿಂ ನೆಲಕ್ಕೆ ಪಾಯ್ದು ದಿಗವಲೋಕನಂ ಗೆಯ್ದು ಸಮೀಪದೊಳೊಂದು ಸರೋವರಮುಂ ಕಂಡು ಪೊಕ್ಕು ಮಿಂದು ಪೊಂದಾವರೆಯ ಪೂಗಳಿಂ ಪೀಠಿಕೆಯಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿಯರ್ಚಿಸುತ್ತಿರ್ಪನ್ನೆಗಮಾತನಂತಃ

1. ಶರೀರ ಪರಿತ್ಯಾಗ. ಗ. ಘ. 2. ನಂಶಸ್ಥಲಿ. ಘ.

ಪುರ ಪ್ರಧಾನೆ ಪ್ರಭಾವತಿಯೆಂಬಳಾ ಸೂಕಳಾಶ್ವದ ಪಜ್ಜೆವಿಡಿದು ಬಂದು ತನ್ನರಸನಂ ಕಂಡಾ ಸರೋವರದೊಳ್ ನೀರಾಟಮನಾಡಿ ಬೋನಮನಲ್ಲಿಗೆ ತರಿಸುವುದುಮಾ ಪ್ರಸ್ತಾವದೊಳ್ ರಾಮಭಟ್ಟಾರಕರಿರ್ಪತ್ತುನಾಲ್ಕು ದಿವಸದ ಪಾರಣೆಗೆ ಕಾಂತಾರ ಭಿಕ್ಷಾಚರ್ಯೆಗಾ ಮಾರ್ಗದಿಂ ಬರ್ಪುದಂ ಪ್ರತಿನಂದಿ ಭೋಂಕನೆ ಕಂಡು ಸಂಭ್ರಮದಿ ನೆಟ್ಟು ಪೊಡೆವಟ್ಟು ನಿಲಿಸಿ ಪಲತೆಱದಿನರ್ಚಿಸಿ ದಿವ್ಯಾಹಾರಮಂ ಕುಡುವುದುಂ—

ಕಂ ॥ ರೈವೃಷ್ಟಿ ಕುಸುಮ ವರ್ಷಂ
ದೇವರಹೋದಾನ ಘೋಷಣಂ ಹಿಮ ಪವನಂ ॥
ದೇವಾನಕ ರವಮೊದವೆ ಮ
ಹಾ ವಿಸ್ಮಯ ಹೇತುವಾಯ್ತು ಪಂಚಾಶ್ಚರ್ಯಂ ॥ ೬೭ ॥

ಅಂತು ರಾಮಭಟ್ಟಾರಕರ್ ಪೂಜಾಪ್ರಾಪ್ತರಾಗಿ ದುರ್ಧರ ತಪೋಮಾರ್ಗ ದೊಳ್ ನಡೆದು ಲಕ್ಷ್ಮಣನೆತ್ತಿದ ಸಿದ್ಧಶಿಲೆಯನೆಯ್ದಿ [1]ಪ್ರತಿಮಾಯೋಗದಿಂ ಕರ್ಮ ಕ್ಷಯಂಗೆಯ್ವುದನವಧಿಬೋಧದಿಂ ಸೀತೇಂದ್ರನಱಿದಚ್ಯುತ ಕಲ್ಪದಿಂ ಬಂದು—

ಮಂದಾಕ್ರಾಂತ॥ ತಾನೆಂತಾನುಂ ಪರಮ ಪದಮಂ ಸಾಧಿಪಂ ಮುಂದೆ ಶುಕ್ಲ ।
ಧ್ಯಾನಕ್ಕೀವೆಂ ತವಿಲನೆನುತುಂ ರಾಮಯೋಗೀಂದ್ರನಿರ್ದಾ ॥
ಸ್ಥಾನಂಬೊಕ್ಕಂ ಮಕುಟ ರುಚಿ ರೋದೋಂತಮಂ ತೀವೆ ತಚ್ಚಿ್ಯ।
ಯ್ಯೇನಂ ಮಾಡಂ ವಿನಯ ವಿಕಲಂ ರಾಗಯೋಗ ಪ್ರಮತ್ತಂ ॥ ೬೭ ॥

ಅಂತು ಪೊಕ್ಕಾಱುಂ ಋತುಗಳನಲ್ಲಿ ವಿಗುರ್ವಿಸಿ ತಾನೆ ಸೀತೆಯ ರೂಪಾಗಿ ವಿದ್ಯಾಧರ ಕನ್ಯೆಯರ್ ಬಳಸಿ ಬರೆ ಸಮೀಪಕ್ಕೆ ಬಂದು ನಿಂದು ನೀಮಿನ್ನುಂ ಗತ ವಯಶ್ಶರೀರರಲ್ಲಿರೀ ಮನೋಹರಾಕಾರಮನಕಾರಣಂ ಕಿಡಿಸದಿರಿ[2]ಮೆನ್ನೊಳಮೀ ವಿದ್ಯಾಧರ ಕನ್ಯೆಯರೊಳಂ ಕೂಡಿ ಸುಖಮನನುಭವಿಸಿ ಬಱಿಕ್ಕೆ ನೀಮುಮಾನು ಮಿಾಕೆಗಳುಮೊಡನೆ ತಪಂಬಡುವಮೆಂದು ತಪೋವಿಘ್ನ ಹೇತುಗಳಂತೋಱಿ ನುಡಿ ಯೆಯುಂ ರಾಮಭಟ್ಟಾರಕರೆಂತುಮಸ್ಖಲಿತ ಚಿತ್ತದಿಂ ಶುಕ್ಲ ಧ್ಯಾನ ಪ್ರವಿಷ್ಟರಾಗಿ ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯ ಬೆಳಗಪ್ಪ ಜಾವದೊಳ್—

ಉ ॥ ಆವರಿಸಿರ್ದ ಘಾತಿ ಘನ ಕಾಂಡಪಟಂ ಪೆಱಪಿಂಗೆ ದಿವ್ಯ ಭಾ ।
ಷಾ ವಧುವಿಂಗೆ ರಾಘವ ಯತಿಪ್ರವರಂ ವರನಾಗೆ ನಿರ್ಮಲಂ ॥

1. ರಾತ್ರಿ ಪ್ರತಿಮಾಯೋಗಂ. ಗ ಘ.
2. ಮಾನಂದು ನಿಮ್ಮೊಡನೆ ಮುಳಿದು ನಿಮಗೆ ಸ್ನೇಹ ವಿಶ್ಲೇಷಮುಪ್ಪುಂತು ತಪಂಬಟ್ಟೆನಲ್ಲದೆ ನಿಶ್ಚಯಂ ತಪಂಬಟ್ಟೆನಿಲ್ಲೆನಿತ್ತ ನಿಮ್ಮನೆ ಸಂಬಲಿಸುತ್ತಿರ್ಪೆಂ—ಎಂದು ಗ. ಘ. ಗಳಲ್ಲಿ ಅಧಿಕವಾಗಿದೆ.

ಕೇವಲಬೋಧಮೆಂಬ ಮಣಿ ದರ್ಪಣಮುಜ್ವಲಿಸಿತ್ತು ತೋರ್ಪಿನಂ।
ಜೀವಮಜೀವಮೆಂಬಖಿಲ ವಸ್ತುಗಳುಂ ಗುಣ ಪರ್ಯಯಂಗಳುಂ ॥ ೬೮ ॥

ಅಂತು ರಾಮಸ್ವಾಮಿಯ ಕೇವಲಬೋಧೋದಯದೊಡನೆ ತಮಗಾಸನ ಕಂಪಮಪ್ಪುದುಮವಧಿ ಬೋಧದಿಂದಱಿದು—

ಉ ॥ ದುಂದುಭಿ ನಾದಮಾಪರಿಸೆ ದಿಕ್ತಟಮುಂ ಚಲ ಕೇತನಂ ವಿಯ।
ನ್ನಂದನ ಶಂಕೆಯಂ ಪಡೆಯೆ ರತ್ನ ವಿಮಾನ ವಿತಾನದಂಶು ಜಾ ॥
ಲಂ ದಿವಿಜೇಂದ್ರ ಚಾಪದ ವಿಲಾಸಮನೇಳಿಸೆ ಕಣ್ಗೆವಂದದೇಂ।
ಬಂದುದೊ ರಾಮಕೇವಲಿಯ ಕೇವಲ ಪೂಜೆಗೆ ದೇವ ಸಂಕುಲಂ ॥ ೬೯ ॥

ಚ ॥ ಭವನಾವಾಸದವರ್ ಪದಿಂಬರಮರೇಂದ್ರರ್ ವ್ಯಂತರಾವಾಸ ಸಂ।
ಭವರೆಣ್ಬರ್ ಶಶಿ ಸೂರ್ಯರಿರ್ವರುಱಿದರ್ ಪನ್ನಿರ್ವರಿಂದ್ರರ್ ನಭೋ ॥
ವಿವರಂ ತಮ್ಮ ಬಲಕ್ಕೆ ಸಾಲದೆನೆ ಮೂಱುಂಲೋಕಮೊಂದಾಗಿ ಬ।
ರ್ಪವೊಲೇಂ ಬಂದರೊ ಮಾಪ್ಪ ಕೌತುಕದಿನಾ ಕೈವಲ್ಯ ಮಾಂಗಲ್ಯಮಂ॥೭೦॥

ಅಂತು ಬಂದ ಚತುರ್ನಿಕಾಯ ದೇವನಿಕಾಯದೊಡನೆ ಸೀತೇಂದ್ರನುಂ ರಾಮ ಭಟ್ಟಾರಕರ್ಗೆ ಕೇವಲಜ್ಞಾನ ಪೂಜೆಯಂ ಮಾಡಿ ಪೊಡೆವಟ್ಟು ಲಕ್ಷ್ಮೀಧರಂಗೆ ಧರ್ಮಮಂ ಪ್ರತಿಬೋಧಿಸಲೆಂದು ಶರ್ಕರಾಪ್ರಭೆಯೆಂಬ ನರಕಕ್ಕೆ ಪೋಗಿ ನೋೞ್ಪಿನ ಮಲ್ಲಿ ತಮ್ಮೊಳೋರೊರ್ವರನನೇಕ ವಿಧದಿಂ ಪೀಡಿಸುತ್ತಿರ್ಪ ನಾರಕರುಮಂ ತೀವ್ರ ವೇದನೆಯಿಂ ನವೆಯುತ್ತುಮಿರ್ದ ರಾವಣನುಮಂ ಲಕ್ಷ್ಮಣನುಮನವರಿರ್ವರಂ ಕಾಡಿಸುತ್ತಿರ್ದ ಶಂಭುಕನುಮಂ ಕಂಡು ಕರುಣದಿನವರ್ಗೆ ಧರ್ಮಶ್ರವಣಮಂ ಗೆಯ್ದೊಡಂಬಡಿಸಿ ಸಮ್ಯಕ್ತ್ವಮಂ ಮಱೆಯದಿರಿಮೆಂದು ಪೇೞ್ದವರ ದುಃಖಕ್ಕೆ ಕರ ಮುಬ್ಬೆಗಂಬಟ್ಟು ತನ್ನಿರ್ಪಚ್ಯುತ ಕಲ್ಪಕ್ಕೆ ಪೋಗಿ ಮತ್ತಮೊರ್ಮೆ ರಾಮಭಟ್ಟಾರಕರ ಸಮೀಪಕ್ಕೆ ಬಂದು ಪೂಜಿಸಿ ಪೊಡೆವಟ್ಟು ಧರ್ಮಶ್ರವಣಾನಂತರಂ ದಶರಥಾದಿಗಳ ಗತಿಯಂ ಬೆಸಗೊಳ್ಳುದುಂ—

ಕಂ ॥ ಹಿಮಕರ ಮಂಡಲದಿಂದೊಸ
ವರ್ಮದೆನೆ ನಿಜಭಾಷೆ ಬೆಸಸಿದರ್ ಕೇವಲಿಗಳ್ ॥
ಸಮನಿಸಿದತ್ತುತ್ತಮ ಸಂ
ಯಮ ಫಲದಿಂ ದಶರಥಂಗೆ ಕಲ್ಪಾವಾಸಂ ॥ ೭೧ ॥

ಮತ್ತಮಪರಾಜಿತೆಗಂ ಕೈಕೆಗಂ ಸುಮಿತ್ರೆಗಂ ಸುಪ್ರಭೆಗಂ ಜನಕಂಗಂ ಕರ್ಮೋಪಶಮದಿಂ ಸುಗತಿ ಸಮನಿಸಿದುದು ಲವಾಂಕುಶರುಮೀ ಭವದೊಳೆ ಮುಕ್ತ

ರಪ್ಪರ್ ಪ್ರಭಾಮಂಡಲಂ ಸುಕೌಶಲಪುರಕ್ಕೆ ಪೋಗುತ್ತುಮಾಕಾಶದೊಳ್ ನಾಲ್ಕು ತಿಂಗಳುಪವಾಸವಿರ್ದ ಮೂವರ್ ಮಹಾಋಷಿಯರಂ ಕಂಡು ಧರಾಮಂಡಲಕ್ಕವತರಿಸಿ ವಿಧಿ ಪೂರ್ವಕಮವರ್ಗಾಹಾರ ದಾನಮಂ ಕೊಟ್ಟು ತನ್ನೂರ್ಗೆ ಪೋಗಿ ತಾನುಂ ತನ್ನ ಸುಂದರಮಾಲೆಯೆಂಬರಸಿಯುಂ ಕರುಮಾಡದೊಳಿರ್ದು ಸಿಡಿಲ್ಪೊಡೆಯೆ ಸತ್ತಿರ್ವರುಂ ಮಂದರದ ತೆಂಕಣ ಕುರವದೊಳ್ ಮೂಱು ಪಳಿತೋಪಮಾಯುಷ್ಯರಾಗಿ ಪುಟ್ಟಿದರೆಂದು ಪೇೞ್ದು—

ಕಂ॥ ರಾವಣ ಲಕ್ಷ್ಮಣ ಭಾವಿ ಭ
ವಾವಳಿಯಂ ರಾಮ ದಿವ್ಯ ಮುನಿಪಂ ಶ್ರುತಿ ಸೌ॥
ಖ್ಯಾವಹಮೆನೆ ಮೃದು ಮಧುರಾ
ರಾವಂ ಸೀತಾಚರಾಮರಂಗಿಂತೆಂದಂ ॥ ೭೨ ॥

ರಾವಣನುಂ ಲಕ್ಷ್ಮಣನುಂ ನಿರಯ ವಾಸದಿಂ ಪೊಱಮಟ್ಟು ಬಂದು ಮಂದರದ ಪೂರ್ವದಿಗ್ಭಾಗದ ವಿಜಯಾವತೀ ಪುರದೊಳ್ ನಂದನೆಂಬೊಕ್ಕಲಿಗಂಗಮಾತನ ಕುಲವಧು ರೋಹಿಣಿಗಮರ್ಹದ್ದಾಸನುಂ ಋಷಿದಾಸನುಮೆಂಬ ತನಯರಾಗಿ ಶ್ರಾವಕ ವ್ರತಂಗಳಂ ಕೈಕೊಂಡು ಕೊಂಡಾಡಿ ನಡೆದನುಕ್ರಮದಿಂ ಜೀವಿತಾವಸಾನದೊಳ್ ದೇವ ಲೋಕಕ್ಕೆ ಪೋಗಿ ಮಗುೞ್ದು ಬಂದು ವಿಜಯಪುರದೊಳ್ ಪುಟ್ಟಿ ಋಷಿಯರ್ಗಾಹಾರದಾನಮನಿತ್ತು ಕಾಲಂಗೆಯ್ದು ಹರಿವರ್ಷದೊಳ್ ಪುಟ್ಟಿ ದೇವಲೋಕಕ್ಕೆ ಪೋಗಿ ಬಂದು ಮುನ್ನೆ ಪೇೞ್ದ ವಿಜಯಪುರಮನಾಳ್ವ ಕುಮಾರಕೀರ್ತಿಗಮಾತನರಸಿ ಲಕ್ಷ್ಮೀಮತಿಗಂ ಜಯಕಾಂತನುಂ ಜಯಪ್ರಭನುಮೆಂಬ ಮಕ್ಕಳಾಗಿ ಪುಟ್ಟಿ—

ಕಂ॥ ಅಂತವರತಿ ಚಿರ ಕಾಲಂ
ಸಂತಸದಿಂ ರಾಜ್ಯ ಸುಖಮನನುಭವಿಸಿ ಬೞಿ॥
ಕ್ಕಂ ತಪದೊಳೆಸಗಿ ಕಡೆಯೊಳ್
ಲಾಂತವ ಕಲ್ಪದೊಳನಲ್ಪ ಸುಖದಿಂದಿರ್ಪರ್ ॥ ೭೩ ॥

ನೀನುಮಚ್ಯುತಕಲ್ಪದಿಂ ಬಂದು ಭರತಕ್ಷೇತ್ರದೊಳ್ ಸಕಲ ಚಕ್ರವರ್ತಿಯಾಗಿರ್ಪುದುಂ ಲಾಂತವ ಕಲ್ಪದಿಂದವರ್ ಬಂದು ನಿನಗಿಂದುರಥನುಂ ಮೇಘರಥನುಮೆಂಬ ತನೂಭವರಪ್ಪರವರೊಳಗ್ರ ಸುತನಾಗಿ ಪುಟ್ಟಿದ ದಶಗ್ರೀವಂ ಸಂಸಾರ ಸುಖ ವಿಮುಖನಾಗಿ ತಪಂಗೊಂಡು ಷೋಡಶ ಭಾವನೆಗಳಂ ಭಾವಿಸಿ ಷೋಡಶ ಭವಿಷ್ಯತ್ತೀರ್ಥಕರ ನಾಮಕರ್ಮಮಂ ಕಟ್ಟಿ ವೈಜಯಂತೀ ವಿಮಾನದೊಳ್ ಪುಟ್ಟಿ ಮಗುೞ್ದು ಬಂದು ಭರತಕ್ಷೇತ್ರದ ರತ್ನಪುರದೊಳ್ ತೀರ್ಥಕರ ಕುಮಾರನುಂ ಚಕ್ರವರ್ತಿಯುಮಾಗಿ ಪುಟ್ಟಿ—

ಮ ॥ ಸಕಲೋರ್ವೀತಲ ಚಕ್ರವರ್ತಿ ಪದಮಂ ಕೈಕೊಂಡದಂ ಬಿಟ್ಟು ತೀ ।
ರ್ಥಕರತ್ವಂ ಬಡೆದಿರ್ಪುದುಂ ಗಣಧರಂ ನೀನಪ್ಪೆ ತದ್ಭಾವಿ ತೀ ॥
ರ್ಥಕರಂಗಂದು ಬೞಿಕ್ಕೆ ಮುಕ್ತಿವಡೆವೈ ನೀನೆಂದು ಭಟ್ಟಾರಕರ್ ।
ಸಕಲಜ್ಞರ್ ತಿಳಿವಂತು ಪೇೞೆ ತಳೆದಂ ಸೀತೇಂದ್ರನುತ್ಸಾಹಮಂ ॥ ೭೪ ॥

ಮತ್ತಂ ರಾಮಭಟ್ಟಾರಕರ್ ಲಕ್ಷ್ಮಣಂ ಮೋಕ್ಷಕ್ಕೆ ಪೋಪನ್ನೆಗಮಪ್ಪ ಭವಂಗಳನಿಂತೆಂದು ಬೆಸಸಿದರ್ ಮೇಘರಥಂ ತಪಂಬಟ್ಟು ದೇವಗತಿವಡೆದಲ್ಲಿಂ ಬಂದು ಪೃಥ್ವೀಪುರದೊಳ್ ಸುವ್ರತಕೀರ್ತಿಯೆಂಬರಸನಾಗಿ ಮತ್ತಂ ತಪಂಬಟ್ಟು ಷೋಡಶ ಭಾವನೆಗಳಂ ಭಾವಿಸಿ ದೇವಲೋಕಕ್ಕೆ ಪೋಗಿ ದಿವಿಜ ಸುಖಮನನುಭವಿಸಿ ಬಂದು ಪುಷ್ಕರವರ ದ್ವೀಪದ ಪೂರ್ವವಿದೇಹದ ಪದ್ಮಪುರದೊಳ್ ಚಕ್ರವರ್ತಿಯುಂ ತೀರ್ಥಕರ ಕುಮಾರನುಮಾಗಿ ಪುಟ್ಟಿ ರಾಜ್ಯಸುಖಮನೊಲ್ಲದೆ ತಪಂಬಟ್ಟು ತೀರ್ಥಕರ ಜಿನೇಶ್ವರನಾಗಿ ಮೋಕ್ಷಕ್ಕೆ ಪೋಪಂ ನಾಮಿಂದಿಂಗೆರಡುವರ್ಷಕ್ಕೆ ಮೋಕ್ಷಕ್ಕೆ ಪೋಪೆವೆಂದು ತಮ್ಮುಮಂ ಪೇೞೆ ಕೇಳ್ದು ಸಂತೋಷದಂತನೆಯ್ದಿ—

ಮ ॥ ಜಳ ಗಂಧಾಕ್ಷತ ಪಾರಿಜಾತ ಸುಮನೋದಾಮಂಗಳಿಂ ರಾಮಕೇ ।
ವಳಿಯಂ ಪೂಜಿಸಿ ಭಕ್ತಿಯಿಂದೆಱಗಿ ಸೀತೇಂದ್ರಂ ವಿಭೂಷಾಂಶು ಮಂ ॥
ಡಳಿಯುಂ ದೇಹ ಮರೀಚಿಯುಂ ಪುದಿಯೆ ರೋದೋಭಾಗಮಂ ಚೆಲ್ವನೀ
ೞ್ಕುಳಿಗೊಂಡಚ್ಯುತ ಕಲ್ಪಮಂ ವಿವಿಧ ಕೇಳೀತಲ್ಪಮಂ ಮುಟ್ಟಿದಂ ॥ ೭೫ ॥

ಇತ್ತ ರಾಮಭಟ್ಟಾರಕರ್—

ಕಂ ॥ ತಮಗೆ ಪದಿನಾಱು ಬಿಲ್ಲು
ದ್ದಮೆನಲ್ ಪದಿನೆಂಟು ಸಾಸಿರಂ ಪರಮಾಯು ॥
ಷ್ಯಮೆನಲ್ ವರ್ತಿಸಿ ಮುಕ್ತಿ
ಪ್ರಮದಾ ಸಂಭೋಗ ಲೋಭ ರತರಾಗಿರ್ದರ್ ॥ ೭೬ ॥

ಅಂತು [1]ಸಮಯ ಸ್ಥಿತಿಯಂ ಪರಿಪಾಲಿಸುತ್ತುಮಿರ್ದು—

ಮ ॥ ಸತತಂ ಪೂಜಿಸೆ ದೇವ ಮರ್ತ್ಯ ಖಚರ ಕ್ಷ್ಮಾಪಾಲಕರ್ ಪಂಚ ವಿಂ ।
ಶತಿ ಸಂವತ್ಸರಮಿಂತೆ ಪೂಜೆವಡೆಯುತ್ತುಂ ಭವ್ಯ ಸಸ್ಯಕ್ಕೆ ನಿ ॥
ರ್ವೃತಿ ಧರ್ಮಾಮೃತ ವೃಷ್ಟಿಯಂ ಕಱೆಯುತುಂ [2]ನಿರ್ಬಾಧ ಬೋಧಂ ಯಶೋ ।
ಲತೆಯಿಂ ಮುದ್ರಿಸಿದಂ ಜಗತ್ರಿತಯಮಂ ಶ್ರೀರಾಮ ಭಟ್ಟಾರಕಂ ॥ ೭೭ ॥

---

1. ನಿಯಮ. ಚ. ೨. ನಿರ್ವಾಣ. ಗ. ಚ.

ಶಾ ॥ ನೀಡುತ್ತುಂ ಕುಮತಕ್ಕೆ ತೇಜದಟಿವಂ ವಿಖ್ಯಾತಿಯಂ ತಾಳ್ದಿದೊ ।
ಳ್ಪಾಡಂ ಕೂಡೆ ತೊಟಲ್ದು ಭವ್ಯ ಜನಮಂ ರತ್ನತ್ರಯಾಲಂಕೃತಂ ॥
ಮಾಡುತ್ತುಂ ದೆಸೆವೆಣ್ಗೆ ಧರ್ಮವಿಜಯ ಶ್ರೀ ಕೇಕರಾಲೋಕನ ।
ಕ್ರೀಡಾ ಮಂಡನಮಾಗೆ ಕೇವಲಿ ಕುಬೇರಾದ್ರೀಂದ್ರಮಂ ಮುಟ್ಟಿದಂ ॥ ೭೮ ॥

ಮ॥ ಸ್ರ॥ ಕ್ಷಿತಿಭೃನ್ಮೂರ್ಧಾಭಿಷಿಕ್ತಂ ವಲಮೆನಿಸಿದ ಕೈಲಾಸ ಶೈಲೇಂದ್ರದೊಳ್ ಕ ।
ಲ್ಪತರು ಸ್ತೋಮಂಗಳಿಂ ಮಂಡಲಿಸಿದ ಕನಕಾಂಭೋಜ ಷಂಡಂಗಳಿಂ ಮಂ॥
ಡಿತಮಾದತ್ಯಂತ ಶುದ್ಧ ಸ್ಫಟಿಕ ಮಣಿ ಶಿಲಾಪಟ್ಟದೊಳ್ ರಾಮಚಂದ್ರಂ ।
ಪ್ರತಿಮಾಯೋಗ ಪ್ರಯೋಗಂ ಗುಣಭವನ ಮಣಿಸ್ತಂಭಮಿರ್ಪಂತಿರಿರ್ದಂ॥೭೯॥

ಅಂತಿರ್ದು ಸೂಕ್ಷ್ಮಶರೀರ ಯೋಗದಿಂ ಸೂಕ್ಷ್ಮಕ್ರಿಯಾ ಪ್ರತಿ[1]ಪಾತಿಯೆಂಬ ಪರಮ ಶುಕ್ಲಧ್ಯಾನದೊಳ್ ನೆಲಸಿ ಲಘು ಕರ್ಮ ಪರಿಪಾತನಶಕ್ತಿ ಪ್ರಾಪ್ತಿನಿಮಿತ್ತಂ ದಂಡ ಕವಾಟ ಪ್ರತರ ಲೋಕಪೂರಣ ಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ ನಾಲ್ಕುಮಘಾತಿಕರ್ಮ ಸ್ಥಿತಿಯ ಕಾಲಮಂ ಸದೃಶಂಮಾಡಿ ಮೂಲ ಶರೀರ ಪ್ರಮಾಣ ದೊಳೆ ನಿಂದು ವಾಙ್ಮನಃಕಾಯ ಯೋಗಮನಡಂಗಿಸಿ ಸಕಲ ಬದ್ಧಾಶ್ರವ ನಿರೋಧದಿ ನಯೋಗಿ ಕೇವಲಿ ಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನ ಪ್ರಾಣಾಪಾನ ಪ್ರಚಾರಂ ಸಮುಚ್ಛಿನ್ನ ಕ್ರಿಯಾವೃತ್ತಿ ಧ್ಯಾನ ಪ್ರವರ್ತನಾ ಪರನಾಗಿ—

ಕಂ॥ ಪರಿಪೂರ್ಣಮೆನಿಸೆ ಗುಣ ಪರಿ
ಕರಂ ಯಥಾಖ್ಯಾತ ಚರಿತನಾಗಿ ಜಿನಂ ಮು ॥
ಕ್ತಿ ರಮಾ ಕಚ ಗ್ರಹ ಸ್ತನ
ಪರಿರಂಭಾರಂಭ ಕೇಳಿಗುತ್ಸುಕನಾದಂ ॥ ೮೦ ॥

ಆಗಿ ತದುಪಾಂತ ಸಮಯದೊಳನ್ಯತರ ವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವ್ಯೌದಾರಿಕ ಶರೀರ ತದ್ಬಂಧನ ಸಂಘಾತ ಸಂಸ್ಥಾನಾಂಗೋಪಾಂಗ ಸಂಹನನ ವರ್ಣ ಗಂಧ ರಸ ಸ್ಪರ್ಶ ಪ್ರಶಸ್ತಾಪ್ರಶಸ್ತ ವಿಹಾಯೋಗತಿ ಗುರು ಲಘೂಪಘಾತ ಪರಘಾತಾತಪೋದ್ಯೋತೋಚ್ಛ್ವಾಸ ನಿಶ್ವಾಸ ಪರ್ಯಾಪ್ತಿ ಪ್ರತ್ಯೇಕ ಶರೀರ ಸ್ಥಿರಾಸ್ಥಿರ ಸುಭಗ ದುರ್ಭಗ ಸುಸ್ವರ ದುಸ್ಸ್ವರಾದೇಯಾನಾದೇಯ ಯಶಸ್ಕೀರ್ತ್ಯಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂಮಾಡಿ—

ಕಂ ॥ ಪ್ರಕೃತಿಗಳಗಲ್ಕೆಯಿಂ ಶು
ಕ್ತಿಕೆಯಿಂ ಪೊಱಮಟ್ಟ ಮೌಕ್ತಿಕಂ ನೀರದ ಮಾ ॥
ಲಿಕೆಯಿಂ ತೊಲಗಿದ ಶಶಿ ಕಾ
ಲಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ ॥ ೮೧ ॥

1. ಪ್ರತಿ. ಚ.

ಅನಂತರಂ ಚರಮ ಸಮಯದೊಳ್ ಪರಿಶಿಷ್ಟಾನ್ಯತರ ವೇದನೀಯ ಮನುಷ್ಯಾಯುರ್ಮನುಷ್ಯಗತಿ ಪಂಚೇಂದ್ರಿಯ ಜಾತ್ಯಾನುಪೂರ್ವಿ ತ್ರಸನಾಮ ಬಾದರಪರ್ಯಾಪ್ತಕ ಸುಭಗಾದೇಯ ಯಶಸ್ಕೀರ್ತಿ ತೀರ್ಥಂಕರ ನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ ಸಕಲ ಸಂಸಾರಭಾರ ದುಃಖಭಾರ ಭಂಜನನುಂ ನಿರಂಜನನುಮಾಗಿ—

ಮ ॥ ಕಿಡೆ ನಿಶ್ಶೇಷಮಘಾತಿ ಪಜ್ಜಳಿಸೆ ತನ್ನೆಂಟುಂಗುಣಂ ಕೂಡೆ ನೇ ।
ರ್ಪಡೆ ದೀಪಾರ್ಚಿಗಳಂತಿರೂರ್ಧ್ವಗತಿ ಮೂಱುಂಲೋಕದಿಂ ಮೇಲೆ ಬೆ ॥
ಳ್ಗೊಡೆಯಿರ್ಪಂತೆವೊಲಿರ್ದ ಸಿದ್ಧ ನಿಲಯಕ್ಕಾನಂದದಿಂ ಪೋಗಿ ಕೈ ।
ವಿಡಿದಂ ಶಾಶ್ವತಮಪ್ಪ ಮುಕ್ತಿವಧುವಂ ಶ್ರೀರಾಮಭಟ್ಟಾರಕಂ ॥ ೮೨ ॥

ಅಂತು ರಾಮಭಟ್ಟಾರಕಂ ಪರಮಪದ ಪ್ರಾಪ್ತನಪ್ಪುದುಂ—

ಕಂ ॥ ಪೂಮಱೆ ಕಱೆದತ್ತಖಿಲ ದಿ
ಶಾಮುಖಮುಂ ದೇವದುಂದುಭಿ ಧ್ವನಿ ತೀವಿ ॥
ತ್ತಾಮೋದ ಮತ್ತ ಮಧುಕರ
ದಾಮಂ ತೀಡಿತ್ತು ಬಂದು ಮಂದ ಸಮೀರಂ ॥ ೮೩ ॥

ಇನಿತಮರ ಪಟಹ ಪೇಟಕ
ಮಿನಿತಮರ ವಿಮಾನ ಪಟಲಮಿನಿತಮರ ಪತಾ ॥
ಕಿನಿಯೆಂದು ನೆನೆಯಲರಿದೆನೆ
ಜಿನಪೂಜೆಗೆ ಬಂದರಮರ ಪರಿಬೃಢರಾಗಳ್ ॥ ೮೪ ॥

ಚಿತ್ರಾತಪತ್ರದಿಂ ಶತ
ಪತ್ರ ವನಸ್ಥಲಿಯನಿಱಿಪಿ ನಭದೊಳೆ ದೆಸೆಯಂ ॥
ಚಿತ್ರಿಸೆ ಕಿರೀಟ ಕಿರಣಂ
ದ್ವಾತ್ರಿಂಶತ್ತ್ರಿದಶ ಪತಿಗಳಂದೇೞ್ತಂದರ್ ॥ ೮೫ ॥

ಅಂತು ನಿರ್ವಾಣ ಪೂಜೆಗೆ ನಿಖಿಲ ಗೀರ್ವಾಣಪತಿಗಳೇೞ್ತರ್ಪಾಗಳ್—

ಕಂ॥ ಪಳಿಕಿನ ಕೊಡದೊಳ್ ಗಂಗಾ
ಜಳಂಗಳಂ ತೀವಿ ತರ್ಪ ಸುರ ವನಿತೆ ಘನೋ ॥
ಪಳಮಂ ತಾಳ್ದಿದ ವಿದ್ಯು
ದ್ವಿಳಾಸಮಂ ನಿಜ ವಿಲಾಸದಿಂ ಮುಸುಳಿಸಿದಳ್ ॥ ೮೬ ॥

ಕಂ ॥ ಚಂದನ ಕರ್ದಮ ಶುಕ್ತಿಕೆ
ಕೆಂದಳದೊಳ್ ತಳಿರೊಳಿಸೆವ ಪೂಗೊಂಚಲೆನಲ್ ॥
ಬಂದರ್ ತಾರಾಂತಃಪುರ
ಸುಂದರಿಯರ್ ಪರಮ ಚರಮ ಪೂಜೋತ್ಸವದೊಳ್ ॥ ೮೭ ॥

ಸಿತ ವಿಕಸಿತಾಬ್ಜದೊಳ್ ತೀ
ವಿ ತಂದರೆಳವೆಱೆಯ ಕದಿರನೆಂದೆನಿಪ ಸಿತಾ ॥
ಕ್ಷತಮಂ ದಿಗ್ದೇವತೆಯರ್
ಸಿತ ಲೋಚನ ರುಚಿ ದಿಗಂತಮಂ ಬಳಸುವಿನಂ ॥ ೮೮ ॥

ಉ ॥ ಜ್ಞಾನ ಕೃಶಾನುವಿಂದಮುರಿದಟ್ಟಿದ ಕಾಮನ ಮೋಹನಾಸ್ತ್ರ ಸಂ ।
ತಾನ ಶರಾಸನಾವಳಿಯನೊಪ್ಪಿಸಲೀಕೆಗಳೀ ಜಿನೇಂದ್ರನಾ ॥
ಸ್ಥಾನಿಗೆ ತಂದರಕ್ಕುಮೆನೆ ರಂಜಿಸೆ ಕೆಂದಳದೊಳ್ ಲತಾಂತ ಮಾ ।
ಲಾ ನಿಕುರುಂಬಮಿಕ್ಷುಲತೆ ಬಂದುದು ಕಿನ್ನರ ಕನ್ಯಕಾ ಜನಂ ॥ ೮೯ ॥

ಕಂ ॥ ಕರೆಗಣ್ಮುವ ನಿಜ ಲಾವ
ಣ್ಯ ರಸಂ ಪರಿನಾಳಮಿಕ್ಕಿದತ್ತೆನೆ ತಂದಳ್ ॥
ಸುರ ಸುಂದರಿ ಚಂದನ ರಸ
ಭರಿತಾಯತ ಕೇತಕೀದಲ ದ್ರೋಣಿಗಳಂ ॥ ೯೦ ॥

ತಳೆದನಿಮಿಷ ವಧುಗಳ್ ಕ
ಣ್ಗೊಳಿಸಿದರುನ್ಮಿಷಿತ ಕರ್ಣಿಕಾರ ಲತಾ ಸಂ ॥
ಕುಳಮೆನೆ ಸುವರ್ಣಮಯ ಪರಿ
ಯಳಮಂ ಭಕ್ಷ್ಯೋಪದಂಶ ಚರು ವಿಲಸಿತಮಂ ॥ ೯೧ ॥

ಪೆಡೆವರಲಾವುದೊ ರನ್ನದ
ಸೊಡರಾವುದೊ ಪೇೞಿಮೆಂಬಿನಂ ಸಂದೆಗದ ॥
ಟ್ಟಿಡಿದಿರೆ ನಾಗಾಂಗನೆಯರ್
ಗಡಣದೆ ಕೈಲಾಸ ಶೈಲಮಂ ಸಾರ್ತಂದರ್ ॥ ೯೨ ॥

ಚ ॥ ಒಗೆದ ಕುಚಂ ಮೊಗಂಗುಡದೆ ಚೆಲ್ವಿನೊಳೀಳಿಸೆ ತತ್ಸವಿಾಪದೊಳ್ ।
ಪೊಗೆಮೊಗವಾದವೋಲ್ ತಳೆದ ಧೂಮ ಘಟಂಗಳನುಣ್ಮೆ ಪೊಣ್ಮೆ ತ ॥
ಟ್ಟಿಗರುವ ಧೂಮಲೇಖೆ ಸುರ ಸುಂದರಿಯರ್ ನಡೆತಂದರಂದು ಸು ।
ಯ್ಗೆಗೆವಳಿಮಾಲೆ ತಮ್ಮ ಲುಲಿತಾಲಕದೊಳ್ ತಡವಾದುದೆಂಬಿನಂ ॥ ೯೩ ॥

---

1. ತೊಡ. ಘ. ಚ.

ಕಂ ॥ ವಿವಿಧ ಫಲಮಾದುವೋರೊಂ
ದೆ ವಲ್ಲಿಗೆನೆ ಚೆಲ್ವುವೆತ್ತುವಮರೀಕರ ಪ ॥
ಲ್ಲವದೊಳ್ ನವೀನ ಕದಲೀ
ನವಾಮ್ರ ನಾರಂಗ ನಾಲಿಕೇರ ಫಲಂಗಳ್ ॥ ೯೪ ॥

ನಿರತಿಶಯಮೆನಿಪ ಧರ್ಮಾ
ನುರಾಗಮಿಾ ತೋರ್ಪುದೆಂಬಿನಂ ಸುರ ವನಿತಾ ॥
ಕರ ಕಿಸಲಯದೊಳ್ ಕುಂಕುಮ
ಪರಿಪೂರ್ಣ ಸುವರ್ಣ ಭಾಜನಂ ರಂಜಿಸುಗುಂ ॥ ೯೫ ॥

ಮ ॥ ಜವನಂ ರಾಮಜಿನಂ ಜವಂಗಿಡಿಸಿ ಗೆಲ್ಲಂಗೊಂಡ ಕೈಲಾಸ ಶೈ ।
ಲ ವಿಶಾಲ ಸ್ಫಟಿಕಸ್ಥಲೀ ನಿಕಟಮಂ ದ್ವಾತ್ರಿಂಶದಿಂದ್ರರ್ಕಳು ॥
ತ್ಸವದಿಂದರ್ಚಿಸುವಾಗಳೇಂ ಕಱಿದುದೋ ಕರ್ಣಾಮೃತಾಸಾರಮಂ ।
ವಿವಿಧಾತೋದ್ಯ ಲಯಾನುಗಂ ಸುರ [1]ಸತೀಮಂಜೀರಿಕಾ ಶಿಂಜಿತಂ ॥ ೯೬ ॥

ಚ ॥ ಪಿರಿದೆನಿಸಿರ್ದ ರಾಮಕಥೆಯಂ ಕಿಱಿದಾಗಿರೆ ದೇಸಿ ಮಾರ್ಗಮೆಂ ।
ಬೆರಡಱೊಳಂ ರಸಂಬಡೆದು ಪಂಡಿತ ಮಂಡಲಿ ಮೆಚ್ಚೆ ನೇರ್ಪುವೆ ॥
ತ್ತಿರಲವಿರೋಧಮಾಗೆ ಕೃತಿವೇೞ್ದೊಡೆ ಸತ್ಕವಿ ನಾಗಚಂದ್ರನಂ ।
ತಿರೆ ಪೆಱರಾರ್ ಸರಸ್ವತಿ ಕುಡಲ್ ಪಡೆದರ್ ವರಮಂ ಕವೀಶ್ವರರ್ ॥ ೯೭ ॥

ಮ ॥ ಕೃತವಿದ್ಯರ್ ಸಮುಚಿತ್ತರಾಗಿ ಪದೆಪಿಂದಾರಯ್ಯೆ ಕರ್ಣಾಟ ಸಂ ।
ಸ್ಕೃತ ಕಾವ್ಯಂಗಳೊಳರ್ಥದಿಂ ರಚನೆಯಿಂ ನೇರ್ಪಟ್ಟು ವಿದ್ವಚ್ಚಮ ॥
ತ್ಕೃತಿಯಪ್ಪಂತಿರೆ ನಾಗಚಂದ್ರ[2]ವಿಬುಧಂ ಪೇೞ್ದಂದದಿಂದಾದ್ಯರ ।
ದ್ಯತನಂ ಪೇೞ್ದಭಿರಾಮ ರಾಮಕಥೆಯಂ ಸೈಪಿಂಗಡರ್ಪಾಗನೇ ॥ ೯೮ ॥

ಇದು ಪರಮ ಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣ ನಖಕಿರಣ ಚಂದ್ರಿಕಾ ಚಕೋರ ಭಾರತೀ
ಕರ್ಣಪೂರ ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರಚರಿತಪುರಾಣದೊಳ್
ಪರಿನಿರ್ವಾಣ ಕಲ್ಯಾಣೋತ್ಸವ
ವರ್ಣನಂ ಷೋಡಶಾಶ್ವಾಸಂ.

---

1. ನಟೀ. ಖ. ಘ. 2. ಸುಕವೀಂದ್ರರ್ ಪೇೞ್ವವೋಲಾದ್ಯರ ದ್ಯತನರ್ ಪೇೞ್ದ.........
.........ಗರೇ. ಚ

---

**ಸಂಪೂರ್ಣಂ.**

ರಾಮಚಂದ್ರಚರಿತಪುರಾಣದಲ್ಲಿಯ

# ಕ್ಲಿಷ್ಟ ಪದಗಳ ನಿಘಂಟು

[ಸೂಚನೆ:—ಇಲ್ಲಿ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲನೆಯದು ಆಶ್ವಾಸ ಸಂಖ್ಯೆ, ಎರಡನೆಯದು ಪದ್ಯಸಂಖ್ಯೆ. (ವ.=ವಚನ; ಸಂ.=ಸಂಸ್ಕೃತ.)]

## ಅ

ಅಂಕ—ಯುದ್ಧ, ೮—೧೮.
ಅಂಕಮಾಲೆ—ಬಿರುದುಗಳ ಸಾಲು, ೧—೧೦೭ ವ.
ಅಕ್ಷೂಣ (ಸಂ.)—ಕಡಿಮೆಯಾಗದ, ೧೧—೯.
ಅಖರ್ವ (ಸಂ.)—ಕಡಿಮೆಯಲ್ಲದ, ೧೩—೨೩.
ಅಗ (ಸಂ.)—ಬೆಟ್ಟ, ೧೧—೧೭.
ಅಗ್ಗಳಿಕೆ—ಮಹಿಮೆ, ಅತಿಶಯ, ೧—೪೩
ಅಂಗಚಿತ್ತ—ಬಹುಮಾನ, ೫—೧೨ ವ.
ಅಂಗದ (ಸಂ.)—ಭುಜಕೀರ್ತಿ, ೫—೪೩ ವ.
ಅಂಗರಕ್ಕೆ—(ಸಂ. ಅಂಗರಕ್ಷಾ), ೧೨—೧೫.
ಅಗಿ—ಭಯಪಡು, ೧೦—೭೮.
ಅಗುರ್ವು—ಭಯ, ೪—೫೪ ವ.
ಅಗುಂದಲೆ—ಅಧಿಕ, ೨—೬೭ ವ.
ಅಗೆ—ಮೊಳಕೆ, ೨—೧೨೮.
ಅಗೆಯೆತ್ತು—ಮೂಲೋತ್ಪಾಟನ ಮಾಡು, ೧೦—೧೩೯.
ಅಘಮರ್ಷಣ (ಸಂ.)—ಪಾಪ ಪರಿಹಾರಕ, ೭—೧೧೭.
ಅಘಪಟ್ಟಂ—ಪಾಪವನ್ನು ಹೊಂದಿದನು, ೪—೮೫.
ಅಚ್ಚಿಗ—ಕೇಡು, ೯—೧೧೫; ಕಷ್ಟ, ೧೪—೧೦೦.
ಅಂಚಿರ—ಅಸ್ಥಿರ, ೭—೧೨೯.
ಅಜನಿಸು—ತಿರಸ್ಕರಿಸು, ೩—೨.
ಅಜ್ಜಗಾವು—ಬೆಂಗಾವಲು, ೩—೨೯.
ಅಂಜನದಿಕ್ (ಸಂ.)—ಪಶ್ಚಿಮ, ೮—೨೮ ವ.
ಅಟ್ಟಟ್ಟ—ದೂತ, ೧೧—೩೨.
ಅಟ್ಟಳೆ—ಬುರುಜು, (ಸಂ. ಅಟ್ಟಾಲ), ೧—೧೧೬.
ಅಟ್ಟಾಸುರ—ಅತಿಭಯಂಕರ, ೯—೮೪.
ಅಟ್ಟಾಳಕ (ಸಂ.)—ಬುರುಜು, ೭—೧೩೮.
ಅಟ್ಟೆ—ಮುಂಡ, ೯—೩೪.
ಅಡಂಗುಬಾಡು—ಕಣ್ಣುಮುಚ್ಚಾಡು, ೯—೧೩೦ ವ.
ಅಡಪ—ಅಡಕೆಲೆ ಚೀಲ, ೨—೪೧.
ಅಡಹಡಿಸು—ತ್ವರೆಪಡು, ೮—೬೧ ವ.
ಅಡ್ಡವಿಸು—ಅಡ್ಡಿಮಾಡು, ೭—೧೨೭.
ಅಡಿಯೂಡಿ—ಪಾದಕ್ಕೆ ಬಳಿದುಕೊಂಡು, ೫—೪೩ ವ.
ಅಡುತರ್ಪು—ಆವರಿಸಿ, ೯—೭೦.
ಅಡುವುಬ್ಬು—ಅಡುವ+ಪುಬ್ಬು (ಹುಗ್ಗಿ), ೧೨—೯೬.
ಅಡೆವೊತ್ತು—(ಅಡೆ=ಪಕ್ವವಾಗುವಂತೆ) ಬಲವಾಗಿ (ಪೊತ್ತು) ಜ್ವಲಿಸು, ೪—೫೪ ವ.
ಅಣಕ—ಎತ್ತಿಹಾಕಿ ಮಾತನಾಡುವಿಕೆ, ೯—೧೨.
ಅಣೆಯುರಂ—ಹೆಚ್ಚಾಗಿ, ೬—೭೧.
ಅಣುವ—(ಸಂ. ಹನೂಮಾನ್), ೧೧—೧೫೮.
ಅಣೆ—ತಿವಿ, ೧೨—೭೪.
ಅತಂದ್ರ (ಸಂ.)—ಆಲಸ್ಯರಹಿತ, ಜಾಗರೂಕ, ೩—೧೪.
ಅತಸೀ (ಸಂ.)—ಅಗಸೆ, ೭—೧೦೪.
ಅಂತರ್ವತ್ನೀ (ಸಂ.)—ಗರ್ಭಿಣಿ, ೨—೧೦೯.
ಅಂತರಾಯ (ಸಂ.) ವಿಘ್ನ, ೮—೪೭.
ಅಂತರಿಸು—ತಡಮಾಡು, ೬—೧೭೨.
ಅಂತೇವಾಸಿ (ಸಂ.)—ಶಿಷ್ಯ, ೧೦—೯೫ ವ.

